ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 116

ವಿಚಾರ ಸಾಹಿತ್ಯ

# ಲೇಖಕಿಯರ ಕಥಾ ಸಂಕಲನ

ವೀಣಾ ಶಾಂತೇಶ್ವರ



ಕರ್ನಾಟಕ ಸರ್ಕಾರ 1983

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ಶೆ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
ತಾ. 20-1-1988 ನೇ ಬುಧವಾರ

# ಲೇಖಕಿಯರ ಕಥಾ ಸಂಕಲನ

(ಸಾಮಾಜಿಕ ಕಾದಂಬರಿ)



ಡಾ|| ವೀಣಾ ಶಾಂತೇಶ್ವರ



ವಿಶ್ವ ಕನ್ನಡ ಸಮ್ಮೇಳನ

೧೪–೩ಎ. ನೃಪತುಂಗ ರಸ್ತೆ

ಬೆಂಗಳೂರು—೫೬೦ ೦೦೨.

LEKAKIYARA KATHA SANKALANA–A Social Novel in Kannada by Dr. Veena Shatheswara

Published by K. Jayacharya. K. A. S. Addrtional Director, Directorate of Kannada and Culture (Vishwa Kannada Sammelana) 14/3–A. Nrupathunga Road, Bangalore-560 002. Pages—992







ಪ್ರಥಮ ಮುದ್ರಣ

೧೯೮೩, ೫,೦೦೦ ಪ್ರತಿಗಳು



ಬೆಲೆ : 7-50

ಮುದ್ರಕರು ;
ಯೋಗ ಪ್ರಿಂಟರ್ಸ್,
ನಂ. ೩೪, ೩ನೇ ಹಂತ, ೪ನೇ ವಿಭಾಗ,
ವೆಸ್ಟ್ ಆಫ್ ಕಾರ್ಡ್ ರೋಡ್,
ಬೆಂಗಳೂರು–೫೬೦ ೦೮೬.

ಕರ್ನಾಟಕ ಸರ್ಕಾರ

ಆರ್. ಗುಂಡೂರಾವ್
ಮುಖ್ಯಮಂತ್ರಿ



ವಿಧಾನಸೌಧ
ಬೆಂಗಳೂರು

ದಿನಾಂಕ: ೧೮–೯–೮೨

# ಸಂಕಲ್ಪ...ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವದಿಯಲ್ಲಿ ಕನ್ನಡ ಭಾಷೆ. ಸಾಹಿತ್ಯ, ಕಲೆ. ಸಂಸ್ಕೃತಿಗಳು ಸಮೃದ್ಧವಾಗಿ. ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸುವೆ.

ಒಂದು ನಾಡಿನ ಅತಃಸತ್ವ ಆಡವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು ಔನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆನ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶ ದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿ ನೆನಪು ಉಳಿ ಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ

ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದನೂರಾ ಎರಡು ಕೃತಿಗಳನ್ನು, ಪದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣ ವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾ ವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆ ಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರ ವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ಸಫಲತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ. ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡುರಾವ್

ಮುಖ್ಯಮಂತ್ರಿ

# ವಿಶ್ವ ಕನ್ನಡ ಸಮ್ಮೇಳನ ಕಥಾ ಸಂಕಲನ

—ಸಂಪಾದಕಿ : ಡಾ॥ ವೀಣಾ ಶಾಂತೇಶ್ವರ

ಮುನ್ನುಡಿ :

ಸಣ್ಣಕತೆ ಕನ್ನಡದ ಲೇಖಿಕೆಯರಲ್ಲಿ ಅತ್ಯಂತ ಜನಪ್ರಿಯವಾಗಿರುವ ಸಾಹಿತ್ಯಪ್ರಕಾರ, ಕೊಡಗಿನ ಗೌರಮ್ಮನವರಿಂದ ಮೊದಲ್ಗೊಂಡು ಎಪ್ಪತ್ತರ ದಶಕದವರೆಗೂ ಅತ್ಯಧಿಕ ಸಂಖ್ಯೆಯ ಲೇಖಿಕೆಯರ ಗಮನ ಸೆಳೆದ ಏಕೈಕ ಪ್ರಕಾರ. ಕಾವ್ಯ, ಹಾಗೂ ಅದಕ್ಕಿಂತ ಮುಖ್ಯವಾಗಿ ನಾಟಕ ಹಾಗೂ ವಿಮರ್ಶೆ ಇತ್ಯಾದಿಗಳ ರಚನೆಗೆ ಅತ್ಯಾವಶ್ಯವಾದ ಜೀವನದಬಗೆಗಿನ ಸಂಕೀರ್ಣ ದೃಷ್ಟಿಕೋನದ ಅಭಾವದಿಂದಾಗಿಯೋ ತಮ್ಮ ಸೀಮಿತ ಅನುಭವಗಳಿಂದಾಗಿ ಜೀವನದ ಬಗೆಗೆ ಸಮಗ್ರವಾಗಿ ವಿಮರ್ಶಾತ್ಮಕವಾಗಿ ಸ್ಪಂದಿಸಲು ಸಾಧ್ಯವಾಗದ್ದರಿಂದಲೋ ಸಣ್ಣಕತೆಯ ತಂತ್ರ ಹಾಗೂ ವಿಧಾನಗಳನ್ನು ಬೇಕಾದಷ್ಟು ಸರಳೀಕೃತಗೊಳಿಸಿದರೂ ಅಡ್ಡಿಯಿಲ್ಲ ಎಂಬ ಗ್ರಹಿಕೆಯಿಂದಾಗಿಯೋ, ಒಟ್ಟು ಕನ್ನಡದಲ್ಲಿ ಲೇಖಿಕೆಯರು ಸಣ್ಣಕತೆಯ ಬೆಳೆಯನ್ನು ಹುಲುಸಾಗಿ ಬೆಳೆಸಿದ್ದಾರೆ. ಈ ಬೆಳೆಯಲ್ಲಿ ಕಸ ಎಷ್ಟು, ರಸ ಎಷ್ಟು ಎಂಬುದನ್ನು ಲೇಖಿಕಿಯರೇ ಪ್ರಾಮಾಣಿಕವಾಗಿ ಸ್ವವಿಮರ್ಶೆ ಮಾಡಿಕೊಂಡು ಕಂಡುಕೊಳ್ಳಬೇಕಾದ ಸಮಯವೀಗ ಬಂದಿದೆ.

ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಲೇಖಿಕೆಯರ ಕಥಾಸಂಕಲನವೊಂದನ್ನು ಹೊರತರುವ ಸಮಯೋಚಿತವೂ ಯೋಗ್ಯವೂ ಆದ ಯೋಜನೆಯ ಪ್ರಕಾರ, ಈ ಸಂಕಲನದ ಸಂಪಾದಕತ್ವದ ಹೊಣೆಯನ್ನು ನಾನು ಹೊರಬೇಕಾಗಿ ಬಂದಾಗ, ಸಹಜವಾಗಿಯೇ ಕನ್ನಡದಲ್ಲಿನ ಲೇಖಿಕೆಯರ ಸಣ್ಣಕತೆಗಳನ್ನು ಮೊದಲಿನಿಂದ ಇಂದಿನವರೆಗೂ ವಿಮರ್ಶಾತ್ಮಕವಾಗಿ ಅವಲೋಕಿಸುವ ಪ್ರಸಂಗ ಬಂದಿತು. ಆಗ ವೈಯಕ್ತಿಕವಾಗಿ ನನಗನಿಸಿದ ಪ್ರಕಾರ ಈ ಎಲ್ಲ ವರ್ಷಗಳಲ್ಲಿ ಸಣ್ಣಕತೆಯಲ್ಲಿ (ಅಂದರೆ ಮಹಿಳೆಯರು ಬರೆದ ಸಣ್ಣಕತೆಗಳಲ್ಲಿ) ಯಾವ ರೀತಿಯ ಕ್ರಾಂತಿಯೂ ಅಥವಾ ಬಹು ಮಹತ್ತರವೆನಿಸುವ ಬದಲಾವಣೆಯೂ ಕಂಡುಬರುವುದಿಲ್ಲ. ಈ ಅವಧಿಯಲ್ಲಿ ಕನ್ನಡ ಸಾಹಿತ್ಯದಲ್ಲಿ ರೂಪುತಳೆದ ನವ್ಯಪಂಥ, ನವ್ಯೋತ್ತರವಾದ ದಲಿತಪಂಥ, ಬಂಡಾಯ ಪಂಥ ಅಥವಾ ಪ್ರಗತಿಶೀಲ ಪಂಥ ಇತ್ಯಾದಿಗಳ ನೇರಪರಿಣಾಮ

ಬಹುಪಾಲು ಲೇಖಿಕೆಯರ ಮೇಲೆ ಆಗಿಲ್ಲ. ಬಹುಪಾಲು ಕತೆಗಳು ಗಂಡು ಹೆಣ್ಣಿನ ಸಂಬಂಧ, ಕೌಟುಂಬಿಕ ಸಮಸ್ಯೆಗಳು. ಹೆಣ್ಣಿನ ಮನಸ್ಸಿನ ಕೋಮಲ ಭಾವನೆಗಳ ಹೊಯ್ದಾಟ-ಇವುಗಳ ಬಗೆಗೇ ಇವೆ. ಆದರ್ಶಪ್ರಿಯತೆ, ಸಂಪ್ರದಾಯ ಶರಣತೆ, ಅತಿಭಾವುಕತೆ ಈ ಕತೆಗಳಲ್ಲಿ ಎದ್ದುಕಾಣುವ ಅಂಶ ಗಳಾಗಿವೆ. ಜೊತೆಗೆ ಅಸಹಜತೆ, ಅವಾಸ್ತವಿಕತೆಯೂ ಇದೆ. ಕಥಾತಂತ್ರ ತೀರ ಸರಳವಾಗಿದೆ. ಭಾಷೆ ಹಾಗೂ ವಸ್ತುವಿನಲ್ಲಿ ಸಾಮರಸ್ಯ ಸಾಧಿಸು ವುವರಲ್ಲಿ ಅನೇಕರು ಸೋತಿದ್ದಾರೆ, ಪಾತ್ರಗಳಲ್ಲಿ ಕ್ಲಿಷ್ಟತೆಯಾಗಲೀ ಸಂಕೀರ್ಣತೆಯಾಗಲೀ ಇಲ್ಲ. ವಸ್ತುವಿನ ಆಯ್ಕೆಯಲ್ಲಿ ನಿರೂಪಣೆಯಲ್ಲಿ ಜೀವನದ ಬಗೆಗಿನ ಕಾಳಜಿಯ ಹಾಗೂ ಚಿಂತನೆಯ ಕೊರತೆಯಿದೆ, ಒಟ್ಟಾರೆ ಕತೆಗಳ ಗುಣಮಟ್ಟದ ದೃಷ್ಟಿಯಿಂದ ಈ ಎಲ್ಲ ವರ್ಷಗಳಲ್ಲಿ ಹೇಳಿಕೊಳ್ಳು ವಂತಹ ಪ್ರಗತಿಯೇನೂ ಕಾಣುವುದಿಲ್ಲ.

ಇದರರ್ಥ ಲೇಖಿಕೆಯರ ಕತೆಗಳಲ್ಲಿ ಮೆಚ್ಚಬಹುದಾದ ಅಂಶಗಳೇ ಇಲ್ಲವೆಂದು ಖಂಡಿತ ಅಲ್ಲ. ಹಳೆಯ ತಲೆಮಾರಿನ ಲೇಖಿಕೆಯರು ಬಳಸಿದ ಸರಳ ನಿರೂಪಣಾ ವಿಧಾನ ಅನೇಕ ಸಂದರ್ಭಗಳಲ್ಲಿ ತನ್ನ ಸರಳತೆಯಿಂದಾ ಗಿಯೇ ಮನ ಮುಟ್ಟುತ್ತದೆ. ಅನೇಕ ಸಲ ಪಾತ್ರಗಳ ಪ್ರಾಮಾಣಿಕತೆ, ಬಿಚ್ಚುಮನಸ್ಸು ಪರಿಣಾಮಕಾರಿಯೆನಿಸುತ್ತವೆ. ಹೆಣ್ಣುಮಕ್ಕಳಿಗೆ ವಿಶೇಷ ಶೈಕ್ಷಣಿಕ ಸೌಲಭ್ಯ-ಸಾಮಾಜಿಕ ಸ್ವಾತಂತ್ರ್ಯ ಇವು ಯಾವವೂ ಇಲ್ಲದ ಕಾಲದಲ್ಲಿ ಕೆಲವು ಲೇಖಿಕೆಯರ ಕತೆಗಳಲ್ಲಿ ಕಂಡುಬರುವ ಸಾಮಾಜಿಕ ಕಳಕಳಿ ನಿಜಕ್ಕೂ ಪ್ರಶಂಸನೀಯ. ಎಪ್ಪತ್ತರ ದಶಕದ ಲೇಖಿಕೆಯರು ಅನೇಕ ಆಧುನಿಕ ಸಮಸ್ಯೆಗಳತ್ತ ಗಮನ ಹರಿಸಿದ್ದಾರೆ. ವ್ಯವಸ್ಥೆಯ ವಿರುದ್ಧ ಸಿಡಿದೇಳುವ ಮನೋಭಾವದ ಮಹಿಳೆಯನ್ನು ತಮ್ಮ ಕತೆಗಳಲ್ಲಿ ಚಿತ್ರಿಸಿ ದ್ದಾರೆ. ಅನೇಕರು ನೈಜವಾದ ಪ್ರಾದೇಶಿಕ ಭಾಷೆ ಬಳಸುವಲ್ಲಿ, ದಲಿತ ಹಾಗೂ ಶೋಷಿತ ವರ್ಗದ ಜೀವನ ಚಿತ್ರಿಸುವಲ್ಲಿ, ಸಮಾಜದಲ್ಲಿನ ಹಲವು ತರದ ಮುಖವಾಡಗಳ ವ್ಯಕ್ತಿಗಳ ಹಿಪಾಕ್ರಸಿಯನ್ನು ಬಯಲಿಗೆಳೆಯುವುದ ರಲ್ಲಿ ತಮ್ಮ ಪ್ರತಿಭೆ ತೋರಿದ್ದಾರೆ. ಇತ್ತೀಚಿನ ಅನೇಕ ಕತೆಗಳಲ್ಲಿ ಹೆಣ್ಣು ತನ್ನ ತನವನ್ನು ಅಳೆಯುವ ಹಾಗೂ ಅರಿಯುವ ಪ್ರಾಮಾಣಿಕ ಪ್ರಯತ್ನ ಕಂಡುಬರುತ್ತಿದೆ. ಶೈಲಿ ಹಾಗೂ ತಂತ್ರದ ಬಗೆಗೆ ಅನೇಕ ಲೇಖಿಕೆಯರು ಆಳವಾಗಿ ಯೋಚಿಸಿಲ್ಲವಾದರೂ, ಅನೇಕರ ಕತೆಗಳಲ್ಲಿ ಕಲಾತ್ಮಕತೆ ಕಂಡು ಬರುವುದಿಲ್ಲವಾದರೂ. ಬಹುಪಾಲು ಕತೆಗಳ ಒಟ್ಟು ಪರಿಣಾಮದಲ್ಲಿ ಸಾಂದ್ರತೆಯ ಅಭಾವವಿದ್ದರೂ, ತೀರ ಇತ್ತೀಚಿನ ಕೆಲವು ಬೆಳವಣಿಗೆಗಳನ್ನು ಗಮನಿಸಿದರೆ ಲೇಖಿಕೆಯರ ಕತೆಗಳ ಬಗ್ಗೆ ತುಸು ಆಶಾಭಾವ ಹುಟ್ಟುತ್ತದೆ,

ಈ ಬೃಹತ್ ಸಂಕಲನದಲ್ಲಿನ ಕತೆಗಳನ್ನು ವಸ್ತುವಿನ ದೃಷ್ಟಿಯಿಂದ ಹಲವಾರು ಭಾಗಗಳಲ್ಲಿ ವಿಂಗಡಿಸಲಾಗಿದೆ. ಈ ವಿಂಗಡಣೆ ಮಾಡುವಾಗ ಕೇವಲ ಆಯಾ ಕತೆಗಳು ಬಿಂಬಿಸುವ ಜೀವನದ ಬಗೆಗಿನ ದೃಷ್ಟಿಕೋನಗಳನ್ನು ಮಾತ್ರ ಪರಿಗಣಿಸಲಾಗಿದೆಯೇ ವಿನಃ ಲೇಖಕಿಯರ ವಯಸ್ಸು, ಸಾಹಿತ್ಯದಲ್ಲಿ ಅವರ ಸ್ಥಾನ, ಕಾಲಮಾನ ಇತ್ಯಾದಿಗಳನ್ನಲ್ಲ, ಭಾಗ ೧ ರಲ್ಲಿಯ ಕತೆಗಳಲ್ಲಿ ಮನುಷ್ಯರ ವ್ಯಕ್ತಿತ್ವದ ಆಳಕ್ಕೆ ಇಳಿದುನೋಡಿ ವಿಶ್ಲೇಷಿಸುವ ಪ್ರಯತ್ನ ವಿದೆ. ಜೀವನವನ್ನು ಸಮಗ್ರವಾಗಿ ಪರಿಶೀಲಿಸುವ ಪ್ರಾಮಾಣಿಕ ಇಚ್ಛೆಯಿದೆ. ಯಾವುದರ ಬಗೆಗೂ ಪೂರ್ವಾಗ್ರಹವಿಲ್ಲದೆ ನೇರವಾಗಿ ಅನಿಸಿದ್ದನ್ನು ಕಲಾತ್ಮಕವಾಗಿ ಚಿತ್ರಿಸುವ ಯತ್ನವಿದೆ. ಭಾಗ ೨ ರಲ್ಲಿಯ ಕತೆಗಳು ತಿಳಿಹಾಸ್ಯ ಹಾಗೂ ಸರಳವಿಡಂಬನೆಯಿಂದೊಡಗೂಡಿ ಮನರಂಜನೆಯುನ್ನೀಯುತ್ತವೆ, ಭಾಗ ೩ ರಲ್ಲಿ ಸಾಮಾಜಿಕ ಪ್ರಜ್ಞೆಯನ್ನು ತೋರುವ ಎಚ್ಚೆತ್ತ ಮನೋಭಾವದ ಹೆಣ್ಣಿನ ಪಾತ್ರಗಳನ್ನು ಚಿತ್ರಿಸುವ ಕತೆಗಳಿವೆ. ಇಲ್ಲಿನ ಕತೆಗಳಲ್ಲಿ ಹೆಣ್ಣು ತನಗೆ ಗಂಡಸಿನಿಂದ ಹಾಗೂ ಸಮಾಜದಿಂದ ಆಗುವ ಅವಿರತ ಅನ್ಯಾಯಗಳ ವಿರುದ್ಧ ಸೌಮ್ಯವಾಗಿ, ಅನೇಕ ಸಲ ತೀವ್ರವಾಗಿ, ಪ್ರತಿಭಟಿಸುತ್ತಾಳೆ. ಅವಳಿಗೆ ಶೋಷಣೆಯ ಬಗೆಗೆ ಅರಿವೂ ಇದೆ. ಆಕ್ರೋಶವೂ ಇದೆ. ಈ ಕತೆಗಳು ಹಲವಾರು ಹಳೆಯ ಹಾಗೂ ಹೊಸ ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಬೀರುವ ಪ್ರಯತ್ನ ಮಾಡುತ್ತವೆ, ಭಾಗ ೪ ರಲ್ಲಿಯ ಕತೆಗಳು ನಮ್ಮ ಬಹುಸಂಖ್ಯಾತ ಲೇಖಿಕೆಯರ ಬಲವನ್ನು ಸೂಚಿಸುತ್ತವೆ. ಪ್ರೇಮ, ಮದುವೆ, ಸಂಸಾರ ಇವೇ ಕೇಂದ್ರವಾಗಿರುವ ಕತೆಗಳಿವು. ಪ್ರೇಮಿಯೊಂದಿಗೆ, ಗಂಡನೊದಿಗೆ, ಮಕ್ಕಳೊಂದಿಗೆ. ಕುಟುಂಬದ ಇತರ ಸದಸ್ಯರೊಂದಿಗೆ ಹೆಣ್ಣಿಗ ಬರುವ ಸಂಬಂಧಗಳು, ಆ ಬಗ್ಗೆ ಅವಳ ಭಾವನೆಗಳ ತೊಯ್ದಾಟ, ಅವಳು ಅದರಿಂದಾಗಿ ಎದುರಿಸಬೇಕಾದ ಸಮಸ್ಯೆಗಳು ಇವುಗಳ ಚಿತ್ರಣ ಇಲ್ಲಿದೆ. ಅನೇಕ ಸಲ, ಇತರರೊಂದಿಗಿನ ಈ ಸಂಬಂಧಗಳೇ ಈ ಹೆಣ್ಣಿನ ಜೀವನದ ಸರ್ವಸ್ವವೇನೋ, ಇದರ ಹೊರತಾಗಿ ಅವಳಿಗೆ ಸ್ವತಃದ ಅಸ್ತಿತ್ವವೆಂಬುದೇ ಇಲ್ಲವೇನೋ, ಅನ್ನಿಸುವ ಸಂದರ್ಭಗಳಿವೆ ಈ ಕತೆಗಳಲ್ಲಿ.

ಅದರಂತೆಯೇ, ಕೆಲವು ಕತೆಗಳಲ್ಲಿ ಈ ಸಂಬಂಧಗಳ ಮೂಲಕವಾಗಿಯೇ ಹೆಣ್ಣು ತನ್ನ ಸ್ವತಃದ ಅಸ್ತಿತ್ವದ ಬಗೆಗೆ ಜಾಗೃತಳಾದ ಚಿತ್ರಣವೂ ಇದೆ. ಈ ಸಂಬಂಧಗಳಿಂದಾಗಿ ಹೆಣ್ಣು ಆತ್ಮವಿಶ್ಲೇಷಣೆ ಮಾಡಿಕೊಳ್ಳುವ

ಬಹುಪಾಲು ಲೇಖಿಕೆಯರ ಮೇಲೆ ಆಗಿಲ್ಲ. ಬಹುಪಾಲು ಕತೆಗಳು ಗಂಡು ಹೆಣ್ಣಿನ ಸಂಬಂಧ, ಕೌಟುಂಬಿಕ ಸಮಸ್ಯೆಗಳು. ಹೆಣ್ಣಿನ ಮನಸ್ಸಿನ ಕೋಮಲ ಭಾವನೆಗಳ ಹೊಯ್ದಾಟ-ಇವುಗಳ ಬಗೆಗೇ ಇವೆ. ಆದರ್ಶಪ್ರಿಯತೆ, ಸಂಪ್ರದಾಯ ಶರಣತೆ, ಅತಿಭಾವುಕತೆ ಈ ಕತೆಗಳಲ್ಲಿ ಎದ್ದುಕಾಣುವ ಅಂಶ ಗಳಾಗಿವೆ. ಜೊತೆಗೆ ಅಸಹಜತೆ, ಅವಾಸ್ತವಿಕತೆಯೂ ಇದೆ. ಕಥಾತಂತ್ರ ತೀರ ಸರಳವಾಗಿದೆ. ಭಾಷೆ ಹಾಗೂ ವಸ್ತುವಿನಲ್ಲಿ ಸಾಮರಸ್ಯ ಸಾಧಿಸು ವುವರಲ್ಲಿ ಅನೇಕರು ಸೋತಿದ್ದಾರೆ, ಪಾತ್ರಗಳಲ್ಲಿ ಕ್ಲಿಷ್ಟತೆಯಾಗಲೀ ಸಂಕೀರ್ಣತೆಯಾಗಲೀ ಇಲ್ಲ. ವಸ್ತುವಿನ ಆಯ್ಕೆಯಲ್ಲಿ ನಿರೂಪಣೆಯಲ್ಲಿ ಜೀವನದ ಬಗೆಗಿನ ಕಾಳಜಿಯ ಹಾಗೂ ಚಿಂತನೆಯ ಕೊರತೆಯಿದೆ, ಒಟ್ಟಾರೆ ಕತೆಗಳ ಗುಣಮಟ್ಟದ ದೃಷ್ಟಿಯಿಂದ ಈ ಎಲ್ಲ ವರ್ಷಗಳಲ್ಲಿ ಹೇಳಿಕೊಳ್ಳು ವಂತಹ ಪ್ರಗತಿಯೇನೂ ಕಾಣುವುದಿಲ್ಲ.

ಇದರರ್ಥ ಲೇಖಿಕೆಯರ ಕತೆಗಳಲ್ಲಿ ಮೆಚ್ಚಬಹುದಾದ ಅಂಶಗಳೇ ಇಲ್ಲವೆಂದು ಖಂಡಿತ ಅಲ್ಲ. ಹಳೆಯ ತಲೆಮಾರಿನ ಲೇಖಿಕೆಯರು ಬಳಸಿದ ಸರಳ ನಿರೂಪಣಾ ವಿಧಾನ ಅನೇಕ ಸಂದರ್ಭಗಳಲ್ಲಿ ತನ್ನ ಸರಳತೆಯಿಂದಾ ಗಿಯೇ ಮನ ಮುಟ್ಟುತ್ತದೆ. ಅನೇಕ ಸಲ ಪಾತ್ರಗಳ ಪ್ರಾಮಾಣಿಕತೆ, ಬಿಚ್ಚುಮನಸ್ಸು ಪರಿಣಾಮಕಾರಿಯೆನಿಸುತ್ತವೆ. ಹೆಣ್ಣುಮಕ್ಕಳಿಗೆ ವಿಶೇಷ ಶೈಕ್ಷಣಿಕ ಸೌಲಭ್ಯ-ಸಾಮಾಜಿ : ಸ್ವಾತಂತ್ರ್ಯ ಇವು ಯಾವವೂ ಇಲ್ಲದ ಕಾಲದಲ್ಲಿ ಕೆಲವು ಲೇಖಿಕೆಯರ ಕತೆಗಳಲ್ಲಿ ಕಂಡುಬರುವ ಸಾಮಾಜಿಕ ಕಳಕಳಿ ನಿಜಕ್ಕೂ ಪ್ರಶಂಸನೀಯ. ಎಪ್ಪತ್ತರ ದಶಕದ ಲೇಖಿಕೆಯರು ಅನೇಕ ಆಧುನಿಕ ಸಮಸ್ಯೆಗಳತ್ತ ಗಮನ ಹರಿಸಿದ್ದಾರೆ. ವ್ಯವಸ್ಥೆಯ ವಿರುದ್ಧ ಸಿಡಿದೇಳುವ ಮನೋಭಾವದ ಮಹಿಳೆಯನ್ನು ತಮ್ಮ ಕತೆಗಳಲ್ಲಿ ಚಿತ್ರಿಸಿ ದ್ದಾರೆ. ಅನೇಕರು ನೈಜವಾದ ಪ್ರಾದೇಶಿಕ ಭಾಷೆ ಬಳಸುವಲ್ಲಿ, ದಲಿತ ಹಾಗೂ ಶೋಷಿತ ವರ್ಗದ ಜೀವನ ಚಿತ್ರಿಸುವಲ್ಲಿ, ಸಮಾಜದಲ್ಲಿನ ಹಲವು ತರದ ಮುಖವಾಡಗಳ ವ್ಯಕ್ತಿಗಳ ಹಿಪಾಕ್ರಸಿಯನ್ನು ಬಯಲಿಗೆಳೆಯುವುದ ರಲ್ಲಿ ತಮ್ಮ ಪ್ರತಿಭೆ ತೋರಿದ್ದಾರೆ. ಇತ್ತೀಚಿನ ಅನೇಕ ಕತೆಗಳಲ್ಲಿ ಹೆಣ್ಣು ತನ್ನ ತನವನ್ನು ಅಳೆಯುವ ಹಾಗೂ ಅರಿಯುವ ಪ್ರಾಮಾಣಿಕ ಪ್ರಯತ್ನ ಕಂಡುಬರುತ್ತಿದೆ. ಶೈಲಿ ಹಾಗೂ ತಂತ್ರದ ಬಗೆಗೆ ಅನೇಕ ಲೇಖಿಕೆಯರು ಆಳವಾಗಿ ಯೋಚಿಸಿಲ್ಲವಾದರೂ, ಅನೇಕರ ಕತೆಗಳಲ್ಲಿ ಕಲಾತ್ಮಕತೆ ಕಂಡು ಬರುವುದಿಲ್ಲವಾದರೂ. ಬಹುಪಾಲು ಕತೆಗಳ ಒಟ್ಟು ಪರಿಣಾಮದಲ್ಲಿ ಸಾಂದ್ರತೆಯ ಅಭಾವವಿದ್ದರೂ, ತೀರ ಇತ್ತೀಚಿನ ಕೆಲವು ಬೆಳವಣಿಗೆಗಳನ್ನು ಗಮನಿಸಿದರೆ ಲೇಖಿಕೆಯರ ಕತೆಗಳ ಬಗ್ಗೆ ತುಸು ಆಶಾಭಾವ ಹುಟ್ಟುತ್ತದೆ,

ಈ ಬೃಹತ್ ಸಂಕಲನದಲ್ಲಿನ ಕತೆಗಳನ್ನು ವಸ್ತುವಿನ ದೃಷ್ಟಿಯಿಂದ ಹಲವಾರು ಭಾಗಗಳಲ್ಲಿ ವಿಂಗಡಿಸಲಾಗಿದೆ. ಈ ವಿಂಗಡಣೆ ಮಾಡುವಾಗ ಕೇವಲ ಆಯಾ ಕತೆಗಳು ಬಿಂಬಿಸುವ ಜೀವನದ ಬಗೆಗಿನ ದೃಷ್ಟಿಕೋನಗಳನ್ನು ಮಾತ್ರ ಪರಿಗಣಿಸಲಾಗಿದೆಯೇ ವಿನಃ ಲೇಖಕಿಯರ ವಯಸ್ಸು, ಸಾಹಿತ್ಯದಲ್ಲಿ ಅವರ ಸ್ಥಾನ, ಕಾಲಮಾನ ಇತ್ಯಾದಿಗಳನ್ನಲ್ಲ, ಭಾಗ ೧ ರಲ್ಲಿಯ ಕತೆಗಳಲ್ಲಿ ಮನುಷ್ಯರ ವ್ಯಕ್ತಿತ್ವದ ಆಳಕ್ಕೆ ಇಳಿದುನೋಡಿ ವಿಶ್ಲೇಷಿಸುವ ಪ್ರಯತ್ನ ವಿದೆ. ಜೀವನವನ್ನು ಸಮಗ್ರವಾಗಿ ಪರಿಶೀಲಿಸುವ ಪ್ರಾಮಾಣಿಕ ಇಚ್ಛೆಯಿದೆ. ಯಾವುದರ ಬಗೆಗೂ ಪೂರ್ವಾಗ್ರಹವಿಲ್ಲದೆ ನೇರವಾಗಿ ಅನಿಸಿದ್ದನ್ನು ಕಲಾತ್ಮಕವಾಗಿ ಚಿತ್ರಿಸುವ ಯತ್ನವಿದೆ. ಭಾಗ ೨ ರಲ್ಲಿಯ ಕತೆಗಳು ತಿಳಿಹಾಸ್ಯ ಹಾಗೂ ಸರಳವಿಡಂಬನೆಯಿಂದೊಡಗೂಡಿ ಮನರಂಜನೆಯನ್ನೀಯುತ್ತವೆ, ಭಾಗ ೩ ರಲ್ಲಿ ಸಾಮಾಜಿಕ ಪ್ರಜ್ಞೆಯನ್ನು ತೋರುವ ಎಚ್ಚೆತ್ತ ಮನೋಭಾವದ ಹೆಣ್ಣಿನ ಪಾತ್ರಗಳನ್ನು ಚಿತ್ರಿಸುವ ಕತೆಗಳಿವೆ. ಇಲ್ಲಿನ ಕತೆಗಳಲ್ಲಿ ಹೆಣ್ಣು ತನಗೆ ಗಂಡಸಿನಿಂದ ಹಾಗೂ ಸಮಾಜದಿಂದ ಆಗುವ ಅವಿರತ ಅನ್ಯಾಯಗಳ ವಿರುದ್ಧ ಸೌಮ್ಯವಾಗಿ, ಅನೇಕ ಸಲ ತೀವ್ರವಾಗಿ, ಪ್ರತಿಭಟಿಸುತ್ತಾಳೆ. ಅವಳಿಗೆ ಶೋಷಣೆಯ ಬಗೆಗೆ ಅರಿವೂ ಇದೆ. ಆಕ್ರೋಶವೂ ಇದೆ. ಈ ಕತೆಗಳು ಹಲವಾರು ಹಳೆಯ ಹಾಗೂ ಹೊಸ ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಬೀರುವ ಪ್ರಯತ್ನ ಮಾಡುತ್ತವೆ, ಭಾಗ ೪ ರಲ್ಲಿಯ ಕತೆಗಳು ನಮ್ಮ ಬಹುಸಂಖ್ಯಾತ ಲೇಖಿಕೆಯರ ಬಲವನ್ನು ಸೂಚಿಸುತ್ತವೆ. ಪ್ರೇಮ, ಮದುವೆ, ಸಂಸಾರ ಇವೇ ಕೇಂದ್ರವಾಗಿರುವ ಕತೆಗಳಿವು. ಪ್ರೇಮಿಯೊಂದಿಗೆ, ಗಂಡನೊಡಿಗೆ, ಮಕ್ಕಳೊಂದಿಗೆ. ಕುಟುಂಬದ ಇತರ ಸದಸ್ಯರೊಂದಿಗೆ ಹೆಣ್ಣಿಗ ಬರುವ ಸಂಬಂಧಗಳು, ಆ ಬಗ್ಗೆ ಅವಳ ಭಾವನೆಗಳ ಹೊಯ್ದಾಟ, ಅವಳು ಅದರಿಂದಾಗಿ ಎದುರಿಸಬೇಕಾದ ಸಮಸ್ಯೆಗಳು ಇವುಗಳ ಚಿತ್ರಣ ಇಲ್ಲಿದೆ. ಅನೇಕ ಸಲ, ಇತರರೊಂದಿಗಿನ ಈ ಸಂಬಂಧಗಳೇ ಈ ಹೆಣ್ಣಿನ ಜೀವನದ ಸರ್ವಸ್ವವೇನೋ, ಇದರ ಹೊರತಾಗಿ ಅವಳಿಗೆ ಸ್ವತಃದ ಅಸ್ತಿತ್ವವೆಂಬುದೇ ಇಲ್ಲವೇನೋ, ಅನ್ನಿಸುವ ಸಂದರ್ಭಗಳಿವೆ ಈ ಕತೆಗಳಲ್ಲಿ.

ಅದರಂತೆಯೇ, ಕೆಲವು ಕತೆಗಳಲ್ಲಿ ಈ ಸಂಬಂಧಗಳ ಮೂಲಕವಾಗಿಯೇ ಹೆಣ್ಣು ತನ್ನ ಸ್ವತಃದ ಅಸ್ತಿತ್ವದ ಬಗೆಗೆ ಜಾಗೃತಳಾದ ಚಿತ್ರಣವೂ ಇದೆ. ಈ ಸಂಬಂಧಗಳಿಂದಾಗಿ ಹೆಣ್ಣು ಆತ್ಮವಿಶ್ಲೇಷಣೆ ಮಾಡಿಕೊಳ್ಳುವ

ಪ್ರಸಂಗಗಳೂ ಇಲ್ಲದಿಲ್ಲ. ಭಾಗ ೫ ರಲ್ಲಿನ ಕತೆಗಳು ಮನುಷ್ಯನ ಜೀವನ ದಲ್ಲಿ ದೈವವೆಂಬ ಶಕ್ತಿಯು ಆಡುವ ಮಹತ್ವದ ಪಾತ್ರವನ್ನು ನಿರೂಪಿಸುತ್ತವೆ. ನಾವೆಲ್ಲ ವಿಧಿಯ ಕೈಗೊಂಬೆಗಳು ಮಾತ್ರವೆಂಬ ದೃಷ್ಟಿಕೋನದ ಈ ಕತೆಗಳೂ ಸಂಖ್ಯೆಯಲ್ಲಿ ಸಾಕಷ್ಟಿವೆ ನಮ್ಮ ಮಹಿಳಾಸಾಹಿತ್ಯದಲ್ಲಿ, ಸಹಜವಾಗಿಯೇ ಇಲ್ಲಿನ ಕತೆಗಳಲ್ಲಿ ಆಕಸ್ಮಿಕ ಘಟನೆಗಳು, ಪಾತ್ರಗಳಲ್ಲಿ ಅಸಹಾಯಕ-ಆರಕ್ಷಕ ಭಾವ ಇವೆ. ಅಲ್ಲಲ್ಲಿ ಅವಾಸ್ತವಿಕತೆಯೂ ಇದೆ. ಭಾಗ ೬ ರಲ್ಲಿನ ಕತೆಗಳು ಕೇವಲ ಘಟನೆಗಳನ್ನು ನಿರೂಪಿಸುತ್ತವೆ. ಸರಳ ನಿರೂಪಣಾ ವಿಧಾನ ಬಳಸಿದ ಇಲ್ಲಿನ ಕೆಲ ಕತೆಗಳು ವರದಿಯ ಆಭ್ಯಾಸ ಹುಟ್ಟಿಸುತ್ತವೆಯಾದರೂ, ಇತರ ಕೆಲವು ಕತೆಗಳು ಭಾವುಕತೆ-ಕಲಾತ್ಮಕತೆಯಿಂದೊಡಗೂಡಿ ಆಸಕ್ತಿ ಹುಟ್ಟಿಸುತ್ತವೆ,

ಸಂಖ್ಯೆಯಲ್ಲಿ ವಿಪುಲವಾಗಿರುವ ನಮ್ಮ ಕತೆಗಾರ್ತಿಯರು ಈ ಸಂದರ್ಭದಲ್ಲಿ ಸ್ವವಿಮರ್ಶೆ ಮಾಡಿಕೊಳ್ಳುವುದು ಅವಶ್ಯವೆಂದು ನನಗನಿಸುತ್ತದೆ. ಅವರ ಸುತ್ತಲಿನ ಎಲ್ಲ ತರದ ಆಗುಹೋಗುಗಳಿಗೆ ಅವರು ಜೀವಂತವಾಗಿ ಸ್ಪಂದಿಸದಿದ್ದರೆ, ಜೀವನದ ಎಲ್ಲ ಸ್ತರಗಳ ಬಗೆಗೆ ಅವರು ಜ್ವಲಂತವಾದ ಪ್ರಜ್ಞೆಯನ್ನು ಮೈಗೂಡಿಸಿಕೊಳ್ಳದಿದ್ದರೆ, ಶ್ರೇಷ್ಠ ಸಾಹಿತ್ಯ ರಚನೆ ಸಾಧ್ಯವಿಲ್ಲವೆಂದು ಅವರು ತಿಳಿದುಕೊಳ್ಳಬೇಕು. ಹಳಸಲಾದ ಕ್ರೂರವಾದ ಅರ್ಥಹೀನವಾದ ವ್ಯವಸ್ಥೆಯನ್ನು ಕೊಚ್ಚಿಹಾಕಿ, ಹೊಸಮೌಲ್ಯಗಳನ್ನು ಎತ್ತಿ ಹಿಡಿಯಬಲ್ಲ ಶಕ್ತಿಯುಳ್ಳ ಪ್ರಾಮಾಣಿಕ ಆವೇಶವನ್ನು ಅವರು ಬೆಳೆಸಿಕೊಳ್ಳಬೇಕು. ಕೇವಲ ಮಧ್ಯಮವರ್ಗದ ಗೃಹಿಣಿಯರ ಅಭಿರುಚಿಗನುಗುಣವಾಗಿಯೋ ಅಥವಾ ತಮ್ಮ ಕೃತಿಗಳು ಚಲನಚಿತ್ರಗಳಾಗಲೆಂಬ ಅಪೇಕ್ಷೆಯಿಂದಲೋ ಬರೆಯಲು ಹೋಗದೆ ಅವರು ತಮ್ಮ ಬರವಣಿಗೆಯನ್ನು ವಸ್ತುವೈವಿಧ್ಯದಿಂದ, ಆಳವಾದ ಜೀವನಾಭವದಿಂದ, ಸಹಜ ಚಿಂತನೆಯಿಂದ ಶ್ರೀಮಂತಗೊಳಿಸಲು ಯತ್ನಿಸಬೇಕು.

ಈ ಸಂದರ್ಭದಲ್ಲಿ, ಸಮಯದ ಅಭಾವವಿದ್ದರೂ, ಉತ್ಸಾಹದಿಂದ ಪ್ರೀತಿಯಿಂದ ನನ್ನ ಸಂಕಲನ ಕಾರ್ಯದಲ್ಲಿ ಸಹಕರಿಸಿದ ಎಲ್ಲಾ ಕತೆಗಾರ್ತಿಯರಿಗೂ ನನ್ನ ಹಾರ್ದಿಕ ಕೃತಜ್ಞತೆಗಳು.

ಧಾರವಾಡ
೩೦–೧೧–೧೯೮೨ ಡಾ|| ವೀಣಾ ಶಾಂತೇಶ್ವರ

# ಪರಿವಿಡಿ

ಭಾಗ-೪

# ಮಗು ಕಲಿಸಿದ ಪಾಠ

—ತಿರುಮಲೆ ರಾಜಮ್ಮ (ಭಾರತಿ)

ಕೇವಲ ಅನಾಗರಿಕರಾಗಿ ತಾವು ಮನುಷ್ಯರೆಂಬ ಅರಿವೇ ಇಲ್ಲದೆ ಮೃಗ ಗಳಂತೆ ಕಾಡುಮೇಡುಗಳಲ್ಲಿ, ಬೆಟ್ಟಗುಡ್ಡ, ಗುಹೆಗಳಲ್ಲಿರುತ್ತ ಬದುಕು ತ್ತಿದ್ದ ಕಾಡುಜನರ ಗುಂಪೊಂದಿತ್ತು. ಈಗಲೂ ಇರಬಹುದು. ಆ ಜನರಿಗೆ 'ಹಾಲೆಕ್ಕ' ರೆಂದು ಹೆಸರು. ಅವರೂ ಹಾಗೆಯೇ ಕೂಗುತ್ತಾ ನಿಂತಲ್ಲಿ ನಿಲ್ಲದೆ ತಿರುಗುವುದು, ಎಲ್ಲಿ ಏನು ಸಿಕ್ಕಿದರದನ್ನು ಜೀವಧಾರಣ ಮಾಡುವುದು–ಇದು ಅವರ ಪದ್ಧತಿ. ಅವರು ಮಾಂಸಾಹಾರಿಗಳು, ನರಭಕ್ಷಕರು. ಸಮಯ ಹೊಂಚಿದ್ದು ಯಾರನ್ನಾದರೂ ಎತ್ತಿಕೊಂಡು ಹೋಗಿ ಒಬ್ಬೊಬ್ಬರಾಗಿ ಹಾಗೆಯೇ ಆ ದೇಹವನ್ನು ಕಚ್ಚಿ ತಿನ್ನುವಂತಹ ಪಿಶಾಚ ಪ್ರಕೃತಿಯ ಆ ಜನಕ್ಕೆ ಮನುಷ್ಯರಿಗೂ ಮೃಗಗಳಿಗೂ ವ್ಯತ್ಯಾಸ ವೇನೋ ಅದೂ ಸಹ ತಿಳಿಯದು. ನೋವು ಅಂದರೇನೋ ಆ ಕಲ್ಪನೆಗೆ ಆಸ್ಪದವೇ ಇಲ್ಲ. ಒಂದೊಂದು ಸಲ ಅವರು ಊರುಗಳ ಕಡೆಗೂ ಬರುವುದು ಉಂಟು. ಒಂದೆರಡು ದಿನಕ್ಕಿಂತ ಹೆಚ್ಚಾಗಿ ಎಲ್ಲಿಯೂ ನಿಲ್ಲು ವುದಿಲ್ಲ. ಆ ಗುಂಪಿಗೆ ಸುಬ್ಬ ಯಜಮಾನ. ಅವನು ಹೇಳಿದಂತೆ ಇನ್ನೆಲ್ಲರೂ ನಡೆದುಕೊಳ್ಳಬೇಕು.

ಒಂದು ಸಲ ನಾಲ್ಕೈದು ಜನ ಒಟ್ಟಿಗೆ ಸಣ್ಣದೊಂದೂರಿಗೆ ಬಂದರು. "ಹಾಲೆಕ್" ಎಂದು ಕೂಗಿಕೊಳ್ಳುತ್ತಾ ಒಬ್ಬೊಬ್ಬರು ಒಂದೊಂದು ಹಾದಿ ಹಿಡಿದು ಹೋದರು. ಅದರಲ್ಲಿ ಒಬ್ಬನು ಹಿಡಿದು ಹೊರಟ ದಾರಿ ನೇರ ವಾಗಿ ಊರೊಳಕ್ಕೆ ಸಾಗಿತ್ತು. ಅವನು ಊರೊಳಗೆ ಅಲ್ಲಲ್ಲಿ ಸುತ್ತಾ ಒಂದು ಸಂದಿಗೆ ತಿರುಗಿದ. ಅಲ್ಲಿ ಎರಡು ಕಡೆಗೂ ಕೆಲವು ಮ ಗಳಿದ್ದವು, ಬಡವರ ಮನೆಗಳು.

ಒಂದು ಮನೆಯ ಬಾಗಿಲು ಸ್ವಲ್ಪ ಓರೆಮಾಡಿತ್ತು. ಒಬ್ಬ ಹೆಣ್ಣುಮಗಳು, ಮಗುವನ್ನು ಮಡಿಲಲ್ಲಿಟ್ಟುಕೊಂಡು ಹಾಲುಣಿಸುತ್ತಿದ್ದಳು. ಮಗು ಹಾಗೇ ನಿದ್ದೆ ಮಾಡಿತು. ಅದು ಪಡಸಾಲೆ. ಅಲ್ಲಿಯೇ ಒಂದು ಪಕ್ಕಕ್ಕೆ ತೊಟ್ಟಿಲು. ಮಗುವನ್ನು ಆಕೆ ತೊಟ್ಟಿಲಲ್ಲಿ ಮಲಗಿಸಿ, ಹೊದಿಸಿ, ಏನೋ ನೆನಸಿಕೊಂಡು ಒಳಗೆ ಹೋದಳು. ದೂರದಿಂದ ಹೊಂಚಿನೋಡು ತ್ತಿದ್ದ ಹಾಲೆಕ್ಕನು ಕೂಡಲೇ ಒಳಗೆ ನುಗ್ಗಿ, ಆ ಮಗುವನ್ನು ಬಟ್ಟೆಯಲ್ಲಿ ಸುತ್ತಿ ಎತ್ತಿಕೊಂಡು ಓಡಿದ. ಬಾಗಿಲನ್ನಿಕ್ಕಲು ಬಂದ ತಾಯಿ, ಮಗು ನಿದ್ದೆ ಮಾಡುತ್ತಿದೆ ಎಂಬ ನಂಬಿಕೆಯಿಂದ ತೊಟ್ಟಿಲು ಕಡೆ ನೋಡದೆ, ಮನೆಗೆಲಸಗಳಿಗೆ ಒಳಕ್ಕೆ ಹೋದಳು.

ಊರ ಹೊರಗೆ, ಮನುಷ್ಯಸಂಚಾರ ಇಲ್ಲದ ಒಂದು ಕಡೆ, ಆ ಗುಂಪಿನ ಯಜಮಾನ ತನ್ನವರಿಗಾಗಿ ಕಾಯುತ್ತ ಇದ್ದಾನೆ. ಮೂರು ಕಡೆ ಹೋಗಿದ್ದವರು ಬರಿಗೈಯ್ಯಲ್ಲಿ ಬಂದರು. ನಾಲ್ಕನೆಯವನು ಒಂದು ಬಟ್ಟೆ ಸುತ್ತಿದ ವಸ್ತುವಿನೊಂದಿಗೆ ಬಂದು ಅದನ್ನು ಯಜಮಾನನ ಮುಂದೆ ಒಪ್ಪಿ ಸಿದ. ಯಜಮಾನ ಅದನ್ನು ಬಿಚ್ಚಿ ನೋಡಿದ–ಎಳೆ ಮಗು. ಅವರಿಗಾದ ಸಂತೋಷಕ್ಕೆ ಪಾರವೇ ಇಲ್ಲ. ಅದು ಅಂದಿನ ಅವರ ಸಮಾರಾಧನೆಯ ಸಂತೋಷ. ಎಂತಹ ಒಳ್ಳೆ ತಿನಿಸನ್ನು ತಂದೆಯೋ ಎಂದು ಅದನ್ನು ತಂದವ ನನ್ನು ಎಲ್ಲರೂ ಹೊಗಳಿದರು. ಮೊದಲು ಯಜಮಾನ ಅವನಿಗಿಷ್ಟವಾದ ಭಾಗವನ್ನು ಕಚ್ಚಬೇಕು. ಕಿವಿಯೋ, ಮೂಗೋ, ಕೈಯ್ಯೋ, ಏನೋ ಒಂದು ಅವನು ತೀರ್ಮಾನಿಸಿ ಅವನಿಷ್ಟ ಪೂರ್ತಿಯಾದ ಮೇಲೆ ಇತರರ ಸರದಿ. ಅದರಂತೆ ಅವನು ಆ ಮಗುವನ್ನು ಎರಡು ಕೈಗಳಲ್ಲೂ ಎತ್ತಿ ಕೊಂಡು ದಿಟ್ಟಿಸಿ ನೋಡಿದ. ಆ ಮಗು ಮುದ್ದಾಗಿತ್ತು. ಆಗತಾನೇ ಅವನ ಕೈ ಸೋಕಿ ಎಚ್ಚರಗೊಂಡಿತು. ಕಣ್ಣು ಬಿಟ್ಟಿತು. ವಿಶಾಲವಾದ ನೀಲನೇತ್ರಗಳು ಫಳಫಳ ಹೊಳೆಯುತ್ತಾ ಇದ್ದವು. ಮೋಹಕವಾದ ಆ ಮಗುವಿನ ಮುಖವನ್ನು ಅವನು ಹಾಗೆಯೇ ದಿಟ್ಟಿಸಿ ನೋಡುತ್ತಿದ್ದ. ಮಗು ಅವನ ಮುಖವನ್ನು ಹಾಗೆಯೇ ನೋಡಿತು. ಆ ಕ್ರೂರ ಮುಖ ವನ್ನು ನೋಡಿ ಗಾಬರಿಯಿಂದ ಚೀತ್ಕಾರ ಮಾಡುವ ಬದಲು ಆ ಮಗು

ಕಿಲಕಿಲ ನಕ್ಕಿತು, ಅದನ್ನು ಕಂಡು ಅವನಿಗಾಶ್ಚರ್ಯವಾಯಿತು. ಹಿಂದಿನ ಎಷ್ಟೋ ಸಂದರ್ಭಗಳ ಅನುಭವಕ್ಕೆ ಈ ಸಂದರ್ಭ ತೀರ ವಿರುದ್ಧವಾಗಿ ಕಂಡಿತು. ಎಲಾ! ಇದೇನು? ಎಂದು ಅವನು ಭ್ರಮಿತನಾಗಿ ನುಡಿದು ಮಗುವನ್ನು ಅರಿಯಲಾಗದ ತವಕದಿಂದ ನೋಡತೊಡಗಿದ. ಮಗುವೂ ಎವೆಯಿಕ್ಕದೆ ಅವನನ್ನು ನೋಡಿ ಪುನಃ ಪಕಪಕ ನಕ್ಕಿತು. ಅದನ್ನು ಕಂಡು ಅವನಿಗೆ ತಡೆಯಲಾಗದ ಏನೋ ಒಂದು ಬಗೆಯ ಸಂಕಟವಾಯಿತು. ಆ ಕಣ್ಣುಗಳನ್ನೂ ಮುದ್ದು ಮುಖವನ್ನೂ ನಿರ್ಮಲವಾದ ಆ ಎಳೆ ನಗೆಯನ್ನೂ ಎಷ್ಟು ನೋಡಿದರೂ ಸಾಲದು ಎಂದು ಅನಿಸಿತು. ಅವನು ತನ್ನ ಕೆಲಸವನ್ನೇ ಅಲ್ಲದೆ ತನ್ನನ್ನೇ ಮರೆತ. ಆ ಸ್ಥಿತಿಯಲ್ಲಿ ಅವನ ಪ್ರಯತ್ನ ಇಲ್ಲದೆಯೇ ಅವನ ಕೈ ಮಗುವಿನ ಗಲ್ಲವನ್ನು ಮುಟ್ಟಿತು. ಆ ಸ್ಪರ್ಶದಿಂದ ಅವನಿಗೆ ಎಂದೂ ಇಲ್ಲದ ಸುಖಾನುಭವ ಆಯಿತು. ಮಗು ನಗುತ್ತಲೇ ಇತ್ತು. ಆ ನಗೆ ಏನೋ ಒಂದು ಸೂಚನೆ ಮಾಡಿದಂತೆ ತೋರಿತು. ಅವನು 'ಇದೇನಪ್ಪಾ! ನನಗೆ ಏನೇನೋ ಆಗುತ್ತಾ ಇದೆಯಲ್ಲಾ! ಅಬ್ಬಾ! ಇದು ಎಂತಾ ಮಗು ನಗುನಗುತ್ತಾ ನನಗೆ ಏನೇನೋ ತಿಳಿಸುತ್ತಿದೆ. ಕಣ್ಣಿಂದ ಏನೇನೊ ತೋರಿಸುತ್ತಿದೆ—ಅಬ್ಬಬ್ಬಾ! ನನ್ನ ಕೈಲಾಗದು. ಇದನ್ನು ಮುಟ್ಟಿದರೆ ಹಾಳಾಗಿಹೋದೇನು' ಎಂದು ಸುಬ್ಬ ಹೇಳಿದ. ದುಃಖ ತಡೀಲಾರದೆ "ಎಲೋ! ಈ ಮಗೂನ ಎಲ್ಲಿಂದ ತಂದೆ"? ಎಂದು ಕೇಳಿದ. ಮಗುವನ್ನು ತಂದವನು "ಅಲ್ಲೊಂದು ಮನೇಲೀ" ಎಂದ. ಯಜಮಾನ "ಮಗು ಒಂದೇ ಇತ್ತೇನೋ" ಎಂದು ಕೇಳಿದ. ಅದಕ್ಕವನು "ಅದರಮ್ಮ ಎದೆಯುಣಿಸಿ ತೊಟ್ಟಿಲಲ್ಲಿಟ್ಟು ಒಳಕ್ಕೆ ಹೋದಾಗ ಎತ್ತಿಕೊಂಡು ಓಡಿಬಂದೆ" ಅಂದ ಮಾತಿಗೆ ಯಜಮಾನನ ಕಣ್ಣಲ್ಲಿ ನೀರು ತುಂಬಿತು. "ಅಯ್ಯೋ! ಆ ತಾಯಿ ಕಣ್ಣಲ್ಲೂ ನೀರು ಸುರೀತಿದೆಯೇನೋ! ಅದಕ್ಕೇ ನನಗೂ ಗೊತ್ತಾಗಲಿ ಅಂತ ಹೀಗೆ ಕಣ್ಣೀರು ಬರುತ್ತಿದೆ. ಅಪ್ಪಾ! ಈ ಮಗೂನ ಎಲ್ಲಿಂದ ತಂದೆಯೋ ಅಲ್ಲೇ ಬಿಟ್ಟುಬಾ" ಎನ್ನುತ್ತಾ ಅವನು ನಡುಗುವ ಕೈಯಿಂದ ಪುನಃ ಆ ಮಗುವಿನ ಕೆನ್ನೆಗಳನ್ನು ಸವರಿ "ಹೋಗಮ್ಮ ಕಂದಾ! ನಿನ್ನ ಅಮ್ಮನ ಹತ್ತಿರ" ಎಂದು ಬಟ್ಟೆಯಲ್ಲಿ ಭದ್ರವಾಗಿ ಮಗುವನ್ನು ಸುತ್ತಿ ಅವನ ಕೈಗೆ ಕೊಟ್ಟು ಕಳುಹಿಸಿದ.

ಮಗುವನ್ನೆತ್ತಿಕೊಂಡು ಅದರ ಮನೆಯ ಹತ್ತಿರ ಬಂದವನು ಮನೆಯೊಳಗೆ ಬಹಳ ಜನ ತುಂಬಿ ಏನೋ ಗಲಭೆಯಾಗುತ್ತಿದ್ದುದನ್ನು ಗಮನಿಸಿದ. ಯಾರೂ ಕಾಣದಂತೆ ಅವನು ಮಗುವನ್ನು ಮನೆಯ ಮುಂದಿನ ಜಗಲಿಯ ಮೇಲೆ ಮಲಗಿಸಿ ಅಲ್ಲಿಂದ ಮಾಯವಾದ. ಅಷ್ಟು ಹೊತ್ತೂ ನಗುತ್ತಿದ್ದ ಮಗು ಅಳುವುದಕ್ಕೆ ಮೊದಲುಮಾಡಿತು. ಆ ಅಳುವಿನ ದನಿ ಕೇಳಿ ಮನೆಯಿಂದೆಲ್ಲರೂ ಹೊರಗೆ ಬಂದರು. ಎಲ್ಲರಿಗೂ ಪರಮಾಶ್ಚರ್ಯವಾಯಿತು. ಆ ತಾಯಿ ಮಗುವನ್ನೆತ್ತಿ ಎದೆಗವಿಚಿಕೊಂಡು ಆನಂದಬಾಷ್ಪಗಳನ್ನು ಹರಿಸಿದಳು.

ಜಗಲಿಯ ಮೇಲೆ ಮಗುವನ್ನಿಟ್ಟು ಓಡಿದವನು ತನ್ನವರ ಬಳಿಗೆ ಬಂದ. ಯಜಮಾನನ ಮೈ ನಡುಗುತ್ತಿತ್ತು. ದನಿಯೂ ನಡುಗುತ್ತಿತ್ತು. ಅವನು ಎಲ್ಲರನ್ನೂ ಹತ್ತಿರ ಕೂಡಿಸಿಕೊಂಡು ಕೆಲವು ಮಾತುಗಳನ್ನಾಡಿದ. ಅವನ ಮುಖ ಎಂದೂ ಕಾಣದ ಹೊಸ ಕಳೆಯನ್ನು ತಳೆದಿತ್ತು. ಹೀಗೆಂದು ಹೇಳಲಾಗದ ಒಂದು ಬಗೆಯ ಸಂಕಟ, ಯಾವದೋ ಭಯ ಅವನನ್ನು ಮುತ್ತಿಕೊಂಡಿತ್ತು. ಅವನಿಗೇನಾಯಿತೋ, ಹೀಗೇಕೆ ನಡುಗುವನೋ ಅದನ್ನು ತಿಳಿಯಲಾರದೆ ಬೆರಗಾಗಿ ಅವರೆಲ್ಲಾ ಸುಮ್ಮನೆ ಅವನನ್ನು ನೋಡುತ್ತಾ ಆ ಮಾತುಗಳನ್ನು ಕೇಳುತ್ತಿದ್ದರು. "ಏನ್ರೋ! ಎಂದಾದರೂ ನಮಗೆ ಮೈ ನಡುಗೋದು ಕಣ್ಣಲ್ಲಿ ನೀರು ಬರೋದು ಗೊತ್ತಿತ್ತೆ?" ಎಂದು ಪ್ರಶ್ನೆ ಮಾಡಿದ ಯಜಮಾನ. "ಇಲ್ಲ ಇಲ್ಲ" ಎಂದು ಅವರಿಂದ ಉತ್ತರ ಬಂತು. ಅವನು "ನೋಡೀಪ್ಪಾ! ಒಂದು ಸಲ ನೀವು ಒಬ್ಬ ಮುದುಕನನ್ನು ಹಿಡಿದು ತಂದಿರಿ. ಅದನ್ನು ಮರೆತಿಲ್ಲ ತಾನೇ" ಅಂದ. ಅವರು "ಹೌದೌದು, ಆತ ಹೆಗಲಮೇಲಿಂದ ದಾರ ಇಳೀಬಿಟ್ಟುಕೊಂಡಿದ್ದ" ಅಂದರು. "ಆತ ಏನೇನಂದ ಅದೆಲ್ಲಾ ಈಗ ನಿಜವೇ ಆಯಿತಲ್ಲಾ! ಮನುಷ್ಯರಾಗಿ ಇಂತಾ ಪಾಪ ಮಾಡೋದೇ" ಅಂದ. ಆಮೇಲೆ "ಅಯ್ಯೋ ದೇವರೆ! ನಿನ್ನ ದಯೇ ಏನಾಯ್ತು?" ಅಂತ ಗೋಳಾಡಿದ. "ಹಾಳಾದ ನಮ್ಮ ಕೈಗಳು ಹಾಗೇ ಮುರಿದುಹೋಗಬಾರದಾಗಿತ್ತೇ? ಅಯ್ಯೋ ಏನೇನೆಲ್ಲಾ ಮಾಡಿದವೋ! ಮಾಡಬಾರದ್ದನ್ನೆಲ್ಲಾ ಮಾಡಿದೆವಪ್ಪಾ! ನಮ್ಮ ಕಣ್ಣು ಆಗ

ಹಾಗೇ ಇಂಗಿ ಹೋಗಬಾರದಾಗಿತ್ತೇ!" ಆತ ಆಡಿದ್ದು ಆಗ. ಅದೆಲ್ಲಾ ಈಗ ಮಗು ನಕ್ಕಾಗ ಕಿವೀಗೆ ಕೇಳಿಸಿತು. ಆ ಮಗು "ಎಲೋ ನೀನು ಮನುಷ್ಯ" ಅಂತ ಹೇಳಿತು. ಅವತ್ತು ಪಾಪ ಅಂತ ಕೇಳಿದ ಮಾತು ಈಗ ಈ ಪಾಪ ಕಿವಿಯೊಳಗೆ "ನಿನ್ನದು ಪಾಪ" ಅಂತ ಊದಿ ಹೋಯಿತಲ್ಲಾ! ಹೌದಪ್ಪಾ! ನಮ್ಮದು ಪಾಪ. ಆ ದೇವರು ಆಗ ಬರಲಿಲ್ಲ. ಈಗ ಈ ಮಗುವಾಗಿ ಬಂದಂತಾಯಿತು. ಮನುಷ್ಯರಿಗೆ ಒಂದು ಭಯ ಬೇಕು. ಹಾಗೇ ದಯೇನೂ ಬೇಕು ಅಂತ ಈಗ ಗೊತ್ತಾಗುತ್ತಿದೆ. ನಾವು ಮನುಷ್ಯರು. ನಮ್ಮನ್ನು ನಾವೇ ಕಿತ್ತುತಿನ್ನುವುದೇ? ಬೇಡಪ್ಪಾ ಬೇಡ. ಈ ಬದುಕು ಇನ್ನು ಸಾಕು. ಇನ್ನು ಮೇಲೆ ಯಾರ ಜೀವ ತೆಗೆಯೋದೂ ಬೇಡ. ಏನಾರೆ ಸಿಕ್ಕರೆ ತಿನ್ನೋಣ, ಹರಿಯೋ ನೀರು ಕುಡಿಯೋಣ. ಏನೂ ಸಿಕ್ಕಲಿಲ್ಲ ಹಾಗೇ ಹಸಿವನ್ನು ತಡೆಯೋಣ. ನಿಮ್ಮಿಷ್ಟ. ನೀವೆಲ್ಲಿ ಬೇಕಾದರೂ ಹೋಗಿ. ಮನುಷ್ಯರನ್ನು ಮಾತ್ರ ಕಿತ್ತುತಿನ್ನಬೇಡಿ. ನನ್ನ ಜೊತೆಯಲ್ಲಿ ಬೇಕಾದರೆ ನಾನಿರುವಂತೆಯೇ ನೀವೂ ಇರಬೇಕು ಎಂದು ಯಜಮಾನ ಎದ್ದು ಮುಂದೆ ಹೊರಡಲನುವಾದ. ಅವನ ಅನುಚರರೆಲ್ಲಾ ಮಾತಿಲ್ಲದೆ ಅವನನ್ನೇ ಹಿಂಬಾಲಿಸಿದರು.

—:O:—

# ತಂದೆ

—ಎಂ. ಕೆ. ಇಂದಿರಾ

"ಏನು ರಾಯರೆ ಪ್ರತಿದಿನ ಬೇಜಾರಿಲ್ಲದೆ ಇಷ್ಟು ದೂರ ನಡೀತೀರಲ್ಲ? ನಿಮ್ಮ ಮನೆ ಹತ್ತಿರಾನೇ ಪಾರ್ಕಿದೆ. ಅದೇನು ಈ ಪಾರ್ಕು ಅಂದರೆ ಅಷ್ಟು ಖಾಯಿಷ್ಟು ತಮಗೆ?"

ವಯಸ್ಸು ಎಪ್ಪತ್ತು ಮುಟ್ಟಿದ್ದರೂ ಬೆನ್ನು ಬಾಗದೆ ಭೂಷಣಕ್ಕಾಗಿ ವಾಕಿಂಗ್ ಸ್ಟಿಕ್ ಹಿಡಿದು ಧೀರ ನಡಿಗೆಯಿಂದ ನಡೆದಿದ್ದ ಆನಂದರಾಯರು ಪ್ರಶ್ನೆ ಕೇಳಿದ ತಮ್ಮ ನೆರೆ ಗೆಳೆಯರ ಕಡೆ ಒಮ್ಮೆ ನೋಡಿ ಮೆಲುನಕ್ಕು ನುಡಿದರು—

"ಇದು ಬರೀ ಮಕ್ಕಳ ಪಾರ್ಕು. ನೋಡಿ ಎಷ್ಟೊಂದು ಮಕ್ಕಳು, ನಂದಗೋಕುಲ ನೋಡಿದಂತಾಗುತ್ತೆ, ದೇವಸ್ಥಾನಕ್ಕೆ ಬಂದಷ್ಟೆ ಹಿತವಾಗುತ್ತೆ ಇಲ್ಲಿ ಕೂತಿದ್ದರೆ. ಬೇರೆ ಎಲ್ಲಿ ಹೋದರೂ ದೊಡ್ಡೋರ ನಾಟಕ ನೋಡಬೇಕು.

"ಮಾತಾಡಿಸಿದ ಕೂಡ್ಲೆ ಮಂಗನ ಹಾಗೆ ಹಲ್ಲು ಕಿರಿತಾರೆ ಹೊರತು ನೆಟ್ಟಗೆ ನಗೋದು ಮರೆತ್ಹೋಗ್ಬಿಟ್ಟಿದೆ ಜನಗಳಿಗೆ. ನಾಟಕದಲ್ಲಿ ಮಾತಾಡಿದ ಹಾಗೆ ಮಾತಾಡ್ತಾರೆ. ನನಗಂತೂ ತುಂಬಾ ಅಸಹ್ಯ ಆಗ್ಹೋಗಿದೆ ಇದನ್ನೆಲ್ಲಾ ನೋಡಿ. ಅದಕ್ಕೆ ನೋಡಿ ದಿನಾ ಒಂದು ಘಂಟೆ ಇಲ್ಲ ಬಂದು ಕೂತಿರ್ತೀನಿ."

ಬೆನ್ನು ಬಾಗಿದ ಸುಬ್ಬಣ್ಣನವರು ಬಲವಾಗಿ ಕೋಲೂರಿ ನಿಂತು ಆನಂದರಾಯರ ಮುಖವನ್ನೊಮ್ಮೆ ದಿಟ್ಟಿಸಿದರು.

ಹೌದು ಅದೇ ಪೋಲಿಸು ನಿಲುವು! ಹಣ್ಣು ಮೀಸೆಯ ಆ ಮುಖದ ಮೇಲೆ "ನಾನೇ ಪ್ರತ್ಯೇಕ" ಎಂಬ ದಿಟ್ಟ ಭಾವ. ಆದರೂ ತಮ್ಮದೇ ಆದ ನೇರ ನಡೆಯ ಹಿರಿತನ. ಕಳ್ಳರು, ಸುಳ್ಳರು, ವಂಚಕರು, ಮೋಸಗಾರರು,

ನೋಟ ಮಾತ್ರದಿಂದ ಹಿಂಜರಿಯಬಹುದಾದಂತ ಆ ಕಣ್ಣುಗಳು; ಪಾದರಸದ ಗುಳುಪುನಂತೆ ಅತ್ತಿತ್ತ ಸರಿದಾಡುತ್ತಿದ್ದವು.

ಅವರೂ ಪೆಲುನಕ್ಕು ಅಂದರು—

"ನೀವನ್ನೊ ಮಾತು ನಿಜ ರಾಯರೇ, ನಮ್ಮನೇಲಿ ನನ್ನ ಮೊಮ್ಮಗಳು ಒಂದು ಹುಡುಗಿ ಇದ್ದಾಳೆ ನೋಡಿ. ಮೂರು ಹೊತ್ತು ತಾತಾ ತಾತಾಂತ ನನ್ನ ಹಿಂದೆ ಮುಂದೆ ಸುತ್ಹಾಕೊಳ್ಳುತ್ತೆ ನೋಡಿ. ಆ ಮಗುವಿನಿಂದ ನನಗೂ ಹೊತ್ಹೋಗತ್ತೆ. ಇಲ್ದಿದ್ರೆ ಈ ಮನೇಲಿ ಇರೋಕೆ ಸಾಧ್ಯನೇ ಇರಲಿಲ್ಲ."

"ಯಾಕೆ? ಸಿಮ್ಮನೇಲಿ ಮಗ, ಸೊಸೆ ಮತ್ತೆ ಯಾರೋ ಇದ್ದಹಾಗೆ ಕಾಣುತ್ತಲ್ಲ?"

ಸುಬ್ಬಣ್ಣನವರ ಧ್ವನಿ ತಗ್ಗಿತು, ಮುಖ ಬಾಡಿತು, ಪಾರ್ಕಿನ ಹುಲ್ಲು ಹಾಸಿನ ಮೇಲೆ ಹೆಜ್ಜೆ ಇಡುತ್ತ ಅಂದರು—

"ನೀವೆ ಈಗ ಅಂದಿರಲ್ಲಾ ರಾಯರೆ–ಹಾಗೆ ಅವರದೆಲ್ಲಾ ಒಂದು ಮಾರ್ಗ ನಮ್ಮದೇ ಒಂದು ಮಾರ್ಗ, ಅವರ ಮಾರ್ಗ ನಮಗೆ ಸರಿ ಹೋಗೋಲ್ಲ. ಈಗ ಅವಳಿರೋ ತನಕ ನನಗೆ ಇದು ಯಾವುದೂ ಗೊತ್ತಾಗಲಿಲ್ಲಾ. ಈಗ ಈ ಕಡೆ ಕಾಲ್ದಾಗೆ ಮನಸ್ಸಿಗೆ ಇಲ್ಲದ ಕಿರಿಕಿರಿ ಏನ್ಮಾಡೋದು ಹೇಳಿ, ಇರೋ ಒಬ್ಬ ಮಗನ್ನ ಬಿಟ್ಟು ಎಲ್ಹೋಗ್ಲಿ ಈ ವಯಸ್ಸಿಗೆ.?.

ಪಾರ್ಕಿನ ಹೊಂಗೆ ಮರದ ಕೆಳಗಿನ ಕಲ್ಲು ಬೆಂಚಿನ ಮೇಲೆ ಕೂರುತ್ತಾ ಸ್ಪಷ್ಟ ಅಂದರು ಆನಂದರಾಯರು—

"ಹಾಂ, ನಿಮ್ಮನೇಲಿ ಮಗ-ಸೊಸೆನಾದರೂ ಇದ್ದಾರೆ. ನಮ್ಮ ನೇಲಿ, ಇಷ್ಟು ದೊಡ್ಡ ಮನೇಗೆ ನಾ ಒಬ್ನೇ ಇದ್ದೇನೆ ದೆವ್ವದ ಹಾಗೆ. ಮತ್ತೆ ನನ್ನ ಬಿಟ್ಟರೆ ಆ ಅಡಿಗೆ ಶಂಕರಪ್ಪ, ಕೆಲಸದ ಹುಡುಗ ಇದ್ದಾರೆ. ಅವರ ಹತ್ರ ಏನ್ಮಾತಾಡ್ಬೇಕೋ ನನಗೆ ತಿಳಿಯೋದೇ ಇಲ್ಲಾ."

ಸುಬ್ಬಣ್ಣನವರು ಸಂಶಯದಿಂದ ಅವರ ಮುಖ ನೋಡಿದರು.

"ಯಾಕೆ ತಮಗೆ ಮಕ್ಕಳು?"

ರಾಯರು ನೇರ ಉತ್ತರವಿತ್ತರು.

"ಇದ್ದಾನೆ ಒಬ್ಬ ಮಗ. ಈ ಊರಲ್ಲೇ ಇಲ್ಲೇ ಎಲ್ಲೋ ಹತ್ತಿರ

ಇರ್ಬೇಕು ಅವನ ಮನೆ. ಅಲ್ಲಿ ನೋಡಿ ಸೈಲಕ್ ಸೂಟು ಹಾಕಿಲ್ವೆ ಅದೇ ನನ್ನ ಮಗನ ಮಗು. ದಿನಾ ಈ ಪಾರ್ಕಿಗೆ ಕರ್ಕೊಂಡು ಬರುತ್ತೆ ಆ ಕೆಲಸದ ಹುಡುಗಿ.

ಬೆರಗಿನಿಂದ ಬಾಯಿ ಬಿಟ್ಟು ಆನಂದರಾಯರ ಮುಖ ನೋಡಿದರು ಸುಬ್ಬಣ್ಣನವರು;

"ತಾವು ಹೇಳೋ ಮಾತು ತುಂಬ ವಿಸ್ಮಯ ಆಗಿದೆ ರಾಯರೆ! ಒಂದೇ ಊರ್‍ನಲಿ ತಂದೆ–ಮಗ ಬೇರೆ ಬೇರೆ ಇದ್ದೀರಾ?"

"ಹೌದು; ನನಗೂ ಅವನಿಗೂ ಹೊಂದಿ ಬರಲಿಲ್ಲಾ. ನನಗೂ ಒಬ್ಬನೆ ಮಗ. ನಾನು ತಂದೆಯಾಗಿ ಮಾಡೋ ಕರ್ತವ್ಯ ಎಲ್ಲಾ ಮಾಡಿದೆ. ಆದರೆ ಅವನು ಕಡೇಲಿ ಹೋಗಿ ಯಾವುದೋ ಜಾತಿ ಹುಡುಗೀನ ಕಟ್ಕೊಂಡ. ವಯಸ್ಸು ಬಂದ ಮಗ. ಸ್ವಾತಂತ್ರ್ಯ ಅವನಿಗೂ ಇದೆ. ಆದರೆ ಇದೊಂದು ವಿಷಯದಾಗೆ ನನಗೂ ಅವನಿಗೂ ಹೊಂದಲಿಲ್ಲಾ. ಈಗ ಅವನ ಪಾಡು ಅವನಿಗೆ, ನನ್ನ ಪಾಡು ನನಗೆ."

ಸುಬ್ಬಣ್ಣನವರು ತಣ್ಣಗೆ ಕುಳಿತರು. ವಿಸ್ತಾರವಾದ ಪಾರ್ಕಿನ ತುಂಬೆಲ್ಲಾ ಬಣ್ಣ ಬಣ್ಣದ ಉಡುಗೆ-ತೊಡಗೆಯ ಮುದ್ದು ಮಕ್ಕಳು ಉಲ್ಲಾಸ ದಿಂದ ಕುಣಿದಾಡುತ್ತಿದ್ದರು. ಉಯ್ಯಾಲೆ ಜಾರು ಬಂಡೆಯ ತುಂಬೆಲ್ಲ ಮಕ್ಕಳು. ಪಾರ್ಕಿನ ಹುಲ್ಲು ಹಾಸಿನ ಮೇಲೆ ಬಿದ್ದು ಕಿಲಿಕಿಲಿ ನಕ್ಕು ಸಂತಸ ಪಡುವ ಕಂದಮ್ಮಗಳು.

ಸೈಲಕ್ ಸೂಟು ತೊಟ್ಟು, ಪುಟಾಣಿ ಬೂಟು ಹಾಕಿ ಇಲ್ಲಿಂದಲ್ಲಿಗೆ ನೆಗೆದಾಡುವ ಎರಡು ವರ್ಷದ ಕೂಸನ್ನು ನೋಡಿದರು ಸುಬ್ಬಣ್ಣನವರು. ಹದಿನಾಲ್ಕು ವರ್ಷದ ಹುಡುಗಿಯೊಂದು ಆ ಮಗುವಿನ ಹಿಂದೆ ಮುಂದೆ ಓಡಾಡುತ್ತಿತ್ತು. ಪುಟ್ಟ ಮಕ್ಕಳನ್ನು ಎತ್ತಿ ತಂದ ಒಬ್ಬಿಬ್ಬರು ತಾಯಿಯರು ಒಂದೆಡೆ ಸೇರಿ ಹರಟೆ ಹೊಡೆಯುತ್ತಿದ್ದರು. ಸಂಜೆಯ ತಂಗಾಳಿ ಎಲ್ಲರ ಮನದ ನೋವುಗಳನ್ನು ಮೆಲ್ಲ ಮೆಲ್ಲನೆ ತಳ್ಳಿಕೊಂಡು ಸರಿದು ಹೋಗುತ್ತಿತ್ತು. ಸುಬ್ಬಣ್ಣನವರು ಪಕ್ಕದಲ್ಲಿ ಕುಳಿತ ರಾಯರ ಮುಖ ನೋಡಿದರು. ಆನಂದ ರಾಯರ ಕಣ್ಣು ಅಷ್ಟು ದೂರದಲ್ಲಿ ಆಡುತ್ತಿದ್ದ ಆ ಸೈಲಕ್ ಸೂಟ್

ಹುಡುಗನ ಹಿಂದೆ ಸರಿದಾಡುತ್ತಿತ್ತು. ಸುಬ್ಬಣ್ಣನವರು ಅಸ್ಪಷ್ಟವಾಗಿ ಗೊಣಗಿದರು.

"ತಾವು ಹೇಳ್ತಾ ಇರೋ ಮಾತು ನಿಜಾನೆ ರಾಯರೆ?"

ಆನಂದರಾಯರು ಚಿಂತಿತರಾಗಿ ಅವರತ್ತ ತಿರುಗಿ ಅಂದರು—

"ಸುಳ್ಳು ಹೇಳೋ ಪ್ರಮೇಯ ನನಗೇನಿದೆ ರಾಯರೇ? ನಿಜವಾಗಿ ಅಲ್ಲಿ ಆಡ್ತಾ ಇರೋ ಮಗು ನನ್ನ ಮಗಂದು. ನೋಡ್ತಾ ಇರಿ ಈಗ ನನ್ನ ಕಂಡ ಕೂಡ್ಲೆ ಓಡಿ ಬರತ್ತೆ ಆ ಮಗು."

"ಓ....ನೀವು ತನ್ನ ತಾತಾಂತ ಅದಕ್ಕೆ ಗೊತ್ತಿರಬೋದು ಅಲ್ಲವ?"

"ಇಲ್ಲಾ ಅದಕ್ಕೆ ಗೊತ್ತಿಲ್ಲಾ. ಆ ಹುಡ್ಗೀಗೂ ಗೊತ್ತಿಲ್ಲಾ. ಆದರೆ ನನಗ್ಗೊತ್ತು ಅದು ನನ್ನ ಮೊಮ್ಮಗಾಂತ."

"ಹಾಗಾದರೆ ತಮ್ಮ ಕುಟುಂಬ....?"

"ಹೂಂ....ಅವಳು ಹೋಗಿ ಮೂರು ವರ್ಷ ಆಯ್ತು. ಅವಳು ಸಾಯೋದಕ್ಕೂ ಈ ಮಗನ ಸಂಪದ್ಗಿರೀನೇ ಹಚ್ಕೊಂಡಿದ್ದು. ಕೊನೇ ಗಳಿಗೇಲಿ ಕೊಟ್ಟ ಕೈನ."

"ಛೆ ಪಾಪ! ಏನೋ ಒಂದು ಸಂಪ್ರದಾಯದಾಗ ಬೆಳೆದು ಬಂದ ಜೀವ ಹೀಗೇನಾದ್ರೂ ಆಯ್ತೂಂದ್ರೆ ಅದೇ ಜೀವಕ್ಕೆ ಮುಳುವಾಗುತ್ತೆ."

ನೇರವಾಗಿ ಕುಳಿತ ರಾಯರು ಆ ಮಗೂನ ಕಡೆ ಚಿಟಿಕೆ ಹೊಡೆದು ಮೆಲ್ಲಗೆ ಕರೆದರು.

"ಏ ಗೋಪಾಲ್ ಇಲ್ಲಿ ಬಾ."

ತಟ್ಟನೆ ಇವರ ಕಡೆ ತಿರುಗಿದ ಮಗು ಕಿಲಿ ಕಿಲಿ ನಗುತ್ತ ಪುಟ್ಟ ಪುಟ್ಟ ಹೆಜ್ಜೆ ಇಡುತ್ತಾ ಓಡಿ ಬಂದು ಅವರ ತೊಡೆ ತಬ್ಬಿಕೊಂಡಿತು. ಆನಂದ ರಾಯರು ಮೊಮ್ಮಗನನೆತ್ತಿಕೊಂಡು ತೊಡೆಯ ಮೇಲಿರಿಸಿ ಮೆಲ್ಲಗೆ ಜೇಬಿನಿಂದ ಒಂದೇ ಒಂದು ಬಿಸ್ಕತ್ತು ತೆಗೆದು ಮಗುವಿನ ಕೈಗಿತ್ತು ಬಲಗೈಯಿಂದ ಮೃದುವಾಗಿ ಅದರ ಮುಂಗುರುಳು ನೇವರಿಸತೊಡಗಿದರು. ಆ ಗಳಿಗೆಯಲ್ಲಿ ಅವರ ಪಕ್ಕದಲ್ಲಿದ್ದ ಸುಬ್ಬಣ್ಣನವರನ್ನೂ ಮರೆತಂತಿತ್ತು. ಸುಬ್ಬಣ್ಣನವರು ಅಚ್ಚರಿಯ ಕಣ್ಣುಗಳಿಂದ ಆ ಮಗುವನ್ನು ನೋಡಿದರು.

ಕಣ್ಣು, ಮೂಗು, ಹಣೆ ಅಜ್ಜನವೇ ಹೋಲಿಕೆ ಆ ಮುದ್ದು ಮಗುವಿಗೆ. ಅದೇ ಕೆಂಪು ಮುಖ, ಕೇವಲ ಎರಡು ವರ್ಷದ ಮಗು.

ಮಗುವನ್ನೆತ್ತಿ ಬಂದ ಆ ಹುಡುಗಿ ಸ್ವಲ್ಪ ದೂರದಲ್ಲೇ ನಗುತ್ತ ನಿಂತಿದೆ. ಸುಬ್ಬಣ್ಣನವರೇ ಕೇಳಿದರು—

"ನಿಮ್ಮನೆ ಎಲ್ಲಮ್ಮಾ?"

ಹುಡುಗಿ ವಿಸ್ಮಿತಳಾಗಿ ಅವರ ಕಡೆ ನೋಡಿ ಕೇಳಿದಳು—

"ನಮ್ಮನೇನಾ ಬುದ್ಧಿ."

"ಅಲ್ಲಮ್ಮಾ ಈ ಗೋಪಾಲನ ಮನೆ?"

"ಓ! ಅದಾ ಇಲ್ಲೇ ಆರ್ನೆ ಕ್ರಾಸ್ನಾಗದೆ."

ಹೊತ್ತು ಕಳೆಯಲು ಮತ್ತೆ ಪ್ರಶ್ನೆ ಹಾಕಿದರು ಸುಬ್ಬಣ್ಣ—

"ನಿಂಗೆಷ್ಟು ಸಂಬಳ ಕೊಡ್ತಾರೆ ಇವರ ಮನೇಲಿ?"

"ಹದ್ನೈದು"

ಹುಬ್ಬೇರಿಸಿದರು ಸುಬ್ಬಣ್ಣ.

"ಓಹೋಹೋ! ಅಷ್ಟೊಂದು ಏನಮ್ಮಾ ಕೆಲ್ಸ ಮಾಡ್ತಿ ಮನೇಲಿ ನೀನು?"

"ಮನೆ ಕೆಲ್ಸ ಎಲ್ಲಾ ಮಾಡ್ತೀನಿ. ಬೆಳಗಿನಿಂದ ಸಂಜೆಗಂಟಾ ಮಗಾನೂ ನೋಡ್ಕೊತೀನಿ."

ಆನಂದರಾಯರು ಮತ್ತೆರಡು ಬಿಸ್ಕತ್ತು ತೆಗೆದು ಹುಡುಗಿಯ ಕೈಗೆ ಹಾಕಿದರು. ಅವರು ಕೊಟ್ಟ ರೀತಿ ಹುಡುಗಿ ತೆಗೆದುಕೊಂಡ ರೀತಿ ನೋಡಿದರೆ ಇದು ಹೊಸ ರೂಢಿಯಲ್ಲ ಎಂದು ಎಲ್ಲರಿಗೂ ಅರ್ಥವಾಗುತ್ತಿತ್ತು. ಸುಬ್ಬಣ್ಣನವರಿಗೂ ಇದು ಬಹಳ ದಿನಗಳ ಅಭ್ಯಾಸ ಎಂದು ತಿಳಿಯಿತು.

"ನಿಮ್ಮಪ್ಪ ಎಲ್ಹೋಗಿದಾನೋ?"

ಆನಂದರಾಯರು ಮೊಮ್ಮಗನೊಡನೆ ಆತ್ಮೀಯವಾಗಿ ಕೇಳಿದರು. ಮಗು ಮುಖವೆತ್ತಿ ಅಜ್ಜನ ಮುಖ ನೋಡಿತು. ಸರಿಯಾಗಿ ಮಾತೇ ಬಾರದ ಮಗು. ಅವರ ಪ್ರಶ್ನೆಗೆ ಉತ್ತರ ಹೇಳಬೇಕೆಂದು ಅರ್ಥವಾಯಿತು. ಆದರೆ ತನ್ನ ತಂದೆ ತಾಯಿ ಎಲ್ಲಿಗೆ ಹೋದರೆಂದು ತಿಳಿಯದು. ಮೆಲ್ಲಗೆ ಕೈಯೆತ್ತಿ ಹೇಳಿತು.

"ದೂ........ಲ!"

ಮುದುಕರಿಬ್ಬರೂ ನಕ್ಕರು. ದೂರ ನಿಂತ ಹುಡುಗಿಯೂ ನಕ್ಕಳು. ಮಗುವಿನ ಕೈಯ ಬಿಸ್ಕತ್ತು ಇನ್ನೂ ಅರ್ಧ ಇತ್ತು: ಅವನು ತಾತನ ತೊಡೆಯಿಂದ ಜಾರತೊಡಗಿದ. ಅವನನ್ನು ಮೆಲ್ಲಗೆ ಕೆಳಗಿಳಿಸುತ್ತಾ ಅವರೆಂದರು

"ಮತ್ತೆ ನಾಳೆ ಬರ್ತಿಯೇನೋ?"

ಇದು ಅವರು ದಿನಾ ಕೇಳುವ ಪಲ್ಲವಿ. ಹೌದೆಂಬಂತೆ ಮಗು ತಲೆ ಅಲ್ಲಾಡಿಸಿತು. ಅವರು ನೋಡುತ್ತಿದ್ದಂತೆಯೇ ಮಗು ಮಕ್ಕಳ ಗುಂಪಿನಲ್ಲಿ ಸೇರಿತು. ಹುಡುಗಿ ಅವನ ಬೆಂಬಲವಾಗಿ ಹಿಂದೆ ಹಿಂದೆ ಹೋದಳು. ಸುಬ್ಬಣ್ಣ ತಟ್ಟನೆ ಅಂದರು—

"ಇದಕ್ಕೆ ತಾವು ದಿನಾ ಇಲ್ಲೀ ತನಕ ಬರ್ತೀರಾ?"

"ಇದ್ದರೂ ಇರಬಹುದು. ಅವನು ಈ ಊರಿಗೆ ಬಂದು ವರ್ಷದ ಮೇಲಾಯ್ತು. ಈಗ ಆರು ತಿಂಗಳಿಗೆ ಮೊದಲು ಅವರಿಬ್ಬರನ್ನೂ ದೂರದಿಂದ ನೋಡಿದ್ದೆ. ಮಗೂನ ಅವನೇ ಎತ್ತಿಕೊಂಡಿದ್ದ....ಆಮೇಲೆ ಒಂದೆರಡು ದಿನ. ಈ ಹುಡುಗಿ, ಮಗೂನ ಕರೆತಂದದ್ದು ನೋಡಿದ್ದೆ. ಹಾಳಾದ್ದು ವ್ಯಾಮೋಹ ಎಲ್ಹೋಗತ್ತೆ ಹೇಳಿ....? ಮಗೂನ ಹತ್ರದಿಂದ ನೋಡಬೇಕೆನಿಸಿತು. ಒಂದೆರಡು ದಿನ ಇಲ್ಲಿ ಬಂದು ಕೂತೆ, ಮಗೂನ ಎತ್ತಿಕೊಂಡೆ ''ನಾ'' ಯಾರೂ ಅಂತ ಈ ಹುಡುಗಿಗೂ ಗೊತ್ತಿಲ್ಲಾ. ಹೀಗೆ ಏನಾರು ಚೂರು ತಿಂಡಿ ಹುಡ್ಗಿ ಕೈಗೆ ಹಾಕ್ತೀನಿ. ಮಗೂನ ದಿನಾ ಇಲ್ಲಿಗೆ ಕರ್ಕೊಂಡ್ಬರತ್ತೆ....

ನೋಡಿ, ಈಗ ಇದೇ ಅಭ್ಯಾಸವಾಗ್ಬಿಟ್ಟಿದೆ. ಸಂಜೆ ಒಂಧ್ಸಳಿಗೆ ಇಲ್ಲಿಗೆ ಬಂದು ಹೋಗದೆ ಇದ್ರೆ ಮನಸ್ಸಿಗೆ ಹಿತವೇ ಇರೋದಿಲ್ಲಾ. ರಾತ್ರಿ ಸರಿಯಾಗಿ ನಿದ್ರೇನೆ ಬರೋದಿಲ್ಲಾ."

ಸುಬ್ಬಣ್ಣನವರು ಅವರ ಮುಖವನ್ನೇ ನೋಡುತ್ತಿದ್ದರು. ಬದುಕಿನ ಅಂತ್ಯದಲ್ಲಿ ಬಯಸಿದ ಬಯಕೆ ನಿರಾಶೆಯ ರೂಪ ತಳೆದು ಅವರ ಮುಖದ ತುಂಬಾ ಹರಿದಾಡುತ್ತಿತ್ತು. ಜೊತೆಗೆ ಆತ್ಮಾಭಿಮಾನ ಆ ಕಣ್ಣುಗಳಲ್ಲಿ ಬೀಗುತ್ತಿತ್ತು. ಸುಬ್ಬಣ್ಣ ಮೆಲ್ಲನೆಂದರು....

"ತಮ್ಮ ಸಂಸಾರದ ಒಳಮುರಿ ನನಗೊತ್ತಿಲ್ಲಾ ಸ್ವಾಮಿ. ಏನೋ

ಮಗ, ಕಣ್ಣೆದುರಿಗೆ ಬಂದಿದ್ದಾರೆ. ವಯಸ್ಸಿನಲ್ಲಿ ಮಾಡಿದ ತಪ್ಪನ್ನು ಕ್ಷಮಿಸಿ ಮನೆಗೆ ಕರಸ್ಕೊಬೋದು. ಕಡೆಗಾಲ್ದಲ್ಲಿ ಮಗ, ಸೊಸೆ, ಮೊಮ್ಮಗ ಕಣ್ಣೆದುರ್ಗೆ ಇರ್ತಾರೆ, ನಿಮಗೂ ಮನಸ್ಸಿಗೆ ನೆಮ್ಮದಿ ಇರುತ್ತೆ."

ಆನಂದರಾಯರ ಸ್ವಾಭಿಮಾನ ಎದ್ದು ನಿಂತಿತು. ಅವರು ಸೆಟೆದು ಮಾತಾಡಿದರು—

"ಈ ಅಭದ್ರಗಳ್ನೆಲ್ಲಾ ಕ್ಷಮಿಸೋದು ಅಂದ್ರೆ ನಮ್ಮ ದೌರ್ಬಲ್ಯ ನಾವು ತೋರಿಸಿಕೊಂಡ ಹಾಗೆ ಸರಿ. ಅವನ ಹೆಂಡತಿ ಅವನಿಗೆ ಹೆಚ್ಚು. ನನ್ನ ಹೆಂಡತಿ ನನಗೆ ಹೆಚ್ಚು. ನಾಲ್ಕೈದು ಮಕ್ಕಳನ್ನ ಹೆತ್ತಿದ್ದಕ್ಕೆ ಕಡೆಗೆ ಉಳಿದೋನು ಇದೇ ಮಹಾನುಭಾವ. ಒಬ್ನೇ ಮಗ ಒಳ್ಳೆ ಮನೆತನದ ಹೆಣ್ಣು ತಂದು ಮದುವೆ ಮಾಡಬೇಕು; ಮನೆ ತುಂಬಾ ಮೊಮ್ಮಕ್ಕಳನ್ನು ಕಾಣಬೇಕು, ಖಂಡ್ಗ ಆಸೆ ಇಟ್ಕೊಂಡಿದ್ಲು ಅವಳು. ನೋಡಿ ಇದ್ದಕ್ಕಿದ್ದಂತೆ ಬೊಂಬಾಯಿನಿಂದ ಟೆಲಿಗ್ರಾಂ ಕೊಟ್ಟ ಧೀರ. ಲವ್ ಮ್ಯಾರೇಜ್ ಮಾಡ್ಕೊಂಡಿದೀನಂತ. ಆ ಘಳಿಗೇಲೆ ಹಾಸಿಗೆ ಹಿಡಿದಳು ಅವನ ತಾಯಿ. ನಾನು ಟೆಲಿಗ್ರಾಂ ಕೊಟ್ಟೆ, ಮತ್ತೆ ಈ ಜನ್ಮದಲ್ಲಿ ಮುಖ ತೋರಿಸ್ಬೇಡಾಂತ."

"ಛೆ ಪಾಪ! ಈಗಿನ ಕಾಲ್ದಲ್ಲಿ ಇಂಥ ಮದುವೆ ಎಲ್ಲ ಸಾಮಾನ್ಯ ರಾಯರೆ. ಏನೋ ಸಂದರ್ಭ! ಹೇಗೋ ಗಂಟ್ ಬೀಳತ್ತೆ. ಅಂತೂ ಮಗನಿಗೆ ಭಾರಿ ಶಿಕ್ಷೇನೆ ಕೊಟ್ಟಿದ್ದೀರಿ."

"ಛೇ ಛೇ, ನೀವು ಹಾಗೆ ಅಂದ್ಕೊಂಡಿದ್ದೀರಿ ಅಷ್ಟೆ. ಇದರಿಂದ ಅವನಿಗೆ ಸಾಸ್ವೆಯಷ್ಟೂ ವ್ಯಸನವಿಲ್ಲಾ. ಅವಳೇನೋ ಕೊನೆತನಕ ಕೊರಗಿದ್ಲು. ಹಾಗೂ ನಾನೇ ಸೋತೆ ಸ್ವಾಮಿ. ನಿಂತಾಯಿ ನೋಡ್ಬೇಕೂಂತಾಳೆ ಅಂತ ಕಾಗದ ಬರೆದೆ. ನನ್ನ ಮಗ ಅವ್ನು; ನನಗಿಂತ ಮೊಂಡ, ಕಡೆಗೂ ಬರಲೇ ಇಲ್ಲಾ. ಅವಳ ಕರ್ಮಾಂತರ ಎಲ್ಲಾ ನಾನೇ ಮಾಡ್ದೆ. ಇನ್ನ್ಯಾಕೆ ಹೇಳಿ ನನಗೆ ಅವನ ಗೊಡವೆ ?" ಸುಬ್ಬಣ್ಣ ಮನದಲ್ಲೇ ನಕ್ಕರು. ಆರು ತಿಂಗಳಿಂದ ಮೊಮ್ಮಗನ ದರ್ಶನಕ್ಕೆಂದು ಅಲ್ಲಿಂದಿಲ್ಲಿಗೆ ನಡೆದು ಬರ್ತಾರೆ. ಆದ್ರೆ ಮಗನ ಗೊಡ್ವೆ ಬೇಡ. ಇದೂ ಒಂದು ಬಗೆಯ ಭ್ರಮೆ ಅಂದುಕೊಂಡರು. ಮೆಲ್ಲಗೆ ಕೇಳಿದರು—

"ಯಾವ ಮನೆತನದವರೋ ನಿಮ್ಮ ಸೊಸೆ?"

"ಏನೋ ನನಗೆ ಸರಿಯಾಗಿ ಗೊತ್ತಿಲ್ಲಾ ಸ್ವಾಮಿ. ಅಂತೂ ಬ್ರಾಹ್ಮಣರ ಹುಡುಗಿಯಲ್ಲಾ. ನಮಗೆ ಹೊಂದೋ ಜಾತಿ ಇಲ್ಲಾ ಅಷ್ಟು ಗೊತ್ತು. ಬೊಂಬಾಯಿಯಲ್ಲಿ ಟ್ರೈನಿಂಗ್‌ನಲ್ಲಿದ್ದ. ಅಲ್ಲೇ ಎಲ್ಲೋ ಸಿಕ್ಕಿತು. ಗಂಟು ಹಾಕ್ಕೊಂಡ!"

ಸುಬ್ಬಣ್ಣ ತಮ್ಮಷ್ಟಕ್ಕೆ ಹೇಳಿಕೊಂಡರು;

"ಏನೋ ಈಗಿನ ಕಾಲಕ್ಕೆ ಇದೆಲ್ಲಾ ತೀರ ಸಾಮಾನ್ಯ. ಎಲ್ಲೆಲ್ಲಿ ನೋಡಿದರೂ ಅಂತರ್ಜಾತೀಯ ವಿವಾಹ ನಡೀಬೇಕು; ಭಾವೈಕ್ಯ ಬೆಳಿಬೇಕು ಹಾಗೇ ಹೀಗೆಂತ ಬೊಬ್ಬೆ ಹೊಡಿತಾರೆ. ನಾಟಕ, ಸಿನಿಮಾ, ಕತೆ, ಕಾದಂಬರಿ, ಎಲ್ಲದರಲ್ಲೂ ಭಾವೈಕ್ಯ ತುಂಬಿ ತುಳುಕುತ್ತೆ ಸ್ವಾಮಿ. ಏನು ಮಾಡೋದು? ಇಂಥೋರಿಗೆ ಈಗ ಸಮಾಜದಲ್ಲಿ ಒಂದು ಸ್ಥಾನ, ಮಾನ. ನಮ್ಮಂಥ ಪುರಾತನ ಗೊಡ್ಡುಗಳನ್ನು ಯಾರು ಸ್ವಾಮಿ ಕೇಳ್ತಾರೆ?"

ಆನಂದರಾಯರು ಬಿಗಿಯಾಗಿ ಹೇಳಿದರು—

ಇದನ್ನ ಮಾತ್ರ ನಾನು ಖಂಡಿತಾ ಒಪ್ಪೋದಿಲ್ಲಾ ಸುಬ್ಬಣ್ಣೋರೆ. ನರಿ ಬಾಲ ಕೊಯ್ಕೊಂಡ ಕಥೆ ಇದು. ಯಾರೋ ಕಿರಿಸ್ತಾನರ ಹುಡುಗೀನ, ಪರಂಗಿ ಹುಡುಗೀನ ಕಟ್ಕೊಂಡು ಬಂದೋರ ಅಪಪ್ರಚಾರ ಇದು. ಜಟ್ಟಿ ಬಿದ್ದ ವರಸೆ: ಭಾವೈಕ್ಯ ಅನ್ನೋದು ಯುಗ ಯುಗಾಂತರದಲ್ಲೂ ಇದ್ದೇ ಇದೆ: ನಮ್ಮ ನಮ್ಮ ಸಂಪ್ರದಾಯ ನಡಸ್ಕೊಂಡು ಭಾವೈಕ್ಯ ಸಾಧನೆಗೆ ಮಾರ್ಗ ಇಲ್ವೆ? ಇದನ್ನ ಸರ್ವಥಾ ನಾನು ಒಪ್ಪೋದಿಲ್ಲಾ. ಈಗ ನಡಿಯೋದೆಲ್ಲಾ ಕಪಟ ನಾಟಕ."

ಜಾರು ಬಂಡೆಯ ಕಡೆಯಿಂದ ಓಡಿ ಬರುತ್ತಿದ್ದ ಗೋಪಾಲ ಇದ್ದಕ್ಕಿದ್ದ ಹಾಗೆ ಬುಡಕ್ಕನೆ ಉರುಳಿಕೊಂಡ. ಹುಡುಗಿ ದೂರದಲ್ಲಿದ್ದಳು. ಮಾತಾಡುತ್ತಿದ್ದ ಆನಂದರಾಯರು ತಟಕ್ಕನೆ ಎದ್ದು ಓಡಿದರು. ಮಗು ಉಸುರು ಕಟ್ಟಿ ಅತ್ತಿತು. ಹುಡುಗಿ ಹೆದರಿಕೊಂಡು ಓಡಿ ಬಂದಳು. ಆನಂದರಾಯರು ಮೊಮ್ಮಗನನ್ನು ತಬ್ಬಿ ಸಂತೈಸಿದರು. ಹುಡುಗಿ ಗಾಬರಿಯಾಗಿ—

"ಇತ್ತ ಕೊಡಿ ಏನೋರೆ ಅಂದಳು."

ಗೋಪಾಲ ಬಿಕ್ಕುತ್ತಿದ್ದ. ಅವರು ಮಗುವನ್ನು ಹುಡುಗಿಯ ಕೈಗೆ ಕೊಡುತ್ತ ಅಂದರು—

ಮಗೂನ ಮನೆಗೆ ಕರ್ಕೊಂಡ್ಹೋಗಿ ಅವರ ತಾಯಿ ಹತ್ರ ಕೊಡು. ತುಂಬಾ ಕತ್ತಲೆಯಾಯ್ತು."

"ಮಗು ಯಾಕೊ ಅವರನ್ನು ಬಿಡಲೊಲ್ಲದು." ನಾಳೆ ತುಂಬಾ ಬಿಸ್ಕತ್ ಕೊಡ್ತೀನಿ" ಅಂದ ಮೇಲೆ ಬಿಟ್ಟಿತು.

ಮಗು ಅಳುತ್ತಿದ್ದರೆ ಮನೆಯೊಡತಿ ಬಯ್ಯುತ್ತಾಳೆಂದು ಹುಡುಗಿ ಹೆದರಿ ಇನ್ನೂ ಮಗುವನ್ನು ರಮಿಸುತ್ತಾ ನಿದಾನವಾಗಿ ಅಲ್ಲಿಂದ ಹೆಜ್ಜೆ ಹಾಕಿದಳು. ಪಾರ್ಕಿನ ದೀಪಗಳು ಹತ್ತಿಕೊಂಡವು. ತಂಬೆಲರು ಸುಳಿ ಅಲೆಯಾಗಿ ತೀಡುತ್ತಿತ್ತು. ಬಣ್ಣ ಬಣ್ಣದ ಹೂ ಗಿಡಗಳು ಪಲ್ಲವಿಸಿ ತಲೆ ದೂಗುತ್ತಿದ್ದವು. ಇವೆಲ್ಲ ನಿತ್ಯದ ನೋಟ. ಇವು ಯಾವುವು ಆನಂದ ರಾಯರನ್ನು ಸೆರೆಹಿಡಿಯಲಿಲ್ಲಾ. ಹುಡುಗಿ ಹೋದ ದಿಕ್ಕನ್ನು ನೋಡುತ್ತಾ ಅವರೆಂದರು—

"ನಡೀರಿ ಹೋಗೋಣ ಇನ್ನು."

ಸುಬ್ಬಣ್ಣ ಸುತ್ತಲೂ ನೋಡಿದರು, ಪಾರ್ಕೆಲ್ಲಾ ಖಾಲಿ. ಹತ್ತು ನಿಮಿಷಗಳ ಹಿಂದೆ ಕುಲು ಕುಲು ನಗುತ್ತಿದ್ದ ಪಾರ್ಕು ಕತ್ತಲಾದ ಗಳಿಗೆಯಲ್ಲಿ ಮಂಕು ಮೌನ ತಳೆದಿತ್ತು.

ಮುದುಕರಿಬ್ಬರೂ ಮನೆಯತ್ತ ಹೆಜ್ಜೆ ಹಾಕಿದರು. ಆನಂದ ರಾಯರು ಯಾವುದೋ ವಿಚಾರ ನಡೆಸಿದ್ದರು. ಆ ಮೌನ ಹಿತವೆನಿಸಲಿಲ್ಲಾ ಅವರಿಗೆ. ಏನಾದರೊಂದು ಮಾತಿಗೆಳೆಯಬೇಕೆಂಬ—ಸುಬ್ಬಣ್ಣ ಹಂಬಿಕೆ ಯಲ್ಲಿ ಕೇಳಿದರು—

"ತಮ್ಮ ಮಕ್ಕಳು ಯಾವ ಕೆಲಸದಲ್ಲಿದ್ದಾರೋ?"

ಮಗನ ವಿಚಾರವೇ ತಲೆಯಲ್ಲಿ ಸುಳಿದಿತ್ತಾದ್ದರಿಂದ ಅವರು ತಟ್ಟನೆ ಉತ್ತರ ಹೇಳಿದರು—

"ಸಿ. ಐ. ಡಿ. ಡಿಪಾರ್ಟ್‌ಮೆಂಟಿನಲ್ಲಿ ಇದ್ದಾನೆ."

"ಸುಮಾರು ನಾನೂರ ಐನೂರ ಬರುತ್ತಿದ್ದಿತು ಅಲ್ವೆ?"

"ಹುಂ ಹುಂ ಅಷ್ಟೆ; ಆದರೆ ಕಳ್ಳ ಸಂಪಾದನೆ ಬೇಕಾದಷ್ಟಿದೆ."

"ತಾವು ಇದ್ದುದ್ದು...?"

"ನಾನು ಐ. ಜಿ. ಪಿ, ಆಗಿದ್ದೆ."

"ಅದೆ ನಮ್ಮ ಹುಡುಗ ಹಾಗಂತ ಅಂದಿದ್ದ."

"ತಮ್ಮ ಮಕ್ಕಳೋ ?"

"ಅವನು ಸೆಕ್ರೆಟರಿಯೇಟ್‌ನಲ್ಲಿದ್ದಾನೆ. ಅವನಿಗೂ ಮುನ್ನೂರು ಚಿಲ್ರೆ ಬರ್‍ಬೋದು.

"ತಮಗೂ ಒಬ್ನೆ ಮಗನೋ"?

ಇಲ್ಲ ಸ್ವಾಮಿ, ಮೂರು ಜನ ಇದ್ದಾರೆ. ಮಗಳು ಮದುವೆ ಆಗಿ ಗಂಡನ ಮನೇಲಿದ್ದಾಳೆ, ಇನ್ನೊಬ್ಬ ಇವನ ತಮ್ಮ. ಅವನೊಂಥರ ಹುಚ್ಚು ಬಡುಕ. ನಾನು ಬ್ರಹ್ಮಚಾರಿಯಾಗೇ ಇರ್ತೀನಿ ಹಾಗೆ ಹೀಗೆ ಅಂದುಕೊಂಡು ಯಾವುದೋ ಗ್ರಾಮೋದ್ಧಾರ ಸಮಿತೀಲಿ ಸೇರ್ಕೊಂಡು ಊರೂರು ಅಲೆದುಕೊಂಡಿದ್ದಾನೆ, ಆಗ್ಲೇ ಮೂವತ್ತೈದು ವರ್ಷ ಆಯ್ತು. ಅವಳಿರೂತನಕ ಒಂದೇ ಸಮ ಬಡ್ಕೊಂಡ್ಳು, ಮಾತಾಡೋಕೋದ್ರೆ ನಮ್ಮ ತಲೆ ಮೀರಿದ ಉಪದೇಶ ಕೊಡ್ತಾನೆ. ಹಾಳಾಗೋಗ್ಲಿ ಅಂತ ಈಗ ಅವನ ಯೋಚನೆನೆ ಬಿಟ್ಟಿದ್ದೀನಿ."

ಆನಂದ ರಾಯರು ನಕ್ಕರು :

"ಎಲ್ಲಿಂದೆಲ್ಲಿಗೋದ್ರೂ ಇಂಥ ಎಡವಟ್ಟುಗಳೇ ಸ್ವಾಮೀ ಇರೋದು. ಮಾತೆತ್ತಿದರೆ ಎಲ್ಲರೂ ಗಾಂಧಿ–ನೆಹರು ಉದಾಹರಣೆ ಹೇಳ್ತಾರೆ. ಗಾಂಧಿ ನೆಹರು ಮದುವೆ ಮಾಡ್ಕೊಂಡಿರ್ಲಿಲ್ವೆ? ಅವರೆಲ್ಲಾ ತುಂಬಿದ ಸಂಸಾರಿಗ ಳಲ್ವೆ? ಅವರು ಯಾವುದರಿಂದ ಇಷ್ಟು ಪ್ರಸಿದ್ಧ ಪುರುಷರಾದ್ರು ಅನ್ನೋ ದನ್ನ ಯಾರೂ ನೋಡಲ್ಲ. ಅವರ ಧೈರ್ಯ, ಸ್ಥೈರ್ಯ, ಆದರ್ಶ ಎಂಥದ್ದು ಅನ್ನೋದನ್ನ ಯಾರೂ ನೋಡಲ್ಲ. ಅವರು ಮಾಡೋದೆಲ್ಲಾ ಕೆಂಭೂತ ಪುಕ್ಕ ಕೆರ್‍ಕೊಳ್ಳೊ ಕೆಲಸ ಅವು, ಹೀಗೆ ಅಪಾಪೋಲಿ ಅಲೆಯೋರ್‍ಯಾರೂ ದೇಶೋದ್ಧಾರ ಖಂಡಿತಾ ಮಾಡೋಲ್ಲಾ.

"ನೀವನ್ನೋ ಮಾತು ನೂರಕ್ಕೆ ನೂರು ನಿಜ ಸ್ವಾಮಿ. ಹಿಂದೆಲ್ಲಾ ಪ್ರಪಂಚ ಉದ್ಧಾರ ಮಾಡಿದ ಮಹಾನುಭಾವರೆಲ್ಲಾ ಈ ಮಂಗಾಟ ಒಂದೂ ಮಾಡಿಲ್ಲ. ಬಾಯ್ಮುಚ್ಕೊಂಡು ತಾವು ಮಾಡೋ ಸೇವೆ ಮಾಡಿದ್ರು. ಈಗ ಹಾಗಿಲ್ವಲ್ಲ ಸ್ವಾಮಿ. ಯಾವುದಾದ್ರು ಒಂದು ಸಂಸ್ಥೆಗೆ

...

ಒಂದೈದುಪ್ರಪಾಯಿ ದಾನ ಮಾಡಿದ್ರೆ ಮಾರನೇ ದಿನ ಪತ್ರಿಕೇಲಿ ತಮ್ಮ ಫೋಟೊ ಹೆಸರು ನೋಡೋವರೆಗೂ, ಅವರಿಗೆ ಸಮಾಧಾನ ಇರೋಲ್ಲ."

"ಅದು ನಿಜ ನೋಡಿ ನನಗ್ಯಾಕೋ ಈ ಕಣ್ಣು ಮುಚ್ಚಾಲೆ ನೋಡಿದರೆ ತುಂಬಾ ಅಸಹ್ಯ. ಈಗ ನೀವೇ ಅಂದ್ರಿ ಮಗ ಸೊಸೇನ ಜೊತೆಗೆ ಇಟ್ಕೊಳ್ಳಿ ಅಂತ ನಾನೂ ಒಂಥರ ಹಟವಾದಿ ಮನುಷ್ಯ.

"ನಾನೂ ಮೊದಲ್ನಿಂದ್ಲೂ ನಮ್ಮ ಸಂಪ್ರದಾಯದಂತೆ ನಡಕೊಂಡ ಮನುಷ್ಯ. ನಾನೇ ಕಷ್ಟಪಟ್ಟು ವಿದ್ಯೆ ಕಲ್ತು ಸ್ವತಂತ್ರವಾಗಿ ಸಂಪಾದನೆ ಮಾಡಿ ಬದುಕಿದೋನು. ಅವಳೂ ಒಳ್ಳೇ ಕುಲೀನರ ಮನೆ ಹೆಣ್ಣು ಮಗಳು. ಹೂವಿನ ಹಾಗೆ ಕಾಪಾಡಿಕೊಂಡು ಬಂದಿದ್ದೆ ಅವಳನ್ನ. ಹೆಂಗಸರ ಆಸೆ ಎಲ್ಲ ತುಂಬಾ ಪವಿತ್ರವಾದದ್ದು ಸುಬ್ಬಣ್ಣೋರೆ 'ಸಾವಿರ ಚಿತ್ತಾರ ಮಸಿ ನುಂಗಿತು' ಅನ್ನೊ ಹಾಗೆ ಮಾಡಿದ್ನಲ್ಲ ಈ ಭ್ರಷ್ಟ, ದುತ್ತೆ ಇವನ ಮುಖ ನೋಡಬಹುದೇ? ಈ ಮಗನ ಅಸಭ್ಯತನ ಕೇಳಿ ಬಾಳಲಾರದೆ ಎದೆ ಒಡೆದು ಸತ್ಲು ಅವಳು. ಇದು ವಿಷಯ ಬಹು ಸಣ್ಣದು. ಈ ಅಗ್ನೇಯಾಸ್ತ್ರ ತಗುಲಿದೋರನ್ನ ಸುಟ್ಟಾಕುತ್ತೆ ಬಾಕಿಯೋರಿಗೆ ಹ್ಯಾಗ್ ಸ್ವಾಮಿ ಆ ಉರಿ ಗೊತ್ತಾಗೋದು?

ಸುಬ್ಬಣ್ಣನವರು ವಿಷಾದದಿಂದ ನಕ್ಕರು.

"ಈ ವಿಷಯ ನಾ ಇಲ್ಲ ಅನ್ನೋದಿಲ್ಲ ಸ್ವಾಮಿ. ನನಗೂ ಇನ್ನೊಂದರ ಅನುಭವ ಆಗ್ತಾ ಇದೆ. ನಾನೂ ಶಿರಸ್ತೆ ಮಾಡಿ ಬದುಕಿರೋದು, ಯಾವುದಕ್ಕೂ ಮಕ್ಳ ಕೈನ ಹಾರಿಸೋ ಹಾಗಿಲ್ಲ, ಪೆನ್ಷರ್ ಬರುತ್ತೆ. ಅಷ್ಟೊ ಇಷ್ಟೊ ಮಾಡಿದಿನಿ ಮಕ್ಕಳಿಗೆ. ಕೊನೆಗಾಲ್ದಲ್ಲಿ ಹಾಯಾಗಿರಬೋದೂಂತ ಲೆಕ್ಕಾಚಾರ ಹಾಕ್ಕೊಂಡಿದ್ದೆ. ನನ್ನ ಅಕ್ಕನ ಮಗಳನ್ನೆ ತಂದು ಮದುವೆ ಮಾಡಿಕೊಂಡೆವು ದೊಡ್ಡ ಮಗನಿಗೆ. ಮೊದಲೆಲ್ಲಾ ಸರಿಯಾಗೇ ಇತ್ತು. ಒಂದೇ ಅಂಕಿ ತಪ್ಪಾಯ್ತು ನೋಡಿ ನಮ್ಮ ಲೆಕ್ಕದಲ್ಲಿ. ಅವ್ಳು ನನ್ನೊಬ್ಬನನ್ನೇ ಬಿಟ್ಟು ಹೋದ್ಲು. ಈಗ ಸೊಸೇದೇ ದರ್ಬಾರು ಮನೇಲಿ. ಒಂತುತ್ತು ಅನ್ನಕ್ಕೂ ಅವಳ ಕೈ ಕಾಯಬೇಕು. ಅದೇನು ಅಡಿಗೇನೋ ಏನು ಹಾಳೋ ಎಲ್ಲಾ ಸಪ್ಪಸಪ್ಪೆ. ಅವಳು ಕರೆದಾಗ ಹೋಗಿ ಕೂತ್ಕೊಂಡು ಅಷ್ಟು ಬಾಯಿಗೆ ಹಾಕ್ಕೊಂಡು ಬರ್ಬೇಕು. ವಯಸ್ಸಾಯ್ತು,

ಖಾರಖಾರವಾಗಿ ಏನಾದ್ರೂ ತಿನ್ನೋಣ ಅನ್ನಸತ್ತೆ ಬಾಯ್ಗೆ. ಅವಳಿದ್ದಾಗ ಹೊತ್ಹೊತ್ಗೆ ರುಚಿ ರುಚಿಯಾಗಿ ಹಾಕಿ ಚೆನ್ನಾಗಿ ಅಭ್ಯಾಸ ಮಾಡ್ಬಿಟ್ಟಿದ್ದಾಳೆ. ಈಗ ಈ ಸೊಸೆ ಹಾಕಿದ ಹುಲ್ಲು ನನ್ನ ಪಾಲಿಗೆ ಹಿಂಸೆ ಆಗಿದೆ."

ಆನಂದರಾಯರು ದೊಡ್ಡದಾಗಿ ನಕ್ಕರು.

"ಯಾಕೆ ಸುಬ್ಬಣ್ಣೋರೆ ಆಕೇನೂ ಸೊಸೇನೆ ಅಷ್ಟೆ? ಏನು ಬೇಕೋ ಅದನ್ನ ಕೇಳಿ ಮಾಡಿಸ್ಕೊಳ್ಳಿಕಾಗಲ್ವೆ?"

"ಬಡಕೊಂಡ್ರು ಈ ಸೊಸೆಗೆ. ಇದು ಹಿತ್ತಲ ಗಿಡ ಮಹಾ ಮೊರಟು. ಆ ಮಗ ಹೆಂಡ್ತಿ ಕೈ ಗೊಂಬೆ. ನನ್ಹತ್ರ ಮಾತೇ ಆಡಲ್ಲ. ನಾನು ಕೈಸೋತೋನು ಏನ್ಮಾಡ್ಲಿ ಹೇಳಿ?"

ಕೈಯಲ್ಲಿ ಕೋಲಿದ್ದು ಕನ್ನಡಕ ಹಾಕ್ಕೊಂಡ್ರೂ ಸುಬ್ಬಣ್ಣನವರು ಹೆಜ್ಜೆ ಇಡುವಾಗ ತಡವರಿಸುತ್ತಿದ್ದರು. ಆನಂದರಾಯರ ಕಾಲು ಚುರುಕಿದ್ದರೂ ತಮ್ಮ ಗೆಳೆಯರಿಗಾಗಿ ಅವರು ನಡಿಗೆ ನಿಧಾನ ಮಾಡಿ ಅಂದರು:

"ಯಾಕೆ ಈ ವಯಸ್ನಲ್ಲಿ ಕಿರಿಕಿರಿ. ಮಗಳ ಮನೇಲಾದರೂ ಹೋಗಿ ಹಾಯಾಗಿರಬಾರದೇ?"

ಬೊಚ್ಚು ಬಾಯಲ್ಲಿ ನಿರಾಶೆಯ ನಗು ನಕ್ಕರು ಸುಬ್ಬಣ್ಣನವರು.

"ಉಂಟೇ ರಾಯರೇ? ತುಂಬಾ ಸರಾಸರಿ ಅವಳು. ಸರೀ ಬೀಗರು ಇದ್ದಾರೆ. ಅವರೆದುರಿಗೆ ನಮ್ಮ ಹಣೆಬರಹ ತೋರಿಸಿಕೊಳ್ಳೊಕಾಗುತ್ಯೇ ಹೇಳಿ"

"ಹೂಂ ಅದೇ ನಾನು ಅನ್ನೋದು, ಹಾಳಾದ್ದು ಈ ಆತ್ಮಾಭಿಮಾನ ಎಲ್ಲಕ್ಕೂ ಅಡ್ಡಿ ಬರತ್ತೆ ನೋಡಿ. ಇರಬೇಕು! ಇರಬೇಕು! ಇಷ್ಟಾದ್ರೂ ಅಭಿಮಾನ ಇಲ್ದೆ ಹೋದ್ರೆ ಮನುಷ್ಯನ ಜನ್ಮ ಹಾಳು.

ಮನೆ ಹತ್ತಿರವಾಗುತ್ತಿತ್ತು. ಸುಬ್ಬಣ್ಣನವರು ಕೈಕಾಲು ಎಳೆದೆಳೆದು ಹಾಕುತ್ತಾ ಅಂದರು—

"ಏನು ಮಾಡೋದು ಸ್ವಾಮಿ, ಇಷ್ಟು ವರ್ಷ ಏನೋ ಒಂದು ರೀತೀಲಿಬದುಕಿದ್ದಾಯ್ತು, ಬಾಳಿದ್ದಾಯ್ತು. ಇನ್ನೆಷ್ಟು ದಿನ ಇರಬೇಕಾಗಿದೆ ಹೇಳಿ. ನಾಲ್ಕು ದಿನಕ್ಕೋಸ್ಕರ ಸಂಸಾರದಲ್ಲಿ ಯಾಕೆ ವಿರಸಾಂತ ಎಲ್ಲಾ ಸೈರಿಸಿಕೊಳ್ಳೋದು ಅಷ್ಟೆ."

ಆನಂದರಾಯರ ಮನೆ ಬಂದಿತು. ಅಲ್ಲಿಂದ ಮುಂದೆ ಮೂರನೆ ಯದೆ ಸುಬ್ಬಣ್ಣನವರ ಮನೆ. ರಾಯರು ಕೇಳಿದರು :—

"ಅಲ್ಲಿ ತನಕ ಬರ್ಲಾ ಸುಬ್ಬಣ್ಣೋರೆ?"

"ಅಯ್ಯೋ ಬೇಡಿ ರಾಯರೆ. ಏನೋ ಇಷ್ಟೊ ತನಕ ತಮ್ಮ ಹತ್ರ ಮಾತಾಡ್ತಾ ಹೊತ್ತು ಕಳೆದದ್ದೆ ತಿಳೀಲಿಲ್ಲಾ. ಇನ್ನು ಮೂರ್ಹೆಜ್ಜೆ ಹೋಗ್ತೀನಿ ಬಿಡಿ. ತಾವು ದಯಮಾಡ್ಸಿ ಇನ್ನು. ನನ್ನಿಂದ ತಮಗೆ ತುಂಬಾ ಹೊತ್ತಾಯ್ತೇನೋ ಅಲ್ವೆ?"

"ಏನೂ ಇಲ್ಲಾ. ನಾಳೇನೂ ಬರ್ತಿರೇನು ಪಾರ್ಕಿನ ಕಡೆ?"

"ಬರ್ತೀನೀ ಸ್ವಾಮಿ. ಸಂಜೆ ಹೊತ್ತು ಹ್ಯಾಗಾದ್ರೂ ಕಳೀಬೇಕಲ್ಲ." ಬೆನ್ನು ಬಾಗಿದ ಸುಬ್ಬಣ್ಣ ನಿಧಾನವಾಗಿ ಕಾಲು ಹಾಕಿದರು. ಆನಂದ ರಾಯರು ಮನೆಯೊಳಗೆ ಕಾಲಿಟ್ಟರು! ಮನಸ್ಸು ದಿನದಂತಿರಲಿಲ್ಲಾ. ಗಡಿಯಾರದಂತೆ ನಡೆಯುತ್ತದೆ ಅವರ ದಿನಚರಿ. ಯಾವ ವೈವಿಧ್ಯವೂ ಇಲ್ಲಾ! ಹೆಚ್ಚಳವಿಲ್ಲಾ. ದೊಡ್ಡ ಸ್ವಂತ ಮನೆ. ನಿವೃತ್ತ ಪೋಲಿಸ್ ಅಧಿಕಾರಿಯ ಮನೆ ಅದು. ಹೇಗಿರಬೇಕೋ ಹಾಗೆ ಇದೆ. ಮನೆಯಲ್ಲಿ ಕಸ ಹಾಕುವವರಿಲ್ಲಾ, ಗಲಾಟೆ ಮಾಡುವವರಿಲ್ಲಾ. ಇಟ್ಟ ಪದಾರ್ಥ ಇಟ್ಟಲ್ಲೆ. ಮನೆತುಂಬ ಫರ್ನಿಚರುಗಳು, ಮನೆಯೊಡತಿ ಮಗನಿಗೆಂದು ಸಂಗ್ರಹಿಸಿಟ್ಟ ಏನೆಲ್ಲಾ ಬೆಲೆ ಬಾಳುವ ಸಾಮಾನುಗಳು ಅಲಂಕರಣಗಳು.

ಆನಂದರಾಯರು ಒಳಗೆ ಬಂದಾಗ ಕೆಲಸದ ಹುಡುಗ ಚಟ್ಟನೆ ಎದ್ದು ಕೈಕಟ್ಟಿ ನಿಂತ. ಅವರು ಒಳಗೆ ಬಂದು ಸೋಫಾದ ಮೇಲೆ ಕುಳಿತರು. ಒಂದು ಘಳಿಗೆ ಸುಧಾರಿಸಿಕೊಂಡು ಅವರು ಮೂರು ಆಚಮನ ಮಾಡು ವುದು ವಾಡಿಕೆ. ಅಡಿಗೆಯ ಶಂಕರಪ್ಪ ದೇವರ ಮನೆಯಲ್ಲಿ ಸಂಧ್ಯಾವಂದ ನೆಗೆ ಇರಿಸಿರುವುದೂ ವಾಡಿಕೆ. ಇವೆಲ್ಲ ಮನೆಯೊಡತಿ ನಡೆಸಿಕೊಂಡು ಬಂದ ಕ್ರಮ.

ಆನಂದರಾಯರು ಒಂದು ಘಳಿಗೆ ಕಣ್ಣು ಮುಚ್ಚಿ ಕೂದಲಿಲ್ಲದ ತಮ್ಮ ನುಣ್ಣನೆಯ ತಲೆಯ ಮೇಲೆ ಕೈಯಾಡಿಸಿದರು. ಮನಸ್ಸು ಅರ್ಥ ವಾಗದ ಮೂಕವೇದನೆಯನ್ನು ಅನುಭವಿಸುತ್ತಿತ್ತು.

ತಾವು ಪೋಲಿಸ್ ಅಧಿಕಾರದಲ್ಲಿದ್ದಾಗ ಅನೇಕ ವೇಳೆ ಅಪರಾಧಿಗಳ

ಬಗೆಗೆ ಬಹು ಕಠೋರ ರೀತಿಯಲ್ಲಿ ನಡೆದುಕೊಳ್ಳಬೇಕಾಗುತ್ತಿತ್ತು. ನಡೆದು ಕೊಂಡಿದ್ದರು. ಅದು ಅವರ ಕರ್ತವ್ಯ. ಆದರೆ ಅವೆಲ್ಲಾ ನೀತಿ ನಿಯಮ ಗಳನ್ನು ಮೀರಿದವಲ್ಲ. ಈಗ ಹೊಟ್ಟೆಯಲ್ಲಿ ಹುಟ್ಟಿದ ಮಗನೇ ಧರ್ಮ ಬಾಹಿರನಾಗಿ ನಡೆದುಕೊಂಡಿದ್ದಾನೆ. ಮಗನೆಂದು ಅವರು ಮಗನನ್ನು ಕ್ಷಮಿಸಲಿಲ್ಲ. ಅವನಿಗೆ ಮನೆಯಿಂದ ಗಡಿಪಾರು ಶಿಕ್ಷೆಯನ್ನೇ ವಿಧಿಸಿ ಕಠೋರತೆ ತೋರಿದರು. ತಂದೆಯ ಸ್ವಭಾವ ಬಲ್ಲಮಗ ದೂರವಾಗಿಯೇ ಉಳಿದ.

ಇಂದು ಅವರನ್ನು ಎರಡು ಬಗೆಯ ವ್ಯಾಮೋಹಗಳು ಇಕ್ಕೆಡೆಗಳಲ್ಲಿ ಎಳೆದೆಳೆದು ಹಣ್ಣು ಮಾಡಿದವು.

ಒಂದು ಕಡೆ ಪರಂಪರಾಗತವಾಗಿ ಬಂದ ಸನಾತನ ಸಂಪ್ರದಾಯ, ಮತ್ತೊಂದು ಕಡೆ ಪುತ್ರ ವ್ಯಾಮೋಹ.

ಈ ಮನೆ, ಈ ಸಂಪತ್ತು ಎಲ್ಲಾ ಮುಂದೆ ಯಾರಿಗೆ? ಎಲ್ಲಾ ಆ ಪಾರ್ಕಿ ನಲ್ಲಿ ಮುದ್ದಾಡುವ ಮಗುವಿಗೆ. ಸಾಕಷ್ಟು ದಾನ-ಧರ್ಮ ಮಾಡಿ ಮುಗಿಸಿ ದ್ದಾಯ್ತು. ಯಾವ ನೆಂಟರಿಷ್ಟರನ್ನು ಹೆಚ್ಚಿಗೆ ಅಂಟಿಸಿಕೊಂಡವರಲ್ಲ. ಎಲ್ಲದರಲ್ಲೂ ಒಂದು ಮಿತದ ಸ್ವಭಾವ ಅವರದು.

ಶಂಕರಪ್ಪ ರುಚಿಯಾಗಿ ಹಿತವಾಗಿ ಅಡಿಗೆ ಮಾಡಿ ಬಡಿಸುವವ. ಅದು ಅವರ ಮೈಗೆ, ಮನಸ್ಸಿಗೆ ಒಗ್ಗಿತ್ತು.

ಮಗ ಮದುವೆಯಾದಾಗ, ಮಡದಿ ತೀರಿಕೊಂಡಾಗ ಅವರ ಚಿತ್ತ ಬಹು ಘಾಸಿಗೊಂಡಿತು. ಮಗನ ಮೇಲೆ ಎಲ್ಲಿಲ್ಲದ ಆಕ್ರೋಶ ಬಂದಿತು. ತಮ್ಮ ನೆಮ್ಮದಿ ಬದುಕಿನ ಮೇಲೆ ಬರೆಯಿಟ್ಟ ಮಗನನ್ನು ಮನದಿಂದ ತೆಗೆದು ದೂರ ದೂರ ಎಸೆದರು. ಮಡದಿ ಮಡಿದುದಕ್ಕಾಗಿ ಬಹಳ ನೊಂದಿ ದ್ದರು. ಅವರ ಏಕಾಂಗಿ ಜೀವನಕ್ಕೆ ತುಸು ನೆಮ್ಮದಿ ತರುತ್ತಿದ್ದುದು ಅವರ ಮಲಗುವ ಕೊಠಡಿಯಲ್ಲಿದ್ದ ಅವರ ಅರ್ಧಾಂಗಿಯ ಭಾವಚಿತ್ರ.

ಬೇಸರವಾದಾಗ ಅವರು ಮೌನ ಭಾಷೆಯಲ್ಲಿ ಆ ಭಾವ ಚಿತ್ರ ದೊಡನೆ ಮಾತನಾಡುತ್ತಿದ್ದುದುಂಟು. ಈ ಜೀವನ ಬೇಸರ ತರುವ ವೇಳೆಗೆ ಅವರಿಗೆ ಮೊಮ್ಮಗನ ದರ್ಶನವಾಯಿತು. ಮಗನ ಬಗೆಗೆ ಸೆಟೆದು ನಿಂತ ಹೃದಯ ತನಗೆ ತಿಳಿಯದಂತೆ ಮೊಮ್ಮಗನ ದರ್ಶನಕ್ಕೆ ಹೊರಡುತ್ತಿತ್ತು.

ಏನು ಕಾರಣವೋ ಮಧ್ಯೆ ಮಧ್ಯೆ ಒಂದೆರಡು ದಿನ ಆ ಹುಡುಗಿ ಮಗು ಬರುತ್ತಿರಲಿಲ್ಲ. ಆಗ ಅವರು ಅದೇ ಕಲ್ಲು ಬೆಂಚಿನ ಮೇಲೆ ಸಾಜೆ ಯವರೆಗೂ ಕುಳಿತುಕೊಳ್ಳುತ್ತಿದ್ದರು.

ಮತ್ತೆ ತಿರುಗಿತು ದಿನ ಚಕ್ರ. ಮತ್ತೆ ಗೆಳೆಯರಿಬ್ಬರೂ ನಡೆದಿದ್ದರು ಪಾರ್ಕಿನತ್ತ. ಮುದ್ದು ಗೋಪಾಲ ಹಲ್ಲುಕಿರಿಯುತ್ತಾ ಕುಣಿದೋಡಿ ಬಂದ. ಎತ್ತಿ ಎದೆಗವಚಿಕೊಂಡರು ರಾಯರು. ಅದನ್ನೇ ನೋಡುತ್ತಿದ್ದ ಸುಬ್ಬಣ್ಣ ಕೇಳಿದರು—

"ಮದುವೆ ಆದ ಮೇಲೆ ತಾವು ಒಂದು ಸಾರೀನೂ ಮಗನ್ನ ಮಾತಾಡಿಸಿಲ್ವೆ ?"

ಮಗುವಿನ ಬೆನ್ನು ತಟ್ಟುತ್ತಾ ಅವರಂದರು—

"ಅದು ನಿಜ ಅನ್ನಿ. ಅವಳು ಏದೋ ಕ್ಷಮಿಸಿದ್ಲು ಮಗನ್ನ. ಆದರೆ ಹೆತ್ತ ಕರುಳು ಬಹಳ ಸಂಕಟಪಟ್ಟಿತು. ಅವರಲ್ಲಿ ನನ್ನ ತಪ್ಪು ಇದೆ. ಮುಖ ತೋರಿಸಬೇಡವೆಂದು ಬರೆದು ಅವನನ್ನು ತಡೆದೆ. ಇಲ್ದಿದ್ರೆ ಬರ್‍ತಿದ್ನೋ ಏನೋ?"

ಸುಬ್ಬಣ್ಣ ಗೊಣಗುಟ್ಟಿಕೊಂಡರು—

"ಧರ್ಮಗೊಡ್ಡುಗಳು ನಾವು. ಜಾತಿ, ಮತ, ಅಂತ ತಲೆಗೆ ಹಚ್ಚಿ ಕೊಂಡು ಒದ್ದಾಡ್ತೀವಿ. ಅದನ್ನ ಬಿಟ್ಟೋರಿಗೆ ಯಾವ ಚಿಂತೇನೂ ಇಲ್ಲಾ."

ಸುಬ್ಬಣ್ಣ ನಕ್ಕರು—

"ನಾನೂ ಶೃಂಗೇರಿ ಕಡ್ಯೋನು ಸ್ವಾಮಿ ನನಗ್ಗೊತ್ತಿಲ್ವೆ? ಎಂಥಾ ಕಷ್ಟ ಬಂದ್ರೂ ಅವರವರ ಧರ್ಮ ಅವರು ಬಿಡ್ತಾ ಇರ್‍ಲಿಲ್ಲಾ. ಈಗ ಕಾಲ ಬದಲಾಯ್ತು, ಮಾಡೋದೇನು?"

ರಾಯರು ಹುಬ್ಬುಗಂಟಿಕ್ಕಿದರು—

"ಏನು ಕಾಲವೊ ಏನು ಹಾಳೋ! ಸೂರ್ಯ, ಚಂದ್ರ, ಗಾಳಿ. ನೀರು, ಮಣ್ಣು ಒಂದೂ ಬದಲಾಗಲಿಲ್ಲ. ಅವೆಲ್ಲ ಇದ್ದ ಹಾಗೆ ಇವೆ. ನಾವೇ ಬದಲಾಗಿದ್ದೀವಿ. ನಮಗೇ ಬಂದಿರೋದು ಹೊತ್ತೆಲ್ಲಾ. ಮಾಡಬಾರದ್ದೇ ಮಾಡ್ತಾ ಇದ್ದೀವಿ."

ಇವರು ಮಾತಾಡ್ತಾ ಇರುವಾಗಲೇ ಹುಡುಗಿ ಮಗುವನ್ನು ಕರೆ

ದೊಯ್ದಿದ್ದಳು. ಆನಂದರಾಯರು ಅತ್ತಿತ್ತ ನೋಡಿದರು. ಮಕ್ಕಳೆಲ್ಲಾ ಹೊರಟು ಹೋಗಿದ್ದಾರೆ. ತಟ್ಟನೆ ಎದ್ದು ನಿಂತು ಅಂದರು.

"ಏಳಿ ಹೋಗೋಣ"

ಎರಡು ಏಕಾಕಿ ಜೀವಿಗಳು ಜೀವನದ ಸಂಜೆಯಲ್ಲಿ ತಮ್ಮ ತಮ್ಮಲ್ಲೇ ಕಷ್ಟ ಸುಖ ಹೇಳಿಕೊಂಡು ಮೆಲ್ಲ ಮೆಲ್ಲನೆ ನಡೆದವು.

ಏನು ಕಾರಣವೊ ಮುಂದೆ ಎಂಟು ಹತ್ತು ದಿನಗಳು ಆ ಹುಡುಗಿ, ಗೋಪಾಲ ಪಾರ್ಕಿಗೆ ಬರಲಿಲ್ಲ. ದಿನದಿನಕ್ಕೆ ಆನಂದರಾಯರು ಉದ್ವಿಗ್ನ ರಾಗತೊಡಗಿದರು. ರಾಯರ ಮನಕ್ಕೆ ಆತಂಕ. ರಾಯರು ಬಹು ಚಡ ಪಡಿಸಿದರು. ಪಾರ್ಕಿನಲ್ಲೆಲ್ಲಾ ಓಡಾಡಿ ಹುಡುಕಿದರು. ಇಲ್ಲ; ಗೋಪಾಲ ಬಂದಿರಲಿಲ್ಲಾ. ಎಳೆಂಟು ದಿನ ಅವರ ಜೇಬಿನ ಬಿಸ್ಕತ್ತು ಬಂದ ಹಾಗೇ ಮನೆಗೆ ಹಿಂತಿರುಗಿತು.

ಅವರಿಗೆ ಊಟ ಸೇರಲಿಲ್ಲ ನಿದ್ರೆ ಹತ್ತಲಿಲ್ಲ. ಮನಸ್ಸು ಕಳವಳ ತುಂಬಿತ್ತು. ಅಂದು ದುಗುಡದ ಮುಖದಿಂದ ಹೊರಟಿದ್ದರು. ನಾಲ್ಕು ಗಂಟೆಗೆ ಅವರು ಬಂದು ಕರೆದಾಗ ವಿಸ್ಮಯಪಟ್ಟರು.

"ಈಗಲೇ ಹೊರಡುವುದೆ ರಾಯರೆ?"

"ಹುಂ ಬನ್ನಿ ಹೋಗೋಣ. ಈಗ ನಿಮ್ಮನ್ನ ಬಿಟ್ಟು ಹೋಗೋಕೆ ಸಾಧ್ಯವೇ ಇಲ್ಲಾ."

"ಆಗಲಿ ಸ್ವಾಮಿ. ನನಗೇನು ಕಷ್ಟ. ನಿಮ್ಮನ್ನ ಬಿಟ್ರೆ ನನಗ್ಯಾರಿದ್ದಾರೆ. ಈಗ ಜೊತೆಗೆ ನಡೀರಿ." ಸರಸರ ಹೊರಟರು ಸುಬ್ಬಣ್ಣ. ಮಾತಾಡದೇ ಕಾಲು ಹಾಕಿದರು ರಾಯರು. ದಿನಾ ಪಾರ್ಕಿನಲ್ಲಿರುತ್ತಿದ್ದ ಜೀವ ಈಗ ಮೊಮ್ಮಗನನ್ನು ಕಾಣದೆ ಅಲೆಯತೊಡಗಿತು. ಇಲ್ಲ, ಇಂದೂ ಪಾರ್ಕಿನಲ್ಲಿ ಮಗುವಿಲ್ಲ. ರಾಯರು ತೀರಾ ವ್ಯಥಿತರಾದರು. ಅವರ ಬದುಕಿನಲ್ಲಿ ಅವರು ಎರಡು ಬಾರಿ ಕಣ್ಣೀರು ತುಂಬಿದರು. ಅವರ ಚಿತ್ತ ಕೆಟ್ಟ ಯೋಚನೆ ಮಾಡಿತು.

ಅವರ ಸಂಕಟ ನೋಡಲಾರದೆ ಸುಬ್ಬಣ್ಣ ಅಂದರು–

"ಏಳಿ ರಾಯರೆ ತುಂಬಾ ಒದ್ದಾಡ್ತಾ ಇದ್ದೀರಿ... ಇಲ್ಲೇ ಆರನೆ

ಕ್ರಾಸಿನಲ್ಲಿ ಅವರ ಮನೆ ಅಂತ ಹೇಳಿತ್ತು ಆ ಹುಡುಗಿ. ಹಾಗೇ ವಿಚಾರಿಸಿ ಕೊಂಡು ಹೋಗೋಣ.

ರಾಯರು ಯಾವ ಪ್ರತಿರೋಧವನ್ನು ತೋರದೇ ಎದ್ದು ಸರಸರ ಹೊರಟರು. ಆಗಲೇ ಸಂಜೆ ಆರು ಗಂಟೆಯ ಸಮಯ. ಕತ್ತಲು ಇಳಿಯು ತ್ತಿತ್ತು. ಆರನೆ ಕ್ರಾಸಿಗೆ ಬಂದರು. ಪ್ರತಿ ಮನೆಯ ಬಾಗಿಲುಗಳನ್ನು ರಾಯರ ಕಣ್ಣುಗಳು ನೋಡುತ್ತಿತ್ತು. ಆರೆಂಟು ಮನೆ ದಾಟಿದ್ದರು. "ಬುದ್ದೀ!" ಎಂದು ಗಟ್ಟಿಯಾಗಿ ಕೂಗಿದಳು ಹುಡಿಗಿಯೊಬ್ಬಳು. ಇಬ್ಬರೂ ಗಕ್ಕನೆ ನಿಂತರು. ಅದೇ ಹುಡುಗಿ. ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಆನಂದ ರಾಯರು ಮಾತಾಡಲು ಸಮರ್ಥರಿರಲಿಲ್ಲ. ಸುಬ್ಬಣ್ಣನವರೇ ಮಾತಾಡಿದರು.

"ಯಾಕಮ್ಮಾ ಎಂಟ್ಹತ್ ದಿನದಿಂದ ಮಗೂನ ಪಾರ್ಕಿಗೆ ಕರ್ಕೊಂಡ್ಬ ರಲಿಲ್ಲಾ?"

ಹುಡುಗಿ ಸೆರಗಿನಿಂದ ಮೂಗು ಒರೆಸುತ್ತಾ ಅಳುತ್ತ ಹೇಳಿದಳು—

"ಗೋಪಾಲ ಸತ್ತು ಹೋಗಿ ಆರು ದಿನ ಆಯ್ತು ಬುದ್ದಿ."

ಸಿಡಿಲು ಬಡಿಯಿತು ಆನಂದರಾಯರಿಗೆ. ಎಂದೂ ಬಲವಾಗಿ ಊರದಿದ್ದ ಕೋಲನ್ನು ಬಲವಾಗಿ ಊರಿ ನಿಂತರು. ನಡುಗು ದನಿಯಲ್ಲಿ ಕೇಳಿದರು ಸುಬ್ಬಣ್ಣ:

"ಏನಾಗಿತ್ತಮ್ಮ ಮಗೂಗೆ?"

"ದೊಡ್ಡಮ್ಮ ಆಗಿತ್ತು ಬುದ್ದಿ"

ರಾಯರು ಕಣ್ಣು ಮುಚ್ಚಿ ನಿಂತರು. ಹುಡುಗಿ ಮತ್ತೇನೋ ಹೇಳುತ್ತಿದ್ದಳು. ಒಂದೂ ಅವರ ಕಿವಿಗೆ ಬೀಳಲಿಲ್ಲ. ಎರಡು ನಿಮಿಷದ ನಂತರ ಕಣ್ಣು ಬಿಟ್ಟು ಹುಡುಗಿಯನ್ನು ಕೇಳಿದರು.

"ಅವರ ಮನೆ ಸ್ವಲ್ಪ ತೋರಿಸ್ತೀಯಮ್ಮ ನಮಗೆ?"

ಹುಡುಗಿ ಸ್ವಲ್ಪ ಗಾಬರಿಯಾಗಿ ಸಂಶಯಪಟ್ಟಳು. ರಾಯರು ಅಂದರು—

"ಏನೂ ಪರ್‍ವಾಗಿಲ್ಲಮ್ಮ, ದೂರ ನಿಂತು ತೋರಿಸ್ಬಿಡು ಸಾಕು."

ರಾಯರ ಕಾಲು ಚುರುಕಾಯಿತು. ಮತ್ತೆ ನಾಲ್ಕಾರು ಮನೆ ದಾಟಿ ಹುಡುಗಿ ದೂರದಿಂದ ಆ ಮನೆ ತೋರಿಸಿದಳು.

ತೀರಾ ದೊಡ್ಡದಲ್ಲದ ಆ ಮನೆಯ ವರಾಂಡದಲ್ಲಿ ನೀಲಿಯ ದೀಪ ಉರಿಯುತ್ತಿದೆ. ರಾಯರು ನೇರ ಹೋಗಿ ವರಾಂಡದ ಬಾಗಿಲಲ್ಲಿ ನಿಂತರು. ವರಾಂಡದ ಬೆತ್ತದ ಕುರ್ಚಿಗಳಲ್ಲಿ ಗಂಡ ಹೆಂಡತಿ ದುಃಖ ಭಾವದಿಂದ ಬೊಗಸೆಯಲ್ಲಿ ಮುಖವಿಟ್ಟು ನಿಟ್ಟಿಸುರು ಕರೆಯುತ್ತಾ ಕುಳಿತಿದ್ದಾರೆ.

ಬಾಗಿಲೆತ್ತರಕ್ಕೆ ನಿಂತ ವ್ಯಕ್ತಿಯನ್ನು ನೋಡಿ ತಟ್ಟನೆ ಎದ್ದು ನಿಂತ ಗೋಪಾಲನ ತಂದೆ. ಯಾಂತ್ರಿಕವಾಗಿ ಎದ್ದು ನಿಂತಳು ಶೀಲಾ.

ಒಂದೇ ಬಾರಿಗೆ ಖಂಡುಗ ವ್ಯಥೆ ಒದ್ದು ಬಂದಿತು ರಾಯರಿಗೆ. ಹಿಂದು ಮುಂದಿನ ವಿವೇಚನೆ ಇಲ್ಲದೆ ಮಾತಾಡಿದರು—

"ಇನ್ನೂ ನನ್ನ ಸಂಕಟ ನಿನಗೆ ಅರ್ಥವಾಗಲಿಲ್ಲವೇನೋ ವಾಸು"

ವಾಸು ದಿಗ್ಭ್ರಮೆಯಿಂದ ನೋಡಿದ. ಶೀಲಾಗೆ ಹೇಗೋ ಗೊತ್ತಾಯಿತು. ಅವರು ತಮ್ಮ ಮಾವನವರೆಂದು. ತನ್ನಿಂದಾಗಿ ದೂರ ದೂರ ಸಿಡಿದು ನಿಂತ ತಂದೆ ಮಕ್ಕಳು ಎಂತಹ ಸಮಯದಲ್ಲಿ ಒಂದಾಗಿದ್ದಾರೆ! ಅವಳಿಗೆ ಬವಳಿ ಬರುವಂತಾಯಿತು. ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ವಾಸು ನಿಲ್ಲಲಾರದೆ,

"ಅಣ್ಣಾ!" ಎಂದು ತಂದೆಯ ಕಾಲು ಬುಡದಲ್ಲಿ ಕುಸಿದು ಕುಳಿತು ಸಣ್ಣ ಮಗುವಿನಂತೆ ರೋದಿಸತೊಡಗಿದ. ಸುಬ್ಬಣ್ಣನವರು ನಿಲ್ಲಲಾರದೆ ಬಾಗಿಲ ಮೆಟ್ಟಿಲ ಮೇಲೆಯೇ ಕುಳಿತರು. ಧಾರೆಯಾಗಿ ಸುರಿಯುತ್ತಿದ್ದ ಕಣ್ಣೀರನ್ನು ತಡೆಯುವ ಗೋಜಿಗೆ ಹೋಗದೆ ಆನಂದರಾಯರು ಕಾಲ ಬುಡದಲ್ಲೇ ಕುಳಿತ ಮಗನ ತೋಳನ್ನು ಹಿಡಿದೆತ್ತಲು ಬಾಗಿದಾಗ ಅವರು ಗೋಪಾಲನಿಗೆಂದು ತಂದ ಬಿಸ್ಕತ್ತು ಪೊಟ್ಟಣ ಅವರ ಜೇಬಿನಿಂದ ಕೆಳಗೆ ಬಿತ್ತು.



# ಮೌನ

—ಅನುಪಮಾ ನಿರಂಜನ

"ವ್ಯಕ್ತಿಗಳ ಪರಸ್ಪರ ಸಂಬಂಧಗಳನ್ನು ನಿರ್ಣಯಿಸುವ ಅಂಶ ಯಾವುದು ಎಂಬುದು ಮಹತ್ವದ ವಿಷಯ. ಇವುಗಳಲ್ಲಿ ವೈಯಕ್ತಿಕ ಹಾಗೂ ಸಾಮಾಜಿಕ ಸಂಬಂಧಗಳಿರಬಹುದು. ಕೆಲವು ಶಾಶ್ವತ ಸಂಬಂಧಗಳಾದರೆ ಮತ್ತೆ ಕೆಲವು ತಾತ್ಕಾಲಿಕವಾದುವು. ಸಂಸಾರದೊಳಗಣ ಸಂಬಂಧ ಶಾಶ್ವತ ಮೌಲ್ಯದ್ದು. ನೆರೆಹೊರೆಯವರ, ನೆಂಟರಿಷ್ಟರ, ಸ್ನೇಹಿತರ ಅಥವಾ ಸೇವಕವರ್ಗ ಮತ್ತಿತರ ಸಾಮಾಜಿಕ ಸಂಬಂಧಗಳು ತಾತ್ಕಾಲಿಕ ಮೌಲ್ಯದ್ದು, ಅಂದರೆ ಇಲ್ಲಿ ವ್ಯಕ್ತಿಗಳು ಪರಿಸರ ಹಾಗೂ ಕಾಲವನ್ನವ ಲಂಬಿಸಿ ಬದಲಾಗುತ್ತಾರೆ ಎಂಬುದರಿಂದಾಗಿ. ಇವುಗಳಲ್ಲಿ ಗಂಡಹೆಂಡಿರ ಸಂಬಂಧ ಅತ್ಯಂತ ಆತ್ಮೀಯವಾದದ್ದು. ಯೌವನದಲ್ಲಿ ದೈಹಿಕ ಆಕರ್ಷಣೆ ಸೃಷ್ಟಿಗೆ ಪ್ರೇರಕವಾಗಿ ನಿಲ್ಲುತ್ತದೆ. ವೃದ್ಧಾಪ್ಯದಲ್ಲಿ ದೈಹಿಕ ಆಕರ್ಷಣೆ ಇಲ್ಲದಿದ್ದರೂ ಗಂಡಹೆಂಡಿರ ಪ್ರೀತಿ ಅಚಲವಾಗಿ ಉಳಿಯುತ್ತದೆ. ಎಂಥ ಕಷ್ಟಗಳು ಬಂದರೂ...."

ಸಾಲುಗಳನ್ನು ಅರ್ಥೈಸಿಕೊಳ್ಳುವ ಉದ್ದೇಶದಿಂದ ರಾಜಣ್ಣನವರು ಓದು ನಿಲ್ಲಿಸಿ, ಕುರ್ಚಿಯ ಬೆನ್ನಿಗೆ ಒರಗಿ, ಕಿಟಕಿಯ ಹೊರಗೆ ನೋಡಿದರು. ಸ್ವಚ್ಛವಾದ ಆಕಾಶದಲ್ಲಿ ಮೋಡವೊಂದು ತೇಲುತ್ತಿತ್ತು.

"ಮಾವ... ಮಾವ..."

ರಾಜಣ್ಣ ಕತ್ತು ಹೊರಳಿಸಿ ನೋಡಿದರು. ಬಾಗಿಲು ದಾಟಿ ಹಜಾರದೊಳಗೆ ಬರುತ್ತಿದ್ದ ಸೊಸೆ ಇಂದಿರಾ "ಡಾಕ್ಟ್ರು ಬಂದಿದ್ದಾರೆ, ಮಾವ," ಎಂದಳು. ಅಷ್ಟು ಹೇಳಿ ಹಿಂದಿದ್ದ ಅಡುಗೆಮನೆಗೆ ಅವಳು ನಡೆದಳು.

ರಾಜಣ್ಣ, ಮೇಜಿನ ಮೇಲಿದ್ದ ಪೆನ್ಸಿಲನ್ನು ಪುಸ್ತಕದ ಮಧ್ಯೆ ಗುರುತಿಗೆ ಇರಿಸಿ, ಕನ್ನಡಕ ತೆಗೆದಿಟ್ಟು, ಮುಂದಿನ ಕೊಠಡಿಗೆ ಬಂದರು.

ಕಿಟ್‌ಬ್ಯಾಗ್ ತೆಗೆದು ಬ್ಲಡ್‌ಪ್ರೆಷರ್ ಆಪರೇಟಸ್ ಅನ್ನೂ, ಸ್ಟೆಥ ಸ್ಕೋಪನ್ನೂ ಹೊರತೆಗೆಯುತ್ತಿದ್ದ ಡಾಕ್ಟರು ಅವರನ್ನು ನೋಡಿ ''ನಮ್ಮ ಪೇಷಂಟ್ ಹ್ಯಾಗಿದಾರೆ?'' ಎಂದು ಕೇಳಿದರು. ರಾಜಣ್ಣ ಉತ್ತರಿಸ ಲಿಲ್ಲ. ಮಂಚದ ತಲೆ ಭಾಗದ ಹತ್ತಿರ ಬಂದು ಸುಮ್ಮನೆ ನಿಂತರು.

ಹಾಸಿಗೆಯ ಮೇಲೆ ಉದ್ದಕ್ಕೂ ಮೌನವಾಗಿ ಮಲಗಿದ್ದರು ಕಾವೇರಕ್ಕ. ಅವರ ಮುಖ ಸುಕ್ಕುಗಟ್ಟಿ ಹಳದಿ ಬಣ್ಣಕ್ಕೆ ತಿರುಗತೊಡಗಿತ್ತು. ತಲೆಯ ಬಿಳಿ ಕೂದಲು ಬಿಗಿಯಾಗಿ ಹಿಂದೆ ಕಟ್ಟಿದ್ದರಿಂದ ಟೋಪಿನ್ ಹಾಕಿದಂತೆ ಕಾಣುತ್ತಿತ್ತು. ಕಿವಿಯಲ್ಲಿ ಬಿಳಿಹರಳಿನ ಓಲೆಗಳಿದ್ದುವು. ಎಡಮೂಗಿನಲ್ಲಿ ಮೂಗುಬೊಟ್ಟು ಇದ್ದುದರ ಕುರುಹಾಗಿ ಉಳಿದಿದ್ದ ತೂತೊಂದು. ಬರಿ ದಾದ ಕತ್ತು. ಹಣೆಯಲ್ಲಿನ ಸಣ್ಣ ಕುಂಕುಮ ಅತ್ತಿತ್ತ ಹರಡಿತ್ತು. ಬಾಯಲ್ಲಿ ಕೊಳಕಾದ ಹಲ್ಲುಗಳು. ತೆಳ್ಳಗಾದ ಒಣಗಿದ ತುಟಿಯಂಚಿನಲ್ಲಿ ಜೊಲ್ಲು ಸೋರುತ್ತಿತ್ತು. ಕಣ್ಣುಗುಡ್ಡೆಗಳು ಒಮ್ಮೆ ನೇರವಾಗಿ ಮತ್ತೊಮ್ಮೆ ಅತ್ತಿಂದಿತ್ತ ಚಲಿಸುತ್ತಿದ್ದುವು. ಕೈಕಾಲುಗಳು ನಿಶ್ಚೇಷ್ಟಿತವಾಗಿ ಬಿದ್ದಿ ದ್ದುವು, ಆಕೆಯ ಎದೆ ಏರಿಳಿಯುವುದು ಬಿಟ್ಟರೆ ಜೀವ ಇರುವುದರ ಬೇರೆ ಯಾವ ಸುಳಿವೂ ಇರಲಿಲ್ಲ.

ಡಾಕ್ಟರು ಆಕೆಯ ಎಡತೋಳಿಗೆ ಬ್ಲಡ್‌ಪ್ರೆಷರ್ ಆಪರೇಟಸ್ ಕಟ್ಟಿ ತಮ್ಮ ಕಿವಿಗೆ ಸ್ಟೆಥಸ್ಕೋಪ್ ಏರಿಸಿ ಪರೀಕ್ಷಿಸಿದರು. ಅವರ ಮುಖವಲ್ಲಿ ತುಸು ಗೆಲುವು ಮೂಡಿತು.

"ಗುಡ್. ಬ್ಲಡ್‌ಪ್ರೆಷರ್ ಈಗ ನಾರ್ಮಲ್‌ಗೆ ಬಂದಿದೆ", ಎಂದರು.

"ಅಂದ್ರೆ ಪರ್ವಾಗಿಲ್ಲ ಅಂತೀರಾ?"

—ಜೀವದ ಆಸೆಯನ್ನೇ ಧ್ವನಿಯಲ್ಲಿ ತುಂಬಿಕೊಂಡು ಕೇಳಿದರು ರಾಜಣ್ಣ.

"ಹೌದು ನೋಡಿ ಮನೆಗೆ ಬಂದ ಈ ಹದಿನೈದು ದಿವಸ್ದಲ್ಲಿ ಇವತ್ತೇ...."

"ಅವ್ರು ಮೊದಲಿನ್ಹಾಗೆ ಆಗಬೋದಾ, ಡಾಕ್ಟ್ರೆ?"

ಆಗುವುದು ಸಾಧ್ಯವಿಲ್ಲ ಎಂದು ಗೊತ್ತಿದ್ದರೂ ಡಾಕ್ಟರು ಈ ಗುಟ್ಟನ್ನು ಬಿಟ್ಟುಕೊಡಲಿಲ್ಲ. ನೋಡೋಣ, ನೋಡೋಣ, ಎಂದರು.

ಕಾವೇರಕ್ಕನ ಕಣ್ಣುಗುಡ್ಡೆ ತೆಗೆದು ಅವರು ದೀಪಹಾಕಿ ಪರೀಕ್ಷಿಸಿದರು. ಸಣ್ಣ ಸುತ್ತಿಗೆ ಹಿಡಿದು ಮೊಳಕೈಗೆ ಮೊಣಕಾಲಿಗೆ ಬಡಿದು ನೋಡಿದರು. ಕಾಲುಕೈಗಳು ಯಮಭಾರವಾಗಿ ಕಂಡವೇ ವಿನಾ ಯಾವ ಪ್ರತಿಕ್ರಿಯೆಯನ್ನೂ ಅವು ವ್ಯಕ್ತಪಡಿಸಲಿಲ್ಲ. ಹೊದಿಕೆ ಸರಿಸಿ ಅಂಗಾಲನ್ನು ಸುತ್ತಿಗೆಯ ಕೆಳ ಬದಿಗಿದ್ದ ಚೂಪು ತುದಿಯಿಂದ ಕೆರೆದು ನೋಡಿದರು. ತ್ಸುತ್ಸು ಎಂದರು. ಮತ್ತೆ ಹೊದಿಕೆ ಮುಚ್ಚಿದರು. ಅಲ್ಲಿಂದ ಎದ್ದ ಮಲಮೂತ್ರಗಳ ಕೆಟ್ಟ ವಾಸನೆಗೆ ರಾಜಣ್ಣನವರಿಗೆ ಮೂಗು ಮುಚ್ಚಿಕೊಳ್ಳಬೇಕು ಎಂದು ಅನಿಸಿತು. ಅವರು ಮುಖ ತಿರುಗಿಸಿ ಕಿಟಕಿಯ ಬಳಿಗೆ ಹೋದರು. ಹೊರಗಿನ ಸ್ವಚ್ಛ ಗಾಳಿಯನ್ನು ಮೂಗಿನ ತುಂಬಾ ಎಳೆದುಕೊಂಡರು.

ಡಾಕ್ಟರು ಸಿರಿಂಜ್ ತೆಗೆದು ಇಂಜೆಕ್ಷನ್ ಟ್ಯೂಬ್ ಒಡೆದು ಕೆಂಪು-ಹಳದಿ ಮಿಶ್ರಬಣ್ಣದ ಔಷಧಿಯನ್ನು ತುಂಬಿಸಿಕೊಳ್ಳುತ್ತಾ,

"ಸಿದ್ದವ್ವ ಎಲ್ಲಿ?" ಎಂದು ಕೇಳಿದರು.

"ಅವ್ಳು ಹಿತ್ತಲಲ್ಲಿ ಬಟ್ಟೆ ಒಗೀತಿರ್ಬೇಕು. ನಾನೇ ತಿರುಗಿಸ್ತೀನಿ", ಎನ್ನುತ್ತಾ ರಾಜಣ್ಣ ಬಂದು, ಹೆಂಡತಿಯನ್ನು ಬಲಮಗ್ಗುಲಿಗೆ ಹೊರಳಿಸಿದರು. ಡಾಕ್ಟರು ಕಾವೇರಕ್ಕನ ಸೊಂಟಕ್ಕೆ ಇಂಜೆಕ್ಷನ್ ಚುಚ್ಚಿದರು.

"ಮನುಷ್ಯ ಪ್ರಯತ್ನದಲ್ಲಿ ಸಾಧ್ಯವಾದದ್ದನ್ನೆಲ್ಲ ಮಾಡ್ತಿದೀವಿ, ರಾಜಣ್ಣ. ನೋಡೋಣ, ನಿಮ್ಮದೃಷ್ಟ ಹೇಗಿದೆಯೊ...."

"ಇಂಥ ಕಷ್ಟ ಯಾರ್ಗೂ ಬರಬಾರ್ದು, ಡಾಕ್ಟ್ರೇ."

ಆ ಮಾತಿಗೆ ಅನುಕಂಪ ಸೂಚಿಸುವವರಂತೆ ಡಾಕ್ಟರು ತಲೆಯಾಡಿಸುತ್ತಾ ಕಿಟ್ ಮುಚ್ಚಿದರು. ಅವರ ಯೋಚನೆ ಮೊದಲನೆಯ ತಾರೀಖಿನ ಕಡೆಗೆ ಹರಿಯಿತು. ಇನ್ನು ಕಾವೇರಕ್ಕನ ಬಿಲ್ ಕೇಳಿಬಿಡಬೇಕು. ಅಕಸ್ಮಾತ್ ಈಕೆಯೇನಾದರೂ ಗೊಟಕ್ ಅಂದುಬಿಟ್ರೆ ನನ್ನ ಬಿಲ್ಲಿನ ಹಣವೂ ಉಳಿದು ಹೋಗುತ್ತೆ, ಅಂದುಕೊಂಡರು.

ಹೊರಬಾಗಿಲಿನ ಹತ್ತಿರ ಬಂದಾಗ ಡಾಕ್ಟರು ಕೇಳಿದರು:

"ಮಿಸ್ಟರ್ ರಾಜಣ್ಣ, ಮನೇಲಿ ಸ್ವಲ್ಪ ತಾಪತ್ರಯವಾಗ್ಬಿಟ್ಟಿದೆ. ನನ್ನ ದೊಡ್ಡಮಗಳಿಗೆ ಹುಬ್ಬಳ್ಳಿ ಕಡೆ ಒಂದು ಸಂಬಂಧ ನೋಡ್ತಿದೇವೆ. ಅವ್ರೆಲ್ಲಾ ಮುಂದಿನ್ವಾರ ಬರ್ಬಹುದು. ಆದಕ್ಕೆ ಸ್ವಲ್ಪ...."

"ನಾಡಿದ್ದು ಪೆನ್ಷನ್ ಬರುತ್ತೆ, ಡಾಕ್ಟ್ರೆ, ಅವತ್ತು ಸಂಜೇನೇ ತಂದು ಕೊಡ್ತೀನಿ."

ಡಾಕ್ಟರು ಹೋದಬಳಿಕ ರಾಜಣ್ಣ ಸಪ್ಪಗೆ ಮುಖಮಾಡಿಕೊಂಡು ಹಜಾರದೊಳಗೆ ಹೆಜ್ಜೆಯಿಟ್ಟರು. ಹೊರಗೆ ತಣ್ಣಗಿನ ಗಾಳಿಯಿತ್ತು. ಆದರೂ ಆತಂಕದಿಂದ ಅವರ ಮುಖ ಬೆವರಿತ್ತು. ಹೆಗಲ ಮೇಲಿದ್ದ ಟವೆಲಿನಿಂದ ಮುಖ ಒರೆಸುತ್ತಾ ಇರುವಾಗ ಹಿತ್ತಲ ಬಾಗಿಲಿನಿಂದ ಕೆಲಸದ ಸಿದ್ದವ್ವ ಒಳಬರುತ್ತಾ "ಡಾಕ್ಟ್ರು ಬಂದ್ ಓಗ್ಬಿಟ್ರಾ, ಸೋಮಿ?" ಎಂದು ಕೇಳಿದಳು.

"ಹೂಂ. ಅವಳ ಬಟ್ಟೆ ಸ್ವಲ್ಪ ಬದಲಾಯ್ಸಮ್ಮ."

ಸಿದ್ದವ್ವ ಲಗುಬಗೆಯಿಂದ ಮುಂದಿನ ಕೊಠಡಿಗೆ ಹೋದಳು. ರಾಜಣ್ಣ ಅಂದುಕೊಂಡರು. ಬೆಳಗಿನಿಂದ ಸಂಜೆಯವರೆಗೆ ನಾಲ್ಕಾರು ಸಾರೆ ಇವಳು ಕಾವೇರಕ್ಕನ ಹೊಲಸಾದ ಬಟ್ಟೆಗಳನ್ನು ತೆಗೀತಾಳೆ, ಅವನು ಒಗೆದು ಶುಚಿ ಮಾಡುತಾಳೆ, ಕಾವೇರಕ್ಕನ ಮೈ ಒರೆಸುತಾಳೆ, ಔಷಧಿ ಕೊಡುತಾಳೆ. ಅವಳಿಗೆ ಈ ಕೆಲಸಗಳನ್ನು ಮಾಡೋದಕ್ಕೆ ಸ್ವಲ್ಪವೂ ಅಸಹ್ಯ ಇಲ್ವಾ? ಬೇಸರ ಇಲ್ವಾ? ತಮಗಾದರೂ ಸ್ವಲ್ಪ ಹೊತ್ತು 'ಆ ಕೊಠಡಿಯಲ್ಲಿ ಕುಳಿತುಕೊಳ್ಳುವುದಕ್ಕೂ ಸಾಧ್ಯವಾಗುವುದಿಲ್ಲ. ಅಂಥ ದರಲ್ಲಿ...

"ಸೋಮಿ, ಯಾರೋ ಬಂದವ್ರೆ...."

ರಾಜಣ್ಣನವರ ದೂರದ ಸಂಬಂಧಿ ಶಾಂತಪ್ಪ ಮತ್ತು ಅವನ ಹೆಂಡತಿ ಗಜಲಕ್ಷ್ಮಿ, ದುಃಖದ ಮುಖವಾಡ ಧರಿಸಿ ಒಳಗೆ ಬಂದರು. ಶಾಂತಪ್ಪ, ರಾಜಣ್ಣನವರ ಕೈ ಹಿಡಿದುಕೊಂಡು ಸಹಾನುಭೂತಿ ತುಂಬಿದ ಧ್ವನಿಯಲ್ಲಿ ಅಂದರು :

"ಕೇಳಿ ತುಂಬಾ ಬೇಜಾರಾಯ್ತು, ರಾಜಣ್ಣ, ಹ್ಯಾಗಿದಾರೆ ಈಗ?"

"ಇದಾಳೆ ಇನ್ನೂ...." ಎಂದ ರಾಜಣ್ಣ ತುಟಿಕಚ್ಚಿಕೊಂಡು, "ಹಾಗೇ...." ಎಂದು ಸೇರಿಸಿದರು. ಎಲ್ಲರೂ ಹಜಾರದಲ್ಲಿದ್ದ ಬೆತ್ತದ ಕುರ್ಚಿಗಳಲ್ಲಿ ಕುಳಿತರು. ಸೊಸೆ ಬಂದು ಇಣುಕಿ ನೋಡಿ, 'ಬಂದ್ರು ಪೀಡೆಗಳು! ಇನ್ನು ಕಾಫಿಗಿಡ್ಬೇಕು. ಈ ಅತ್ತೆ ಕಾಯ್ಲೆ ಬಿದ್ದಾಗ್ಲಿಂದ್ವ

ಒರೋರಿಗೆ ಹೋಗ್ಸೋರಿಗೆ ಮಾಡಿ ಕುಕ್ಕಿ ನಂಗೆ ಸಾಕಾಗಿಹೋಗಿದ್ಯಪ್ಪ. ಯಾವತ್ತಿಗೆ ಮುಗ್ಯುತ್ತೋ ಈ ಹಿಂಸೆ', ಎಂದುಕೊಂಡು ಒಲೆಯ ಮೇಲೆ ಕಾಫಿಗೆ ನೀರಿಡಲು ಹೋದಳು.

ಸಿದ್ದವ್ವ ಫಿನೈಲ್ ಹಾಕಿ ಸಾರಿಸಿದ ನೆಲದ ವಾಸನೆ ಹೀರುತ್ತಾ ಅತಿಥಿಗಳು, ರಾಜಣ್ಣನವರು, ಕಾವೇರಕ್ಕನ ಮಂಚದ ಬದಿ ನಿಂತರು. ಕಾವೇರಕ್ಕನ ಪಿಳಿಪಿಳಿ ಕಣ್ಣುಗಳನ್ನು ನೋಡಿ ಗಜಲಕ್ಷ್ಮಿಗೆ ಗಾಬರಿಯಾಯಿತು. ಆದರೆ ಅದನ್ನು ಮುಚ್ಚಿಟ್ಟುಕೊಳ್ಳುತ್ತಾ ಅವರ ಗುಣಗಾನ ಮಾಡಿದಳು:

"ನಾವು ಬಂದ್ಕೊಡ್ಲೆ ಕಾವೇರಕ್ಕ ಉಪ್ಪಿಟ್ಟು ಕಾಫಿ ಮಾಡ್ಕೊಡತಿದ್ರು. ತಿಂಡಿ ಕಾಫಿ ಕೊಡದೆ ಯಾವತ್ತೂ ನಮ್ಮನ್ನ ಕಳಿಸಿದೋರಲ್ಲ. ಅಷ್ಟು ಪ್ರೀತಿ. ಒಂದ್ಸಾರಿ ಶ್ಯಾವಿಗೆ ಪಾಯಸ ಮಾಡಿದ್ರು...ನೆನಪಿದೆಯೆನ್ರೀ?" ಎಂದು ಆಕೆ ಗಂಡನನ್ನು ಕೇಳಿದಳು. ಪಾಯಸದ ವಿಷಯ ಮಾತಾಡುವ ಸಮಯ ಇದಲ್ಲ ಎನ್ನುವಂತೆ ಶಾಂತಪ್ಪ ಹೆಂಡತಿಯ ಕಡೆ ದುರುಗುಟ್ಟಿ ನೋಡಿ, ರಾಜಣ್ಣನವರ ಕಡೆಗೆ ತಿರುಗಿ, "ಇದು ಹ್ಯಾಗಾಯಿತು?" ಎಂದು ಪ್ರಶ್ನಿಸಿದರು.

"ದಿನಾ ಬೆಳಿಗ್ಗೆ ಇವಳು ತುಳಸಿಪೂಜೆ ಮಾಡುತಿದ್ಲು. ಇವತ್ತಿಗೆ ಸರ್ಯಾಗಿ ಒಂದು ತಿಂಗಳಾಯ್ತು ನೋಡಿ, ಸ್ನಾನ ಮಾಡಿದ್ಲು, ಅರಿಶಿನ ಕುಂಕುಮ ಹೂವು ತಕೊಂಡು ತುಳಸಿಗಿಟ್ಲು. ಮಂಗ್ಳಾರ್ತಿ ಮಾಡಿ ತುಳಿಸಿ ಕಟ್ಟೆಗೆ ಒಂದು ಸುತ್ತು ಬಂದ್ಲು. ಕೈಮುಗಿದು ನಿಂತ್ಲು. ನಾನು ಆಗ ತಾನೇ ಸ್ನಾನ ಮಾಡಿ ಬಂದು ಓಣೇಲಿ ನಿಂತಿದೀನಿ. ಇವಳು ದೊಪ್ಪನೆ ಬಿದ್ಲು. ತಲೆ ತುಳಸಿಕಟ್ಟೆಗೆ ಬಡೀತು. ತಕ್ಷಣ ಓಡಿಹೋದೆ. ಅವಳನ್ನೆತ್ತಿದೆ. 'ಕಾವೇರೂ' ಅಂದೆ. ಮಾತಾಡ್ಲಿಲ್ಲ. ಪ್ರಕಾಶಾ ಅಂತ ಕೂಗ್ದೆ. ಮಗ ಅವತ್ತೇನೋ ಮನೇಲೇ ಇದ್ದ. ಅವನೂ, ಇಂದಿರಾ, ಸೀತಾ, ಎಲ್ಲ ಓಡಿ ಬಂದ್ರು. ಮಾಡೋದೆಲ್ಲಾ ಮಾಡಿದ್ವಿ, ಕಡೆಗೆ ಮೆಂಟಲ್ ಆಸ್ಪತ್ರೆಗೆ ಸೇರಿಸಿದ್ವಿ. ಬಿದ್ದಾಗ ಅವಳಿಗೆ ಹೋದ ಜ್ಞಾನ..."

"ಮುಖ್ಯ ಗ್ರಹಚಾರ..."

"ಅಲ್ಲಾಂದ್ರೆ...ಇದು ಎಂಥ ಪುಣ್ಯ ಅಂತೀನಿ. ತುಳಸೀ ಪೂಜೆ ಮಾಡ್ತಿರೋವಾಗ್ಲೇ ಕಾವೇರಕ್ಕ ಸಾಯ್ಬೇಕಾದ್ರೆ..."

ಕಾವೇರಕ್ಕ ಇನ್ನೂ ಸತ್ತಿಲ್ಲ ಎನ್ನುವಂತೆ ಶಾಂತಪ್ಪ ತಮ್ಮ ಹೆಂಡತಿಯ ಕೈಹಿಡಿದೆಳೆದರು. "ಏನಂದ್ರಿ?" ಎಂದು ಗಜಲಕ್ಷ್ಮಿ ಗಂಡನ ಕಡೆಗೆ ತಿರುಗಿದಾಗ ಆತ, "ಮೆಲ್ಲಗೆ ಮಾತಾಡು. ಅವರಿಗೆ ತೊಂದ್ರೆಯಾಗುತ್ತೆ", ಎಂದರು.

ರಾಜಣ್ಣ ಉಗುಳು ನುಂಗಿದರು. ಒಬ್ಬ ಗಂಡು ಮಗ, ಇಬ್ಬರು ಹೆಣ್ಣ ಮಕ್ಕಳು, ಹೆಚ್ಚು ಕಷ್ಟವಿಲ್ಲದ ಬದುಕು, ಎಲ್ಲರೂ ಸುಖವಾಗಿದೀವಿ ಅಂದುಕೊಳ್ಳುತ್ತಿರುವಾಗ ಇದ್ದಕ್ಕಿದ್ದಂತೆ ಇವಳು ಹೀಗಾಗಿ ಎಲ್ಲರ ಸಂತೋಷಕ್ಕೂ ಕಲ್ಲುಬಿತ್ತು ಎಂದುಕೊಂಡರು.

ಶಾಂತಪ್ಪ ಮತ್ತು ಅವನ ಹೆಂಡತಿ ಸದ್ದಿಲ್ಲದೆ ಕೊಠಡಿಯಿಂದ ಹೊರಗೆ ಹೋದರು. ರಾಜಣ್ಣನವರೂ ಅವರನ್ನು ಹಿಂಬಾಲಿಸಿ ಕೊಠಡಿಯ ಬಾಗಿಲನ್ನು ಮುಂದೆಳೆದುಕೊಂಡರು. ಹೇಗೂ ಹೆಂಡತಿ ಕೂಗಿ ಕರೆಯುವುದಿಲ್ಲ. ಇಂಥದು ಬೇಕೆಂದು ಕೇಳುವುದಿಲ್ಲ. ಹನ್ನೊಂದು ಗಂಟೆಯ ಹೊತ್ತಿಗೆ ಸ್ವಲ್ಪ ಹಾಲು ಹುಯ್ದರೆ ಆಯಿತು. ಒಂದೊಂದ ಸಾರಿ ಅವಳ ನರಳಾಟ ಕೇಳಿದರೆ ಗಾಬರಿಯಾಗುತ್ತದೆ. ನಮಗಂತೂ ವಿಧಿಯಿಲ್ಲ. ಬಂದವರು ಕೇಳಿ ಯಾಕೆ ಸಂಕಟ ಪಡಬೇಕು? ಅಲ್ಲ, ಸಂಬಂಧಿಕರಿಗೆ ಇವಳ ನರಳಾಟ ಕೇಳಿ ನಿಜವಾಗಿಯೂ ದುಃಖವಾಗುವುದೊ? ಅಥವಾ ಖುಷಿಯಾಗುವುದೊ? ಇವಳ ಬವಣೆಯನ್ನೆಲ್ಲಾ ಬೇರೆಯವರೊಂದಿಗೆ ವರ್ಣಿಸಿ, ಸದ್ಯ ನಮಗೆ ಹಾಗಾಗಲಿಲ್ಲವಪ್ಪ. ಆಗಿರುವುದು ಅವಳಿಗೆ, ನಾವು ಚೆನ್ನಾಗಿದ್ದೇವೆ, ಎಂದು ಹೇಳಿಕೊಳ್ಳುವರೋ ಏನೋ, ಎಂದು ಚಿಂತಿಸಿದರು ರಾಜಣ್ಣ.

ಇಂದಿರಾ ಕಾಫಿ ತಂದಿರಿಸಿದಳು.

"ಅಯ್ಯೊ, ಇವೆಲ್ಲ ಯಾಕಮ್ಮ?" ಎಂದು ಹೇಳುತ್ತಲೇ ಗಜಲಕ್ಷ್ಮಿ ಕಾಫಿ ಲೋಟವನ್ನೆತ್ತಿಕೊಂಡು ರುಚಿ ನೋಡುತ್ತಾ, "ಕಹಿ, ಸ್ವಲ್ಪ ಸಕ್ಕರೆ ತಾಮ್ಮ", ಎಂದಳು. ಶಾಂತಪ್ಪ ಕೆಕ್ಕರಿಸಿ ಹೆಂಡತಿಯ ಕಡೆ ನೋಡಿದು. ಸೊಸೆ ಸಿಡುಕುತ್ತಾ ಒಳಗೆ ಹೋದಳು.

"ನಿಮ್ಮ ಸೀತಾ ಎಲ್ಲಿ, ಕಾಣೋದಿಲ್ವಲ್ಲ?"

"ಅವ್ಳು ಈಗ ಗಣಪತಿ ವಿದ್ಯಾಮಂದಿರದಲ್ಲಿ ಟೀಚರಾಗಿದಾಳೆ."

"ಓ, ಗೊತ್ತೇ ಇರ್ಲಿಲ್ಲ. ಅವಳ್ಗೇ ಅಲ್ವೆ ನಮ್ಮ ಶ್ರೀಧರನ ಜೊತೆ ಮದ್ವೆ ನಿಶ್ಚಯವಾಗಿರೋದು? ಮುಂದಿನ ತಿಂಗಳಲ್ವೆ ಮದ್ವೆ?"

ಹೌದೆನ್ನುವಂತೆ ರಾಜಣ್ಣ ತಲೆಯಾಡಿಸಿದರು. ಗಜಲಕ್ಷ್ಮಿ ಇದ್ದಕ್ಕಿದ್ದಂತೆ,

"ಕಾವೇರಕ್ಕ ಈ ಸ್ಥಿತೀಲಿದಾರೆ. ಮದ್ವೆ ಗತಿ ಏನಾಗುತ್ತೋ ಏನೋ?..." ಎಂದಳು.

"ನಿನ್ ಹಾಳ್ ಬಾಯಿ!...ಸುಮ್ನಿರೇ", ಎಂದು ಶಾಂತಪ್ಪ ಕ್ರೂರವಾಗಿ ಹೆಂಡತಿಯ ಕಡೆ ನೋಡಿದರು.

ಆತಂಕದಿಂದ ರಾಜಣ್ಣನವರ ಬೋಳುತಲೆಯ ಮೇಲೆಲ್ಲಾ ಬೆವರು ಹನಿಗಳು ಮೂಡಿದುವು. ಟವೆಲನ್ನೆತ್ತಿ ಅವರು ಮುಖವನ್ನೂ ನೆತ್ತಿಯನ್ನೂ ಒರೆಸಿಕೊಂಡರು. ಸೆಕೆ, ಎಂದರು. "ಬಿಸಿ ಕಾಫಿ ಕುಡದದೆ ಹಾಗೇನೇ", ಎಂದರು ಶಾಂತಪ್ಪ.

ಮದುವೆ ನಿಂತುಹೋದರೆ? ಎಂಬ ಹೆದರಿಕೆಯನ್ನು ದೂರ ತಳ್ಳುತ್ತಾ ರಾಜಣ್ಣ ಮಾತನಾಡಿದರು :

"ಶ್ರೀಧರನ ಕಡೇವ್ರು ಒಳ್ಳೇ ಜನ. ಕೊಡೋದು ತರೋದು ಎಲ್ಲಾ ಮಾತುಕತೆ ಆಗಿದೆ. ಛತ್ರಾನೂ ಗೊತ್ತು ಮಾಡಿದೀನಿ. ಇನ್ನೇನು ಒಡವೆವಸ್ತ್ರ ತರೋದೊಂದು ಬಾಕಿ ಉಳಿದಿತ್ತು. ಅಷ್ಟರಲ್ಲಿ ಇವಳಿಗೆ ಹೀಗೆ ಆಗ್ಬೋಯ್ತು ಯಾರಿಗೊತ್ತು? ದೇವರ ದಯ ಇದ್ರೆ...."

. ಗಜಲಕ್ಷ್ಮಿ ಒಂದು ಚಮಚೆ ಸಕ್ಕರೆ ಹಾಕಿ ಬೆರೆಸಿ ಕುಡಿಯುತ್ತಾ "ಈಗ ಚೆನ್ನಾಗಿದೆ", ಎಂದಳು. ಬಂದವರು ಊಟಕ್ಕೆ ನಿಲ್ಲಬಾರದೆಂಬ ಸೂಚನೆ ಕೊಡುತ್ತಾ ಸೊಸೆ, "ಮಾವ, ಮಾರ್ಕೆಟ್ಟಿಗೆ ಹೋಗಿ ಸ್ವಲ್ಪ ತರಕಾರಿ ತರ್ಬೇಕಾಗಿತ್ತು", ಎಂದಳು.

"ಚೀಲ ತೆಗೆದಿಡಮ್ಮ, ಹೋಗ್ಬರ್ತೀನಿ", ಎನ್ನುತ್ತಾ ರಾಜಣ್ಣ ಮೇಲೆದ್ದು ಅಲ್ಲೇ ಇದ್ದ ಸ್ಟಾಂಡಿಗೆ ನೇತು ಹಾಕಿದ್ದ ಬಿಳಿಯ ಷರಟನ್ನು ಹಾಕಿಕೊಂಡರು. ಎಲ್ಲರ ಮುಂದೆಯೂ ಬಟ್ಟೆ ಹಾಕಿಕೊಳ್ಳುವ ಅನುಭವದಿಂದ

ಮನಸ್ಸಿಗೆ ಕಿರಿಕಿರಿ. ಆದರೆ ತನ್ನ ಕೊಠಡಿಯಲ್ಲೀಗ ಹೆಂಡತಿ ಮಲಗಿದ್ದಾಳೆ. ತನ್ನ ಸಾಮಾನೆಲ್ಲಾ ಈಗ ಛತ್ರದ ಹಾಗಿರುವ ಹಜಾರಕ್ಕೆ ರವಾನೆ. ತಮ್ಮ ಬದುಕು ಹೀಗೆ ಆಗಿಹೋಯಿತು ಎನಿಸಿತು ಅವರಿಗೆ.

ಸೊಸೆ ಒಳಗಿನಿಂದ ಕೂಗಿದಳು, ಹೊರಗಿದ್ದವರಿಗೆ ಕೇಳಿಸಲೆಂಬಂತೆ :

"ಸಿದ್ದವ್ವ, ಹನ್ನೊಂದು ಗಂಟೆಯಾಯ್ತು. ಅತ್ತೇವ್ರಿಗೆ ಹಾಲು ಬಿಸಿ ಮಾಡಿಟ್ಟಿದೀನಿ. ಹಾಕು ಬಾ."

ಗಜಲಕ್ಷ್ಮಿ ಆಶ್ಚರ್ಯದಿಂದ ಕಣ್ಣು ಹೊರಳಿಸಿ, "ಅಯ್ಯೊ! ಕೆಲಸದೋಳು ಹಾಕುತಾಳಾ?" ಎಂದು ಉದ್ಗಾರ ತೆಗೆದಳು.

ರಾಜಣ್ಣ ಗಜಲಕ್ಷ್ಮಿಯನ್ನು ದುರುಗುಟ್ಟಿ ನೋಡಿ, "ನೀವು ಬೇಕಾದ್ರೆ ಕೂತಿರಿ. ನಾನು ಮಾರ್ಕೆಟ್ಟಿಗೆ ಹೋಗಿಬರ್ತೀನಿ", ಎಂದು ಚಪ್ಪಲಿ ಮೆಟ್ಟಿದಾಗ "ಇಲ್ಲಪ್ಪ, ನಾವೂ ಹೋಗ್ತೀವಿ, ಇನ್ನೊಂದ್ಸಾರಿ ಬರ್ತೀವಿ", ಎನ್ನುತ್ತಾ ಶಾಂತಪ್ಪ ದಂಪತಿ ಅವರೊಂದಿಗೇ ಬೀದಿಗಿಳಿದರು.

ತರಕಾರಿ ತೆಗೆದುಕೊಂಡು ನಿಧಾನವಾಗಿ ನಡೆಯುತ್ತಾ ಬರುತ್ತಿದ್ದ ರಾಜಣ್ಣ ಚಿಂತಿಸಿದರು, ಕಾವೇರಿಯ ಸಹಾಯವಿಲ್ಲದೆ ತಮ್ಮ ಬಾಳು ಹೇಗೆ ಮೂರಾಬಟ್ಟೆಯಾಗಿದೆ ಎಂದು. ಬೆಳಗೆದ್ದೊಡನೆ ಬಿಸಿಬಿಸಿ ಕಾಫಿ ಕೊಡುತ್ತಿದ್ದಳು. ಸ್ನಾನಕ್ಕಿಳಿದಾಗ ಒಗೆದ ಬಟ್ಟೆ ಸಿದ್ಧ. ಮತ್ತೆ ಕಾಫಿ ತಿಂಡಿ. ನಗುನಗುತ್ತಾ ಮಾತು. ಒಂದು ದಿವಸ ಮುಖ ಸಿಂಡರಿಸಿದವಳಲ್ಲ. ಈಗ ಸೊಸೆಗೆ 'ಕಾಫಿ ಕೊಡ್ತೀಯಾಮ್ಮ?' ಅಂತ ಕೇಳಿದ್ರೆ, 'ಬರ್ತೀನಿ ಮಾವ. ಮಗೂಗೆ ಸ್ನಾನ ಮಾಡಿಸ್ತಿದೀನಿ', ಅಂತಲೋ 'ಡಿಕಾಕ್ಷನ್ ಇನ್ನೂ ಇಳೀಬೇಕು, ನಾನೊಬ್ಳೇ ಎಷ್ಟೂಂತ ಕೆಲ್ಸ ಮಾಡ್ಲಿ?' ಅಂತಲೋ ಗೊಣಗುತ್ತಾಳೆ. ಒಟ್ಟಿನಲ್ಲಿ ಸೊಸೆ ಮತ್ತು ಮಗನಿಗೆ ತಾನು ಭಾರವಾಗಿದೀನಿ ಅನ್ನೋ ಭಾವನೆ ಬಂದುಬಿಡುತ್ತೆ. ಕೇವಲ ಒಂದೇ ತಿಂಗಳಲ್ಲಿ ಎಂಥ ಬದಲಾವಣೆ? ನಂಬೋಕಾಗಲ್ಲ. ಮನುಷ್ಯರ ಸಂಬಂಧಗಳು ಹ್ಯಾಗೆ ಬದಲಾಗುತ್ತಾ ಹೋಗುತ್ತವೆ ಅನ್ನೋದು ಅರ್ಥವೇ ಆಗೊಲ್ಲ.

ರಾಜಣ್ಣ ಮನೆಯೊಳಹೊಕ್ಕು ತರಕಾರಿಯನ್ನು ಅಡುಗೆಮನೆ ಬಾಗಿಲಿನಲ್ಲಿರಿಸಿ ಹೊರಕೊಠಡಿಗೆ ಬಂದರು. ಸಿದ್ದವ್ವ, ಸಿರಿಂಜಿನ ಸಹಾಯದಿಂದ ಹಾಲನ್ನು ಕಾವೇರಕ್ಕನ ಮೂಗಿನಲ್ಲಿ ತೂರಿಸಿದ್ದ ರೈಲ್ಸ್ ಟ್ಯೂಬಿನೊಳಗೆ

ನೋಕುತ್ತಿದ್ದಳು. 'ಈ ಕೆಲ್ಸ ಸೀತಾ ಮಾಡ್ಬಾರದಾಗಿತ್ತೆ?' ಎನಿಸಿತು ರಾಜಣ್ಣನವರಿಗೆ. ಕಾವೇರಕ್ಕ ಆಸ್ಪತ್ರೆಯಿಂದ ಮನೆಗೆ ಬಂದ ಎರಡು ಮೂರು ದಿನ ಸೀತಾ ಆ ಕೆಲಸ ಮಾಡಿದ್ದಳು. ಆಮೇಲೆ 'ಈ ವಾಸನೆಗೆ ನಂಗ್ಯಾಕೋ ಅಸಹ್ಯವಾಗುತ್ತಪ್ಪ. ಊಟಾನೇ ಸೇರೊಲ್ಲ', ಅಂದಿದ್ದಳು. ಮಗಳು ಹಾಗಂದ ಮೇಲೆ ತಾವೇ ಕಾವೇರಕ್ಕನಿಗೆ ಫೀಡ್ ಮಾಡುವ ಕೆಲಸ ವಹಿಸಿಕೋಬಹುದಾಗಿತ್ತು. ಆದರೆ ಗಂಡಸಾದ ತಾನು ಆ ಕೆಲಸ ಮಾಡು ವುದೇ ಎಂಬ ಅಹಂಭಾವ ಅಡ್ಡಬಂತೆ? ಅಥವಾ ತನಗೂ ಆ ಕೆಲಸ ಹೇಸಿಗೆ ಅನಿಸಿತೆ?

ಸಿದ್ದವ್ವ ಟ್ಯೂಬಿಗೆ ಸಿಕ್ಕಿಸಿದ್ದ ಸಿರಿಂಜನ್ನು ಹೊರತೆಗೆದು ಕಿಡ್ನಿ-ಟ್ರೇನಲ್ಲಿ ಇರಿಸಿದಳು. ರೈಲ್ಸ್‌ಟ್ಯೂಬಿನಿಂದ ಹಾಲು ಹಿಂದೆ ಹರಿದು ಬರದಂತೆ ದಾರ ಕಟ್ಟಿ ಅದಕ್ಕೆ ಪ್ಲಾಸ್ಟರ್ ಅಂಟಿಸಿ ಮಂಚದ ಪಟ್ಟಿಗೆ ಅಂಟಿಸಿ ದಳು. ಟವೆಲು ತೆಗೆದುಕೊಂಡು ಕಾವೇರಕ್ಕನ ಮುಖಮೂಗುಗಳನ್ನು ಮಗುವಿಗೆ ಸ್ವಚ್ಛಮಾಡುವಂತೆ ಮೆಲ್ಲನೆ ಒರೆಸಿದಳು. ಕೆದರಿದ ಕುಂಕುಮ ವನ್ನು ಸರಿಪಡಿಸಿದಳು. ಅವಳ ಮುಖದಲ್ಲಿದ್ದ ತನ್ಮಯಭಾವವನ್ನು ನೋಡುತ್ತಾ ರಾಜಣ್ಣನವರಿಗೆ ತಮ್ಮ ಬಗ್ಗೆ ತಮಗೇ ತಿರಸ್ಕಾರ ಮೂಡಿತು.

ರಕ್ತಸಂಬಂಧ ಅನ್ನುತ್ತೇವೆ, ಅದಕ್ಕೇನಾದರೂ ಅರ್ಥವಿದೆಯೋ ? ಸಿದ್ದವ್ವ ಕಾವೇರಕ್ಕನಿಗೆ ಏನಾಗಬೇಕು? ಅವರಿಬ್ಬರಲ್ಲಿ ಅಂತಹ ಪ್ರೀತಿ, ವಾತ್ಸಲ್ಯ, ಹೇಗೆ ಬಂತು ?

ರಾಜಣ್ಣ ಕುರ್ಚಿಯೊಂದನ್ನೆಳೆದು ಮಂಚದ ಸಮೀಪದಲ್ಲೇ ಕುಳಿತು ಕೊಂಡರು. ಸರಾಗವಾಗಿ ಉಸಿರಾಡುತ್ತಿದ್ದ ಹೆಂಡತಿಯನ್ನೇ ದಿಟ್ಟಿಸಿದರು. ಶಾಂತವಾದ ಮುಖಭಾವ. ನಿದ್ದೆ ಹೋಗುತ್ತಿರುವ ಹಾಗೆ ಮಲಗಿದಾಳೆ. ಮುಚ್ಚಿದ ಕಣ್ಣು ತೆರೆಯಿತು. ಕಣ್ಣುಗುಡ್ಡೆಗಳು ಕೊಠಡಿಯುಲೆಲ್ಲಾ ಹರಿ ದಾಡಿದುವು. ತಾನು ಹತ್ತಿರ ಕುಳಿತಿದ್ದೇನೆ ಎಂಬ ಅರಿವಾದರೂ ಕಾವೇರಿಗೆ ಇರಬಹುದೆ? ರಾಜಣ್ಣ ನಿಟ್ಟುಸಿರಿಟ್ಟರು. ಗೋಡೆಯ ಮೇಲಿದ್ದ ತಿರುಪತಿ ತಿಮ್ಮಪ್ಪನ ಪಟ. ಅದಕ್ಕೆ ಸ್ವಲ್ಪ ದೂರದಲ್ಲಿದ್ದ ಗಿಳಿಯ ಚಿತ್ರ. ಕಾವೇರಕ್ಕ ತಮ್ಮ ಮದುವೆಯಾದ ಹೊಸತರಲ್ಲಿ ಮುಕಮಲ್ಲು-ನಕ್ಕಿಗಳನ್ನು ಸೇರಿಸಿ ಆ ಹಳದಿ ಗಿಣಿಯ ಚಿತ್ರ ಹೊಲೆದು ಗಾಜಿನ ಕಟ್ಟಿನೊಳಗೆ ಬಂಧಿಸಿಟ್ಟಿದ್ದರು. ಹೊರಗೆ ಹಾರಿಹೋಗಲು ಚಡಪಡಿಸುತ್ತಿರುವ ಆ ಗಿಳಿ. ರಾಜಣ್ಣನವರ

ಕಣ್ಣು ಕಾವೇರಕ್ಕನ ಮುಖದ ಕಡೆಗೆ ಹರಿಯಿತು. ಆಕೆಯ ಹಳದಿ ಮುಖವೂ ಆ ಗಿಣಿಯ ಹಾಗೆ ಕಂಡು ಅವರ ಮೈ ಬೆವರಿತು.

ಕಾವೇರಕ್ಕ ಆಸ್ಪತ್ರೆಗೆ ಸೇರಿದ ದಿನಗಳು ರಾಜಣ್ಣನವರಿಗೆ ನೆನಪಾದವು.

ಪ್ರಕಾಶ ಮೆಡಿಕಲ್ ರೆಪ್ರೆಸೆಂಟೆಟಿವ್ ಆಗಿದ್ದುದರಿಂದ ಮೆಂಟಲ್ ಆಸ್ಪತ್ರೆಯಲ್ಲಿ ಕಾವೇರಕ್ಕನನ್ನು ಚೆನ್ನಾಗಿಯೇ ನೋಡಿಕೊಂಡಿದ್ದರು. ಅಡ್‌ಮಿಟ್ ಆದ ದಿನವೇ ಎಕ್ಸ್‌ರೇ ತೆಗೆದರು, ರಕ್ತಮೂತ್ರಾದಿಗಳ ಪರೀಕ್ಷೆಯಾಯಿತು. ಲಂಬಾರ್ ಪಂಕ್ಚರ್ ಮಾಡಿದ ಡಾಕ್ಟರು, "ಮೆದುಳಿನಲ್ಲಿ ಹೆಮೊರೇಜ್ ಆಗಿರ್ಬೌದು", ಎಂದರು.

ಇನ್ನೊಬ್ಬರು "ಮೆದುಳಿನಲ್ಲಿ ಟ್ಯೂಮರ್ ಇರೋ ಸಾಧ್ಯತೇನೂ ಇದೆ", ಎಂದು ಅಭಿಪ್ರಾಯ ಕೊಟ್ಟಿದ್ದರು.

ನಾಲ್ಕು ದಿವಸಗಳಾದರೂ ಕಾವೇರಕ್ಕನಿಗೆ ಪ್ರಜ್ಞೆ ಬರಲಿಲ್ಲ.

"ಆಪರೇಷನ್ ಮಾಡಿ ನೋಡೋಣ ಬೇಕಾದ್ರೆ."

"ಅದನ್ನ ಮಾಡಿದ್ರೆ ಅವ್ಳು ಬದುಕ್ತಾಳೆ ಅಂತೀರಾ?"

"ಹ್ಯಾಗೆ ಹೇಳೋಕಾಗುತ್ತೆ? ಆಪರೇಷನ್ ಮಾಡದಿದ್ರೂ ಬದುಕೋದು ಕಷ್ಟ. ಪ್ರಯೋಗ ಮಾಡಿ ನೋಡೋಣ."

ಪ್ರಯೋಗಕ್ಕೋಸ್ಕರ ಹೆಂಡತಿಯ ತಲೆ ಕುಯ್ಯಿಸುವುದು ಬೇಡ ಎಂದು ರಾಜಣ್ಣ ನಿರ್ಧರಿಸಿದರು. ಆಗಲೇ ಕಾವೇರಕ್ಕನ ಬಲಮೂಗಿನ ಹೊಳ್ಳೆಯ ಮೂಲಕ ಜಠರದವರೆಗೆ ರೈಲ್ಸ್‌ಟ್ಯೂಬ್ ತೂರಿಸಿ, ಫೀಡಿಂಗ್ ಆರಂಭಿಸಿದ್ದು. ಹಾಲು, ಹಣ್ಣಿನ ರಸ, ಗ್ಲೂಕೋಸ್, ಎಳನೀರು ಇತ್ಯಾದಿ ಮೂಗಿನ ಮುಖಾಂತರವೇ ಆಕೆಯ ಹೊಟ್ಟೆ ಸೇರುತ್ತಿತ್ತು. ಪ್ರಜ್ಞೆಯೊಂದಿಲ್ಲದಿದ್ದರೂ ಉಳಿದೆಲ್ಲ ಕ್ರಿಯೆಗಳು ಸರಾಗವಾಗಿ ನಡೆಯುತ್ತಿದ್ದುವು. ಇದೇ ಸಮಯಕ್ಕೆ ರಾಜಣ್ಣನವರ ಹಿರಿಯ ಮಗಳು ಗೌರಿ ಮತ್ತು ಗಂಡ ನಾಸಿಕದಿಂದ ಬಂದಿದ್ದರು. ಆಗ ಗೌರಿ ಮತ್ತು ಸೀತಾ ಸರದಿಯ ಪ್ರಕಾರ ತಾಯಿಯ ಬಳಿ ಇರುತ್ತಿದ್ದರು.

ಎಂಟನೇ ದಿನ ತಜ್ಞ ಡಾಕ್ಟರೊಬ್ಬರು ಅಂದಿದ್ದರು:

"ಜ್ಞಾನ ಬಂದ್ರೂ ಬರ್ಬಹುದು. ನಮ್ಮ ಒಬ್ಬ ಪೇಷೆಂಟ್‌ಗೆ ಮೂರು ತಿಂಗಳಾದ್ಮೇಲೆ ಪ್ರಜ್ಞೆ ಬಂದಿತ್ತು!"

ರಾಜಣ್ಣ ಆಸೆಯಿಂದ ಕೇಳಿದ್ದರು;

"ಆತ ಬದುಕಿದಾರಾ ಈಗ?"

"ಹೂಂ. ಇನ್‌ಕಂ ಟ್ಯಾಕ್ಸ್ ಆಫೀಸಿನಲ್ಲಿ ಕೆಲ್ಸ ಮಾಡ್ತಿದಾರೆ— ನೀಲಕಂಠಯ್ಯ ಅಂತ ಆತನ ಹೆಸರು."

ಮತ್ತೆ ಚಿಗುರು, ಕುಡಿ, ಹೂ.

ಹದಿನೈದನೆಯ ದಿನ ಕಾವೇರಕ್ಕ ಕಣ್ಣು ಬಿಟ್ಟರು. ಮಾತನಾಡಲಿಲ್ಲ. ಕಣ್ಣುಗುಡ್ಡೆ ಹೊರಳಿಸಿ ಎಲ್ಲೆಲ್ಲೋ ನೋಡಿದರು. 'ಅಮ್ಮಾ' ಎಂದು ಕರೆದ ಮಕ್ಕಳನ್ನೂ ಆಕೆ ನೋಡಲಿಲ್ಲ. 'ಕಾವೇರೂ' ಎಂದ ಗಂಡನನ್ನೂ ದಿಟ್ಟಿಸಲಿಲ್ಲ.

"ನಾವಿನ್ನೇನೂ ಹೆಚ್ಚು ಟ್ರೀಟ್‌ಮೆಂಟ್ ಕೊಡೋಲ್ಲ. ಇನ್ನು ಮನೆಗೆ ಕರ್ಕೊಂಡ್ಹೋಗಿ. ಬೆಡ್ಸ್ ಬೇರೆ ಇಲ್ಲ. ಮನೇಲಿ ಚೆನ್ನಾಗಿ ಆಹಾರ ಕೊಡಿ. ನೋಡೋಣ—" ಎಂದಿದ್ದರು, ಕಾವೇರಕ್ಕನನ್ನು ನೋಡಿಕೊಳ್ಳುತ್ತಿದ್ದ ಡಾಕ್ಟರು.

ರಾಜಣ್ಣನವರಿಗೆ ಯಾಕೋ ತಲೆ ನೋಯುತ್ತಿದೆ ಎನಿಸಿತು. ತಲೆ ನೋವು ಅಂದಾಕ್ಷಣ ಕಾವೇರಿ ಅಮೃತಾಂಜನವನ್ನು ಹಣೆಗೆ ತಿಕ್ಕುತ್ತಿದ್ದಳು. ಬಳೆಗಳು ತುಂಬಿದ ನಸುಗೆಂಪಿನ ಮುಂಗೈ ಅವರಿಗೆ ನೆನಪಾಯಿತು. ವೃದ್ಧಾಪ್ಯ ಬಂದಹಾಗೆ ಕೈ ಸ್ವಲ್ಪ ಸೊರಗಿತ್ತು. ಆದರೆ ಗಂಡನ ಬಗ್ಗೆಯ ಆಕೆಯ ಪ್ರೀತಿ, ವಾತ್ಸಲ್ಯ ಸೊರಗಿರಲಿಲ್ಲ. 'ಸುಮ್ನೆ ಓದ್ತಾ ಕೂಡ್ತೀರಿ ತಲೆ ತಾನೆ ಎಷ್ಟೂಂತ ತಡೆಯುತ್ತೆ?' ಎನ್ನುತ್ತಾ ಅಮೃತಾಂಜನ ಲೇಪಿಸ ತ್ತಿದ್ದಳು. ಔಷಧಿಯಿಂದ ನೋವು ಕಡಿಮೆಯಾಗುತ್ತಿತ್ತೋ ಅಥವಾ ಅವಳ ಹಸ್ತಸ್ಪರ್ಶದ, ಅನುಕಂಪದ ನುಡಿಗಳಿಗೆ ಇಳಿಮುಖವಾಗುತ್ತಿತ್ತೋ ಗೊತ್ತಿಲ್ಲ.

ತೀರಾ ಮೃದು ಮಾತು ಅವಳದು. 'ರೀ' ಎಂದು ಅವಳು ಕರೆದಾಗ ರಾಜಣ್ಣನವರಿಗೆ ಯಾವಾಗಲೂ ಪುಲಕವಾಗುತ್ತಿತ್ತು. ಆಕೆ

ಮತ್ತೆ ಹಾಗೆ ಕರೆಯಬಹುದೆ ತನ್ನನ್ನು? ರಾಜಣ್ಣ ಹೊರಳಿ ಕಾವೇರಕ್ಕನ ತುಟಿಗಳನ್ನು ನೋಡಿದರು. ಪ್ರೀತಿಯ ಮಹಾಪೂರವನ್ನೇ ಹರಿಸಿದ ತುಟಿ ಈಗ ಒಣಗಿದ ನೆಲವಾಗಿತ್ತು. ಅವಳ ಮುಖವನ್ನು ನೋಡಿದರು. ಪ್ರಶಾಂತವಾಗಿತ್ತು. 'ಇವತ್ತು ಸ್ವಲ್ಪ ವಾಸಿಯೇನೋ' ಅನಿಸಿತು. ಅವರು ಮೇಲೆದ್ದರು. ಹೌದು, ಡಾಕ್ಟರು ಹೇಳಿದ್ದಾರೆ ಬ್ಲಡ್‌ಪ್ರೆಷರ್ ನಾರ್ಮಲ್‌ಗೆ ಬಂದಿದೆ ಅಂತ. ಇವಳು ಖಂಡಿತಾ ಸುಧಾರಿಸಿಕೊಳ್ಳು ತ್ತಾಳೆ ಅಂದುಕೊಂಡರು. ಮೆಲ್ಲನೆ ಆಕೆಯ ಭುಜವನ್ನು ಮುಟ್ಟಿದರು. ಯೌವನದಲ್ಲಿ ಆಕೆಯ ಸೌಂದರ್ಯದ ಬಗ್ಗೆ ತಮಗೆ ಎಷ್ಟು ಹೆಮ್ಮೆ! ತಾವು ಅವಳ ಮೈಮುಟ್ಟಿದರೆ ಆಗುವ ಸ್ಪಂದನವನ್ನು ಆಕೆಯ ಕಣ್ಣುಗಳಲ್ಲಿ ಅರಳು ತ್ತಿದ್ದ ಆನಂದ-ಲಜ್ಜೆಗಳಿಂದ ಅಳೆಯಬಹುದಾಗಿತ್ತು. ಈಗ ಯಾವ ಪ್ರತಿಕ್ರಿಯೆಯೂ ಇಲ್ಲದ ಕೊರಡು ಅವಳ ಮೈ.

ರಾಜಣ್ಣ ನಿಟ್ಟುಸಿರುಬಿಡುತ್ತಾ ಮತ್ತೆ ಕುರ್ಚಿಯಲ್ಲಿ ಕುಳಿತರು. ಇವಳು ಹೀಗೆ ಬದುಕಿರುವುದರಿಂದ ಪ್ರಯೋಜನವೇನು ಅನಿಸಿತು. ಆದರೆ ಒಮ್ಮೆಗೇ ಭಯವಾಗಿ, 'ಇಲ್ಲ, ಇವಳು ಉಳಿಯಲಿ....' ಎಂದು ಪರಮಾತ್ಮನನ್ನು ಪ್ರಾರ್ಥಿಸ್ತೇನೆ ಎಂದುಕೊಂಡರು. ಅವಳಿಗಾಗಿ ಅಲ್ಲ, ತಾನು ಒಂಟಿಯಾಗುತ್ತೇನಲ್ಲ ಎಂಬ ಅಂಜಿಕೆಗಾಗಿ.

ಇಪ್ಪತ್ತು ವರ್ಷಗಳ ಹಿಂದೆ ತಾವು ಆಸ್ಪತ್ರೆಯಲ್ಲಿದ್ದ ಚಿತ್ರ ರಾಜಣ್ಣ ನವರ ಕಣ್ಣಿಗೆ ಕಟ್ಟಿತು. ತಮಗೆ ಅಪೆಂಡಿಸೈಟಿಸ್ ಅಪರೇಷನ್ ಆಗಿತ್ತು ಆಗ. ಪ್ರಕಾಶ, ಗೌರಿ, ಸೀತಾ ಇನ್ನೂ ಚಿಕ್ಕವರು. ಹದಿನೈದು ದಿವಸ ತಾನು ಆಸ್ಪತ್ರೆಯಲ್ಲೇ ಉಳಿಯಬೇಕಾಗಿತ್ತು. ಅದೇನೋ ಸೆಪ್ಟಿಕ್ ಆಗಿ ತನ್ನ ಜೀವ ಉಳಿದದ್ದೇ ದೊಡ್ಡದು ಅಂತಿದ್ದರು. ಆಗ ಕಾವೇರಿ ಮಾಡಿದ ಸೇವೆ ಮರೆಯೋಕಾಗುತ್ತಾ? ದಿನವೂ ಮೈ ಒರೆಸಿ ಪೌಡರು ಹಾಕುತ್ತಿದ್ದಳು. ಬಾತ್‌ರೂಂಗೆ ಹೋಗೋಕೆ ಆಗ್ತಿರಲಿಲ್ಲ ಅಂತ ಹಾಸಿ ಗೇಲೆ ಬೆಡ್‌ಪ್ಯಾನ್ ಕೊಡ್ತಾ ಇದ್ದಳು. 'ಇದೆಲ್ಲಾ ನೀನು ಮಾಡ್ಬೇಡ' ಎಂದು ತಾನಂದುದಕ್ಕೆ 'ಯಾಕ್ ಮಾಡ್ಬಾರ್ದು? ನೀವು ಬೇರೇನೇ ನಾನು ಬೇರೇನೆ?' ಅಂದಿದ್ದಳು. ಬೆಡ್‌ಪ್ಯಾನ್ ತೆಗೆಯೋಕೆ ಅವಳಿಗೆ ಅಸಹ್ಯ

ಆಗ್ತಿರಲಿಲ್ವೆ ಆಗ? ಈಗ ಈ ಕೊಠಡಿ ವಾಸನೆಗೆ ತನಗೆ ಹೇಸಿಗೆಯಾಗುತ್ತೆ. 'ಬಟ್ಟೆ ಬದಲಾಯ್ಸು. ಫಿನೈಲ್ ಹಾಕು' ಅಂತ ಸಿದ್ದಪ್ಪನಿಗೆ ಹೇಳುತ್ತಲೇ ಇರ್ತೀನಿ. 'ನೀವು ಬೇರೇನೇ ನಾನು ಬೇರೇನೇ?' ಅಂದಿದ್ದಳು. ಹೌದು ಕಾವೇರಿ, ನಾವಿಬ್ಬರೂ ಬೇರೆಬೇರೇನೇ.

ರಾಜಣ್ಣ ಮೇಲೆದ್ದು ಸಂಕಟದಿಂದ ಬಾಗಿಲ ಹತ್ತಿರ ಹೋದರು.

"ಅಡುಗೆ ಆಯ್ತೇನಮ್ಮ, ಇಂದಿರಾ?" ಎಂದು ಕೂಗಿದರು.

ಹಸಿವು, ಕಸಿವಿಸಿ ಯಾವ ಸಂಕಟವನ್ನೂ ತಡೆದುಕೊಳ್ಳಲು ತಮ ಗೀಗ ಶಕ್ತಿಯಿಲ್ಲ ಅನಿಸಿತು. ಕಾವೇರಕ್ಕನಿಗೆ ಹಸಿವಿಲ್ಲ, ನಿದ್ದೆ ನೀರಡಿಕೆ ಗಳಿಲ್ಲ. ಇಂಥದು ಬೇಕು ಎಂದು ಅವಳು ಕೇಳುವುದಿಲ್ಲ, ತಾವೇ ಸಮಯಸಮಯಕ್ಕೆ ಅಷ್ಟಿಷ್ಟು ರೈಲ್ಸ್‌ಟ್ಯೂಬಿನೊಳಗಿಂದ ಸುರಿಯುವುದು ಅಷ್ಟೆ. ಇಲ್ಲ, ಇವಳು ಉಳಿಯೋದಿಲ್ಲ, ತಾವು ಮಾಡೋದೆಲ್ಲ ವ್ಯರ್ಥ ಅನಿಸಿತು. ಕಾವೇರಕ್ಕನ ಮುಖ ನೋಡಿದಾಗ ಕಣ್ಣಾಲಿಗಳು ಮತ್ತೆ ಎಲ್ಲೆಲ್ಲೋ ತಿರುಗುತ್ತಿದ್ದುವು. ಅದನ್ನು ಕಂಡು ಅವರಿಗೆ ಭಯವಾಯಿತು. ಬರೀ ಉಸಿರಾಟ, ದೃಷ್ಟಿ ಎಲ್ಲೋ ಏನೋ. ಹೀಗೆ ಶವದ ಹಾಗೆ ಬಿದ್ದಿರುವುದಕ್ಕಿಂತ ಇವಳು ಸತ್ತರೇ ವಾಸಿ, ತಮ್ಮ ಆತಂಕವಾದರೂ ಕಡಮೆಯಾಗುತ್ತೆ, ಎಂದುಕೊಂಡರು.

ಹೆಂಡತಿಯ ಸಾವನ್ನು ತಾನೇ ಬಯಸುತ್ತಿದ್ದೇನೆ, ಎಂದು ನೆನೆದು ಕೊಂಡಾಗ ತಮ್ಮ ಬಗ್ಗೆಯೇ ಜಿಗುಪ್ಸೆ, ಕೋಪಗಳು ಉಂಟಾದುವು. ಹಾಗಾದರೆ ಸಂಬಂಧಗಳಿರುವುದು ಯಾತಕ್ಕಾಗಿ? ಬರೀ ಸ್ವಾರ್ಥಕ್ಕಾಗಿಯೋ ಏನು? ವ್ಯಕ್ತಿಯಿಂದ ತಮಗೆ ಉಪಯೋಗವಿಲ್ಲದಾದಾಗ ವ್ಯಕ್ತಿಯ ಬಗ್ಗೆ ಇದ್ದ ಆದರ, ಗೌರವ, ಪ್ರೇಮ ಇವೆಲ್ಲ ಸೊನ್ನೆಯಾಗಿಬಿಡಬಹುದೆ?

ರಾಜಣ್ಣ ಅವಸರದಿಂದ ಕೊಠಡಿಯ ಹೊರಗೆ ಹೆಜ್ಜೆಯಿಟ್ಟರು. ಆರು ತಿಂಗಳ ಹಿಂದೆ ಹಳ್ಳಿಯಲ್ಲಿ ತಮ್ಮ ಕುಲದೇವತೆ ಬನಶಂಕರಿಯನ್ನು ನೋಡಲು ಹೋಗಿದ್ದುದು ನೆನಪಾಯಿತು. ಕಪ್ಪುಮೈಯ ದೇವರಿಗೆ ಕೆಂಪು ಸೀರೆ ಉಡಿಸಿದ್ದರು. ಕಣ್ಣುಗಳಿಗೆ ಬೆಳ್ಳಿಯ ಕಟ್ಟನ್ನು ಹಾಕಿದ್ದರು. ಆ ಕಣ್ಣುಗಳು ಎಲ್ಲಿ ಹೋದರೂ ತಮ್ಮನ್ನೇ ನೋಡುತ್ತಿರುತ್ತವೆ ಎಂದು

ಅವರಿಗೆ ಅನಿಸಿತ್ತು. ತಾವು ಮಾಡುವ ಪಾಪಗಳನ್ನು ನೋಡುತ್ತಾ ಇರುತ್ವೆ, ತಾವು ಆಡುವ ಮಾತುಗಳನ್ನು ಆ ಕಿವಿಗಳು ಕೇಳಿಸಿಕೊಳ್ಳುತ್ತಾ ಇರುತ್ವೆ, ತಮ್ಮ ಆಲೋಚನೆಗಳನ್ನು ಅರ್ಥಮಾಡಿಕೊಳ್ತಾ ಇರುತ್ತೆ, ಆ ಮೂರ್ತಿ, ಚಲಿಸದಿದ್ರೂ ಅದರ ಇರುವಿಕೆ ಎಲ್ಲೆಲ್ಲೂ ಇರೋ ಹಾಗೆ ಅನಿಸಿ ಮಾತುಕತೆಗಳಿಗೆ ಕಡಿವಾಣ ಹಾಕೋ ಹಾಗೆ ಆಗುತ್ತೆ. ಸಂಭಾವಿತರ ಹಾಗೆ ನಡಕೊಳ್ಳೋ ಹಾಗೆ ಮಾಡುತ್ತೆ ಅನಿಸಿತ್ತು.

ಈಗ ಗರಗರನೆ ತಿರುಗುವ ಕಾವೇರಿಯ ಕಣ್ಣುಗಳೂ ಹಾಗೆಯೇ ಇವೆ ಎನಿಸಿ ಅವರ ಮೈ ಥರಥರನೆ ನಡುಗಿತು.

೨

"ಸಂಬಂಧಗಳ ಪರೀಕ್ಷೆ ಆಗುವುದು ಯಾವಾಗ? ಎನ್ನುವುದು ವಿಚಾರ ಮಾಡಬೇಕಾದ ಅಂಶ. ಸುಖದಲ್ಲಿ ಸಂಬಂಧಗಳು ಗಾಢವಾಗುತ್ತವೆ. ಕಷ್ಟ ಬಂದಾಗ ಅವು ಕಳಚಿಕೊಳ್ಳುತ್ತವೆ. ಆದರೆ ತಂದೆತಾಯಿ ಮತ್ತು ಮಕ್ಕಳ ಸಂಬಂಧಗಳಿಗೆ ಶಾಶ್ವತ ಮೌಲ್ಯವಿದೆ. ಮಗುವನ್ನು ಬೆಳೆಸುವಾಗ ತಾಯಿ ತಂದೆ ಎಷ್ಟು ತ್ಯಾಗ ಮಾಡಿರುತ್ತಾರೋ ಅದೇ ತ್ಯಾಗವನ್ನು ಮಕ್ಕಳಿಂದ ತಮ್ಮ ವೃದ್ಧಾಪ್ಯದಲ್ಲಿ ನಿರೀಕ್ಷಿಸಬಹುದೆ? ಎಂಬುದೊಂದು ಪ್ರಶ್ನೆ...."

"ಏನು ಓದ್ತಿದೀ, ಅಪ್ಪಾ?"

"ಯಾವುದೋ ಪುಸ್ತಕ ಕಣೋ", ಎನ್ನುತ್ತಾ ರಾಜಣ್ಣ ತಲೆಯೆತ್ತಿ ಮಗನನ್ನು ನೋಡಿದರು. ತಮಗಿಂತ ಎತ್ತರದ ಯುವಕ. ದಟ್ಟವಾದ ತಲೆಗೂದಲನ್ನು ಹೆಗಲಿನವರೆಗೂ ಬಿಟ್ಟಿದ್ದಾನೆ. ದಟ್ಟನೀಲಿ ಬಣ್ಣದ ಸೂಟ್ ಹಾಕಿಕೊಂಡಿದ್ದಾನೆ. ಕೆಂಪು ಚೌಕಗಳಿರುವ ಟೈ, ಮಿನುಗುತ್ತಿರುವ ಶೂಗಳು.

ಅವನ ಶೃಂಗಾರ, ಯೌವನಗಳ ಬಗ್ಗೆ ಅವರಿಗೆ ಅಸೂಯೆ ಯಾಯಿತು. ತಾಯಿ ಕಾಹಿಲೆ ಮಲಗಿರುವಾಗಲೂ ಇವನು ಹೀಗೆ ಟಾಕೋಟೀಕಾಗಿ ಡ್ರೆಸ್ ಮಾಡಿಕೊಳ್ಳುವನಲ್ಲ ಎನಿಸಿತು. 'ಚೆನ್ನಾಗಿ ಡ್ರೆಸ್ ಮಾಡಿಕೊಳ್ಳದಿದ್ರೆ ಡಾಕ್ಟರುಗಳು ನಮ್ಮನ್ನು ತಲೆಯೆತ್ತಿ ಕೂಡಾ ನೋಡೋದಿಲ್ಲ', ಎಂದಿದ್ದ ಪ್ರಕಾಶ ಹಿಂದೊಮ್ಮೆ. ಆ ಮಾತು ಎಷ್ಟು ಸುಳ್ಳೋ ಎಷ್ಟು ನಿಜವೋ!

"ಅಪ್ಪ, ಇನ್ನೊಂದೆರಡು ದಿನದಲ್ಲಿ ನಾನು ಟೂರ್ ಹೋಗ್ಬೇಕಾಗುತ್ತೆ. ಇನ್ನೆಷ್ಟು ದಿನಾಂತ ತಾನೇ ರಜಾ ತಕೊಳ್ಳೋಕಾಗುತ್ತೆ ಹೇಳು? ಅಮ್ಮನಿಗೆ ಏನಾದ್ರೂ ಹೆಚ್ಚು ಕಡಿಮೆ ಆದ್ರೆ ಟೆಲಿಗ್ರಾಂ ಕೊಟ್ಬಿಡು. ತಕ್ಷಣ ಬಂದ್ಬಿಡ್ತೀನಿ."

ಅಂದರೆ ಪ್ರಕಾಶನಿಗೂ ತಾಯಿಯ ಕಾಹಿಲೆ ಬೇಸರ ತಂದುಬಿಟ್ಟಿದೆಯೇ? ಹೆಚ್ಚು ಕಡಿಮೆ ಅಂದರೇನು? ಕಾವೇರಕ್ಕ ಸಾಯುವುದು ಅಂತ ತಾನೇ ಅರ್ಥ? ಮಗನೇ ತಾಯಿಯ ಸಾವನ್ನು ಬಯಸುತ್ತಿದ್ದಾನೆಯೆ?

"ಮನೇಲಿರೋಕೇ ಬೇಜಾರಾಗುತ್ತಪ್ಪ. ಅಮ್ಮನ್ನ ಇನ್ನಷ್ಟು ದಿವ್ಸ ಆಸ್ಪತ್ರೇಲೇ ಬಿಟ್ಟಿರಬಹುದಾಗಿತ್ತು!"

'ಆಸ್ಪತ್ರೆಯಲ್ಲಿ ಜಾಗ ಇಲ್ಲ ಎಂದು ಮನೆಗೆ ಕರೆದುಕೊಂಡು ಬಂದ ಕಾರಣ ನಿನಗೆ ಗೊತ್ತು. ಆದರೂ ಹೀಗೇಕೆ ಮಾತನಾಡುತ್ತಿದ್ದೀಯೆ?' ಎನ್ನುವಂತೆ ರಾಜಣ್ಣ ತೀಕ್ಷ್ಣವಾಗಿ ಮಗನನ್ನು ನೋಡಿದರು. ಪ್ರಕಾಶ ಹಜಾರಕ್ಕಂಟಿಕೊಂಡಿದ್ದ ತನ್ನ ಕೊಠಡಿಯೊಳಗೆ ಹೋಗಿ ಟಾನಿಕ್ ಮತ್ತು ಮಾತ್ರೆಗಳ ಸ್ಯಾಂಪಲ್‌ಗಳನ್ನು ತುಂಬಿಸಿದ್ದ ಕಪ್ಪು ಹ್ಯಾಂಡ್‌ಬ್ಯಾಗನ್ನು ಹಿಡಿದೆತ್ತಿಕೊಂಡು ಹೊರಬಂದ.

"ಟಾನಿಕ್ ಸ್ಯಾಂಪಲ್ಸ್ ತೆಗೆದಿಟ್ಟಿದೀನಿ. ಬೇಕಾದ್ರೆ ಅಮ್ಮನಿಗೆ ಕುಡಿಸಿ."

ಆ ಮಾತಿಗೆ ಯಾರೂ ಉತ್ತರಿಸಲಿಲ್ಲ. ಬಾಗಿಲಲ್ಲಿ ಬಂದು ನಿಂತಿದ್ದ ಇಂದಿರಾ ಕೆಲಸಕ್ಕೆ ಹೊರಟ ಗಂಡನಿಗೆ ಕಣ್ಣುಗಳಲ್ಲೇ ವಿದಾಯ ಹೇಳುತ್ತಾ ಅಂದುಕೊಂಡಳು 'ಸುಮ್ಮನೆ ಟಾನಿಕ್ ಕೊಟ್ಟು ಅತ್ತೆಯವರ ಜೀವನವನ್ನು

ಯಾಕೆ ಸುಮ್ಮನೆ ಮುಂದುವರಿಸಬೇಕು? ಹೋಗೋದಾದರೆ ಬೇಗ ಹೋಗಲಿ. ನಂಗಂತೂ ಸಾಕಾಗಿ' ಹೋಗಿದೆ!'

ಸೀತಾ ಸ್ನಾನ ಮುಗಿಸಿ ಲಂಗವುಟ್ಟುಕೊಂಡು ಹೊರಬಂದಳು. ಎದೆಗೆ ಅಡ್ಡವಾಗಿ ಹೆಗಲ ಮೇಲೆ ಸೀರೆ ಹಾಕಿಕೊಂಡು ಬಂದವಳು ಹಜಾರ ದಲ್ಲಿ ತಂದೆಯಿದ್ದುದರಿಂದ, ಅದನ್ನು ಉಡಲು ಅಡುಗೆಮನೆಗೆ ನುಗ್ಗಿದಳು.

"ಅಡುಗೆ ಆಯ್ತೆ, ಅತ್ತಿಗೆ? ಇವತ್ತು ಸ್ಪೆಷಲ್ ಕ್ಲಾಸ್ ತಕ್ಕೋ ಬೇಕು. ಬೇಗ ಹೋಗ್ಬೇಕಾಗುತ್ತೆ."

"ನಾನೊಬ್ಬೇ ಎಷ್ಟೂಂತ ಮಾಡ್ಲಿ? ನೀವು ಬೆಳಗ್ಗೆ ಹೊತ್ತು ಸ್ವಲ್ಪ ಸಹಾಯ ಮಾಡ್ಬಾರ್ದಾ?" ಎಂದಳು ಸ್ಟವ್ ಮುಂದೆ ನಿಂತು ಸಾರನ್ನು ಕಲಕುತ್ತಿದ್ದ ಇಂದಿರಾ.

"ನಾನ್ಯಾಕೆ ಮಾಡ್ಲಿ? ಪಾಠ ಹೇಳ್ಕೊಡೋಕೆ ನೋಟ್ಸ್ ಮಾಡೋದು ಬೇಡವೆ? ನೀವಂತೂ ಮನೇಲೇ ಇರೋರು. ಅಮ್ಮ ಇದ್ದಾಗ..."

ಸೀತಾ ತುಟಿ ಕಚ್ಚಿಕೊಂಡಳು. ಕಾವೇರಕ್ಕ ಬೆಳಗ್ಗೆ ಬೇಗ ಎದ್ದು ಕಾಫಿಗೆ ಡಿಕಾಕ್ಷನ್ ಹಾಕಿಟ್ಟು ತಿಂಡಿ ಮಾಡಿರಿಸಿ ಅಡುಗೆಗೆ ಆರಂಭಿಸಿಬಿಡು ತ್ತಿದ್ದರು. ಅಡುಗೆಮನೆಯಲ್ಲೆಂದೂ ಕೂಗಾಟ, ಜಗಳ ಇರುತ್ತಲೇ ಇರಲಿಲ್ಲ.

ಹೊರಗೆ ಆಡುತ್ತಿದ್ದ ಇಂದಿರೆಯ ನಾಲ್ಕು ವರ್ಷದ ಮಗ ಒಳಗೋಡಿ ಬಂದು ತಾಯಿಯ ಸೀರೆಯ ನೆರಿಗೆಯನ್ನು ಹಿಡಿದು, "ಅಮ್ಮ, ಇವತ್ತು ಅಜ್ಜಿ ರೂಮಿಗೆ ಹೋಗ್ಲಾ?" ಎಂದು ಕೇಳಿದ.

"ಬೇಡ. ಅಲ್ಲಿ ಗುಮ್ಮ ಇದೆ!"

"ಅಜ್ಜೀನೇ ಗುಮ್ಮ ಆಗಿದಾರಾ?"

"ಹುಂ."

ಮಗು ಹೆದರಿಕೆಯಿಂದ ತಾಯಿಯ ನಿರಿಗೆಯೊಳಗೆ ಮುಖ ಮುಚ್ಚಿ ಕೊಂಡನು. ಸೀತಾ ತಡೆಯಲಾರದೆ, "ಅದ್ಯಾಕೆ ಹಾಗೆ ಹೆದರಿಸ್ತೀರಾ ಮಗೂನಾ?" ಎಂದು ಕೆರಳಿ ಕೇಳಿದಳು.

"ಇಲ್ದಿದ್ರೆ ಇವ್ನು ಅಲ್ಲಿಗ್ಹೋಗಿ ಏನಾದ್ರೂ ಒಂದು ಮಾಡಿಡ್ಲಿ. ಆಮೇಲೆ ನನ್ ತಲೆಗೆ ಬರುತ್ತೆ!"

ಮಗುವಿಗೆ ಅಜ್ಜಿಯನ್ನು ಕಂಡರೆ ಬಲು ವಿಶ್ವಾಸ. ಕಾವೇರಕ್ಕ ಮೊಮ್ಮಗನನ್ನು ತೊಡೆಯಲ್ಲಿ ಕೂರಿಸಿಕೊಂಡು ರಾಜಕುಮಾರ–ರಾಜ ಕುಮಾರಿಯರ ಕತೆ ಹೇಳುತ್ತಿದ್ದರು. ಊಟ ಮಾಡಿಸುತ್ತಿದ್ದರು. ಎಣ್ಣೆ ಹಚ್ಚಿ ಸ್ನಾನ ಮಾಡಿಸುತ್ತಿದ್ದರು. ಮಗು ಎಷ್ಟು ಹಟಮಾಡಿ ಅಳು ತ್ತಿದ್ದರೂ ಅಜ್ಜಿ 'ಇಲ್ಬಾ ಪುಟ್ಟ' ಎಂದು ಕೂಗಿದರೆ ಒಡನೆಯೇ ಅಳು ನಿಂತುಬಿಡುತ್ತಿತ್ತು.

ಕಾವೇರಕ್ಕ ಆಸ್ಪತ್ರೆಯಿಂದ ಮನೆಗೆ ಬಂದೊಡನೆ ಮಗು ಕೇಳಿದ್ದ:

"ಅಜ್ಜಿ ಯಾಕಮ್ಮ ಮಾತಾಡೋದಿಲ್ಲ?"

ಎಲ್ಲರ ಕಂಠ ಗದ್ಗದ. ಯಾರೂ ಆ ಮಾತಿಗೆ ಉತ್ತರಿಸಲಿಲ್ಲ.

ಪಕ್ಕದ ಮನೆಯವರಾಡುವ ಮಾತು ಕೇಳಿ ಬಂದಿದ್ದ ಮಗು ಸೀತೆ ಯನ್ನು ಪ್ರಶ್ನಿಸಿದ್ದ:

"ಭಾಗಕ್ಕ ಅಂತಾರೆ, ಅಜ್ಜಿ ಸಾಯ್ತಾಳಂತೆ. ಹಾಗಂದ್ರೇನು ಅತ್ತೆ?"

ಸೀತಾ ಮಗುವನ್ನು ಎದೆಗವಚಿಕೊಂಡಿದ್ದಳು. ಅವಳ ಕಣ್ಣಿನಲ್ಲಿ ನೀರು ತುಂಬಿತ್ತು. ಮಗು ಕುತೂಹಲದಿಂದಲೇ ಮತ್ತೂ ಪ್ರಶ್ನಿಸಿದ್ದ:

"ನಾನೂ ಸಾಯ್ತೀನಾ, ಅತ್ತೆ? ನೀವೂ ಸಾಯ್ತೀರಾ?"

ಸೀತಾ ಅವನ ಬಾಯಿ ಮುಚ್ಚಿದ್ದಳು. ಅವಳಿಗೆ ಹೆದರಿಕೆಯಾಗಿತ್ತು. ಸಾವಿನ ಬಗ್ಗೆ ಮಾತನಾಡಬಾರದು ಅನಿಸಿತ್ತು.

ಮಗುವಿನ ಕುತೂಹಲ ಅಲ್ಲಿಗೇ ತಣಿಯಲಿಲ್ಲ. ಒಂದು ಸಂಜೆ ಬೋಂಡಾ ಮಾಡಿದಾಗ ಅದು ಅಜ್ಜಿಗೆ ಬಹು ಪ್ರೀತಿ ಎಂಬುದನ್ನು ಬಲ್ಲ ಮಗು ಮೆಲ್ಲನೆ ಒಂದನ್ನೆತ್ತಿಕೊಂಡು ಕೊಠಡಿಯ ಬಾಗಿಲು ನೂಕಿ ಒಳಗೆ ಹೋಗಿದ್ದ. ಅಲ್ಲಿ ಯಾರೂ ಇಲ್ಲದುದನ್ನು ಗಮನಿಸಿ,

"ಅಜ್ಜೀ, ಬೋಂಡಾ ತಂದಿದೀನಿ", ಎಂದ. ಅಜ್ಜಿಯಿಂದ ಉತ್ತರ ಬಾರದುದನ್ನು ನೋಡಿ ಅದನ್ನು ಮುರಿದು ಒಂದು ತುಂಡನ್ನು ಅಜ್ಜಿಯ ಬಾಯಿಗೆ ಇರಿಸಿ ಒಳಗೆ ನೂಕಿದ. ಉಳಿದುದನ್ನು ತಾನು ತಿನ್ನುತ್ತಾ ನಿಂತ. ಸ್ವಲ್ಪ ಹೊತ್ತಿನೊಳಗೆ ಜೊರು ಬಾಯಿಯೊಳಗಿಂದ

ಗಂಟಲವರೆಗೆ ಹೋಗಿ ಉಸಿರು ಸಿಕ್ಕಿಕೊಂಡ ಹಾಗಾಗಿ ಕಾವೇರಕ್ಕ ಚಡ ಪಡಿಸಲಾರಂಭಿಸಿದರು. ಮಗು 'ಅಜ್ಜೀ ಅಜ್ಜೀ!' ಎಂದು ಅಳುತ್ತಾ ಹೊರಗೋಡಿದ. ರಾಜಣ್ಣ ಗಾಬರಿಯಿಂದ ಒಳಬಂದವರು ಕಾವೇರಕ್ಕನ ಬಾಯಿಯಲ್ಲಿದ್ದ ತುಂಡನ್ನು ಹೊರತೆಗೆದರು.

"ಇನ್ನು ಮಗೂನ ರೂಮಿನೊಳ್ಗೆ ಬಿಡ್ಬೇಡಿ. ಬಾಗಿಲು ಹಾಕ್ಬಿಡಿ", ಎಂದು ರಾಜಣ್ಣ ಅಪ್ಪಣೆ ಕೊಡಿಸಿದ್ದರು.

ಮಗು 'ನಮ್ಮಜ್ಜಿ ಗುಮ್ಮ ಆಗಿದಾರೆ!', ಎಂಬ ಸುದ್ದಿಯನ್ನು ಹರಡಲು ಪಕ್ಕದ ಮನೆಗೆ ಓಡಿದ.

ಸೀತಾ ತಲೆ ಬಾಚಿಕೊಂಡು ಮುಖದಲ್ಲಿ ಕುಂಕುಮ ತಿದ್ದಿದಳು. ಶ್ರೀಧರ ಇವತ್ತು ಬಂದ್ರೆ ಚೆನ್ನಾಗಿರುತ್ತೆ ಎಂದುಕೊಂಡಳು. ಸ್ಕೂಲು ಬಿಡೋ ಹೊತ್ತಿಗೆ ಅವರು ಬಂದ್ರೆ ಹಾಗೇ ಎಲ್ಲಾದ್ರೂ ಹೋಟೆಲಿಗೆ ಹೋಗಿ ಕಾಫಿ ತಿಂಡಿ ತಿಂದು ನಿಧಾನವಾಗಿ ಮನೆಗೆ ಬರ್ಬಹುದು. ಥೂ! ಈ ಮನೇಲಿ ಸ್ವಲ್ಪವೂ ಪ್ರೈವಸಿ ಇಲ್ಲ. ಶ್ರೀಧರ ಬಂದ್ರೆ ಏಕಾಂತದಲ್ಲಿ ಮಾತಾಡೋದಕ್ಕೂ ಅವಕಾಶವಾಗೊಲ್ಲ. ಈಗ ಈ ಅಮ್ಮಂದು ಗೋಳು ಬೇರೆ!

ಊಟ ಮುಗಿಸಿ ಸಣ್ಣ ಟಿಫಿನ್ ಕ್ಯಾರಿಯರ್‌ನಲ್ಲಿ ಎರಡು ಚಪಾತಿ ಯನ್ನೂ ಸ್ವಲ್ಪ ಪಲ್ಯವನ್ನೂ ಇರಿಸಿಕೊಂಡಳು: 'ಅಮ್ಮ ಎಲ್ಲಾನೂ ಪ್ಯಾಕ್ ಮಾಡಿ ಇಟ್ಬಿಡತಿದ್ಲು, ಈ ಅತ್ತಿಗೆಗೆ ತುಂಬಾ ಸೊಕ್ಕು!' ಅನಿ ಸಿತು. ಎಡಹೆಗಲಿಗೆ ಚೀಲ ಏರಿಸಿಕೊಂಡು ಬಲಭಾಗದ ಎದೆಯ ಮೇಲೆ ಜಡೆ ಎಳೆದುಕೊಂಡು ಸ್ಕೂಲಿಗೆ ಹೊರಟವಳು, "ಬರ್ತೀನಮ್ಮ" ಎಂದು ಬಾಯಿತಪ್ಪಿ ಹೇಳಿ ಅನಂತರ "ಬರ್ತೀನಪ್ಪಎಂದು ತಿದ್ದಿಕೊಂಡು ಹೊರಗೆ ಅಡಿಯಿರಿಸಿದಳು.

ದಾರಿಯಲ್ಲಿ ಹೋಗುತ್ತಿದ್ದ ಬಿಳಿಗೂದಲ ಹೆಂಗಸನ್ನು ನೋಡಿ ದೊಡನೆ ಸೀತೆಗೆ ತಾಯಿಯ ನೆನಪು ಮರುಕಳಿಸಿತು. ಆರೋಗ್ಯವಾಗಿದ್ದ ತಾಯಿ ಇದ್ದಕ್ಕಿದ್ದ ಹಾಗೆ ತುಳಸಿ ಕಟ್ಟೆ ಮುಂದೆ ಬಿದ್ದು ತಮ್ಮ ಬದುಕನ್ನೆಲ್ಲಾ ಅಲ್ಲೋಲಕಲ್ಲೋಲ ಮಾಡಿಬಿಟ್ಟರಲ್ಲ, ಅನಿಸಿತು. ಆಸ್ಪತ್ರೆಗೆ ಸೇರಿಸಿ

ದಾಗ ತಾಯಿ ಬದುಕ್ತಾರೆ ಅನ್ನೋ ಆಸೆಯಿತ್ತು. ಗೌರಿ 'ಅಯ್ಯೋ.... ಅಮ್ಮಾ' ಎಂದು ಅಳುತ್ತಾ ಇರುವುದು ಕಂಡಾಗ ಸೀತೆಗೂ ದುಃಖ ಒತ್ತರಿಸಿ ಬಂದಿತ್ತು. ಅಕ್ಕತಂಗಿ ಇಬ್ಬರೂ ಮನಸ್ಸು ಹಗುರವಾಗುವವರೆಗೂ ಅತ್ತಿದ್ದರು. ಹೇಗಾದರೂ ಮಾಡಿ ತಾಯಿಯನ್ನು ಉಳಿಸಿಕೊಳ್ಳಬೇಕೆಂಬ ಛಲ ಅವರ ಮನಸ್ಸಿನಲ್ಲಿ ಮೂಡಿತ್ತು.

"ಇವತ್ತು ಹ್ಯಾಗಿದಾರೆ ಅಮ ?"

"ಹಾಗೇ ಇದಾರೆ. ಇನ್ನೂ ಜ್ಞಾನ ಬಂದಿಲ್ಲ."

"ಅಮ್ಮಂಗೆ ನಿಜ್ವಾಗ್ಲೂ ಮತ್ತೆ ಪ್ರಜ್ಞೆ ಬರಬಹುದೇನೇ, ಗೌರಿ?"

"ನಂಗೇನು ಗೊತ್ತಾಗುತ್ತೆ? ಡಾಕ್ಟ್ರ ಹೇಳ್ಬೇಕು."

ದಿನಗಳೆದ ಹಾಗೆ ನಿರಾಸೆ ಮೂಡಿತು. ಕಾತರ, ಆತಂಕದ ಜಾಗದಲ್ಲಿ ನಿರುತ್ಸಾಹ. ಬೇಸರ,

ಕಾವೇರಕ್ಕ ಮನೆಗೆ ಬಂದಮೇಲೆ ಮತ್ತಷ್ಟು ಹೊಸ ಸಮಸ್ಯೆಗಳು ಹುಟ್ಟಿಕೊಂಡುವು. ಅವರಿಗೆ ದಿನವೂ ಸ್ಪಂಜ್‌ಬಾತ್ ಕೊಡಬೇಕು, ಪದೇ ಪದೇ ಬಟ್ಟೆ ಬದಲಿಸಬೇಕು, ಆ ಪಕ್ಕದಿಂದ ಈ ಪಕ್ಕಕ್ಕೆ ಹೊರಳಿಸಬೇಕು, ರೈಲ್ಸ್ ಟ್ಯೂಬಿನಿಂದ ಹಾಲು. ಎಳನೀರು, ಹಣ್ಣಿನ ರಸಗಳನ್ನು ಹುಯ್ಯಬೇಕು, ಎನಿಮಾ ಕೊಡಬೇಕು, ಮೂತ್ರ ತುಂಬಿಕೊಳ್ಳುತ್ತಿದ್ದ ಬಾಟಲನ್ನು ದಿನಕ್ಕೆ ಎರಡು ಮೂರು ಸಾರಿ ಬದಲಾಯಿಬೇಕು.

"ಈ ಕೆಲಸಗಳನ್ನು ಎರಡು ದಿನ ಮಾಡುವ ಹೊತ್ತಿಗೆ ಸೀತೆಗೆ ಜಿಗುಪ್ಸೆ ಬಂತು.

"ಈ ವಾಸನೆಗೆ ನಗ್ಯಾಂಕೋ ಅಸಹ್ಯವಾಗುತ್ತಪ್ಪ. ನಾನೊಬ್ಳೇ ಯಾಕೆ ಈ ಕೆಲ್ಸ ಮಾಡ್ಬೇಕು? ಅಕ್ಕ ಮಾಡ್ಲಿ. ಅತ್ತಿಗೆ ಮಾಡ್ಲಿ...."

"ನಂಗವೆಲ್ಲಾ ತಿಳಿಯೊಲ್ಲ. ನನ್ನಿಬ್ರು ಮಕ್ಕಳ ಕೆಲ್ಸವೇ ಆಗುತ್ತೆ. ನಾನೇನು ಇಲ್ಲಿ ಶಾಶ್ವತವಾಗಿರೋಳಾ? ಅವ್ರು ಕರೆಯೋಕೆ ಬಂದ್ರೆ ಹೋಗ್ಬೇಡವಾ?" ಎಂದಿದ್ದಳು ಗೌರಿ.

ಕಾಯಿಲೆಯೋರ್ನ ನೋಡಿದ್ರೆ ನಂಗೆ ಹೆದರಿಕೆಯಾಗುತ್ತೆ. ನನ್

ಬಲವಂತ ಮಾಡ್ಬೇಡಿ. ಇಲ್ದಿದ್ರೆ ನನ್ ತಾಯಿ ಮನೆಗೆ ಹೋಗ್ಬಿಡತೀನಿ...." ಎಂದು ಇಂದಿರಾ ಹೆದರಿಸಿದ್ದಳು.

"ಒಬ್ಬ ನರ್ಸ್‌ನ ಇಟ್ಟುಕೋಬೌದಪ್ಪ."

"ನರ್ಸೇನೂ ಬಿಟ್ಟಿ ಬರ್‍ತಾಳಾ? ಅವಳಿಗೆ ದಿನಕ್ಕೆ ಇಪ್ಪತ್ತು ರೂಪಾಯಾದ್ರೂ ಕೊಡ್ಬೇಕಾಗುತ್ತೆ."

ಯೋಚನೆಗಳು; ನೀರವತೆ.

"ನಮ್ ಕೆಲಸದ ಸಿದ್ದವ್ವನಿಗೆ ಹೇಳ್ಬಹುದಲ್ಲ. ಒಂದೈವತ್ತು ರೂಪಾಯಿ ಕೊಟ್ರೆ ಮಾಡ್ತಾಳೆ."

ಸಿದ್ದವ್ವ ಕಣ್ಣು ತುಂಬಿ ಗದ್ಗದಕಂಠದಲ್ಲಿ ನುಡಿದಿದ್ದಳು:

"ಆಗಲ್ರವ್ವ, ನೀವು ದುಡ್ದು ಕೊಡದಿದ್ರೂ ಮಾಡ್ತೀನಿ. ನಮ್ಮವ್ವ ನನಕ ಎಷ್ಟು ಸಾಯ ಮಾಡವ್ರೆ, ಮರೆಯೋಕಾಯ್ತದಾ?"

ಅಮ್ಮಾವರ ಹಳೆಯ ಸೀರೆ ರವಿಕೆಗಳೆಲ್ಲಾ ಸಿದ್ದವ್ವನಿಗೇ ಮೀಸಲಾಗಿರುತ್ತಿದ್ದುವು. ಮನೆಯಲ್ಲಿ ಚಕ್ಕುಲಿ, ಕೋಡುಬಳೆ ಮಾಡಿದರೆ 'ಮಕ್ಕಳಿಗೂ ನಾಲ್ಕು ತಕೊಂಡು ಹೋಗೇ' ಎಂದು ಕಾವೇರಕ್ಕ ಸಿದ್ದವ್ವನ ಮಕ್ಕಳಿಗೂ ತಿಂಡಿ ಕಳಿಸುತ್ತಿದ್ದರು. ಬೆಳಗಿನ ತಂಗಳ ಊಟಕ್ಕೆ ಸಾರಿಲ್ಲದಿದ್ದರೆ, 'ಬರೀ ಅನ್ನ ಹ್ಯಾಗೆ ಊಟ ಮಾಡ್ತೀಯೆ? ಒಂದಿಷ್ಟು ಉಪ್ಪಿನಕಾಯಿ ಕೊಡ್ತೀನಿ ತಾಳು' ಎನ್ನುತ್ತಿದ್ದರು.

ಅವನ್ನೆಲ್ಲಾ ನೆನೆಸಿಕೊಳ್ಳುತ್ತ ಸಿದ್ದವ್ವ, "ಅವ್ವಾವ್ರು ಒಂಜಿನ ನನ್ ಬೈನಿಲ್ಲ. ಅಂಥಾವ್ರಿಗೆ ಇಂಗಾಗಬೇಕಾದ್ರೆ ದೇವ್ರಿಗೆ ಕಣ್ಣಿಲ್ಲ ಕಣ್, ತಾಯಿ" ಎಂದಿದ್ದಳು ಸೀತೆಯ ಮುಂದೆ.

ಮಗುವಿಗೆ ಉಪಚಾರ ಮಾಡಿದ ಹಾಗೆ ಸಿದ್ದವ್ವ ಕಾವೇರಕ್ಕನ ಆರೈಕೆ ಮಾಡುತ್ತಿದ್ದಳು. ಎಷ್ಟು ಮಾಡಿದರೂ ಅವಳ ಮುಖದಲ್ಲಿ ಬೇಸರದ ಭಾವವೇ ಇರುತ್ತಿರಲಿಲ್ಲ. ಒಂದು ದಿನ ಬೆಳಗ್ಗೆ ಕಾವೇರಕ್ಕನ ಮುಖ ಒರೆಸಿ ಸಿದ್ದವ್ವ ಕುಂಕುಮ ಇಡುತ್ತಿದ್ದಳು.

"ಅವೆಲ್ಲಾ ಯಾಕೆ, ಬಿಟ್ಬಿಡು" ಎಂದು ಸೀತಾ ಅಂದದ್ದಕ್ಕೆ ಸಿದ್ದವ್ವ, "ಅಯ್ಯೊ ಸುಮ್ಕಿರಿ. ಅವ್ವಾವ್ರು ಮುತ್ತೈದೆ ಅಲ್ವರಾ?" ಎಂದ

ಗದರಿ ಬಿಟ್ಟಿದ್ದಳು. ಎಷ್ಟೋ ಸಾರಿ ಸಿದ್ದವ್ವ ಮಾತನಾಡದ ಕಾವೇರಕ್ಕ ನೊಂದಿಗೆ ತಾನೊಬ್ಬಳೇ ಸಂಭಾಷಣೆ ನಡೆಸುವುದನ್ನು ಕೇಳಿದ್ದ ಮನೆಯವಲು 'ಇವಳಿಗೆ ಹುಚ್ಚುಗಿಚ್ಚು ಹಿಡಿಯುತ್ತೋ' ಎಂದು ಸಂದೇಹಪಡುತ್ತಿದ್ದರು.

ಕಾವೇರಕ್ಕ ಆಸ್ಪತ್ರೆಯಲ್ಲಿದ್ದಾಗಲೇ ಒಂದು ಸಾರಿ ಶ್ರೀಧರ ಅವರನ್ನು ನೋಡಿ ಹೋಗಲೆಂದು ಬಂದಿದ್ದ. ರೋಗಿಯನ್ನು ನೋಡಿ ಹೊರ ಬಂದಾಗ ಜಗಲಿಯಲ್ಲಿದ್ದ ಸೀತೆಯನ್ನು ನೋಡಿ, "ಸುದ್ದಿ ಕೇಳಿ ನಂಗೆ ಶಾಕ್ ಆಯ್ತು" ಎಂದಿದ್ದ. ತನ್ನ ದುಃಖದಲ್ಲಿ ಭಾಗಿಯಾಗುತ್ತಿದ್ದ ಶ್ರೀಧರನನ್ನು ಕಂಡು ಸೀತೆಗೆ ಕೃತಜ್ಞತೆ ತುಂಬಿ ಬಂದಿತ್ತು.

"ಬೇಜಾರು ಮಾಡ್ಕೋಬೇಡ. ಧೈರ್ಯವಾಗಿರು" ಎಂದು ಅವನು ಮತ್ತೆ ಮಾತು ಸೇರಿಸಿದ್ದ.

"ನೀವಿರೋದ್ರಿಂದ ಇದನ್ನೆಲ್ಲಾ ಸಹಿಸೋಕೆ ಆಗುತ್ತೆ" ಎಂದಿದ್ದಳು ಸೀತಾ.

ಶ್ರೀಧರ ಮನೆಗೊಮ್ಮೆ ಬಂದಿದ್ದ. ಅವನ ಜೊತೆ ಏನೇನೋ ಮಾತಾಡುವ ಆಸೆ ಸೀತೆಗೆ. ಮದುವೆಗೆ ದಿನ ಹತ್ತಿರ ಬರುತ್ತಿದೆ. ಎಂಥ ಸೀರೆಗಳ್ನ ಕೊಂಡ್ಕೊಳ್ಳಲಿ? ರಿಸೆಪ್ಷನ್‌ಗೆ ಯಾವ ಬಣ್ಣದ ಸೀರೆ ಉಟ್ರೇ ಕೂಂತ ನಿಮಗೆ ಇಷ್ಟ? ಒಡವೆ ಯಾವ ನಮೂನೆ ಮಾಡಿಸಿಕೊಳ್ಳಲಿ? 'ನಮ್ಮ ಮದುವೆಗೆ ಬನ್ನಿ' ಅಂತ ನಾನೂ ನೀವೂ ಸಹಿ ಹಾಕಿರೋ ಆಹ್ವಾನ ಪತ್ರಿಕೆ—ನಮ್ಮ ಸ್ನೇಹಿತರ ಮಟ್ಟಿಗಾದರೂ—ಕೊಟ್ಟರೆ ಚೆನ್ನಾಗಿರುತ್ತಲ್ವೆ? ಪ್ರಶ್ನೆಗಳು ಅವಳ ಉಡಿಯಲ್ಲೇ ಉಳಿದಿದ್ದುವು. ಶ್ರೀಧರ ಏನು ಮಾತ ನಾಡಲೂ ಸಾಧ್ಯವಾಗದೆ ಹೊರಟುಹೋಗಿದ್ದ.

ಸೀತಾ ಐದಾರು ವರ್ಷದ ಹುಡುಗಿಯಾಗಿದ್ದಾಗಿನ ಒಂದು ನೆನಪು. ಕಾವೇರಕ್ಕ ಅವಳನ್ನು ಅಪ್ಪಿ ಮುದ್ದಿಡುತ್ತಿದ್ದಾರೆ. ಅವರ ಮೂಗಿ ನಲ್ಲಿ ಮಿನುಗುತ್ತಿದ್ದ ಮೂಗುಬೊಟ್ಟು ನೋಡಿ ಸೀತಾ ಕೇಳಿದ್ದಳು:

"ಅಮ್ಮ, ದೊಡ್ಡೋಳಾದ್ಮೇಲೆ ಇದನ್ನ ನಂಗೆ ಕೊಡ್ತೀಯಾ?"

"ಇದಕ್ಕಿಂತ ಚೆನ್ನಾಗಿರೋದು ಬೇರೆ ಮಾಡ್ಸೋಣ."

"ಉಹೂಂ. ನಂಗೆ ಇದೇ ಬೇಕು."

"ಮುದ್ದು ನನ್ಚಿನ್ನ, ಹಾಗೆ ಹಟಮಾಡ್ಬಾರ್ದಮ್ಮ."

ಆಸ್ಪತ್ರೆಯಲ್ಲಿ ಕಾವೇರಕ್ಕನ ಮೂಗಿನೊಳಗೆ ರೈಲ್ಸ್‌ಟ್ಯೂಬ್ ತೂರಿಸ ಬೇಕಾದ ಸನ್ನಿವೇಶ. ಮೂಗುಬೊಟ್ಟು ಅಡ್ಡ ಬರುತ್ತದೆಂದು ಡಾಕ್ಟರು, "ಇದನ್ನ ಸ್ವಲ್ಪ ತೆಗೀತೀರಾ?" ಎಂದು ಕೇಳಿದ್ದರು. ಸೀತಾ ಥಟ್ಟನೆ ಮುಂದೆ ನುಗ್ಗಿ ಅದನ್ನು ತೆಗೆದು ಪರ್ಸಿನಲ್ಲಿಟ್ಟುಕೊಂಡಿದ್ದಳು.

"ಅದು ವಜ್ರದ್ದು ಕಣೆ. ನೀನು ಮೂಗು ಚುಚ್ಕೊಂಡಿಲ್ಲ ಹ್ಯಾಗೂ. ನಂಗೆ ಕೊಡು" ಎಂದಿದ್ದಳು ಗೌರಿ.

"ನಿಂಗ್ಯಾಕ್ ಕೊಡ್ಲಿ? ಮದ್ವೆ ಹೊತ್ಗೆ ನಾನೂ ಮೂಗು ಚುಚ್ಕೋ ತೇನೆ."

ಗೌರಿ ಮತ್ತು ಆಕೆಯ ಗಂಡ ನಾಸಿಕದಿಂದ ಬಂದು ಹದಿನೈದು ದಿವಸ ಕಳೆದರೂ ಕಾವೇರಕ್ಕ ಸುಧಾರಿಸುವ ಲಕ್ಷಣಗಳು ಕಾಣಲಿಲ್ಲ. ದಿನವೂ ಬೆಳಗ್ಗೆ ಎದ್ದು ಗಂಟಲವರೆಗೆ ತಿಂಡಿ ತಿಂದು ಕಾಫಿ ಕುಡಿಯುವುದು, ಆ ಬಳಿಕ ಆಸ್ಪತ್ರೆಗೆ ಹೋಗುವುದು. ಜಗಲಿಯಲ್ಲಿ ಸಾಲುಸಾಲಾಗಿ ಮಾತ ನಾಡುತ್ತಾ ನಿಂತುಕೊಳ್ಳುವುದು, ಅಂದು ಆಸ್ಪತ್ರೆಗೆ ಬರುವ ನೆಂಟರಿಷ್ಟ ರನ್ನು ನೋಡುವುದು, ಇವರು ಬಂದರು, ಇವರು ಬರಲಿಲ್ಲ, ಎಂದು ಲೆಕ್ಕ ಹಾಕುವುದು, ಇತರ ರೋಗಿಗಳ ಚರಿತ್ರೆಗಳನ್ನು ತಿಳಿದುಕೊಳ್ಳುವುದು. ಡಾಕ್ಟರು ಬಂದಾಗ ಆತಂಕ, ಕಾತರಗಳಿಂದ ನೋಡುವುದು. ಅವರು ಬಂದು ಹೋದ ಬಳಿಕ ನಿರಾಶೆಯಿಂದ ತಲೆಯಾಡಿಸುವುದು. ಇಷ್ಟು ಹೊತ್ತಿಗೆ ಊಟದ ಸಮಯವಾಗಿರುತ್ತಿತ್ತು. ಮನೆಗೆ ಬಂದು ಗಡದ್ದಾಗಿ ಊಟ ಮಾಡಿ ಮಲಗುವುದು. ಸಂಜೆ ಮತ್ತೆ ಬೆಳಗಿನ ಕಾರ್ಯಕ್ರಮದ ಪುನರಾವರ್ತನೆ.

"ಇನ್ನೆಷ್ಟು ದಿನ ಕಾಯೋದು? ನಾನು ಊರಿಗೆ ಹೋಗ್ತೀನಿ ಎಂದಿದ್ದ ಗೌರಿಯ ಗಂಡ.

"ಎಲ್ಲಾ ಮುಗಿದುಹೋಗಿದ್ರೆ ಚೆನ್ನಾಗಿತ್ತು. ಈಗ ನಾನು ಬರೋ ಹಾಗೂ ಇಲ್ಲ. ಇಲ್ಲಿದ್ರೆ ಇರೋದನ್ನೆಲ್ಲಾ ನನ್ನ ತಂಗೀನೇ ಹೊಡೆದು

ಬಿಡ್ತಾಳೆ. ಒಡವೆ, ಸೀರೆ, ದುಡ್ಡು, ಎಲ್ಲಾ ಇತ್ಯರ್ಥ ಮಾಡ್ಕೊಂಡೇ ಬರ್‍ತೀನಿ. ನೀವು ಹೋಗಿ."

ಕಾವೇರಕ್ಕ ಮನೆಗೆ ಹಿಂತಿರುಗಿದ ನಾಲ್ಕನೆ ದಿವಸ "ನಾಳಕ್ಕೆ ಗ್ಲುಕೋಸ್ ಕೊಡ್ಬೇಕು. ಕೈ ಸ್ವಲ್ಪ ಒತ್ತಿ ಹಿಡ್ಕೋತೀರಾ?" ಎಂದು ಡಾಕ್ಟರು ಕೇಳಿದ್ದರು. ಸೀತಾ ಕೈಯನ್ನು ಒತ್ತಿ ಹಿಡಿಯಲು ಹೋದಾಗ ಕೈಬಳೆಗಳು ಅಡ್ಡ ಬಂದುವು. "ಅವನ್ನು ತೆಗೆದ್ಬಿಡಿ. ಆಮೇಲೆ ಹಾಕ್ಕೋಬಹುದು" ಎಂದು ಡಾಕ್ಟರು ಸಲಹೆ ಮಾಡಿದರು. ಇಂಜೆಕ್ಷನ್ ಕೊಟ್ಟ ಬಳಿಕವೂ ಸೀತಾ ಅವನ್ನು ಮತ್ತೆ ಹಾಕಲಿಲ್ಲ. ಎರಡೂ ಕೈಗಳಲ್ಲಿ ಮೂರು ಮೂರು ಚಿನ್ನದ ಬಳೆಗಳು ಐದು ಗಾಜಿನ ಬಳೆಗಳು ಇದ್ದುವು. ಚಿನ್ನದ ಬಳೆಗಳನ್ನು ತೆಗೆದು ಒಳಗಿಡಲು ಇದೇ ಸುಸಮಯ ಎಂದು ಸೀತೆಗೆ ತೋರಿತು.

"ಅಪ್ಪ, ಆ ಕೈನಲ್ಲಿರೋ ಬಳೆಗಳ್ನೂ ತೆಗೆದಿಟ್ಬಿಡ್ತೀನಿ. ಅಮ್ಮ ಗುತ್ತಗೆ ತೊಟ್ಕೊಂಡಿದ್ದಾರೆ. ಇಂಜೆಕ್ಷನ್ ಕೊಡುವಾಗ ಹಾಕೋದು ತೆಗೆಯೋದು ಕಷ್ಟ. ಅಲ್ದೆ ಕೆಲಸದೋಳು ಒಬ್ಳೇ ಅಮ್ಮನ ಜೊತೆ ಇರ್‍ತಾಳೆ. ಬರೋರು ಹೋಗೋರು ಬೇರೆ!"

ಪಾಪ, ಆ ಕೆಲಸದವಳು ಈ ಬಂಗಾರ ಯಾಕೆ ಮುಟ್ಟುತ್ತಾಳೆ ಎಂದುಕೊಂಡರೂ ರಾಜಣ್ಣ ಮಗಳ ಮಾತಿಗೆ ಬೇಡ ಅನ್ನಲಿಲ್ಲ. ಕಾವೇರಕ್ಕನ ಮದುವೆಯಲ್ಲಿ ಅವಳ ತಾಯಿಯ ಮನೆಯವರು ಎರಡೆರಡು ಜೊತೆ ಬಳೆ ಹಾಕಿದ್ದರು. ಪ್ರಕಾಶ ಹುಟ್ಟಿದಾಗ ತಾವೇ ಒಂದು ಜೊತೆ ಮಾಡಿಸಿದ್ದರು. ದುಂಡಗಿನ ಕೈಗಳಲ್ಲಿ ಗಾಜಿನ ಮತ್ತು ಚಿನ್ನದ ಬಳೆಗಳು ಶೋಭಾಯಮಾನವಾಗಿ ಕಾಣುತ್ತಿದ್ದುವು. ಈಗ ಒಣಗಿರುವ ಕೈಗಳು, ಬರಿದಾಗಿವೆ. ರಾಜಣ್ಣನವರ ಕಣ್ಣುಗಳು ಹನಿಗೂಡಿದುವು.

ಅಕ್ಕ-ತಂಗಿಗೆ ಒಡವೆಗಳ ವಿಷಯದಲ್ಲಿ ಜಗಳವಾಯಿತು.

"ಅಮ್ಮನ ಒಡವೆ ನಮ್ಮಿಬ್ರಲ್ಲೂ ಸಮವಾಗಿ ಪಾಲಾಗಬೇಕು. ಅವಳು ಹೆಚ್ಚು ನಾನು ಕಡಮೆಯಲ್ಲ!" ಎಂದು ಗೌರಿ ಕೂಗಾಡುತ್ತಿದ್ದಳು.

"ಇದೇನಮ್ಮ ಹೀಗೆ ಜಗಳವಾಡ್ತಿದೀರ? ನಿಮ್ಮಮ್ಮ ಇನ್ನೂ ಬದುಕಿದಾಳೆ ಅನ್ನೋದೇ ಮರೆತ್ರಾ?" ಎಂದು ಸಂಕಟದಿಂದ ರಾಜಣ್ಣ ನುಡಿದರು.

ಇದೇ ಮಕ್ಕಳನ್ನೇ ಅಲ್ಲವೇ ತಾವು ಲಾಲಿಸಿ ಪಾಲಿಸಿ ಬೆಳಸಿದ್ದು? ವಿದ್ಯಾವಂತರನ್ನಾಗಿ ಮಾಡಿದ್ದು?

"ನೋಡಪ್ಪ, ಸೀತಾ ನನ್ಮೇಲೆ ಜೋರು ಮಾಡೋಕೆ ಬರ್‍ತಾಳೆ. ಹೋದ್ವಾರ ವಜ್ರದ ಮೂಗುಬೊಟ್ಟು ತಕೊಂಡ್ಲು. ಈಗ ಒಡವೇನೆಲ್ಲಾ ಹಾರಿಸೋಕೆ ನೋಡ್ತಿದಾಳೆ."

"ಮದ್ವೆಯಾಗಿ ಗಂಡನ ಮನೆಗೆ ಹೋದ ನಿಂಗೆ ಒಡವೆ ಮೇಲೆ ಯಾವ ಹಕ್ಕು ಇಲ್ಲ."

"ಬಾಯಿ ಮುಚ್ಚೇ, ರಂಡೇ!"

ರಾಜಣ್ಣ ಮಕ್ಕಳ ಕೈ ಹಿಡಿದುಕೊಂಡು ಗೋಗರೆದಿದ್ದರು: "ದಯವಿಟ್ಟು ಸುಮ್ಮನಾಗಿ. ನಾನು ಇತ್ಯರ್ಥ ಮಾಡ್ತೀನಿ. ಅಕ್ಕಪಕ್ಕದ ಮನೆಯೋರು ಏನು ತಿಳಕೊಂಡಾರು?"

ಪ್ರಕಾಶ ಮನೆಗೆ ಹಿಂತಿರುಗಿದಾಗ ಇಂದಿರಾ ಅವನಿಗೆ ಪಿಸುನುಡಿದಿದ್ದಳು.

"ನಂಗೇನು ಅತ್ತೆವರ ಸೀರೆಗೀರೆ ಬೇಡ. ಒಡವೇಲಿ ನಿಮಗೂ ಒಂದು ಪಾಲು ಬರ್ಬೇಕು. ಕೇಳಿ. ಆ ಬಂಗಾರ ನಂಗಲ್ಲ. ನಾಳೆ ನಿಮ್ಮ ಮಗನ ಹೆಂಡತಿಯಾಗಿ ಬರೋಳಿಗೆ ಬೇಡ್ವೆ?"

"ಬೇಡ ಇಂದೂ, ಕೇಳ್ಬಾರ್‍ದು"

ಎಂದು ವ್ಯಸನದಿಂದ ನುಡಿದಿದ್ದ ಪ್ರಕಾಶ. ಕೊಠಡಿಯಲ್ಲಿ ಮಲಗಿರುವ ಅಮ್ಮನಿಗೆ ಈ ಜಗಳದ ವಿಷಯವೆಲ್ಲಾ ಕೇಳಿಸುವುದೋ ಇಲ್ಲವೋ? ತಾನು ಬದುಕಿರುವಾಗಲೇ ಇವರು ನಾಯಿಗಳ ಹಾಗೆ ಕಚ್ಚಾಡುವರಲ್ಲ ಎಂದು ಅವಳಿಗೆ ಎಷ್ಟು ಸಂಕಟವಾಗಬೇಡ? ಎನಿಸಿತು. ಅವನು ಮುಖ ಮುಚ್ಚಿಕೊಂಡ.

o o o o

ಅಂದು ಸಂಜೆ ಸೀತಾ ಸ್ಕೂಲು ಮುಗಿಸಿ ಮನೆಗೆ ಹಿಂದಿರುಗುವ ಹೊತ್ತಿಗೆ ಸಿದ್ದವ್ವ ಹೊರಕೋಣೆಯಲ್ಲಿದ್ದವಳು "ಸೀತಮ್ನೋರೆ, ಒಸಿ ಒಳಗ್ಬರ್‍ರಿ. ಈ ಬಾಟ್ಲು ತೆಗೀಕಾಗ್ನಿಲ್ಲ" ಎಂದು ಕರೆದಳು. ಸೀತಾ

ತಾಯಿ ಮಲಗಿದ್ದ ಕೋಣೆಯೊಳಗೆ ಕಾಲಿಟ್ಟಳು. ಮೂತ್ರ ಶೇಖರವಾ
ಗಲು ಮಂಚದ ಒದಿಗೆ ಕಟ್ಟಿದ್ದ ಬಾಟಲು ತುಂಬಿ ಹೊರಚೆಲ್ಲಿತ್ತು. ಕೊಠಡಿ
ಯಲ್ಲೆಲ್ಲ ಅದರ ಕೆಟ್ಟ ನಾತ. ಸೀತಾ ಮೂಗುಮುಚ್ಚಿಕೊಂಡು ಹತ್ತಿರ
ಬಂದಳು. ಬಾಟಲನ್ನು ಸಡಲಿಸಿ ತೆಗೆದುಕೊಟ್ಟು ಖಾಲಿಯಾಗಿದ್ದ ಬೇರೆ
ಬಾಟಲಿಗೆ ಟ್ಯೂಬನ್ನು ಇಳಿಬಿಟ್ಟು ಅದರ ಮುಚ್ಚಳ ಗಟ್ಟಿ ಮಾಡಿ
ದಳು.

ಇಷ್ಟು ಮಾಡುವ ಹೊತ್ತಿಗೆ ಅವಳ ಹೊಟ್ಟೆ ತೊಳಿಸಲಾರಂಭವಾ
ಯಿತು. ಮಲಗಿದ್ದ ತಾಯಿಯ ಕಡೆಗೆ ನೋಡಿದಾಗ ಅವಳಿಗೆ ನಿರ್ಜೀವ
ವಸ್ತುವನ್ನು ನೋಡುತ್ತಿರುವೆನೇ ಎಂಬ ಅನುಭವವಾಯಿತು. ತಾಯಿಯ
ಬಗ್ಗೆ ಸಂಕಟವಾಗಲಿಲ್ಲ, ಮರುಕವಾಗಲಿಲ್ಲ. ಇದೇ ತಾಯಿಯೇ
ತನ್ನನ್ನು ಎತ್ತಿ ಆಡಿಸಿದ್ದಳೆ? ಮುದ್ದಿಸಿ ರಮಿಸಿದ್ದಳೆ? ಬಾಯಿಗೆ ತುತ್ತು
ಕೊಟ್ಟು ಬೆಳೆಸಿದ್ದಳೆ? ತಾನು ಕಾಹಿಲೆಯಾದಾಗ ಹಗಲುರಾತ್ರಿ ಸೇವೆ
ಮಾಡಿದ್ದಳೆ?

"ನಿಂಗೆ ಟೈಫಾಯ್ಡ್ ಆದಾಗ ನೀನು ಬದುಕೊಲ್ಲ ಅಂತಾಲೇ ಡಾಕ್ಟ್ರ
ಹೇಳಿದ್ರು ಕಣೆ. ಹಾಸಿಗೇಲೇ ಹೇತುಕೋತಿದ್ದೆ. ಉಚ್ಚೆ ಮಾಡ್ಕೊ
ತಿದ್ದೆ. ಒರೀ ಚಕ್ಕಳದ ಹಾಗಾಗಿ ಹೋಗಿದ್ಯಮ್ಮ. ಆಗ ಹಗಲು
ರಾತ್ರಿ ನನ್ನ ಕಣ್ಣಿಗೆ ನಿದ್ದೆ ಹತ್ತುತ್ತಿರಲಿಲ್ಲ. ಆ ಪರಮಾತ್ಮನೇ ಪಾರು
ಮಾಡಿದ ನಿನ್ನ."

—ತಾಯಿ ಹತ್ತಾರು ಸಾರೆ ಹೇಳಿದ ಮಾತುಗಳು ಈಗ ನೆನಪಿಗೆ
ಬಂದವು. ಆರೋಗ್ಯವಾಗಿ ನಗುನಗುತ್ತಿದ್ದ ತಾಯಿಯ ಮುಖ ಸ್ಮರಣೆಗೆ
ಬಂದು ಉಮ್ಮಳ ತಡೆಯಲಾರದೆ ಅವಳು ಹೊರಗೋಡಿದಳು.

ತಿಂಡಿ ತಿನ್ನುತ್ತಾ ಕುಳಿತಾಗ ಇಂದಿರಾ ಹೇಳಿದಳು :

"ಶ್ರೀಧರ ಬರ್ತೀನೀಂತ ಹೇಳಿಕಳ್ಸಿದಾರೆ."

"ಓ, ಹೌದಾ?"

"ಮದ್ವೆ ವಿಷಯ ಮಾತಾಡೋಕೇಂತ ಕಾಣುತ್ತೆ."

ಸೀತೆಯ ಮುಖ ಅರಳಿತ್ತು. ಅವಸರದಲ್ಲಿ ತಿಂಡಿ ತಿಂದು ಅವಳು
ಬೇಗ ಬೇಗ ಮುಖ ತೊಳೆದಳು. ಸೀರೆ ಬದಲಾಯಿಸಿದಳು. ಮುಖದ

ಸಿಂಗಾರ ಮಾಡಿಕೊಂಡಳು. "ಶ್ರೀಧರ, ನೀವೆಂಥ ಮೋಡಿ ಮಾಡಿದೀರ ನನ್ಮೇಲೆ ಅಂತ ನಿಮಗ್ಗೊತ್ತಿಲ್ಲ. ನಂಗಂತೂ ಕೊಳೆತು ನಾರೋ ಈ ಮನೇಲಿ ಇರೋಕೇ ಬೇಜಾರು ಬಂದ್ಬಿಟ್ಟಿದೆ. ಬೇಗ್ಬನ್ನಿ. ಮದ್ವೆ ಮಾಡ್ಕೊಂಡು ನಿಮ್ಮನೆಗೆ ಕರ್‍ಕೊಂಡ್ಹೊಗ್ಬಿಡಿ" ಎಂದುಕೊಂಡಳು.

ಸೀತೆ ಹತ್ತು ಸಾರೆ ಮುಂಬಾಗಿಲಿಗೂ ಅಡುಗೆ ಮನೆಗೂ ಓಡಾಡಿದಳು ತಾಯಿ ಮಲಗಿದ್ದ ಕೊಠಡಿಯ ಬಾಗಿಲು ಎಳೆದುಕೊಂಡು ಚಿಲಕ ಹಾಕಿ ಕೊಂಡಳು. ಹಜಾರದಲ್ಲಿದ್ದ ಕುರ್ಚಿಗಳನ್ನು ಸರಿಪಡಿಸಿದಳು. ರಾಜಣ್ಣ ಓದುತ್ತಾ ಕುಳಿತಿರುವುದನ್ನು ನೋಡಿ ಇಂಥ ಸಮಯದಲ್ಲಿ ಇವರಿಗೆ ಓದೋಕೆ ಹೇಗಾಗುತ್ತೆ ?—ಎಂದುಕೊಂಡಳು.

ಕತ್ತಲಾಗುವ ಹೊತ್ತಿಗೆ ಶ್ರೀಧರ ಬಂದ. ಅವನ ಮುಖ ಮೌನ ವಾಗಿತ್ತು. ಮೈ ಹುಷಾರಿಲ್ಲವೇನೋ ಕೇಳಲೇ ಎಂದುಕೊಂಡ ಸೀತಾ, ತವಕವನ್ನು ಅದುಮಿರಿಸಿಕೊಂಡಳು. ಅವನು ಅವಳನ್ನು ನೋಡದೆಯೇ ಹಜಾರದಲ್ಲಿ ರಾಜಣ್ಣನವರ ಹತ್ತಿರವಿದ್ದ ಕುರ್ಚಿಯ ಮೇಲೆ ಕುಳಿತ. ರಾಜಣ್ಣ ಏನು ಮಾತನಾಡುವುದೆಂದು ತಿಳಿಯದೆ "ಕಾಫಿ ತಕೊಂಡು ಬಾಮ್ಮ" ಎಂದರು.

ಶ್ರೀಧರ ಕಾಫಿ ಕುಡಿದ. ಕೆಮ್ಮಿದ. ಅನಂತರ "ನಿಮ್ಹತ್ರ ಪರ್ಸನಲ್ ಆಗಿ ಮಾತಾಡ್ಬೇಕಿದೆ," ಎಂದ ರಾಜಣ್ಣನವರಿಗೆ. ಅವನು ಯಾಕೆ ಹಾಗಂದ? ಎಂದು ಸೀತೆ ನೊಂದುಕೊಂಡಳು. ಮದುವೆ ವಿಷಯಾನೇ ಇರ್ಬೇಕು. ಇನ್ನೇನು ತಾನೇ ಮಾತಾಡುತ್ತಾರೆ ಎಂದು ಸಮಾಧಾನ ತಂದುಕೊಳ್ಳುತ್ತಾ ಜಗಲಿಗೆ ನಡೆದಳು. ಆದರೆ ಅವಳ ಕಿವಿ ಹಜಾರದಲ್ಲೇ ನೆಟ್ಟಿದ್ದವು.

"ನಮ್ ಮದ್ವೆಗೆ ಗೊತ್ತುಮಾಡಿರೋ ದಿವ್ಸ ಬದಲಾಗ್ಬಾರದು ಅಂತ ನನ್ನಾಸೆ"—ಎಂದು ಪೀಠಿಕೆ ಹಾಕಿದ ಶ್ರೀಧರ.

"ಅದು ಹ್ಯಾಗೆ ಆಗುತ್ತೆ, ಶ್ರೀಧರ? ಇವಳು ಈ ಸ್ಥಿತೀಲಿದ್ದಾಳೆ. ಹೀಗಿರುವಾಗ ನಾವು ಬಂದು ಹ್ಯಾಗೆ ಮದ್ವೆ ಮಾಡಿಕೋಡೋದು ಹೇಳಿ? ಇವಳಿಗೆ ಸ್ವಲ್ಪ ವಾಸಿಯಾದ್ರೆ."

ಶ್ರೀಧರ ಒಣನಗೆ ನಕ್ಕು ಕೇಳಿದ :

"ಇದು ವಾಸಿಯಾಗುತ್ತೆ ಅನ್ಕೊಂಡಿದೀರ?"

"ಗೊತ್ತಿಲ್ಲ. ಪರಮಾತ್ಮನ ಇಚ್ಛೆ. ಇವಳದು ಯಾವುದೂ ತೀರ್ಮಾನವಾಗದೆ ಶುಭಕಾರ್ಯ ಮಾಡೊದಾದ್ರೂ ಹೇಗೆ? ನೀವು ಸ್ವಲ್ಪ ಸೈರಿಸಿಕೋಬೇಕು."

"ಹ್ಯಾಗೆ ಸೈರಿಸಿಕೊಳ್ಳೋದು? ನನ್ನ ತೊಂದರೇನೂ ನೀವು ಅರ್ಥ ಮಾಡ್ಕೊಳ್ಳಿ. ನನ್ ತಾಯಿಗೂ ವಯಸ್ಸಾಯ್ತು. ಯಾವ ಕೆಲ್ಸಾನೂ ಅವಳ ಕೈಲಿ ಮಾಡೋಕಾಗೊಲ್ಲ. ಆ ದಿನ ನಿಮ್ಗೆ ಮದ್ವೆ ಮಾಡೋ ಕಾಗ್ದೆ ಇದ್ರೆ, ನಾನು ಬೇರೆ ಸಂಬಂಧ ನೋಡ್ಕೋಬೇಕಾಗುತ್ತೆ !"

"ಅಂದ್ರೆ—ಈ ಮದುವೆ ಮುರೀತು ಅಂತಾನೇ ಅರ್ಥ?"

"ಹ್ಯಾಗೆ ಬೇಕಾದ್ರೂ ಅರ್ಥಮಾಡಿಕೊಳ್ಳಿ!"

ಶ್ರೀಧರ ಸಿಟ್ಟಿನ ಮೂರ್ತಿಯಾಗಿದ್ದ. ಒಳಗೆ ಬಂದು ಕಂಬನಿ ದುಂಬಿ ನಿಂತಿದ್ದ ಸೀತೆಯತ್ತಲೂ ಅವನು ದೃಷ್ಟಿಹರಿಸಲಿಲ್ಲ. ರಾಜಣ್ಣ ನವರ ಬುದ್ಧಿವಾದದ ಮಾತುಗಳೂ ಅವನ ಕಿವಿಯ ಮೇಲೆ ಬೀಳಲಿಲ್ಲ. ಸಂಕಟ ತಡೆಯಲಾರದೆ ರಾಜಣ್ಣ ತಲೆಯ ಮೇಲೆ ಕೈ ಹೊತ್ತು ಕುಳಿತರು. ಹೊರಗೆ ಬಂದು ಚಪ್ಪಲಿ ಮೆಟ್ಟುತ್ತಿದ್ದ ಶ್ರೀಧರನನ್ನುದ್ದೇಶಿಸಿ ಸೀತಾ ಅಂದಳು:

"ನಿಶ್ಚಯವಾದ ಮದ್ವೇನ ಇಷ್ಟು ಸುಲಭವಾಗಿ ಮುರಿದು ಬಿಡ್ತೀರಾ? ನನ್ಮೇಲೆ ನಿಮಗೆ ಪ್ರೀತಿ ಕೂಡಾ ಇಲ್ವೆ ?

"ಇಲ್ಲಿ ಪ್ರೀತಿ-ಪ್ರೇಮದ ಪ್ರಶ್ನೆ ಉದ್ಭವಿಸೊಲ್ಲ, ಸೀತಾ. ನಂಗೆ ನನ್ನ ಅನುಕೂಲ ಮುಖ್ಯ. ನಿನ್ನನ್ನು ಇಷ್ಟಪಟ್ಟಹಾಗೆ ನಾನು ಇನ್ನೊಬ್ಬಳನ್ನೂ ಇಷ್ಟಪಡಬಹುದು."

"ಅಂದ್ರೆ ನನ್ನ ಮರ್ತುಬಿಡೋಕೂ ಸಾಧ್ಯವಾಗುತ್ತಾ, ನಿಮಗೆ?"

ಯಾಕಾಗೊಲ್ಲ? ಅಷ್ಟು ಸೆಂಟಿಮೆಂಟಲ್ ಆದ್ರೆ ಜೀವನ್ದಲ್ಲಿ ಏನೂ ಪ್ರಯೋಜನ ಇಲ್ಲ. ಸಂದರ್ಭಕ್ಕೆ ತಕ್ಕಹಾಗೆ ಹೊಂದ್ಕೊಂಡು ಹೋಗ್ಬೇಕಪ್ಪ. ಏನೋ ಕೆಟ್ಟ ಕನಸು ಅಂತ ಮರೆತ್ಬಿಡು..."

ಬಿರಬಿರಸೆ ಹೊರಗೆ ಹೋದ ಶ್ರೀಧರನನ್ನೇ ನೋಡುತ್ತಾ ಸೀತಾ ಬಿಕ್ಕಿ ಬಿಕ್ಕಿ ಅತ್ತಳು.

೩

"ಸಂಬಂಧಗಳನ್ನು ನಿಶ್ಚಯಿಸುವುದು ವ್ಯಕ್ತಿಯ ಉಪಯುಕ್ತತೆ ಮಾತ್ರ ಎಂದು ಭಾವಿಸಿದಾಗ, ಇಲ್ಲಿ ಪ್ರೀತಿ-ತ್ಯಾಗಗಳಿಗೆ ಬೆಲೆಯೇನು ಎನಿಸುತ್ತದೆ. ಸಂಬಂಧಗಳು ಜೇನು ಗೂಡಿನ ಹಾಗೆ, ಮನುಷ್ಯನ ಮನಸ್ಸಿನಂತೆ, ಜಟಿಲ. ಅವನ್ನು ಪೂರ್ಣ ಅರ್ಥಮಾಡಿಕೊಳ್ಳುವುದು ಸಾಧ್ಯವೇ ಇಲ್ಲ. ಅರ್ಥಮಾಡಿಕೊಂಡಷ್ಟೂ ಅದರೊಳಗೆ ಸಿಕ್ಕಿಬೀಳುತ್ತೇವೆ. ಸಂಬಂಧ ಕುಸಿದಷ್ಟೂ ಅದಕ್ಕೆ ಇನ್ನಷ್ಟು ಆತುಕೊಳ್ಳುತ್ತೇವೆ. ಕುಸಿದು ಮಣ್ಣಲ್ಲಿ ಹೂತ ನಮ್ಮನ್ನು ನೋಡಿ ಅದು ಗೇಲಿಮಾಡಿ ನಗುತ್ತದೆ..."

ಹಿತ್ತಲ ಕಡೆಯಿಂದ ಬಂದ ಶಬ್ದ ಕೇಳಿ ರಾಜಣ್ಣ ಹೌಹಾರಿ ಕುಳಿತರು. ಅದು ಮತ್ತೆ ನಿಚ್ಚಳವಾಗಿ ಕೇಳಿಸಿತು.

"ಕೊಡೊಲ್ಲ...ಕೊಡೊಲ್ಲ..."

"ಏನಾಯ್ತು ಸೀತಾ?" ಇಂದಿರೆಯ ಧ್ವನಿ.

"ಏನೂ ಇಲ್ಲ, ಅತ್ತಿಗೆ. ಅಮ್ಮನ ಟ್ರಂಕಿನಲ್ಲಿ ಇನ್ಶೂರೆನ್ಸ್ ಪೇಪರ್ ಸಿಕ್ತು. ಐದು ಸಾವಿರ. ನನ್ನನ್ನು ನಾಮಿನಿ ಮಾಡಿದ್ದಾಳೆ ಅಮ್ಮ."

"ನಿಂಗೊಬ್ಬಳಿಗೇ ಯಾಕೆ? ನಂಗೂ ಅರ್ಧಪಾಲು ಕೊಡು ಅಂತ ಕೇಳ್ದೆ ಅಷ್ಟೆ. ಅಷ್ಟಕ್ಕೇ ಬೊಬ್ಬೆ ಇಡ್ತಾಳೆ. ಮಹರಾಯ್ತಿ!" –ಗೌರಿಯ ಉತ್ತರ.

"ಯಾಕೆ ಕೊಡ್ಲಿ? ನಂಗೇಂತ ಬರೆದಿದೆ ಅದ್ರಲ್ಲಿ. ಅದೂ ಈಗ ಸಿಗೋದೂ ಇಲ್ಲ. ಅಮ್ಮ ಸತ್ತಮೇಲೇನೇ..."

ಸೀತಾ ಇದ್ದಕ್ಕಿದ್ದಂತೆ ಮಾತು ನಿಲ್ಲಿಸಿದಳು. ಗೌರಿ ತನ್ನದೇ ದಾಟಿಯಲ್ಲಿ ಮುಂದುವರಿಸಿದಳು:

"ತಾಯಿಯಾದ್ರೂ ಇಬ್ಬರು ಹೆಣ್ಣುಮಕ್ಕಳಲ್ಲಿ ಎಷ್ಟು ಬೇಧ

ಮಾಡಿದ್ಲು! ಮೊದಲ್ನಿಂದ್ಲೂ ಕಿರಿಮಗಳನ್ನ ಕಂಡ್ರೇ ಅವಳಿಗೆ ಪ್ರೇಮ. ನಂಗಿಂಥ ಅನ್ಯಾಯ ಮಾಡಿದ್ದರಿಂದ್ಲೇ..."

"ನಿಂಗೇನು ಮಹಾ ಅನ್ಯಾಯ ಆಗಿರೋದು? ನನ್ ಮದ್ವೇನೇ ಮುರಿದಿಟ್ಲಲ್ಲ!"

"ಅಯ್ಯೊ, ಯಾಕ್ಹಾಗೆ ಮಾತಾಡ್ತೀರಿ, ಸೀತಾ?"

ರಾಜಣ್ಣನವರು ಉಗುಳು ನುಂಗಿದರು. ನಾಳೆ ತಾನು ಅಸಹಾಯಕವಾಗಿ ಬಿದ್ದರೆ ಈ ಮಕ್ಕಳು ಆಳಿಗೊಂದು ಕಲ್ಲು ಹಾಕುವುದರಲ್ಲಿ ಸಂಶಯವಿಲ್ಲ ಅನಿಸಿತು. ಮೇಲೆದ್ದು ಮುಂದಿನ ಕೊಠಡಿಯ ಬಳಿ ನಡೆದರು. ಒಳಗಿನಿಂದ ಕಾವೇರಕ್ಕನ ನರಳಾಟದ ಧ್ವನಿ ಕೇಳಿಸಿತು. ಅವಳ ಕಿವಿಗೇನಾದರೂ ಇವರ ಚೀರಾಟ ಬಿದ್ದಿತೆ ಎಂಬ ಸಂಶಯದಿಂದ ಓರೆಯಾಗಿದ್ದ ಬಾಗಿಲನ್ನು ಮುಂದೆ ದೂಡಿ ನೋಡಿದರು. ಇಲ್ಲ, ಕಾವೇರಕ್ಕ ಯಥಾಪ್ರಕಾರ ಅಂಗಾತನಾಗಿ ಸೂರು ನೋಡುತ್ತಾ ಮಲಗಿದ್ದರು.

ಸೀತೆಯ ಮದುವೆ ಮುರಿದುಬಿದ್ದ ಬಳಿಕ ಮನೆ ಕುರುಕ್ಷೇತ್ರವಾಗಿದೆ ಎನಿಸಿತು ರಾಜಣ್ಣನವರಿಗೆ. ಸೀತೆ ಮಾತುಮಾತಿಗೂ ಕೂಗಾಡುತ್ತಾಳೆ. ಮನೆ ಬಿಟ್ಟು ಹಾಸ್ಟೆಲಿಗೆ ಹೋಗಿಬಿಡುತ್ತೇನೆ ಎಂದು ಹೆದರಿಸುತ್ತಾಳೆ. ಅವಳು ಹಾಗೆ ವರ್ತಿಸೋದೂ ಸಹಜಾನೇ. ನಾಲ್ಕು ದಿನ ಅತ್ತೆಯ ಮನೆಗೆ ಹೋಗಿ ಬಂದ ಗೌರಿಯದು ಇನ್ನೊಂದು ತೆರನ ಹಿಂಸೆ. ಮಗ ಪ್ರಕಾಶನಂತೂ ಮನೆಯಲ್ಲಿರಬಯಸುವುದೇ ಇಲ್ಲ. ಸೊಸೆಗೆ ಎಲ್ಲದರಲ್ಲೂ ನಿರಾಶಕ್ತಿ. ಈ ಮೊಮ್ಮಕ್ಕಳಿಂದಾಗಿ ತನಗೆ ಒಂದಿಷ್ಟು ಹೊತ್ತು ಹೋಗುತ್ತದೆ.

ಸಿದ್ದವ್ವ ಕಾವೇರಕ್ಕನಿಗೆ ಮಧ್ಯಾಹ್ನದ ಹಾಲು ಹಾಕಿ ಬಂದವಳು,

"ಯಾಕೋ ಅಮ್ಮಾವ್ರು ಪೂರಾ ಅಲು ಕುಡೀನಿಲ್ಲ. ಸುಸ್ತಾಗಿ ಕಾಣಸ್ತಾವರೆ, ಒಸಿ ಡಾಕ್ಟರನ್ನಾದ್ರು ಕರ್ಸಿ ನೋಡಿ", ಎಂದು ಆತುರದಿಂದ ಹೇಳಿದಳು.

ಹಾಗಾದರೆ ಸಾವು ಹತ್ತಿರ ಬಂದಿದೆಯೆ? ಅವಳು ಹೋಗೋದಾದ್ರೆ ಹೋಗಲಿ, ಯಾಕೆ ವೃಥಾ ಅವಳ ಸಂಕಟಾನ ಮುಂದುವರೆಸಬೇಕು?

ಡಾಕ್ಟರನ್ನು ಕರೆಸೋದು ಬೇಡ ಎಂದು ರಾಜಣ್ಣ ಯೋಚಿಸಿಕೊಂಡರು. ಮರುಕ್ಷಣ ಮಾನವೀಯತೆಯನ್ನೂ ಮರೆತ ತಮ್ಮ ನಿರ್ಧಾರಕೆ ತಮಗೇ ನಾಚಿಕೆಯಾಯಿತು. ಹೇಗೂ ನಾಳೆ ಬೆಳಿಗ್ಗೆ ಇಂಜಕ್ಷನ್ ಕೊಡೋದಕ್ಕೆ ಡಾಕ್ಟ್ರು ಬರ್ತಾರಲ್ಲ, ನೋಡ್ತಾರೆ. ಈಗ ಅವಸರವೇನಿಲ್ಲ, ಅಂದು ಕೊಳ್ಳುತ್ತಾ ಹೆಂಡತಿಯ ಮುಖ ನೋಡಲು ಧೈರ್ಯ ಸಾಲದೆ ಹಜಾರಕ್ಕೆ ನಡೆದರು.

ಊಟ ಮಾಡುತ್ತಿರುವಾಗ ಗೌರಿ ಹೇಳಿದಳು :

"ಅಪ್ಪ, ನಾನು ನಾಳೆ ಊರಿಗೆ ಹೋಗ್ತೀನಿ. ಇನ್ನೆಷ್ಟು ದಿನ ಅಂತ ಕಾಯೋದು?"

"ನಿನ್ನಿಷ್ಟವಮ್ಮ", ಎಂದರು ರಾಜಣ್ಣ.

ಕಾವೇರಕ್ಕನ ಕೊಠಡಿಯಿಂದ ನರಳಾಟ ತುಸು ಜೋರಾಗಿಯೇ ಕೇಳಿಸಿತು. ಆದರೆ ಎಲ್ಲರೂ ಅದು ಕೇಳಿಸದವರಂತೆ ನಟಿಸಿದರು.

"ಹಾಗಾದ್ರೆ ಒಂದು ಪಿಕ್ಚರಿಗೆ ಹೋಗ್ಬರೋಣ, ಗೌರಿ. ಭಾನು ವಾರ ತುಂಬಾ ಗಲಾಟೆ. ಬೇಗ ಹೋದ್ರೆ ಟಿಕೆಟ್ ಸಿಗುತ್ತೆ", ಎಂದಳು ಸೀತಾ.

ಅಕ್ಕ-ತಂಗಿ ಅಲಂಕರಿಸಿಕೊಂಡು ಮ್ಯಾಟಿನಿ ನೋಡಲು ಸಿದ್ಧವಾದರು. ಅವರು ಪೂಸಿಕೊಂಡ ಪರಿಮಳ ಹಜಾರವನ್ನೆಲ್ಲಾ ತುಂಬಿತು. ಹೊರಗಿನ ಕೊಠಡಿಯ ಶಬ್ದ ಯಾವುದನ್ನೂ ಕೇಳಲಿಚ್ಛಿಸದ ಅವರು ತಾವೇ ದೊಡ್ಡ ಗಂಟಲಲ್ಲಿ ಮಾತನಾಡತೊಡಗಿದರು.

ನಿಮ್ಮಾಯಿ ನರಳುತ್ತ ಬಿದ್ದಿದಾಳೆ. ಯಾವ ಗಳಿಗೆಗೆ ಹೇಗೋ ಏನೋ, ಇವತ್ಯಾಕೆ ಸಿನಿಮಾಗೆ ಹೋಗ್ತೀರಾ?-ಎಂದು ಹೇಳುವ ಬಯಕೆ ಯಾಯಿತು. ಆದರೂ ರಾಜಣ್ಣ ಮರುಮಾತನಾಡದೆ ತುಟಿ ಬಿಗಿಹಿಡಿದು ಕುಳಿತರು.

ಸಿದ್ದವ್ವ ಅಂದು ಸಂಜೆ ಎಂದಿಗಿಂತ ಬೇಗನೆ ಬಂದಳು. ಕಾವೇರಕ್ಕ ನವರ ಬಟ್ಟೆ ಬದಲಾಯಿಸಿದಳು, ಮೂಸಂಬಿರಸ ಹಿಂಡಿದಳು. ಅರ್ಧ

ದಷ್ಟು ಕುಡಿದು ಉಳಿದದ್ದನ್ನು ಕಾವೇರಕ್ಕ ಹಾಗೆಯೇ ಬಿಟ್ಟರು. ಸಿದ್ದವ್ವ ಅವರ ಕೂದಲು ನೇವರಿಸುತ್ತಾ, "ಅವ್ವಾವ್ರೇ ಏನಾಯ್ತದೆ? ಸಂಕಟ ವಾಯ್ತದಾ?" ಎಂದು ಪ್ರಶ್ನಿಸಿದಳು. ಕಾವೇರಕ್ಕನ ಕಣ್ಣುಗಳು ಅತ್ತಿತ್ತ ಹೊರಳಾಡಿದುವು. "ಬಾಯಿಲ್ಲ–ಯಾನು ಯೊಳ್ತಾರೆ? ಆ ಕಷ್ಟ ದ್ಯಾವರೊಬ್ಬಿಗೆ ಗೊತ್ತಾಯ್ತದೆ..." ಎಂದುಕೊಳ್ಳುತ್ತಾ ಸಿದ್ದವ್ವ ಕಂಬನಿದುಂಬಿದಳು.

ಸಿನಿಮಾ ಮುಗಿಸಿ ಅಕ್ಕ–ತಂಗಿ ಹಿಂದೆ ಬಂದರು. ಇಬ್ಬರೂ ತುಂಬಾ ಹುಮ್ಮಸ್ಸಿನಲ್ಲಿದ್ದಂತೆ ತೋರುತ್ತಿತ್ತು. ಸಿನಿಮಾದ ನಾಯಕ–ನಾಯಕಿಯರ ಸಂಭಾಷಣೆಗಳನ್ನೂ ಅವರು ತಮ್ಮ ತಾಯಿತಂದೆಯರಿಗಾಗಿ ಮಾಡಿದ ತ್ಯಾಗವನ್ನೂ ಅವರು ಅಲಂಕರಿಸಿಕೊಂಡ ರೀತಿಯನ್ನೂ ಇವರು ವಿಮರ್ಶಿಸುತ್ತಾ ಕುಳಿತರು. ಅವರು ಕಾಫಿ ಕುಡಿಯುತ್ತಿರುವಾಗ ಹಿತ್ತಲ ಬಾಗಿಲಿನಲ್ಲಿ ನಿಂತ ಸಿದ್ದವ್ವ ಹೇಳಿದಳು.

"ಸೀತಮ್ಮೋರೆ, ಅಮ್ಮಾವ್ರು ಕುಂಡೀಲಿ ಉಣ್ಣಾಗೈತೆ. ಅವುಸದಿ ಎಂಗೆ ಆಕ್ಬೇಕು ಅಂತ ತೋರ್ಸಿ, ಆಕುತೀನಿ."

"ನುಗ್ ಬೇಜಾರು ಬಂದ್ಹೋಗಿದಮ್ಮ. ಅಮ್ಮನ್ ವಿಸ್ಯ ಮಾತ್ರ ನನ್ನೇನೂ ಕೇಳ್ಬೇಡ, ನಂಗೂ ಅದಕ್ಕೂ ಯಾವ ಸಂಬಂಧಾನೂ ಇಲ್ಲ" ಎಂದು ಸೀತಾ ಕಟುವಾಗಿ ಉತ್ತರಿಸಿದಳು.

"ಇದ್ಯಾಕವ್ವ ಇಂಗಂತೀರಾ? ದ್ಯಾವ್ರು ಒಪ್ಪೋ ಮಾತ್ತಾ ಇದು?"

"ನೀನ್ ಹೋಗೇ ಅಧಿಕಪ್ರಸಂಗಿ!" ಎಂದು ಅಬ್ಬರಿಸಿದ ಸೀತಾ ಕಾಫಿ ಲೋಟವನ್ನು ನೆಲದ ಮೇಲೆ ಕುಕ್ಕುತ್ತಾ, "ಈ ಹಾಳುಮನೇಲಿ ಹಾಯಾಗಿ ಕಾಫಿ ಕುಡಿಯೋಕೂ ಗತಿಯಿಲ್ಲ!" ಎಂದು ತಿರಸ್ಕಾರದಿಂದ ಉಳಿದ ಕಾಫಿಯನ್ನು ಕುಡಿದು ಸಿನಿಮ ವಿಷಯ ಚರ್ಚಿಸಲು ಪಕ್ಕದ ಮನೆಗೆ ಹೋದಳು.

ಅಂದು ರಾತ್ರಿ ರಾಜಣ್ಣನವರಿಗೆ ನಿದ್ದೆಹತ್ತಲಿಲ್ಲ. ಕಾವೇರಕ್ಕನ ನರಳಾಟ ಕೇಳಿಸುತ್ತಲೇ ಇತ್ತು. ಮಧ್ಯೆ ಮಧ್ಯೆ ನೀರವತೆ, ಹಾಗಾದಾಗ

ಏನನ್ನೋ ನಿರೀಕ್ಷಿಸುತ್ತಿರುವವರಂತೆ ಅವರು ಎದ್ದು ಕುಳಿತುಕೊಳ್ಳು ತ್ತಿದ್ದರು. ಮತ್ತೆ ನರಳಾಟದ ಸದ್ದು ಕೇಳಿಬಂದಾಗ ನಿರಾಶರಾಗಿ ಅವರು ಮತ್ತೆ ಹಿಂದಕ್ಕೊರಗುತ್ತಿದ್ದರು.

ಬೆಳಗಾಯಿತು. ಸಿದ್ದವ್ವ ಬಂದಳು. ಎಲ್ಲರೂ ಮುಖ ತೊಳೆದು ಕೊಳ್ಳುವ ಗಡಿಬಿಡಿಯಲ್ಲಿರುವಾಗ ಅವಳು ಬಿಸಿನೀರು ತೆಗೆದುಕೊಂಡು ಮುಂದಿನ ಕೊಠಡಿಗೆ ಹೋದಳು. ಕಾವೇರಕ್ಕನ ಮೂಗಿನೊಳಗೆ ಹಾಕಿದ್ದ ರೈಲ್ಸ್ ಟ್ಯೂಬ್ ಕಿತ್ತು ಬಂದಿತ್ತು. ಅದರಿಂದಾಗಿಯೇ ಏನೋ ಮೂಗಿ ನಿಂದ ತುಸು ರಕ್ತವೂ ಬಂದಿತು. ಅವರ ಕಣ್ಣುಗುಡ್ಡೆಗಳು ಮೇಲೆ ಸಿಕ್ಕಿ ಹಾಕಿಕೊಂಡಹಾಗೆ ಅವಳಿಗೆ ಅನಿಸಿತು. ಉಸಿರು ತಡೆಸು ಬರು ತ್ತಿರುವಂತೆ ಭಾಸವಾಯಿತು.

ಸಿದ್ದವ್ವ ಗಾಬರಿಯಿಂದ ಹೊರಗೋಡಿದಳು.

"ಸ್ವಾಮ್ಯೋರೆ, ಒಸಿ ಬರ್ರಿ. ಅವವ್ರು ಎಂಗೆಂಗೋ ಮಾಡ್ತಾ ಅವ್ರೆ."

ರಾಜಣ್ಣ ದಾಪುಗಾಲು ಹಾಕಿಕೊಂಡು ಕೊಠಡಿಯೊಳನುಗ್ಗಿ ದರು—ಕಾವೇರಕ್ಕನ ಮುಖ ಕಿವುಚಿದಂತಾಯಿತು. ಕೈಕಾಲು ಒದ ಗಿದಂತೆ ಕಂಡಿತು. ಮತ್ತೆ ಪ್ರಶಾಂತತೆ ಆಮುಖದಲ್ಲಿ ನೆಲಸಿದಂತೆ ಭಾಸವಾಯಿತು.

ಸಿದ್ದವ್ವ, ಅವ್ವಾವ್ರ!..." ಎಂದು ದೊಡ್ಡ ರಾಗ ತೆಗೆದು ಅಳಲು ಆರಂಭಿಸಿದಳು.

ಭಾವನೆಗಳೆಲ್ಲ ಜಡವಾಗಿ ಹೆಪ್ಪುಗಟ್ಟಿದ್ದ ರಾಜಣ್ಣನವರ ಕಣ್ಣುಗಳಲ್ಲಿ ನೆಮ್ಮದಿ ಮೂಡಿತು. 'ಗೆದ್ದೆ ನಾನು' ಎಂದುಕೊಂಡರು.

ಕೊಠಡಿಯ ಬಾಗಿಲಿಗೆ ಸೊಸೆ ಮಕ್ಕಳು ಮೊಮ್ಮಕ್ಕಳು ಬಂದು ನಿಂತರು. ಅವರ ಮುಖದ ಮೇಲೆ ದಿಗ್ಭ್ರಮೆ ಒಡೆದು ಕಾಣುತ್ತಿತ್ತು.

"ಸದ್ಯ ಸಂಕಟ ಬಗೆಹರೀತಪ್ಪ!" ಎಂದು ಕೊಂಡಳು ಸೀತಾ.

"ಮುಗೀತಲ್ಲ ಅಂತೂ. ಇನ್ನು ಒಂದು ತಿಂಗ್ಳಾದ್ರೂ ತಾಯಿ ಮನೆಗೆ ಹೋಗಿದ್ದು ಬರ್ಬೇಕು" ಎನಿಸಿತು ಇಂದಿರೆಗೆ,

ಮೊಮ್ಮಗ ಎಲ್ಲರನ್ನೂ ನೋಕಿಕೊಂಡು. "ಅಜ್ಜಿ, ನಾನಿನ್ನು ನಿನ್ನತ್ರ ಬರ್ಬಹುದಾ?" ಎಂದು ಕೂಗುತ್ತಾ ಮಂಚದ ಹತ್ತಿರ ಬಂದ.

ಇದ್ದಕ್ಕಿದ್ದ ಹಾಗೆ ಎಲ್ಲರೂ ಅಳಲಾರಂಭಿಸಿದರು.

ಸೂರಿಗೆ ಕಚ್ಚಿಕೊಂಡಿದ್ದ ಕಾವೇರಕ್ಕನ ಕಣ್ಣುಗುಡ್ಡೆಗಳು ಕೆಳಗೆ ಸರಿದಂತಾದುವು. ಕೈ ಮಿಸುಕಿದಂತಾಯಿತು.



# ಕಾಶಿಯಲ್ಲಿ ಕಂಡದ್ದೇನು ?

—ಸರಿತಾ ಕುಸುಮಾಕರ ದೇಸಾಯಿ

ಶ್ರೀಧರಾಚಾರ್ಯರು ಊಟ ಮುಗಿಸಿ ತಲಬಾಗಿಲಲ್ಲಿ ಬಂದು ನಿಂತಾಗ ಸೂರ್ಯ ಆಕಾಶದ ಮಧ್ಯಕ್ಕೆ ಬಂದಿದ್ದ. ಅಂಗಳವೆಲ್ಲ ಸುಡು-ಸುಡು ತ್ತಿತ್ತು. ಬಾಯಿಯಲ್ಲಿ ಸಣ್ಣ ಬೆಲ್ಲದ ತುಂಡನ್ನು ಹಾಕಿಕೊಂಡು ಮತ್ತೊಮ್ಮೆ ಗಟಗಟ ನೀರು ಕುಡಿದು ಆಚಾರ್ಯರು ನಿತ್ಯದ ಪರಿಪಾಠದಂತೆ, ಅಂಗಳದಲ್ಲೇ ಕಟ್ಟಿಸಿದ್ದ ಬೇವಿನ ಮರದ ಕಟ್ಟೆಗೆ ಕುಂಟುತ್ತ ಬರುವಷ್ಟರಲ್ಲಿ ಅವರ ಬರೀ ಕಾಲುಗಳು ಬಿಸಿಲ ಝಳದಿಂದ ಭಗಭಗ ಎನ್ನತೊಡಗಿದ್ದವು. ಬೇವಿನ ಮರದಡಿಯ ಕಟ್ಟೆಯಲ್ಲಿ ಒರಗಿ ಬೀಸಣಿಗೆಯಿಂದ ಬೀಸಿಕೊಳ್ಳುತ್ತ 'ಉಸ್' ಎಂದು ಉಸಿರೆಳೆದುಕೊಂಡರು. ಬೊಜ್ಜು ಹೊಟ್ಟೆಯ ಮೇಲೆ ತೀಡಿಕೊಂಡಿದ್ದ ಗಂಧದ ನಾಮ ಒಣಗಿ ಬಿಟ್ಟಿತು. ಅಲ್ಲಲ್ಲಿ ಬೆವರಿಳಿದು ಹಸಿಯಾಗಿತ್ತಷ್ಟೆ. ಆಚಾರ್ಯರು ಹೊರಳಿ ಹೊರಳಿ ಮಲಗಿದರು. ಕಣ್ಣು ತೆರೆದರೆ ಬಿಸಿಲು, ಮುಚ್ಚಿದರೆ ನಿದ್ದೆ ಬರಲೊಲ್ಲದು...ಬರೀ ವಿಚಾರಗಳು...ಹಾಳು ಹಾಳು ಯೋಚನೆಗಳು...ಏನೋ ಮುಜುಗರ ಸಿಡಿ ಪಿಡಿ...ಬಲವಂತದಿಂದ ಎಲ್ಲಾ ವಿಚಾರಗಳನ್ನೂ ಬದಿಗೊತ್ತಿ ನಿದ್ದೆ ಮಾಡಲೇ ಬೇಕೆಂದು ನಿರ್ಧರಿಸಿ ಆಚಾರ್ಯರು ಪ್ರಯತ್ನಿಸಿದಾಗ ಸ್ವಲ್ಪ ಜೊಂಪು ಹತ್ತಿತು. ನಿದ್ದೆಗೆ ಭಂಗ ಬಂದದ್ದು ಪೋಸ್ಟ್‌ಮ್ಯಾನ್‌ನ ಗೊಗ್ಗರು ಧ್ವನಿ...ಗಡಬಡಿಸಿ ಎದ್ದು ಕುಳಿತ ಆಚಾರ್ಯರು ಬಂದ ಕಾಗದಗಳ ಮೇಲೆ ಕಣ್ಣೋಡಿಸಿದಾಗ ಅವರಲ್ಲಿ ತಮಗೆ ಬರಬೇಕಾದದ್ದು ಒಂದೂ ಇರಲಿಲ್ಲ. ಎಲ್ಲ ಮಗ ಸೊಸೆಗೆ ಬಂದದ್ದೆ. ಆತುರದಿಂದ ಬಂದು ನಿಂತ ಸೊಸೆ ತುಳಸಿಗೆ ಅವೆಲ್ಲ ಒಪ್ಪಿಸಿ ಮತ್ತೆ ಅಡ್ಡಾದರು. ಈಗ ಆಚಾರ್ಯರಿಗೆ ಸಿಟ್ಟು ಡಿಗ್ರಿ ಡಿಗ್ರಿಗಳಲ್ಲಿ ಏರತೊಡಗಿತು. ಮೊದಲೇ ಗಂಟು ಸಿಡುಕು

ಮುಖ ಮೇಲೆ ಸಿಟ್ಟು ಬಂದಾಗ ಮಕ್ಕಳಾಗಲಿ, ಸೊಸೆಯಾಗಲಿ ಮಾತ ನಾಡಿಸುವದಿರಲಿ...ಅವರ ಮುಂದೆ ಹಾಯ್ದು ಹೋಗುವುದೂ ದುಸ್ತರ.

ಆಚಾರ್ಯರು ಅದುಮಿ ತಡೆಹಿಡಿದಿದ್ದ ವಿಚಾರಗಳೆಲ್ಲ ಏಕಕಾಲಕ್ಕೆ ಹೊರಹೊಮ್ಮಿದಾಗ ಬೀಸಣಿಗೆಯಿಂದ ಬಲವಾಗಿ ಭರಭರ ಬೀಸಿಕೊಳ್ಳ ತೊಡಗಿದರು ಆದರೆ ಗಾಳಿಯಿಂದ ಅವರಿಗೇನೂ ಸಮಾಧಾನವಾಗುವಂತಿರ ಲಿಲ್ಲ ಅದು ಒಂದು ಕ್ರಿಯೆ ಮಾತ್ರ ಆಗಿತ್ತಷ್ಟೆ!

ದೂರದ ಹುಬ್ಬಳ್ಳಿಯಲ್ಲಿದ್ದ ಶ್ರೀಕಾಂತನ ಮೇಲೆ ಅವರ ಕೋಪಾಸ್ತ್ರ ಹೊರಟಿತ್ತು 'ತಂದೆ ಎಂಬ ಅಭಿಮಾನ ಬೇಡವೇ? ಪತ್ರಕ್ಕೆ ಮರುತ್ತರ ಬರೆಯುವಷ್ಟೂ ವ್ಯವಧಾನವಿರಲಿಕ್ಕಿಲ್ಲವೆ? ಮದುವೆಗೆ ಮುನ್ನ ಸ್ವಲ್ಪ ಪರವಾಗಿದ್ದಿಲ್ಲ...ಲಗ್ನವಾದಾಗಿನಿಂದ ಬದಲಾಗಿ ಬಿಟ್ಟಿದ್ದಾನೆ...ಆ ಬಿನ್ನಾಣ ಗಿತ್ತಿಯ ಬೆಡಗಿನಲ್ಲಿ ಎಲ್ಲರನ್ನು ಮರೆತೇಬಿಟ್ಟ ಹಾಗೆ ಇದೆ. ಏನಂದ್ರೂ ಶ್ರೀನಾಥನೇ ವಾಸಿ...ಬಾಯಿಯಿಂದ ಏನೂ ಮಾತನಾಡದಿದ್ದರೂ, ಗೌರವ ಇಟ್ಟಿದ್ದಾನೆ...ಇದು ಅಂತೂ ಹುಚ್ಚು...ಗೋಪಿ...ತಂದೆ ಎದರೆ ಏನೇನೂ ಅನಿಸೋದೇಯಿಲ್ಲ...ಕಾಲು ನೋವಾದರೆ ನಾನೇ ಕರೆದು ಒತ್ತಿಸಿಕೊಳ್ಳಬೇಕು...ಮೂರು ಹೊತ್ತೂ ಅಲೆಯುವದೇ ಅಲೆಯುವದು... ಅದೇನು ಕೆಲ್ಸವೋ ಏನೋ...ಇನ್ನು ಗೋಪಿಗೂ ಒಂದು ಮಾಡಿಬಿಡ ಬೇಕು...ಆ ಬರೋರಮಣಿ ನನಗಾಗಿ ಎಷ್ಟು ಮಾಡಬೇಕಾಗಿದೆ ಗೊತ್ತೇ ಇದೆ...ಈಗಿನ ಕಾಲದವರ ಹಣೇಬರಹ. ಶ್ರೀಕಾಂತನ ಹೆಂಡ್ತಿ ಬರೀ ಡಾಕ್ಟರಿಕೆ ಪಾಸು ಮಾಡಿದ್ದಾಳೋ?...ಅದರ ಜೊತೇಗೆ ಸ್ವಲ್ಪ ಅಡಿಗೆ ಕೆಲಸ ಕಲ್ತಿದಾಳೋ ಇಲ್ಲೋ ಅಲ್ಲಿಗೂ ಒಂದು ನಾಲ್ಕು ದಿವಸ ಹೋಗಿ ಬರೋಣಾ ಅಂದ್ರೆ ಆ ಮೂರ್ಖನಿಂದ ಎರಡಕ್ಷರ ಕಾಗದಾನೇ ಇಲ್ಲ...

ಮುಖ್ಯವಾಗಿ ಅಂದ್ರೆ ಅವಳು ಬದುಕಿ ಇದ್ದಿದ್ದರೆ...? ಈ ಪರಿಸ್ಥಿತಿ ಯಾಕೆ ಇರುತ್ತಿತ್ತು? ಈ ಮಕ್ಕಳ ಸೊಸೆಯರ ಮುಲಾಜೇ ಇಲ್ಲದೇ... ಇರಬಹುದಿತ್ತು. ಪುಣ್ಯವಂತೆ ಸತ್ತು ಸ್ವರ್ಗದಲ್ಲಿದ್ದಾಳೆ...ನನ್ನನ್ನು ಈ

ನರಕದಲ್ಲೇ ಬಿಟ್ಟು! ಹೆಂಡ್ತಿ ಸತ್ತ ಮೇಲೆ...ಈ ಮುದಿವಯಸ್ಸಿನಲ್ಲಿ ಪರಾಧೀನ ಆಗಿ ಹೆಚ್ಚು ದಿವಸ ಮಾತ್ರ ಬದುಕಬಾರದು.

"ಈ ಹಿರಿಸೊಸೆ ತುಳಸ ಈ ಮನೆಗೆ ಬಂದು ಹನ್ನೆರಡು ವರ್ಷ ಆಯ್ತು...ಐದು ಮಕ್ಕಳ ತಾಯಿ ಆಗಿದ್ದಾಳೆ" ಮೊನ್ನೆ ಮೊನ್ನೆವರೆಗೂ "ಮಾವಾ" ಅಂದ್ರೆ ಎಷ್ಟು ಮರ್ಯಾದೆ ಎಷ್ಟು ಆದರ; ಆದರೆ ಶ್ರೀಕಾಂತನ ಲಗ್ನ ಆದಾಗಿನಿಂದ ಇವಳ ವರ್ತನೆಯೇ ಬೇರೆ ಆಗಿದೆ...ಆ ಸೊಸಿ ಕಡಿಂದ್ಲೂ ಮಾಡಿಸಿಕೊಳ್ಳಿ ಅಂತ ಇರಬಹುದು ನಾನೇನು ಕಿವಿಯಲ್ಲಿ ಹುತ್ತು ಇಡುವ ದಿಲ್ಲ...ಎಲ್ಲ ಅರ್ಥವಾಗುತ್ತದೆ...ಎಲ್ಲರ ಗುಣವೂ ಗೊತ್ತಾಗ್ತದೆ... ಶ್ರೀನಾಥ ಎದುರಿಗೆ ನಿಂತು ಮಾತನಾಡದಿದ್ದವನು...ಮೊನ್ನೆ ಹೇಗೆ ವಾದಿಸಿದ...ಆ ಹುಚ್ಚು ಗೋಪಿನೂ ಅವರ ಕಡೆಗೇ...ನೀನು ಸುಮ್ಮನಿದ್ದು ಬಿಡಪ್ಪ ಅನ್ನುತ್ತಾನೆ ಎಲ್ಲದಕ್ಕೂ...ನಾನೇನು ತಪ್ಪು ಹೇಳಿದೆ? ಹೌದು ಇಷ್ಟು ವರ್ಷ ಮಡಿ ಮೈಲಿಗೆ ಆಚಾರದಲ್ಲಿ ದಿನ ಕಳೆದೋನು...ತುಳಸಿಯ ತಾಯಿ ಮಾಡಿದ ಅಡಿಗೆ ಹೇಗೆ ಊಟಮಾಡ್ಲಿ? ತುಳಸಿಗೆ ಏನಾಗಿದೆ? ಮೊವಲು ಬೆಳಿಗ್ಗೆ ಬೇಗ ಎದ್ದು ದೇವರ ಕಟ್ಟೆ ಸಾರಿಸಿ ರಂಗವಲ್ಲಿ ಹಾಕಿ ಪೂಜೆಗೆ ಸಜ್ಜುಗೊಳಿಸಿ ದೇವರ ನೈವೇದ್ಯಕ್ಕೆ ಅಣಿಗೊಳಿಸಿ ಎಷ್ಟು ವಿವೇಕ ದಿಂದ ಕೆಲಸ ಮಾಡಿಕೊಂಡು ಕುಲು ಕುಲು ಅಂತ ಇದ್ದೋಳು ಈಗ? ಎಂಟು ಗಂಟೆ ಹೊಡೆದ್ರೂ ಬಿದ್ದುಕೊಂಡೇ ಇರ್ತಾಳೆ ಎಲ್ಲ ಆ ಸಕೇಸಿದೇ ಓಡಾಟ...ನನಗಂತೂ ಹೇಸಿಕೆ ಬರ್ತದೆ...ಖಡಾ ಖಂಡಿತ ಹೇಳಿಬಿಟ್ಟೆ... ನನಗಾಗಿ ಯಾರೂ ಮಾಡೋದು ಬೇಕಾಗಿಲ್ಲ...ಎಲ್ಲ ನಾನೇ ಮಾಡಿ ಕೊಳ್ತೀನಿ...ನನ್ನ ಕೈಲೇ ನಾನು ಅಡಿಗೆ ಮಾಡಿಕೊಳ್ತಿರೋದು ಶ್ರೀನಾಥನಿ ಗೇನು ಗೊತ್ತಿಲ್ಲೇನು? ಗೋಪಿಗೂ ಗೊತ್ತಿಲ್ಲ...ಎಲ್ಲರೂ ತೆಪ್ಪಗೆ ಇದ್ದಾರೆ ಭಾಗೂ ಬದುಕಿದ್ದಿದ್ದರೇ? ನನಗೆ ಯಾರ ಮುಲಾಜಿನೂ ಬೇಕಾಗಿಲ್ಲ... ನನ್ನ ಪಿತ್ರಾರ್ಜಿತ ಹಾಗೂ ಸ್ವಯಂ ಆಸ್ತಿ ಆ ಗದ್ದೆ ನನ್ನ ಹೆಸರಿಗೇ ಇರೋ ತನಕ ಈ ಮಕ್ಕಳ ಚಿಕ್ಕಾಸಿನ ಆಸೆಯೂ ನನಗಿಲ್ಲ...ಶ್ರೀನಾಥ ಪ್ರೊಫೆಸರ್, ಶ್ರೀಕಾಂತ ಡಾಕ್ಟರು...ಅವರಿಂದ ನನಗಾಗುವ ಲಾಭವಾದರೂ ಏನು? ಯಾವ ಮಗ ಹತ್ತಿರ ಕುಳಿತು ನಾಲ್ಕು ಸುದ್ದಿ ಹೇಳ್ಬೇಕಾಗಿದೆ? ಯಾವ

ಮಗ 'ಅಪ್ಪ ನಿನಗೇನಾಗಿದೆ' ಎಂದು ವಿಚಾರಿಸುವವ? ಏನೇ ಅಂದ್ರೂ ಭಾಗೂ ಹೋಗಿ ನನ್ನ ಪರದೇಶಿ ಮಾಡಿಬಿಟ್ಲು.

ಬಿಸಿಲಿನ ಬೇಗೆ ಕ್ರಮೇಣ ಕಡಿಮೆಯಾಗತೊಡಗಿತು. ಆಚಾರ್ಯರ ಸಿಟ್ಟೂ ಏರಿ ಏರಿ ಇಳಿಯುವ ಘಂತದಲ್ಲಿದ್ದಾಗಲೇ ಮೊಮ್ಮಕ್ಕಳು ಸಾಲೆಯಿಂದ ಬಂದದ್ದು ಕಂಡ ತಕ್ಷಣ ಅವರು ಒದರಿದರು...'ಏ ಮಾಧು ಕಿಟ್ಟ...ಸಾಲ್ಯಾಗೆ ಅಂಥೋರ್ನ ಇಂಥೋರ್ನ ಮುಟ್ಟಿರ್ತೀರಿ ಕಾಲು ಕೈತೊಳೆದು ಕೊಳ್ರೀ' ಎಂದು, ಗೋಪಿ ಅದೇ ತಾನೇ ಹೊರಗಿನಿಂದ ಬರುತ್ತಲೇ "ನೀನು ಸುಮ್ಮನೇ ಇರಬಾರದೇನಪ್ಪ" ಎಂದ. ಸಿಟ್ಟು ನೆತ್ತಿಗೇರಿತು ಆಚಾರ್ಯರಿಗೆ. ಎಲ್ಲರ ಮೇಲೆ ಹುಟ್ಟಿದ ಕೋಪ ಭಂಡಾರವೆಲ್ಲ ಗೋಪಿಯ ತಲೆಗೆ ಘಟ್ಟಿಸತೊಡಗಿತು...ಮಕ್ಕಳಿಗೆ ಒಂದೆರಡು ಬುದ್ಧಿ ಮಾತು ಹೇಳುವ ಸ್ವಾತಂತ್ರ್ಯವೂ ತಮಗೆ ಇಲ್ಲವೆ? ಎಂದು ಕೆರಳಿದ ಆಚಾರ್ಯರು ಆ ಪ್ರಕರಣ ಅಲ್ಲಿಗೇ ಬಿಟ್ಟು ಬಿಡಲು ತಯಾರಾಗಲಿಲ್ಲ. ಪ್ರತಿನಿತ್ಯ ಪತಿ ಬರುವ ಹೊತ್ತಿಗೇ ಒಂದಲ್ಲ ಒಂದು ರೀತಿ ಹಗರಣ ಹುಟ್ಟುವುದು ತುಳಸಿಗೆ ತಲೆ ಬೇಸರ ತಂದಿತ್ತು. ಹೇಗಾದರೂ ಅವರನ್ನು ಸಮಾಧಾನಗೊಳಿಸಲೇ ಬೇಕಲ್ಲ ಎಂದು ಯೋಚಿಸತೊಡಗಿದಳು.

ಶ್ರೀಧರಾಚಾರ್ಯರು ಹಿಡಿದಿದ್ದ ಬೀಸಣಿಗೆಯನ್ನು ಒಂದು ಮೂಲೆಗೆ ಬೀಸಿ ಎಸೆದು ಕೈಲಿ ಹಿಡಿದಿದ್ದ ಒದ್ದೆ ಪಂಚೆಯಿಂದ ತಲೆ ಎದೆ ಒರಸಿ ಕೊಳ್ಳುತ್ತ, ವಟಗುಟ್ಟುತ್ತ ಫಥ ಪಥ ಹಾಕತೊಡಗಿದರು. ಬೇಕೆಂತಲೇ ಕೆದಕಿ ಕೆದಕಿ ಜಗಳ ಬೆಳೆಯಿಸುವ ಹವಣಿಕೆಯಲ್ಲಿದ್ದರು. ತುಳಸಿ ಒಳಬಾಗಿಲಲ್ಲಿ ನಿಂತು ಬಹುಮೆಲ್ಲಗೆ ಹೇಳಿದ್ದು ಕೇಳಿಸಿತು. "ಫಲಾಹಾರ ಆಗಿದೆ...ಅಡಿಗೆ ಮನೆಗೆ ಬರ್ತೀರಾ" ಎಂದು. ಆಚಾರ್ಯರು ಗೊಂದಲಕ್ಕೆ ಬಿದ್ದರು. ಫಲಹಾರಕ್ಕೆ ಎದ್ದರೆ ಈ ಪ್ರಸಂಗದಲ್ಲಿ ತಮ್ಮ ಸೋಲನ್ನು ಒಪ್ಪಿಕೊಂಡಂತಲ್ಲವೆ? ಆದರೆ 'ಶಿರಾದ ಸುವಾಸನೆ ಅವರ ಮೂಗಿಗೆ ಬಡಿದಿತ್ತು. ತಿನ್ನುವ ಚಪಲಕ್ಕೆ ಕಡಿವಾಣ ಹಾಕಲು ಅಸಮರ್ಥರಾದ ಆಚಾರ್ಯರು ಮಡಿಯುಟ್ಟು ಕೊಂಡು ಮಣೆಮೇಲೆ ಕುಳಿತೇ ಬಿಟ್ಟರು. ಬಾಳಿ ಎಲೆಯಲ್ಲಿ ಮಲ್ಲಿಗೆ

ಯಂತೆ ಅರಳಿ ಹಗುರಾಗಿ ಮಿದುವಾಗಿ ತುಪ್ಪದಲ್ಲಿ ಗದಗದ ಕೇಸರಿ ಪರಡಿದ್ದ 'ಶಿರಾ' ಆಚಾರ್ಯರ ಗಂಟಲಲ್ಲಿ ಇಳಿಯತೊಡಗಿದಂತೆ ಸೊಸೆ ಬಗ್ಗೆ ಆಗ ತಾಳಿದ್ದ ಭಾವನೆಗಳೆಲ್ಲ ಮರೆತೇ ಹೋಗಿತ್ತು. ಅದರ ಜೊತೆಗೇ ಪ್ರತಿನಿತ್ಯ ಹೀಗೇ ಯಾಕೆ ಕಾಳಜಿವಹಿಸಬಾರದು' ಎಂಬ ಆತಂಕದ ನೋವೂ ಅವರನ್ನಾವರಿಸಿತ್ತು. ಮಗುವಿನ ಮುಗ್ಧತೆಯಿಂದ ಸಂತೃಪ್ತಿ ಯಿಂದ 'ಶಿರಾ' ತಿನ್ನುತ್ತಿದ್ದ ಮಾವನವರನ್ನು ಅನುಕಂಪದಿಂದ ನೋಡುತ್ತ ಬಾಗಿಲಲ್ಲಿ ನಿಂತಿದ್ದ ಸೊಸೆಯ ಮನದ ಕೋಲಾಹಲವನ್ನು ಅವರು ಗ್ರಹಿ ಸಲು ಅಸಮರ್ಥರಾಗಿದ್ದರು.

ಬೇವಿನ ಕಟ್ಟೆಯಲ್ಲಿ ಒರಗಿ ಒಳ ಪಡಸಾಲೆಯ ಕೋಣೆಯಲ್ಲಿದ್ದ ಸೊಸೆಗೂ ಕೇಳಿಸಲಿ ಎಂಬ ಉದ್ದೇಶದಿಂದಲೇ ತಮ್ಮ ಗೆಳೆಯ ವೆಂಕಣ್ಣನಿಗೆ ಆಚಾರ್ಯರು ಗಟ್ಟಿಯಾಗಿ ಹೇಳತೊಡಗಿದ್ದರು. ಸೊಸೆ ಮಕ್ಕಳನ್ನು ಬೈಯುವದು, ಕ್ಷಣದಲ್ಲೇ ಹೊಗಳುವದು, ಹೊಗಳಿದ್ದನ್ನು ಮರೆತು ತಕ್ಷಣ ತೆಗಳುವದು ವೆಂಕಣ್ಣ ಪ್ರತಿನಿತ್ಯ ಕೇಳುವ ನುಡಿಮುತ್ತುಗಳೇ. ಆಚಾರ್ಯರು ಹೇಳಿದ್ದಕ್ಕೆಲ್ಲ 'ಊಹೂಂ ಅಲ್ಲ' ಎಂಬ ಧೈರ್ಯ ವೆಂಕಣ್ಣ, ಪಡೆದು ಬಂದಿರಲಿಲ್ಲ. ಇಂದು ಸಹ...ಆಚಾರ್ಯರ ಅಂತರ್ಯ ಊಹಿಸಿ ವೆಂಕಣ್ಣ, ಆಚಾರ್ಯರು ಹುಬ್ಬಳ್ಳಿಗೆ ಹೋಗುವೆ ಎಂದಾಕ್ಷಣ "ಅಷ್ಟೇ ಮಾಡ್ರಿ, ಅವರ ಕಾಗದದ ದಾರಿ ಯಾಕೆ ನೋಡ್ತೀರಿ" ಎಂದು ಸಲಹೆ ಕೊಟ್ಟರು.

ನಿರ್ಧರಿಸಿದಂತೇ ಶ್ರೀಧರಾಚಾರ್ಯರು ಹುಬ್ಬಳ್ಳಿಗೆ ಹೊರಟು ನಿಂತಾಗ ಯಾರೂ ಬೇಡ ಎನ್ನದಿರುವುದು ಅವರಿಗೆ ಸಖೇದಾಶ್ಚರ್ಯಕ್ಕೆ ಕಾರಣವಾಯಿತು. ಕೋಪ...ದುಃಖವು ಏಕಕಾಲದಲ್ಲಿ ಉದ್ಭವಿಸಿತ್ತು. ತಮ್ಮ ಇರುವಿಕೆಯಿಂದ ಎಲ್ಲರಿಗೂ ಬೇಸರವೇ ಎಂದು ಶಂಕಿಸಿ ಆಚಾ ರ್ಯರು ಬಳಲಿದರು, ಹುಬ್ಬಳ್ಳಿಯ ಮಗನ ಮನೆಯ ಸುಖದ ಕಲ್ಪನೆಯ ಚಿತ್ರದಿಂದ 'ಅಲ್ಪ' ಸಮಾಧಾನವಾಯಿತವರಿಗೆ ಅಲ್ಲಿ ಗೂಸ ..ಗೂಡಿ ಇಬ್ಬರೇ...ಏನಾದರೂ ಅಪರೂಪವಾದದ್ದು ಮಾಡಿಸಿ ತಿನ್ನಬಹುದು ..

ನೋಡೋಣ...ಅಲ್ಲೇ ಸುಖವಾಗಿದ್ದರೆ...ಇಲ್ಲಿಗೆ ಬರುವುದೇ ಬೇಡ... ನಾನು ಕಟ್ಟಿಸಿದ ಮನೆ ಎಂಬ ಒಂದೇ ಅಭಿಮಾನಕ್ಕೆ ಬರಬೇಕಷ್ಟೆ... ಇಲ್ಲದಿದ್ದರೆ ಈ ಜಂಜಾಟ ಯಾರಿಗೆ ಬೇಕು?

ಹುಬ್ಬಳ್ಳಿಗೆ ಬಂದಾಗ ಆಚಾರ್ಯರಿಗೆ ಎಣಿಸಿದ್ದಕ್ಕಿಂತಲೂ ಹೆಚ್ಚಿನ ಸ್ವಾಗತ ಸಂಭ್ರಮ ಸಿಕ್ಕಿತು. ಮನೆ ಅಚ್ಚುಕಟ್ಟಾಗಿ ಶಾಂತವಾಗಿತ್ತು. ತಂದೆಗೆ ಸ್ವಲ್ಪವೂ ಅನಾನುಕೂಲವಾಗದಂತೆ ಶ್ರೀಕಾಂತ ಕಾಳಜಿವಹಿಸಿ ಮಡಿ ಅಡಿಗೆಗಾಗಿ ಉಡುಪಿ ಕಡೆಯ ನಾರಾಯಣ ಎಂಬುವನನ್ನು ನೇಮಿ ಸಿದ. ದೇವರ ಪೂಜೆಸಾಮಗ್ರಿ, ಕೃಷ್ಣಾಂಜನ ಪೆಟ್ಟಿಗೆ ಮುದ್ರೆ, ಅಕ್ಷತೆಉಂಡಿ ಸಾಣೆಕಲ್ಲು ಎಲ್ಲವನ್ನು ಶ್ರೀಕಾಂತ ತಂದಿಟ್ಟಿರುವುದು ಕಂಡು ಆಚಾರ್ಯರು ಉಬ್ಬಿಹೋದರು. ಅವಲ್ಲ ಅಲ್ಲೇ ಇರಲಿಕ್ಕಿಲ್ಲವೆಂದು ಆಚಾರ್ಯರು ತಮ್ಮ ಜೊತೆಗೆ ಒಯ್ದಿದ್ದರು. ಮಗ ತಮಗಾಗಿ ಮಾಡಿ ರುವ ವ್ಯವಸ್ಥೆ, ಸೊಸೆ ಶಾಲಿನಿಯ ವಿನಯ ನೋಡಿ ಆಚಾರ್ಯರು ಎಂಟು ದಿವಸ ಹಾಯಾಗಿ ಕಳೆದರು. ಎಂಟೇ ದಿವಸ ಅವರು ಸಮಾ ಧಾನ ಶಾಂತವಾಗಿದ್ದುದ್ದು...ನಂತರ ಪ್ರಾರಂಭವಾಯಿತು ಅವರ ಬಿಡಿಸ ಲಾಗದ ಸಮಸ್ಯೆಗಳು. 'ಮಾವನವರು ಎಷ್ಟು ಒಳ್ಳೇಯವರು' ಎಂದು ಶಾಲಿನಿ ಹಿಗ್ಗುವಷ್ಟರಲ್ಲೇ ಅವರ ಅಸಲುರೂಪ ಕಾಣುವ ಪ್ರಸಂಗ ಬಂದೇ ಬಿಟ್ಟಿತು.

ಶಾಲಿನಿ, ಶ್ರೀಕಾಂತ ಬೆಳಿಗ್ಗೆ ಎಂಟು ಗಂಟೆಗೆ ಆಸ್ಪತ್ರೆಗೆ ಹೋದರೆ ಒಂದು ಗಂಟೆಗೋ ಎರಡು ಗಂಟೆಗೋ ಮರಳುತ್ತಿದ್ದದ್ದು. ಅನಂತರ ಊಟ...ಅಲ್ಪ ವಿರಾಮ. ನಾಲ್ಕು ಗಂಟೆಗೆ ಪುನಃ ಹೋಗಿಬಿಡುತ್ತಿ ದ್ದರು...ಮತ್ತೆ ಬರುವದು ರಾತ್ರಿ ಎಂಟು ಅಥವಾ ಒಂಬತ್ತಕ್ಕೇ, ಪೂರಾ ಮನೆ ತಮಗೇ ಒಪ್ಪಿಸಿದಂತೆ ಇರುತ್ತಿತ್ತು. ಮೊದಲೆರಡು ದಿವಸ ಆಚಾ ರ್ಯರಿಗೆ ಹಿಗ್ಗೇ ಎನಿಸಿತು. ಆದರೆ ನಾಲ್ಕೈದು ದಿನಗಳ ನಂತರ ಆಚಾರ್ಯರ ಅಸಮಾಧಾನ ಪರಮಾವಧಿಗೆ ತಲುಪಿತ್ತು. ಆ ಸುಟ್ಟ ಅಡಿಗೆಯವನು ಬಡಿಸೋದು ಉಂಡು ಮನೆ ಕಾಯುತ್ತ ಬಿದ್ದಿರಲು

ನಾನೇನು ಇವರ ಮನೆಯ ನಾಯಿಯೆ!? ತಮ್ಮ ಮೋಜು ತಮಗೆ!!' ನನ್ನ ಕೇಳುವವರೇ ಇಲ್ಲ" ಆಚಾರ್ಯರು ಗೊಣಗಿಕೊಂಡರು,

ಶಾಲಿನಿ ಒಮ್ಮೆ ಮಧ್ಯಾಹ್ನ ರೆಫ್ರಿಜರೇಟರ್‌ನಲ್ಲಿಟ್ಟ ಜ್ಯೂಸ್ ತೆಗೆದು ಶರಬತ್ ಮಾಡಿ ಕೊಟ್ಟಾಗ ಆಚಾರ್ಯರು ತಮ್ಮ ಮಡಿ ಆಚಾರ-ವಿಚಾರ ಬದಿಗೊತ್ತಿ ಕುಡಿದುಬಿಟ್ಟರು. ಅದರಂತೆ ತಾವು ಮರಳುವುದು ತಡ ವಾದಲ್ಲಿ ತೆಗೆದುಕೊಳ್ಳಬೇಕೆಂದು ಶಾಲಿನಿ ತೋರಿಸಿ ಹೋಗಿದ್ದಳು.

ಆದರೆ ಅಂದು ಬರುವಷ್ಟರಲ್ಲಿ ಮಾವನವರು ಉಗ್ರ ನರಸಿಂಹ ಅವ ತಾರ ತಾಳಿದ ಹಿನ್ನೆಲೆ ಅವಳಿಗೆ ಅರ್ಥವಾಗಲಿಲ್ಲ. ನಿರರ್ಗಳವಾಗಿ ಬಯ್ಗಳು ಹೊರಬಿದ್ದವು "ಅಬ್ರಾಹ್ಮಣ್ಯ ಮನೆ ಆಗಿದೆ...ಕ್ರಿಶ್ಚಿಯನ್, ಮುಸಲ್ಮಾನರ ಮನೆ ಮಾಡೀರಿ...ಅದರಲ್ಲಿ ಜ್ಯೂಸ್ ತೆಗೆದುಕೊಳ್ಳಲು ಹೋದ್ರೆ ಸಾಲಾಗಿ ಕೋಳಿಮೊಟ್ಟೆ ತುಂಬಿವೆ...ಏನು ಅನ್ಯಾಯ ಏನು ಅನ್ಯಾಯ! ! ನನ್ನ ಕಣ್ಣೆದುರಿಗೇ ಈ ಹೊಲಸು ನೋಡಲಾರೆ...ನಾನು ಇವತ್ತೇ ಹೊರಟು ಹೋಗ್ತೀನಿ."

ಶ್ರೀಕಾಂತ ವಾದಿಸಿದ "ನೀನು ತಿನ್ನುವದಿಲ್ಲ ಬಿಟ್ಟುಬಿಡು...ಆದರೆ ತಿನ್ನುವವರಿಗೆ ನಿನ್ನ ಅಭ್ಯಂತರವೇಕೆ?."

"ಬಾಯಿಮುಚ್ಚು" ಆಚಾರ್ಯರು ಗುಡುಗಿದರು. ಶಾಲಿನಿ ನಡುಗಿ ದಳು. ಆಚಾರ್ಯರು ಆ ಮೊಟ್ಟೆಗಳನ್ನೆಲ್ಲ ಬೀದಿಗೆ ಎಸೆದಾಗ ಶ್ರೀಕಾಂತ ತನ್ನ ಕೋಪ ತಡೆದುಕೊಳ್ಳಲು ಪ್ರಯತ್ನಿಸಿದ."

ಆಚಾರ್ಯರು ಮೆಲ್ಲಗೆ ಶಾಲಿನಿಯ ಬಗ್ಗೆ ತಮ್ಮ ಪ್ರತಿಕ್ರಿಯೆ ಹೊರ ಪಡಿಸುತ್ತ ಕೈಯಲ್ಲಿ ಬಳೆ ಹಾಕಿಕೊಳ್ಳಲೇಬೇಕು. ಗೌರಿಪೂಜೆ, ತುಳಸೀ ಪೂಜೆ ಯಾಕೆ ಮಾಡಲಿಲ್ಲ? ದೇವರ ಮನೆಯಲ್ಲಿ ನಂದಾದೀಪ ಹಚ್ಚ ಬಾರದೆ? ಎಂದೆಲ್ಲ ಹೇಳಿದಾಗ ಶಾಲಿನಿ ತುಟಿಪಿಟಕ್ಕೆನ್ನದೇ...ತನ್ನ ತಪ್ಪು

ಎಲ್ಲ ಒಪ್ಪಿಕೊಂಡು ಮತ್ತೊಮ್ಮೆ ಅಂತಹ ತಪ್ಪು ಮಾಡುವದಿಲ್ಲ ಎಂದು ಕೇಳಿಕೊಂಡು ಅನಂತರವೇ ಆಚಾರ್ಯರು ಊಟಕ್ಕೆ ಎದ್ದದ್ದು. ಕೈ ತೊಳೆದು ಹೊರ ಬರುತ್ತಿದ್ದಂತೆ...ಶ್ರೀಕಾಂತ ಶಾಲಿನಿಗೇ ಗದರಿಸು ತ್ತಿದ್ದದ್ದು..."ನೋಡ್ತಿದ್ದೆ ಅಪ್ಪ ಇವತ್ತೊಂದು ದಿವಸ ಉಪವಾಸ ಇರ್ತಿ ದ್ದೆನೋ ಅಂತ...ಎಲ್ಲದಕ್ಕೂ ಎಲ್ಲರೂ ಜೀ, ಜೀ, ಎನ್ನುವುದರಿಂದಲೇ ಅಪ್ಪನಿಗೆ ತನ್ನ ತಪ್ಪಿನ ಅರಿವೇ ಹುಟ್ಟುವದಿಲ್ಲ. ಬರೀ ಇತರರಿಗೆ ಉಪ ದೇಶ ಮಾಡಲಿಕ್ಕಾಗಿಯೇ ತನ್ನ ಅವಿರ್ಭಾವ ಎಂದು ಅಪ್ಪ ಭಾವಿಸಿಬಿಟ್ಟಿ ದ್ದಾನೆ...ಎಂದು ಗೊಣಗಿದ್ದು ಕಿವಿಗೆ ಬಿದ್ದು ಆಚಾರ್ಯರಿಗೆ ಸಂಕಟ ವೆನಿಸಿತು...ತಾವು ಏನು ತಪ್ಪು ಮಾಡಿದ್ದು? ಸೊಸೆ ಯೊಗ್ಯ ಗೃಹಿಣಿ ಆಗಲಿ ಎಂದೇ ಅಲ್ಲವೇ ನಾಲ್ಕು ಮಾತು ಹೇಳಿದ್ದು...ಓಹೋಹೊ! ಇವ ನೊಬ್ಬ ದೊಡ್ಡ ಡಾಕ್ಟರ್ ತಂದೆಗೆ ಕಿಮ್ಮತ್ತೇ ಬೇಡವೇ...ಸೊಸೆಗೆ ಹೇಳು ವಷ್ಟೂ ಅಧಿಕಾರ ನನಗಿಲ್ಲವೆ...? ಶ್ರೀಕಾಂತನಿಗೆ ಇಷ್ಟೂ ತಿಳಿಬಾರ್ದೆ... ಹೆಂಡ್ತಿನ್ನ ತಲೇ ಮೇಲೆ ಕೂಡ್ಸಿಕೊಂಡು ಬಿಡುತ್ತಾನೆ. ಭಾಗು ಇದ್ದಾಗ ತಾವು ಇಷ್ಟು ಸಲಿಗೆ ಎಂದಾದರೂ ಕೊಟ್ಟಿದ್ವರೆ? ಛೆ...ಛೆ...

ಎರಡು ತಿಂಗಳು ಕಳೆಯುವಷ್ಟರಲ್ಲಿ ಆಚಾರ್ಯರಿಗೆ ಆ ವಾತಾವರಣ, ಆ ಮನೆ, ಊರು ಎಲ್ಲ ಬೇಸರದ ನರಕ ಎನಿಸಿಬಿಟ್ಟಿತ್ತು. ಆಚಾರ್ಯರು ಮನದಲ್ಲೇ ಮಿಡುಕತೊಡಗಿದ್ದರು...ಮಗನೂ ಡಾಕ್ಟರ್. ಸೊಸೆನೂ ಡಾಕ್ಟರೂ...ಮುಪ್ಪು ಇಲ್ಲೇ ಕಳೆದರಾಯ್ತು ಎಂದು ನಾನು ಇಲ್ಲಿಗೆ ಬಂದೆ. ಈ ಎರಡು ತಿಂಗಳಲ್ಲಿ ಸುಮ್ಮನೇ ಅಂತ ಆದ್ರೂ ಆಗಲಿ, ಒಂದಾದರೂ ಇಂಜೆಕ್ಷನ್ ಕೊಟ್ಟಿದ್ದಾರಾ? ಹೋಗ್ಲಿ. ಏನಾದರೂ ಟಾನಿಕ್? ಬರೀ ಹೊಟ್ಟೆಗೆ ಇಷ್ಟು ಹಾಕಿದ್ರೆ ಗೆದ್ದ್ಹೋಯ್ತು ಅಂದುಕೊಂಡು ಬಿಟ್ಟಿದ್ದಾರೆ. ಸಣ್ಣ ಅಕ್ಕಿ ಅನ್ನ ಬೆಣ್ಣೆ, ಕಾಸಿದ ತುಪ್ಪ ಬಿಟ್ಟು ಇಲ್ಲಿಗೆ ಬಂದದ್ದೇ ತಪ್ಪು. ಸದಾ ಇವರಿಗೆ ಸಿನಿಮಾ, ನಾಟಕ, ಕ್ಲಬ್ಬು ಒಂದು ದಿನನಾದ್ರೂ ಉಪ ಚಾರಕ್ಕೆ ಅವ ಆದ್ರೂ 'ಅಪ್ಪಾ' 'ನೀನೂ ಬಾ' ಅಂತ ಕರೀತಾರೇನು? ಇಲ್ಲಿಗಿಂತ ಅಲ್ಲಿಯೇ ಪರವಾಯಿಲ್ಲ ಪುರಾಣಕ್ಕಾದರೂ ಹೋಗ್ತಿದ್ದೆ... ವೆಂಕಣ್ಣ ನಿತ್ಯ ಬರ್‍ತಿದ್ದ...ಗೋಪಿ ನಿತ್ಯ ಹಾಸಿಗೆ ಹಾಸಿ ಕಾಲು ಒತ್ತುತ್ತಿದ್ದ...

ಮಾಘು, ಕಿಟ್ಟು ಕಥೆ ಹೇಳು ಅಂತ ದುಂಬಾಲು ಬೀಳುತ್ತಿದ್ದುವು. ಹೊತ್ತು ಎಷ್ಟು ಸರ್ರನೇ ಕಳೆದ್ಹೋಗುತ್ತಿತ್ತು..."ಏನೋ ಪಾಪ...ತುಳಸಳ ಆರೋಗ್ಯ ಏನಾಗಿತ್ತೊ, ಏನೋ ಹೊತ್ತಾಗಿ ಏಳುತ್ತಿದ್ದಳು ಈ ಹೆಣ್ಣು ಮಕ್ಕಳ ಜಡ್ಡು ನಮಗ್ಹೇಗೆ ತಿಳಿದೀತು? ಇದ್ದಕ್ಕಿದ್ದಂತೆ ಅವರಿಗೆ ಆ ಸೊಸೆಯ ಮೇಲೆ ಅಭಿಮಾನ ಉಕ್ಕಿ ಹರಿಯತೊಡಗಿತು. ತಕ್ಷಣ ಅಲ್ಲಿಂದ ಹೊರಡುವ ನಿರ್ಧಾರ ಮಾಡಿಕೊಂಡು ಕೃಷ್ಣಾಂಜನ ಪೆಟ್ಟಿಗೆ ಕಟ್ಟಲು ಉದ್ಯುಕ್ತರಾದರು.

ಹೊರಟು ನಿಂತವರಿಗೆ ಉಪಚಾರಕ್ಕಾದರೂ "ಇನ್ನು ನಾಲ್ಕು ದಿವಸ ಇರಪ್ಪ" ಎಂದು ಮಗ ಹೇಳಬಹುದು, ಎಂದುಕೊಂಡಿದ್ದ ಆಚಾರ್ಯರಿಗೆ ನಿರಾಶೆಯೇ ಆಯ್ತು. ಮಗನ ಪ್ರತಿಕ್ರಿಯೆ ಏನೆಂದು ತಿಳಿಯಲು ಆತುರ ರಾಗಿ ಮಗ...ಸೊಸೆಯ ಸಂಭಾಷಣೆ ಆಲಿಸತೊಡಗಿದ ಆಚಾರ್ಯರಿಗೆ ಆಘಾತವೇ ಕಾದಿತ್ತು. 'ಮಾವನವರು ಹೊರಟುಬಿಡುವರಂತೆ' ಎಂದು ವ್ಯಥೆ ತುಂಬಿದ ಧ್ವನಿಯಿಂದ ಶಾಲಿನಿ ಹೇಳಿದ್ದಕ್ಕೆ ಶ್ರೀಕಾಂತನ ಪರಿಹಾಸ್ಯದ ಮರುತ್ತರ ಕೇಳಿಸಿತು" ಹೋದರೆ ಹೋಗ್ಲಿ ಬಿಡು...ನೀನ್ಯಾಕೆ ಕೊರಗ್ತಿ ಆತ ಸುಖವಾಗಿರಲಿ ಅಂತ ನಾವು ಎಷ್ಟು ಒದ್ದಾಡಿದರೂ ಆತನಿಗೆ ತೃಪ್ತಿ ಎಲ್ಲಿದೆ? ಸಮಾಧಾನ ಎಲ್ಲಿದೆ? ತನ್ನ ತಲೆಯಲ್ಲಿ ಬಂದದ್ದೇ ನಡೆಸ್ತಾನೆ... ಇಲ್ಲಿ ಏನು ಕೊರತೆಯಾಗಿತ್ತು? ಹಾಲು, ಹಣ್ಣು, ತರಕಾರಿ!! ಆದ್ರೂ ಸಹ ಹೋಗ್ತೀನಿ ಅಂದ್ರೆ ? ಹೋಗ್ಲಿ ! ಇನ್ನು ಅಲ್ಲಿ ಆದ್ರೂ ಅಣ್ಣ ಎಷ್ಟು ಹೆದರಿ ಹೆದರಿ 'ಜೀ ಜೀ' ಅಂತಿರುತ್ತಾನೆ...ಮಕ್ಕಳ ಮನೆ ಅದ್ರೂ ಅತ್ತಿಗೆ ಎಷ್ಟು ಕಳಕಳಿಯಿಂದ ಒಂದು ಮಗುವಿನಂತೆ ಸಾಕ್ತಾರೆ ಆದ್ರೂ ಅಲ್ಲಿ ಯಾದ್ರೂ ಆರಾಂ ಇರ್ತಾರೇನು? ಸ್ವರ್ಗ ಸುಖ ಹುಟ್ಟಿಸಿಕೊಟ್ರೂ, ತೃಪ್ತಿ ನೆಮ್ಮದಿ ತಂದುಕೊಳ್ಳದೇ ಇದು ನರಕ ಅಂತಾನೇ ಗೋಳಾಡುತ್ತಿರುತ್ತಾನೆ. ಮುಂದೆ ಆಲಿಸಿ ಕೇಳುವಷ್ಟು ತಾಳ್ಮೆ ಆಚಾರ್ಯರಲ್ಲಿ ಉಳಿಯಲಿಲ್ಲ. ಮುಖ ಸಿಂಡರಿಸಿ ಶಪಥ ಮಾಡಿಕೊಂಡರು..."ಇನ್ನೊಮ್ಮೆ ಈ ಶತ ಮೂರ್ಖನ ಮನೆಗೆ ಕಾಲು ಹಾಕಿದರೆ ಆಣೆ!"

ಹಿರಿಮಗನ ಕಾಗದದಿಂದ ತುಳಸ ಏಳು ತಿಂಗಳ ಗರ್ಭಿಣಿಯೆಂದು

ತಿಳಿಯಿತು. ಹುಬ್ಬಳ್ಳಿಯಿಂದ ಹೊರಡಬೇಕೆನ್ನುವಷ್ಟರಲ್ಲಿ ಆ ಕಾಗದದ ಒಕ್ಕಣಿಕೆಯಿಂದ ಆಚಾರ್ಯರು ಧರೆಗಿಳಿದೇ ಹೋದರು. ಹೊಸದೊಂದು ಸಮಸ್ಯೆ ಮುಂದೆ ನಿಂತಿತ್ತು. ಏಳು ತಿಂಗಳಾದಮೇಲೆ ಮಡಿಯುಟ್ಟು ಅಡಿಗೆ ಮಾಡಿದರೂ ಅದು ಮೈಲಿಗೆ. ಆಚಾರ್ಯರು ವಿಲಿ ವಿಲಿ ಒದ್ದಾಡ ತೊಡಗಿದರು. ಹುಬ್ಬಳ್ಳಿಯಲ್ಲಿ ನಿಂತಿರುವುದೂ ಮುಳ್ಳಿನ ಮೇಲೇ ನಿಂತ ಹಾಗೆ ಆಗಿತ್ತು. ಯಾವಾಗ ಇಲ್ಲಿಂದ ಹೊರಡಲಿ? ಎಂದು ಎದುರು ನೋಡುತ್ತಿದ್ದ ಆಚಾರ್ಯರಿಗೆ ದಿಕ್ಕೇ ತೋಚದಂತಾಯಿತು. ಕ್ಷಣ ಕ್ಷಣಕ್ಕೂ ತಾವು 'ಪರದೇಶಿ' 'ಪರದೇಶಿ' ಎನಿಸತೊಡಗಿತ್ತು. ತಮ್ಮ ಶರೀರದ ಅಂಗಾಂಗಗಳನ್ನೇ ಯಾರೋ ಕಿತ್ತೆಸೆಯುತ್ತಿರುವರೆಂಬಷ್ಟು ನೋವು ಅವರಲ್ಲಿ ಉಂಟಾಯಿತು.

ಸ್ಪೆಷಲ್ ರೇಲ್ವೆ ಗಾಡಿಯಿಂದ ಕೆಲವರು ಕಾಶಿ. ಮಥುರಾ, ಗಯಾ ಮುಂತಾದ ಪವಿತ್ರ ಕ್ಷೇತ್ರಗಳಿಗೆ ಯಾತ್ರೆ ಕೈಗೊಂಡ ವರದಿ ಕೇಳಿ ಆಚಾರ್ಯರು ತಾವೂ ಯಾಕೆ ಆ ಗುಂಪಿನಲ್ಲಿ ಹೋಗಬಾರದು ಎಂದು ಯೋಚಿಸಿದರು. ಇದುವರೆಗೂ ಯಾತ್ರೆಗಳ ಬಗ್ಗೆ ಯೋಚಿಸಿಯೇ ಇರಲಿಲ್ಲ. ಈ ವಾತಾವರಣದಿಂದ ದೂರವಿರಲು ಇದೊಂದು ಸುಯೋಗ್ಯ ಅವಕಾಶವೆಂದು ನಿರ್ಧರಿಸಿ ದಿಟ್ಟ ಹೆಜ್ಜೆ ಇಡಲು ಸಂಕಲ್ಪಿಸಿದರು. ಇನ್ನು ಅವರಿಗೆ ಪ್ರಶ್ನೆಯಾಗಿ ಉಳಿದಿದ್ದು...ಊಟ, ಆಹಾರ.?

ತಮ್ಮ ನಿರ್ಣಯವನ್ನು ಶ್ರೀಕಾಂತನಿಗೆ ತಿಳಿಸಿದಾಗ ಆ ವಿವಿಧ ಕಡೆಯ ಯತ್ರಾರ್ಥಿಗಳೊಡನೆ ಇವರಿಗೆ ಹೊಂದಿಕೊಳ್ಳಲಿಕ್ಕಾಗಲಿಕ್ಕಿಲ್ಲ...ಈ ಇಳಿ ವಯಸ್ಸಿನಲ್ಲಿ ಇಷ್ಟು ದೀರ್ಘ...ಪ್ರವಾಸದ ಆಯಾಸ ತಡೆದುಕೊಳ್ಳಲಾಗ ಲಿಕ್ಕಿಲ್ಲ ಎಂದೆಲ್ಲ ಯೋಚಿಸಿ 'ಬೇಡ' ಎಂದಾಗ ಆಚಾರ್ಯರಿಗೆ ಒಂದು ತರಹದ ಹಟವೇ ಹುಟ್ಟಿಬಿಟ್ಟಿತು...ನಾನೇನು ಈ ಮಕ್ಕಳ ಕೈಗೊಂಬೆಯೇ? ಅವರು ಹೇಳಿದ್ದೇ ನಡೆಯಬೇಕೆ? ಬಹುಶಃ ಹಣ ಕೊಡಬೇಕಾಗುತ್ತ ದೆಂದು ನನ್ನ ಆರೋಗ್ಯದ ನೆಪ ಹೂಡಿದ್ದಾರೆ. ಎಂದು ರೇಗಾಡತೊಡ ಗಿದರು.

ಹದಿನೈದು ದಿವಸಗಳ ಮೊದಲೇ ಟಿಕೇಟ್ ರಿಜರ್ವ್ ಮಾಡಿಸಲಾಯಿತು. ಯಾತ್ರಾ ಸ್ಪೇಶಲ್ ಗಾಡಿ ಮೊದಲು ಹುಬ್ಬಳ್ಳಿಯಿಂದಲೇ ಹೊರಡಲಿದ್ದು ದರಿಂದ ಶ್ರೀನಾಥ, ತುಳಸ, ಗೋಪಿ ಮಕ್ಕಳು ಎಲ್ಲರೂ ಆಚಾರ್ಯರ ರನ್ನು ಬಿಳ್ಕೊಡಲು ಹೊರಟು ಬಂದಿದ್ದರು. ಸುರಕ್ಷಿತವಾಗಿ ಮರಳಲಿ ಎಂದು ಹಾರೈಸಿ "ಶ್ರೀ ಸತ್ಯನಾರಾಯಣ ವ್ರತ" ಆಚರಿಸಿ ಬಂಧು ಬಾಂಧ ವರೂ, ಆಚಾರ್ಯರ ಮಿತ್ರವೃಂದ ಎಲ್ಲರೂ ಸ್ಟೇಷನ್‌ಗೆ ಅವರನ್ನು ಕಳಿಸಲು ಬಂದಿದ್ದರು. ಡ್ರೈ...ಫ್ರೂಟ್ಸ್‌ಗಳ ಡಬ್ಬಗಳು ಉತ್ತತ್ತಿ, ಬಾದಮಿ, ಕಲ್ಲುಸಕ್ಕರೆ, ಕಾಸಿದತುಪ್ಪ, ಅವಲಕ್ಕಿ, ಅರಳಿಟ್ಟು. ಉಂಡಿ, ಫಲಹಾರಗಳು ಎಲ್ಲ ಆಚಾರ್ಯರ ಪೆಟ್ಟಿಗೆಯಲ್ಲಿ ಭದ್ರವಾಗಿ ಸೇರಿದವು, ಚಳಿಯಾದಿತೆಂದು ರಗ್ಗು. ಸ್ವೆಟರ್, ಮಫ್ಲರ್ ಎಲ್ಲಾ ಶ್ರೀಕಾಂತ...ಶ್ರೀನಾಥ ತಂದು ಕೊಟ್ಟಿದ್ದರು, ಜೋತೆಗೆ ಸಮಯ ಕಾಗುತ್ತದೆಂದು ಶ್ರೀಕಾಂತ ಕೆಲವು ಔಷಧಿಗಳನ್ನೂ ಕೊಟ್ಟು ತೆಗೆದು ಕೊಳ್ಳುವ ವಿಧಾನ ವಿವರಿಸಿದ್ದ, ಗಾಡಿ ಕದಲುವವರೆಗೆ ತುಳಸ, ಶಾಲಿನಿ ಮಾವನವರಿಗೆ ಜಾಗ್ರುತೆ ಇರಲೂ ಆರೋಗ್ಯದ ಬಗ್ಗೆ ಕಾಳಜಿ ಇರಲಿ ಎಂದೂ, ಆಗಾಗ ಕಾಗದ ಬರೆಯಿರಿ ಎಂದೂ ವಿನಂತಿಸಿಕೊಂಡರು. ಆಚಾರ್ಯರ ಮನದಲ್ಲಿ ಕೋಲಹಲವೇ ನಡೆದಿತ್ತು. ದೂರದ ಊರಿಗೆ ಹೋಗುತ್ತಿರುವೆ...ಆದ್ದರಿಂದ ಇವರಿಗೆಲ್ಲ ಸಂತೋಷವೇ ಆಗಿದೆ. ಅದರ ವಿನಯ ತೋರಿಸುತ್ತಿದ್ದಾರೆ. ಎಂದು ಮಿಡುಕಿ ಉಕ್ಕುವ ಉರಿಮೋರೆ ಯಿಂದಲೇ ಗಾಡಿಯಲ್ಲಿ ಕುಳಿತ್ತಿದ್ದರು ಮಕ್ಕಳು ಮೊಮ್ಮಕ್ಕಳೆಲ್ಲರೂ ಕಾಲಿಗೆ ಎರಗಿ ನಮಸ್ಕಾರ ಮಾಡುತ್ತಿದ್ದರೂ. ಅವರ ಕಡೆಗೆ ಲಕ್ಷ್ಯವೇ ಇರಲಿಲ್ಲ, ಶ್ರೀನಾಥ ಶ್ರೀಕಾಂತ ತಂದೆಗೆ ವಂದಿಸಿ, ಹಣ ಬೇಕೆನಿಸಿದಾಗ ಕಾಗದ ಬರೆದುಬಿಡಿ ಎಂದೂ, ಪ್ರಯಾಣ ಸಾಕೆನಿಸಿದಾಗ ಯಾತ್ರಾ ಸ್ಪೆಷಲ್ ಕಾರ್ಯಕ್ರಮದಂತೇ ನಡೆದುಕೊಳ್ಳಲು ಅಸಾಧ್ಯವೆನಿಸಿದರೆ, ತಿಳಿಸಿ ದರೆ ತಕ್ಷಣ ತಾವು ಬಂದು ಕರೆದೂಯ್ಯುವುದಾಗಿ ಹೇಳಿದಾಗಲೂ ಆಚಾ ರ್ಯರ ಮುಖದಲ್ಲಿ ಸಮಾಧಾನ ಸುಳಿಯಲಿಲ್ಲ. ಬಿಗುವಾನ, ಬಿಂಕ ದಿಂದ ಸೆಟೆದು ಕುಳಿತ್ತಿದ್ದರು.

ಯಾತ್ರೆಯ ಗಾಡಿ ಸಾಗಿತ್ತು. ಆಚಾರ್ಯರು ಕಷ್ಟಪಟ್ಟು ಆ ವಾತಾವರಣಕ್ಕೆ ಹೊಂದಿಕೊಳ್ಳತೊಡಗಿದರು. ಅವರಿಗಾಗಿ ಯಾವುದಕ್ಕೂ ಕೊರತೆಯಾಗದಂತೆ ಸ್ಪೇಷಲ್ ಏರ್ಪಾಡಾಗಿತ್ತು. ಹಣ್ಣು ಹಂಪಲಿ ಗಂತೂ ಬರಗಾಲವಿರಲಿಲ್ಲ. ಕೈ ತುಂಬ ಹಣ ನಾಲಿಗೆ ತುಂಬ ತಿನ್ನುವ ಚಪಲ. ಊರುಬಿಟ್ಟು ತಿಂಗಳು ಸರಿದಿತ್ತು ಇಷ್ಟು ದಿನಗಳಲ್ಲಿ ಆಚಾ ರ್ಯರು ಒಮ್ಮೆಯೂ ಇತರ ಯಾತ್ರಿಕರ ಸ್ನೇಹ ಬೆಳೆಸಿರಲಿಲ್ಲ. ಅವರ ಹರಟೆ ವಿನೋದದಲ್ಲಿ ಭಾಗವಹಿಸುತ್ತಿರಲಿಲ್ಲ. ಸದಾ ತಮ್ಮ ಶ್ರೀಮಂತಿ ಕೆಯ ಪ್ರದರ್ಶನ, ಗಂಭೀರತೆಯಲ್ಲಿಯೇ ಇರುತ್ತಿದ್ದರು.

ಇತರ ಯಾತ್ರಿಕರು ಈ ಯಾತ್ರೆಯ ಅವಕಾಶವನ್ನು ಜೀವನದ ಮೋಜನ್ನಾಗಿ ಮಾಡಿಕೊಂಡಿದ್ದರು. ಪರಸ್ಪರರು ತಮ್ಮ ಮಕ್ಕಳು... ಸೊಸೆ...ತಮ್ಮ ಮೊಮ್ಮಕ್ಕಳು ತಮ್ಮ ಊರುಗಳ ಮಾಹಿತಿಯನ್ನು ಮಾಡಿ ಕೊಳ್ಳುತ್ತಿದ್ದರು. ಎಷ್ಟೋ ದಿನಗಳ ಪರಿಚಯವಿರಬಹುದೆಂಬಷ್ಟು ಪರಸ್ಪರರು ಆತ್ಮೀಯರಾಗಿದ್ದರು...ಯಾತ್ರಿಕರೆಲ್ಲೇ ಹೆಚ್ಚು ವಯಸ್ಕ ರಾಗಿದ್ದ ನಾಗೇಶರಾಯರು ರಸಿಕ ಹಾಸ್ಯಚಟಾಕಿ ಹಾರಿಸುತ್ತಾ ಮಾತನಾಡ ದಿರುವವರನ್ನೂ ಎಳೆದು ಹರಟೆಗೆ ಆಹ್ವಾನಿಸುತ್ತಿರುವುದು ಅವರಿಗೆ ವಿಚಿತ್ರ ವೆನಿಸಿತು. ರಾಯರ ಸುದ್ದಿ ಹರಟೆಗೆ ಬೆಲ್ಲಕ್ಕೆ ಇರುವೆ ಮುತ್ತಿದಂತೆ ಇತರರು ಬಂದು ಸೇರುತ್ತಿದ್ದರೂ. ಆಚಾರ್ಯರು ಮಾತ್ರ ತಮ್ಮ ಸ್ಥಳ ಬಿಟ್ಟು ಕದಲದೆ ಕುಳಿತಲ್ಲಿಂದಲೇ ದ್ರಾಕ್ಷಿ, ಕಲ್ಲುಸಕ್ಕರೆ ಹಳಕು ಬಾಯಿಗೆಹಾಕಿ ಕೊಳ್ಳುತ್ತ ಅವರ ಹರಟೆಗೆ ಕಿವಿಗೊಡುತ್ತ ಎಲ್ಲರನ್ನೂ ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದರು.

ತಮ್ಮ ಊರು, ತಮ್ಮ ಗದ್ದೆ, ತಮ್ಮ ಮನೆ, ತಮ್ಮವರ ಸಹವಾಸ ದಲ್ಲೇ ತಾವು ಕೂಪ ಮಂಡೂಕದಂತೆ ಇರುವುದು ಈಗ ಆಚಾರ್ಯರ ಗಮನಕ್ಕೆ ಬರತೊಡಗಿತು. ಇತರರ ಜೀವನ ಕ್ರಮ ಸ್ವಭಾವ ತಿಳಿದು ಕೊಳ್ಳುವ ಅವಕಾಶವೇ ಅವರಿಗೆ ಒದಗಿರಲಿಲ್ಲ. ಈ ಕಾಶಿಯಾತ್ರೆಯ ಪ್ರಸಂಗದಿಂದ ಆಚಾರ್ಯರು ಅದೇ ತಾನೇ ಹುಟ್ಟಿದ ಶಿಶು ಕಣ್ಣು ತೆಗೆದು

ಸುತ್ತ ಮುತ್ತಲಿನ ಜಗತ್ತನ್ನು ಅರಿತುಕೊಳ್ಳುವಂತೇ ಆಗಿದ್ದರು, ಇಳಿ ವಯಸ್ಸಿನ ನಾಗೇಶರಾಯರ ಜಿಗಿದಾಟ, ಕುಣಿದಾಟ ನಗು, ಹರಟೆ ಎಲ್ಲ ಕಣ್ಣು ಕಣ್ಣು ಬಿಟ್ಟು ಕಂಡುಕೊಂಡ ಆಚಾರ್ಯರಿಗೆ ತಮ್ಮ ಬಗ್ಗೆ ಒಂದು ತರಹದ ಬೇಸರ ಎನಿಸಿತ್ತು. 'ಈ ಮುದುಕನಿಗೆ ಬಯಸಿದ್ದೆಲ್ಲ ಸಿಕ್ಕಿರ ಬಹುದು. ಅದಕ್ಕೆ ಇಷ್ಟು ನಿಶ್ಚಿಂತೆಯಾಗಿ ಹಾರಾಡುತ್ತಾನೆ' ಎಂದು ಕೊಂಡರಾದರೂ ತಾವಾಗಿ ಅವರ ಸ್ನೇಹ ಮಾಡಲಿಲ್ಲ! . .

ಅವಲಕ್ಕಿ ಕುಟ್ಟಿ ಕುಟ್ಟಿ ಕೂಡಿಟ್ಟ ಹಣದಿಂದ ಯಾತ್ರೆಗೆ ಬಂದಿದ್ದ ವೆಂಕಮ್ಮ, ಮಂದಿ ಮನೆಯಲ್ಲಿ ಅಡಿಗೆ ಮಾಡಿ ಬಾಲ್ಯದ ಆಶೆ ಈಡೇರಿಸಿ ಕೊಳ್ಳಲಿಕ್ಕಾಗಿ ಮೋಕ್ಷ ಸಿಗುವದೆಂದು ನಂಬಿ ಈ ಕಾಶೀಯಾತ್ರೆಗಾಗಿ ಹಣ ಕೂಡಿಸಿಕೊಂಡು ಬಂದಿರುವ ವಿಧವೆ ತಿಪ್ಪಕ್ಕನ ದೃಢತೆ, ಸಾಹಸದ ಬಗ್ಗೆ ತಿಳಿದಾಗ ಆಚಾರ್ಯರು ಬಾಯಿ ಮೇಲೆ ಬೆರಳಿಟ್ಟುಕೊಂಡರು! ನಾಲ್ಕು ಗಂಡುಮಕ್ಕಳು ಉನ್ನತ ಅಧಿಕಾರಿಗಳಿದ್ದರೂ ಚಿಕ್ಕಾಸು ಕಳಿಸ ದಿದ್ದರೂ ತಮ್ಮ ಮಾಸ್ತರಿಕೆಯಲ್ಲೇ ಹಣ ಕಲೆಹಾಕಿ ಯಾತ್ರೆಗೆ ಬಂದಿದ್ದ ರಂಗಣ್ಣನ ಪರಿಚಯದಿಂದ ಅಂತೂ ಆಚಾರ್ಯರು ತಮ್ಮ ಜೀವನವನ್ನು ಕ್ಷಣ ಹೊತ್ತು ಇತರರ ಜೀವನದೊಂದಿಗೆ ಹೋಲಿಸಿಕೊಳ್ಳುವಷ್ಟು ಮಟ್ಟಿಗೆ ಸಮರ್ಥರಾದರೆನ್ನಬಹುದು. ಆದರೂ ಏನೋ ಅಭಾವ ಏನೋ ಕೊರತೆಯ ಆವರಣ ಸದಾ ಅವರನ್ನು ಆವರಿಸಿರುತ್ತಿತ್ತು.

ಒಮ್ಮೆ ನಾಗೇಶರಾಯರೇ ಆಚಾರ್ಯರ ಪಕ್ಕದಲ್ಲಿ ಕುಳಿತು ಅವರ ಬಿಗುವನ್ನು ಸಡಲಿಸುವ ನೆಪ ಹೂಡಿ ಅವರ ಮನೆ, ಮಕ್ಕಳು, ಇತರರ ಮಾಹಿತಿ ಪಡೆದರು. ಆದರೆ ಆ ಎಲ್ಲ ಸುಖ ಲಭ್ಯವಿದ್ದರೂ ಅವರ ಬಾಯಿಯಿಂದ ಸಂತೃಪ್ತಿಯ ಒಂದು ಶಬ್ದವೂ ಹೊರಡದಿದ್ದುದು ರಾಯರಿಗೆ ಆಶ್ಚರ್ಯವೆನಿಸಿತ್ತು! ಮತ್ತೆರಡು ದಿನಗಳ ನಂತರ ನಾಗೇಶ ರಾಯರು ಮಾತಿಗೆ ಎಳೆಯುತ್ತ ಆಚಾರ್ಯರ ತಾಪತ್ರಯವಿಲ್ಲದ ಸುಖ ಬಾಳ್ವೆ, ಸುಖಾರೋಗ್ಯದ ಬಗ್ಗೆ ಕೇಳಿ ತಿಳಿದು ಹಾಸ್ಯದಿಂದಲೇ ನುಡಿದಿ ದ್ದರು... "ಅಲ್ರೀ, ಸಿಟ್ಟಾಗಬ್ಯಾಡ್ರಿ ಆಚಾರ್ಯರೇ ಒಂದು ಮಾತು...

ನಿಮಗೆ ದೇವರು ಇಷ್ಟೆಲ್ಲ ಕರುಣಿಸಿದರೂ ನೀವು ಸದಾ ಗುಡ್ಡ ಕಡಿದು ನಿಮ್ಮ ಮೇಲೇ ಉರುಳಿಬಿದ್ದವರಂತೆ ಯಾಕೆ ಹಾಂಗ ದುಃಖದಲ್ಲೇ ಮುಳುಗಿರುತ್ತೀರಿ...ಸ್ವಲ್ಪ ನಗೋದು ಕಲೀರಿ." ಎಂದಾಗ ನುಂಗಿ ಬಿಡುವರೋ ಎಂಬಂತೆ ಕೆಕ್ಕರಿಸಿ ನೋಡಿದ್ದರು ಆಚಾರ್ಯರು, ಇತರರ ಉಪದೇಶಕ್ಕೆ ತಲೆಬಾಗುವವರೇ? ತಮಗೆ ಸರಿಕಂಡಂತೆ ತಮ್ಮ ಮೂಗಿನ ನೇರಕ್ಕೆ ಮಾತನಾಡಿ ಇತರರೂ ತಮ್ಮ ಹೇಳಿಕೆಯನ್ನೇ ಅನುಮೋದಿಸಬೇಕೆಂಬ ಛಲ ಪಡೆದು ಬಂದವರು ಅವರು! ನಾಗೇಶರಾಯರು ಸುಮ್ಮನೆ ಎದ್ದು ಹೋಗಿ ಬಿಟ್ಟರು.

ಮತ್ತೊಮ್ಮೆ ಸಿಡುಕು ಮುಖ ಹೊತ್ತು ತಮ್ಮಲ್ಲೇ ಮುಳುಗಿದ್ದ ಆಚಾರ್ಯರನ್ನು ನಾಗೇಶರಾಯರೆ ಆ ಮಾತು ಈ ಮಾತಿಗೆ ಎಳೆದು, ಮಾತಿನ ಮಧ್ಯೆ ಧೈರ್ಯವಹಿಸಿ ಹೇಳಿಯೇ ಬಿಟ್ಟರು...ನೋಡ್ರಿ ಆಚಾರ್ಯರೇ...ಇಷ್ಟು ದಿವಸದಾಗ ನೀವು ಒಮ್ಮೆಯೂ ನಕ್ಕಿಲ್ಲ, ಒಮ್ಮೆಯೂ ಗಂಟುಮೋರೆ ಬಿಟ್ಟಿಲ್ಲ ಬೇಕಾದ್ರೆ ಕನ್ನಡಿ ಹಿಡಿದು ತೋರಿಸ್ಲೇನು ನಿಮ್ಮ ಮಾರಿ ?

ಅವರ ಮಾತು ಮುಗಿಯುವ ಮುನ್ನವೇ ಆಚಾರ್ಯರು ಗುಡುಗಿದರು..."ಏನು ನಗ್ತಾರ್ರೀ...ನಗಬೇಕಂತೆ ನಗಬೇಕು. ನಗುನಗುತ್ತ ಇರಲು ಏನಿದೆ ನನ್ನಲ್ಲಿ ಮಕ್ಕಳು?...ಇದ್ದಾರೆ ಅಂದ್ರೆ ಇದ್ದಾರೆ ತಂದೆ ಹಿರಿಯರು ಅಂತ ಏನಾದ್ರೂ ಮಾನ ಮರ್ಯಾದೆ....ಪ್ರೇಮ....ಆತಂಃಕರಣ? ಸೊಸೆಯರೂ, ಅವರೂ ಅಷ್ಟೇ....ಮಕ್ಕಳೇ ತಾತ್ಸಾರ ಮಾಡಿದ ಮೇಲೆ ಅವರಂತೂ ಹೊರಗಿನಿಂದ ಬಂದೋರು!"...ನಾಗೇಶರಾಯರು ಮೌನತಾಳಿದರು ನಿನ್ನೊಬ್ಬರ ಮನಸ್ಸಿನ ಆಳಕ್ಕೆ ಇಳಿದು ಅವರ ಅಂತರಂಗವನ್ನು ಸೂಕ್ಷ್ಮವಾಗಿ ಪರಿಶೀಲಿಸುವ ಕಲೆ ರಾಯರಿಗೆ ಸಿದ್ಧಹಸ್ತವಾಗಿದ್ದರೂ 'ತಾವೇ ತಪ್ಪಿರಬಹುದೇ?' ಎಂದು ಮನದಲ್ಲೇ ಎಣಿಸತೊಡಗಿದರು.

ಎಲ್ಲರೂ ಕಾಶಿ ತಲುಪಿದರು... ತಮ್ಮ ಸಹಯಾತ್ರಿಕರ ಅಮಿತಾ

ನಂದ, ಭಕ್ತಿಭಾವ ನೋಡಿ ಆಚಾರ್ಯರಿಗೆ ಒಂದು ತರಹವೆನಿಸಿತು. ವಿಶ್ವನಾಥನ ದರ್ಶನ, ತೀರ್ಥ ಸ್ನಾನ ಮಾತ್ರದಿಂದಲೇ ಪುನೀತರಾದೆವೆಂಬಂತೆ ಹೆಮ್ಮೆ, ಗರ್ವಗಳಿಂದ ಎಲ್ಲರೂ ಉತ್ಸಾಹದ ಬುಗ್ಗೆಗಳಾಗಿದ್ದಾರೆ. ಆಚಾರ್ಯರು ಮಾತ್ರ ಎಲ್ಲ ಯಾಂತ್ರಿಕ ರೀತಿಯಲ್ಲಿ ತೀರ್ಥಸ್ನಾನ, ದರ್ಶನ, ಮುಗಿಸಿ ದೇವಸ್ಥಾನದ ಕಂಬಕ್ಕೊರಗಿ ಕುಳಿತುಬಿಟ್ಟಿದ್ದರು.. ಈ ಜನಕೆ ಯಾಕೆ ಇಷ್ಟು ಹಿಗ್ಗು? ಓಹೊ ಬಹುಶಃ ಇವರೆಲ್ಲರಿಗೆ ಹಣವೆ ಕೊರತೆ ಬೇಕೆನಿಸಿದಾಗ ಬರಲು ಸಾಧ್ಯವಾಗಿರಲಿಕ್ಕಿಲ್ಲ ಎಂದುಕೊಂಡರು. ಒಂಟಿಯಾಗಿ ಕುಳಿತ ಆಚಾರ್ಯರನ್ನು ಕಂಡರೂ ನಾಗೇಶರಾಯರು ಸುಮ್ಮನೇ ಹಾಯ್ದು ಹೋದಾಗ ಆಚಾರ್ಯರೇ ಅವರನ್ನು ಮಾತನಾಡಿಸಿ ಬಳಿಗೆ ಕರೆದರು "ಹಾಂ....ಮತ್ತೇನ್ರಿ ರಾಯರೆ ಯಾತ್ರೆ ಅಂತೂ ಮುಗೀತಾ ಬಂತು. ನಗು ನಗುತ್ತಾ ಇರುವಂತಹ ಸುಖಬಾಳ್ವೆ ಪಡೆದು ಬಂದವರು ನೀವು...ಪುಣ್ಯವಂತರು... ದೇವರು ನಿಮಗೆ ಎಲ್ಲ ಕೊಟ್ಟಿದ್ದಾನೆ ನೋಡ್ರಿ, ಅದಕ್ಕೇ ಸದಾ ನಗುನಗುತ್ತಾ ಕಾಲ ಕಳೀತೀರಿ....ಇನ್ನು ಮನೆಗೆ ಸೇರಿ ಹಾಯಾಗಿ ಇರ್ತೀರಿ....ಆದ್ರೆ ನಾನು? ನಾನು ಮಾತ್ರ ಪುನಃ ಆ ಮಕ್ಕಳ ಸೊಸೆಯರ ಜಂಜಾಟದ ನರಕಕ್ಕೇ ಹೋಗಬೇಕು ನೋಡ್ರಿ.

ನಾಗೇಶರಾಯರು ನಗೆ ಬೀರುತ್ತ ಮರು ನುಡಿದರು "ನನಗೆಲ್ಲಿದೆ ಆಚಾರ್ಯರೆ ಮನೆ? ನನ್ನ ಹೆಂಡ್ತಿ ಸತ್ತು ನಲ್ವತ್ತು ವರ್ಷ ಆಗಿಹೋಯ್ತು, ಇದ್ದೊಬ್ಬ ಮಗ ಮಹಬೂಬ್ ನಗರದ ರೈಲು ಅಪಘಾತದಲ್ಲಿ ತೀರಿಹೋಗಿ ಹದಿನೈದು ವರ್ಷವಾಯಿತು. ಈ ಜೀವನದಲ್ಲಿ ನನ್ನದೆಂದು ನನಗೇನೂ ಉಳಿದಿಲ್ರಪ್ಪ!!"

"ಆ....!? ಎಂದು ಬಾಯಿ ತೆರೆದರು ಆಚಾರ್ಯರು. ರಾಯರೇ ನುಡಿದರು-ನೋಡ್ರಿ ಆರ್ಚಾರ್ಯರೆ...ಸುಖ ಯಾರಿಗೆ ಬೇಕೆನಿಸುವದಿಲ್ಲ.... ಆದ್ರೆ ಸುಖ ಸುಖ ಅಂತ ಹುಡುಕ್ಕೊಂತ ಹೋದ್ರೆ ಸಿಗೋವಸ್ತು ಏನ್ರಿ ಅದು...? ಸುಖ ಎಂಬೋದನ್ನ ನಾವು ನಮ್ಮಲ್ಲೇ ಹುಟ್ಟಿಸ್ಕೊಬೇಕಾಗುತ್ತದೆ !! ನಮಗೆ ಸಿಕ್ಕಿದ್ದರಲ್ಲೇ ತೃಪ್ತಿ, ಸಮಾಧಾನ ತಂದುಕೊಳ್ಳೋದೇ ಸುಖ!!....ಸುಖ-[illegible] ವಿಧ.

ನಾವು ಹುಟ್ಟಿದಾಗ ಏನ ತರ್ತೀವಿ, ಸಾಯೋ ಮುಂದೆ ಏನು ಒಯ್ಯತೀವಿ, ಆದ್ರೆ ನಾವು ಹ್ಯಾಂಗ ಬಾಳ್ವೆಮಾಡಿದ್ವಿ ಅಂಬೋದನ್ನ ಮಾತ್ರ ನಾಲ್ಕುಮಂದಿ ನೆನಸ್ತಾರ ತೀರ್ತು....ನಮ್ಮಿಂದ ಒಳ್ಳೆಯದಾಯಿತು ಅಂದ್ರೆ....ಆದೇ ನಮ್ಮ ಸುಖ....ಪುಣ್ಯ! ನಾವು ಇನ್ನೊಬ್ಬರಿಗೆ ಕೆಟ್ಟಿದ್ದುಮಾಡಿದ್ವಿ ತ್ರಾಸ ಕೊಟ್ವಿ ಅಂದ್ರೆ ಅದೇ ನಮ್ಮ ದುಃಖ ಪಾಪ. ಇದ್ದುದರಲ್ಲಿ ತೃಪ್ತಿ. ಸಹನೆ....ಇದೇ ನಮಗೆ ಶಾಂತಿ....ಇವು ಇಲ್ಲಿ ಸಿಕ್ಕರೇನು? ಸ್ವರ್ಗ—ಮೋಕ್ಷದಲ್ಲಿ ಸಿಕ್ಕರೇನು, ಎರಡೂ ಒಂದೇ!!

ಪೆಟ್ಟು ಬಿದ್ದ ಹಾವು ಮುದುರಿ ಮಲಗುವಂತೆ ಆಚಾರ್ಯರು ನಾಗೇಶರಾಯರ ಮಾತಿನ ಸತ್ಯದ ಅರಿವಿನಿಂದ ಆಘಾತವಾಗಿ ನಿಶ್ಚೇತನರಾಗಿ ಅವರನ್ನೇ ಪಿಳಿ ಪಿಳಿ ನೋಡಿದರು!

ಹೌದು ನಿಜ....ಏನೂ ಇಲ್ಲದ ನಾಗೇಶರಾಯರು ಎಲ್ಲವನ್ನೂ ಪಡೆದಿದ್ದರು. ಎಲ್ಲವನ್ನೂ ಪಡೆದ ತಾವು?



# ಶಂಕ್ರ ಬೇಡಿದ್ದು

—ಪ್ರೇಮಾ ಭಟ್

ಶಂಕ್ರ, ರಾಮಚಂದ್ರಯ್ಯನವರ ಹಿರಿ ಹೆಂಡತಿಯ ಮಗ, ತದ್ರೂಪು ತಾಯಿಯ ಹಾಗೆ ಅವನು. ಮುಖಲಕ್ಷಣದಲ್ಲಿರಲಿ ಸ್ವಭಾವ ದಲ್ಲೂ ಹಾಗೆ ಎನ್ನುತ್ತಿದ್ದರು, ಊರಹಿರಿಯರು, ರಾಮಚಂದ್ರಯ್ಯ ನವರ ಹೆಂಡತಿ ಹೇಮಾವತಿಯನ್ನು ಕಂಡವರು. ಶಂಕ್ರ ನಿಜವಾಗಿಯೂ ನೋಡುವುದಕ್ಕೂ. ಸ್ವಭಾವದಲ್ಲೂ ಇದ್ದುದು ಹಾಗೆ. ರಾಮ ಚಂದ್ರಯ್ಯನವರ ಕಿರಿಯ ಹೆಂಡತಿ ಅರುಂಧತಿಯ ಮಕ್ಕಳ ಹಾಗಲ್ಲ ಅವನ ಸ್ವಭಾವ. ಶಂಕ್ರ ಒಂದು ರೀತಿಯಲ್ಲಿ ಹೇಳುವುದಾದರೆ ಪೆದ್ದು ಹುಡುಗ ಎನ್ನಬಹುದು. ಅವನ ಪೆದ್ದುತನ ಪಕ್ವವಾದದ್ದು ಅರುಂಧತಿ ಮಕ್ಕ ಳಿಂದಲೇ. ಅವರು ಹೇಳಿದಂತೆ ಕೇಳಬೇಕು ಇವ. ಹಿರಿಯನೆನ್ನುವ ವಿಚಾರವಾಗಲಿ ಅಥವಾ ತಮ್ಮಂತೆ ಅವನಿಗೂ ಮನೆಯ ಪ್ರತಿಯೊಂದೂ ಸ್ವತ್ತಿನಲ್ಲೂ ಅಧಿಕಾರವಿದೆ ಎಂದಾಗಲಿ ಅವರೆಲ್ಲ ತಿಳಿದೂ ಇಲ್ಲ ಭಾವಿಸಿಯೂ ಇಲ್ಲ. ಯಾರ ಮಮಕಾರವೂ ಇಲ್ಲದೆ ಬೆಳೆದಿದ್ದ ಹುಡುಗ ಸ್ವಭಾವತಃ ಅಳ್ಳೆದೆಯವನಾಗಿದ್ದ.

ತಾಯಿ ಸತ್ತಾಗ ಅವನಿಗೆ ಇನ್ನೂ ಎಂಟು ವರ್ಷ ಪ್ರಾಯ. ಆಮೇಲೆ ಅವನು ಅರುಂಧತಿಯ ಕೈ ಕೆಳಗೆ ಬೆಳೆದವನು. ಅವಳಿಗೆ ನಾಲ್ಕು ಜನ ಗಂಡು ಮಕ್ಕಳು, ಅಷ್ಟಿದ್ದು ಸುಖ ಅಷ್ಟಕ್ಕಷ್ಟೆ. ಅವರೆಲ್ಲ ಅವಳು ಹೇಳಿದ ಮಾತನ್ನು ಕೇಳುತ್ತಿದ್ದರೆ ! ಖಂಡಿತಕ್ಕೂ ಇಲ್ಲ. ಅವಳು ಏನೇ ಕೆಲಸವಾಗಬೇಕಾದರೂ ಹೇಳುವುದು ಶಂಕ್ರನಿಗೆ. ಅವನು ಶುದ್ಧೆಯಿಂದ ಪಾಲಿಸುತ್ತಾನೆ. ಇಷ್ಟಾದರೂ ಪ್ರೀತಿ ವಿಶ್ವಾಸ ಅವನಲ್ಲಿಲ್ಲ. ಅವಳಿಗೆ, ಅಧಿಕಾರ ವಾಂಛೆ ಇದ್ದ ಅವಳು ದರ್ಪದಿಂದ ಅವನೊಂದಿಗೆ ಕೆಲಸ ತೆಗೆಸುತ್ತಿದ್ದಳು.

ರಾಮಚಂದ್ರಯ್ಯ ಸತ್ತಾಗ ಮಕ್ಕಳೆಲ್ಲ ಚಿಕ್ಕವರಿದ್ದರೂ ಅವಳು ಹೆದರಲಿಲ್ಲ. ಹಿರಿಯ ಮಗ ಶಂಕ್ರ ಇರಲಿಲ್ಲವೇ? ಹೇಳುವುದನ್ನೆಲ್ಲ ಪಾಲಿಸುವುದಿಲ್ಲವೇ! ಒಳ್ಳೆಯ ಬೆಳೆ ಕೊಡುವ ಗದ್ದೆಗಳೆಲ್ಲ ಯೋಗ್ಯರ ಕೈಯಲ್ಲಿದ್ದುದರಿಂದ ಮಕ್ಕಳು ಸುಖವಾಗಿ ಬೆಳೆದು ದೊಡ್ಡವರಾದರು. ಅಷ್ಟರಲ್ಲೇ ಶಂಕ್ರನಿಗೆ ಮದುವೆಯಾಗಿತ್ತು. ಅವನ ಹೆಂಡತಿ ಮಂದರ್ತಿ ಯವಳು, ಅವನಿಗೆ ಹೊಂದಿಕೊಂಡಿದ್ದಳು. ಗಂಡನಿಗೆ ಕಿವಿಚುಚ್ಚುವ ಗೋಜಿಗೆ ಹೋಗುತ್ತಿರಲಿಲ್ಲ. ಅರುಂಧತಿಯ ಹೆದರಿಕೆಯಲ್ಲಿಯೇ ಬದು ಕನ್ನು ರೂಢಿಸಿಕೊಂಡು ನಿಂತಳು ಆ ಮನೆಯಲ್ಲೇ. ಅರುಂಧತಿಯ ಪಾಲಿಗೆ ಅವರಿಬ್ಬರು ಇರದೆ ಹೋಗಿದ್ದರೆ ಅವಳ ಬಾಳು ನಾಯಿಬಾಳಿಗೂ ಕಡೆ ಯಾಗುತ್ತಿತ್ತೇನೋ ಯಾರಿಗೆ ಗೊತ್ತು! ಇದೆಲ್ಲ ಅವಳಿಗೆ ಗೊತ್ತಿದ್ದರೂ ಅವಳು ಮನಸ್ಸಿನಲ್ಲೂ ಶಂಕ್ರನನ್ನೂ ವಂಚಿಸುವವಳು.

ಅವಳ ಮಕ್ಕಳಲ್ಲಿ ಹಿರಿಯರಿಬ್ಬರು ಆಗಲೇ ಹೆಂಡಿರೊಂದಿಗೆ ಗಟ್ಟಿ ಹತ್ತಿದ್ದರು. ಮೂರನೆಯವ ಮಂಗಳೂರಿನಲ್ಲಿದ್ದು ಓದುತ್ತಿದ್ದ. ನಾಲ್ಕ ನೆಯವ ಇನ್ನು ಚಿಕ್ಕವನಾಗಿದ್ದುದರಿಂದ ಹತ್ತಿರವಿದ್ದ. ಮುಂದೆ ಅವ ರಿಬ್ಬರೂ ಸ್ವತಂತ್ರರಾಗುತ್ತಿದ್ದ ಹಾಗೆ ತನ್ನನ್ನು ಬಿಟ್ಟುಹೋಗಬಹುದು ಎನ್ನುವ ವಿಚಾರ ಅರುಂಧತಿಯ ಮನಸ್ಸಿಗೆ ಬಂದಿದೆ. ತನ್ನ ಬಳಿ ಕೊನೆ ಗಾಲದವರೆಗೂ ಇರುವವ ಶಂಕ್ರ ಒಬ್ಬನೇ ಎಂದೂ ಗೊತ್ತು. ಆದರೂ ವಿಶ್ವಾಸ ತೋರಿಸಲಾರಳು ಅವನಲ್ಲಿ, ವರುಷಕ್ಕೊಮ್ಮೆ ಹಿರಿಯ ಮಕ್ಕಳಿ ಬ್ಬರು ಊರಿಗೆ ಬಂದರೆ, ಅವರನ್ನೆಲ್ಲ ಬೇಕುಬೇಕಾದಂತೆ ಉಪಚರಿಸಿ ಅವರು ಬೇಡಿದ್ದನ್ನು ಕೊಟ್ಟು ಕಳುಹಿಸುತ್ತಿದ್ದಳು. ಶಂಕ್ರನ ಹೆಂಡತಿ ಲಕ್ಷ್ಮಿ ಆ ಮನೆಯಲ್ಲಿ ಟೊಂಕಕಟ್ಟಿ ದುಡಿಯುತ್ತಾಳೆ. ಬೇಸಾಯದ ಮನೆಯಲ್ಲಿ ಕೊಡುವುದಕ್ಕೆ ಪುರುಸೊತ್ತಿಲ್ಲ ಇಬ್ಬರಿಗೂ. ಇಷ್ಟಾದರೂ ಅರುಂಧತಿ ಒಮ್ಮೆಯೂ ಅವರನ್ನು ವಿಚಾರಿಸುವುದಿಲ್ಲ.

ಹೊರಗೆಲಸದಲ್ಲೂ ಹಗುರವಾಗಿರುವವನು ಶಂಕ್ರ ಮಾತ್ರ. ಹೆಂಡತಿಯ ದುಡಿಮೆ ಆ ಮನೆಗೆ ಎಷ್ಟು ಸಲ್ಲುತ್ತಿದೆ ಎನ್ನುವುದನ್ನು ವಿಚಾರ ಮಾಡಲಾರ, ಅದು ಅವನಿಗೆ ತಿಳಿದಿತ್ತೋ ಇಲ್ಲವೋ ಅದು ಬೇರೆ

ವಿಷಯ. ಆದರೆ ತಮ್ಮಂದಿರೆಲ್ಲ ಅವನನ್ನು ಹಂಗಿಸುತ್ತಾರೆ. ಹಾಸ್ಯ ಮಾಡುತ್ತಾರೆ, ಹೀಗಳೆಯುತ್ತಾರೆ. ಅವನಿಗೆ ಮಕ್ಕಳಾಗಲಿಲ್ಲ ಎಂದು 'ಅದೂ ಗೊತ್ತುಂಟೋ ಇಲ್ಲವೋ ಅವನಿಗೆ' ಎಂದು ಚೇಷ್ಟೆ ಮಾಡಿಕೊಂಡು ನಗಾಡುತ್ತಾರೆ. ಶಂಕ್ರ ಮಾತ್ರ ಕಿವಿ ಇದ್ದು ಕಿವುಡನಂತೆ ವರ್ತಿಸುತ್ತಾನೆ. ಅವನು ಎಲ್ಲರ ದೃಷ್ಟಿಯಲ್ಲಿ ಕೆಲಸಕ್ಕೆ ಬಾರದ ಪ್ರಾಣಿ, ಹೆಡ್ಡ.

ಅವನಿಗೆ ಲೆಕ್ಕಾಚಾರದ ವಿಷಯದಲ್ಲಿ ಪ್ರಜ್ಞೆ ಕಡಿಮೆ. ದುಡ್ಡಿನ ವ್ಯವಹಾರಕ್ಕೆ ಲಕ್ಷ್ಮಿಯ ಸಹಾಯ ಯಾಚಿಸುತ್ತಿದ್ದ. ಅವನು ಶಾಲೆ ಕಲಿತ ವನಲ್ಲ. ಕಲಿತ ಎರಡನೆಯ ಇಯತ್ತೆಯಿಂದ ಉಪಯೋಗವಾಗುತ್ತಿರಲಿಲ್ಲ ಅವನಿಗೆ. ತಮ್ಮಂದಿರಿಗೆ ಕಷ್ಟಪಟ್ಟು ಕಾಗದ ಬರೆದಾಗಲೆಲ್ಲ ಅವರಿಂದ ನೀನು ಕಾಗದ ಬರೆಯಬೇಡವೆಂದೇ ಉತ್ತರ ಬರುತ್ತಿತ್ತು. ಆದರೂ ಕಾಗದ ಬರೆಯುವ ಹುಚ್ಚು ಉತ್ಸಾಹ ಅವನಲ್ಲಿತ್ತು. ಮುಂದೊಂದು ದಿನ ಅದೂ ನಿಂತುಹೋಗಿತ್ತು. ಕಾರಣ ಏನೇನೋ ತಪ್ಪಾಗಿ ಬರೆದ ಕಾಗದ,ತಪ್ಪು ತಿಳಿವಳಿಕೆಗೆ ಕಾರಣವಾಗಿ ಯಜ್ಞ ಕುಡಾಬಟ್ಟೆ, ರೇಗಿ ಕಾಗದ ಬರೆದಮೇಲೆ ಶಂಕ್ರ ಕಾಗದ ಬರೆಯುವುದನ್ನು ನಿಲ್ಲಿಸಿದ್ದ ಪಾಪ.

ಶಂಕ್ರನಲ್ಲಿ ಲಕ್ಷ್ಮಿಯ ಬಗ್ಗೆ ಅದಾವ ಭಾವನೆ ಇತ್ತೋ ಯಾರಿಗೆ ಗೊತ್ತು ? ಅದನ್ನೆಂದೂ ವ್ಯಕ್ತಪಡಿಸಲಾರದ ಅವನ ಮುಂದೆ ನಿರ್ಲಿಪ್ತತೆ ಯಿಂದ ಶಾಂತವಾಗಿ ಬದುಕುವುದಷ್ಟೇ ಲಕ್ಷ್ಮಿಯ ಜಾಯಮಾನಕ್ಕೆ ಒಗ್ಗಿ ಹೋಗಿತ್ತು. ಆ ದಿನ ಮನೆಯ ಅಂಗಳದಲ್ಲಿ ಹಗ್ಗ ಹೊಸೆಯುತ್ತ ಕುಳಿತಿದ್ದ ಬರಮು, ಮಬ್ಬುಗತ್ತಲಲ್ಲಿ ಯಾರೂ ಇಲ್ಲದುದನ್ನು ಕಂಡು ತುಸು ದೂರದಲ್ಲಿ ಕುಳಿತು ಮಡಲತಟ್ಟಿಯನ್ನು ಹೆಣೆಯುತ್ತಿದ್ದ ಮಿಣ್ಣು ವನ್ನು ಜಗ್ಗಿ ತನ್ನತ್ತ ಸೆಳೆದುಕೊಂಡುದ್ದನ್ನು, ಲಕ್ಷ್ಮಿ ದನದ ಕೊಟ್ಟಿಗೆ ಯಿಂದ ಈ ಕಡೆಗೆ ಹಾದುಬರುತ್ತಿದ್ದವಳು ಕಂಡು ಬೆಚ್ಚಿ ಹಿಂದೆ ಬಿದ್ದು ಸರಿದು ನಿಂತಳು. ಮೊನ್ನೆ ಮದುವೆಯಾಗಿದ್ದ ಬರಮು ಮಿಣ್ಣುವನ್ನು. ಹೊಸ ದಾಂಪತ್ಯ ಜೀವನದಲ್ಲಿ ಹಗಲುಗನಸುಗಳನ್ನು ಕಾಣುವ ಜೋಡಿಗಳು ಹೇಗಿರಬೇಕೊ ಹಾಗೇ ಇದ್ದಾರೆ ಎಂದುಕೊಂಡಳು. ಶಂಕ್ರ ಮನಸ್ಸಿ

ನಲ್ಲಿ ಹಾಮುಹೋದ. ಇಂತಹ ದೃಢವಾದ ಅಪ್ಪುಗೆ ಅವರಲ್ಲಿದೆಯೇ? ಯಾವಾಗಲೂ ಅವರಿವರಿಗೆ ಹೆದರು ಪುಕ್ಕಲುತನ, ಅವರನ್ನು ಹಿಂಡಿ ನಿರ್ಜೀವ ಶವವನ್ನಾಗಿದೆ. ಕತ್ತಲಲ್ಲೂ ಅವರು ಸ್ವತಂತ್ರರಲ್ಲ. ಲಕ್ಷ್ಮಿ ನೀರಪವಾಗಿ ನಿಟ್ಟುಸಿರುಬಿಟ್ಟಳು. ಮತ್ತೆ ಒಂದೆರಡು ಕ್ಷಣಬಿಟ್ಟು ಒಳಗೆ ಬಂದಳು. ಅರುಂಧತಿ ಶಂಕ್ರುನಿಗೆ ಹೇಳುತ್ತಿದ್ದಳು.

"ಮೂರು ಹೊತ್ತು ತಿನ್ನೋಕೆ ಸೈ ನೀವಿಬ್ಬರು. ಆ ಹಾಳು ರಂಡೆ, ಕೆಳಮನೆ ಕೆದಿಲಾಯರ ಸೊಸೆಯ ಕೈಯಿಂದ ನಾನು ಕೇಳ ಬಾರದ ಮಾತನ್ನೆಲ್ಲ ಕೇಳುವ ಹಾಗಾಯಿತು. ನಮ್ಮ ದನ ಬಾಗೀ ರಥಿಯ ಹಿತ್ತಲಿಗೆ ನುಗ್ಗಿದಾಗ ನೀವೆಲ್ಲಿ ಸತ್ತಿದ್ದಿರಿ", ಎಂದು ಕೇಳು ತ್ತಿದ್ದಳು.

ಬೆಳಗ್ಗೆದ್ದರೆ ಊಟವುದಕ್ಕೆ ಪುರುಸೊತ್ತು ಇಲ್ಲದಷ್ಟು ಕೆಲಸ. ತಿರಿಕಟ್ಟುವುದಕ್ಕೆ ನಾಜ ಬಂದಿದ್ದ. ಆವನಿಗೆ ಎಲ್ಲ ಹೊಂದಿಸಿ ಕೊಡುವು ದಕ್ಕೆ ನಾನು ನಿಂತಿದ್ದೆ. ಅವರು ಮಾರನ ಜೊತೆಯಲ್ಲಿ ತೆಂಗಿನಕಾಯಿ ಕ್ರಯ ಮಾಡುವುದಕ್ಕೆ ಹೋದಾಗ ಬಾಗೇರಥಿಯ ಹಿತ್ತಲಿಗೆ ನುಗ್ಗಿರ ಬಹದು ಹೀಗಂತ ಹೇಳಲಿಕ್ಕೇನು ಕಷ್ಟ ಇವರಿಗೆ? ಇವರಿಗೇನು ಬಾಯಿ ಬಿದ್ದುಹೋಗಿದೆಯೇ? ಅವರು ಹೇಳಲಾರದ ಮಾತನ್ನು ತಾನು ಹೇಳಿ ದರೆ ಸುಖವಿಲ್ಲ. ಅವರು ಯಾಕೆ ಹೀಗೆಲ್ಲ ಸೋಲುತ್ತಾರೋ? ಸೋತು ಸಣ್ಣವರಾಗುವುದಕ್ಕಿಂತ, ಎದುರಿಸಿ ಬಾಳೋದು ಎಷ್ಟು ಚಂದ. ಅವ ರಿಗೆ ಇದೆಲ್ಲ ಯಾಕೆ ತಿಳಿಯುವುದಿಲ್ಲ. ನೆಲಸುಟ್ಟು ಅನ್ನ ಹಾಕಿದವರ ಹಾಗೆ ಆಡುತ್ತಾರೆ. ಈ ಮನೆಯನ್ನೇ ಕಚ್ಚಿಕೊಂಡಿರುತ್ತೇನೆಂದು ಇವ ರೇನು ಬರೆದುಕೊಟ್ಟಿದ್ದಾರೆಯೆ? ಹೇಸಿಗೆ ಹೀಗೆಲ್ಲ ಬೈಸಿಕೊಂಡು ನಾವು ಇಲ್ಲಿರುವುದು ಬೇಡ' ಎಂದು ಹೇಳಬೇಕು. ತಾನು ಈಗ ಅರುಂಧತಿಗೆ ಉತ್ತರಿಸಬೇಕು ಎಂದುಕೊಂಡಳು.

"ಎಲ್ಲಿ ಅವಳು ಆ ನಿನ್ನ ರಂಭೆ..."

ಉತ್ತರಿಸಬೇಕು ಎಂದುಕೊಂಡಿದ್ದವಳಿಗೆ ಚೈತನ್ಯವೆಲ್ಲ ಉಡುಗಿ ಹೋದಂತೆನಿಸಿತು. ಲಕ್ಷ್ಮಿ ನಿಧಾನವಾಗಿ ಹಿಂಜರಿದು ಅಂಗಳದ ತುಳಸೀ ಕಟ್ಟೆಯ ಸಮೀಪ ಹೋಗಿ ಕುಳಿತುಕೊಂಳು. ಆಕಾಶದಲ್ಲಿ ಅಲ್ಲೊಂದು ಇಲ್ಲೊಂದು ನಕ್ಷತ್ರಗಳು ಇಣುಕುತ್ತಿದ್ದವು. ಅಮಾವಾಸ್ಯೆ ಹತ್ತಿರವಾಗುತ್ತಿದ್ದುದರಿಂದ ಚಂದ್ರನ ಬೆಳಕಿಲ್ಲ. ಚಿಲಿಪಿಲಿಗುಟ್ಟುವ ಪಕ್ಷಿಗಳ ಸದ್ದು ಅಡಗಿವೆ. ಬರಪು, ಮಿಣ್ಣು ಆಗಲೇ ಹೊರಟು ಹೋಗಿದ್ದರು. ಬಾಗೀರಥಿಯ ವಟಗುಟ್ಟುವಿಕೆ ಮಾತ್ರ ಕೇಳಿಬರುತ್ತಿತ್ತು. ಯಾರೂ ಇಲ್ಲದ ಈ ಹೊತ್ತಿನಲ್ಲಿ ಬಾವಿಗೆ ಹಾರಿಬಿಡಲೇ ಎಂದುಕೊಂಡಳು. ಲಕ್ಷ್ಮಿ ಎದ್ದು ನೆಲಬಾವಿಯ ಹತ್ತಿರ ಬಂದಳು, ಹಿಂದಿನಿಂದ ಯಾರದೋ ನೆರಳು ಹಾಯ್ದಂತೆ ಕಂಡಿತು. ಹಿಂತಿರುಗಿ ನೋಡಿದಳು, ಶಂಕ್ರ ಬಚ್ಚಲ ಹಂಡೆಗೆ ಉರಿ ಮಾಡಲು ಹೊರಟಿದ್ದ.

"ಅದೇನು?" ಎಂದಳು

"ನಾಳೆ ನೀಲಾವರ ಜಾತ್ರೆ ಅಲ್ವೇನಾ, ಬೆಳ್ಳಂಬೆಳಗೀಗೆ ಅಬ್ಬೆ ಹೋಗಲಿಕ್ಕೂ ಸಾಕು" ಎಂದವನು, ನೀನೊಬ್ಬಳೇ ಈ ಕತ್ತಲಲ್ಲಿ ನಿಂತು ಏನು ಮಾಡುತ್ತಿದ್ದೀಯೇ? ಎಂದವನು ಕೇಳಲಿಲ್ಲ. ಹಾಗೆ ಅವನು ಕೇಳಬೇಕು ಎನ್ನುವ ಮನೀಷೆ ಅವಳಿಗೆ. ಆದರೆ ಅದೆಲ್ಲ ಈ ಜನ್ಮದಲ್ಲಿ ಈಡೇರಲಾರದ ಬಯಕೆಗಳು. ವಿಷಯಲಾಲಸೆಗಳನ್ನು ಹತ್ತಿಕ್ಕಿಕೊಳ್ಳಲಾರದೆ ನಿರಾಶೆಯಿಂದ,

"ನಾನು ಸಾಯಲಾ ಹೇಳಿ?" ಎಂದು ಅವಳು ನೇರವಾಗಿ ಅವನನ್ನೇ ಕೇಳಿದಳು.

"ಯಾಕೆ ಏನೂ ಹೇಳುವುದಿಲ್ಲ ನೀವು, ನಾನು ಬೇಡವಾ ನಿಮಗೆ" ಎಂದಳು.

"ನಾನು ಯಾವಾಗ ಬೇಡಾಂತಂದೆ" ಎಂದವನು ಮತ್ತೆ ಕಡ್ಡಿಗೀರಿ

ಒಲೆ ಹೊತ್ತಿಸಲು ಮುಂದಾದ ಗಂಡನ ಮನೋಭಾವನೆಯಲ್ಲೇನಿದೆ? ಎನ್ನುವ ವಿಶ್ಲೇಷಣೆಗೆ ಹೋಗುವುದು ವ್ಯರ್ಥವೆಂದು ತಿಳಿದಿದ್ದ ಲಕ್ಷ್ಮಿ,

"ನಾವು ನೀಲಾವರ ಜಾತ್ರೆಗೆ ಹೋಗೋಣೇನು?" ಎಂದಳು.

"ಉಹು" ಎಂದ.

"ಯಾಕೆ?"

"ಅಬ್ಬೆ ಒಪ್ಪಲಾರಳು"

"ನೀವು ಅವರ ಮುಂದೆಲ್ಲ ಹೆಡ್ಡರಾದದ್ದು ಇದಕ್ಕೆ ನೋಡಿ. ಗಟ್ಟಿ ಮಾತನಾಡುವುದನ್ನು ನೀವು ಮೊದಲು ಕಲಿಯಬೇಕು. ನೀವು ಸುಮನೆ ಇರುವುದು ನಾನು ಮಾತನಾಡುವುದು ಎಂದರೆ ಅದು ಸರಿಯಾಗ ಲಾರದು, ಹೆಣ್ಣಿಗೆ ಬಾಯಿ ಹೆಚ್ಚು ಎಂದಾದೀತು, ಜೊತೆಗೆ ತಿನ್ನುವ ಅನ್ನಕ್ಕು ಕಲ್ಲು ಬಿದ್ದೀತ, ನೀವಾದರೆ ಗಂಡಸು ಎಲ್ಲವನ್ನೂ ಎದುರಿಸಬಲ್ಲೆ ಎನ್ನುವ ಧೈರ್ಯವಿದ್ದರೆ ಅದೊಂದು ಬದುಕು. ಹೀಗೆ ಬಾಳುವುದಕ್ಕಿಂತ ಸಾಯೋದು ಮೇಲು" ಮೊದಲ ಬಾರಿಗೆ ಲಕ್ಷ್ಮಿ ಸಂಕ್ರನಿಗೆ ಉಪದೇಶಿಸಿದ್ದಳು.

ಅವನು ಏನು ಹೇಳುತ್ತಿದ್ದನೋ? ಅಥವಾ ಹೇಳುವುದಕ್ಕೆ ಅವನಿಗೆ ಶಬ್ದಗಳೇ ಸಿಗುತ್ತಿದ್ದವೋ ಇಲ್ಲವೋ ಅಷ್ಟರಲ್ಲೇ ಒಳಗಿನಿಂದ ಅರುಂಧತಿ ಕೂಗಿದ್ದಳು.

"ನಾಳೆ ಬೆಳಗಾತ ನನ್ನ ಅಕ್ಕನ ಮಗಳು ಬರಬಹುದು. ಒಂದು ಸೇರು ಅಕ್ಕಿ ಕಡುಬಿನ ನೆನೆಹಾಕಿದ್ದೇನೆ. ಗಟ್ಟದ ಮೇಲಿಂದ ಮಕ್ಕಳು ಬರುತ್ತಾರೋ ಏನೋ? ನಾಳೆ ನೀಲಾವರ ಜಾತ್ರೆ ಅಲ್ಲವಾ? ಕಳೆದ ವಾರ ಕೊಟ್ಟೆ ಕುತ್ತಿಟ್ಟದ್ದುಂಟು, ಅದನ್ನು ಕಂಡೇ ಕಡುಬಿಗೆ ನೆನೆಹಾಕುವ ಎನಿಸಿತು. ಅಕ್ಕಿ ಕಡೆದಿಟ್ಟುಬಿಡು. ಬೆಳಗಾತ ಎದ್ದು ಬೇಗ ಹೊಯ್ದುರೆ, ನೀಲಾವರಕ್ಕೆ ನಡೆದು ಹೋಗಲಿಕ್ಕೆ ಉಮೇದು ಬಂದಿತು." ಉಹು... ಈ ದಿನ ತಾನು ಅಕ್ಕಿ ಅರೆಯಬಾರದು. ಗಂಡನಂತೆ ತಾನು ಹೆಡ್ಡಳಲ್ಲ. ಲೆಖ್ಖಾಚಾರ ಲೇವಾದೇವಿ ಓದುಬರಹ ಎಲ್ಲ ಗೊತ್ತಿದ್ದವಳು. ಈ ಜವ

ರಿಗೆಲ್ಲ ಹೆದರಬೇಕಾಗಿಲ್ಲ. ಎದುರಿಸಬೇಕು ಇವರೆಲ್ಲರನ್ನು, ಇವರನ್ನು ಮೆಟ್ಟಿನಿಂತು ತಾನು ಗಟ್ಟಿಯಾಗಿ ಬೆಳೆಯಬೇಕು, ದೃಢವಾಗಬೇಕು. ಅವಳು ನಿಂತಲ್ಲಿಂದಲೇ ಹೇಳಿದಳು.

"ಬೇಕಾದರೆ ನೀವೇ ಕಡೆಯಿರಿ, ಈ ಮನೆಯ ತೊತ್ತಲ್ಲ ನಾನು. ಬೆಳಗಿನಿಂದ ಕೆಲಸಮಾಡಿ ನಾನಿನ್ನು ಸಾಯಲಿಲ್ಲ ಬದುಕ್ಕಿದ್ದೇನೆ" ಎಂದಳು.

ಬೆಂಕಿಯ ಉರಿಯನ್ನು ಹೆಚ್ಚಿಸುತ್ತ ಶಂಕ್ರ, ಒಲೆಬಿಟ್ಟು ತಟ್ಟಂತ ಎದ್ದು ಬಂದ. ಮತ್ತೆ ತನ್ನ ಕೈಯನ್ನು ಅವಳ ಬಾಯಿಯ ಅಡ್ಡಕ್ಕೆ ತಂದು ಏನನ್ನೋ ಹೇಳಲು ಪ್ರಯತ್ನಿಸಿದ. ಸೋಲಬಾರದು ಎಂದು ಕೊಂಡಿದ್ದವಳು ಅವನಿಗೆ ಅಮಾಯಕವಾಗಿ ಸೋತಿದ್ದಳು. ಹೀಗೆ ಅವರೂ ಅಬ್ಬೆಗೆ ಸೋಲುತ್ತಿರಬಹುದು ಎನಿಸಿ, ಕೈಕಾಲು ತೊಳೆದು ಕೊಂಡು ದೇವರಿಗೆ ಅಡ್ಡಬಿದ್ದು ಒಳಗೆ ಬರುವಷ್ಟರಲ್ಲಿ, ಶಂಕ್ರ ಕಡೆಯುವ ಕಲ್ಲಿನ ಮುಂದೆ ಕುಳಿತು ಅಕ್ಕಿ ಅರೆಯುತ್ತಿದ್ದ. ಲಕ್ಷ್ಮಿ ಕಣ್ಣೊರಸಿಕೊಂಡು,

"ಪಿ " ಎಂದಳು.

ಅವನು ಎದ್ದು ಮತ್ತೇನೋ ಕೆಲಸಕ್ಕೆ ಹೋದ. ತನ್ನ ಬದುಕೆಲ್ಲ ಹೀಗೆ ಎಂದುಕೊಂಡಳು. ಅರುಂಧತಿ ಒಂದು ಸೇರು ಎಂದು ಹಾಕಿದ ಅಕ್ಕಿ ಎರಡು ಸೇರಿನಷ್ಟಿತ್ತು, ಉದ್ದು ಬೇರೆ. ಉದ್ದು ಒದಗಿಸುವುದಕ್ಕೆ ಎರಡು ಗಂಟೆ ಹೊತ್ತುಬೇಕು. ಇಷ್ಟಾದರೂ ತೃಪ್ತಿಯಿಂದ ತಿನ್ನುವು ದಕ್ಕೆ ತಮಗಿಬ್ಬರಿಗೆ ಸಿಗುವುದಿಲ್ಲ. ಮುಡಿಯುವುದಂತು ಶತಾಯ ಗತಾಯ ತಪ್ಪಿದ್ದಲ್ಲ.

ಅಕ್ಕಿ ರುಬ್ಬಿ ಹೊರಗೆ ಬರುವಷ್ಟರಲ್ಲಿ ಗಟ್ಟದ ಮೇಲೆ ಹೋಗಿದ್ದ ಅರುಂಧತಿಯ ಹಿರಿಯ ಮಕ್ಕಳಿಬ್ಬರು ಸಂಸಾರಸಮೇತ ಬಂದಿರುವುದು ಕಂಡಿತು. ಅವಳು ಮಕ್ಕಳೊಟ್ಟಿಗೆ ಕುಳಿತು ಹರಟುತ್ತಿದ್ದಳು. ತಂದ ತಿನಸನ್ನು ಯಜ್ಞ ಹಂಚುತ್ತಿದ್ದ. ಇವರೆಲ್ಲ ಬಂದುದನ್ನು ಕಂಡು ಶಂಕ್ರ

ಬಚ್ಚಲ ಹಂಡೆಯ ಉರಿ ಹೆಚ್ಚಿಸಲು ಹೋಗಿರಬಹುದು, "ಬಾರೋ ಇಲ್ಲಿ ಶಂಕ್ರ" ಎಂದು ಕೂಗಿದ ಯಜ್ಞ.

ಹಿಂದಕ್ಕೆ ಬಂದ ಅವನಿಗೆ,
"ಹಿಡಿ ನಿನ್ನ ಕೈಯ" ಎಂದ.

ಎರಡು ಕೈಗಳನ್ನು ಜೋಡಿಸಿ ಅವನು ಯಜ್ಞನ ಮುಂದೆ ನೀಡಿದ. "ಹೊಟ್ಟೆ ತುಂಬ ತಿಂಬೋ ತಿಂಡಿ ಅಲ್ಲ ಇದು. ಈ ತಿಂಡಿ ನಿನ್ನ ಒಂಸು ಹಲ್ಲಿಗೂ ಸಿಗತ್ತೋ ಇಲ್ಲೋ. ಇದರ ಹೆಸರು ಹಲ್ವ ಅಂತ. ಇದರ ಕ್ರಯ ಎಷ್ಟು ಗೊತ್ತ ನಿನಗೆ. ಎರಡು ಕೈ ಒಡ್ಡಿಯಲ್ಲ ಮಕ್ಕಳ ಹಾಗೆ, ದಿನಾ ಅಕ್ಕಿ ದೋಸೆ, ಅಕ್ಕಿ ಕಡಬು ತಿಂಬೋವರಿಗೆ ಇದರ ರುಚಿ ಗೊತ್ತಿರಲಿ ಅಂತ ತಂದೆ" ಎಂದ ಯಜ್ಞನ ಮಾತಿಗೆ ಹಿರಿಯರಿಂದ ಮಕ್ಕಳವರೆಗೆ ಮುಸಿ ಮುಸಿ ನಕ್ಕಾಗ ದುಃಖ ತಡೆಯಲಾರದೆ ಲಕ್ಷ್ಮಿಯ ಕಣ್ಣಲ್ಲಿ ನೀರಿಳಿದಿತ್ತು. ಎತ್ತಿ ಅವರ ಮುಖಕ್ಕೆ ಒಗೆಯಬಾರದೆ ಇವರು ಎನಿಸಿ ಬೇಸರವಾಗಿತ್ತು. ಇಷ್ಟಾದರೂ ಯಾವ ವ್ಯತ್ಯಾಸವನ್ನು ಗುರುತಿಸದ ಗಂಡ ಶಂಕ್ರ ತಿನಿಸನ್ನು ತಿಂದು ಮುಗಿಸಿದ್ದನ್ನು ನೋಡಿ ಅವನ ಮುಖಕ್ಕೆ ಉಗುಳಬೇಕೆನಿಸಿತ್ತು ನಿಜ. ಆದರೆ ಎಲ್ಲರಿಂದ ಬೈಸಿಕೊಳ್ಳುವ ಅವನಲ್ಲಿ ಮರುಕ್ಷಣದಲ್ಲಿ ಅನುಕಂಪ ಉಕ್ಕಿ ಬಂದಿತ್ತು. ತನ್ನ ಮತ್ತು ತನ್ನ ಸುತ್ತಲಿನ ಜನರ ಸ್ವಭಾವವನ್ನು ಅರ್ಥೈಸಿಕೊಳ್ಳಲಾರದವನಾಗಿದ್ದರೂ ಶಂಕ್ರನಂತು ತನ್ನವನು ಅವನು ಹೇಗೆ ಇರಲಿ ತಾನು ಅವನಿಗೆ ಶರಣಾಗಿರಬೇಕಾದ್ದು ಅನಿವಾರ್ಯ ಎಂದುಕೊಂಡಳು.

"ನಾವೆಲ್ಲ ಈಗ ಊರಿಗೆ ಬರುವುದಕ್ಕೆ ಕಾರಣ ಏನು ಅಂತ ಗೊತ್ತಾ ಅಚ್ಚೆ?" ಎಂದ ಯಜ್ಞನ ಮಾತಿನಿಂದ ಎಚ್ಚೆತ್ತು ಮತ್ತೆ ತನ್ನ ಯೋಚನೆಯನ್ನು ಬದಿಗಿಟ್ಟು ಅಲ್ಲೇ ಕಂಬದ ಓರೆಯಲ್ಲಿ ನಿಂತುಕೊಂಡಳು ಲಕ್ಷ್ಮಿ. "ಸರ್ಕಾರ ಸದ್ಯದಲ್ಲೇ ಭೂಸುಧಾರಣೆಯನ್ನು ಜಾರಿಗೆ ತರಲಿದೆ, ಮತ್ತೆ ಉಳುವವನಿಗೆ ಭೂಮಿ ಎಂದಾಗುತ್ತದೆ. ಒಕ್ಕಲು ಮಕ್ಕಳಿಂದ ನಾವೀಗ ಭೂಮಿಯನ್ನು ಬಿಡಿಸಿಕೊಳ್ಳಬೇಕಾಗದೆ. ಇಲ್ಲವಾದರೆ ಅದೆಲ್ಲ ನಮ್ಮ

ಕೈಬಿಟ್ಟು ಹೋಗಬಹುದು. ಒಕ್ಕಲು ಮಕ್ಕಳು ಒಳ್ಳೆಯವರು ತಕರಾರು ಮಾಡುವ ಜನರಲ್ಲ. ಸುಲಭವಾಗಿ ಅವರು ನಮ್ಮ ಭೂಮಿಯನ್ನು ನಮಗೆ ಒಪ್ಪಿಸಿಯಾರು, ದುಡಿಯುವುದಕ್ಕೆ ಅವ ಇದ್ದಾನಲ್ಲ. ಮತ್ತೊಂದು ವಿಷಯ, ಭೂಮಿಯನ್ನು ಈಗಲೇ ಪಾಲು ಪಡೆದು ಹೊಗುತ್ತೇವೆ, ಅದಕ್ಕಾಗಿಯೇ ನಾವೆಲ್ಲ ಒಟ್ಟಿಗೆ ಬಂದೆವು, ಏನು ಹೇಳು ತ್ತೀಯ?" ಅಬ್ಬಿ, ಎಂದ.

ಯಜ್ಞನ ಮಾತಿಗೆ,

"ಆಗಬಹುದು, ಯಾರಾರ ಪಾಲಿಗೆ ಯಾವುದು ಸೇರಬೇಕೋ. ನೀವೇ ಇತ್ಯರ್ಥ ಮಾಡಿಕೊಳ್ಳಿ" ಎಂದಳು ಅರುಂಧತಿ.

'ನನಗೆ ಮೂಡುಬದಿಯಲ್ಲಿರುವ ಗದ್ದೆಯಿರಲಿ' ಎಂದ ಯಜ್ಞ. ಅದಕ್ಕೆ ತಾಗಿಕೊಂಡಿದ್ದ ಗದ್ದೆಯನ್ನು ಎರಡನೆಯವ ತನಗಿರಲಿ ಎಂದ. ಮೂರನೆಯ ಮಾಣಿಗೂ, ನಾಲ್ಕನೆಯವನಾದ ನಾರಾಯಣನಿಗೂ ಅರುಂಧತಿಯೇ ತೆಂಗಿನ ತೋಟ, ಹಾಡಿಯ ಪಕ್ಕದಲ್ಲಿದ್ದ ಕಾಡುಗಳಿರಲಿ ಎಂದು ಗೊತ್ತುಮಾಡಿದಳು. ಇಷ್ಟೆಲ್ಲ ಇತ್ಯರ್ಥವಾದಮೇಲೆ.

"ಮನೆಯಲ್ಲಿರುವ ಆಭರಣಗಳನ್ನು ಈಗಲೇ ಭಾಗಮಾಡಿಬಿಡುತ್ತೇನೆ ಮತ್ತೆ ಅದಕ್ಕೆ ಬೇರೆ ದಿನ ಅಂತ ಕೂರುವುದು ಯಾತಕ್ಕೆ, ಯಾವತ್ತಿದ್ದರೂ ಅದೆಲ್ಲ ನಿಮಗೇ ಸೇರಬೇಕಾದ್ದು ತಾನೇ?" ಎಂದು ಒಳಗೆದ್ದು ಹೋಗಿ ಆಭರಣಗಳನ್ನಿಟ್ಟಿದ್ದ ಪೆಟ್ಟಿಗೆಯನ್ನು ಹೊರಗೆ ತಂದಳು. ಯಜ್ಞನ ಹೆಂಡತಿಗೆ ತನ್ನ ಹಳೇ ಆಭರಣಗಳಲ್ಲೊಂದಾದ ಗೆಜ್ಜೆ ಮುರಗಿ ಸೊಂಟದ ಪಟ್ಟಿಯನ್ನು ಕೊಟ್ಟಳು. ಎರಡನೆಯವನ ಹೆಂಡತಿಗೆ ನಾಲ್ಕು ಬಳೆ ಎರಡು ಉಂಗುರಗಳನ್ನು ನೀಡಿದಳು. ಮೂರನೆಯವನ ಹೆಂಡತಿಗೆ ತನ್ನ ಮೂರೆಳೆಯ ಪೋಣಿಸಿನಸರವನ್ನು, ನಾಲ್ಕನೆಯವನ ಹೆಂಡತಿ ಇನ್ನು ಬರದೆ ಇದ್ದರೂ ಅವಳ ಪಾಲನ್ನು ಬೇರೆಯಾಗಿ ತೆಗೆದಿರಿಸಿದಳು.

ಇಷ್ಟಕ್ಕೆ ವ್ಯವಹಾರಗಳೆಲ್ಲವು ಮುಕ್ತಾಯಗೊಂಡುದರಿಂದ ಲಕ್ಷ್ಮಿ

ಕುಳಿತ್ತಲೇ ಜಡವಾಗಿದ್ದಳು. ನಿಶಾಶೆಯಿಂದ ಅವಳ ಕಣ್ಣಲ್ಲಿ ನೀರಿಳಿದಿತ್ತು. ಇವರಿಗೆ ಯಾವುದರಲ್ಲೂ ಭಾಗವಿಲ್ಲ. ಕೇಳುವ ಚೈತನ್ಯ ಇವರಿಗೆ ಇದ್ದರಲ್ಲವೇ ! ಕೊಡುವ ಚೈತನ್ಯ ಅವರಿಗೆ ಬರುವುದು. ಭೂಮಿಗೊಂದು ಭಾರ ಇಂತ ಜನ. ನಾಳೆ ನಾವು ಹೇಗೆ ಬದುಕಬೇಕು ಎನ್ನುವುದನ್ನು ಯೋಚಿಸಲು ಬರದ ಜನ ಯಾತಕ್ಕಾಗಿ ಹುಟ್ಟುತ್ತಾರೆ ಎಂದು ವಿಚಾರ ಮಾಡುತ್ತಿದ್ದವಳಿಗೆ ಶಂಕ್ರ 'ಅಚ್ಚೆ' ಎಂದಾಗ ಕಿವಿ ನೆಟ್ಟಗೆ ಆಗಿತ್ತು.

"ಏನೋ ಅದು?" ಒಂದು ರೀತಿಯ ಜಿಗುಪ್ಸೆಯಿಂದ ಅವನ ಕಡೆಗೆ ನೋಡುತ್ತ ಕೇಳಿದಳು ಅರುಂಧತಿ. ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೆಲ್ಲ ಗಟ್ಟಹತ್ತಿ ಅವರಷ್ಟಕ್ಕೆ ಅವರಿದ್ದರೂ, ವಾಂಚಲ್ಯದಿಂದ ಅವರೆಲ್ಲರ ಹಿಡಿತ ದೃಷ್ಟಿಯನ್ನು ಬಯಸಿ, ಮನೆಯ ಸಮಸ್ತ ವಸ್ತುವನ್ನು ಅವರೆಲ್ಲರಿಗೆ ಸರಿಯಾಗಿ ವಿತರಣೆ ಮಾಡಿದ್ದಳು. ಆದರೆ ಕರುಳಬಳ್ಳಿ ಅಲ್ಲವಾದರೂ ರಕ್ತಬಂಧುವಾಗಿದ್ದ ಶಂಕ್ರನಿಗೆ ಅದರಲ್ಲೂ ಅನವರತವೂ ಜೊತೆಗೇ ಇದ್ದು ಒಪ್ಪಿಸಿದ ಕೆಲಸವನ್ನು ಭಕ್ತಿಶ್ರದ್ಧೆಗಳಿಂದ ಮಾಡುವ ಶಂಕ್ರನಿಗೆ ಒಂದು ಕವಡೆ ಕಾಸಿನ ಆಸ್ತಿಯನ್ನು ನೀಡಿರಲಿಲ್ಲ. ಈಗ ಅವನು ಬಾಯಿಬಿಟ್ಟಾಗ ಹೆಡ್ಡನಾಗಿದ್ದ ಅವನು ಏನನ್ನು ಬಯಸಿಯಾನು? ಅಥವಾ ಬಯಸಿದರೂ ಕೊಡುವವರೊಬ್ಬರು ಬೇಕಲ್ಲ ಎನ್ನುವ ಉದಾಸೀನ ಭಾವದಿಂದ ಅವಳು, "ಏನೋ ಅದು ನಿನ್ನದು?" ಎಂದು ಮತ್ತೊಮ್ಮೆ ಗಟ್ಟಿಸಿ ಕೇಳಿದಳು. ಶಂಕ್ರನ ಹಣೆ ಈಗ ಬೆವರಿತು. ಅನವ ವಿಶಾಲ ಕಣ್ಣುಗಳು ಮಂಕಾದವು ಹೇಳಬೇಕಾದುದನ್ನು ಹೇಳಲು ಮನಸ್ಸು ಹಾತೊರೆದರೂ ಅವಳ ಮಾತಿಗೆ,

"ಏನಿಲ್ಲ ಅಚ್ಚೆ", ಎಂದ.

"ಏನು ಹೇಳಿಯೋ ಹೇಳೋ ಮಾರಾಯ, ಕೊಡೋಕಾದ್ರೆ ಕೊಡೋದು ಇಲ್ಲವಾದ್ರೆ ಇಲ್ಲ ಅನ್ನೋದು. ಅದಕ್ಕೆ ಯಾಕೆ ಶಾಗ" ಎಂದಳು.

ಈ ಮಾತಿನಿಂದ ಲಕ್ಷ್ಮಿಯ ಹೃದಯದಲ್ಲಿ ಆಸೆಯು ಚಿಗುರೊಡೆಯಿತು.

ಗಂಡ ಏನನ್ನೋ ಕೇಳಿ ಪಡೆಯಲಿದ್ದಾನೆ. ಅರುಂಧತಿ ಕೊಡುತ್ತಾಳೋ ಬಿಡುತ್ತಾಳೋ ಅದು ಅವಳಿಗೆ ಸೇರಿದ್ದು. ಆದರೆ ಕೇಳುವಂತ ದಿಟ್ಟತನ ಗಂಡನಿಗೆ ಬಂತಲ್ಲ ಎನ್ನುವ ಆನಂದ ಅವಳಿಗೆ.

ಅವನ ಮನಸ್ಸಿನಲ್ಲಿ ಏನಿರಬಹುದು. ತಮಗೆಲ್ಲ ಆಸ್ತಿ ವಿಲೇವಾರಿ ಆಯ್ತೆಂದು ಅಸೂಯೆಯಂತೂ ಪಡಲಾರ. ಅಂತಹ ಒಂದು ಬುದ್ಧಿವಂತಿಗೆ ಇದ್ದಿದ್ದರೆ ಅವನೆಂದೂ ಈ ಮನೆಯಲ್ಲಿ ಬಾಳುತ್ತಿರಲಿಲ್ಲ, ತಮ್ಮಂತೆ ಗಟ್ಟಿ ಹತ್ತುತ್ತಿದ್ದ–ಯಜ್ಞನ ಯೋಚನೆ ಹೀಗೆ ಸಾಗಿತ್ತು.

ಶಂಕ್ರು ಬೆಲೆಭಾಳುವ ಏನಾದರೊಂದು ವಸ್ತುವನ್ನು ಅವನ ಹೆಂಡತಿಯ ಪ್ರಚೋದನೆಯಿಂದ ಬೇಡುತ್ತಿರಬಹುದೆ! ಹಾಗೇನಾದರೂ ಅವ ಬೇಡಿದರೆ, ಅಬ್ಬೆಗೆ ಹೇಳಬೇಕು. ಅವನಿಗೆ ಬೇಡುವ ಹಕ್ಕು ಇಲ್ಲ ಅಂತ ಹೇಳಬೇಕು. ಈವರೆಗೆ ಅವನೂ ಅವನ ಹೆಂಡತಿ ಈ ಮನೆಯಲ್ಲಿ ಬಿಟ್ಟಿ ಕೂಳು ಕತ್ತರಿಸುತ್ತಿದ್ದಾರಲ್ಲ. ಅದೆಲ್ಲ ಲೆಖ್ಖ ಅಲ್ಲವಾ ಅಂತ ಅಬ್ಬೇ ಕೇಳಲಿ ಅವನನ್ನು, ಘರಡನೆಯವ ಯೋಚಿಸುತ್ತಿದ್ದ.

ಅಷ್ಟರಲ್ಲೇ ಶಂಕ್ರುನೆಂದ,

"ಅಬ್ಬೆ ನಿನ್ನ ಪೆಟ್ಟಿಗೆಯಲ್ಲಿ ನನ್ನ ಪಾಲಿಗೆ ಸೇರಬೇಕಾದ ನನ್ನ ಹೆತ್ತಬ್ಬೆಯ ಒಂದೇ ಒಂದು ಸೀರೆ ಇದೆ. ಅದು ಇದುವರೆಗೆ ನಿನ್ನ ದೃಷ್ಟಿಗೆ ಬಿದ್ದಿದೆಯೋ ಇಲ್ಲವೋ ಅದು ನನಗೆ ತಿಳಿಯದು. ನನಗೆ ಮಾತ್ರ ಆ ಸೀರೆ ಬೇಕು. ಇನ್ನಾವ ಆಸ್ತಿಪಾಸ್ತಿಯೂ ನನಗೆ ಬೇಡ ಅಬ್ಬೆ. ಅದು ನನ್ನ ಹೆತ್ತಬ್ಬೆಯದು, ಅವಳು ಉಟ್ಟು ನನ್ನ ಪಾಲಿಗೆ ಇಟ್ಟದ್ದದು. ಅದು ಈಗ ಲಕ್ಷ್ಮಿಗೆ ಉಡಲು ಬರದಿದ್ದರೂ ಸರಿ. ಅವಳ ಆಶೀರ್ವಾದವೆಂದು ನಾವಿಬ್ಬರು ಇಂದು ನಿನ್ನಿಂದ ಪಡೆಯುತ್ತೇವೆ, ಕೊಟ್ಟುಬಿಡು. ಅಬ್ಬೆ" ಎಂದ ಅವನ ಮಾತಿನಿಂದ ಅರುಂಧತಿಯ ಕಣ್ಣಾಲಿಗಳು ತುಂಬಿಕೊಂಡವು.

ಯಜ್ಞ ಒಳಗೆದ್ದು ಹೋದವನು ಒಂದು ಹರಿವಾಣದಲ್ಲಿ ಅವನು

ಬೇಡಿದ ಸೀರೆಯನ್ನು, ಜೊತೆಗೆ ತನ್ನ ಪಾಲಿಗೆ ಬಂದ ಒಡವೆಗಳನ್ನಿಟ್ಟು ಹೊರಗೆ ಬಂದವನು, ಅಬ್ಬೆಗೆ ಹೇಳಿದ.

"ಶಂಕ್ರ ಬೇಡಿದ್ದು ಒಂದು ಸೀರೆ ನಿಜ. ಆದರೆ ಅದರಲ್ಲಿ ಅಡಗಿರುವ ಅದನ ವಿಶಾಲ ಪ್ರಜ್ಞೆ ನಮಗಿಲ್ಲದೇ ಹೋಯಿತು. ಅಬ್ಬೆ ನಿನ್ನ ಅನುಭವಕ್ಕೆ ಇದು ಈಗಾಗಲೇ ಬಂದಿರಬೇಕು. ಗಟ್ಟ ಹತ್ತಿ ಹೋದ ನಮ್ಮನ್ನು ನೆನಪು ಮಾಡಿಕೋ.., ಅವನಿಗಿರುವ ಪ್ರಜ್ಞೆ, ನಡುಗಿದೆಯೆ ಅಬ್ಬೆ? ಅವನನ್ನು ಹೆಡ್ಡನೆಂದು ಬಗೆದ ನಾವೇ ಹೆಡ್ಡರು ನೋಡು, ಇಷ್ಟು ಕಾಲ ನಾವಾರು ಅಡನನ್ನು ಅರ್ಥೈಸಿಕೊಂಡಿಲ್ಲ ಅಷ್ಟೆ. ಬಲಿಷ್ಠರಾದವರ ಮುಂದೆ ಬಗ್ಗುವ ಜನರು ಹೆಡ್ಡರಂತೆ ಕಾಣುತ್ತಾರೆ ಅಷ್ಟೆ, ನಿಜವಾಗಿ ಅವರು ಹೆಡ್ಡರಲ್ಲ. ನಿಜವಾಗಿ ನಾನಿಂದು ಶಂಕ್ರಣ್ಣನಲ್ಲಿ ಕ್ಷಮೆಯಾಚಿಸು ತ್ತೇನೆ ಅಬ್ಬೆ ನೀನು ಏನೇ ಹೇಳು. ಈ ಮನೆ ಅವನ ಪಾಲಿಗೆ ಸೇರಬೇಕು, ಅವನು ನಮಗೆಲ್ಲ ಹಿರಿಯನು" ಎಂದ.

ಯಜ್ಞನ ಮಾತಿಗೆ ಉಳಿದವರು ಉತ್ತರಿಸುವಂತಿಲ್ಲ. ಮೊದಲಿ ನಿಂದಲೂ, ತನ್ನ ಹಕ್ಕನ್ನು ಸ್ಥಾಪಿಸಿಕೊಂಡು ಬಂದವನು ಯಜ್ಞ. ಅವನ ಮಾತಿಗೆ ಉಳಿದವರು ಸೊಪ್ಪು ಹಾಕಲಾರರು. ಯಜ್ಞ ತನ್ನ ಮುಂದೆ ಇಟ್ಟ ಪರಿವಾಣವನ್ನು ಶಂಕ್ರ ಲಕ್ಷ್ಮಿಯತ್ತ ಸರಿಸಿದ, ಲಕ್ಷ್ಮಿ ಅವಾಕ್ಕಾಗಿ ಯಜ್ಞನನ್ನೇ ನೋಡುತ್ತಿದ್ದಳು.

---

# ಅಧ್ಯಾಯ-೨

## ಗ್ರಾಮೋದ್ಧಾರ!

—[ಟಿ. ಸುನಂದಮ್ಮ]

ಮಿರುಮಿರುಗುವ ಆ ನೀಲಿ—ಬಿಳುಪಿನ ಉದ್ದನ್ನ ಬಸ್ಸು ಸುಟ್ಟ ಹಳ್ಳಿಯ ಸಮೀಪ, ಕೆಟ್ಟ ಕಿರು ದಾರಿಯಲ್ಲಿ ಜಲಕನ್ಯೆಯಂತೆ ಈಜುತ್ತ ಬಂದು ನಿಂತಾಗ ಥಳ್ಳಿ, ಮಂದಿ ದೂರದಿಂದಲೇ ಆಶ್ಚರ್ಯದಿಂದ ನೋಡುತ್ತ ನಿಂತರು, ಮಕ್ಕಳು 'ಓ! ಹೋ!!' ಎಂದರಚುತ್ತ ರಸ್ತೆಯ ಕಡೆಗೇ ಓಡಿದರು. ಇಷ್ಟರಲ್ಲಿ ಬಸ್ಸಿನ ಬೃಹತ್ ಗರ್ಭದಿಂದ ಹೆಂಗಸರು, ಗಂಡಸರು, ಹುಡುಗರು, ಹುಡುಗಿಯರು, ಇಳಿದು ತಮ್ಮ ಹಳ್ಳಿಯ ಕಾಲು ಹಾದಿಯನ್ನೇ ಹಿಡಿದಾಗ ನಿಬ್ಬೆರಗಾಯಿತು ಆ ಹಳ್ಳಿಯ ಪ್ರಜಾ ಸಮೂಹ !

"ಟೂರಿಸ್ಟು ಕಣ್ಲಾ!"—ನಗರಕ್ಕೆ ಒಂದೆರಡು ಸಾರಿ ಭೇಟಿಕೊಟ್ಟಿದ್ದ ನಿಂಗ, ತಾನೇ ಸರ್ವಜ್ಞನೆನ್ನುವ ಧಾಟಿಯಲ್ಲಿ ನುಡಿದ.

"ಅಂದ್ರೆ?"—ಪ್ರಶ್ನೆ ಹಾಕಿದವ, ಬಾಯಿ ತುಂಬ ತಂಬುಲ ತುಂಬಿ ಹೊಗೆಸೊಪ್ಪು ತೀಡುತ್ತ ಪಕ್ಕದ ಜಗುಲಿಯ ಮೇಲೆ ಕೂತಿದ್ದ ಪಾಪಜ್ಜ.

ಅಂದರೆ, ಊರೂರು ನೋಡಾಕೆ ಅಂತ ಬಸ್ ಮಾಡ್ಕಳ್ಳಾದು, ಒಂದೀಟ್ಮಂದಿ ಒಟ್ಗೆ ತಿಗೀಟು ತೆಗೆಯೂದು, ಸುತ್ತಾದು !

"ಹಹಹಹ!...ಹಹಹಹಹ!!"

"ಆದ್ಯಾಕಜ್ಜ ಅಂಗೆ ನಗ್ತೀಯ?"

"ಮತ್ತೆ ನಗ್ದೆ ಏನು ಮಾಡಲೋ ನಿಂಗ? ನಮ್ಮೂರ್‍ನಾಗೆ ಏನಿದೆ ನೋಡಾಕೆ?" ನಿಜ. ಸುಟ್ಟಹಳ್ಳಿಯಲ್ಲಿರುವುದಾದರೂ ಏನು? ನೀರಿಲ್ಲದ ಕೊಳಚೆ ಕೆರೆ, ತಲೆ ಒಡೆದ ಗೋಪುರ, ಮಾರಮ್ಮನ ಮುರುಕುಗುಡಿ...

"ಅವ್ರು ದೇವತೆಗೋಳು"—ಅಜ್ಜಿಯ ಬಾಯಿಂದ ದ್ಯಾವರ ಕತೆಗಳನ್ನು ಕೇಳಿ ಆರುವರ್ಷಕ್ಕೇ ಅಧ್ಯಾತ್ಮದ ಹೊದಿಕೆ ಹೊದ್ದಿದ್ದ ಪುಟ್ಟಸಿದ್ದ ಉವಾಚ! (ಹಿಂದಿನ ವಾರ, ಮಲಗುವಾಗ ಧ್ರುವಚರಿತ್ರೆ ಕೇಳಿನ ಸುಕಿನಲ್ಲಿ ಮನೆಯ ಮುಂಬಾಗಿಲು ತೆಗೆದು ಮೂರು ಮೈಲು ನಡೆದು ಕೆರೆಯ ದಂಡೆಯಲ್ಲಿ 'ತಪಸ್ಸಿ'ಗೆ ಕೂತಿದ್ದ ಆ ಹೈದಸಿದ್ದನನ್ನು, ಊರು ಗೌಡ ಹೊತ್ತು ಮೂಡಿದಾಗ ಹೊತ್ತು ತಂದು ಕಂಗಾಲಾದ ಅವನಪ್ಪ ಅಮ್ಮಂದಿರ ಮುಂದೆ ಇಳಿಸಿದ್ದ!)

ಬಸ್ಸಿಗರು ಒಂದು ರೀತಿಯಲ್ಲಿ ದೇವತೆಗಳಂತೆಯೇ ಇದ್ದರು! ಎಲ್ಲರದೂ ಇಸ್ತ್ರಿ ಮಾಡಿದ ಹಾಲು ಬಿಳುಪಿನ ಉಡಿಗೆ; ನಗೆಯ ಬೆಳದಿಂಗಳನ್ನೇ ಚೆಲ್ಲುವ ಹೂಮೊಗದ ಸಲುಗೆ; ಜಗತ್ತನ್ನೇ ಗೆಲ್ಲುವಂತೆ ಶಿಸ್ತಿನ ಸಮಾನಾಂತರದ ದಿಟ್ಟ ನಡಿಗೆ!

"ಅಕೋ! ಆಯಮ್ನೇ...ಆಯಮ್ನೇ ಇರಬೇಕು ಸೂರ್ಪನಕೀ!"

—ದಪ್ಪತಲೆ, ಬಚ್ಚಲಮನೆ ತಂಬಿಗೆ ಗಾತ್ರದ ತುರುಬು, ಕಿವಿಗೆ ಆಂಟಿಸಿದ್ದ ಐವತ್ತು ಪೈಸೆಗಳು (ಅರ್ಥಾತ್ ಬೆಳ್ಳಿವಾಲೆಗಳು), ಅಷ್ಟೇ ಅಗಲದ ಕುಂಕುಮ ಇರಿಸಿಕೊಂಡ ಎರಡು ಮೀಟರೆತ್ತರದ ಅಜಾನುಬಾಹು, ಗುಂಪಿನ ಮುಖಂಡೆ ಅರವಿಂದಮ್ಮನನ್ನು ಕಂಡು ಪುಟ್ಟಸಿದ್ದ ಹೆದರಿ ಕಿರುಚಿದಾಗ, ಪುಣ್ಯಕ್ಕೆ ಅದು ಆಕೆಯ ಕಿವಿಗೆ ಬೀಳಲಿಲ್ಲ!...ಸಿದ್ದನ ಕಿವಿ ಹಿಂಡಿ ಗುಡಿಸಲೊಳಕ್ಕೆ ಅಟ್ಟಿದ, ಬೃಹಸ್ಪತಿ ನಿಂಗ.

"ನಮಸ್ಕಾರ! ನಮಸ್ಕಾರ!!"

—ಧಾರಾಳವಾಗಿ ಎರಡು ಕಪ್ಪು ಸಾಸರುಗಳನ್ನು ಕೂರಿಸಬಹುದಾದ ತಟ್ಟೆಯಗಲ ಹಸ್ತಗಳನ್ನು ಜೋಡಿಸಿದ ಅರವಿಂದಮ್ಮನಿಗೆ ತಮಗರಿವಿಲ್ಲದೆಂಬಂತೆ ಪ್ರತಿ ಕೈಮುಗಿದರು, ನಿಂತಿದ್ದವರು.

ನಾವು...ನಗರದ "ಸೇವಾಕಾಂಕ್ಷೀ ಸಂಘ"ದ ಸದಸ್ಯರು; ಗ್ರಾಮೋದ್ಧಾರ ಕಾರ್ಯಕ್ಕಾಗಿ ಬಂದಿದ್ದೇವೆ."

—ಅರವಿಂದಮ್ಮ ದಾಳಿಂಬೆ (ಕೃತಕ) ದಂತ ಪಂಕ್ತಿ ತೆರೆದು ನಕ್ಕು ಹೇಳಿದಾಗ, ಏನೂ ಅರ್ಥವಾಗದ ಹಳ್ಳಿಗರು ಚಿತ್ರಪಟದ 'ಸ್ಟಿಲ್ ಪಿಕ್ಚರ್' (Still Picture) ನಂತೆ ನಿಂತರು,

"ವೋಟು ಕೇಳಾವರೇನ್ಲಾ" ಪಾಪಜ್ಜ ಪಿಸುಗುಟ್ಟಿದ.

"ಈಗೆಂತ ವೋಟು? ಇನ್ನೂ ಉಗಾದಿ ಮುಂದಲ್ವಾ?" ನಿಂಗ ಸಿಡುಗುಟ್ಟುತ್ತ ಮರುಪಿಸುಗುಟ್ಟಿದ.

ಈಗ ಅಸಿಸ್ಟೆಂಟ್ ಅನಂತಲಕ್ಷ್ಮಿ ಅರವಿಂದಮ್ಮನ ಅಮೃತವಾಣಿಯನ್ನು ಸರಳವಾಗಿ ತಿಳಿಹೇಳಲು ಮುಂದೆ ಬಂದಳು.

"ಜನಸೇವೆಯೇ ಜನಾರ್ದನ ಸೇವೆ ಕಂಡ್ರಾ? ಅದಕ್ಕೇ ನಿಮ್ಮಂಥಾವರ ಸೇವೆಗೆ ಅಂತ ನಾವೆಲ್ಲ ಈ ಸಂಘ ಕಟ್ಟಿದೀವಿ. ಇವರ ಹೆಸ್ರು ಅರವಿಂದಮ್ಮನೋರು ಅಂತ; ಇವರೇ, ನಮ್ಮ ಮುಂದಾಳು;...ಗ್ರಾಮೋದ್ಧಾರ, ಅಂದರೆ ನಿಮ್ಮ ಹಳ್ಳಿಗೆ ಒಳ್ಳೇದು ಮಾಡಲಿಕ್ಕೆ ಅಂತಲೇ ನಾವು ಬಂದಿರೋದು."

"ನಮಗೆ ಏನೂ ಕೆಡಕಾಗಿಲ್ವಲ್ಲ? ಇದ್ದದ್ರಲ್ಲಿ ಹೊಟ್ಟೆತುಂಬ ಹಿಟ್ಟು ತಿಂತಿದೀವಿ; ಮಕ್ಳು, ಮರಿ, ದನ, ಕರು, ಆರೋಗ್ಯವಾಗಿವೆ" ಅನ್ನಬೇಕೆನ್ನುವ ಅಪೇಕ್ಷೆ ಪ್ರತಿಯೊಬ್ಬನ ಮನಸ್ಸಿನಲ್ಲೂ ಮೂಡಿದ್ದುಂಟು. ಆದರೆ ನಗರದಿಂದ ಅಪ್ಸರ ಅಪ್ಸರೆಯರೇ ಅವತರಿಸಿ ನಿಂತಿರುವಾಗ...?

"ಮೊದಲು ಮಕ್ಕಳು; ಪಾಪ! ಕಂದಮ್ಮಗಳನ್ನು ಕಣ್ಣಾರೆ ಕಂಡು ಕರುಳು ಕುಯ್ಯುತ್ತಿದೆ, ಕಂಬನಿ ಮಿಡಿಯುತ್ತಿದೆ, ಕನಿಕರದ ಅಳಲು ಮೊಳಗುತ್ತಿದೆ, ಅಂತರಂಗದ ಅಲೆಯಲ್ಲಿ ಅನುತಾಪದ ಪುಷ್ಪ ಅರಳುತ್ತಿದೆ!" –ದಷ್ಟಪುಷ್ಟವಾಗಿ ಬೆಳೆದು ನಿಂತಿದ್ದ ಹಳ್ಳಿ ಮಕ್ಕಳ ಕಡೆ ಕೈತೋರಿ, ಪ್ರಾಸಬದ್ಧವಾಗಿ ಪ್ರಲಾಪಿಸಿ, ಕರ್ಚೀಫಿನ ತುದಿಯಿಂದ ಕಣ್ಣೊರೆಸಿಕೊಂಡವನು, ನಗರದ ಹವ್ಯಾಸೀ ನಾಟಕ ಮಂಡಲಿಯೊಂದರ ಸಬ್ ಜ್ಯೂನಿಯರ್ ನಟ, ನಾಗರಾಜು!

"ಈ ಮಕ್ಕಳ ಮೈತೊಳೆಯಬೇಕು, ಹಲ್ಲುಜ್ಜಬೇಕು, ಉಗುರು ಕತ್ತರಿಸಬೇಕು, ರೋಗದ ಕ್ರಿಮಿಗಳನ್ನು ನಾಶಮಾಡಬೇಕು."

—ಅರವಿಂದಮ್ಮನ ಈ ದಿವ್ಯಗಾನಕ್ಕೆ ಅವಳ ಹಿಂಬಾಲಕ ಹಿಂಬಾಲಕಿಯರು ಪಲ್ಲವಿ, ಚರಣ, ಅನುಪಲ್ಲವಿ, ಹಾಡಿದರು. "ಹಳ್ಳೀಲಿ ರಸ್ತೆಗಳ್ನ ಮಾಡಬೇಕು; ಮೋರಿ ತೋಡಬೇಕು: ಗೊಬ್ಬರದ ಗುಂಡಿಗಳನ್ನ ದೂರ ಸಾಗಿಸಬೇಕು!"

"ಅರವಿಂದಮ್ಮ ಎಂಡ್ ಕೋ" ಪ್ರತಿಗುಡಿಸಿಲನ್ನೂ ಪ್ರವೇಶಿಸಿದರು, ಮನೆ ಒಡತಿಯನ್ನು ಮಾತಾಡಿಸಿದರು. ಸಿಂಬಳದುಂಬಿದ ಕೂಸುಗಳನ್ನು "ಚಂದಿರಬಿಂಬ" ಎಂದು ಮುದ್ದಿಸಿದರು, ಸಗಣಿಸಾರಿಸಿದ ನೆಲವನ್ನು "ಮೊಸೇಯಿಕ್" ಎನ್ನುವಂತೆ ಸವರಿದರು. ಗೋಡೆಗೆ ತಟ್ಟಿದ್ದ ಬೆರಣಿಗಳನ್ನು "ಮಾಡರ್ನ್ ಆರ್ಟ್" ಎಂದು ಮೆಚ್ಚಿದರು, ಮೊಣಕಾಲಮೇಲೆ ಕಿರಿಗೆ ಉಟ್ಟಿದ್ದ ಕನ್ಯೆಯರನ್ನು 'ಮಾಡಲ್ಸ್' ಎಂದು ಬೆನ್ನು ತಟ್ಟಿದರು!

'ಗ್ರಾಮೋದ್ಧಾರ' ಪ್ರಾರಂಭವಾಯ್ತು. ಬಸ್ಸಿನ ಟಾಪಿನ ಮೇಲಿಂದ ಹೊಸಸನಿಕೆ, ಗುದ್ದಲಿ, ಪಿಕಾಸಿ, ಮೇದರ ಮನೆಯಿಂದ ನೇರ ಬಂದಿದ್ದ ಗೂಡೆಗಳನ್ನು ಇಳಿಸಿತಂದರು, ಸೇವಾಕಾಂಕ್ಷೀ ದಸ್ಯರು· ಕೆಲವರು ಸನಿಕೆ ಗುದ್ದಲಿಗಳನ್ನು ಹಿಡಿದು ಸಾಲಾಗಿ ನಿಂತರು, ಮತ್ತೆ ಕೆಲವರು ಮುಳ್ಳುಕಸ ಹೊರಲು ಗೂಡೆ ಹೊತ್ತು ಸಿದ್ಧರಾದರು. ಇನ್ನುಳಿದವರು. ಅಳುವ ಮಕ್ಕಳನ್ನೆಳೆದು ತಂದು ಬಟ್ಟೆ ಕಳಚಿ ಮೈ ತೊಳೆಯಲು ಸನ್ನದ್ಧರಾದರು.

ನಗರದ ನರನಾರಿಯರು ಕೊಕ್ಕರೆಗರಿಯಂತಹ ತಮ್ಮ ಉಡಿಗೆಯನ್ನು ಲೆಕ್ಕಿಸದೆ ಸೇವೆಗೆ ಟೊಂಕ ಕಟ್ಟಿ ನಿಂತ ಮೇಲೆ, ಗ್ರಾಮಸ್ಥರು ನಿಂತು ನೆಮ್ಮದಿಯಿಂದ ನೋಡಲು ಸಾಧ್ಯವೇ? ಹೊಲಗದ್ದೆಯ ಆರಂಬಕ್ಕೆ ರಜೆ ಕೊಟ್ಟು ತಾವೂ ಇವರೊಟ್ಟಿಗೆ ದಟ್ಟಿ ಮೇಲೆ ಕಟ್ಟಿ ನಿಂತರು.

ಬಸ್ಸಿಗೆ ಡೀಸಲ್ಲು, ಕಾರಿಗೆ ಪೆಟ್ರೋಲು, ಯಂತ್ರಕ್ಕೆ ವಿದ್ಯುಚ್ಛಕ್ತಿ ಅಂದಮೇಲೆ ದುಡಿಯುವವರಿಗೆ ಶಕ್ತಿವರ್ಧಕ ಬೇಡವೇ? ಒಂದೆರಡು

ತಾಸು. ಕೆಲಸ ನಡೆಸಿ ಸೋತ ಸ್ವಯಂಸೇವಕರು 'ಕಾ-ಫೀ' ಎಂದು ರಾಗ ಎಳೆದರು.

"ನಮ್ಮೂರ್ನಾಗೆ ಕಾಪಿ ಪುಡಿ ಇಲ್ಲ ಅಪ್ಪಾವ್ರೇ! ಇಲ್ಲಿ ಯಾರೂ ಕಾಪಿ ಗೀಪಿ ಕುಡಿಯಾಪಾಟ ಇಟ್ಗಂಡಿಲ್ಲ"—ತುಸು ಸಂಕೋಚದಿಂದಲೇ ಹೇಳಿದ, ಊರ ಗೌಡ.

"ಚಿಂತೆಯಿಲ್ಲ; ನಾವು 'ನೆಸ್‌ಕೆಫೆ' ತಂದಿದೀವಿ; ಹಾಲುಕೊಟ್ರೆ ಸಾಕು. ಬಡಕಲು ದನಗಳು ಕೊಟ್ಟಿದ್ದ ಪಾವು ಅರೆಪಾವು ಹಾಲು ಸೇವಾಕಾಂಕ್ಷಿಗಳ ಸೇವೆಗಾಯ್ತು; ಹಳ್ಳಿಯ ಎಳೆ ಕಂದಮ್ಮಗಳಿಗೆ ಅವತ್ತು ಏಕಾದಶೀ ವ್ರತ ವಾಯ್ತು. ಪುಡಿ ಕದರಿಸಿ ಪಾನೀಯ ಸಿದ್ಧವಾದ್ದನ್ನು ಬೆರಗುಗಣ್ಣಿಂದ ನೋಡೇನೋಡಿದರು ಆ ಮುಗ್ಧರು.

ಹೀಗೇ ಅವರ ಸುಸ್ತು ಸುಧಾರಿಸಲು ಆಗಾಗ್ಗೆ ಏನಾದರೂ ಬೇಕಾಗು ತ್ತಲೇ ಇತ್ತು. ಯಂಕನ ತೋಟದ ಒಂಟಿ ತೆಂಗಿನಮರದಲ್ಲಿದ್ದ ಎಳೆ ನೀರುಗುದಿ, ಕೆಂಚನ ಹಿತ್ತಿಲ ಬಾಳೆಗಿಡದಲ್ಲಿ ಬಿಟ್ಟಿದ್ದ—(ಅವನು ಯಾರಿಗೂ ಕಾಣದಂತೆ ಅರ್ಧರಾತ್ರಿಯಲ್ಲಿ ಕುಯ್ದು ಅದೆ ಹಾಕಿಟ್ಟು ಕೊಂಡಿದ್ದ; ಸೇವಾಸಂಘದವರ ನಿಃಸ್ವಾರ್ಥ ಮನಸ್ಸು ನೋಡಿ ಕರಗಿ ಹೋದ!)—ಹದನಾದ ಬಾಳೆಗೊನೆ, ಗಂಗವ್ವ 'ಬ್ಯಾಸಗ್ಗೆಂ'ದು ಗಡಿಗೆ ಯಲ್ಲಿ ಮುಚ್ಚಿರಿಸಿದ್ದ ಬೆಲ್ಲದುಂಡೆಗಳು—ಎಲ್ಲ ಅವರ ಶ್ರಮಪರಿಹಾರಕ್ಕೆ ಸಪ್ಲೈ ಆದುವು.

ಇಬ್ಬರು ಪಿಲ್ಟುಗಳು—ರಾಮೋತ್ಸವ ಗಣೇಶೋತ್ಸವದ ಚಪ್ಪರದಲ್ಲಿ ಹಿಡಿಯುವಂತೆ—ಗೋಲಕದ ಡಬ್ಬಿ ಆ ಸುತ್ತ ಹಳ್ಳಿಗರೆದುರು ಹಿಡಿದರು. "ಸೋಪಿಗಾಗಿ; ಮಕ್ಕಳ ಮೈ ತೊಳೆಯುಕ್ಕೆ, ಬಟ್ಟೆ ಒಗೆಯಕ್ಕೆ. ನಾಳೆ ನಗರದಿಂದ ತರ್ತೀವಿ. ಆಮೇಲೆ ಗುಳಿಗೆ ಟಾನಿಕ್ಕು ಕೊಡ್ತೀವಿ. ಅವು ಪುಕ್ಕಟೆ," ಎಂದರು.

ಗಂಡಸರು ಬೀಡಿಗಾಗಿ ಸೊಂಟದಲ್ಲಿ ಸಿಕ್ಕಿದ್ದ ನಾಲ್ಕಾಣೆ ಎಂಟಾಣೆ ನಾಣ್ಯಗಳು, ಜಾತ್ರೆಗೆಂದು ಎಣ್ಣೆಗೂಡಿನಲ್ಲಿ ಹೆಣ್ಣುಮಕ್ಕಳು ಮುಚ್ಚಿಟ್ಟು ಕೊಂಡಿದ್ದ ಪುಡಿಗಾಸು, ಡಬ್ಬಿಯ ಹೊಟ್ಟೆ ಸೇರಿದುವು.

"ಇವತ್ತಿಗೆ ಇದರಲ್ಲೇ ನಡೆಸ್ತೇವೆ"

—ಎನ್ನುತ್ತ ಆ ನಾಗರಿಕ ಮಹಿಳೆಯರು ನೆಲ ಉಜ್ಜುವ ತಂಗಿನ ನಾರಿನ ಬ್ರಷ್ಷಿನಿಂದ ಮಕ್ಕಳ ಮೈ ತಿಕ್ಕಿದಾಗ, ಗಗನ ಮುಟ್ಟುವಂತೆ ಅರಚಿ ಕೊಂಡುವು, ಆ ಬಡಪಾಯಿಗಳು!

ಮಧ್ಯಾಹ್ನ ಮೂರು ಗಂಟೆ; ಮಾರುದ್ದ ರಸ್ತೆ ಆಗಿತ್ತು, ಗೊಬ್ಬರದ ಗುಂಡಿ ಕಾಲುವಾಸಿ ಖಾಲಿ ಆಗಿತ್ತು; ಮಣ್ಣು ಕಲ್ಲು ರಾಶಿ ಅಷ್ಟಿಷ್ಟು ಸಾಗಿತ್ತು. ಅಷ್ಟರಲ್ಲಿ ಅರವಿಂದಮ್ಮ 'ಉಸ್ಸ್‌ಸ್ಸ್' ಎಂದು ಕುಸಿದು ಕೂತುಬಿಟ್ಟಳು. ಮುಖದಲ್ಲಿ ಬೆವರು ಮಿನಿಯೇಚರ್ 'ರಾಜ–ರಾಣಿ–ರೋರರ್–ರಾಕೆಟ್' ಆಗಿ ಇಳಿಯತೊಡಗಿತು. ಸೆಖೆಗೆ ಅತ್ತಿತ್ತ ತಲೆ ಆಡಿಸಿದರ ಪರಿಣಾಮವಾಗಿ, ಸಿಕ್ಕಿಸಿದ್ದ ಹೇರ್‌ಪಿನ್ನುಗಳು ಪದಚ್ಯುತಿ ಪೊಂದಿದುವು. ಒಳಗಿದ್ದ ಪುಟ್ಟ ರುಬ್ಬು ಗುಂಡಿನಂತಹ 'ಬನ್ನು' ಕೆಳಕ್ಕುರುಳಿದಾಗ, ಹೆದರಿದ ಹಳ್ಳಿ ಹೈದರು ಕಿತಾರನೆ ಕಿರುಚಿದುವು!

'ನೇತಾ'ಳೇ ಸೋತಳೆಂದ ಮೇಲೆ ಸಿಬ್ಬಂದಿಯ ಪಾಡೇನು?... ನಿಃಶಸ್ತ್ರೀಕರಣವಾಯಿತು; ಸನಿಕೆ-ಗುದ್ದಲಿ-ಗೂಡೆಗಳು ಬಸ್ಸಿನ ಟಾಪು ಟಾಪು ಸೇರಿದುವು. ಅರವಿಂದಮ್ಮನನ್ನು ಹಳ್ಳಿಗರ ಸಹಾಯದಿಂದ ಅನಾ ಮತ್ತು ಎತ್ತಿಹಾಕಿಸಿದ ಸೇವಾಕಾಂಕ್ಷಿಗಳೆಲ್ಲ ಬಸ್ಸೇರಿಬಿಟ್ಟರು.

"ನಾಳೆ ಬರುತ್ತೇವೆ. ಕೆಲಸ ಮುಂದುವರಿಸ್ತೇವೆ" – ಆಶ್ವಾಸನೆ ನೀಡಿದರು. "ಹ...ಹೌ...ಹೌದು! ಬೆಳಗ್ಗೇನೇ ಬಂದುಬಿಡ್ತೇವೆ"– ತಲೆಯ ಕುರುಚು ಕೂದಲನ್ನು ಹಿಂದಕ್ಕೆ ತಳ್ಳುತ್ತ 'ರೋಡ್‌ರೋಲರ್' ನಂತೆ ಬುಸುಗುಟ್ಟುತ್ತ ಅರವಿಂದಮ್ಮನೂ ದನಿ ಸೇರಿಸಿದಳು. 'ಹುಡುಗ ಹುಡುಗಿಯರು 'ಟಾಟಾ! ಬೈಬೈ! ಎನ್ನುತ್ತ ಕೈ ಆಡಿಸುತ್ತಿರುವಾಗ ನೀಲಿ–ಬಿಳುಪು ವಾಹನ ಹಾರಿಯೋಯಿತು.

"ಎಂತ ಒಳ್ಳೆ ಮಕ್ಳು? ನನ್ನನ್ನ 'ತಾತಾ! ತಾತಾ!' ಅಂತ ಕೂಗ್ಕಂಡೇ ಓದ್ರು!"–ಪಾಪಜ್ಜ ಬೊಚ್ಚು ಬಾಯಿ ಅಗಲಿಸಿ ಹಿಗ್ಗಿದ.

ಬೆಳಗಾಯ್ತು; ಮಧ್ಯಾಹ್ನವೂ ಆಯ್ತು. ಸೇವಾಕಾಂಕ್ಷಿಗಳ ಸುಳಿವೇ ಇಲ್ಲ! ಊರ ತುಂಬ ಹೊಲಸು ಕುಪ್ಪೆ. ಮೋರಿಗೆಂದು ಅರೆ

ಬರೆಕ ಆಗೆದು ಎಲ್ಲೆಲ್ಲೂ ಗಂಜಳ, ನೀರಿನ ಗುಂಡಿ, ಮಣ್ಣು. ಕಲ್ಲು, ಕಸದ ರಾಶಿ ಕೈಕಾಲಿಗೇ ಸಿಕ್ಕುವ ಪರಿಸ್ಥಿತಿ; ಗೊಬ್ಬರದ ಹಳ್ಳ 'ಡಿಸ್ಟರ್ಬ್' ಪಡಿಸಿದ ಪ್ರಯುಕ್ತ, ಧಾರಾಳವಾಗಿ ಸಿಡಿದೆದ್ದ ಸೊಳ್ಳೆ, ನೊಣಗಳು. ಇದ ಕೊಳೆ ಹೋಗಿ ಎದ್ದ ಬೊಬ್ಬೆಗಳಿಂದಾಗಿ 'ಲಬೋ! ಲಬೋ!' ಮಾಡುತ್ತಿದ್ದ ಮಕ್ಕಳು!!

ನೀಲಿ ಬಿಳುಪು ಬಸ್ಸಿಗಾಗಿ ಕಿರುದಾರಿಯತ್ತ ಕಣ್ಣು ನೆಲಿಸಿದ ಗ್ರಾಮ ಸ್ಥರ ಕಣ್ಣೇ ಸೋತವು. ಬಂದದ್ದು ಬಸ್ಸಲ್ಲ: ಬಂದವ--ನಗರದಲ್ಲಿ ನೌಕರಿ ಮಾಡುತ್ತಿದ್ದ ಗಂಗವ್ವನ ಮಗ ರಂಗರಾಜ್. (ರಂಗಯ್ಯ, ರಂಗರಾಜ್ ಆಗಿದ್ದ.) ಹೊಸಬನನ್ನು ಕಂಡ ಕೂಡಲೇ ಸುಟ್ಟಹಳ್ಳಿಯ ಆ ಪುಟ್ಟ ಪ್ರಜೆ ತಮ್ಮ ಹೊಟ್ಟೆಯಲ್ಲಿದ್ದುದನ್ನೆಲ್ಲ ತೋಡಿಕೊಂಡರು. ಪಾಪ! ಆ ಅರೆಬೆಂದವಮ್ಮ ಎಂಗವ್ಳೋ ಏನೋ! ಶಾನೆ ಸುಸ್ತಾಗಿದ್ಲು" ಎಂದು ಪರಿತಪಿಸಿದರು.

"ಆಕೆ ಅರೆಬೆಂದವಳಲ್ಲ, ನೀವು ಪೂರ್ತಿ ಬೆಂದೋರು ಅಂತ ಕಾಣುತ್ತೆ!"

—ರಂಗರಾಜ ಹೀಗೆಂದಾಗ ಅವರೆಲ್ಲ ಕಕ್ಕಾಬಿಕ್ಕಿ. "ಏನ್ಲಾ? ಅಂಗಂದ್ರೆ? "

"ಅಂದಹಾಗೇ, ಎಲ್ಲರೂ ಒಂದೇ ತರಹ ಕೆಲ ಮಾಡ್ತಿದ್ರೋ, ಅಥವಾ ಯಾರಾದ್ರೂ ಫೋಟೋ ಹಿಡೀತಿದ್ರೋ?"

"ಅಂ. ನೀನು ಕೇಳಿದ ಮ್ಯಾಗೆ ನೆಪ್ಪಾಯ್ತು. ಬಸ್ನಾಗಿಂದ ಅದೆಂತದೋ ಪೆಟ್ಗೇ ತಂದಿಟ್ಗಂಡಿದ್ರು. ಒಬ್ಬಯ್ಯ ಅದೇನೋ ಮಿಷಿನ್ನಾಲಿಂದು...

"ಶ್ಪಾಂಡು ಕಣಣ್ಣ!"

"ಅಂ! ಶ್ಪಾಂಡು ಇಡ್ಕಂಡು ಓಡಾಡ್ತಿದ್ದ. ಇನ್ನೊಬ್ಬಯ್ಯ, ಒಂದು ಮಿಷನ್ ಇಟ್ಗಂಡು ಅಲ್ಲಿ ಇಲ್ಲಿ ತಿರುಗಿಸ್ತಾ 'ಗರ್' ಅಂತ ಸದ್ದು ಮಾಡ್ತಿದ್ದ!"

"ಹಹ್ಹಹಹ್ಹಹಹ್ಹ!!"

"ಯಾಕ್ಲಾ ಅಂಗೆ ನಗ್ತೀಯ, ಬಯಲು ನಾಟಕದ ಗಟೋತ್ಕಚನಂಗೆ?"

"ನಾನಲ್ಲಜ್ಜ ನಾಟ್ಕ ಆಡ್ತೋನು. ಅವ್ರು, ನಗರದಿಂದ ಬಂದಿದ್ರಲ್ಲ ಬಣ್ಣದ ಬೀಸಣಿಗೆಗೋಳು-ಅವ್ರು; ಸಿನಿಮಾಕ್ಕೋಸ್ಕರವೋ ಟೆಲಿವಿಷನ್‌ಗೋಸ್ಕರವೋ ನಿಮ್ ಹಳ್ಳೀಲಿ ಈ ನಾಟಕ ಆಡಿದಾರೆ."

"ಅಂಗಂದ್ರೆ...?"

"ಸಿನಿಮಾದಾಗೆ 'ಇಂಡಿಯನ್ ನ್ಯೂಸ್ ರಿವ್ಯೂ' ಅಂತ ತೋರಿಸ್ತಾರೆ..."

"ಔದೌದು! ಪಿಚರ್ ಸುರು ಆಗಕ್ಕೆ ಮುಂಚೆ ಬರತ್ತೆ...ನೊ ಡಿವ್ನಿ" ಎರಡು ಬಾರಿ ನಗರ ಕಂಡ ನಿಂಗ ಉವಾಚ.

ಅದೇ! ಅದರಲ್ಲಿ, ಒಳ್ಳೇ ಕೆಲ್ಸ ಮಾಡ್ತಿರ್ತೋ ಸಂಘಗಳ್ನ, ಸಂಸ್ಥೆಗಳ್ನ, ಕಾರ್ಖಾನೆಗಳ್ನ, ಸ್ಕೂಲುಗಳ್ನ, ಆಸ್ಪತ್ರೆಗಳ್ನ ಆರಿಸ್ಕೊಂಡು ಅವರ ಮೇಲೇ ಚಿತ್ರ ತೆಗೆದು ತೋರಿಸ್ತಾರೆ!....ಈ ಸಂಘದೋರು, ತಾವೂ ತುಂಬಾ ಕೆಲ್ಸ ಮಾಡ್ತಿದೀವಿ ಏನೇನೋ ಉದ್ಧಾರ ಮಾಡ್ತಿದೀವಿ ಅಂತ ಹೇಳ್ಕೊಂಡು, ಪಿಕ್ಚರ್ ತೆಗೆಯೋರನ್ನ ಕರೆಸಿದಾರೆ, ಅದಕ್ಕೇ, ಅವರೆದುರಿಗೆ ಈ ನಾಟಕ!

"ಅಂಗಾ!!"

"ಅಂಗೆ! ಈಗ ಎಲ್ಲಾ ನಗರಗಳಲ್ಲೂ ಟೆಲಿವಿಷನ್ ಬೇರೆ ಬಂದಿದೆ—ಮನೇಲೇ ಕೂತ್ಕೊಂಡು ಸಿನಿಮಾ ನೋಡಿದ ಹಾಗೆ! ಅದರಲ್ಲೂ ಇವೆಲ್ಲ ತೋರಿಸ್ತಾರ!"

"ಅಂಗಾದ್ರೆ ಅಂಗಾದ್ರೆ...ಅವ್ರು, ಆ ದೇವತೆಗೋಳು ಮಾಯ ಆಗಿಬಿಟ್ರಾ? ಇವತ್ತು ಬರಲ್ವಾ?" ಪೆಚ್ಚಾದ ಪುಟ್ಟಸಿದ್ದನ ಯಕ್ಷ ಪ್ರಶ್ನೆ!

"ಹಹಹಹ! ಇವತ್ತೂ ಬರಲ್ಲ, ಯಾವತ್ತೂ ಬರಲ್ಲ. ನೀವು ಅವರ ಗೋಲಕಕ್ಕೆ ಚಂದಾ ಕೂಡಿಸಿ ಕೊಟ್ರಲ್ಲ ಆ ಹಣದಲ್ಲಿ 'ಕ್ಯಾಂಪಾ

ಕೋಲಾ' ಕೊಂಡ್ಕೊಂಡು, ಫ್ಯಾನಿನಡಿ ಕೂತು. ಎಲ್ರೂನೂ ಕುಡೀತಾ ಕೂತಿದ್ದಾರು. ಅರವಿಂದಮ್ಮ ಮುಂದಿನ ರಾಜ್ಯೋತ್ಸವದ ಪ್ರಶಸ್ತೀದೋ ಗಣರಾಜ್ಯ ದಿನದ 'ಪದ್ಮಶ್ರೀ' ಪದಕದ್ದೋ ಕನಸು ಕಾಣ್ತಿದ್ದಾಳು!"

* * *

ಸುಟ್ಟುಹಳ್ಳಿಯನ್ನು ಮತ್ತೆ ಮೊದಲಿನ (ದುಃ) ಸ್ಥಿತಿಗೆ ತಂದ್ಕೊಳ್ಳಲು ಒಂದು ವಾರವೇ ಬೇಕಾಯಿತು.

—: 0 :—

# ಕಲ್ಯಾಣ ಕೃಷ್ಣನ ದೀಪಾವಳಿ

—ಡಾ. ನಳಿನಿ ಮೂರ್ತಿ

ಹಿಂದಿನ ಕಾಲದಲ್ಲಿ ದೀಪಾವಳಿಗೆ ಹೊಸ ಅಳಿಯನನ್ನು ಕರೆದು ಔತಣ ವಪಿಡಿ ಪಂಚೆ, ಉಂಗುರ ಕೊಟ್ಟು ಸತ್ಕರಿಸುತ್ತಿದ್ದರಂತೆ. ಈಗ ಅವೆಲ್ಲ ಹಳೆಯ ಫ್ಯಾಶನ್ ಆಗಿಹೋಗಿದೆ. ನಮ್ಮ ಕಲ್ಯಾಣಕೃಷ್ಣನ ದೀಪಾವಳಿಯ ವಿಷಯ ಕೇಳಿದರೆ, ಇದೀಗ ಈ ಸ್ತ್ರೀಸಮಾನತೆಯ ಕಾಲಕ್ಕೆ ತಕ್ಕ ದೀಪಾವಳಿ ಎನ್ನಿಸದೆ ಇರದು. ಅದರಲ್ಲೂ ಕೆನಡಾ ದೇಶದಲ್ಲಿ ಇನ್ನೆಂತಹ ದೀಪಾವಳಿ ಸಾಧ್ಯ ಎಂ ನೂ ಅನಿಸಬಹುದು.

ದೀಪಾವಳಿಯ ಹಿಂದಿನ ದಿನ ಬುಧವಾರ ಸಂಜೆ ಸೋಫಾದಲ್ಲಿ ಮೈ ಚಲ್ಲಿ ಮಲಗಿ ಓದುತ್ತಿದ್ದ ಕಲ್ಯಾಣಕೃಷ್ಣನಿಗೆ ಟೆಲಿಫೋನ್ ಶಬ್ದ ಕೇಳಿಸಿತು. ತನ್ನ ಹೆಂಡತಿ ಟೆಲಿಫೋನ್ ಎತ್ತಿದ್ದೂ ತಿಳಿಯಿತು. ಆಗಲೂ ಅವನಿಗೆ ತನ್ನ ಮೊದಲ ದೀಪಾವಳಿ ಹೀಗಾಗಬಹುದೆಂಬ ಯೋಚನೆ ಬರಲಿಲ್ಲ. ಮೂರು ತಿಂಗಳ ಹಿಂದೆ ಕೆನೆಡಿಯನ್ ಹುಡುಗಿಯನ್ನು ಮದುವೆಯಾಗಿದ್ದ ಅವನಿಗೆ ದೀಪಾವಳಿ ಹತ್ತಿರ ಬಂದಿದೆ ಎಂದು ತಿಳಿದೂ ಇರಲಿಲ್ಲ.

ಫೋನ್‌ನಲ್ಲಿ ಮಾತಾಡುತ್ತಿದ್ದ ಅವನ ಹೆಂಡತಿ ಜೂಡಿಯ ಧ್ವನಿ ಕಲ್ಯಾಣಕೃಷ್ಣನಿಗೆ ಕೇಳಿಸುತ್ತಿತ್ತು. ಫೋನ್ ಮಾಡಿದ್ದು ಅವಳ ತಂದೆ ಎಂದು ಅವನಿಗೆ ಗೊತ್ತಾಯಿತು. ಎರಡು ನಿಮಿಷದಲ್ಲಿ ಜೂಡಿ ಬಂದು ಪ್ರೈಯ್ಯಾರದಿಂದ ಅವನ ಮೇಲೆ ಕೈ ಹಾಕುತ್ತಾ. "ಕಿಶ್, ಎಂತಹ ಸಿಹಿ ಸೇದ್ದಿ ಗೊತ್ತೇ? ಅಪ್ಪ ಅಮ್ಮ ಇಬ್ಬರೂ ನಾಳೆ ಇಲ್ಲಿಗೆ ಬಂದು ಭಾನು ವಾರದವರೆಗೂ ಇರುತ್ತಾರೆ" ಎಂದಳು.

'ಬಹಳ ಸಂತೋಷ" ಎಂದು ಇವನು ಸಪ್ಪೆಯಾಗಿ ಉತ್ತರ ಕೊಟ್ಟ. ತನ್ನನ್ನು ಕಂಡರೆ ಜೂಡಿಯ ತಂದೆಗೆ ಸ್ವಲ್ಪ ಅನಾದರ ಎಂದೇ ಇವನಿಗೆನ್ನಿಸಿತ್ತು. "ಅದೂ ಸಹಜವೇ. ಒಬ್ಬಳೇ ಮಗಳು ವಿದೇಶಿಯನನ್ನು, ಅದರಲ್ಲೂ ಭಾರತೀಯದನನ್ನು ಮದುವೆಯಾದರೆ ಅವಳ ತಂದೆ ತಾಯಿಗಳಿಗೆ ಬೇಸರವಾಗದೇ ಇರುತ್ತದೆಯೇ?" ಎಂದು ಸಮಾಧಾನ ಮಾಡಿಕೊಂಡಿದ್ದ.

ಎರಡನೆಯ ದಿನ ವಿಮಾನ ಬರುವ ಹೊತ್ತಿಗೆ ಜೂಡಿಯ ಉತ್ಸಾಹವೇ ಉತ್ಸಾಹ. ತನ್ನ ಸಂಭ್ರಮದಲ್ಲಿ ಅವಳಿಗೆ ಗಂಡ ಹಿಂದೆ ಕಾಲೆಳೆಯುತ್ತಾ ಬರುತ್ತಿದ್ದದ್ದು ಗಮನಕ್ಕೇ ಬಂದಿರಲಿಲ್ಲ.

ತಂದೆ ತಾಯಿಗಳ ಮುಖ ಕಂಡೊಡನೆ ಜೂಡಿ ಹಾರಿ ಹೋಗಿ ತಂದೆಯನ್ನು ಅಪ್ಪಿದಳು. ಕಲ್ಯಾಣಕೃಷ್ಣ ಮಾರು ದೂರದಲ್ಲಿ ಕೈಕಟ್ಟಿ ನಿಂತಿದ್ದ. ಮೂರು ತಿಂಗಳ ಮೇಲೆ ಮುದ್ದಿನ ಮಗಳನ್ನು ನೋಡಿದ ಮೊದಲ ಆವೇಗ ಇಳಿದಾಗ, ಹಿಂದೆ ನಿಂತಿದ್ದ ಅಳಿಯನ ಮೇಲೆ ಅತ್ತೆಮಾವಂದಿರ ದೃಷ್ಟಿ ಬಿದ್ದಿತು. "ಹಲೋ ಕ್ರಿಶ್, ಹೌಆರ್ ಯೂ ಮೈ ಬಾಯ್" ಎನ್ನುತ್ತಾ ಮಾವ ಕೈ ಕುಲುಕಿದರು. ಅತ್ತೆ ಅಳಿಯನನ್ನು ಅಪ್ಪಿ ಕೆನ್ನೆಯ ಮೇಲೆ ಮುದ್ದಿಟ್ಟ, "ನಿನ್ನನ್ನು ನೋಡಿ ಬಹಳ ಸಂತೋಷವಾಯಿತು" ಎಂದರು. ಅಲ್ಲಿಗೆ ಅವರ ಕರ್ತವ್ಯ ಮುಗಿಯಿತು. ಮತ್ತೆ ಮಗಳ ಕಡೆ ತಿರುಗಿದರು.

ಸಾಮಾನೆಲ್ಲವನ್ನೂ ಕಾರಿನಲ್ಲಿಟ್ಟು ಎಲ್ಲರೂ ಹತ್ತಿದರು. ಕಾರು ನಡೆಸುತ್ತಿದ್ದ ಕಲ್ಯಾಣಕೃಷ್ಣನಿಗೆ ತಾನೊಬ್ಬ ಡ್ರೈವರ್ ಮಾತ್ರ ಎನ್ನಿಸಿತು. ಉಳಿದ ಮೂವರೂ ತಮ್ಮದೇ ಮಾತಿನಲ್ಲಿ ಮುಳುಗಿದ್ದರು. ಅವರ ಊರು ಪರಿಚಯದವರು, ಸಂಬಂಧಿಕರ ಮಾತಿನಲ್ಲಿ ಇವನಿಗೇನೂ ಸ್ಥಾನವಿರಲಿಲ್ಲ. ಮನೆ ಸೇರುತ್ತಲೂ ಕಲ್ಯಾಣಕೃಷ್ಣ ಅವರ ಸಾಮಾನೆಲ್ಲವನ್ನೂ ಒಳಗೆ ತೆಗೆದುಕೊಂಡು ಹೋಗಿಟ್ಟು, ಆಮೇಲೆ, "ಜೂಡಿ, ಸುಬ್ಬರಾಯರ ಹತ್ತಿರ ಒಂದು ಪುಸ್ತಕ ತರಬೇಕಾಗಿತ್ತು, ನೀನು ಇವರಿಗೆ

ಟೀ ಕಾಫಿ ಏನು ಬೇಕೋ ಕೊಡು. ಐದು ನಿಮಿಷದಲ್ಲಿ ಬಂದು ಬಿಡು ತ್ತೇನೆ" ಎಂದು ಹೊರಟುಬಿಟ್ಟ.

ಸುಬ್ಬರಾಯರ ಮನೆಯ ಬಾಗಿಲ ಹತ್ತಿರವೇ ಸಿಹಿತಿಂಡಿಯ ವಾಸನೆ ಬರುತ್ತಿತ್ತು. ಬಾಗಿಲು ತೆಗೆದು ಕಲ್ಯಾಣಕೃಷ್ಣನ ಮುಖ ನೋಡುತ್ತಲೇ ಸುಬ್ಬರಾಯ, "ಶಾಂತೀ ನೋಡಿಲ್ಲಿ. ದೀಪಾವಳಿಗೆ ಯಾರನ್ನೂ ಕರೆ ಯಲಿಲ್ಲ. ಎಂದು ಯೋಚಿಸುತ್ತಿದ್ದೆ. ಹೊಸ ಮದುವಣಿಗನೇ ಬಂದಿ ದ್ದಾನೆ" ಎಂದು ಕೂಗಿದ.

"ಮದುವಣಿಗ ಒಬ್ಬನೇ ಬಂದರೆ ಅದೆಂತಹ ದೀಪಾವಳಿ? ಜೋಡಿ ಯನ್ನೇಕೆ ಕರೆತರಲಿಲ್ಲ?" ಎಂದು ಸುಬ್ಬರಾಯನ ಹೆಂಡತಿ ಶಾಂತಿ ಒಳಗಿ ನಿಂದಲೇ ಕೇಳಿದಳು.

"ಅವಳ ತಂದೆ ತಾಯಿ ಮಾಂಟ್ರಿಯಾಲ್‌ನಿಂದ ಈಗ ತಾನೆ ಬಂದರು. ಎಲ್ಲರೂ ಮನೆಯಲ್ಲೇ ಇದ್ದಾರೆ."

"ಸರಿ, ಇದು ಕೆನಡಿಯನ್ ದೀಪಾವಳಿ ಎನ್ನು. ಅಳಿಯ ಮಾವನ ಮನೆಗೆ ಹೋಗುವ ಬದಲಿಗೆ ಮಾವನೇ ಅಳಿಯನ ಮನೆಗೆ ಬಂದು ಬಿಡು ವುದು—ಅದೂ ಸರಿಯೇ. ಕಾಲಕ್ಕೆ ತಕ್ಕಂತೆ ನಾವು ಬದಲಾಗ ಬೇಡವೇ?" ಎನ್ನುತ್ತಾ ಶಾಂತಿ ತಟ್ಟೆಯ ತುಂಬ ತಿಂಡಿ ತಂದಿಟ್ಟಳು.

"ಇದೆಲ್ಲ ಏನು ಶಾಂತಿ? ಇಷ್ಟೊಂದು ತಿನ್ನಲು ನನ್ನ ಕೈಯಲ್ಲಾಗು ವುದಿಲ್ಲ" ಎಂದ ಕಲ್ಯಾಣಕೃಷ್ಣ.

"ಇರಲಿ ತಿನ್ನಯ್ಯಾ, ಜಂಬ ಮಾಡಬೇಡ. ಇಲ್ಲಾದರೂ ನಿನಗೆ ದೀಪಾವಳಿಯ ತಿಂಡಿ ಆಗಲಿ" ಎಂದು ಸುಬ್ಬರಾಯ ಬಲವಂತ ಮಾಡಿದ.

ಮನೆಗೆ ಹಿಂತಿರುಗುವ ವೇಳೆಗೆ ಮೀನಿನ ವಾಸನೆ ಬಂದು ಮುಖಕ್ಕೆ ಬಡಿಯಿತು. ಕೆನಡಾಗೆ ಬಂದ ಮೇಲೆ, ಅದರಲ್ಲೂ ಜೂಡಿಯನ್ನು ಮದುವೆ ಆದಮೇಲೆ ಕಲ್ಯಾಣಕೃಷ್ಣ ಮೊಟ್ಟೆ ಮಾಂಸ ತಿನ್ನುವ ಅಭ್ಯಾಸ ಮಾಡಿಕೊಂಡಿದ್ದ. ಆದರೆ ಅವನಿಗೆ ಮೀನು ಕಂಡರೆ ಆಗುತ್ತಿರಲಿಲ್ಲ. ಆದರಿಂದ ಜೂಡಿಯೂ ಮನೆಗೆ ಮೀನನ್ನು ತರುತ್ತಿರಲಿಲ್ಲ, ಈಗ ಆ ವಾಸನೆ ಬರುತ್ತಲೂ, ಸದ್ಯಕ್ಕೆ ಮನೆಯಲ್ಲೀಗ ಅತ್ತೆ ಮಾವಂದಿರ ರಾಜ್ಯ ಎಂದು ಇವನಿಗೆ ಅರ್ಥವಾಯಿತು.

ಅದಕ್ಕೆ ಸರಿಯಾಗಿ ಇವನು ಒಳಗೆ ಹೋಗುತ್ತಲೇ ಜೂಡಿ, "ಡಾರ್ಲಿಂಗ್, ಅಪ್ಪನಿಗೆ ಮೀನು ಬಹಳ ಇಷ್ಟ ಎಂದು ಇವತ್ತು ಮಾಡಿದ್ದೇನೆ. ನಿನಗೆ ಸ್ಯಾಂಡ್‌ವಿಚಸ್ ಮಾಡಿದ್ದೇನೆ. ಸಾಲಡ್ ಇದೆ" ಎಂದು ಮುದ್ದುಗರೆದಳು.

"ನನಗೆ ಊಟ ಬೇಡ ಜೂಡಿ. ಶಾಂತಿ ಏನೇನೋ ತಿಂಡಿ ಮಾಡಿದ್ದರು. ಹೊಟ್ಟೆ ಭಾರವಾಗಿಬಿಟ್ಟಿದೆ" ಎಂದ.

"ಛೆ, ಹಾಗೆ ಆಗುತ್ತದೆಯೇ? ಅಪ್ಪ ಅಮ್ಮ ಬಂದ ದಿನವೇ ನೀನು ಅವರ ಜತೆ ಕುಳಿತು ಊಟ ಮಾಡದಿದ್ದರೆ ಅವರೇನು ತಿಳಿದುಕೊಳ್ಳುತ್ತಾರೆ? ಅವರು ಬಂದ ತಕ್ಷಣ ನೀನು ಹೊರಟುಹೋಗಿದ್ದೆ. ಈಗ ಅವರಿಗೆ ಬೇಸರವಾಗಿದೆ" ಎಂದಳು.

ಪಾಪ, ಕಲ್ಯಾಣಕೃಷ್ಣ ಮೂಕ ಪ್ರಾಣಿಯಂತೆ ತಲೆ ಆಡಿಸಿದ. ಹಸಿವಿಲ್ಲದಿದ್ದರೂ ಎಲ್ಲರ ಜತೆ ಕುಳಿತು ಆ ಸಪ್ಪೆ ಊಟ ಮಾಡಬೇಕಾಯಿತು.

ಎರಡನೆಯ ದಿನ ಬೆಳಿಗ್ಗೆ ಆತ ಕೆಲಸಕ್ಕೆ ಹೊರಡಲು ಸಿದ್ಧವಾಗುತ್ತಿದ್ದಾಗ ಜೂಡಿ, "ಡಾರ್ಲಿಂಗ್, ನಿನ್ನನ್ನು ನಾನು ಆಫೀಸಿಗೆ ಬಿಟ್ಟು ಬರುತ್ತೇನೆ, ಈವತ್ತು ಕಾರು ನನಗೆ ಬೇಕು" ಎಂದಳು.

"ನಿಮ್ಮ ಅಪ್ಪ ಅಮ್ಮನಿಗೆ ಊರು ತೋರಿಸಬೇಕೇನೋ. ಹಾಗೆಯೇ ಆಗಲಿ. ಊಟದ ಹೊತ್ತಿಗೆ ನೀನೇ ಬಂದು ಕರೆದುಕೊಂಡು ಬರುತ್ತೀಯೇನು?"

ಜೂಡಿ ಅವನ ಹತ್ತಿರ ಬಂದು ಲಲ್ಲೆಗರೆಯುತ್ತ, "ಡಾರ್ಲಿಂಗ್, ಪ್ಲೀಸ್ ಈವತ್ತೊಂದು ದಿನ ಅಲ್ಲೇ ಊಟ ಮಾಡಿಬಿಡು. ಅಲೆಯಲು ಹೊರಟಮೇಲೆ ಇಷ್ಟೇ ಹೊತ್ತಿಗೆ ಬರುತ್ತೇನೆ ಎನ್ನುವುದು ಕಷ್ಟ" ಎಂದಳು.

"ಸರಿ ಬಿಡು. ಸಂಜೆ ಏನು ಮಾಡಲಿ?"

"ಬಸ್ಸಿನಲ್ಲೇ ಬಂದುಬಿಡು. ನಾನು ಬರುತ್ತೇನೆಂದು ಹೇಳಿ, ಆಮೇಲೆ ಹೊತ್ತಾದರೆ ಇಬ್ಬಂದಿಯಾಗುತ್ತದೆ".

ಅದಕ್ಕೂ ಇವನು ಕೋಲೇಬಸವನಂತೆ ತಲೆ ಆಡಿಸಿದ. ಸಂಜೆ ಮನೆಗೆ ಬಂದಾಗ ಮನೆಯಲ್ಲಿ ಯಾರೂ ಇರಲಿಲ್ಲ. ಜೂಡಿಯ ಕಾಗದ ಕಣ್ಣಿಗೆ ಬೀಳುವಂತೆ ಕುಳಿತಿತ್ತು. ತಾವೆಲ್ಲರೂ ಊರು ಸುತ್ತಲು ಹೋಗಿ ಸಂಜೆಯ ಊಟ ಮುಗಿಸಿಕೊಂಡೇ ಬರುವುದಾಗಿಯೂ. ಗಂಡ ತನ್ನ ಊಟದ ಏರ್ಪಾಟು ತಾನೇ ಮಾಡಿಕೊಳ್ಳಬೇಕೆಂದೂ ಬರೆದಿದ್ದಳು.

"ರಾಯರು ಬಂದರು ಮಾವನ ಮನೆಗೆ" ಎಂದು ಹಾಡಿಕೊಳ್ಳುತ್ತಾ ಕಲ್ಯಾಣಕೃಷ್ಣ ಅಡಿಗೆ ಮನೆಗೆ ಹೊರಟ.

ಬಲಿಪಾಡ್ಯಮಿ-ಶನಿವಾರದ ದಿನ ಅವನಿಗೆ ಎಚ್ಚರವಾದಾಗ ಸ್ವಲ್ಪ ಹೊತ್ತಾಗಿತ್ತು. ಜೂಡಿ ಆಗಲೇ ಅಲಂಕರಿಸಿಕೊಂಡು ಸಿದ್ಧವಾಗಿ ಓಡಾಡುತ್ತಿದ್ದಳು. ಗಂಡ ಕಣ್ಣು ಬಿಡುತ್ತಲೇ, "ಡಾರ್ಲಿಂಗ್, ಬೇಗ ಸಿದ್ಧವಾಗು. ಈವತ್ತು ಅಪ್ಪ ಅಮ್ಮ ನನ್ನು ಸ್ವಲ್ಪ ದೂರ ಸುತ್ತಿಸಿಕೊಂಡು ಬರೋಣ. ಹಾಗೆಯೇ ಅವರಿಗೆ ಏನಾದರೂ ಪ್ರೆಸೆಂಟ್ ತರಬೇಕು" ಎಂದಳು.

"ನಾನೇಕೆ ಬರಬೇಕು ಜೂಡಿ? ನೀವೆಲ್ಲ ಹೋಗಿ ಬನ್ನಿ" ಎಂದ.

"ಅದು ಸರಿಯಾಗುವುದಿಲ್ಲ ಕಿಶ್. ಅವರು ಬಂದಾಗಿನಿಂದ ನಿನಗೆ ಅವರ ಹತ್ತಿರ ಕುಳಿತುಕೊಂಡು ಮಾತಾಡಲು ಐದು ನಿಮಿಷ ಸಹ ಸಮಯ ಸಿಕ್ಕಿಲ್ಲ. ರಜೆಯಲ್ಲಾದರೂ ಸ್ವಲ್ಪ ಹೊತ್ತು ಅವರ ಜತೆ ಇರಬೇಡವೇ?"

ಪಾಪ, ಅಳಿಯ ಎದುರಾಡದೆ ಬೇಗ ಸಿದ್ಧವಾದ. ಬೆಳಿಗ್ಗೆಯಿಂದ ಸಂಜೆಯವರೆಗೂ ಅಲೆದು ಮನೆ ಸೇರಿದಾಗ ಏಳು ಗಂಟೆಯಾಗಿತ್ತು. ಮನೆ ಸೇರುತ್ತಲೇ ಜೂಡಿ, "ಬೇಗ ಸಿದ್ಧವಾಗು ಡಾರ್ಲಿಂಗ್. ಹೊಟೇಲ್ ಮೆಟ್ರೋಪೋಲ್‌ನಲ್ಲಿ ಡಿನ್ನರ್ ಡ್ಯಾನ್ಸ್ ಇದೆ. ಜೋಡಿಗೆ ಹದಿನೈದೆ ಡಾಲರ್ ಟಿಕೆಟ್. ನಾನು ನಮಗೆಲ್ಲ ಆಗಲೇ ಟಿಕೇಟ್ ತೆಗೆದುಕೊಂಡಿದ್ದೇನೆ" ಎಂದೆಳು. ಬೊಂಬೆಯಂತೆ ಅದಕ್ಕೂ ತಲೆ ಆಡಿಸಿದ ಕಲ್ಯಾಣಕೃಷ್ಣ.

ಭಾನುವಾರ ಬೆಳಿಗ್ಗೆ ಅತ್ತೆ ಮಾವಂದಿರನ್ನು ವಿಮಾನ ಹತ್ತಿಸಿ ಬಂದು ಕಲ್ಯಾಣಕೃಷ್ಣ ಈ ದೀಪಾವಳಿಯ ಖರ್ಚನ್ನು ಲೆಕ್ಕ ಹಾಕಿದ. ಒಟ್ಟು ಖರ್ಚು ನೂರಅರವತ್ತು ಡಾಲರ್ ನಲವತ್ತು ಸೆಂಟ್ ಆಗಿತ್ತು. ಆ ಲೆಕ್ಕವನ್ನೇ ನೋಡುತ್ತಾ ಈ ಆಧುನಿಕ ಅಳಿಯ, ದೀಪಾವಳಿಗೆ ಮಾವ ತನಗೆ ಕೊಡಬೇಕಾಗಿದ್ದ ಸೂಟು ಉಂಗುರಗಳನ್ನು ನೆನಸಿಕೊಂಡು ನಿಟ್ಟುಸಿರಿಟ್ಟ.



# ಅಜ್ಜಿಯ ಬಾಣಂತನ–ಕುಟುಂಬ ನಿಯಂತ್ರಣ

—ಲಲಿತಾಂಬಾ ಚಂದ್ರಶೇಖರ

ನಮ್ಮ ದೇಶದಲ್ಲಿ ಅಧಿಕ ಸಂತಾನವನ್ನು ತಡೆಗಟ್ಟಲು ಸರ್ಕಾರವೂ, ಸಮಾಜವೂ. ಕುಟುಂಬ ನಿಯಂತ್ರಣ ಯೋಜನೆಗಳನ್ನು ಜಾರಿಗೆ ತಂದಿವೆ. ಆದರೆ ಕುಟುಂಬ ನಿಯಂತ್ರಣಕ್ಕೂ, ಅಜ್ಜಿಯ ಬಾಣಂತನಕ್ಕೂ ಸಂಬಂಧ ವೇನು ಎಂಬ ಸಂದೇಹವನ್ನು ನೀವು ನಿವಾರಿಸಿಕೊಳ್ಳಬೇಕಾದರೆ ಸಾವಧಾನ ದಿಂದ ಈ ಕತೆಯನ್ನು ಕೇಳಬೇಕು.

ನಮ್ಮ ಅಜ್ಜಿಗೆ ನನ್ನ ತಾಯಿ, ನಮ್ಮ ಮಾವ ಇಬ್ಬರು ಮಕ್ಕಳು. ನಮ್ಮ ತಂದೆತಾಯಿಗಳು ಕುಗ್ರಾಮದಲ್ಲಿದ್ದುದ್ದರಿಂದ ನಮ್ಮ ಸೋದರ ಮಾವನ ಮನೆಯಲ್ಲಿ ನನ್ನ ವಿದ್ಯಾಭ್ಯಾಸ ಸಾಗುತ್ತಿತ್ತು. ನಮ್ಮ ಅತ್ತೆ-ಮಾವನಿಗೆ ಎರಡು ಹೆಣ್ಣು ಮಕ್ಕಳು, ಒಂದು ಗಂಡುಮಗು,-ಮೂರು ಮಕ್ಕಳು. ಮೊದಲ ಎರಡು ಮಕ್ಕಳು ನಮ್ಮ ಅತ್ತೆಯ ತೌರು ಮನೆ ಯಲ್ಲಿ ಹುಟ್ಟಿದವು. ಮೂರನೆಯ ಗಂಡು ಮಗುವಿಗೆ ನಮ್ಮ ಅಜ್ಜಿಯೇ ಅಬ್ಬರದ ಬಾಣಂತನ ಮಾಡಿದ್ದರು.

ಸರಿ, ಈ ಸಾರಿಯೂ ನಮ್ಮ ಸೋದರತ್ತೆಗೆ ಆರು ತಿಂಗಳು ತುಂಬುವುದಕ್ಕಿಲ್ಲ, ಆಗಲೇ ಅಜ್ಜಿ ಆರಂಭಿಸಿದರು.

'ಲೋ ರಾಮು, ಪುಟ್ಟಿಂಕೂಗೂ, ಸಣ್ಣಕ್ಕಂಗೂ ಕಾಗದ ಹಾಕಿ ಬಿಡು, ಮಗು; ಅವರಿಬ್ಬರಿಗೂ ಪತ್ರ ತಲುಪಿ, ಅವರ ಸಂಸಾರ ತಾಪತ್ರಯಗಳನ್ನೆಲ್ಲಾ ಸುಧಾರಿಸಿಕೊಂಡು ಹೊರಡೋ ಹೊತ್ತಿಗೆ ಸರಿ ಹೋಗುತ್ತದೆ, ತಿಳಿತೇ?-"

ಪುಟ್ಟೆಂಕು ನಮ್ಮಜ್ಜಿಯ ನಾದಿನಿ. ಸಣ್ಣಕ್ಕ ಅವರ ಚಿಕ್ಕತ್ತೆಯ ಸೊಸೆ—ಎಂದರೆ, ನಮ್ಮ ಅಜ್ಜಿಯ ಸೋದರಿ. ಇವರಿಬ್ಬರೂ ಹೋದಸಲ ನಮ್ಮ ಅತ್ತೆಗೆ ಬಾಣಂತನ ಮಾಡಿ, ಮಗುವಿಗೆ ವರ್ಷವಾಗುವವರೆಗೂ ಇದ್ದು, ನಂತರ ತಾವೂ ಸುಧಾರಿಸಿಕೊಂಡು, ಉಡುಗೊರೆ, ಉಪಚಾರ ಗಳನ್ನು ಕೈಗೊಂಡು ಮೊನ್ನೆಯಷ್ಟೇ ಸ್ವಗ್ರಾಮಕ್ಕೆ ಪ್ರಯಾಣ ಬೆಳೆಸಿದ್ದರು.

ಅಜ್ಜಿಯ ಮಾತನ್ನು ಕೇಳಿ ನಮ್ಮ ಅತ್ತೆ ಅಂಜುತ್ತಾ, ಸಣ್ಣ ದನಿ ಯಲ್ಲಿ, 'ಬಿಡಿ ಅತ್ತೆ, ಎಲ್ಲರಿಗೂ ಏಕೆ ತೊಂದರೆ? ಹೇಗೋ ನೀವು ಒಂದು ತಿಂಗಳು ಕಳಿಸಿಬಿಟ್ಟರೆ ಸಾಕು. ನಾನೇ ಆ ನಂತರ...ಅಜ್ಜಿ ರೇಗಿ ಬಿದ್ದರು- 'ಇದೇ ಹುಡುಗಾಟಿಕೆ ಅನ್ನೋದು. ಸಾಕು ಸುಮ್ಮನಿರು. ಬಾಣಂತನ ಅಂದರೆ ಬಾಯಿ ಮಾತೇ! ನಾಲ್ಕು ಜನದ ಸಹಾಯವಿಲ್ಲದೆ ಬಾಣಂತನ ಸಾಧ್ಯವೇನೇ, ಹುಚ್ಚಿ?-'

ಆಗ ಮಾವ ಧೈರ್ಯ ತಂದುಕೊಂಡು ಹೀಗೆಂದರು-'ನನ್ನ ಮಾತು ಕೇಳು, ಅಮ್ಮ, ಈ ಸಲ ಆಸ್ಪತ್ರೆಗೆ ಕಳುಹಿಸೋಣ, ಹ್ಯಾಗಿದ್ದರೂ ಸರ್ಕಾರೀ ಆಸ್ಪತ್ರೆ ನಮ್ಮ ಮನೆ ಹತ್ತಿರವಲ್ಲೇ ಬಂದಿತಲ್ಲಾ!'

ಅಜ್ಜಿ ಉದ್ಗಾರ ತೆಗೆದರು-'ಅಯ್ಯೊಯ್ಯೋ!ಎಲ್ಲಾರೂ ಉಂಟೇನೋ ರಾಮು? ಸುಡುಗಾಡು ಆಸ್ಪತ್ರೆಗಳಲ್ಲಿ ಮಾಡಬಾರದ್ದು ಮಾಡಿಬಿಡ್ತಾರೆ ಕಣೋ, ರಾಮಣ್ಣ! ದೇಹಾನಾ ಬದನೇಕಾಯಿ ಹಾಗೆ ಸೀಳಿ ಮಗು ತೆಗಿತಾರಂತೋ!' ಪಿಸುಮಾತಿನಲ್ಲಿ ಮುಂದುವರಿಸಿದರು ನಮ್ಮಜ್ಜಿ- 'ಇನ್ನೊಂದು ವಿಷಯ-ಮಕ್ಕಳಾಗದ ಹಾಗೆ ಮಾಡಿಬಿಡ್ತಾರಂತೆ ಕಣೋ, ನಮ್ಮಪ್ಪ! ಆಮೇಲೆ ಏನು ಗತಿ ನನ್ನಂಥ ಪಾಪಿಗಂತೂ ಎರಡೇ ಫಲ ಅಂದ್ರೆ, ನಿನ್ನ ಹೊಟ್ಟೇಲಾದ್ರೂ ಹತ್ತು ಮಕ್ಕಳು ಹುಟ್ಟಬೇಡವೇ?-'

ಆ ಮಾತನ್ನು ಕೇಳಿ ನಡುಗಿ ಹೋದರು ನಮ್ಮ ಮಾವ. 'ಹಾಗಲ್ಲ ಅಮ್ಮ-ಈಗಿನ ದಿನಗಳಲ್ಲಿ ಆಸ್ಪತ್ರೆಯೇ ಮೇಲು. ಏಕೆಂದರೆ ಏನಾದರೂ

ಹೆಚ್ಚು, ಕಮ್ಮಿ-ಕಷ್ಟವಾದ ಹೆರಿಗೆ-ಕಾಲು ಮುಂದಾಗಿ ಹುಟ್ಟೋ¨. ಹಾಗೇನಾದ್ರೂ...

ಅರ್ಧದಲ್ಲಿ ತಡೆದು ಅಜ್ಜಿ ಹೀಗೆಂದರು

'ಲೋ ರಾಮು, ಸುಮ್ಮ ಸುಮ್ಮನೆ ಏಕೆ ಭಯ ಬೀಳ್ತೀಯಪ್ಪಾ? ನನ್ನ ಸೊಸೆಗೆ ಯಾವ ಕಷ್ಟವೂ ಆಗೋಲ್ಲ. ಅದರಲ್ಲೂ ನಮ್ಮ ಪುಟ್ಟಿಂಕು ಸೆರಗು ಕಟ್ಟಿಕೊಂಡು ಹೊಲೆಮನೇಲಿ ನಿಂತಳು ಅಂದ್ರೆ ಆಯಿತು- ಸೊಟ್ಟಗೆ ತಿರುಗಿಕೊಂಡ ಮಗು ನೆಟ್ಟಗೆ ಪುಟ ನೆಗೆದು ಸಲೀಸಾಗಿ ಹುಟ್ಟುತ್ತೆ ನೋಡು.

ರಾಮಣ್ಣ, ನನ್ನ ಮೊಮ್ಮಕ್ಕಳೆಲ್ಲಾ-ಇಗೋ. ನಿಮ್ಮ ತಾತ ಕಟ್ಟಿಸಿದ ಈ ಸಣ್ಣ ಕೋಣೇಲೇ ಹುಟ್ಟೋದು. ತಿಳಿತೇನೋ-ಸರಿ, ಈಗ ಮೊದಲು ಕಾಗದ ಕಡ್ಡಿ ತಾ. ಇವತ್ತು ಒಳ್ಳೇ ದಿನ-ಪುಟ್ಟಿಂಕೂಗೂ, ಸಣ್ಣಕ್ಕಂಗೂ ಎರಡು ಪಂಕ್ತಿ ಗೀಚು ಹಾಕು-ಹುಂ-ಆಲಸ್ಯಬೇಡ--'

ದಶರಥರಾಯನಿಗೆ ಶ್ರೀರಾಮಚಂದ್ರ ಹೇಗೋ ನಮ್ಮಜ್ಜಿಗೆ ಮಾವ ಹಾಗೆ. ಆ ದಿನವೇ ಕಾಗದವೂ ಹೋಯಿತು. ವಾರದೊಳಗೆ ಅಜ್ಜಿಯ ಬಳಗ ಬಂದಿಳಿದಿದ್ದೂ ಆಯಿತು

'ಅತ್ತಿಗೇ, ಹೊರಡೋ ಸಮಯದಲ್ಲಿ, ಇದು ಗಂಟುಬತ್ತು. ನೋಡು-' ಎಂದು ತನ್ನ ಹತ್ತು ವರ್ಷದ ಮೊಮ್ಮಗಳು ಸರಸಿಯನ್ನು ಪುಟ್ಟಿಂಕು ಪರಿಚಯಮಾಡಿಕೊಡುತ್ತಿರುವಂತೆಯೇ ಅಜ್ಜಿ ಸಂತೋಷದಿಂದ,

'ಒಳ್ಳೇ ಕೆಲಸ ಮಾಡಿದೆ ಕಣೇ ಅಮ್ಮ-ಬಾಣಂತಿಗೂ, ಮಡಿಯವರಿಗೂ ಮಧ್ಯೆ ಓಡಾಡಿಕೊಂಡಿರುತ್ತೆ, ಈ ಪುಟ್ಟದು. ಮಗು ಬಟ್ಟೆ ಬಿಸಿಲಿಗೆ ಹಾಕುತ್ತೆ, ಸಾಂಬ್ರಾಣಿ ಹೊಗೆ ಹಿಡಿಯುತ್ತೆ. ಒಂದು ಕೆಲಸವೇ ಅಮ್ಮ-ಬಾಣಂತನಾ ಅಂದ್ರೆ-ಸ್ವಲ್ಪ ಕೆಲಸವೇ-ಎಷ್ಟು ಜನ

ವಿದ್ದರೂ ಸಾಲದು, ಎಷ್ಟು ಸಹಾಯವಿದ್ದರೂ ಸಾಲದು......,ಎಂದು ಸರಸಿಯನ್ನು ತಬ್ಬಿಕೊಂಡು ಮುದ್ದಾಡಿದರು.

ಅಜ್ಜಿಯ ಪರಿವಾರ ಬಂದಿಳಿದ ಎಷ್ಟೋ ದಿನಗಳ ನಂತರ ಒಂದು ಬೆಳಗಿನ ಝಾವ ನಮ್ಮ ಅತ್ತೆಗೆ ಗಂಡು ಮಗು ಹುಟ್ಟಿತು, ಅಜ್ಜಿ ಸಂತೋಷದಿಂದ ತನ್ನ ನಾದಿನಿಯ ಬೆನ್ನು ತಟ್ಟುತ್ತಾ,

ಲೇ ಪುಟ್ಟಿಂಕು, ನೀನು ಆ ಸಣ್ಣ ಕೋಣೇಲಿ ನಿಂತೇ ಅಂದ್ರೆ ಹುಟ್ಟೋದು ಗಂಡು ಕೂಸೇ ಕಣೆ! ಪ್ರತಿಸಲ ನೀನೇ ಬರಬೇಕು ನೋಡು, ಹೇಳಿದೀನಿ ! ಎನ್ನಲು ಪುಟ್ಟಂಕು ವಿನಯದಿಂದ,

'ಅತ್ತಿಗೇ, ನೀನು ಕರೆಯೋದು ಹೆಚ್ಚೋ, ನಾನು ಬರೋದು ಚ್ಚೋ, ಹೇಳು ' ಎಂದಳು,

ಹತ್ತನೆಯದಿನ ಮನೆ ಮನೆಗೆ ಕಡುಬು ಹಂಚುವುದಕ್ಕೆ ಸಣ್ಣಕ್ಕ ಹಿಟ್ಟು ರುಬ್ಬಲಾರಂಭಿಸಿದಳು.

ನಮ್ಮ ಅತ್ತೆ ಒಳಗಿನ ಕೋಣೆಯಿಂದ,

'ಏನೋ ಶಾಸ್ತ್ರಕ್ಕೆ ಆ ಕಡೆ, ಈ ಕಡೆ ಮನೆಗೆ ಹಂಚಿಸಿ ಬಿಡಿ, ಅತ್ತೆ-ಏನು, ಮೊದಲನೆಯದೇ. ಎರಡನೆಯದೇ, ಎಂದುದಕ್ಕೆ ಅಜ್ಜಿ ಅಬ್ಬರಿಸಿದರು.

'ಸುಮ್ಮನಿರೇ-ತಿಳಿಕೊಳ್ಲಿ ಎಲ್ಲಾರೂ ಹುಟ್ಟಿರೋದು ಗಂಡೂ ಅಂತ, ಹೊಟ್ಟೇಕಿಚ್ಚುಪಟ್ಟು ಕೊಳ್ಳೂರು ಪಟ್ಟುಕೋಳ್ಳಿ-. ಎಂದು ಬೀದಿಯ, ಸಾಲಿ . ಮನೆಗಳಿಗೆಲ್ಲಾ ಬಾಗಿನವನ್ನು ಹಂಚಿಸಿದರು,

ಸರಿ, ಮಾರನೇ ದಿನ ನಾಮಕರಣ.

'ಸ್ವಲ್ಪ ಸಿಂಪಲ್ (simple) ಆಗಿ ಮಾಡಿ ಮುಗಿಸೋಣ. ಅಮ್ಮ ಎಂದು ಮಾವ ಗೋಗರೆದುದ್ದಕ್ಕೆ ಅಜ್ಜಿ ಸಿಟ್ಟಗೆದ್ದರು,

'ಲಕ್ಷಣವಾಗಿ ಹುಟ್ಟಿದೆ. ಗಂಡು ಎ ಥರ್ದೋ ಅರ್ಥಮರ್ಥ ಶಾಸ್ತ್ರ-ಏನು ಹತ್ತನೆಯದೇ. ಹನ್ನೇರಡನೇದೇ?-' ಎಂದು ಬಂದುಬಳಗ, ಇಷ್ಟ- ಮಿತ್ರರು ಎಲ್ಲರನ್ನೂ ಕರೆಸಿಕೊಂಡರು, ಅಜ್ಜಿ. ನಮ್ಮ ಅತ್ತೆಯ

ಮಕ್ಕಳು ಹೊಸ ಗೆಳತಿ ಸರಸಿಯೊಂದಿಗೆ, ಮೊಗ್ಗಿನ ಜಡೆ ಹಾಕಿಸಿಕೊಂಡು, ಒಳ್ಳೇ ಉತ್ಸಾಹದಲ್ಲಿ ಅಜ್ಜಿ ಹೇಳದೆ ಇದ್ದ ಮನೆಗೂ ಊಟಕ್ಕೆ ಹೇಳಿ ಬಂದರು.

ಪುಣ್ಯಾವರ್ಜನೆ., ನಾಮಕರಣ. ತೊಟ್ಟಿಲು ಹಾಕಿದ್ದು. ಎಲ್ಲಾ ವೈಭವದಿಂದ ನಡೆಯಿತು. ಆದರೂ ನಮ್ಮ ಅಜ್ಜಿಗೇನೊ ಮನಸ್ಸಮಾ ಧಾನವಿಲ್ಲ.

"ಏನು ದರಿದ್ರ ಕಾಲವೋ-ಏನು ಆರತಕ್ಷತೆಯೋ! ಲೇ ಸಣ್ಣಕ್ಕ ನಮ್ಮ ರಾ ಖ ಹುಟ್ಟಿದಾಗ 15 ಸೇರು ಕಡ್ಲೆ ನೆನೆ ಹಾಕಿತ್ತಲ್ವೇನೆ?" ಎಂದು ಪೇಚಾಡಿಕೊಳ್ಳುತ್ತಲೇ ಇದ್ದರು.

ಸರಿ, ಇನ್ನು ಬಾಣಂತನದ ಆರಂಭ. ಹಳ್ಳಿಯಿಂದ ಸೌದೆಗಾಡಿ ಬಂದಿತು. ಆರ್ಡರ್ ಮಾಡಿ ಆಕಳ ತುಪ್ಪವನ್ನು ತರಿಸಿದರು, ಅಜ್ಜಿ. ಇನ್ನು ಹಾಲು-ಮೊಸರಿನ ಲೆಕ್ಕ ಹೇಳಬೇಕಾದ್ದೇ ಇಲ್ಲ, ನಮ್ಮತ್ತೆಯ ಜೊತೆಗೇ ಮಿಕ್ಕವರಿಗೂ ಬಾಣಂತನ ನಡೆಸಬೇಕಂತಲೊಕ ಏನೋ ಅಜ್ಜಿ,

'ಲೇ ಪುಟ್ಟಿಂಕು. ಸಣ್ಣಕ್ಕ ಆ ಸಣ್ಣ ಗಡಿಗೆ ಕೆನೆಮೊಸರು ಹಾಕ್ಕೊಳ್ರೀ-ಬಾಣಂತನ ಮಾಡೋರು ಗಟ್ಟಿಯಾಗಿದ್ರೆ ತಾನೇ ಅವಳಿಗೆ ಬಾಣಂತನ ಮಾಡೋದು! ಅದರಲ್ಲೂ ಬಾಣಂತಿ ಸೇವೆ ಮಾಡೋದು ಸಾಮಾನ್ಯವೇ. ಮಹಾ ಉಷ್ಣ—ಮಹಾ ಉಷ್ಣ!, ಎಂದು ಮಿಕ್ಕವರನ್ನು ಉಪಚರಿಸುತ್ತಿದ್ದರು.

ಬಾಣಂತಿಗಾಗಿ ಶುಂಠಿ-ಬೆಲ್ಲ, ಕುದಿಮೆಣಸು- ಕರಿಕಿನ ಪುಡಿ-ಎಲ್ಲಾ ಒಮ್ಮೆಲೇ ಆರಂಭವಾಯಿತು. ಬಾಣಂತಿ ಲೇಹ್ಯದ ಪಟ್ಟಿ ಕಳೆದು ಹೋಗಿದ್ದುದರಿಂದ ಪುನಃ ಪಟ್ಟಿಯನ್ನು ತಯಾರಿಸಲು ಅಜ್ಜಿ ನನ್ನನ್ನು ಕೂರಿಸಿದರು.

'ಜೇಷ್ಠಮಧು,...ಜೀರಿಗೆ...ಪಕ್ಕಾ ಸೇರು, ಒಳ್ಳೇ ರಸವಿರುವ ಹೇರಳೆಹಣ್ಣು, ದ್ರಾಕ್ಷಿ ಒಂದು ಸೇರು...! ಮಧ್ಯೆ ಮಧ್ಯೆ ಅಜ್ಜಿ ಜ್ಞಾಪಿಸಿಕೊಳ್ಳುತ್ತಾ. ನಾದಿನಿಯನ್ನು ಕೇಳುತ್ತಾ. ಸಣ್ಣಕ್ಕನ ಸಲಹೆಗಳನ್ನು ತೆಗೆದುಕೊಳ್ಳುತ್ತಾ. ನನಗೆ ಉತ್ತಲೇಖನ ಬರೆಸಲಾರಂಭಿಸಿದರು. ಸೀರಿಯಲ್ ನಂಬರು ಮೂವತ್ತು ಆಗುವ ಹೊತ್ತಿಗೆ ನಾನು ಬೆವರೊರೆಸಿ. ಕೊಳ್ಳುತ್ತಾ,

'ಅಲ್ಲಾ ಅಜ್ಜೀ, ಇಷ್ಟು ವಿಧವಿಧದ ಸಾಮಾನುಗಳನ್ನು ತರಿಸಿಕೊಂಡು ಕುಟ್ಟಿ. ಬೀಸಿ ತಾಪತ್ರಯ ಪಡುವುದಕ್ಕೆ ಬದಲು ಬಲವಾದ ಟಾನಿಕ್, ಮಾತ್ರೆ ತೆಗೆದುಕೊಂಡರಾಯಿತಲ್ಲವೇ?' ಎಂದು ಬೇಡಿಕೊಂಡೆ. ಏಕೆಂದರೆ ಈ ಸಾರಿ ಗ್ರಂದಿಗೆ ಅಂಗಡಿಗೆ ನಾನೇ ಹೋಗಿ ಸಾಮಾನುಗಳನ್ನು ತರಬೇಕು. ಪಟ್ಟಿಯಲ್ಲಿದ್ದ ಯಾವುದಾದರೊಂದು ಸಾಮಾನು ಸಿಕ್ಕದಿದ್ದರೆ, ಅಂದು ಸಂಜೀವಿನಿ ಮೂಲಿಕೆಗಾಗಿ ದ್ರೋಣಪರ್ವತವನ್ನೇ ಆಂಜನೇಯನು ಎತ್ತಿ ತಂದಂತೆ ನಾನು ಅಂಗಡಿಯನ್ನೇ ಹೊತ್ತು ತರುವವರೆಗೂ ಅಜ್ಜಿ ಸುಮ್ಮನಿರುವುದಿಲ್ಲ.

ನನ್ನ ಮಾತಿಗೆ ಅಜ್ಜಿ ಸಿಟ್ಟಿಗೆದ್ದರು.

'ಲೋ ರಾಮು, ನೀನೇ ಬಾರೋ, ಇದು ಶುದ್ಧ ತಲೆಹರಟೆ–ಬಾಣಂತಿ ಸಾಮಾನು ಪಟ್ಟಿ ಬರೆಯೋಕ್ಕೂ ಯೋಗ್ಯತೆ ಬೇಕು! ಹುಂ–ನೀನು ಬರಿ...' ಎಂದು ಪುನಃ ಆರಂಭಿಸಿದರು, ನಮ್ಮಜ್ಜಿ.

'ಜೇಷ್ಠ ಮಧು......ಜೀರಿಗೆ......

ಪುಂಡಿಸು ಲೇಹ್ಯ. ಜೀರಿಗೆ ಲೇಹ್ಯ–ಮೂರನೇ ತಿಂಗಳು ಬೀಳುವ ಹೊತ್ತಿಗೆ ಅಂಟಿನ ಲಡ್ಡಿಗೆ ಎಲ್ಲಾ ಸಕ್ರಮವಾಗಿ ನಡೆದವು. ಅದೂ ನಮ್ಮ ಅಜ್ಜಿಯದು ದೊಡ್ಡ ಕೈ.

'ಅಂಟಿನ ಲಡ್ಡಿಗೆ ಬಳಗದ ಲಡ್ಡಿಗೇಂತ, ನಾಲ್ಕು ಜನಕ್ಕೆ ಕೊಟ್ಟು ತಿನ್ನಬೇಕು, ತಿಳೀತೇ!' ಎಂದು ತುಪ್ಪದಲ್ಲಿ ಕರಿದ ರುಚಿರುಚಿಯಾದ ಅಂಟಿನುಂಡೆಯನ್ನು ಅಕ್ಕ ಪಕ್ಕದವರಿಗೆ ಕೊಡೋಣ–ಅವರು ಪದಾರ್ಥ

ತಯಾರು ಮಾಡಿದವರನ್ನು ಹೊಗಳೋಣ-ಆ ಹೊಗಳಿಕೆಗೆ ಉಬ್ಬಿ ಮತ್ತಷ್ಟು ಹಂಚೋಣ. ಹೀಗೆ ನಡೆದು, ಬಾಣಂತನದ ಮುಖ್ಯವಾದ ಮೂರುತಿಂಗಳು ಕಳೆದವು.

ನಾಲ್ಕನೆಯತಿಂಗಳಿನಲ್ಲಿ ಮಗುವಿಗೆ 'ಕರ್ಣವೇಧೆ' ಯಾಗಬೇಕು. 'ಲೋ ರಾಮು, ಲೋಲಾಕು ಸ್ವಲ್ಪ ದಪ್ಪನಾಗಿರಲಿ–ಮಧ್ಯದಲ್ಲೊಂದು ಕೆಂಪು-ಕೊನೆಯಲ್ಲೊಂದು ಮುತ್ತು-ನಡುವೆ ಮಾವಿನೆಲೆ...'ಎಂದು ಅಜ್ಜಿ ಆರಂಭಿಸಲು ಮಾವ ಸೋತು.

'ಅಮ್ಮ, ಎಂಥದೋ ಶಾಸ್ತ್ರಕ್ಕೆ ಹದಿನಾಲ್ಕು ಕ್ಯಾರೆಟ್ ಚಿನ್ನದ ಮುರುವಿನಲ್ಲಿ ಚುಚ್ಚಿ ಮುಗಿಸಿಬಿಡಮ್ಮ–ಹೇಗೂ ಗಂಡು' ಮಗು... ಎಂದರೆ ಅಜ್ಜಿ ತಕ್ಷಣವೇ.

"ಸಾಕು-ಸಾಕು. ಎಂಥದೋ ಅಂಥ ದರಿದ್ರ ಬಂದಿರೋದು ನಮಗೆ? ಇಗೋ.ತಗೋ! ನನ್ನ ಮೊಮ್ಮಗಿಗಿಂತ ಹೆಚ್ಚಿಲ್ಲ' ಇದು— ಎಂದು ತಮ್ಮ ಎರಡನೇ ಬೆರಳಿನ ಚಿನ್ನದ ಉಂಗುರವನ್ನು ಕಳಚಿ ಮೂರನೇ ಬೆರಳಿಗೆ ಏರಿಸಿಕೊಂಡರು ನಮ್ಮಜ್ಜಿ!

ಕಿವಿ ಚುಚ್ಚಿದ ಆರತಿಯ ಸಂಭ್ರಮದಿಂದ ಸುಧಾರಿಸಿಕೊಳ್ಳುತ್ತಿರು ಮಂತೆಯೇ ಇದ್ದಕ್ಕಿದ್ದಂತೆ ಒಂದು ದಿನ ನಮ್ಮಜ್ಜಿ ಮಗನಿಗೆ ಆಜ್ಞೆ ಮಾಡಿದರು.

'ರಾಮಣ್ಣ, ಆರು ಸೇರು ಬೂರಾ ಸಕ್ಕರೆ ತಂದು ಬಿಡಪ್ಪಾ!' 'ಏತಕ್ಕತ್ತೆ?' ಎಂದು ಸೊಸೆ ಕೇಳಲು ಅಜ್ಜಿ ಗದರಿಸಿದರು. 'ಏನೇ, ನಿಂಗೂ ಹೇಳಬೇಕೇ? ಮಗು ಹಿಡಿಚಿ ಕಟ್ತಾ ಇದೆ ಕಣೆ, ನಿನ್ನೆ ಬಿಂದ-ಲಾಡು ಕಟ್ಟಿ ಆರತಿ ಮಾಡಿ ಒಂದು ನಾಲ್ಕು ಜನಕ್ಕೆ ಕೊಡಬೇಡ್ವೇ?- ಎಂದರು.

ಅದಾದ ಸ್ವಲ್ಪ ದಿನಗಳಲ್ಲೇ ನಮ್ಮ ಮಾವನ ಮಗ ಮಗ್ಗಲಾಗಲು ಆರಂಭಿಸಿದ. ಆಗ ಅಜ್ಜಿ ಚಪ್ಪಾಳೆ ತಟ್ಟಿಕೊಂಡು ನಗುತ್ತಾ, ಎಲ್ಲರನ್ನೂ ಕರೆದು.

'ಲೇ ಪುಟ್ಟೆಂಕು, ಸಣ್ಣಕ್ಕ-ನಾಲ್ಕು ಸೇರು ಅಕ್ಕಿ ಹಾಕಿ ಹಸಿ ಕಡುಬು ಮಾಡೋಣವೇ, ಕರಗಡಬೇ ಕರಿದು ಬಿಡೋಣವೇ?- ನೋಡ್ರೆ, ನನ್ನ ಬಂಗಾರ ಹೇಗೆ ಕರಗಡಬಿನ್ಹಾಗೆ ಮುಗ್ಗುಲಾಗೋದು ಕಲ್ತಿದಾನೇ!. ಎಂದು ಬಾಂಡ್ಲೆ ಇಡಿಸಿಯೇ ಬಿಟ್ಟರು.

ಧೈರ್ಯಪಡಿಸಿ ಒಂದು ದಿನ ನಮ್ಮ ಮಾವ ಹೇಳಿದರು. 'ಅಮ್ಮ ಸಣ್ಣಕ್ಕ ಪುಟ್ಟೆಂಕು ಊರು ಬಿಟ್ಟು ಬಹಳ ದಿನಗಳಾದವು. ಪಾಪ, ಅವರ ಹೊಲ. ಮನೆಕೆಲ್ಸ ಏನಿದೆಯೋ!'

ಆಗ ಆ ಇಬ್ಬರು ಮಹಿಳೆಯರಿಗೇನೋ ಊರು-ಮನೆ ಜ್ಞಾಪಕ ಬಂದಿತು. ಆದರೆ ಅಜ್ಜಿ ಸುಮ್ಮನಿರಬೇಕಲ್ಲಾ!

'ಶ್ರೀ ಬಂದೋರು ಬುದ್ಧಿ—ಅನ್ನ ಮುಹೂರ್ತ ಶಾಸ್ತ್ರ ಒಂದು ಗೆಲ್ಲಿಸಿ ಬಿಡ್ರೀ!-' ಎಂದು ಅಜ್ಜಿ ಮುಂದಿನ ಅನ್ನ ಮುಹೂರ್ತಕ್ಕೆ ದೊಡ್ಡ ಏರ್ಪಾಡು ಹಾಕಲಾರಂಭಿಸಿದರು. ಅತ್ತೆ, ಮಾವ ಇಬ್ಬರೂ ಹೆದರಿದರು.

'ಸುಮ್ಮನೆ ಮನೆ ಶಾಸ್ತ್ರ ಮಾಡಿಬಿಡೋಣ, ಅಮ್ಮ. ಎಲ್ಲಾ ಗುತ್ತೆ ಅಷ್ಟೆಲ್ಲಾ ಖರ್ಚು!-' ಎಂದು ಮಾವನು ನುಡಿಯಲು ಅಜ್ಜಿ ಕೂಡಲೇ ತಿರುಗಿಬಿದ್ದರು.

"ಸಂಸ್ಕಾರ ಕಣೋ! ರಾಮು; ಸಂಸ್ಕಾರ! ಲಕ್ಷಣವಾಗಿ ಹುಟ್ಟಿರೋ ಗಂಡಿಗೆ ನಾಮಕರಣ ಅನ್ನಮುಹೂರ್ತ, ಜುಟ್ಟು ಜನಿವಾರ ಎಲ್ಲಾ ಮಾಡ್ಬೇಕು ಕಣೋ! ಖರ್ಚಿಗ್ಯಾಕೆ ಹೆದರ್ತಿಯೋ, ಅಪ್ಪಾ! ಹೆಸರಿ ನಲ್ಲಿದೆಯೋ ಆ ಗದ್ದೆ ಅತ್ಲಾಗೆ ಮಾರ್ಬ್ಯಾಕಿ ಬಿಡೋ-ಅಷ್ಟು ಬೇಕಾದರೆ—"

ಅಂಗೈ ಅಗಲದ ಆ ಗದ್ದೆಯನ್ನು ಯಾವ್ಯಾವಾಗ, ಯಾವ್ಯಾವ ಕಾರಣಕ್ಕಾಗಿ ಮಾರಬೇಕೆನ್ನುವುದು ಯಾರಿಗೂ ಅರ್ಥವಾಗಲಿಲ್ಲ.

ಮಗುವಿನ ಅನ್ನಮುಹೂರ್ತವಾದ ಕೂಡಲೇ ಅಜ್ಜಿಯ ಬಳಗ ಹೊರಡುತ್ತೇವೆಂದುಕೊಂಡಿದ್ದು ತಪ್ಪು ಊಹೆಯಾಯಿತು.

"ಅತ್ತಿಗೇ, ನೀನು ಇರುವವರೆಗೇ ನಮಗೆ ತೌರು. ಇನ್ನ್ಯಾವಾಗ ಬರೋಣ, ಹೋಗೋಣ-' ಎಂದು ಅವರುಗಳು ಕಂಬನಿ ಮಿಡಿಯಲು, ಅಜ್ಜಿ ವೀರಾವೇಶದಿಂದ ಹೀಗೆಂದರು.

'ಎಂದಿಗೂ ಇಲ್ಲ-ಪುಟ್ಟೆಂಕು-ಹಾಗೆಂದಿಗೂ ಇಲ್ಲ. ನಮ್ಮ ರಾಮು ನಿಮಗೆಂದೂ ತೌರು ತೊರೆಸೋದೇ ಇಲ್ಲ. ಅದು ಸರಿ ಈಗೆಂಥದೇ ಹೊರಡೋದು, ಮಗು ಅಂಬೆಗಾಲಿಟ್ಟದ್ದು ಸಹ ನೋಡದ್ದಾಂಗೆ! ನನ್ನ ಮೊಮ್ಮಗನಿಗೆ ವರ್ಷದ ಹುಟ್ಟಿದ ಹಬ್ಬ ಮಾಡಿಬಿಡಿ-ನಡೀತಿರಿ!-' ಎಂದರು ನಮ್ಮಜ್ಜಿ.

ಸಣ್ಣಕ್ಕ ತಲೆಯಲ್ಲಾಡಿಸುತ್ತಾ 'ಹೌದತ್ತಿಗೆ! ಬಾಣಂತನ ಸರಿಯಾಗಿ ನಡೆಯಬೇಕಾದರೆ ಒಂದು ವರ್ಷ ಅರೈಕೆ ಮಾಡ್ಕೋಬೇಕು. ನಿಜಕ್ಕೂ ನೀನಿಷ್ಟು ನಮ್ಮ ಮೇಲೆ ವಿಶ್ವಾಸವಿಟ್ಟಿರುವಾಗ ನಿನ್ನ ಸೊಸೆಗೆ ಒಂದು ವರ್ಷ ಬಾಣಂತನ ಮಾಡ್ದೆ ಹೋಗ್ತೀವೇ?-' ಎಂದಳು.

'ನಂಗೂ ಏನೂ ಕೈಲಾಗೋಲ್ಲಾ ಕಣ್ರೆ-ನೀವುಗಳಿದ್ದರೆ ನಂಗೆ ಪ್ರಾಯ ಬಂದಹಾಗೆ-' ಎಂದರು ಅಜ್ಜಿ.

ಸ್ವಲ್ಪ ದಿನಗಳಲ್ಲೇ ಮಗು ಹೊಸಲು ದಾಟಿತು. ದೊಡ್ಡ ಶಾಸ್ತ್ರ ನಡೆಯಿತು. ಹೊಸಲಿಗೆ ಪೂಜೆ-ತೆಂಗಿನಕಾಯಿ ಒಡೆದದ್ದು-ಮಗುವಿಗೆ-ಆರತಿ,-ವಗೈರಾ ...ಎಲ್ಲಾ ಆಯಿತು. ಈ ಮಧ್ಯೆ ಸಂಕ್ರಾಂತಿ ಹಬ್ಬ ಬರಲು ಅಜ್ಜಿ ಹಟತೊಟ್ಟು ಮನೆ ಮನೆಗೆ, ಬೆಳ್ಳಿಗಣಪತಿ, ಗೋಪಾಲಕೃಷ್ಣ, ಕೊಬ್ಬರಿಬಟ್ಟಲು ಬೀರಿಸಿದರು. ಮೆಲ್ಲಮೆಲ್ಲನೆ ಮಗುವಿನ ವರ್ಷದ ಹುಟ್ಟಿದ ದಿನವೂ ಹತ್ತಿರಕ್ಕೆ ಬಂದೇ ಬಂದಿತು. ಯಾರು ಎಷ್ಟು ಮೊರೆಯಿಟ್ಟರೂ ಕಿವಿಗೊಡದೆ ಯಥಾಪ್ರಕಾರ ಗದ್ದೆಮಾರುವ ಮಾತೆತ್ತಿ ಅಜ್ಜಿ, ಲಾಡು ಚಿರೋಟಿ ಕರಿಸಿ, ಪದರ ಫೇಣಿ ಮಾಡಿಸಿ ಮೊಮ್ಮಗನ ವರ್ಷದ ಹೆಚ್ಚನ್ನು ಅತಿ ವೈಭವದಿಂದ ನಡಸಿಯೇ ಬಿಟ್ಟರು.

ಅನಂತರ ನಮ್ಮ ಮಾವನು ಹೊಡಿದ. ಎಷ್ಟೋ ಉಪಾಯಗಳ ಫಲಿತವಾಗಿ ಕೊನೆಗೊಂದು ದಿವಸ ಪುಟ್ಟೆಂಕು, ಸಣ್ಣಕ್ಕ, ಉಡುಗೊರೆ ಔತಣ ಎಲ್ಲವನ್ನು ಪಡೆದು, ಕಂಬನಿ ಮಿಡಿಯುತ್ತಾ ಸ್ವಗ್ರಾಮಗಳಿಗೆ ಪ್ರಯಾಣಮಾಡಿದರು.

ಆದಾದ ಸ್ವಲ್ಪ ದಿನಗಳಿಗೆ ನಮ್ಮ ಮಾವನು ಆಫೀಸಿನಲ್ಲಿ ಬಹಳ ಕೆಲಸವಿರುವುದೆಂದು ಹೇಳಿ ದಿನವೆಲ್ಲಾ ಕಣ್ಮರೆಯಾಗಿದ್ದು ನಂತರ ಮನೆಗೆ ಬಂದು ವಿಪರೀತ ದುಡಿತದಿಂದ ಆಯಾಸವಾಗಿದೆಯೆಂದು ಎರಡು ದಿನ ಹೊದ್ದುಕೊಂಡು ಮಲಗಿದರು.

ಆ ದಿನ ಮಾವ ಹೋಗಿದ್ದೆಲ್ಲಿಗೆ. ಹೊದ್ದು ಮಲಗಿದ್ದೇಕೆಂದು ನನಗೆ. ಅತ್ತೆಗೆ ಮಾತ್ರ ತಿಳಿದಿತ್ತು. ತಾವು Visectomy ಶಿಬಿರಕ್ಕೆ ಹೋದ ಸಂಗತಿಯನ್ನು ನಮಗೆ ಅತಿ ರಹಸ್ಯವಾಗಿ ತಿಳಿಸಿದ್ದರು, ಮತ್ತು ನಮ್ಮ ಮಾವನ ಈ ಕುಟುಂಬ ನಿಯಂತ್ರಣ ನಿರ್ಣಯಕ್ಕೆ ಅಜ್ಜಿಯ ಬಾಣಂತನವೇ ಕಾರಣವೆಂದು ನೀವೆಲ್ಲರೂ ಈಗ ಅರ್ಥಮಾಡಿಕೊಳ್ಳಬಲ್ಲಿರಿ.

—:O:—

# ಅತಿಥಿ

—ಪಂಕಜಾ ಶ್ರೀನಾಥ್

ನಾಲ್ಕೈದು ದಿನಗಳಿಂದ ವಿಪರೀತ ಬಿಸಿಲು ಕಾಯುತ್ತಿದ್ದು, ಅಂದು ಇದ್ದಕ್ಕಿದ್ದಂತೆ ಬೆಳಗಿನಿಂದಲೇ ಮೋಡ ಮುಚ್ಚಿಕೊಂಡಿತ್ತು. ಸಂಜೆಯು ಹೇಳಿಗೆ ಸಣ್ಣದಾಗಿ ಮಳೆಯೂ ಪ್ರಾರಂಭವಾಗಿತ್ತು. ಮನೆಯ ಮುಂದಿನ ವರಾಂಡದಲ್ಲಿ ಕುಳಿತು ಹುರುಳಿಕಾಯಿಯ ನಾರು ಬಿಡಿಸುತ್ತಿದ್ದ ಸ್ವರ್ಣಮ್ಮ ನವರ ಗಮನವೆಲ್ಲ ಬೀದಿಯ ಕಡೆಗೇ ಇತ್ತು. ಸಂಜೆ ನಾಲ್ಕೂ ಮುಕ್ಕಾಲು ಗಂಟೆಯ ವೇಳೆಗೇ ಮನೆ ಸೇರಬೇಕಾಗಿದ್ದ ಅವರ ಮಗ ಶ್ರೀನಿವಾಸ ಆರೂ ಕಾಲಾದರೂ ಬರುವ ಸೂಚನೆಗಳೇ ಇರಲಿಲ್ಲ. ತಮ್ಮ ದಿನ ನಿತ್ಯದ ರೂಢಿಯನ್ನು ತಪ್ಪಿಸಿ. ವಾಕಿಂಗ್ ಹೋಗುವ ಅವಕಾಶವನ್ನು ಕೊಡದಿದ್ದು ದಕ್ಕಾಗಿ ಮಳೆಯನ್ನು ಶಪಿಸುತ್ತಾ, ಶಂಕರಪ್ಪನವರು ಮೂರೂವರೆ ಬೈ ಏಳೂವರೆಯ ವರಾಂಡದಲ್ಲಿ ಶತಪಥ ಸುತ್ತಲಾರಂಭಿಸಿದರು.

"ಹಾಳು ಮಳೆ, ನನ್ನ ವಾಕಿಂಗ್ ತಪ್ಪಿಸಿತು" ಶಂಕರಪ್ಪ ಉವಾಚ "ಚೈತ್ರ ಮಾಸದಲ್ಲಿ ಇದ್ಯಾವ ಮಳೆ ಅಂದ್ರೆ? ಒಳ್ಳೆ ಅಷಾಢದ ಸೋನೆ ಶುರು ಆಗಿದೆ ಬಿಲ್ಲಾ?" ಕಣ್ಣುಗಳು ಗೇಟಿನ ಕಡೆಗೇ ಇದ್ದರೂ, ಕೇಳಿದರು ಸ್ವರ್ಣಮ್ಮ.

"ಬಂಗಾಳಾಕೊಲ್ಲಿಯಲ್ಲಿ ಡಿಪ್ರೆಷನ್ ಕಣೆ. ಇನ್ನೂ ಮೂರುದಿನ ಹೀಗೇ ಇರುತ್ತಂತೆ. ಬೆಳಗ್ಗೆ ರೇಡಿಯೋನಲ್ಲಿ ಹೇಳಿದರು"

"ಸದ್ಯ ಒಂದು ವಾರದ ಶೆಖೆಯಂತೂ ಈವತ್ತಿಲ್ಲ, ಆದರೂ ಹೀಗೆ ಸಂಜೆ ಸೋನೆ ಬೇಜಾರಪ್ಪ. ಅದ್ಸರಿ, ಶೀನು ಯಾಕೋ ಇಷ್ಟೊತ್ತಾದ್ರೂ ಬರಲೇ ಇಲ್ವೇ? ಮಳೇಲಿ ಸಿಕ್ಕಿ ಹಾಕಿಕೊಂಡಿದಾನೋ ಏನೋ!

'O. T. ಇರಬಹುದು ಕಣೆ'

ಇದ್ದಿದ್ರೆ, ಹೇಳಿ ಹೋಗ್ತಾ ಇದ್ದ. ಹೇಳದೇ ಎಂದೂ ನಿಲ್ಲೊಲ್ಲ. ಆಗಲೇ ಆರೂವರೆ. ಯಾಕ್ಬಂದಿಲ್ವೋ?'

'ಬರ್‍ತಾನೆ ಬಿಡೆ. ಅವನೇನು ಚಿಕ್ಕಮಗೂನೇ?'

'ಸ್ಕೂಟರ್ ಏನಾದ್ರೂ ಕೆಟ್ಟಿರಬಹುದೋ?'

'ಸಾ...ರಿ...ನಿಂದೆಲ್ಲ ಕೆಟ್ಟ ಯೋಚನೇನೇ ಯಾವಾಗ್ಲೂ. ಹೊಚ್ಚ ಹೊಸುಗಾಡಿ. ತೊಂದರೆಯಾಕೆ ಕೊಟ್ಟೀತು?' ರೂಪ ಎಲ್ಲಿ ಕಾಣೊಲ್ಲ?'

"ಅವಳೂ ಐದೂವರೆ ತನಕ ನೋಡಿದಳು, ತುಂಬ ಬೇಜಾರಾಗ್ತಿದೆ. ಹಾಗೇ ಲತಾ ಮನೆಗೆ ಹೋಗಿಬರ್‍ತೀನಮ್ಮ ಅಂದಳು: ಇನ್ನೇನು ಬರೋಹೊತ್ತು"

ಬಿಡಿಸಿದ ಹುರುಳೀಕಾಯಿಯ ಬುಟ್ಟಿಯನ್ನೆತ್ತಿಕೊಂಡು ಸ್ವರ್ಣಮ್ಮ ಎದ್ದರು.

"ಸ್ವಲ್ಪ ಕಾಫಿ ಇದ್ರೆ ಕೊಡ್ತೀಯಾ ಬಿಸಿ ಬಿಸಿಯಾಗಿ? ಯಾಕೋ ಹೊತ್ತೇ ಹೋಗ್ತಾ ಇಲ್ಲ"

"ಒಂದ್ನಿಮಿಷ ತರ್‍ತೀನಿ"

ಸ್ವರ್ಣಮ್ಮ ಹೊಗೆಯಾಡುವ ಕಾಫಿಲೋಟ ಹಿಡಿದು ಹೊರ ಬರುವುದಕ್ಕೂ ಗೇಟು ಕಿರ್ರೆನ್ನುವುದಕ್ಕೂ ಸರಿಹೋಯಿತು. ಶ್ರೀನಿವಾಸನೇ ಬಂದಿರಬೇಕೆಂದು ಹೊರಬಾಗಿಲಿಗೆ ಬಂದ ಆಕೆಗೆ ಮೊದಲು ಕಂಡದ್ದು ಸೊಸೆ ರೂಪ. ಸ್ವಲ್ಪದೂರದಲ್ಲಿ ಓರ್ವ ಅಪರಿಚಿತ. ಆತನ ಕೈಯಲ್ಲಿ ಒಂದು ಚಿಕ್ಕ ಸೂಟ್‌ಕೇಸ. ಆತ ಯಾರಿರಬಹುದೆಂದು ಆಕೆ ಊಹಿಸುತ್ತಿರುವಂತೆ ಅವರಿಬ್ಬರೂ ಒಳಗೆ ಬಂದರು. ಕಾಫಿಕುಡಿದು ಮುಗಿಸಿದ ಶಂಕರಪ್ಪನವರು, ಲೋಟವನ್ನು ಒಳಗಿಟ್ಟು ವರಾಂಡಕ್ಕೆ ಬಂದರು. ಕೇಳಬೇಕೆಂದಿದ್ದ ಪ್ರಶ್ನೆ ಸ್ವರ್ಣಮ್ಮನವರ ಮುಖದಲ್ಲಿ ಸ್ಪಷ್ಟವಾಗಿತ್ತು. ಆದರೆ ಸೊಸೆ ಉತ್ತರಿಸುವ ಬದಲು ಮತ್ತೊಂದು ಪ್ರಶ್ನೆಯನ್ನೇ ಹಾಕಿದಳು. "ಇವರ್‍ಯಾರು ಗೊತ್ತೇ, ಅಮ್ಮ?" ಸ್ವರ್ಣಮ್ಮನವರ ಶೂನ್ಯ ಮುಖಭಾವವನ್ನೇ ನೋಡುತ್ತಾ. ಆಗುಂತಕ ಕೇಳಿದ "ಏನಮ್ಮ ಗುರುತು ಸಿಗಲಿಲ್ಲವೇ?" ಏನ್ಸಾರ್ ನೀವೂ ಮರೆತುಬಿಟ್ಟಿರಾ?" ಗಂಡ ಹೆಂಡತಿ ಮುಖ

ಮುಖ ನೋಡಿಕೊಂಡರು. ಸಮಸ್ಯೆ ಬಗೆಹರಿಯಲಿಲ್ಲ. "ನಾನು ನಿಮ್ಮ ಶ್ರೀನಿವಾಸನ ಫ್ರೆಂಡ್ಸು ಸಾರ್, ನಿಮ್ಮ ಮನೆಗೆ ಎಷ್ಟು ಸಲ ಬಂದಿದೀನಿ, ನನ್ನನ್ನೇ ಮರೆತೇಬಿಡೋದೇ? ನಾನು ಮುರುಗನ್ ಅಲ್ಲವೇ?" ಯಾವ ಮುರುಗನೋ, ಆ ಪಳನಿ ಮುರುಗನಿಗೇ ಗೊತ್ತು ಎಂದುಕೊಂಡರು ಶಂಕರಪ್ಪ.

"ನಾನು ಮುರುಗನ್ ಅಮ್ಮ. ನಿಮ್ಮ ಶ್ರೀನಿವಾಸನ ಫ್ಯಾಕ್ಟರೀಲೇ ನನಗೂ ಕೆಲಸ. ನಾವಿಬ್ರೂ ಒಟ್ಟಿಗೇ ಕೆಲಸಕ್ಕೆ ಸೇರಿದ್ದು. ಎಷ್ಟು ದಿನ ನೀವು ನನ್ನಗೆ ಫಗದಸ್ತಾಗಿ ಊಟ ಹಾಕಿಲ್ಲ? ನೀವು ಮಾಡೋ ಹಾಗೆ ಮಜ್ಜಿಗೆ ಹುಳಿ ನಾನು ಬೇರೆಲ್ಲೂ ಇದುವರೆಗೆ ತಿಂದುದೇ ಇಲ್ಲ. ತಿಂದರೆ ನೀವು ಮಾಡಿದ ಬೂದುಗುಂಬಳಕಾಯಿ ಮಜ್ಜಿಗೆಹುಳಿ ತಿನ್ನಬೇಕು."

ಎಷ್ಟು ಯೋಚಿಸಿದರೂ ಸ್ವರ್ಣಮ್ಮನವರಿಗೆ ನೆನಪಿಗೇ ಬಾರದು. ಶ್ರೀನಿವಾಸನ ಸ್ನೇಹಿತನಂತೆ ಮನೆಗೆ ಅನೇಕ ಸಲ ಬಂದಿದ್ದೇನೆ ಎನ್ನುತ್ತಾನೆ. ತನ್ನ ಅಡಿಗೆಯನ್ನು ಹೊಗಳುತ್ತಾನೆ. ಮಗನ ಸ್ನೇಹಿತರ ದಂಡು ಆಗಾಗ ಮನೆಗೆ ಬರುತ್ತಿದ್ದುದೇನೋ ಉಂಟು. ಆ ದಂಡಿನಲ್ಲಿ ಇವನೂ ಇದ್ದಿರಬಹುದೇ? ಆದರೂ......ಆದರೂ......ಈತನನ್ನು ನೋಡಿದ ನೆನಪೇ ಆಗಲೊಲ್ಲದಲ್ಲ! ಶಂಕರಪ್ಪನವರೂ ಕವಡ ತಲೆ ಕೆರೆದುಕೊಂಡರು. ಮಗನ ಸ್ನೇಹಿತರ ಹೆಸರುಗಳು ನೆನಪಿರದಿದ್ದರೂ. ಮುಖಗಳಂತೂ ಖಂಡಿತ ನೆನಪಿದೆ. ಈತ ಯಾರಿರಬಹುದು?

ಮುರುಗನ್ ಯಾರ ಆಹ್ವಾನಕ್ಕೂ ಕಾಯದೆ ವರಾಂಡಕ್ಕೆ ಸೇರಿದಂತಿದ್ದ ಶ್ರೀನಿವಾಸನ ರೂಮಿಗೆ ಹೋಗಿ ತಾನು ತಂದಿದ್ದ ಸೂಟ್‌ಕೇಸನ್ನು ಅಲ್ಲಿಟ್ಟು, ಷೂ ಕಳಚಿ, ಕೋಟು ಬಿಚ್ಚಿ, ಸ್ಟ್ಯಾಂಡಿನ ಮೇಲೆ ಹಾಕಿ ಪುನಃ ವರಾಂಡಕ್ಕೆ ಬಂದ. ಸ್ವರ್ಣಮ್ಮನವರು ಸೊಸೆಗೆ ಕಣ್ಸನ್ನೆ ಮಾಡಿ ಒಳಕ್ಕೆ ಹೋದರು. ಶಂಕರಪ್ಪನವರು ಕುಳಿತ ಕುರ್ಚಿಯ ಪಕ್ಕಕ್ಕೇ ಮತ್ತೊಂದು ಕುರ್ಚಿಯನ್ನು ಎಳೆದುಕೊಂಡು ಮುರುಗನ್ ಆರಾಮವಾಗಿ ಕುಳಿತ. "ಏನ್ಸಾರ್ ವಾಕಿಂಗ್ ಹೋಗಲಿಲ್ಲವೇ?"

"ಹಾಳು ಮಳೆ ನೋಡಿ."

"ಅಯ್ಯಯ್ಯೋ, ಏನು ಸಾರ್ ಹೀಗೆ ಮಾಡ್ತೀರಿ? ನನಗ್ಯಾಕೆ ಬಹುವಚನ? ನಿಮ್ಮ ಶೀನೂ ತರತಾನೆ ನಾನೂ?"

ಶೀನು ಈವತ್ತು ಯಾಕೋ ತುಂಬ ಲೇಟು."

"ಅವರಿಗೆ ಯಾವುದೋ ಸ್ಪೆಷಲ್ ಡ್ಯೂಟಿಯಂತೆ ಮಾವಯ್ಯ Moulding Shopನಲ್ಲಿ ಯಾವುದೋಮೆಷಿನ್‌ಕೆಟ್ಟಿದೆಯಂತೆ,ರಾತ್ರೋ ರಾತ್ರಿ ಅದನ್ನು ಸರಿಮಾಡಬೇಕಂತೆ." ರೂಪ ಹೇಳಿದಳು.

"ಯಾರು ಹೇಳಿದ್ರಮ್ಮ?"

"ನಾನೇ ಹೇಳಿದೆ ಸಾರ್. ನಾನು ಮೊದಲು ಫ್ಯಾಕ್ಟರಿಗೇ ಹೋದೆ"

"ಅಂದರೆ?"

"ನಾನು ಈಗ ಈ ಊರಲ್ಲಿಲ್ಲ. ನಮ್ಮ ಫ್ಯಾಕ್ಟರಿಯ ನಾಸಿಕ್ ಯೂನಿಟ್ಟಿಗೆ ವರ್ಗ ಮಾಡಿದಾರೆ. ಈವತ್ತು ಯಾವುದೋ ಕೆಲಸದ ಮೇಲೆ ಇಲ್ಲಿಗೆ ಬಂದೆ. ಫ್ಯಾಕ್ಟರೀಲಿ ಶ್ರೀನಿವಾಸನನ್ನು ನೋಡಿದೆ. ಬೇರೆಲ್ಲೂ ಹೋಗಬೇಡ. ನಮ್ಮ ಮನೆಗೇ ಹೋಗು. ನಾನೂ ಬೇಗ ಬಂದುಬಿಡ್ತೀನಿ ಅಂದ. ಮನೆ ಬದಲಾಯಿಸಿದೀವಿ ಅಂತ ಹೊಸ ಮನೆಯ ಆಡ್ರೆಸ್ ಕೂಡಾ ಬರೆದುಕೊಟ್ಟ."

ಇಷ್ಟೆಲ್ಲ ಕೇಳಿದ ಸ್ವರ್ಣಮ್ಮನವರಿಗೆ ಇನ್ನು ಅನುಮಾನ ಉಳಿಯು ವುದು ಸಾಧ್ಯವೇ ಇರಲಿಲ್ಲ. ಶಂಕರಪ್ಪನವರ ಕೈಲಿದ್ದ ಚೀಟಿಯಲ್ಲಿ, ಶ್ರೀನಿವಾಸನ ಬರಹ ಸ್ಪಷ್ಟವಾಗಿ ಕಾಣುತ್ತಿತ್ತು. ಕಾಫಿಯ ಲೋಟವನ್ನು ಅತಿಥಿಯ ಕೈಗಿತ್ತು, ರಾತ್ರಿಯ ಅಡುಗೆಗೆಂದು ಒಳಕ್ಕೆ ಹೋದರು.

ಅಡಿಗೆ ಮನೆಯಲ್ಲಿ ಅತ್ತೆ ಸೊಸೆಯರ ಸಂವಾದ ನಡೆದಿತ್ತು. "ನಿನಗೆಲ್ಲಿ ಸಿಕ್ಕಿದ ರೂಪ ಅವನು? "ನಾನು ಲತ ಮನೆಯಲ್ಲಿದ್ದಾಗ ಆತ ಬಂದರಮ್ಮ. ನಮ್ಮ ಮನೆ ವಿಳಾಸದ ಚೀಟಿ ತೋರಿಸಿ ಆ ಮನೆ ಎಲ್ಲಿದೆ ಅಂತ ಕೇಳಿದರು. ಆ ಮನೆಯವರೇ ಇಲ್ಲಿದ್ದಾರೆ ನೋಡಿ ಅಂತ ಲತಾ ತಂದೆ ನನ್ನನ್ನು ಪರಿಚಯ ಮಾಡಿಕೊಟ್ಟರು. ಅಡ್ರೆಸ್ ಅವರ ಕೈಬರಹ

ದಲ್ಲೇ ಇತ್ತು. ಆದ್ರಿಂದ ಅವರ ಫ್ರೆಂಡು ಅಂದುಕೊಂಡು ಜೋತೇಲೇ ಕರೆದುಕೊಂಡು ಬಂದೆ. ಅವರ ಮಾತುಕತೆ ನೋಡಿ, ನನಗೆ ಪರಿಚಯ ಇಲ್ಲಿದ್ದೂ ನಿಮಗೆಲ್ಲ ಬಹುದಿನದ ಪರಿಚಯಾಂತ ಅಂದ್ಕೊಂಡೆ."

"ಏನೇನು ಮಾಡಿದರೂ, ನೆನಪೇ ಬರಲೊಲ್ಲದು ರೂಪ, ಶೀನು ಸ್ನೇಹಿತರೆಲ್ಲ ನನಗೆ ಗೊತ್ತು."

"ಅಷ್ಟೇ ಸದರವಾಗಿ ಮಾತಾಡ್ತಾರೆ. ನಮ್ಮ ಮನೆ ವಿಷಯಾನೆಲ್ಲ ಹೇಳಿದರು. ಮದುವೆಗೆ ಮುಂಚೆ ಫೋಟೋ ತೋರಿಸಿದಾಗ, ಮದುವೆ ಆಗೋದಿದ್ರೆ ಈ ಹುಡುಗೀನೇ ಆಗು, ಅಂತ ಅವರಿಗೆ ಹೇಳಿದ್ರಂತಮ್ಮ"

"ಮದುವೆಗೆ ಬಂದಿದ್ನಂತೇನು ?"

"ಇಲ್ಲವಂತೆ. ಅವತ್ತೇ ಅವರ ತಂದೆ ಹೋಗ್ಬಿಟ್ರಂತೆ"

"ಅಯ್ಯೋ, ಪಾಪ,"

"ಅವರೇ ಮನೆ ಎಲ್ಲ ನೋಡಿಕೋಬೇಕಂತೆ. ಇಬ್ಬರು ತಂಗಿಯರು ಮದುವೆಗಿದಾರಂತೆ. ಒಬ್ಬ ತಮ್ಮ ಓದ್ತಾ ಇದಾನಂತೆ."

"ಅವನಿಗೆ ಮದುವೆ ಆಗಿದ್ಯೇ?"

"ಗೊತ್ತಿಲ್ಲಮ್ಮ. ನಾನು ಹೇಗೆ ಕೇಳಲಿ?"

"ಹುಡುಗ ಲಕ್ಷಣವಾಗಿದಾನೆ. ಒಳ್ಳೆ ಕೆಲಸ ಇದೆ. ಯಾರಾದ್ರೂ ಕೇಳಬಹುದು."

"ಅಮ್ಮ, ನಮ್ಮ ಲತಾನ ಯಾಕೆ ಕೇಳಬಾರದು?"

"ಹೌದು ರೂಪ ಒಳ್ಳೆ ಯೋಚನೆ. ಶ್ರೀನಿವಾಸ ಬರಲಿ. ಪ್ರಸ್ತಾಪ ಮಾಡೋಣ. ರಾತ್ರಿಗೆ ಏನು ಅಡಿಗೆ ಮಾಡಲಿ?"

ಇವರ ಪ್ರಶ್ನೆ ತನಗೆ ಕೇಳಿಸಿತೇನೋ ಎನ್ನುವಂತೆ ಮುರುಗನ್ ಅಡಿಗೆ ಮನೆಗೇ ಬಂದ.

"ಅಮ್ಮಾ, ನನಗಾಗಿ ಏನೂ ವಿಶೇಷ ಮಾಡಬೇಡಿ. ಈವತ್ತು ಶನಿವಾರ. ನಾನು ರಾತ್ರಿ ಊಟ ಮಾಡೊಲ್ಲ" "ಅಯ್ಯೋ, ಹಾಗ್ರಂದ್ರಾಗುತ್ಯೇ? ಸ್ವಲ್ಪ ಫಲಾಹಾರನಾದ್ರೂ ತೊಗೋಬೇಕು." ಶಂಕರಪ್ಪನವರ ಅಂಬೋಣ.

"ಆದ್ಸರಿ. ಅಮ್ಮ ತುಂಬ ತೊಂದರೆ ತೊಗೋಬೇಡಿ. ರವೆ ಇದ್ದರೆ ಒಂದು ನಾಲ್ಕು ಇಡ್ಡಲಿ ಜೊತೆಗೆ ನಿಮ್ಮ ತಿಳಿಸಾರು, ಎರಡು ಬಾಳೆ ಹಣ್ಣು. ಇದ್ದರೆ ಒಂದು ಸೇಬು. ಕೊಂಚ ಬಿಸಿ ಹಾಲು ಇಷ್ಟಾದರೆ ಸಾಕು.

ಅತ್ತೆ, ಸೊಸೆ ಮುಖ ಮುಖ ನೋಡಿಕೊಂಡರು. ಹತ್ತು ಹೊಡೆದರೂ ಶ್ರೀನಿವಾಸ ಮನೆಗೆ ಬರಲಿಲ್ಲ. ಅವನು ಯಂತ್ರ ಸರಿಯಾಗುವವರೆಗೆ ಕಾರ್ಖಾನೆಯಲ್ಲೇ ಇರಬೇಕಾಗಬಹುದೆಂದು ಮುರುಗನ್ ಹೇಳಿದ್ದರಿಂದ ರೂಪಳಿಗೂ ಅವಳ ಅತ್ತೆ ಮಾವಂದಿರಿಗೂ ಸ್ವಲ್ಪ ಆತಂಕ ಕಡಿಮೆಯಾಗಿತ್ತು.

"ಇಡೀ ಫ್ಯಾಕ್ಟರಿಯಲ್ಲೇ, ಆ ಮೆಷಿನ್ ರಿಪೇರಿ ಮಾಡುವುದು ನಮ್ಮ ಶೀನು ಕೈಲಿ ಮಾತ್ರ ಸಾಧ್ಯ ಸಾರ್" ಎಂತೆಂತಾ. ಫಾರಿನ್ ಎಂಜಿನಿಯರುಗಳೂ ಈವತ್ತು ಸುಸ್ತಾಗಿಬಿಟ್ಟರು ಶೀನು ಬುದ್ಧಿವಂತಿಕೆ ನೋಡಿ," ಮಗನ ಹೊಗಳಿಕೆ ಕೇಳಿ ತಾಯಿ ಹೃದಯ ಹಿಗ್ಗಿ ಉಬ್ಬಿತು. ಅದೇ ಗುಂಗಿನಲ್ಲೇ ಮುರುಗನಿಗೆ ಮತ್ತೆ ನಾಲ್ಕು ಇಡಲಿಗಳನ್ನು ಬಡಿಸಿದರು. ಹೊಗಳುತ್ತಾ, ಗುಣಗಾನ ಮಾಡುತ್ತಾ, ಮುರುಗ ತನಗಾಗಿ ತಯಾರಾದ ಫಲಾಹಾರವನ್ನೆಲ್ಲ ಮುಗಿಸಿ, ಕೇಸರಿ, ಬಾದಾಮಿ ಹಾಕಿದ ಹಾಲು ಕುಡಿದು, ತೃಪ್ತಿಯಿಂದ ತೇಗಿದ. ಮಧ್ಯೆ ಮಧ್ಯೆ ತನ್ನ ಬಗ್ಗೆ ವಿವರಗಳನ್ನೂ ನೀಡಿದ.

"ನಾನೂ ಇಲ್ಲಿನ ಫ್ಯಾಕ್ಟರಿಯಲ್ಲೇ ಇದ್ದೆ ಸಾರ್. ನಾಸಿಕ್ ಯೂನಿಟ್ ಶುರು ಆದಾಗ ಅಲ್ಲಿನ ಮೆಷಿನರಿಯೆಲ್ಲ ಸರಿಯಾಗಿ ಜೋಡಿಸುವುದಕ್ಕಾಗಿ ನನಗೆ ಬಡ್ತಿ ಕೊಟ್ಟು, ಅಲ್ಲಿಗೆ ಕಳುಹಿಸಿದರು. ಅಲ್ಲಿ ನಮ್ಮ ಸಾಹಿತ್ಯ ಸಂಘಕ್ಕೆ ನಾನೇ ಪ್ರೆಸಿಡೆಂಟು, ಸ್ಕೂಲ್ ಕಮಿಟಿ ಛೇರ್‌ಮನ. ಲೋಕಲ್ ಲಯನ್ಸ್ ಕ್ಲಬ್ಬಿಗೂ ನಾನೇ ಸೆಕ್ರೆಟರಿ. ಅಲ್ಲಿನ ಸ್ಟೇಟ್ ಹಾಕಿ ಟೀಮಿಗೆ ನಾನೇ ಕ್ಯಾಪ್ಟನ್. ಈ ಸಲದ ವಿಶ್ವ ಕಪ್ ಟೀಮಿಗೆ ನನ್ನನ್ನೇ ಸೆಂಟರ್ ಫಾರ್‌ವರ್ಡಾಗಿ ಆರಿಸಿದ್ದರು. ಕೊನೇ ಗಳಿಗೆಯಲ್ಲಿ, ಇನ್ನಾ

ರೋಗೇ ಜಾಗ ಕೊಡೋದಕ್ಕಾಗಿ, ನನ್ನನ್ನು ಡ್ರಾಪ್ ಮಾಡಿದರು. ಆತ, ಪ್ರಧಾನಮಂತ್ರಿಗೆ ಸಂಬಂಧವಂತೆ, ನಾನು ಹೋಗಿದ್ದಿದ್ರೆ ಆ ತರಹ ಸೋಲುತ್ತಿದ್ದೆವಾ? ಫೂಲ್ ಮ್ಯಾಚುಗಳಲ್ಲೇ, ಪೂರ್ತಿ ಪಾಯಿಂಟ್ಸ್ ಬರುತ್ತಿತ್ತು, ಏನ್ಸಾರ್?"

"ಶಂಕರಪ್ಪ ಆಕಳಿಸತೊಡಗಿದರು. ಬಂದ ಅತಿಥಿಗೆ, ಅವನು ಮಗನ ಗೆಳೆಯನಾದುದರಿಂದ, ಮಗನ ರೂಮಿನಲ್ಲೇ ಮಲಗಲು ಅಣಿ ಮಾಡಿಕೊಟ್ಟು, ತಾವೂ ಮಲಗಲು ತೆರಳಿದರು. ರೂಪ, ಅತ್ತೆಯ ರೂಮಿಗೆ ಬಂದುದರಿಂದ, ಶಂಕರಪ್ಪ ಹಾಲಿನ ಬೆಡ್‌ಕಂ ಸೋಫ ಆಶ್ರಯಿಸಬೇಕಾಯಿತು. ಮಲಗುವ ಮೊದಲು ಮುರುಗನ್ ಸ್ವಲ್ಪ ಫೋನ್ ಮಾಡಬೇಕಲ್ಲ" ಎಂದ. ಶಂಕರಪ್ಪ, ಅವನನ್ನು ಎದುರು ಮನೆಗೆ ಕರೆದೊಯ್ದರು. ಮನೆಯಾತ ಮುದ್ದುರಾಯಪ್ಪ ಸಿಡುಕುತ್ತಲೇ Phone ತೋರಿದರು. ಐದಾರು ಬಾರಿ ಯತ್ನಿಸಿ 'ಸಾರಿ ಸರ್. ತೊಂದರೆ ಕೊಟ್ಟೆ, ನಂಬರ್ರು ರೆಸ್‌ಪಾನ್ಸೇ ಇಲ್ಲ' ಎಂದು ಹೊರಬಂದ ಮುರುಗನ್.

ರಾತ್ರಿ ಮುರುಗನ್ ನಾಲ್ಕಾರು ಬಾರಿ ಎದ್ದಂತಿತ್ತು. ಶಂಕರಪ್ಪನವರೂ ಆಗಾಗ ಏಳುತ್ತಿದ್ದರು. ಹಾಗೂ ಹೀಗೂ ಬೆಳಗಾಯಿತು. ಮುರುಗನ್ ಎದ್ದು, ಪ್ರಾತಃ ವಿಧಿಗಳನ್ನು ಮುಗಿಸಿ, ಸ್ವರ್ಣಮ್ಮನವರು ಬಿಸಿ ಬಿಸಿಯಾಗಿ ಮಾಡಿಕೊಟ್ಟ ಮೆಂತ್ಯದ ದೋಸೆಗಳನ್ನು—ಎಷ್ಟು ಎಂಬುದು ಅವನಿಗೂ ತಿಳಿಯದು, ಸ್ವರ್ಣಮ್ಮನವರಿಗೂ ಲೆಕ್ಕವಿಲ್ಲ, ಮುಗಿಸಿದರೂ ಶ್ರೀನಿವಾಸ ಬರಲಿಲ್ಲ. ಆಗ ಅವನ ತಂದೆ ತಾಯಿಗಳಿಗೆ ಯೋಚನೆ ಹುಟ್ಟಿತು. ಫ್ಯಾಕ್ಟರಿಗೆ ಫೋನ್ ಮಾಡಿದರೆ, ಯಾರೂ ಸರಿಯಾಗಿ ಉತ್ತರಿಸಲೇ ಇಲ್ಲ. ಕಾರಣ ಅಂದು ಭಾನುವಾರ. ವಾರದ ರಜ ದಿನ. ಅವರ ಪರದಾಟ ನೋಡಲಾರದೆ ಮುರುಗನ್ ತಾನು ಫ್ಯಾಕ್ಟರಿಗೆ ಹೋಗಿ ನೋಡಿಕೊಂಡು ಬರುವುದಾಗಿ ಹೇಳಿದ.

"ಪಾಪ, ನಿಮಗೇಕೆ ತೊಂದರೆ?" ರೂಪ ಕೇಳಿದಳು.

"ಇದೆಲ್ಲ ಏನು ತೊಂದರೆ? ಫ್ರೆಂಡ್ ಅಂದ್ಮರೆ ಅಷ್ಟೂ ಬೇಡವೆ?" ಅವನು ಹೊರಡಲು ಸಿದ್ಧತೆ ಮಾಡಿಕೊಳ್ಳುತ್ತಿದ್ದಾಗ, ಸ್ವರ್ಣಮ್ಮ ಕೇಳಿದರು. "ಅಂದ್ಹಾಗೆ ನಿನಗೆ ಮದುವೆಯಾಗಿದೆಯೇ ಮುರುಗ?"

"ಇಲ್ಲಮ್ಮ"

"ಯಾಕೆ?"

"ಯಾವುದೂ ಸರಿಹೋಗಿಲ್ಲ?"

"ಒಳ್ಳೆ ಹುಡುಗಿ ಸಿಕ್ಕಿದರೆ ಮಾಡಿಕೊಳ್ಳುತ್ತೀಯಾ?"

"ಭೇಷಕ್, ನಾಳೆಯೇ ಮುಹೂರ್ತ ಇಡಿಸಿಬಿಡಿ"

ರೂಪ ಬೇಗ ಬೇಗ ಓಡಿದಳು, ಲತಾಳ ಮನೆಯವರಿಗೆ ವಿಷಯ ತಿಳಿಸಲು. ಲತಾಳ ತಂದೆತಾಯಿಗಳು, ಮುರುಗನನ್ನು ಹಿಂದಿನ ಸಂಜೆ ನೋಡಿದ್ದರು. ರೂಪಳಿಂದ ಅವನ ಉದ್ಯೋಗ ಸಂಬಳ ಮತ್ತಿತರ ವಿವರಗಳನ್ನು ಪಡೆದ ಅವರಿಗೆ ಸಂತೋಷವೇ ಆಯಿತು. ಲತಾಳಂತೂ, ಅವನ ಆರಡಿಯ ಭವ್ಯ ನಿಲುವಿಗೆ, ಅವನ ಗುಂಗುರು ಕೂದಲಿಗೆ ಆಗಲೇ ಮಾರು ಹೋಗಿದ್ದಳು. ಅವರೆಲ್ಲ ರೂಪಳ ಮನೆಗೆ ಬಂದಾಗ ಮುರುಗನ್ ಹೊರಡಲು ತಯಾರಾಗಿದ್ದ. ಲತಾಳನ್ನೇ ನೋಡಿದ ಮುರುಗ ತನ್ನ ಒಪ್ಪಿಗೆಯನ್ನು ಒಡನೇ ನೀಡಿದ. ತಾಯಿಗೆ ತಿಳಿಸಿ ಮುಂದಿನ ಏರ್ಪಾಟು ಮಾಡಬಹುದೆಂದೂ ತಿಳಿಸಿದ. ಸಂಜೆ ಅವರ ಮನೆಗೆ ಊಟಕ್ಕೆ ಎಲ್ಲರನ್ನೂ ಆಹ್ವಾನಿಸಿ, ಲತಾಳ ಮನೆಯವರು ಹೊರಟುಹೋದರು. ಅವರು ಹೊರಡುವ ಮೊದಲು, ಸಂಜೆ, ಭಾವೀಪತ್ನಿಗಾಗಿ ಒಂದು ಜೊತೆ ಬಳೆ ತರಲು, ಅಳತೆಗಾಗಿ ಲತಾಳ ಚಿನ್ನದ ಬಳೆಯೊಂದನ್ನು ಪಡೆಯಲು ಮುರುಗ ಮರೆಯಲಿಲ್ಲ.

"ನಾನು ಹೋಗಿ ಬರ್ತೇನೆ ಸಾರ್. ಹಾಗೇ ಯಶವಂತಪುರದಲ್ಲಿ ನನ್ನ ಮಾವನ ಮನೆಗೆ ಹೋಗಬೇಕು."

"ರಾತ್ರಿ ಅವರ ಮನೆಯಲ್ಲಿ ಊಟ ಇದೆಯಲ್ಲಪ್ಪ?"

"ಸಂಜೆಯೇ ಬಂದುಬಿಡ್ತೇನೆ ಸಾರ್. ಅಮ್ಮ. ನನಗೆ ಒಂದು ಚಿಕ್ಕ airbag ಬೇಕು. ಮಾವನ ಮಕ್ಕಳಿಗೆ ಸ್ವಲ್ಪ ಬಟ್ಟೆ ಬರೆ, ಸ್ವೀಟ್ಸ್ ತೆಗೆದುಕೊಂಡು ಹೋಗಬೇಕು." ರೂಪಳ ಕೈಯ್ಯಲ್ಲೂ ಒಂದು ಮಿಠಾಯಿ ಡಬ್ಬವನ್ನಿಡಲು ಅವನು ಮರೆಯಲಿಲ್ಲ. ರೂಪ ಒಳಗಿನಿಂದ ತಂದಿತ್ತ air Indiaದ ಬ್ಯಾಗಿನಲ್ಲಿ. ಮುರುಗನ್, ತನ್ನ ಪೆಟ್ಟಿಗೆಯಿಂದ ತೆಗೆದ ಕೆಲವು ಸಾಮಾನುಗಳನ್ನಿಟ್ಟುಕೊಂಡ. ಹೋಗಿ ಬರುತ್ತೇನೆ ಎಂದು ನಾಲ್ಕು ಬಾರಿ ಹೇಳಿ, ಶಂಕರಪ್ಪನವರ ಬಳಿ ಬಂದು ಕೈ ಹೊಸೆಯುತ್ತಾ 'ಸಾರ್ ನೀವು ತಪ್ಪು ತಿಳಿಯಬಾರದು. ನನಗೆ ಸ್ವಲ್ಪ ಹಣ ಕಡಿಮೆ ಬಂದಿದೆ. ಸ್ವಲ್ಪ ಹಣಬೇಕು. ನಾಸಿಕ್‌ನ ಚೆಕ್ ಕೊಡುತ್ತೇನೆ! ವಾಪಸ್ಸು ಹೋಗಲು ಬುಕ್‌ಮಾಡಬೇಕು.

"ಎಷ್ಟುಷ್ಟು? ನನ್ನ ಹತ್ತಿರ ಹೆಚ್ಚೇನೂ ಇಲ್ಲ"

"ಒಂದು ಇನ್ನೂರು ರೂಪಾಯಿ ಕೊಡಿಸಾರ್," ಶಂಕರಪ್ಪ ಅನುಮಾನಿಸುತ್ತಲೇ, ಹಿಂದಿನ ದಿನ ತಾನೆ ತಂದ ಪೆನ್‌ಷನ್ ಹಣದಲ್ಲಿ ಇನ್ನೂರು ರೂಪಾಯಿಗಳನ್ನು ತಂದು ಮುರುಗನ್ ಕೈಯಲ್ಲಿತ್ತ. ಆತ ಜೇಬಿನಿಂದ ಚೆಕ್‌ಪುಸ್ತಕ ತೆಗೆದು, ಚೆಕ್ ಬರೆದುಕೊಟ್ಟ.

'ನಾನು ಬರ್ತೀನಿ ಸಾರ್, ಅಮ್ಮಾ ಹೋಗಿ ಬರ್ತೇನೆ! ಎಂದು ಹೇಳಿ ರೂಪಳಿಗೆ ಬೈ ಹೇಳಿ ಮುರುಗನ್ ಹೊರಟ, ದೊಡ್ಡ ಬೀಗ ತಗಲಿಸಿದ ಮುರುಗನ ಸೂಟ್‌ಕೇಸ್ ಶ್ರೀನಿವಾಸನ ರೂಮಿನಲ್ಲಿತ್ತು,

ಮಧ್ಯಾಹ್ನ ಗಂಟೆ ಎರಡಾಯಿತು, ಮೂರಾಯಿತು. ಶ್ರೀನಿವಾಸನೂ ಬರಲಿಲ್ಲ. ಮುರುಗನೂ ಪತ್ತೆ ಇಲ್ಲ. ಕಾದು ಕಾದು ಸುಸ್ತಾದ ಶಂಕರಪ್ಪ ದಂಪತಿಗಳೂ, ರೂಪಳೂ ಊಟ ಕೂಡ ಮಾಡದೆ ಕುಳಿತಿದ್ದರು. ಕೊನೆಗೆ ನಾಲ್ಕು ಗಂಟೆಯ ಸುಮಾರಿಗೆ ಸೋತು ಸುಣ್ಣವಾಗಿದ್ದ ಶ್ರೀನಿವಾಸ, ಕಾಲುಗಳನ್ನು ಎಳೆದು ಹಾಕುತ್ತಾ, ಮನೆಯೊಳಕ್ಕೆ ಬಂದ.

"ಸ್ಕೂಟರೆಲ್ಲೋ ಮಗು?" ಸ್ವರ್ಣಮ್ಮ ಕಳಕಳಿಯಿಂದ ಕೇಳಿದರು.
"ಯಾಕೆ ಶೀನು ಇಷ್ಟೊತ್ತು? ಮೆಷಿನ್ ಸರಿಹೋಯಿತೇ?"

"ಯಾವ ಮೆಷೀನಪ್ಪ?"

ನೀನು ನಿನ್ನೆಮಧ್ಯಾಹ್ನದಿಂದ, ಯಾರಿಂದಲೂ ಸರಿ ಮಾಡಲಾಗದ ಮೆಷಿನನ್ನು ರಿಪೆ ರಿ ಮಾಡ್ತಿರಲಿಲ್ಲವೇ?"

"ಏನಪ್ಪ ನೀವು ಹೇಳ್ತಿರೋದು? ನಾನಿರೋದು ಕಂಪ್ಯೂಟರ್ ಸೆಕ್ಷನ್‌ನಲ್ಲಿ ನನಗೇನು ಗೊತ್ತು. ಮೆಷಿನ್ ರಿಪೇರಿ?

"ಅಂದ್ರೆ ನೀನು ನಿನ್ನೆಯೆಲ್ಲಾ ಫ್ಯಾಕ್ಟರಿಯಲ್ಲಿ ಇರಲಿಲ್ಲವೇ?"

"ಯಾರು ಹೇಳಿದ್ದು ನಿಮಗೆ ನಾನು ಫ್ಯಾಕ್ಟರಿಯಲ್ಲಿದ್ದೇಂತ?"

"ಮುರುಗನ್"

'ಮುರುಗನ್? ಯಾರವನು?"

"ನಿನ್ನ ಸ್ನೇಹಿತನಂತೆ"

"ಆ ಹೆಸರಿನ ಸ್ನೇಹಿತರೇ ನನಗಿಲ್ಲವಲ್ಲ"

"ಅಯ್ಯಯ್ಯೋ, ಅವನು ನಿನ್ನ ಸ್ನೇಹಿತನಂತೆ. ನಿನ್ನೆ ರಾತ್ರಿ ಇಲ್ಲೇ ಇದ್ದ. ಬೆಳಿಗ್ಗೆ ನಿನ್ನನ್ನು ನೋಡಿ ಬರ್‍ತೀನೀಂತ ಹೇಳಿ ಹೋದ. ಸಂಜೆ ಬರ್‍ತಾನಂತೆ"

"ಅಂ? ರಾತ್ರಿ ಎಲ್ಲ ಇಲ್ಲೇ ಇದ್ದನೇ?"

ಊನಪ್ಪ. ಅಲ್ಲದೆ ಅವನು ನಮ್ಮ ಲತಾನ ಮದುವೆಯಾಗ್ತೀನೀಂತ ಹೇಳಿದಾನೆ" ಸ್ವರ್ಣಮ್ಮ ಹೇಳಿದರು. ಶ್ರೀನಿವಾಸ ತನ್ನ ತಲೆಯ ಮೇಲೆ ಕೈ ಹೊತ್ತು, ಸೋಫಾದಲ್ಲಿ ಕುಸಿದ,

"ಯಾಕೋ? ಏನಾಯ್ತು? ಮೈಸರಿಯಿಲ್ಲವೇ?"

"ಏನೋ ಮೋಸವಾಗಿದೆಯಮ್ಮ...ನಮ್ಮೆಲ್ಲರನ್ನೂ ಯಾರೋ ಚೆನ್ನಾಗಿ ಫೂಲ್ ಮಾಡಿದಾರೆ" ಅವನು ತನ್ನ ರೂಮಿನೊಳಕ್ಕೆ ಹೋದ. ಈ ಪೆಟ್ಟಿಗೆ ಯಾರದು?"

"ಅವನದ್ದೇ"

"ರೂಪ, ನಮ್ಮ ಟ್ರಾನ್ಸಿಸ್ಟರ್ ರೇಡಿಯೋ ಎಲ್ಲಿ? ಮೇಜಿನ ಮೇಲಿದ್ದ ಗಡಿಯಾರ? ನನ್ನ ಪಾರ್ಕರ್ ಪೆನ್ನು?"

ರೂಪ, ಸ್ವರ್ಣಮ್ಮ, ಶಂಕರಪ್ಪ ಗಾಬರಿಯಿಂದ ರೂಮಿಗೆ ಬಂದು ಹುಡುಕ ತೊಡಗಿದರು. ರೂಪ ಗಾಡ್ರೆಜ್ ಬೀರುವಿನ ಬಾಗಿಲು ತೆರೆದಿರುವುದನ್ನು ಕಂಡು ಹೌಹಾರಿದಳು.

"ಅಯ್ಯೋ, ನನ್ನ ಸರ, ಬಳೆ ಒಂದೂ ಇಲ್ಲ" ಶ್ರೀನಿವಾಸ ಬಂದು ಬಗ್ಗಿ ನೋಡಿದ. 'ಸಂಬಳದ ಕವರ್ ಎಲ್ಲಿ?' ಹಿಂದಿನ ದಿನ ತಾನೆ ಬಂದಿದ್ದ: ಸಾವಿರದ ಐನೂರ ಅರವತ್ತು ರೂಪಾಯಿಗಳ ಸಂಬಳದ ಕವರ್ ಮಂಗಮಾಯವಾಗಿತು.

'ನನ್ಹತ್ರ . ಇನ್ನೂರು ರೂಪಾಯಿ ಬೇರೆ ತೆಗೆದುಕೊಂಡ, ಚೆಕ್ ಕೊಟ್ಟು'

'ಕೊಟ್ಟ ಚೆಕ್ಕರ‍್ರು' ಶ್ರೀನಿವಾಸ ರೇಗಿದ, ಆ ವೇಳೆಗೆ ಎದುರು ಮನೆಯ ಮುದ್ದುರಾಯಪ್ಪ ಶಂಕರಪ್ಪನವರನ್ನು ಅರಿಸಿ ಬಂದರು. 'ಸ್ವಾಮಿ ಎಲ್ಲಿ ನಿಮ್ಮ ಗೆಸ್ಟು?'

'ಯಾಕೆ ಸಾರ್'

"ಫೋನಿನ ಹತ್ತಿರ ಇಟ್ಟಿದ್ದ ನನ್ನ ರಿಸ್ಟ್ ವಾಚು ಪತ್ತೆ ಇಲ್ಲ ಸಾರ್. ಮನೆಗೆ ಬೇರೆ ಯಾರೂ ಬಂದಿಲ್ಲ."

ಸ್ವರ್ಣಮ್ಮ ಮೆಲ್ಲನೆ ದನಿಗೂಡಿಸಿದರು ನನ್ಹತ್ರವೂ ನೂರು ರೂಪಾಯಿ ತೆಗೆದುಕೊಂಡ."

"ಹಾಗಾದ್ರೆ, ಎಲ್ಲರಿಗೂ ಚೆನ್ನಾಗಿ ಧೋಕಾ ಕೊಟ್ಟಿದ್ದಾನೆ. ಸದ್ಯ, ಪುಣ್ಯ, ನೀನಿರಲಿಲ್ಲವಲ್ಲ."

ಶ್ರೀನಿವಾಸ ಜೋರಾಗಿ ನಗತೊಡಗಿದ. "ನಿಮ್ಮೆಲ್ಲರಿಗಿಂತ ಹೆಚ್ಚಾಗಿ ಫೂಲ್ ಆದವನು ನಾನೇ?

"ಅಂ? ಏನಂದೆ?"

"ನಿನ್ನೆ ಫಾಕ್ಟರಿ ಮುಗಿಯುವ ವೇಳೆಗೆ ಒಬ್ಬ ಗೇಟಿನ ಬಳಿ ಕಾಯ್ತಿದ್ದ. ಬಂದು ನನ್ನನ್ನು ಮಾತಾಡಿಸಿ, ರೂಪಳ ಅಣ್ಣ ಶೇಖರನಿಗೆ ಸ್ಕೂಟರ್ ಅಪಘಾತ ಆಗಿದೆ ಅಂತ ಹೇಳಿದ. ತಾನು ಅವನ ಫ್ರೆಂಡು ಷಣ್ಮುಗಂ ಅಂದ."

"ರೂಪಾಳ ಅಣ್ಣ ಶೇಖರನಿಗೆ, ಆಫೀಸಿನಿಂದ ಬರುವಾಗ ಸ್ಕೂಟರ್ ಆಕ್ಸಿಡೆಂಟ್ ಆಗಿದೆ. ಬಸ್ಸು ಡಿಕ್ಕಿ ಹೊಡೆದು, ತುಂಬ ಏಟ್ ಬಿದ್ದಿದೆ, ಮೆಂಟಲ್ ಹಾಸ್ಪೆಟಲ್‌ನಲ್ಲಿ ಎಮರ್ಜೆನ್ಸಿ ವಾರ್ಡಿನಲ್ಲಿದಾನೆ" ರೂಪ ಜೋರಾಗಿ ಅಳತೊಡಗಿದಳು. ಶ್ರೀನಿವಾಸ ರೇಗಿದ.

"ಸಾಕ್ಷಿಲ್ಸು ರೂಪ. ಪೂರ್ತಿಕೇಳು. ಅವನು ಆ ಷಣ್ಮುಗನೋ ಮುರುಗನೋ, ತಾನು ಶೇಖರನ ಫ್ರೇಂಡು, ಅವನ ರೂಮಲ್ಲೇ ಇರೋದು ಅಂತ ಹೇಳಿ, ಬೇಗ ಬನ್ನಿ ಆಸ್ಪತ್ರೆಗೆ ಹೋಗೋಣ. ಮನೆಗೆ ಹೋಗಿ ಬರೋದ್ರಲ್ಲಿ ಏನಾದ್ರೂ ಆಗಬಹುದು ಅಂದ. ಇಷ್ಟೊತ್ತೂ ಅಲ್ಲೇ ಇದ್ದೆ, ಈಗ ನಿಮಗೆ ಸುದ್ದಿ ಹೇಳೊಕ್ಕೆ ಬಂದೆ ಅಂದ. ಸರಿ, ಸ್ಕೂಟರಲ್ಲಿ ಅವನ್ನೂ ಕೂರಿಸ್ಕೊಂಡು ಆಸ್ಪತ್ರೆಗೆ ಹೋದೆ. ಕ್ಯಾಷುಯಲ್ಟಿ ವಾರ್ಡಿಗೆ ಯಾರನ್ನೂ ಬಿಡೊಲ್ಲ. ಹೊರಗೇ ಕಾಯಬೇಕು ಅಂದ. ಹೊರಗೇ ಬೆಂಚಿನ ಮೇಲೆ ಕೂತೆವು. ಅರ್ಧ ಗಂಟೆ ಆದ ಮೇಲೆ ಅವನು ಹೇಳಿದ ನಾನು ನಿನ್ನ ಮನೆಗೆ ಹೋಗಿ ಶೇಖರನ ತಂಗಿಗೆ ವಿಷಯ ತಿಳಿಸಿ ಬರ್ತೇನೆ. ಬರುವಾಗ ಊಟಾನೂ ತರ್ತೇನೆ ನಿನಗೆ ಅಂದ, ಸ್ಕೂಟರ್ ತೆಗೆದುಕೊಂಡು ಹೋಗು ಎಂದರೆ ಬೇಡ ಎಂದ. ಮನೆ ಅಡ್ರಸ್ ಕೇಳಿದ, ನಾನೇ ಬರೆದುಕೊಟ್ಟೆ.

'ಅದನ್ನು ನೋಡಿಯೇ. ನಾವು ನಂಬಿದ್ದು' ಸ್ವರ್ಣಮ್ಮ ಹೇಳಿದರು. "ಎಲ್ಲರೂ ನಂಬಿ ಮೋಸಹೋದೆವು" ನಾನು ಆಸ್ಪತ್ರೆಯಲ್ಲೇ ಕೂತಿದ್ದೆ, ಈ ಮನುಷ್ಯ ಎಷ್ಟು ಹೊತ್ತಾದರೂ ಬರಲೇ ಇಲ್ಲ. ಶೇಖರನದ್ದು ನಾಲ್ಕನೇ ಬೆಡ್ ಅಂತ ಹೇಳಿದ್ದ. ನಾನು ನಾಲ್ಕೈದು ಸಲ ಡ್ಯೂಟಿ ಡಾಕ್ಟರುಗಳನ್ನು ವಿಚಾರಿಸಿದೆ. ತುಂಬ ಸೀರಿಯಸ್ಸು ಯಾವಗಳಿಗೇಲಿ ಹೇಗಂತ ಹೇಳೋಕಾ ಗೊಲ್ಲ. ಮನೆಯವರು ಯಾರಾದ್ರೂ ಇರ್ಬೇಕು ಅಂದ್ರು. ಔಷಧಿ, ಅದು. ಇದು ಇಂಜಕ್ಷನ್ನೂಂತ ಹತ್ತತ್ರ ನೂರು ರೂಪಾಯಿ ಬೇರೆ ತೆತ್ತೆ. ಒಳಗೆ ಮಾತ್ರ ಬಿಡಲಿಲ್ಲ. ರಾತ್ರಿಯೆಲ್ಲ ಊಟವೂ ಇಲ್ಲದೆ.ಹೊರಗೆ ಬೆಂಚಿನ ಮೇಲೆ ಕೂತಿದ್ದೆ. ಬೆಳಿಗ್ಗೆ ಹನ್ನೊಂದು ಗಂಟೆಯ ಹೊತ್ತಿಗೆ ಷಣ್ಮುಗ ಬಂದ. ಕೈಯಲ್ಲಿ ನಮ್ಮ ಮನೆ airbag ಇತ್ತು. ಕಾಫಿ ಇಡ್ಲಿ ಬೇರೆ ತಂದಿದ್ದ. ಇಬ್ರೂ ಅಲ್ಲೇ ಕಾಯ್ತಾ ಕುಳಿತೆವು. ಹನ್ನೆರಡು ಗಂಟೆ ಸುಮಾರಿಗೆ 4ನೇ ಬೆಡ್ಡಿನ

ಪೇಷಂಟು ಕೊನೆ ಉಸಿರೆಳೆದ ಅಂತ ತಿಳೀತು. ಆಗ ಷಣ್ಮುಗಂ, 'ನಾನು ಹೋಗಿ, ನಿನ್ನ ಅತ್ತೆ, ಮಾವನವರಿಗೆ ಟೆಲಿಗ್ರಾಂ ಕಳಿಸಿ ಮುಂದಿನ ಏರ್ಪಾಟು ಮಾಡ್ತೀನಿ. ನೀನು ದೇಹ ತೆಗೆದುಕೊಂಡು ಮನೆಗೆ ಹೋಗು ಅಂದ. ಸ್ಕೂಟರ್ ಅವನು ತೆಗೆದುಕೊಂಡು ಹೋದ. ಆಸ್ಪತ್ರೆಯ ಪ್ರಹಾಣವೆಲ್ಲ ಮುಗಿದಮೇಲೆ ನಾನು ಹೋಗಿ ನೋಡಿದರೆ, ಆ ಪೇಷೆಂಟು ಶೇಖರ ಅಲ್ಲವೇ ಅಲ್ಲ; ಆಗಲೇ ಅನ್ಕೊಂಡೆ ಏನೋ ಎಡವಟ್ಟಾಗಿದೆ ಅಂತ, ಡಾಕ್ಟರಿಗೆ ಹೇಳಿ ಅಲ್ಲಿಂದ ಓಲಕ್ಷ್ಮಣಾಂತ ಬಂದೆ. ಬಸ್ಸಿಗೂ ಕೈಲಿ ಕಾಸಿರಲಿಲ್ಲ. ಇದ್ದ ಬದ್ದದ್ದೆಲ್ಲಾ-ಆಸ್ಪತ್ರೆಯವರಿಗೂ-ಷಣ್ಮುಗನಿಗೂ ಸಮರ್ಪಸಿದೆ.

"ಹೇಗಿದ್ದ ಅವನು?"

"ಎತ್ತರದ ಆಳು ಗುಂಗುರುಕೂದಲು ಗ್ರೇ ಟೆರೀನ್ ಪ್ಯಾಂಟು ಬಿಳಿ ಷರಟು. ನೀಲಿ ಕೋಟು.

"ಅವನೇ ಅವನೇ ಕೈಯ್ಯಲ್ಲಿ ಒಂದು ಸೂಟ್‌ಕೇಸು" ಆಗ ಎಲ್ಲರ ಗಮನವೂ ಸೂಟ್ ಕೇಸಿನತ್ತ ಹರಿಯಿತು. ಶ್ರೀನಿವಾಸ ಒಂದು ಸ್ಕ್ರೂಡ್ರೈವರ್ ತಂದು, ಸೂಟ್‌ಕೇಸಿನ ಬೀಗ ಒಡೆದು, ಪೆಟ್ಟಿಗೆಯನ್ನು ತೆರೆದ. ಪೆಟ್ಟಿಗೆಯಲ್ಲಿ ಏನಿದೆ ಎಂದು ನೋಡಲು ಎಲ್ಲರೂ ಆತುರದಿಂದ ಬಗ್ಗಿದರು. ಆದರೆ ಪೆಟ್ಟಿಗೆಯಲ್ಲಿ ಒಂದೇ ಒಂದು ಬಿಳಿ ಕಾಗದದ ಹಾಳೆ ಇತ್ತು, ಅದರಲ್ಲಿ ಬರೆದಿತ್ತು. "ನಿಮ್ಮೆಲ್ಲರ ಆತಿಥ್ಯಕ್ಕಾಗಿ ಬಹಳ ವಂದನೆಗಳು —ಮುರುಗನ್ ಅಲಿಯಾಸ್ ಷಣ್ಮುಗಂ"

———

# ಮನವೆಂಬ ಮರ್ಕಟ !

—ಗೀತಾ ದೇಸಾಯಿ

"ಟಿಕ್."

ಸ್ವಿಚ್ಚು ಒತ್ತಿದೊಡನೆಯೇ ಸಂಜೆಗತ್ತಲು ಆವರಿಸುತ್ತಿದ್ದ ವರಾಂಡವ ತುಂಬೆಲ್ಲ ಬೆಳಕಾಯಿತು. ಅರೆಬಿರಿದ ಮೊಗ್ಗುಗಳಿಂದ ತುಂಬಿದ ನಮ್ಮ ಕೈತೋಟದಲ್ಲಿಯ ಮಲ್ಲಿಗೆ, ಗುಲಾಬಿ ಗಿಡಗಳು ತಂಗಾಳಿಗೆ ಮೆಲ್ಲಗೆ ತೂಗುತ್ತಿದ್ದವು. ನಾನು ಗುಲಾಬಿ ಗಿಡದ ಹತ್ತಿರ ನಿಂತು ಒಂದು ಸಲ ಬೀದಿಯುದ್ದಕ್ಕೂ ದೃಷ್ಟಿ ಹಾಯಿಸಿದೆ. ವಿವಿಧ ಬಗೆಯ ವಾಹನಗಳು ಹಾಗು ಜನರಿಂದ ರಸ್ತೆ ತುಂಬಿ ಹೋಗಿತ್ತು. ಆದರೆ ಎಲ್ಲಿಯೂ ಅಂಜಲಿಯ ಸುಳಿವು ಮಾತ್ರ ಕಾಣಲಿಲ್ಲ. ನಿತ್ಯವೂ ಕಾಲೇಜಿನಿಂದ ಐದು-ಐದೂವರೆಯೊಳಗಾಗಿಯೇ ಬರುತ್ತಿದ್ದ ಅಂಜೂ ಇಂದು ಆರೂವರೆಯಾಗಿ ಹೋಗಿದ್ದರೂ ಇನ್ನೂ ಬಂದಿರಲಿಲ್ಲ. ಕಾಲೇಜಿನಲ್ಲಿ ಏನಾದರೂ ಕಾರ್ಯಕ್ರಮ ಇದ್ದರೆ ಮೊದಲೇ ಹೇಳಿಬಿಡುತ್ತಿದ್ದಳು, ಇಂದು ಹಾಗೇನೂ ಹೇಳಿರಲಿಲ್ಲ.

ಅಥವಾ ಟೇಬಲ್ ಟೆನಿಸ್ ಆಡುತ್ತ ನಿಂತಿರಬಹುದೋ ಏನೋ....

ದಿಲೀಪನನ್ನಾದರೂ ಸೈಕಲ್ ಮೇಲೆ ಕಾಲೇಜಿನವರೆಗೆ ಕಳಿಸೋಣವೆಂದರೆ ಅವನೂ ಇನ್ನೂ ಬಂದಿರಲಿಲ್ಲ. ಅವನೇಕೆ ಬಂದಾನು! ಶಾಲೆ ಬಿಟ್ಟೊಡನೆ ಮನೆಗೆ ಬಂದು, ಪುಸ್ತಕಗಳನ್ನು ಕಪಾಟಿನಲ್ಲೆಸೆದು, ಗಡಿಬಿಡಿಯಲ್ಲಿ ತಿಂಡಿ ತಿಂದು ಕ್ರಿಕೆಟ್ ಬ್ಯಾಟು ಹಿಡಿದು 'ಮರಿ ವಿಶ್ವನಾಥ'ನ ಸ್ಟೈಲಿನಲ್ಲಿ ಹೊರಟನೆಂದರೆ ಬರುವದು ರಾತ್ರಿ ಊಟದ ಹೊತ್ತಿಗೇ! ಮಕ್ಕಳಿಗೆ ಕ್ರೀಡೆಗಳ ಹವ್ಯಾಸ ಅಂಟಿಸಿದ 'ಇವರ' ಬಗ್ಗೆ ಕ್ಷಣಕಾಲ ಕೋಪ ಬಂದಿತು.

"ಆಡಿಕೊಳ್ಳಲಿ ಬಿಡು ವಿಜೀ. ಇಂದಿನ ಹುಡುಗರಿಗೆ ಸ್ಪೋರ್ಟ್ಸ್‌ನಲ್ಲೇ ಆಸಕ್ತಿ ಇದೆ. ಅವರ ಅಭಿರುಚಿಗೆ ನಾವೇಕೆ ಅಡ್ಡಿಬರಬೇಕು?" ಎಂಬ ಅಭಿಪ್ರಾಯ ನನ್ನವರದು.

ಮಕ್ಕಳ ಅಭಿರುಚಿಗೆ ಆತಂಕವೊಡ್ಡುವ ಇಚ್ಛೆ ನನಗೂ ಇಲ್ಲ. ಪ್ರತಿನಿತ್ಯವೂ ಪೇಪರು ಬಂದೊಡನೆ 'ಕ್ರೀಡಾ-ರಂಗ'ದ ಪುಟಕ್ಕಾಗಿ ಅಕ್ಕ-ತಮ್ಮ ಹೊಡೆದಾಡುವುದನ್ನು ನಾನರಿಯೆನೇ? ಆದರೂ ಹೆಣ್ಣಾದ ಅಂಜಲಿ ಅಡಿಗೆ ಕೆಲಸವನ್ನಲ್ಲದಿದ್ದರೂ ಸ್ವಲ್ಪ ಸಂಗೀತ, ಹೊಲಿಗೆಯನ್ನಾದರೂ ಕಲಿಯಬೇಕೆಂದು ನನ್ನ ಆಸೆ. ಅವಕ್ಕವಳು ಏನನ್ನುತ್ತಾಳೆ ಗೊತ್ತೇ? "ಹಾಡು-ಹಸೆ, ಹೊಲಿಗೆ, ಹೆಣಿಕೆ-ಎಲ್ಲಾ ನಿನಗೇ ಇರಲಮ್ಮ! ನೀನು ಬೇಕಾದರೆ ತಂಬೂರಿ ಶ್ರುತಿ ಮಾಡಿಕೊಂಡು ನಿನ್ನ ಮೆಚ್ಚಿನ ಮಾಲಕಂಸ ರಾಗ ಹಾಡುತ್ತ ಕೂತಿರು. ನಾನು ತಲೆದೂಗುತ್ತ ನಿನ್ನೆದುರು ಕುಳಿತುಕೊಳ್ಳುತ್ತೇನೆ... ಅಡಿಗೆಯನ್ನು ಹೇಗಾದರೂ ಓಡಾಡಿಕೊಂಡು ಮಾಡಬಹುದು. ಆದರೆ ಒಂದೇ ಸ್ಥಳದಲ್ಲಿ ಕುಳಿತು ಹೊಲಿಯುವುದೆಂದರೆ ಅಸಾಧ್ಯ!" ಎಂದು.

ದಿನಾಲು ಬೆಳಿಗ್ಗೆ ಟೇಬಲ್ ಟೆನ್ನಿಸ ಪ್ರ್ಯಾಕ್ಟೀಸಿಗೆ ಹೋಗುವದು ಆಮೇಲೆ ಬಂದು ಓದು, ಊಟ, ಕಾಲೇಜು ಇವುಗಳ ಮಧ್ಯೆ ಬೇರೆ ವಿಷಯಗಳಿಗಾಗಿ ಅವಳಿಗೆ ಸಮಯವಾದರೂ ಎಲ್ಲಿದೆಯೆಂದು ನಾನೂ ಸುಮ್ಮನಿದ್ದೇನೆ.

ನಮ್ಮ ಅತ್ತೆ ಮಾತ್ರ ಯಾವಾಗಲಾದರೂ ಬಂದಾಗ, "ಅದೇನೇ ವಿಜಯಾ, ಅಂಜಲಿಯನ್ನ ಗಂಡುಬೀರಿಯಾಗಿ ಮಾಡಿದ್ದೀಯಲ್ಲ! ಈ ವಯಸ್ಸಿಗೆ ನಾನಾಗಲೇ ಅವಳ ಅಪ್ಪನಿಗೆ ತಾಯಿಯಾಗಿದ್ದೆ. ನಿನ್ನ ಮಗಳು ಮಾತ್ರ ಹದಿನೇಳು ತುಂಬಿದ್ದರೂ ಪ್ಯಾಂಟು ಹಾಕಿಕೊಂಡು ಓಡಾಡುತ್ತಾಳೆ. ಲಕ್ಷಣವಾಗಿ ಸೀರೆ ಉಟ್ಟುಕೊಳ್ಳಬಾರದೇ ? ನೀನೇನೂ ಹೇಳುವುದೇ ಇಲ್ಲವೆಂದು ಕಾಣುತ್ತದೆ." ಎಂದು ಆಕ್ಷೇಪಿಸುತ್ತಾರೆ. ನಾನು ಅನೇಕ ಬಾರಿ ಅಂಜಲಿಗೆ ಸೀರೆ ಉಟ್ಟುಕೊಳ್ಳಲು ಹೇಳಿದ್ದೇನೆ.

ಅದಕ್ಕವಳು, "ಸೀರೆಯಂತೆ ಸೀರೆ! ನಮ್ಮ ಕ್ಲಾಸಿನ ಹುಡುಗಿಯರೆಲ್ಲ ಸಲ್ವಾರ–ಕಮೀಜು, ಜೀನ್ಸ್‌ಪ್ಯಾಂಟು, ಮಿಡಿ–ಹೀಗೆ ಡ್ರೆಸ್ಸನ್ನೇ ಹಾಕಿಕೊಳ್ಳೋದು. ಆಟ ಆಡೋದಕ್ಕೂ ಅದು ಅನುಕೂಲ. ನೀನು ಒಂದು ಹದಿನೆಂಟನೆ ಶತಮಾನದವಳ ಹಾಗೆ ಸೀರೆ ಉಟ್ಟುಕೊಳ್ಳಲು ಹೇಳುತ್ತೀಯಲ್ಲ!" ಎಂದು ನನ್ನನ್ನು ತಮಾಷೆ ಮಾಡಿ ನಗುತ್ತಾಳೆ......

"ಬಾಯಿಯವರೆ...ಹಾಲು..."

ಹಾಲಿನಾಕೆ ಕೂಗಿದಾಗ ನಾನು ನನ್ನ ವಿಚಾರತಂದ್ರಿಯಿಂದೆಚ್ಚತ್ತೆ... "ಅಂದರೆ ಆಗಲೇ ಏಳು ಗಂಟೆಯಾಯಿತೇ? ಅಂಜು ಎಲ್ಲಿ ಹೋದಳೋ..." ಎಂದುಕೊಳ್ಳುತ್ತಲೇ ಹಾಲು ಹಾಕಿಸಿಕೊಂಡು, ಪಾತ್ರೆ ಒಳಗಿಟ್ಟು ಮತ್ತೆ ವರಾಂಡದಲ್ಲೇ ಕುರ್ಚಿಯೆಳೆದುಕೊಂಡು ಅವಳ ದಾರಿ ಕಾಯುತ್ತ ಕುಳಿತೆ.

"ಅಂಜು ಸ್ನೇಹಿತೆಯ ಮನೆಗೇನಾದರೂ ಹೋಗಿರಬಹುದೇ? ಹಾಗಿದ್ದರೂ ಇಷ್ಟು ಹೊತ್ತಿಗೆ ಬರಬೇಕಾಗಿತ್ತಲ್ಲ...ಅಥವಾ ಆಕ್ಸಿಡೆಂಟ ಏನಾದ್ರೂ...ಛೆ, ಛೆ, ಅವಳೇನು ಎಳೆಯ ಮಗುವೇ! ಇತ್ತೀಚೆಗೆ ವಯಸ್ಸಿಗೆ ಬಂದ ಹುಡುಗಿಯರನ್ನು ಹಾರಿಸಿಕೊಂಡು ಹೋಗುವ ಒಂದು ಜಾಲವೇ ನಗರದಲ್ಲಿ ಹರಡಿದೆಯೆಂದು ಹಾಲಿನಾಕೆ–ಅನ್ನುತ್ತಿದ್ದಳು. ಆ ವಿಚಾರ ನೆನೆದು ಭಯದಿಂದ ಕಂಪಿಸಿದೆ, ದೇವರೇ, 'ಅಂಜಲಿ ಬೇಗ ಮನೆಗೆ ಬಂದುಬಿಟ್ಟರೆ ಸಾಕಪ್ಪಾ!'—ಎಂದು ದೈನ್ಯದಿಂದ ಮನದಲ್ಲೇ ಪ್ರಾರ್ಥಿಸಿದೆ, ಕಣ್ಣೆದುರು ತುಂಬಿದ ಮೈಕಟ್ಟಿನ ಅಂಜಲಿಯ ಮುದ್ದು ಮೊಗವೇ ಬರುತ್ತಿತ್ತು, ಅಪರೂಪಕ್ಕೆ ಸೀರೆಯುಟ್ಟುಕೊಂಡು ಅಲಂಕರಿಸಿಕೊಂಡಾಗ ಅವಳ ಆಕರ್ಷಕ ರೂಪವನ್ನು ನೋಡಿ 'ನಮ್ಮ ಅಂಜೂಗೆ ಗಂಡು ಸಿಗುವದೇನೂ ಕಷ್ಟವಲ್ಲ. ಅವಳ ಕೈ ಹಿಡಿಯಲು ನಾ ಮುಂದು, ತಾ ಮುಂದು ಎಂದಾರು'—ಎಂದು ನನ್ನಷ್ಟಕ್ಕೇ ಹೆಮ್ಮೆಪಟ್ಟುಕೊಳ್ಳುತ್ತಿದ್ದೆ...

ಆದರೆ ಅವಳೀಗ ಎಲ್ಲಿರುವಳೋ? ಇನ್ನೂ ಏಕೆ ಮನೆಗೆ ಬಂದಿಲ್ಲವೊ?...

ಮನೆಯಲ್ಲಿ ನಾನೊಬ್ಬಳೇ ಇದ್ದುದರಿಂದ ಏನೇನೋ ಯೋಚನೆ ಗಳಿಂದ ಕೆಲಸವೇ ತೋಚದಂತಾಯಿತು. ಕುರ್ಚಿಯಿಂದೆದ್ದು ಮತ್ತೊಮ್ಮೆ ರಸ್ತೆಯತ್ತ ದೃಷ್ಟಿಯೋಡಿಸಿದೆ, ಬೀದಿ ದೀಪದ ಮಂದವಾದ ಬೆಳಕಿನಲ್ಲಿ ತರುಣನೊಬ್ಬ ಎಳೆಯುವತಿಯೊಡನೆ ಏನೋ ಮಾತನಾಡಿ ನಗುತ್ತಿರುವದು ಕಂಡುಬಂದಿತು. ಹುಡುಗಿ ನಾಚಿ ತನ್ನ ಸೆರಗಿನೊಡನೆ ಆಟವಾಡುತ್ತ ಅವನತ್ತಮುಖಿಯಾಗಿ ನಿಂತಿದ್ದಳು. ಆ ದೃಶ್ಯ ಕಂಡೊಡನೆ ಥಟ್ಟನೆ ತಲೆಯಲ್ಲಿ ಮಿಂಚು ಹೊಳೆದಂತಾಯಿತು. ಅಂಜಲಿಯೂ ಹೀಗೆಯೇ ಯಾರದಾದರೂ ಜೊತೆ...

'ಹೌದು, ಸಂದೇಹವೇ ಇಲ್ಲ, ಅಂಜು ಯಾರದೋ ಪ್ರೇಮ ಪಾಶದಲ್ಲಿ ಸಿಲುಕಿದ್ದಾಳೆ. ಅವನೊಡನೆ ಲಲ್ಲೆಯಾಡುತ್ತ ಪಾರ್ಕಿನಲ್ಲಿ ನಿಂತಿರುವದರಿಂದಲೇ ಮನೆಗೆ ಬರುವದಕ್ಕೆ ತಡವಾಗಿದೆ-ಎಂಬ ನಿರ್ಧಾರಕ್ಕೆ ನಾನು ಬಂದೆ. ಅವಳ ಇತ್ತೀಚಿನ ವರ್ತನೆಯನ್ನು ಪರಾಮರ್ಶಿಸಿದಾಗ ನನ್ನ ತೀರ್ಮಾನ ಸರಿ ಎಂದು ನನಗೆ ಭಾಸವಾಗತೊಡಗಿತು. ಮೊದಲು ತನ್ನ ವೇಷ-ಭೂಷಣಗಳ ಬಗ್ಗೆ ಆಲಕ್ಷ್ಯದಿಂದ ವರ್ತಿಸುತ್ತಿದ್ದ ಅವಳೀಗ ತನ್ನ ಅಲಂಕಾರದ ಕಡೆಗೆ ಸಾಕಷ್ಟು ಗಮನವೀಯುತ್ತಿದ್ದಾಳೆ. ಅದು ವಯೋಧರ್ಮಕ್ಕನುಗುಣವಾದ ಪರಿವರ್ತನೆಯೆಂದು ನನ್ನ ಭಾವನೆ ಯಾಗಿತ್ತು. ಈಗ ಅವಳಲ್ಲಿಯ ಬದಲಾವಣೆಯ ಕಾರಣ ಅರ್ಥವಾಗು ತ್ತಿದೆ. ಅಂದ ಹಾಗೆ ಮೊನ್ನೆಯಷ್ಟೇ ಅವಳು ನನಗೊಂದು ವಿಲಕ್ಷಣ ಪ್ರಶ್ನೆ ಕೇಳಿದ್ದಳು—'ಒಂದೇ ಕಾಲಕ್ಕೆ ಇಬ್ಬರನ್ನು ಪ್ರೀತಿಸಬಹುದೇನಮ್ಮ?- ಎಂದು.

ಆ ಪ್ರಶ್ನೆ ಕೇಳಿ ನಾನು ಬೆಚ್ಚಿ ಬಿದ್ದಿದ್ದೆ. ಆದರೂ ತೋರಗೊಡದೆ, "ಅದಕ್ಕೇನಂತೆ, ನೀನು ನನ್ನನ್ನೂ ನಿಮ್ಮ ತಂದೆಯನ್ನೂ ಪ್ರೀತಿಸೋದಿಲ್ವೆ?" ಎಂದು ಹಾರಿಕೆಯ ಉತ್ತರ ನೀಡಿದ್ದೇ-ಅವಳು 'ಪ್ರೀತಿ' ಎಂಬ ಶಬ್ದವನ್ನು 'ಪ್ರಣಯ' ಎಂಬರ್ಥದಲ್ಲಿ ಉಪಯೋಗಿಸಿರಬಹುದೆಂದು ಗೊತ್ತಿದ್ದರೂ ಸಹ.

"ಅಂಥ ಪ್ರೀತಿ ಅಲ್ಲಮ್ಮ–'ಲವ್' ಅಂತಾರಲ್ಲ ಅದು. ನಮ್ಮ ಕ್ಲಾಸಿನ ನಿರ್ಮಲಾ ಒಮ್ಮೆ ಮೋಹನ ದೇಶಪಾಂಡೆಯ ಜತೆಗೂ ಮತ್ತೊಮ್ಮೆ ಅಶೋಕ ಕುಲಕರ್ಣಿಯ ಜೊತೆಗೂ ತಿರುಗಾಡುತ್ತಿರುತ್ತಾಳೆ. ಅದಕ್ಕೆ ಉಳಿದ ಹುಡುಗಿಯರೆಲ್ಲ 'ಅವಳು ಅವರಿಬ್ಬರನ್ನೂ ಲವ್ ಮಾಡುತ್ತಾಳೆ'– ಎಂದು ಅನ್ನುತ್ತಾರೆ. ಅದಕ್ಕೆ ಹಾಗೆ ಮಾಡಬಹುದೇ ಎಂದು ಕೇಳಿದೆ."

ನನಗಾಗ ಬಹಳ ಪೇಚಾಟಕ್ಕಿಟ್ಟುಕೊಂಡಿತು. ಇನ್ನೂ ಅಷ್ಟೊಂದು ಪ್ರಬುದ್ಧಳಾಗದಿರುವ ಮಗಳ ಪ್ರಣಯದ ಬಗ್ಗೆ ತಾಯಿ ವಿವರಿಸುವದು ಸರಿಯೋ ಎಂಬ ಗೊಂದಲದಲ್ಲಿ ನಾನು ಸಿಲುಕಿದ್ದೆ. ಆದರೆ ನಾನು ಸ್ಪಷ್ಟೀಕರಿಸದಿದ್ದರೂ ಚಲನಚಿತ್ರ. ಕಥೆ,ಕಾದಂಬರಿಗಳಿಂದ ಅವಳು ತಿಳಿಯಬಹುದಾದುದರಿಂದ ಪ್ರೀತಿಯ ಬಗ್ಗೆ ಸರಿಯಾದ ಕಲ್ಪನೆ ಇರಲೆಂದು, "ನಾವು ಮನಃ ಪೂರ್ವಕವಾಗಿ ಒಬ್ಬನನ್ನೇ ಪ್ರೀತಿಸಬೇಕು. ಹಾಗೆ ಕಂಡ–ಕಂಡವರನ್ನೆಲ್ಲ ಲವ್ ಮಾಡುವದಾದರೆ ಆ ಶಬ್ದದ ಪಾವಿತ್ರ್ಯ ನಷ್ಟವಾಗುತ್ತದೆ." ಎಂದವಳೇ ಮತ್ತೇನು ಕೇಳುವಳೋ ಎಂದು ಹೆದರಿ ಅಲ್ಲಿ ನಿಲ್ಲದೆ ಒಳಗೆ ಹೋಗಿದ್ದೆ....

ಅದನ್ನೆಲ್ಲ ಈಗ ಸ್ಮರಿಸಿಕೊಂಡಾಗ ತನ್ನ ಕ್ಲಾಸ್‌ಮೇಟಿನ ನಿಮಿತ್ತ ಮಾಡಿ ಸ್ವತಃ ಅಂಜಲಿಯೇ ಪ್ರೀತಿಯ ತ್ರಿಕೋಣದಲ್ಲಿ ಸಿಲುಕಿ ಹಾಗೆ ಕೇಳಿರಬಹುದೋ ಎಂಬ ಸಂಶಯ ಮನದಲ್ಲಿ ಮೂಡಿತ್ತು. ಪ್ರೇಮ ವಿವಾಹವನ್ನು ವಿರೋಧಿಸುವಷ್ಟು ಸಂಪ್ರದಾಯವಾದಿ ನಾನಲ್ಲವಾದರೂ ತನ್ನ ಬಾಳಸಂಗಾತಿಯನ್ನು ಆಯ್ದುಕೊಳ್ಳುವಷ್ಟು ಅಂಜು ಇನ್ನೂ ಪ್ರಬುದ್ಧಳಾಗಿಲ್ಲವಾದುದರಿಂದ ನಾನು ವಿಮಂಚನೆಗೊಳಗಾದೆ. ಅಲ್ಲದೆ ಚಲನಚಿತ್ರಗಳಲ್ಲಿ ಚಿತ್ರಿತವಾಗಿರುವ ಬಣ್ಣದ ಬದುಕನ್ನು ನೋಡಿ ವಾಸ್ತವ ಪ್ರಪಂಚದ ಬಗೆಗೆ ಸರಿಯಾದ ತಿಳುವಳಿಕೆಯಿರದ ಆಧುನಿಕ ಕಾಲೇಜು ತರುಣ ತರುಣಿಯರ ಪ್ರೇಮ ಪ್ರಕರಣಗಳು ದುರಂತದಲ್ಲಿ ಪರ್ಯವಸಾನವಾಗುವದೇ ಹೆಚ್ಚು. ಕೆಲದಿನಗಳ ಹಿಂದೆಯಷ್ಟೇ ನಮ್ಮ ಮಹಿಳಾ ಮಂಡಳದ ಕಾರ್ಯದರ್ಶಿನಿ ಪ್ರಮೀಳಾಬಾಯಿಯವರ ಮಗಳು ಕಾಲೇಜಿಗೆಂದು ಹೋದವಳು ಯಾರನ್ನೋ ಕಟ್ಟಿಕೊಂಡು ಓಡಿಹೋದಳೆಂದು ಕಮಲಮ್ಮ ಹೇಳಿ.

'ಹೆಣ್ಣು ಮಕ್ಕಳಿಗೆ ಅತಿಯಾದ ಸ್ವಾತಂತ್ರ್ಯ ಕೊಟ್ಟಿದರ ಪರಿಣಾಮ ಏನು!" ಎಂದು ರಾಗವೆಳೆದಿರಲಿಲ್ಲವೇ ? ಆಗ ನಾನು, 'ಹುಡುಗಿ ಯರಿಗೆ ಸ್ವಾತಂತ್ರ್ಯ ಕೊಡುವುದರಲ್ಲೇನೂ ತಪ್ಪಿಲ್ಲ. ಆದರೆ ಅವರು ಸ್ವೈರ ವರ್ತನೆಗಿಳಿಯದಂತೆ ತಂದೆ-ತಾಯಿ ಜಾಗೃತರಾಗಿರಬೇಕು. ಯೋಗ್ಯ ಸಂಸ್ಕಾರವಿರುವ ಮಕ್ಕಳು ಅಡ್ಡದಾರಿಗೆಂದೂ ಇಳಿಯಲಾರರು." ಎಂದಿದ್ದೆ. ಆದರೆ...

ಆದರೆ ಮಗಳನ್ನು ಸರಿಯಾಗಿ ಬೆಳೆಸುತ್ತಿದ್ದೇನೆಂಬ ನನ್ನ ಅಭಿಮಾನಕ್ಕೆ ಕುಂದು ತರುವಂಥ ಕೃತಿಯಲ್ಲಿ ಅಂಜಲಿ ತೊಡಗಿರಬಹುದೇ? ಅವಳಿಗಿತ್ತ ಸ್ವಾತಂತ್ರ್ಯದ ದುರುಪಯೋಗವನ್ನವಳು ಮಾಡಿಕೊಳ್ಳುತ್ತಿರಬಹುದೇ? ಇದುವರೆಗೂ ನನ್ನಿಂದ ಯಾವ ವಿಷಯವನ್ನು ಬಚ್ಚಿಟ್ಟುಕೊಳ್ಳದ ಹುಡುಗಿ ನನಗರಿಯದಂತೆ ಯಾರ ಜೊತೆ ಸ್ನೇಹ ಬೆಳೆಸಿರಬಹುದು...?

ಒಂದರ ಹಿಂದೊಂದರಂತೆ ಪ್ರಶ್ನೆಗಳು ಗೊಂದಲ ಹಾಕಿ ನನ್ನನ್ನು ಅಸ್ವಸ್ಥಗೊಳಿಸಿದವು. ನಾವು ಕುರ್ಚಿಯಿಂದೆದ್ದು ಶತಪಥ ತಿರುಗಾಡ ತೊಡಗಿದೆ. ಸ್ವಲ್ಪ ಸಮಯದ ನಂತರ ಏನೋ ಮಹತ್ವದ ಶೋಧ ಮಾಡಿದವಳಂತೆ, 'ಹಾಂ. ಗೊತ್ತಾಯಿತು' ಟೇಬಲ್ ಟೆನಿಸ್ ಮಿಶ್ರಿತ ಡಬಲ್ಸ್ ಪಂದ್ಯದಲ್ಲಿ, ಅಂಜಲಿಯ ಪಾರ್ಟನರ್ ಆಗಿದ್ದ ಅರುಣ ಸರಾಫ ನನ್ನೇ ಅವಳು ಮೋಹಿಸಿರಬಹುದು-' ಎಂದು ನನ್ನಷ್ಟಕ್ಕೇ ಅಂದುಕೊಂಡೆ.

ಅರುಣ ತನ್ನ ಜೊತೆ ಆಡಲು ಆಹ್ವಾನವಿತ್ತದಿನ ಅವಳು ತುಂಬಾ ಸಂತೋಷದಿಂದ ಭುಜಗಳನ್ನು ಕುಣಿಸುತ್ತ ನನಗೆ, "ಅಮ್ಮಾ, ನಮ್ಮ ಕಾಲೇಜಿನ ಚಾಂಪಿಯನ್ ಅರುಣ ಸರಾಫ ಮಿಶ್ರಿತ ಡಬಲ್ಸಿಗಾಗಿ ಆಡಲು ನನ್ನನ್ನು ಆಯ್ಕೆ ಮಾಡಿದ್ದಾನೆ, ಅದಕ್ಕೆ ಸುಧಾಳಿಗೆ ನನ್ನ ಮೇಲೆ ತುಂಬಾ ಅಸೂಯೆಯುಂಟಾಗಿದೆ. 'ಮ್ಯಾಚಿನಲ್ಲಿ ಈ ಜೋಡಿಯನ್ನು ಸೋಲಿಸಿ ಅವರ ಸೊಕ್ಕು ಮುರಿಯುತ್ತೇನೆ' ಎಂದು ಗೆಳತಿಯರ ಎದುರು ಅಂದಳಂತೆ, ನಾನು ಏನು ಕಡಿಮೆಯವಳಲ್ಲ!" ಎಂದು ಎದೆ ತಟ್ಟಿ ಹೇಳಿ, "20ನೆಯ ತಾರೀಖಿಗೆ ಮ್ಯಾಚಿದೆ. ನೀನು ಖಂಡಿತ ಬರಬೇಕಮ್ಮಾ. ಅರುಣ ತುಂಬಾ ಚೆನ್ನಾಗಿ ಆಟವಾಡುತ್ತಾನೆ." ಎಂದಿದ್ದಳು;

ಅವಳ ಒತ್ತಾಯದ ಮೇರೆಗೆ ಎರಡು ತಿಂಗಳ ಹಿಂದೆ ನಡೆದ ಆ ಪಂದ್ಯವನ್ನೀಕ್ಷಿಸಲು ನಾನು ಹೋಗಿದ್ದೆ.

ಕಾಲೇಜಿನ ಜಿಮಖಾನಾ ಸಭಾಂಗಣ ಪ್ರಾಧ್ಯಪಕರು, ವಿದ್ಯಾರ್ಥಿ, ವಿದ್ಯಾರ್ಥಿನಿಯರೆಲ್ಲದೆ ಕ್ರಿಡಾಭಿಮಾನಿಗಳಿಂದ ತುಂಬಿ ಹೋಗಿತ್ತು. ಪಂದ್ಯ ತರುಸಿನದಾಗಿತ್ತು. ಅಂಜಲಿ–ಅರುಣರ ಎದುರಾಳಿಗಳಾದ ಸುಧಾ ಹಾಗು ಸುರೇಶ ಈರ್ಷೆಯಿಂದ ಆಡುತ್ತಿದ್ದರು. ಎರಡು ಪಕ್ಷಗಳು ಸೋಲು ಗೆಲುವುಗಳ ನೆಡುವೆ ಉಯ್ಯಾಲೆಯಾಡುತ್ತಿದ್ದವು, ಕೊನೆಯ ಆಟದಲ್ಲಿ ಅಂಜಲಿ–ಅರುಣರ ಜೋಡಿಗೆ ಗೆಲುವಾದಾಗ ಇಡೀ ಸಭಾಂಗಣ ಕಿವಿಗಡಚಿಕ್ಕುವಂತೆ ಕರತಾಡನ ಮಾಡಿತು. ಅರುಣನಂತೂ ಅಂಜಲಿಯ ಕೈ ಕುಲುಕಿ 'ವೆಲ್ ಡನ್ ಅಂಜೂ!' ಎಂದವನೇ ಉತ್ಸಹದಲ್ಲಿ ಅವಳನ್ನು ಮೇಲೆತ್ತಿ ಇಳಿಸಿದ್ದ!

ತಮ್ಮನ್ನು ಎತ್ತುವರಿದ ಅಭಿಮಾನಿಗಳ ಗುಂಪನ್ನು ಸರಿಸಿ ಅಂಜಲಿ ಅರುಣನನ್ನು ನನ್ನೆಡೆಗೆ ಕರೆದುಕೊಂಡು ಬಂದು ನನ್ನ ಪರಿಚಯ ಮಾಡಿಕೊಟ್ಟಿದ್ದಳು. ಕ್ರೀಡಾಪಟುವಿನ ದೃಢವಾದ ಮೈಕಟ್ಟನ್ನು ಪಡೆದ ಅರುಣ ತುಂಬಾ ಆಕರ್ಷಕ ಯುವಕನಾಗಿದ್ದ. ಅವನು ನನಗೆ ಕೈಜೋಡಿಸಿ 'ನಮಸ್ತೇ' ಎಂದಂದು "ಪರವಾಗಿಲ್ಲ ನಿಮ್ಮ ಮಗಳು ನನ್ನ ಪರೀಕ್ಷೆಯಲ್ಲಿ ಗೆದ್ದಳು! ಚೆನ್ನಾಗಿ ಆಡ್ತಾಳೆ. ಅವಳ ಪ್ರಾಕ್ಟೀಸಿಗೆ ಅಡ್ಡಬರಬೇಡಿ." ಎನ್ನುತ್ತ ಅವಳ ಬೆನ್ನು ತಟ್ಟಿದ್ದ. ಅಂಜಲಿ ಟೇಬಲ ಟೆನಿಸ್ ಆಟದಲ್ಲಿ ಇಷ್ಟೊಂದು ಪ್ರಗತಿ ಸಾಧಿಸಿರಬಹುದೆಂಬುದರ ಕಲ್ಪನೆ ನನಗಿರಲಿಲ್ಲವಾದುದರಿಂದ ಅವಳ ಜಯದಿಂದ ನಾನೂ ಉಬ್ಬಿ ಹೋಗಿದ್ದೆ...

ಆದರೆ ಆ ದಿನ ಅರುಣ ಅಂಜಲಿಯೊಡನೆ ವರ್ತಿಸಿದ ರೀತಿಯನ್ನು ಇಂದು ಮೆಲುಕು ಹಾಕುವಾಗ ನಾನೆಷ್ಟು ಮೂರ್ಖಳು ಎಂದೆನಿಸುತ್ತಿದೆ. ಅರುಣ ಅವಳನ್ನು ಹಿಡಿದೆತ್ತಿದುದು, ಅವಳ ಬೆನ್ನುತಟ್ಟಿದದು ನನಗೇನೂ ಆಗ ಆಕ್ಷೆಪಾರ್ಹವೆನಿಸಿರಲಿಲ್ಲ. ವಿಜಯೋತ್ಸಾಹದ ಸಂಕೇತ

ಅದಿರಬಹುದೆಂದು ನನ್ನ ಭಾವನೆಯಾಗಿತ್ತು. ಅಂಜಲಿಯ ಬಗ್ಗೆ ಅವನು ತನ್ನ ಒಲುಮೆಯನ್ನು ವ್ಯಕ್ತವಡಿಸಿದ ರೀತಿ ಅದು ಎಂಬುದನ್ನು ಅರಿಯಲಾರದೆ ಹೋದೆನಲ್ಲ! ನಾನೆಂಥ ಬೆಪ್ಪು!-ಎಂದು ಚಡಪಡಿಸಿದೆ.

ಏನಾದರೂ ಆಗಲಿ ಇಂದು ಅಂಜು ಬಂದ ಮೇಲೆ ಅವಳಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕು. ಮೊದಲು. ಓದು ಆ ಮೇಲೆಪ್ರೀತಿ—ಮದುವೆ ಎಲ್ಲಾ—ಎಂಬುದನ್ನು ಅವಳಿಗೆ ಕಿವಿ ಹಿಂಡಿ ಹೇಳಬೇಕು. ಅವಳು ತನ್ನಿಷ್ಟ ಬಂದವನನ್ನು ಸಕಾಲದಲ್ಲಿ ಮದುವೆಯಾಗುವುದಕ್ಕೆ ನನ್ನದೇನೂ ಆಕ್ಷೇಪ ಣೆಯಿಲ್ಲ. ಆದರೆ ಪ್ರಮಿಳಾಬಾಯಿಯ ಮಗಳಂತೆ ಓಡಿಹೋಗುವುದು ಮಾತ್ರ ಬೇಡ!

ಬೆಳ್ದಿಂಗಳು ಮೆಲ್ಲನೆ ಪಸರಿಸುತ್ತಲಿತ್ತು. ರಾತ್ರಿ ರಾಣಿಯ ಹೂಗಳರಳಿ ಅವುಗಳ ಮಾದಕ ಸುಗಂಧ ಗಾಳಿಯಲ್ಲಿ ತೇಲಿ ಬರುತ್ತಿತ್ತು. ನಾನು ಮಾತ್ರ ಅದನ್ನು ಆಸ್ವಾದಿಸುವ ಸ್ಥಿತಿಯಲ್ಲಿರಲಿಲ್ಲ. ಹಾಲಿನಲ್ಲಿಯ ಗಡಿಯಾರದ ಕಡೆಗೊಮ್ಮೆ ನೋಡಿದೆ. ಗಂಟೆ ಆಗಲೇ ಎಂಟಾಗುತ್ತ ಬಂದಿತ್ತು. ಅಂಜಲಿಯದಂತೂ ಇನ್ನೂ ಸಂಳಿವೇ ಇಲ್ಲ, ದಿಲೀಪ ಬರಲು ಇನ್ನೂ ಅವಕಾಶವಿದೆ. ಇವರು ಬಹುಶಃ ಅಫೀಸಿನಿಂದ ಕ್ಲಬ್ಬಿಗೆ ಹೋಗಿರಬಹುದೆಂದುಕೊಂಡು ಬಾಗಿಲು ಮುಂದುಮಾಡಿ ಅಡಿಗೆಯ ಮನೆಗೆ ರಾತ್ರಿ ಅಡಿಗೆಯ ಸಿದ್ಧತೆಮಾಡಲು ತೆರಳಿದೆ.

ಕುಕರನ್ನು ಜೋಡಿಸಿ ಗ್ಯಾಸಿನ ಮೇಲೆ ಇಡುವಷ್ಟರಲ್ಲಿಯೇ ಹೊರಗೆ 'ಧೊಪ್' ಎಂದು ಏನೋ ಬಿದ್ದ ಶಬ್ದವಾಯಿತು. ಅದರೊಡನೆಯೇ "ಅಮ್ಮಾSS..." ಎಂಬ ಅಂಜಲಿಯ ಕೂಗೂ ಕೇಳಿಸಿತು. "ಸಧ್ಯ ಬಂದಳಲ್ಲ!' ಎಂದವಳೇ ಮೊದಲೇ ನಿರ್ಧರಿಸಿದಂತೆ ತಡಮಾಡಿ ಬಂದುದಕ್ಕೆ ಅವಳನ್ನು ತರಾಟೆಗೆ ತೆಗೆದುಕೊಳಬೇಕೆಂದು ಸಮರಕ್ಕೆ ಸಿದ್ಧನಾದ ಯೋಧನ ವೀರಾವೇಶದಿಂದ ಹೊರಬಂದೆ.

ಅಂಜಲಿ ಪುಸ್ತಕಗಳನ್ನೆಲ್ಲ ಚೆಲ್ಲಿ ಕಾಲು ಚಾಚಿಕೊಂಡು ಕಾರ್ಪೆಟ್ಟಿನ ಮೇಲೆ ಕುಳಿತಿದ್ದಳು. ತಲೆಗೂದಲೆಲ್ಲ ಅಸ್ತವ್ಯಸ್ತವಾಗಿದ್ದವು. ಮುಖ ಬಳಲಿತ್ತು. ತೊಟ್ಟಿದ್ದ ಜೀನ್ಸ ಪ್ಯಾಂಟು ಮುದ್ದೆ ಮುದ್ದೆ ಯಾಗಿತ್ತು.

"ಅಂಜೂ, ನಿನಗೆ ಹೊತ್ತು-ಗೊತ್ತು ಒಂದೂ ಇಲ್ಲವೇ ಬೆಳಿಗ್ಗೆ ಹತ್ತುಗಂಟೆಗೆ ಕಾಲೇಜಿಗೆ ಹೋದವಳು ಈಗ ಬರುವದೇಂದರೇನು? ನೋಡಿದವರು ನನ್ನನ್ನು—"

ನಾನು ಮಾತು ಮುಗಿಸುವ ಮೊದಲೇ ಅವಳು, "ಸ್ವಲ್ಪ ಇರಮ್ಮಾ, ಒಮ್ಮೆಲೇ ಹೀಗೆ ರುದ್ರಾವತಾರ ತಾಳಬೇಡ, ನಾನೇಕೆ ತಡಮಾಡಿ ಬಂದನೆಂದು ಹೇಳಲೇ?" ಎಂದು ಎಂದಿನ ತುಂಟತನದಿಂದ ಕೇಳಿದಳು.

ಈ ಪ್ರಶ್ನೆಗಾಗಿಯೇ ಅಲ್ಲವೇ ನಾನು ಸಂಜೆ ಯಿಂದ ತಲೆಕೆಡಿಸಿ ಕೊಂಡದ್ದು! ಅದಕ್ಕೆ ಅವಳಿಂದಲೇ ಉತ್ತರ ದೊರೆಯಲೆಂದು 'ಹೂಂ. ಬೇಗ ಹೇಳು' ಎಂದೆ.

"ಪ್ರಾಕ್ಟಿಕಲ್ಸ್ ಮುಗಿಸಿ ಕಾಲೇಜಿನಿಂದ ಹೊರಬಂದಾಗ ಐದು ಗಂಟೆ ಯಾಗಿ ಹೋಗಿತ್ತು. ಐದು ಹದಿನೈದರ ಬಸ್ಸು ಸಿಗಬಹುದೆಂದು ಬಸ್ ಸ್ಟಾಪಿನತ್ತ ಬೇಗ ಬೇಗ ಹೆಜ್ಜೆಹಾಕತೊಡಗಿದ್ದೆ.

"ಅಷ್ಟರಲ್ಲಿ ಒಬ್ಬ ರಾಕ್ಷಸ ಅಡ್ಡ ಬಂದ!" ನಾನು ಅಸಹನೆಯಿಂದ ನುಡಿದೆ. ನನ್ನ ಮಗಳ ಬಾಳನ್ನು ಹಾಳು ಮಾಡಲೆತ್ನಿಸಿದ ಅರುಣ ನನಗೀಗ ರಾಕ್ಷಸನಂತೆಯೇ ಭಾಸವಾಗತೊಡಗಿದ್ದ.

"ನಾನು ಹೇಳೊದನ್ನು ಪೂರ್ತಿ ಕೇಳಿಕೊಮ್ಮ"—ಎಂದೆಂದು ಮತ್ತೆ ಪ್ರಾರಂಭಿಸಿದಳು. ಬಸ್ ಸ್ಟಾಪಿನತ್ತ ಬರುತ್ತಿರುವಾಗ ಜನರ ಗುಂಪೊಂದು ಕಾಣಿಸಿತು. ಏನಿರಬಹುದೆಂದು ಕೂತೂಹಲದಿಂದ ಇಣುಕಿ ನೋಡಿದಾಗ ಅಲ್ಲಿ ಮಂಗನಾಟ ನಡೆದಿತ್ತು. ನಮ್ಮ ಕನ್ನಡ ಶಾಲೆಯ ಪುಸ್ತಕದಲ್ಲಿ 'ಬಡೇಮಿಯಾ-ಬಸಲಿಂಗಿ' ಪಾಠವನ್ನು ಓದಿದ್ದೇನೆ ಹೊರತು ನೋಡಿರಲಿ ಲ್ಲವಾದುದರಿಂದ ಅಲ್ಲಿಯೇ ನೋಡುತ್ತ ನಿಂತುಬಿಟ್ಟೆ. ಆಟ ಎಷ್ಟು ಚೆನ್ನಾಗಿತ್ತು ಅಂತೀ! ಬಡೇಮಿಯಾ ಹೊಡೆಯುವದು; ಬಸಲಿಂಗಿ ತವರು ಮನೆಗೆ ಹೊರಡುವದು-ಎಲ್ಲಾ ತುಂಬಾ ಮಜಾ ಇತ್ತು. ಕೊನೆಗೆ

ಬಡೇಮಿಯಾ ಚಿಕ್ಕ ಕೋಲನ್ನೂರುತ್ತ ಎಲ್ಲರ ಕಡೆಯಿಂದ ದುಡ್ಡು ಕೇಳಲು ಬಂದಾಗ ನಾನೂ ನನ್ನ ಹತ್ತಿರವಿದ್ದ ಎಂಟಾಣೆಯನ್ನು ಕೊಟ್ಟುಬಿಟ್ಟೆ. ಆ ಮೇಲೆ ನೆನಪಿಗೆ ಬಂತು-ಬಸ್ಸಿಗೆ ದುಡ್ಡಿಲ್ಲದಾಯಿತಲ್ಲ-ಎಂದು. ಸರಿ, ಪಾದಯಾತ್ರೆ ಮಾಡುತ್ತ ಬಂದೆ!"_ಅಂಜು ಹೇಳಿದಾಗ ಅವಳು ಅಲ್ಲಿ ಮಂಗ ನಾಟ ನೋಡುತ್ತಿದ್ದರೆ ನನ್ನ ಮನವೇ ಅದುವರೆಗೂ ಮರ್ಕಟನಂತೆ ಹುಚ್ಚುಚ್ಚಾಗಿ ಕುಣಿದಾಡಿ ಏನೇನೋ ಕಲ್ಪಿಸಿತ್ತಲ್ಲ-ಎಂಬುದನ್ನು ನೆನೆದು ನನಗೆ ಜೋರಾಗಿ ನಗು ಬಂದಿತು.

"ಯಾಕೆ ನಗುತ್ತೀ ಅಮ್ಮ?...ನನಗೆ ಕಾಲು ತುಂಬಾ ನೋಯುತ್ತಿವೆ. ಕುಡಿಯಲು ಬೇಗ ಒಂದು ಲೋಟ ತಣ್ಣಗಿನ ನೀರು ತೆಗೆದುಕೊಂಡು ಬಾ. ನಾನೇನೂ ಇಲ್ಲಿಂದ ಏಳಲಾರೆ...ಎಂದಳು ಕೆನ್ನೆ ಉಬ್ಬಿಸಿ.

ಹದಿನೇಳು ವರ್ಷದ ಅಂಜಲಿ ಏಳುವರ್ಷದ ಹುಡುಗಿಯಂತೆ ಮಾತ ನಾಡುತ್ತಿರುವದನ್ನು ಕೇಳಿ ನಾನೇ ತಲೆಯ ಮೇಲೆ ತಣ್ಣೀರು ಸುರಿದು ಕೊಳುವಂತಾಯಿತು! ಹಸೂಗೂಸಿನಂಥ ಮಗಳನ್ನು ವ್ಯರ್ಥವಾಗಿ ಶಂಕಿಸಿದೆನಲ್ಲಾ ಎಂದು ನನ್ನನ್ನೇ ಹಳಿದುಕೊಳ್ಳುತ್ತ ನೀರು ತರಲು ಒಳಗೆ ಹೋದೆ.



## ಭಾಗ-೩

# ಹೊಣೆ ಯಾರು?

—ಶ್ರೀಮತಿ ವಾಸಂತಿ ಪಡುಕೋಣೆ

ಮಹಾರಾಷ್ಟ್ರದ ಒಂದು ಹಳ್ಳಿ. ಅಲ್ಲಿ ವಾಸಮಾಡುತ್ತಿರುವ ಒಬ್ಬ ಬ್ರಾಹ್ಮಣರ ಕುಟುಂಬ. ತಂದೆ ಹಳ್ಳಿಯಲ್ಲಿರುವ ಪಾಠಶಾಲೆಯ ಶಿಕ್ಷಕರು. ಪತ್ನಿ ಸುಶಿಲ. ನಾಲ್ಕರು ಮಕ್ಕಳು. ಎರಡು ಹೆಣ್ಣು ಮತ್ತು ಎರಡು ಗಂಡು ಮಕ್ಕಳು.

ಹಿರಿಯವಳಾದ ಮಾಲಿನಿಯು ಹದಿನೇಳು ವರ್ಷ ತುಂಬಿ ಹದಿನೆಂಟಿಗೆ ಕಾಲಿಟ್ಟವಳು, ತಕ್ಕ ಮಟ್ಟಿಗೆ ಸುಶಿಕ್ಷಿತಳು. ಮದುವೆಯಾಗಿಲ್ಲ. ವರ ದಕ್ಷಿಣೆ ಸಾವಿರಗಟ್ಲೆ ಕೊಡಲು ಮಾತಪಿತರಿಗೆ ಅಸಾಧ್ಯ. ನೆರೆಯವರ ಕಣ್ಣುಗಳಿಗೆ ಯಹೌವನ ತುಂಬಿದ ಮಾಲಿನಿಯೇ ಪ್ರಧಾನ ಕುಚೇಷ್ಟೆಗೆ ಬಲಿಯಾಗಿ ಜೀವಕ್ಕೆ ಬೇಸತ್ತಿದ್ದಳು. ಆದರೆ, ಮಾಡಲೇನು ಸಾಧ್ಯವಿಲ್ಲ, ಮನೆಯೊಳಗೆ ತಾಯಿಯ ಕಣ್ಣಿಗೆ ಅವಳ ಬೆಳೆತ ಚುಚ್ಚುತ್ತಿತ್ತು. ಅವಳಾದರೋ ತಂದೆಯ ಆರು ಮಂದಿ ಮಕ್ಕಳಲ್ಲಿ ಒಬ್ಬಳು, ಮಧ್ಯಮವರ್ಗ, ಹಣಕಾಸು ಎಲ್ಲಿಂದ ಬರಬೇಕು. ಅಂತು ಬದುಕಿನ ಬಾಳು ಹೇಗಾದರೂ ಸಾಗಿಸುವವರು. "ಹುಟ್ಟಲ್ಲಿ ಏಕಾದಶಿ ಕೊಟ್ಟಲ್ಲಿ ದ್ವಾದಸಿ" ಎಂಬಂತೆ ಅವಳ ಜೀವನ.

ಹೀಗಿರುವಲ್ಲಿ ಒಮ್ಮೆ ಒಬ್ಬಾತ ಶಹರಿನಿಂದ ಶಂಕರನೆಂಬ ನೆಂಟರು ಬಂದರು. ಇನ್ನೂ ಮದುವೆಇಲ್ಲ. ನೆರೆಯುವಳಾದ ಕಮಲಿಯ ದೂರ ಸಂಪರ್ಕದ ಅಣ್ಣ. ನೋಡಲಿಕ್ಕೆ ಸಾಧಾರಣ. ಐದುವರ್ಷಕ್ಕೆ ಹಿಂದೆ ಒಮ್ಮೆ ಬಂದಿದ್ದರು. ಈಸಲ ಅತಿಥಿಯಾಗಿ ಮನೆಯವರಿಗೆ ಕಾಣಲು ಬಂದವರು ಊಟಮಾಡಿ ತೃಪ್ತಿಪಟ್ಟವರು. ಮಾಲಿನಿಗೆ ಈಸಲ ನೋಡಿ ಬೆರಗಾದರು. ಅವಳ ತಂದೆ ತಾಯಿ ಮಾಲಿನಿಯ ವಿಷಯದಲ್ಲಿ ತಮಗಿರುವ ಚಿಂತೆ, ದೌರ್ಬಲ್ಯತೆ ವ್ಯಕ್ತಪಡಿಸಿದರು. ತಾನೇ ಏಗೆ ಅವಳನ್ನು ವರಿಸಕೂಡ ದೆಂದು ಅವರಾಗಿ ಲಗ್ನ ಮಾಡಿಕೊಳ್ಳಲು ಒಪ್ಪಿದರು. ದೇವಸ್ಥಾನದಲ್ಲಿ ಪುರೋಹಿತನನ್ನು ಕರೆದು ಈ ಲಗ್ನ ಸಮಾರಂಭ ಜರುಗಿತು.

ಮಾಲಿನಿ, ಹೆಣ್ಣು ಮ್ಕಳು ಸದಾ ಬಯಸುವಂತೆ, ಪತಿಯ ನಿರೀಕ್ಷಣೆ, ಯೌವನದಲ್ಲಿ ಮನಸ್ಸಿನಲ್ಲಿ ಹುಟ್ಟುವ ಆಸೆ ಮುಂತಾದ್ದನ್ನು ಇಟ್ಟು ಕೊಂಡು ಈ ಶುಭ ಮಿಲನಕ್ಕಾಗಿ ಆತುರಪಡುತ್ತಿದ್ದಲ್ಲಿ ತಪ್ಪೇನು? ಆದರೆ ಗಂಡ ನಾದವನು ಆಕೆಯ ಬಯಕೆಗಳಿಗೆಲ್ಲಾ ತಿಲಾಂಜಲಿ ಕೊಟ್ಟವನು. ಒಮ್ಮೆ ಆತ, ನಪುಂಸಕ ಗೊಡ್ಡು, ಮುಂದಿನ ವಿಚಾರವೆಲ್ಲಾ ಮಾಡಿ, ಹೀಗೆಯೇ ಕೆಲವು ಅಬಲೆಯರನ್ನು ಬಲಿಕೊಟ್ಟವನು. ಲಗ್ನ ಮುಗಿದ ರಾತ್ರಿಯೇ ಪತಿಪತ್ನಿಯರು ಬೊಂಬಾಯಿಗೆ ರವಾನಾದರು.

ಥಟಕ್ಕನೇ ತಂದೆತಾಯಿ ಒಡಹುಟ್ಟಿದವರನ್ನು ಬಿಟ್ಟುಬರುವಾಗ ಮಾಲಿನಿಗೆ ಅತಿರೇಕ ದುಃಖವಾಯಿತು. ತನ್ನದೇ ಆಗುವ ಸ್ವತಂತ್ರ ಮನೆಮಾಡುವ ಸಂಧರ್ಭವಾದರೂ ಸಿಕ್ಕತಲ್ಲವೆಂದು ಸಮಾಧಾನ ಮಾಡಿ ಕೊಂಡಳು,

ಇತ್ತ ತಂದತಾಯಿ ಮತ್ತು ಇತರ ಮಕ್ಕಳಿಗೂ ತುಂಬ ಆಕೆ ಯನ್ನ (ಮಾಲಿನಿ)ಯನ್ನು ಬೀಳ್ಕೊಡುವಾಗ ದುಃಖವಾಯಿತು,

ಬೊಂಬಾಯಿ ಊರಿನ ಸೊಬಗು ನೋಡಿ ಮಾಲಿನಿಯು ಬೆರಗಾದಳು, ಅವರಿರುವ ೨ ರೂಮಿನ ಫ್ಲಾಟು. ಗಿರಗಾಂವ ಅಂಥ ಜನತುಂಬಿದ ಜಾಗ, ನೀರಿನ ತೊಂದ್ರೆ, ನಲ್ಲಿಗೊಸ್ಕರ ಅಕ್ಕಪಕ್ಕದಲ್ಲಿ ವಾಸಿಸುವ ನೆರೆಹೊರೆಯವರ ಗಲಾಟೆ. ಇದನ್ನೆಲ್ಲಾ ನೋಡಿ, ತನ್ನ ಬಡತನದ ಬಾಳಲ್ಲಿ ಬೆಳೆದಿರುವ ಆಗಿನ ತನಕ ಸುಖ ಇದನ್ನೆಲ್ಲಾ ನೆನೆಸಿಕೊಂಡು ಮಾಲಿನಿಗೆ ಬಹಳ ದುಃಖವಾಯಿತು, ಮನೆಯಲ್ಲಿ ಸಂಸಾರಕ್ಕೆ ಬೇಕಾದ ಜಿನಸುಗಳೆಲ್ಲಿ? ಬರೇಚಾ, ಸಕ್ಕರೆ ಡಬ್ಬದ ಹಾಲಿನ ಹುಡಿ. ಒಂದೆರಡು ಎಲ್ಯುಮಿನಿನ ಪಾತ್ರೆಗಳು, ಪತಿಗೆ ಬೇಕಾಗಿದ್ದ ವಸ್ತುಗಳ ಪಟ್ಟಿ ಮಾಲಿನಿ ಬರೆದುಕೊಟಳು. ಅಂತು ಸಂಸಾರಕ್ಕೆ ಶುರುವಾಯಿತು. ತನ್ನ ತಂದೆ ತಾಯಿಯರಿಗೆ ಒಂದು ಕ್ಷೇಮ ಸಮಾಚಾರದ ಪತ್ರ ಕಳುಹಿಸೋಣವೆಂದರೆ ಅಲ್ಲಿಯ ವಿಳಾಸ ಅರಿಯಳು. ಶಂಕರನಿಗೆ ಇಷ್ಟು ವರ್ಷ ಹೋಟೆಲಿನಲ್ಲಿ ತಿಂದು ಸಾಕಾಗಿತ್ತು. ಮಾಲಿನಿ ಇದ್ದದ್ದರಲ್ಲಿ ಮನೆಯನ್ನು ಚೊಕ್ಕಟವಾಗಿಟ್ಟಿದ್ದಳು. ಅವಳ ಕೈಯ ಅಡಿಗೆಯಾದರೋ ಬಲು ರುಚಿ. ಶಂಕರನಿಗೆ ತೃಪ್ತಿ ಆಗಿದ್ದ ಬಾಳು ನೋಡಿ ಮಾಲಿನಿಗೂ ತೃಪ್ತಿಯಾಯಿತು. ಆರು ತಿಂಗ್ಳು ಹೇಗೆ ಕಳೆದುವೋ ಇಬ್ಬರಿಗೂ ತಿಳಿಯಲಿಲ್ಲ. ಪತಿಯು ವಿಚಿತ್ರ ವರ್ತನೆಯು ಮಾಲಿನಿಗೆ ಗೂಢವಾಗಿತ್ತು.

ಶಂಕರನ ಗೆಳೆಯನಾದ ನರಹರಿಯು ಇತ್ತೀಚೆ ಪದೇ ಪದೇ ಬಂದು ಹೋಗುತ್ತಿದ್ದನು. ಮಾಲಿನಿಯ ಯೌವನಭರಿತ ದೇಹ ಆತನಿಗೆ ಅಲ್ಲಿಗೆ ಎಳೆದುಕೊಂಡು, ಹೋಗುತ್ತಿತ್ತು. ಮಾಲಿನಿಗೆ ಈತನ ಉದ್ದೇಶ ತಿಳಿದು ಬಂತು, ಒಮ್ಮೆ, ಆಕೆಯೇ ಆತನನ್ನು ಮನೆಗೆ ಬರಬೇಡವೆಂದು ಹೇಳಿದಳು ಆತ ಕೇಳುವವನೇ? ವಿಶಯ ಲಂಪಟ. ಶಂಕರನಿಗೆ ಸಂದೇಹಬಂದು ಇಬ್ಬರು ಸ್ನೇಹಿತರಲ್ಲಿ ವಾದವಿವಾದವಾಗಿ ಕಡೆಗೆ ಬಡೆದಾಟದ ರೂಪು ತಂದಿತು. ನೆರೆಯವರು ಬಂದು ಇಬ್ಬರನ್ನೂ ಬಿಡಿಸದಿದ್ದರೆ ಖೂನಿಯಾಗುತ್ತಿತ್ತು. ನೆರೆಯವರು ಇನ್ನು ಮುಂದೆ ಆ ಚಾಳಿನಲ್ಲಿ ಕಾಲಿಟ್ಟರೆ ಆತನ ಜೀವಕ್ಕೆ ಅಪಾಯ ಖಂಡಿತವೆಂದು ಆತನನ್ನು ನೂಕಿದರು.

ಇತ್ತ, ಶಂಕರನಿಗೆ ಏಕೋ ಬೇರೆ ಥರದ ಆಲೋಚನೆ ಉಂಟಾಯಿತು ಒಂದೆರಡು ಸಲ ಶಂಕರ ಮಾಲಿನಿಗೆ ಹೆಂಗಿಗ ಗಾರ್ಡನು, ಪೊಲೊ ಬಂದರ್ ಮುಂತಾನ ಕಡೆ ಕರಕೊಂಡು ಹೋಗಿದ್ದನು. ಎರಡು ಸಲ ಕನ್ನಡ ಚಿತ್ರಪಟ ಬಂದಾಗ ಕೊಂಡೊಯ್ದಿದ್ದನು. ಇತ್ತೀಚೆ ಇಬ್ಬರಲ್ಲೂ ಸ್ನೇಹ ಬೆಳೆದಿತ್ತು. ಮಾಲಿನಿಯಾದರೋ ಪತಿಯಮೇಲೆ ವಿಶ್ವಾಸವಿಟ್ಟಿದ್ದಳು. ಆತ, ಎಲ್ಲಿಗೆ ಬಾ ಎಂದರೂ ತನ್ನ ಸಿದ್ಧತೆ ತೋರಿಸುತ್ತಿದ್ದಳು. ಆದರೆ. ಆಕೆಗೆ ಶಾರೀರಿಕ ಸಂಬಂದಕ್ಕೆ ಎಡೆ ತೊಡದಿದ್ದ ಶಂಕರನ ವಿಚಿತ್ರ ವರ್ತನೆ ಆಕೆಯ ಆಶ್ಚರ್ಯವೆನಿಸುತ್ತಿತ್ತು.

ಒಮ್ಮೆ ಶಂಕರ ಮಾಲಿನಿಯನ್ನು ವೇಶ್ಯಾ ಕಮಲಾ ಮನೆಯಲ್ಲಿ ಕರಕೊಂಡು ಹೋದನು. ಮನೆಯೊಳಗಿಂದ ನೂಪುರದ ಧ್ವನಿ. ಹಾಡು ಕೇಳಿಸುತ್ತಿತ್ತು, ಮಾಲಿನಿಗೆ ಏಕೋ ಮನಸ್ಸಿನಲ್ಲಿ ದಿಗಿಲಾಯಿತು., ಸಂಕೋಚಪಟ್ಟಳು. ಒಳಗಡೆ ಕೆಲವು ತಲೆ ದಿಂಬುಗಳು ಅದಕ್ಕೆ ಒರಗಿ ಕೂತ ಪುರುಷರು. ಒಂದು ಕಡೆ ಕಮಲಾ ತನ್ನ ವಿಳ್ಯದ ಪೆಟ್ಟಿಗೆ ಇಟ್ಟುಕೊಂಡು ನಗುತ್ತಿರುವಳು. ಒಂದು ಸಾಧಾರಣ ೧೬ ವರ್ಷದ ಬಾಲೆ ಕುಣಿಯುತ್ತಿರುವಳು. ಮಾಲಿನಿಗೆ ಕೈ ಹಿಡಿದು ಶಂಕರ ಒಳಗಡೆ ಕಾಲಿಟ್ಟನು. ಎಲ್ಲರ ಕಣ್ಣುಗಳು ಆಕೆಯನ್ನು ಕಂಡವು. ಕಮಲಾ. ಬಾಮ್ಮಾ, ನನ್ನ ಬಳಿ ಕೂತುಕೊ ಎಂದು ಉಪಚರಿಸಿದಳು, ಮಾಲಿನಿ ಎಲ್ಲಾ ಕಡೆಯಲ್ಲಿ ದೃಷ್ಟಿಬೀರಿದಳು. ಸುಸಜ್ಜಿತ ಕೋಣೆ. ಒಂದುಕಡೆ, ತಬಲಜಿ ಕೂತುಕೊಂಡು, ಕುಣಿತಕ್ಕೆ ತಕ್ಕವಾಗಿ ತಬಲಾ ಬಡೆಯುತ್ತಿರುವನು.

ಕುಣಿಯುತ್ತಿರುವ ಬಾಲೆಯ ಮುಖ ಬಾಡಿದೆ. ಮುಖವೆಲ್ಲಾ ಬೆವರಿದೆ, ಎಲ್ಲಿ ಅವಳು ಬಿದ್ದು ಬಿಡುವಳೋ ಎಂಬ ಸಂಶಯ. ಅಂತು, ಡ್ಯಾನ್ಸು ತುಂಬ ಸ್ವಾರಸ್ಯವಾಗಿತ್ತು. ಬಾರಿಸುತ್ತಿರುವ ಸಾಂಗಿಯ. ಧ್ವನಿ ಇಂಪಾಗಿತ್ತು. ಆದೆಷ್ಟು ಹೊತ್ತು ಈ ತಮಾಷೆ ನಡಿಯಿತೋ ಗೊತ್ತಿಲ್ಲ, ಮಾಲಿನಿಗೆ ಹಸಿವು, ನಿದ್ದೆ, ಕಣ್ಣು ಮುಚ್ಚಿ ಮುಚ್ಚಿ ಬರುತ್ತದೆ. ಒಂದೆರಡು ಸಲ ಆಕಳಿಸಿದಳು, ಕಡೆಗೆ, ಕುಣಿತ ನಿಂತಿತು. ಜನರು ಒಬ್ಬೊಬ್ಬರೆ ಕಮಲಾ ಹತ್ತಿರ ಹಣ ಸುರಿದು ನಗುತ್ತಾ ಹೊರಟು

ಹೋದರು. ಶಂಕರ ಮಾಲಿನಿಯೊಡನೆ ಮನೆಗೆ ಬಂದನು. ಹೊರಡುವ ಮುಂಚೆ ಕಮಲಾ ಮತ್ತು ಶಂಕರ ಏನೋ ಪಿಸಿಪಿಸಿ ಮಾತನಾಡುತ್ತಿದ್ದರು. ಕಣ್ಣುಗಳು ನಲಿಯುತ್ತಿದ್ದುವು. ಕೈಯ ಹಾವಭಾವ ಬೇರೆ, ಶಂಕರ ಮಾಲಿನಿಗೆ "ಹೇಗಿತ್ತು ಡಾನ್ಸು ಮಾಲು?" ಎಂದನು. ಮಾಲಿನಿ ಜವಾಬು ಕೊಡಲಿಲ್ಲ.

ಮನೆಗೆ ಬಂದು ಇಬ್ಬರು ಮಾಡಿಟ್ಟ ಅಡಿಗೆಯನ್ನು ಬಡಿಸಿಕೊಂಡು ಊಟಕ್ಕೆ ಕೂತರು. ಮಾಲಿನಿಗೆಅನ್ನ ರುಚಿಸಲಿಲ್ಲ. ಶಂಕರ ಹೊಟ್ಟೆ ತುಂಬ ಊಟ ಮಾಡಿದನು. ರಾತ್ರೆ ಮಾಲಿನಿಗೆ ನಿದ್ದೆ ಹತ್ತಲಿಲ್ಲ ವಿಚಾರ ವಿಚಾರ ತಲೆ ಕೆಡಿಸುವಂತಾಯಿತು. ಬೆಳಗಿನ ಜಾವಕ್ಕೆ ತಾನು ಮನೆಗೆ ಹೋದ ಸ್ವಪ್ನ. ತಂದೆ ತಾಯಿಯರ ಆನಂದದ ನಗು. ಕಿರಿಯ ತಮ್ಮತಂಗಿ ಯರ ಸಂತೋಷ, ಎಲ್ಲರೂ ಬಂದು ಆಕೆಯನ್ನು ಅಪ್ಪಿಕೊಂಡರು, ಅಷ್ಟರಲ್ಲಿ ಆಕೆಗೆ ಎಚ್ಚರವಾಯಿತ್ತು, ಎದ್ದು ನಲ್ಲಿಯ ಕಡೆಗೆ ಓಡಿದಳು. ಸಲ್ಪ ಹೊತ್ತಾದರೆ ನೀರು ಸಿಗದು. ಶಂಕರ ಚೆನ್ನಾಗಿ ಘೊರಕೆ ಹೊಡೆ ಯುತ್ತಿದ್ದ. ಮಾಲಿನಿ, ಮುಖಮಾರ್ಜನೆ ಮಾಡಿ. ಸ್ನಾನಮಾಡಿ ಬಂದರೂ, ಶಂಕರ ಏಳಲಿಲ್ಲ, ದೇವರ ಪಟ ಒಂದಿತ್ತು. ಅದಕ್ಕೆ ಕೈಮುಗಿದು ಮಾಲಿನಿ ಜಪ ಮಾಡಹತ್ತಿದಳು, ಆ ಸ್ಟವು ಬೇರೆ ಸರಿಯಾಗಿ ಉರಿಯದು. ಶಂಕರನಿಗೆ ಎಬ್ಬಿಸೇಲೆ ಬೇಕಾಯಿತು, ಅವನೂ ಸ್ವಪ್ನದಲ್ಲಿ ಮುಳುಗಿದ್ದ ನೇನೋ. ಆತ ರೇಗಿದ. ಗೊಣ ಗುಟ್ಟುತ್ತ ಎದ್ದ. ಮತ್ತು ಸ್ಟವು ಪಿನ್ನು ಹಾಕಿ ಉರಿಸಿದ. ಚಪಾತಿ, ಚಾ, ಕುಡಿದು ಶಂಕರ ಬೀಡಿಸೇದುತ್ತಹಾಸಿಗೆಯ ಮೇಲೆ ಕೂತುಕೊಂಡನು. ಶಂಕರ ನಗುತ್ತ-ಮಾಲು, ಈ ಹೊತ್ತು ರಾತ್ರೆಯೂ ನಾವು ಕಮಲಾ ಬಾಯಿ ಮನೆಗೆ ಹೋಗಬೇಕು. ಅವರು ಊಟಕ್ಕೆ ಕರೆದಿರುವರು".

ಮಾಲಿನಿ. ನಾನು ಅಲ್ಲಿಗೆ ಇನ್ನು ಮುಂದೆ ಕಾಲಿಡಲಾರೆ, ಛೀ: ಹೇಸಿಗೆ, ನಾಚಿಕೆ. ದಯವಿಟ್ಟು ನನಗೆ ಒತ್ತಾಯಪಡಿಸಕೂಡದು:

ಶಂಕರ—"ಮಾಲು. ನಾನು ಹೇಳಿದ್ದನ್ನು ಕೇಳಲೇಬೇಕು. ನಿನ್ನನ್ನು ನಾನು 5000ರೂಪ್ಯಾ ನಿನ್ನ ತಂದೆಗೆ ಒಪ್ಪಿಸಿ, ಮದುವೆಯ ಶಾಸ್ತ್ರ ಮಾಡಿ

ತಂದಿರುವೆನು. ಗೊತ್ತೇ?" ಎಂದು ಸಿಟ್ಟಿನಿಂದ ಹೇಳಿದನು. ಮಾಲಿನಿ-
"ಏನು, ನನ್ನ ಅಪ್ಪ ನನ್ನನ್ನು ಮಾರಿದರೆ? ಎಷ್ಟಕ್ಕೆ ಮಾರಿದರು?"

ಐದು ಸಾವಿರ ರೊಕ್ಕ. ಅವರಾಗಿ ಕೇಳಿಕೊಂಡು ನನ್ನನ್ನು ಮಗಳಿಗೆ ಮದುವೆಯಾದರೆ ನಮ್ಮ ಮೇಲೆ ಉಪಕಾರವಾದೀತೆಂದರು. ತಿಳಿಯಿತೇ?

ಮಾಲಿನಿಗೆ ಇದನ್ನೆಲ್ಲಾ ಕೇಳಿ ತಾನು ಈ ಜಗತ್ತಿನಲ್ಲಿದ್ದುದರಿಂದ ಯಾರಿಗೂ ಏನು ಉಪಯೋಗವಿಲ್ಲ. ಕಮಲಾಬ್ಯಾ ಪರಿಗಡಕ್ಕೆ ಸೇರುವುದಕ್ಕಿಂತ ಸತ್ತರೆ? ರಾತ್ರೆ ಎಲ್ಲರೂ ನಿದ್ರೆ ಹೋದಾಗ, ಮಾಲಿನಿ ಮೈಮೇಲೆ ಘಾಸಲೇಟು ಹಾಕಿಕೊಂಡು ಬೆಂಕಿಕಡ್ಡಿ ಹಚ್ಚಿಕೊಂಡಳು.

"ತನ್ನ ಸಾವಿಗೆ ಯಾರೂ ಹೊಣೆಯಲ್ಲ"ವೆಂದು ಬರೆದಿಟ್ಟಿದ್ದಳು.

— — —

# ಹಸಿವು

—ಗೀತಾ ಕುಲಕರ್ಣಿ

ನಾನು ಸೊಂಟಕ್ಕೆ ಸೆರಗು ಕಟ್ಟಿ ಕೋಳಿಗೂಡಿಸ ಬಾಗಿಲು ತೆರೆದು ದೊಂದು ಗೊತ್ತವಳಿಗೆ. ಅವಳ ಕಣ್ಣು ಮೂಗು ನೋಡದೆ ಒಳಗಿದ್ದ ಕೋಳಿಗಳ ಹಿಂಡು ರೆಕ್ಕೆ ಚಿಚ್ಚಿ ಬರ್ರ್ ಬರ್ರ್ ಸದ್ದು ಮಾಡಿ ಹೊರಗಿನ ಅಂಗಳಕ್ಕೆ ದಾಳಿ ಇಟ್ಟಾಗ ತನ್ನ ಕಣ್ಣು ತುಂಬಿದ್ದ ಮಣ್ಣು ಅವರ ರೆಕ್ಕೆ ಬಡಿದು ಕೆದರಿಕೊಂಡ ಕ್ಷೂದಲನ್ನು ಎರಡೂ ಕೈಗಳಿಂದ ಬಾಚಿ ತಬ್ಬಿ ನಿಂತ ಅವಳಿಗೆ ಎಲ್ಲಿಲ್ಲದ ಸಿಟ್ಟು ಉಕ್ಕುತ್ತದೆ. "ಥೂ ಹಾಳು ದರಿದ್ರ ಮುಂಡೇದು ಒಂದು ನಿಮಿಷ ಪುರುಸೊತ್ತು ಕೊಡದೆ ಮೈಯಲ್ಲಿ ಭೂತ ಹೊಕ್ಕಂತೆ ಹೊರಕ್ಕೆ ಹಾರ್ತದೆ. ಈಗಷ್ಟೆ ಭತ್ತ-ಅಕ್ಕಿ ಹಾಕಿದ್ದೂ ಆಗಲೇ ಮಟಾಮಾಯ! ಎಂಥ ಹೊಟ್ಟೆಯೋ-ಇನ್ನೂ ಹಸಿವೆ ತೀರಿಲ್ಲಾ ಅಂದ್ರೆ ಮುಸುರೆ, ಹುಳಹುಪ್ಪಡಿ ಇದೆಯಲ್ಲ? ರಾತ್ರಿ ಕಣ್ಣು ಕೂರೋವರೆಗೂ ನೆಲ ಕುಕ್ಕತ್ಲೇ ಇರಬೇಕು! ಜಾತಿನೇ ಅಂಥದ್ದೂ! ಅವಳ ಸಿಟ್ಟಿಗೆ ಇನ್ನೊಂದು ಕಾರಣ. ಅವಳು ಬೆಳಗಿನ ಆ ಛಳಿಯಲ್ಲೂ ಎದ್ದು ತಲೆಗೆ ತಾಗುವ ತಗಡಿನ ಮಾಡಿನ ಕೆಳಗೆ ಬಗ್ಗಿ ಒಡಕು ಕನ್ನಡಿಯಲ್ಲಿ ಈ ಕೆದರಿದ ಕೂದಲನ್ನು ಒಪ್ಪ ವಾಗಿ ಬಾಚಿಕೊಳ್ಳೊದಕ್ಕೆ ಒಂದು ಗಂಟೆ ಹಿಡಿದಿತ್ತು. ಹಣೆಗೆ ಹಳತ್ತಾಗಿ ಅವರ ಹಲ್ಲುಗಳು ಅಲ್ಲಲ್ಲಿ ಹೊಗಿ ಮುದುಕಿಯ ಬಾಯಂತೆ ತೆರೆದ ಬಾಯಾಗಿತ್ತು. ಹೇಗೋ ಅದರಲ್ಲೇ ಬಾಚಿ ತೃಪ್ತಿ ಪಟ್ಟುಕೊಳ್ಳಬೇಕೆಂದರೆ ಹಸಿಯ ಕಟ್ಟಿಗೆಯ ಒಲೆ ಊದಿ ಹಣೆಗೆ ಕೈಗೆತ್ತಿಕೊಳ್ಳುವಂತೆ ಸನ್ನಿ ಹಿಡಿದ ಹೆಣ್ಣಿನಂತೆ ಉರಿ ನಿಂತು ಭುಸ್ಸ್ ಎಂದು ಹೊಗೆ ಕಾರಿತ್ತು. ಹಸಿ ಹಾಳು ಕಟ್ಟಿಗೆ! ಊದಿ ಊದಿ ಕೆಂಪಾದ ಕಣ್ಣು ತಿಕ್ಕಿ ಎಣ್ಣೆ ಕಾಣದ ಬಿರುಸು

ಕೂದಲನ್ನು ಬಾಚಿ ಕಟ್ಟಿ ಹೊರಟು ನಿಂತಾಗ ಅವಳಜ್ಜಿ "ಈಗ ಪುಡಿ ಹಾಕಿ ಇಳಿಸಿದ್ದೇನೆ. ಒಂದಿಷ್ಟು ಕುಡಿದು ಹೋಗು, ಗಂಟ್ಲು ಬೆಚ್ಚಗಾಗುತ್ತದೆ ನಾಗೂ ಎಂದಿದ್ದಳು. ಆದ್ರೇ ನಾಗೂವಿಗೂ ಚಾ ಸೊಪ್ಪು ನೀರಿಗೆ ತೋರಿಸಿದ ಶಾಸ್ತ್ರ ಮಾಡಿದ ಬೆಲ್ಲದ ಹೊಗೆ ಹಿಡಿದ ನೀರು ಕುಡಿದು ಹೋಗೋದಕ್ಕಿಂತ ಸಾಹೇಬರ ಮನೆಯ ಬಿಸಿ ಬಿಸಿ ಚಹದ ನೆನಪು ಅಲ್ಲಿಗೆ ಓಡಿ ಹೋಗುವಂತೆ ಮಾಡುತ್ತದೆ. "ನೀನೇ ಕುಡಿಯಜ್ಜಿ, ನಂಗೆ ಅಲ್ಲಿ ಕೊಡ್ತಾರಲ್ಲ!" ಎಂದಾಗ ಅಜ್ಜಿಗೂ ಸಮಾಧಾನವೇ ಇದೇ ಚಹಾದ ನೀರು ಅಜ್ಜಿಯ ಪಾಲಿಗೆ ಅಮೃತ. ತನ್ನ ಪಾಲಿನ ಜೊತೆಗೆ ಮೊಮ್ಮಗಳದೂ ಸೇರಿ ಇನ್ನೊಮ್ಮೆ ಕುಡಿಯಲು ಸಿಗುತ್ತದೆ. ಗಂಟಲು ಬಿಸಿಯಾದರೆ ಸಾಕು ಎಂದಜ್ಜಿಗೆ.

ನಾಗೂ ಗೂಡನ್ನು ಗುಡಿಸಿ ಕಸಬರಿಕೆ ಅಲ್ಲೇ ಮೂಲೆ ಸೇರಿಸಿ ತನ್ನ ಅಧ್ಯಕ್ಷಪಟ್ಟಕ್ಕೆ ಮುಸುರೆಪಾತ್ರೆತಂದಿಟ್ಟು ಕಿಟಕಿಯ ಸರಳುಗಳ ನಡುವಿನಿಂದ ಇಣಕಿ ನೋಡುತ್ತಾಳೆ. ಗ್ಯಾಸಿನ ನೀಲಿ ನಾಲಗೆ ಕಾಣುತ್ತದೆ. ಮೂಗಿಗೆ ತಿಂಡಿ ಪರಿಮಳ ತಟ್ಟುತ್ತದೆ. ತನ್ನ ಚಹಾದ ಲೋಟ ಮೊದಲೇ ತಿಕ್ಕಿ ಇನ್ನೇನು ತೊಳೆಯಬೇಕು ಎನ್ನುತ್ತಿದ್ದಾಗಲೇ ಒಳಗಿನಿಂದ ಅಡಿಗೆಯ ಶೀನ "ನಾಗೂ" ಎನ್ನುತ್ತಾನೆ.

ನಾಗೂ ಕಾಯೋದೂ ಇದನ್ನೇ. ಕೈತೊಳೆದು ಲೋಟ ಹಿಡಿದು ಅಡಿಗೆ ಕೋಣೆಯ ಬಾಗಿಲ ಒಳಗೆ ಅದನ್ನಿಟ್ಟು "ತಂದಿದ್ದೇನೆ...ಹಾಕಿಬಿಡಿ, ಛಳಿಯಲ್ಲಿ ಮೈ ಕೊರಡಾಗಿದೆ ಬಿಸಿ ಬಿಸಿ ಚಹಾ ಕುಡಿದ್ರೆ ಒಂದಿಷ್ಟು ಕಾವು ಏರುತ್ತದೆ" ಚಹಾ ತುಂಬಿದ ಲೋಟ ನಗುತ್ತಲೇ, ಕೈಗೆತ್ತಿ ನಾಗೂ ಮೆಲ್ಲನೆ ಕೇಳ್ತಾಳೆ "ಅಮ್ಮಾವರು ಇನ್ನೂ ಎದ್ದಿಲ್ವಾ?" ಶೀನ ಪ್ರಶ್ನೇ ತಟಸ್ಥನಾಗಿ "ಏನು ಇವೊತ್ತೆ ಬಂದ ಬಿನ್ನಾಣಗಿತ್ತಿಯ ಹಾಗೆ ಕೇಳ್ತಿಯಲ್ಲಾ? ನಿನ್ನ ಅಮ್ಮಾವರು ಒಂಭತ್ತು ಗಂಟೆಯ ಮೊದಲು ಎದ್ದದ್ದು ನೀನು ಕಂಡ ಪ್ಟಾಂಟಾ? ಇಲ್ಲಿ ನಾನು?" "ಈ ಮಾತು ನಾಗೂಗು ಗೊತ್ತು. ಅವಳು ಕುಡಿಯೋ ಮೊದಲು ಮಾಮೂಲು ಕೇಳುವ ಮಾತಷ್ಟೇ! "ಇಲ್ಲೆ ಕೂತು

ಕುಡಿಯಬಾರದಾ?" ಎಂದು ಶೀನಪ್ಪ ಹೇಳಿದ್ರೂ ನಾಗೂಗೆ ತಾನು ಒಗೆ ಯುವ ಎತ್ತರದ ಕಲ್ಲಲ್ಲಿ ಕೂತು ಮುಸುರೆ ಕುಕ್ಕಿ ತಿನ್ನುವ ಹುಂಜ ಹೇಂಟೆ ಗಳ ದಂಡು ನೋಡುತ್ತ ಉಗಿಯಾಡುವ ಚಹಾವನ್ನು ಸುರ್ ಸುರ್ ಚೀಪಿ ಸದ್ದು ಮಾಡಿ ಕುಡಿದಾಗಲೇ ಅವಳಿಗೆ ತೃಪ್ತಿ.

"ನಾಗೂ ಪಾತ್ರೆ ಬೇಕಲ್ಲ? ನೀನು ಇಷ್ಟು ನಿಧಾನ ಕುಡಿದ್ರೆ ನಾಳೆ ಮುಸುರೆಗೆ ಇನ್ನೊಬ್ಬನ ಕರೆತರ್ತೇನೆ ನೋಡು ಕೆಲಸದವರಿಗೇನು ಬರ ಗಾಲ?" ಶೀನಪ್ಪ ಕಿಟಕಿಯ ಸರಳುಗಳ ನಡುವೆ ಕರಿಯ ಕೋಲು ಮುಖ ಸಿಕ್ಕಿಸಿಕೊಂಡು ಕಿಸ್ಸಕ್ಕನ ನಗುತ್ತ ಹೇಳುತ್ತಾನೆ. ನಾಗೂ ಕುಡಿಯುವುದರಲ್ಲಿ ಒಂದಿಷ್ಟೂ ಅವಸರ ತೋರಿಸೋದಿಲ್ಲ. ಆ ಸದ್ದಿನಲ್ಲಿ ಚಹಾದ ಲೋಟ ಖಾಲಿಯಾಗುತ್ತದೆ. ಕೆಳಗಿಟ್ಟ ಅವಳು "ಕರೆದುಕೊಂಡು ಬನ್ನಿ, ನಿಮ್ಮ ಮುಖ ನೋಡಿ ಯಾರು ಬರ್‍ತಾರೆ ಕೆಲಸಕ್ಕೆ ಇಲ್ಲಿ? ನಿಮ್ಮ ಕಿರಿಕಿರಿಗೆ ನಾನೆಂತ ಬಗ್ಗಿದ್ದೂ ಬಾಯಿ ಚಪಲ ಒಂದೆ ಉಂಟಲ್ಲ...ನಿಮ್ಮ ಮುಖ ಹೀಗಿದ್ದೂ ನನ್ನ ಹೊಟ್ಟೆಗೇನೂ ಕಮ್ಮಿ ಮಾಡಿಲ್ಲ. ಅದಕ್ಕೇ ಬಾಯಿ ಮುಚ್ಚಿ ಕೆಲ್ಸ ಮಾಡ್ತೇನೆ".

ಶೀನಪ್ಪ ಇಷ್ಟು ಕೇಳುತ್ತ ನಿಂತಾಗ ಗ್ಯಾಸಿನಲ್ಲಿ ಇಟ್ಟ ಹಾಲು ಉಕ್ಕಿ ಕಮರು ವಾಸನೆಗೆ ನಾಗೂ ಎಚ್ಚರಗೊಳ್ಳುತ್ತಾಳೆ "ಹಾಲು ಉಕ್ಕಿತೇನೋ? ನೀವು ಹಾಲು ಉಕ್ಕಿಸೋದು ಅಮ್ಮನವರಿಗೆ ಗೊತ್ತಾದ್ರೆ"--ಶೀನಪ್ಪನಿಗೆ ಇದು ದಡಬ್ಬ ಬಿದ್ದ ಮಾತು. ಚಟ್ಟನೆ ಗ್ಯಾಸ್ ನಂದಿಸಿ ಮಸಿಬಟ್ಟೆಯಲ್ಲಿ ಬಿದ್ದ ಹಾಲು ಒರಸಿ ಪಂಚೆಯಿಂದ ಸ್ಟೀಲಿನ ಪಾತ್ರೆಯ ಹೊರಗೆ ಇಳಿದು ಬಂದಿದ್ದ ದಪ್ಪ ಹಾಲಿನ ಕೆನೆಯನ್ನು ಒರಸಿ ಒಂದಿಷ್ಟು ಕೆನೆ ನೆಕ್ಕಿ ಮತ್ತೆ ಬಂದು ಕಿಟಕಿಯ ಸರಳಲ್ಲಿ ಮುಖವಿಟ್ಟಾಗ ನಾಗೂಗ ಬೇಸರ "ಹಾಲು ಉಕ್ಕಿಸಿ ಬಿಟ್ರಿ...ದಪ್ಪ ಕೆಸರಿನಂಥ ಹಾಲು! ನಿಮ್ಗೆ ಸ್ವಲ್ಪಾನೂ ಬೇಸರಿಲ್ಲ. ಆಚೆ ಮನೇಲಿ ಮಗಳು ಹಾಲು ಒಂದ್ಸಾರಿ ಉಕ್ಕಿಸಿದ್ದಕ್ಕೆ ಅವರಮ್ಮ ನನ್ನೆದುರೇ ಬೆನ್ನು ಪುಡಿ ಯಾಗೋ ಹಾಗೆ ಗುದ್ದಿದ್ರು. ಅವರಿಗೆ ಮಗಳೂ ಎಂದ್ರೆ ಪಂಚಪ್ರಾಣ. ಆದ್ರೆ ಹಾಲು ಉಕ್ಕಿಸಿದ್ದಕ್ಕೆ ಮಗಳೂ ಅಂತ ಬಿಡ್ಲಿಲ್ಲ.

ಶೀನಪ್ಪ ಆಗಲೇ ಎಲೆ ಅಡಿಕೆ ಬಾಯಿ ತುಂಬಿಸಿ, ಪಿಚಿಕ್ ! ಎಂದು ಉಗುಳಿ "ಅಂದ ಹಾಗೆ ನಿನ್ಗೆ ಮದುವೆ ಇಲ್ವಾ ? ಹೀಗೆ ಮುಸುರೇ ತಿಕ್ಕೊಂಡೇ ಇರ್ತಿಯೋ? ಅಜ್ಜಿನ್ನ ಕೇಳು ನಾನು ಬೇಕಾದ್ರೆ ನಿನ್ನ"

ನಗೂಗೆ ಬೂದಿ ಕೈಯಿಂದಲೇ ಈ ಶೀನಪ್ಪನ ಮುಖಕ್ಕೆ ಎರಡೇಟು ಕೊಟ್ರೆ ಹೇಗೆ ಎಂದು ಕಾಣುತ್ತದೆ, "ಕಂತ್ರಿ ನಾಯಿ ಹಾಗೆ—ಪೇಟೆ ಯಲಿ ತರಕಾರಿ ತರೋದಕ್ಕೆ ಹೋದಾಗ ಚೀಲ ಕೈಯಲ್ಲಿ ತಿರುಗಿಸಿ, ಕಂಡ ಹೆಂಗಸರ ಬೆನ್ನು ಹಿಂದೆ ತಿರುಗುತ್ತ ಅಚೆ ಈಚೆ ಕೈತಾಗಿಸಿ. ಅವರು ಕಣ್ಣರಳಿಸಿ ನೋಡಿದಾಗ–ಕಣ್ಣು ಕೆಳಕ್ಕೆ ಹಾಕಿ, ಮೆಲ್ಲನೆ ಜಾರಿ, ತರಕಾರಿ ತಕ್ಕೊಂಡು ಹೋಗುವುದನ್ನೂ ಅವಳು ಎಷ್ಟೋ ಸಾರಿ ಕಂಡಿದ್ದಾಳೆ, ಊರಲ್ಲಿ ಹೆಂಡ್ತಿ. ಮಕ್ಕಳು ಇದ್ದಾರಂತೆ. ಇಲ್ಲಿಗೆ ಬಂದ ಶೀನಪ್ಪ ಮತ್ತೆ ಊರಿಗೆ ಹೋದವನೂ ಅಲ್ಲ. ಹೋಗಬೇಕೆಂತಲೂ ಇಲ್ಲ ಮತ್ತೆ. ಈ ಮನೆಯಲ್ಲಿ ಇವನದೇ ಯಜಮಾನಿಕೆ. ಅಂದ ಮೇಲೆ ಊಟಕ್ಕೆ ಬಟ್ಟೆಗೆ ತಾಪತ್ರಯ ಎಲ್ಲಿ? ಬಾಯಿ ಸಾಹೇಬರಿಗೆ ಶೀನಪ್ಪ ಬಲಗೈ ಬಂಟ. ಅಡಿಗೆಯಿಂದ ಹಿಡಿದು ಮನೆಯ ಜವಾಬ್ದಾರಿ, ಕಾಯಿಲೆಯಿಂದ ಮಲಗಿದ್ದ ಸಾಹೇಬರ ಆರೈಕೆಗೂ ಅವನೇ. ಇಂಥ ಕೆಲಸದ ಜನ ಬೇರೆ ಯಾರು ಸಿಗ ತ್ತಾರೆ? ಇದೆ ಟ್ರಂಪ್ ಕಾರ್ಡು ಚಲಾಯಿಸಿ ಶೀನಪ್ಪ ತನ್ನ ಸ್ಥಾನ ಈ ಮನೆಯಲ್ಲಿ ಭದ್ರಪಡಿಸಿದ್ದೊ ನಾಗೂಗೂ ಗೊತ್ತು. ಹಾಲು ಉಕ್ಕಿ ದ್ದೇನು? ಅಕ್ಕಿ ಮುಗಿದು ಹೋದ್ರೇನು? ಯಾವುದಕ್ಕೂ ಬಾಯಿ ಸಾಹೇಬ್ರು "ಇದ್ಯಾಕೆ ಹೀಗೆ" ಎಂದು ಕೇಳಿದ್ದೂ ನಾಗೂನ ಕಿವಿಗೆ ಬಿದ್ದಿಲ್ಲ. ಅವ ನಿಟ್ಟಷ್ಟು ಅವನು ಬಿಟ್ಟದ್ದು ಈ ಮನೆಯಲ್ಲಿ! ಮನೆಗೆಂದು ತರುವ ಸಾಮಾ ನಿನ ನಾಲ್ಕರ ಒಂದು ಭಾಗ ಶೀನಪ್ಪನ ಆ ಒಂದು ಮನೆಗೆ ಆಗಾಗ ಸಾಗೋದನ್ನೂ ನಾಗೂ ಕಣ್ಣಿಂದ ಕಂಡಿದ್ದಾಳೆ. ಆದರೆ ಅದನ್ನು ಯಾರಲ್ಲಿ ಹೇಳಬೇಕು? ಅವಳೆದುರು ಕುಕ್ಕುವ ಕೋಳಿಗೆ ಎಂಜಲಿಗಾಗಿ ಓಡಾಡುವ ನಾಯಿಗೆ ಬೈದು ಸಿಟ್ಟನ್ನೂ ತೀರಿಸಿಕೊಳ್ಳುತ್ತಾಳಷ್ಟೇ. ಶೀನಪ್ಪ ಕೇಳಿದ ಮಾತಿಗೆ ಕೋಪ ಬಂದು ನಾಗೂ ಪಾತ್ರೆ ಕುಕ್ಕಿ "ಒಳ್ಳೆ ಕಾಮಣ್ಣ ನೀವು! ಆದ್ರೆ ನಿಮ್ಮನ್ನೇ ಮದುವೆ ಆಗ್ಬೇಕು ಶೀನಪ್ಪ. ಒಳ್ಳೇ ದಿನ ನೋಡಿ

ಬರ್ತೇನೆ. ಅಜ್ಜಿಗೂ ಹೇಳ್ತೇನೆ, ಗಡದ್ದಾಗಿ ನಮ್ಮ ನಮ್ಮ ಮದುವೆ ಮಾಡಿ ಬಿಡು ಅಂತಾ. ಆ ಯಿತಲ್ಲ?"

ಶೀನಪ್ಪನಿಗೊ ಇಷ್ಟು ಮಾತಿಸಲ್ಲಾದರೂ ನಾಗೂ ತನ್ನೊಂದಿಗೆ ಮದುವೆ ವಿಷಯ ಆಡಿದಳಲ್ಲಾ ಎಂದು ಸಂತೋಷವಾಗಿರಬೇಕು. ಅವನು ಹಸಿದ ನಾಯಿಯ ಹಾಗೆ ಜೊಲ್ಲು ಸುರಿಸಿ ಅವಳ ಮೈಯಲ್ಲೆಲ್ಲ ಕಣ್ಣೋಡಿಸುತ್ತಾನೆ. ಬತ್ತಲೆ ಬತ್ತಲೆ ಬತ್ತಲೆ ಮೈಯ ಬಹುಭಾಗ ಕಂಡಂತಾಗಿ ಕಿಟಕಿ ಸರಳು ಬಿಟ್ಟು ಬಾಗಿಲ ಮೆಟ್ಟಲು ಇಳಿದು ಅವರು ಮುಸುರೆ ತಿಕ್ಕುವಲ್ಲಿ ಬಂದು ತೀರ ಹತ್ತಿರ ಬಾಗಿ "ನಾಗೂ ನಿಜ ಹೇಳಲಾ...ನೀನು ಇದನ್ನು ತಿಕ್ಕೋದು ಬಿಡು. ಒಂದು ಕೋಣೆ ಮಾಡಿ ಕೊಡ್ತೇನೆ. ಅಜ್ಜಿನೂ ಬರಲಿ. ನಿಮ್ಮಿಬ್ರು ಭಾರ ನಾನೇ ಹೊರ್ತೇನೆ—ಬಾ ಕೈ ತೊಳಿ ತಿಂಡಿ ತಿನ್ನೋ . ಈಗ ಬೇಕಾದ್ರೆ ಸ್ವಲ್ಪ ರೂಪಾಯಿನೂ ಕೊಡ್ತೇನೆ." ನಾಗೂಗೆ ಭಯವಾಗುತ್ತದೆ. ಈ ಚಂಡಾಲ ಇಷ್ಟು ದೂರಕ್ಕೆ ಬಂದದ್ದೂ ಅವಳಿಗೆ ಹೆದರಿಕೆಯೇ, ಅವಳ ಕೈ ತಡವರಿಸುತ್ತದೆ. ಅವನು ತನ್ನನ್ನು ಕರೆಯೋದು ಯಾಕೆ ಅಂತ ಗೊತ್ತಿಲ್ವೆ? ಇಂಥ ಎಷ್ಟೋ ಕರೆಗಳಿಗೆ ಬೇಕಾಗಿಯೋ—ಬೇಡವಾಗಿಯೋ ಓಗೊಟ್ಟಿದ್ದಾಳೆ! ಹೊಟ್ಟೆಯ ಹಸಿವೆಗೆ ಇದರಲ್ಲಿ ಹೆಚ್ಚಿನ ಪಾಲು ಸಂದಿದೆ. ಆದ್ರೆ ಶೀನಪ್ಪನ ಮುಖ, ಉಬ್ಬಿದ ಹಲ್ಲು ಅಲ್ಲಿಂದ ಹೊರಡುವ ದುರ್ಗಂಧ ವಾಸನೆ ಅವಳಿಗೆ ಓಕರಿಕೆ ತರುತ್ತದೆ.

"ಹೋಗಿಯಪ್ಪ...ನೀವು ನನ್ನಪ್ಪನ ಪ್ರಾಯದೋರು:—ಹಾಸ್ಯಕ್ಕೂ ಒಂದು ಮಿತಿ ಬೇಕಲ್ಲ. ನಿಮಗೆ ಇದ್ದಾಳಲ್ಲ ಆ ನರಸಮ್ಮ—ಆ ಮುದುಕಿ ನಿಮಗೆ ಸರಿಜೋಡಿ...ನೀವು ಹೀಗೆ ಮಾಡೋದು ನೋಡಿದ್ರೆ ನಿಮ್ಮನ್ನ ಹಿಡಿದು—" ಶೀನಪ್ಪಗೆ ನಾಗೂನ ಕುತ್ತಿಗೆ ಹಿಚುಕುವಂತಾಗುತ್ತದೆ. ಹೊಟ್ಟೆಗೆ ಹಿಟ್ಟಿಲ್ಲವಾದರೂ ಕಣ್ಣೆದುರು ಕಾಮಣ್ಣ ಬೇಕಂತೆ! ಹಸಿವೆಗೆ ಏನಾದ್ರೂ ಸಿಕ್ರೆ ಸಾಕೂ ಎಂತ ಹಿಂದೆ ಕೆಲಸಕ್ಕಿದ್ದ ಪಾರೂ, ತಾನು ಬೇಡವೆಂದು ಮುಖ ತಿರುಗಿಸಿದ್ದೂ, ತನ್ನ ಬೆನ್ನ ಹಿಂದೆ ತಿರುಗಿ, ಮನಸ್ಸು ಒಲಿಸಿ ನಾಯಿ ಹಾಗೆ ನನ್ನೊತ್ತೆಯಲ್ಲಿ ಇದ್ದದ್ದು ಕೊಟ್ಟು ಎಂಟಾಣೆಯೊ—ಒಂದು ರೂಪಾಯಿಗ ಕೈಗೆ ಬಿದ್ದ ಕೂಡಲೇ ಅದನ್ನ ಹಣೆಗೊತ್ತಿ ತನ್ನ

ಕಾಲು ಹಿಡಿದು "ಬಡವಿನ್ನ ಉದ್ಧಾರ ಮಾಡಿದ್ರಿ" ಎನ್ನುತ್ತಿದ್ದಳು. ಆದರೆ—ಈ ದರಿದ್ರ ಕರಿ ಹುಡುಗಿಗೆ ಎಂಥ ಧೀಮಾಕು? ಎಂದುಕೊಂಡ ಶೀನಪ್ಪ. ಒಳಗಿನಿಂದ ಬಾಯಿ ಸಾಹೇಬ್ರು "ಶೀನಪ್ಪಾ ಎಲ್ಲಿದ್ದೀಯಾ?" ಎಂದಾಗ "ಫ ನಾಗೂ...ಎಷ್ಟು ಕೇಳಬೇಕು? ಕಿವಿ ಕೇಳೋದಿಲ್ವೆ? ಆವಾಗಿ ನಿಂದಾ ಆ ಸ್ಟೀಲಿನ ಪಾತ್ರೆ ಕೊಡು ಅಂದ್ರೆ ಲೋಟ ತಿಕ್ಕುತ್ತಾ ಕೂತಿದ್ದಿ ಯಲ್ಲ? ಬಾಯಿ ಸಾಹೇಬರ ಕಿವಿಗೆ ಈ ಮಾತು ಢಣ್ ಎಂದು ಗಂಟೆ ಬಡಿದ ಹಾಗ ಕೇಳಲೆಂದೇ ಶೀನಪ್ಪ ಕಿರುಚಿಕೊಂಡು ಗಡಿಬಿಡಿಯಲ್ಲಿ ಪಂಚೆಯ ಜುಂಗು ಸೊಂಟಕ್ಕೆ ಸಿಕ್ಕಿಸಿ ಒಳಕ್ಕೆ ಧಾವಿಸಿದ್ದರೆ, ನಾಗೂ ಓರೆ ಗಣ್ಣಲ್ಲಿ ಮತ್ತೆ ಕಿಟಕಿಯ ಸರಳುಗಳಲ್ಲಿ ಕಣ್ಣೋಡಿಸುತ್ತಾಳೆ.

ಯಜಮಾನತಿಯ ತೋಳಿಲ್ಲದ ರವಕೆ, ಕುತ್ತಿಗೆಯಿಂದ ತೀರ ಕೆಳಕ್ಕಿಳಿದ ಬ್ಲೌವುಜಿನ ಕೊರಳು! ಕಣಿವಿಯ ಆಚೆ—ಈಚೆ ಉಬ್ಬಿನಿಂದ ಪರ್ವತದಂಥ ಮಾಂಸ ಖಂಡಗಳು! ಆವ್ಹಾನಕ್ಕೆ ನಿಂತುದನ್ನೊ ಆಸೆಬುರುಕ ಕಣ್ಣಿನ ಶೀನಪ್ಪ ಜೊಲ್ಲು ಸುರಿಸುತ್ತ ಬೊಕೆರ್ನ್‌ವೀಟಾದ ಗ್ಲಾಸು ಕೈಗಿತ್ತು ಹ್ಹಿಹ್ಹಿಹ್ಹಿ ಎಂದು ನಕ್ಕು "ಅಡಿಗೆ ಏನು ಮಾಡಲಿ?" ಎಂದು ಕೇಳುತ್ತಿ ರೋದು ಕಿವಿಗೆ ಕೇಳುತ್ತಿದ್ದಂತೆ ಕಣ್ಣೂ ನೋಡುತ್ತದೆ.

ಪಾತ್ರೆಯಲ್ಲಿ ಉಳಿದಿದ್ದ ಅನ್ನದ ಅಗಳುಗಳನ್ನು ಕುಕ್ಕಿ ತಿನ್ನುವ ಹೇಟೆ ಗಳು ಒಂದೇ ಬಾರಿಗೆ ತಲೆ ಎತ್ತಿ ದನಿ ಬಂದತ್ತ ಓಡುತ್ತದೆ. ಕುಕ್ಕುಟ ರಾಯ ಕಾಲಲ್ಲಿ ನೆಲ ಕೆದಕಿ ಆಹಾರ ಹುಡುಕಿ ಕರೆಯುತ್ತಿದ್ದಾನೆ! "ಕೊಕ್ಕೊಕ್ಕೊ—ಕ್ಕೊ" ಜಂಭದ ಜುಟ್ಟು ಅಲ್ಲಾಡುತ್ತದೆ ಕಾಲಲ್ಲಿ ನರ್ತನ ಹ ಜ್ಜೆಗ ಮರುಳಾಗಿ ಸುತ್ತು ಓಡಾಡುವ ಹೇಟೆಗಳು ಚಿಳ್ಳಾಪಿಳ್ಳಿ ಮರಿಗಳು!

ನಾಗೂಗೆ ನಗು ಚಿಮ್ಮಿ ಬರುತ್ತದೆ. ಈ ಹುಂಜ ಆಹಾರ ಕೊಡ್ತೇನೆ ಎಂದು ಕರೆದದ್ದೂ ಯಾಕೆಂದು ಗೊತ್ತು, ಅದಕ್ಕೆ ಅವಳಿಗೆ ನಗು ಬಂದದ್ದು. ಹೇಟೆಗಳಿಗೆ ತಿಳಿದಿಲ್ಲವೇ ಆಹಾರದ ಗುಟ್ಟು? ಒಂದು

ಹುಂಜದ ಪ್ರೀತಿಯಾಚಿಸಿ ಹೇಟೆಗಳು ತಾವೇ ಅದರ ಎದುರು ಕತ್ತು ತಗ್ಗಿಸಿ ನಿಲ್ಲುತ್ತದೆ. ಈ ಬಾಗಿ ಹುಂಜದ ಕೃಪಾದೃಷ್ಟಿ ಯಾವ ಹೇಟೆಗೊ? ಹುಂಜ ಕಾಲ ಬಳಿಯ ಮಣ್ಣು ಕೆದಕಿ ಹುಳ-ಹುಪ್ಪುಡಿಯನ್ನು ಎಳೆದು ಕೊಕ್ಕೊಕ್ಕೊಕ್ಕೋ ಎಂದಿತು.

ನಾಗೂಗೆ ಮತ್ತೆ ಹಳೆಯ ನೆನಪೊಂದು ಕಣ್ಣೆದುರು ಸುಳಿದು ಹೋಯಿತು. ಹೊಟ್ಟೆ ಹಸಿದು ಅತ್ತು ಮಲಗಿದ ಮೊದಲ ದಿನ ಅಜ್ಜಿ ಮಡಿಕೆಯಲ್ಲಿ ಉಳಿದಿದ್ದ ತಂಗಳನ್ನ ತಂದು ತಿನಿಸಿ, "ಬಡವರಿಗೆ ಹಸಿವೆ ಯಾದ್ರೆ ಯಾರು ತಂದು ಕೊಡ್ತಾರೆ? ಅವರೇ ಹಸಿವೆಗೆ ದಾರಿ ಹುಡುಕ ಬೇಕು. ಹೊಟ್ಟೆ ಬಹಳ ಕೆಟ್ಟದು ನಾಗೂ, ಬೇಟೆ ಆಡಿದ್ರೆ ಪ್ರಾಣಿಗಳ ಹಸಿವೆ ಚೀಲ ತುಂಬುತ್ತದೆ. ಅದಕ್ಕೆ ಬಾಯಿಲ್ಲ—ನಾವೂ ಅಷ್ಟೆ ಬಾಯಿದ್ದ ಪ್ರಾಣಿಗಳು. ನಿನ್ನೆ ಬಂದಿದ್ದನಲ್ಲ ಇಮಾಮಸಾಬ, ಸಂಜೆ ಊಟ ತರ್ತೇನೆ ಅಂದಿದ್ದ. ನೀನು ಅವನನ್ನು ಕಂಡು ಕ್ಯಾಕರಿಸಿ ಉಗುಳಿಬಿಟ್ಟೆ. ಏನು ಮಾಡಲಿ ಹೇಳು? ಉಪವಾಸ ಇದ್ದ ನಿನ್ನನ್ನು ಕಂಡ್ರೆ ನನ್ನ ಹೊಟ್ಟೆ ಯಲ್ಲಿ ಸಂಕಟ ನಾಗೂ...ನಾನು ಮುದುಕಿ...ಈ ತುಂಡು ನೆಲ ನನಗಿ ದ್ದದ್ದೂ....ಇದರಲ್ಲಿ ನೀನು ಬದುಕಬಹುದು. ಆದ್ರೆ ಹೊಟ್ಟೆಗೆ ಎಲ್ಲಿಂದ ತರಲಿ ಮಗಾ?" "ಅಜ್ಜಿ ನಾಲ್ಕು ಮನೆ ಮುಸುರೆ ತಿಕ್ಕುತ್ತೇನೆ. ನಿನ್ನೂ ನಾನೇ ನೋಡಿಕೊಳ್ತೇನೆ" ಎಂದಿದ್ದ ನೆನಪು. ಆದ್ರೆ ನಾಲ್ಕು ಮನೆ ಒಂದೆರಡು ತಿಂಗಳು ಸುಖ ತಂದಿತ್ತು. ಮುಂದೆ ಒಂದು ತಿಂಗಳಿಗೆ ಎರಡು ಮನೆಯ ಜನ ಬೇರೆ ಊರಿಗೆ ವರ್ಗವಾಗಿ ಹೊರಟು ಹೋದ್ದು. ಇದ್ದ ಎರಡು ಮನೆಯ ಹಣ ತಿಂಗಳ ಕೊನೆಗೆ ಕೈಗೆ ಎಟಕಬೇಕು. ನಡುವೆ— ಹೊಟ್ಟೆಗೆ? ಆ ದಿನ ಬೇಡವೆಂದ ಇಮಾಮಸಾಬ, ಕಾದು ಕೂತು ಅವನು ಕೊಟ್ಟ ಊಟ ಉಂಡೇ ಹೊಟ್ಟೆ ಹಸಿವೆ— ತೀರಿಸುವ ಜೊತೆಗೆ ಅವನ ಹಸಿವೆಗೂ ಆಹಾರವಾಗಿದ್ದಳು, ಈಚೆಗೆ ಇಮಾಮಸಾಬ ಬರೋದು ಒಂದೆರಡು ವಾರ ತಡವಾದರೆ ಅವಳಿಗೂ ಆ ಹಸಿವೆ ಕೆಣಕುತ್ತದೆ.

ಹುಂಜ ಹೇಟೆಯ ಸುತ್ತು ಗರಿಗೆದರಿ ಚಕ್ರಾಕಾರವಾಗಿ ಸೇತ್ತು ಬಂದು

ಅದರ ತಲೆ ಕುಕ್ಕಿ ತನ್ನ ಪೌರುಷದ ಮುದ್ರೆ ಒತ್ತಿ. ಕೆಳಕ್ಕಿಳಿದು ಜಂಭ ದಿಂದ ಕೊಕ್ಕೊಕ್ಕೊ ಎಂದಿತು.

"ಏ... ಏನು ನೋಡ್ತೀಯಾ? ತಿಕ್ಕು ತಿಕ್ಕು ಪಾತ್ರೆನ್ನ. ರಾತ್ರಿ ನಿನ್ನಜ್ಜಿನ್ನ ಕಾಣ್ತೇನೆ ನಿನ್ನ ಹತ್ರ ಏನು ಕೇಳೋದು? ಹಣ ಕೈಯಲ್ಲಿಟ್ರೆ— ಅಜ್ಜಿ ಯಾಕೆ? ಅಜ್ಜಿ ಹೆಣಾ ಬಾಯಿ ಬಿಡ್ತದೆ."

ನಾಗೂ ತುಟಿ ಕಚ್ಚಿ ಥೊ ಎಂದು ಉಗುಳಿ ಮತ್ತೆ ಶೀನಪ್ಪನ್ನ ನೋಡಲೂ ಹೋಗಲಿಲ್ಲ. ಹಸಿವೆಗಾಗಿ ಇಮಾಮುಸಾಬನ ಊಟ ಮಾಡಿದ್ರೂ ಅವನು ಶೀನಪ್ಪನ ಹಾಗೆ ಕೊಟ್ಟವನಲ್ಲ. ವಾರದಲ್ಲಿ ಒಂದೆರಡು ಬಾರಿ ಬರ್‍ತಾನೆ. ಹೊಟ್ಟೆ ತುಂಬ ಕೊಡ್ತಾನೆ. ಹಂಗಿನ ಮಾತು ಒಂದಿನಾ ಆಡಿಲ್ಲ. ತನಗೆ ಯಾರಿದ್ದಾರೆ? ಇಲ್ಲಿಗೆ ಬೇರೆ ಯಾರು ಬರ್‍ತಾರೆ? ಚುಚ್ಚಿ ಕೇಳಿದ್ದೂ ನೆನಪಿಲ್ಲ. ತನ್ನ ಹೊಟ್ಟೆಯ ಸಂಕಟಕ್ಕೆ ಅವನೊಂದು ದಾರಿಯಾಗಿದ್ದಾನೆ ಎಂದು ತಾನು ಸಮಾಧಾನಪಟ್ಟದ್ದುಂಟು. ಅಜ್ಜಿ ಮದುವೆಯೆಂದು ಅಲ್ಲಿ ಇಲ್ಲಿ ಮಾತಾಡಿ ಒಂದೆರಡು ಸಂಬಂಧ ತಂದದ್ದೂ, ಕುಡಿತ ಜುಗಾರಿಯಲ್ಲಿ ದೇಹವನ್ನು ರೋಗದ ಮುದ್ರೆ ಮಾಡಿದ್ದೂ, ಅವಳು ತನ್ನ ಓರಿಗೆಯವರ ಬಾಯಿಂದ ಕೇಳಿ, ಕಣ್ಣಿಂದ ನೋಡಿ ಆ ಆಸೆಯನ್ನೂ ನೆಚ್ಚಿ ಕೂತಿಲ್ಲ ಈಗ.

ಕಾರಿನ ಹಾರ್ನ್ ಕೇಳಿ ನಾಗೂ ಮತ್ತೆ ಎಚ್ಚರಾಗುತ್ತಾಳೆ.

ಇದೆಲ್ಲ ದಿನದ ಕಾರ್ಯಕ್ರಮಗಳು—ಬಾಯಿ ಸಾಹೇಬರ ಮೈ ಕಾಣುವ ಶಿಫಾನ್ ಸೀರೆ, ತೋಳಿಲ್ಲದ ರವಿಕೆ, ಮಿರಿ ಮಿರಿ ಮಿಂಚುವ ಓಂಬಡದ ಚಪ್ಪಲಿಮೆಟ್ಟಿ ಕಾರು ಹತ್ತಿಹೋಗಿ—ಎರಡು ನಿಮಿಷಕ್ಕೆ ಶೀನಪ್ಪ ಅಡಿಗೆ ಕೋಣೆಯ ಬಾಗಿಲು ಮುಚ್ಚಿ, ಇವಳು ಕೂತಲ್ಲಿಗೇ ಬಂದು "ನಾನೂ ಈಗ ಬರ್‍ತೇನೆ, ಎರಡೇ ನಿಮಿಷ ನೀನು ಎದುರಿನ ಬಾಗಿಲಲ್ಲೇ ಕೂತುಕೋ—" ಎಂದು ಕಣ್ಣು ಮಿಟುಕಿಸಿ ಓಟ ಕಿತ್ತಾಗ ಅವಳ ಕಣ್ಣುಗಳು ಸಹಜವಾಗಿಯೇ ಅವನ ಕೈಚೀಲ ದಿಟ್ಟಿಸುತ್ತವೆ.

ಇದೇ ಈಗ ತಯಾರಿಸಿದ ಬಿಸಿ ಬಿಸಿ ತಿಂಡಿ, ಹಾಲಿನ ಬಾಟ್ಲಿ ಮತ್ತೇ ನದೋ ತುಂಬಿ ಹೊರಟ ಈ ಆಸಾಮಿ ಇನ್ನು ಬರುವುದು ಗಂಟೆ ಕಳೆದ ಮೇಲೆ ಎಂದು ಅವಳಿಗೆ ತಿಳಿಯದೇ?

ಅವಳು ಪಾತ್ರೆ ತೊಳೆದು ಹಿಂದಿನ ವರಾಂಡದಲ್ಲಿ ಕೌಂಜಿ ಹಾಕಿ ಸೋಪಿನ ತುಂಡಿನಿಂದ ಕೈಕಾಲು ಮುಖ ತೊಳೆದು ಮುಂಬಾಗಿಲಿನ ಮೆಟ್ಟಿ ಲಲ್ಲಿ ಕೂತ ನಾಗೂಗೆ ನೆನಪಾಗುತ್ತದೆ. ಒಳಗಡೆ ಮಲಗಿಯೋ, ತಿರುಗು ಕುರ್ಚಿಯಲ್ಲಿ ಕೂತು ಪೇಪರೋದುತ್ತಿರುವ ಸಾಹೇಬರು

ಅವರದು ಒಳ್ಳೆ ನಿಂಬೆಹಣ್ಣಿನ ಬಣ್ಣ. ತುಂಬಿದ ಮೈ. ನೆನದ ಕ್ಷಣ ಅವಳ ಮೈ ರೋಮ ನಿಮಿರಿ ನಿಂತಿತ್ತು. ದಿನಾ ಕಸಕ್ಕೆಂದು ಅವಳು ಬಾಗಿ ನಿಂತಾಗ, ಚಪ್ಪಲಿಯಲ್ಲಿ ಕಾಣುವ ಗುಲಾಬಿ ಪಾದಗಳು, ಹೊರಗಿನ ಛಳಿ—ಬಿಸಿಲಿಲ್ಲದ ಆ ಪಾದಗಳಲ್ಲಿ ಧೂಳು ಎಲ್ಲಿಂದ ಬರಬೇಕು? ಇಮಾಮು ಸಾಬಿಯ ಜಿಡ್ಡು ವಾಸನೆಯ ಮೈ ಕೊಳೆ ತುಂಬಿದ ಪಾದಗಳು, ಕಣ್ಣಿಗೆ ಕಟ್ಟುತ್ತದೆ. ತಾನು ದಿನವೂ ಕಸ ಮುಗಿಸಿ ಹೊರ ಬಂದರೂ ಮೂಗಿಗೆ ಲೆವೆಂಡರಿನ ಪರಿಮಳ.

ಒಂದು ದಿನ ಶೀನಪ್ಪನ ಮೈಯಲ್ಲೂ ಅದೇ ಪರಿಮಳ ಅವಳ ಬಳಿಗ ಪಾತ್ರೆಗಾಗಿ ಬಂದಾಗ ಮೂಸಿದ್ದಳು.

"ಶೀನೂ...ಶೀನೂ" ಸಾಹೇಬರು ಕರೆದದ್ದು ನಾಗೂಗೆ ಕೇಳುತ್ತದೆ. ತನಗೇ ಉತ್ತರ ಕೊಡುವ ಸಂದರ್ಭ ಬಂದದ್ದೂ ಅವಳಿಗೆ ಹೆಮ್ಮೆ. ಅದೇ 'ಧೈರ್ಯದಲ್ಲಿ ಮೆಲ್ಲನೆದ್ದು ಕೋಣೆಯ ಹೊರಗೆ ನಿಂತು ತನ್ನ ಒರಟು ಧ್ವನಿ ಯಲ್ಲೇ, ದನಿ ತಗ್ಗಿಸಿ "ಶೀನಪ್ಪ ಹೊರಗೆ ಹೋಗಿದ್ದಾರೆ. ಈಗ ಬರ್‍ತೇನೆ ಅಂದ್ರು" ಇಷ್ಟು ಹೇಳಿದ ಅವಳಿಗೇ ತನ್ನ ಧ್ವನಿಯಲ್ಲಿ ಅನುಮಾನ. ಈ ಇಂಪು ಅವಳೆಲ್ಲೂ ಕೇಳಿಲ್ಲ ಎನ್ನುವಷ್ಟು ಸಂಭ್ರಮ. "ಯಾರು ನಮ್ಮ ನಾಗೂನಾ?" ಸಾಹೇಬ್ರು ತನ್ನ ಹೆಸರು ಹೇಳಿದ್ದು ಅವಳ ಕಾಲುಗಳನ್ನು.

ಮೈಯನ್ನು ಕುಲುಕಿದಂತೆ—ಮೈ ಥರ ಥರ ನಡುಗಿಸಿದೆ. ಬಾಗಿಲನ್ನು ಭದ್ರವಾಗಿ ಹಿಡಿದು "ನಾನೇ, ಬಾಗಿಲಲ್ಲಿ ಕೂತುಕೋ ಅರ್ಧ ಗಂಟೇಲಿ ಬರ್ತೇನೆ ಅಂದ್ರು" ನಾಗೂಗೆ ಸಾಹೇಬರ ಬಗ್ಗೆ ಕನಿಕರ ಮೂಡುತ್ತದೆ. ಏನಾದರೂ ಬೇಕಾಗಿದ್ದರೆ? ತಾನು ಅಡಿಗೆ ಕೋಣೆಯಲ್ಲಿ ಕಾಲಿರಿಸುವಂತಿಲ್ಲ, ನೀರು ಬೇಕಾದರೆ ತಂದು ಕೊಡಲಾರಳು. ಹಸಿವೆ ಎಂದರೆ ಊಟ ಮಾಡಿಸುವಂತಿಲ್ಲ. ತಾನು ಯಾವ ಬಗೆಯಲ್ಲೂ ಅವರ ಸೇವೆ ಮಾಡ ಲಾರಳು. ಹಿಂದಿನ ದೀಪಾವಳಿಯಲ್ಲಿ ಕಸಕ್ಕೆಂದು ಹೋದಾಗ ತನ್ನ ಕೈಯಲ್ಲಿ ಹತ್ತರ ಎರಡು ನೋಟಿನೊಂದಿಗೆ ಐದರ ಇನ್ನೊಂದು ನೋಟು ಸೇರಿಸಿ "ತೆಕೊಕ್ಕ ಸೀರೆ ಉಟ್ಕೊಕೋ ದೀಪಾವಳಿಗೆ" ಎಂದಿದ್ದರು, ಆ ಘಾತಿಗೆ ಈಗ ಒಂದು ವರ್ಷವಾಗಿದೆ. ದೇವರಂಥ ಮನಷ್ಯ ಬಲ ಗಾಲಿನ ಬಲವೇ ಹೋದ ಒಂದು ವರ್ಷದಿಂದ ಮನೆಯಲ್ಲೇ ಕೊಳೆಯ ಬೇಕು. ಡಾಕ್ತರು ಹೇಳಿದ್ದೂ ಕೇಳಿದ್ದಾಳೆ. ಸರಿಯಾಗಲು ನಾಲ್ಕು ವರ್ಷಗಳಾದರೂ ಬೇಕಂತೆ, ಬಾಯಿ ಸಾಹೇಬರಿಗೆ ಆತ್ತ ಕಡೆ ಗಮನ ಕೊಡಲು ಪುರುಸೊತ್ತಿಲ್ಲದಷ್ಟು ಮೀಟಿಂಗು. ಸಾಲದ್ದಕ್ಕೆ ಟೂರು ಪ್ರೋಗ್ರಾಮಗಳು. ಕೂತು ತಿಂದರೂ ಕರಗದಷ್ಟು ಆಸ್ತಿ, ಗಂಡನ ದಿದ್ದರೂ, ಆಸ್ತಿ ಬೇಕು. ಆದಕ್ಕಾಗಿ ಗಂಡ ಬೇಕಾಗಿದೆ ಬಾಯಿ ಸಾಹೇಬರಿಗೆ.

ಈ ಮಾತು ನಾಗೂಗೆ ಮೊದಲೇ ಗೊತ್ತು, ಶೀನಪ್ಪ ಆಡಿದ ಮಾತು ಅವಳಿಗಿನ್ನೂ ಒಗಟವಾಗಿ ನಿಂತಿದೆ. "ಅಮ್ಮಾವರ ಹಸಿವೆ ತೀರಿಸೋ ತಾಕತ್ತು ಈ ಸಾಹೇಬರಿಗೆಲ್ಲಿ?" ಅಮ್ಮಾವರನ್ನು ಕಂಡಾಗಲೆಲ್ಲ ನಾಗೂಗೆ ಇದೇ ಮಾತು ನೆನಪಾಗುತ್ತದೆ.

"ನಾಗೂ ನನ್ನ ಕಾಲು ಸ್ವಲ್ಪ ಒತ್ತುತ್ತೀಯಾ? ಯಾಕೋ ಮರಗಟ್ಟಿ ದಂತಾಗಿದೆ...ಅದಕ್ಕೇ ಶೀನೂನನ್ನ ಕರೆದದ್ದು." ಸಾಹೇಬರು ಹೀಗೆ ಹೇಳಿ ದಾಗ ನಾಗೂ ಮೊದಲಿಗೆ ನಂಬೋದಿಲ್ಲ. ಸಾಹೇಬರ ಕಾಲನು ತಾನು ಮುಟ್ಟಬಹುದು ಎನ್ನುವುದು. "ಯಾಕೆ? ಬಾ ಒಳಗೆ... ಶೀನೂ ಇಲ್ಲ

ದಿದ್ರೆ ನೀನು ಒತ್ತಿದ್ರೊ ಆದೀತು, ಬಾ ನಾಗೂ. "ತಡವರಿಸುತ್ತಲೇ ನಾಗೂ ಕೋಣೆಯೊಳಕ್ಕೆ ಕಾಲಿರಿಸುತ್ತಾಳೆ. ಮಿಂಚುವ ಕರಿಯ ಮಂಚದ ಕಾಲ ಬಳಿಯಲ್ಲಿ ಮೊಣಕಾಲೂರಿ ನಾಗೂ ಅನುಮಾನಿಸುತ್ತಲೇ ಕಾಲು ಗಳನ್ನು ಮುಟ್ಟುತ್ತಾಳೆ. ಕರಿಯ ತನ್ನ ಕೈ ಬೆರಳುಗಳು ಹಾಲುಬಣ್ಣದ ಕಾಲುಗಳಲ್ಲಿ ಹಾವು ಹರಿದಂತೆ ಕಂಡವು. ನಾಚಿಕೆಯೊಂದಿಗೆ ಭಯ ಮೂಡಿ ಬರುತ್ತದೆ. ಒತ್ತುತ್ತ ಹೋದಂತೆ ಭಯ ಕಡಿಮೆಯಾಗಿ, ನಾಗೂ ಮೆಲ್ಲನೆ ತಲೆಯೆತ್ತಿ ನೋಡುತ್ತಾಳೆ. ಸಾಹೇಬರು ಅಂಗಾತ ಮಲಗಿ ಹಣೆಗೆ ಮೊಣಕೈಯಿಟ್ಟು ಬಿಸುಸುಯ್ಯುವುದು ಕೇಳುತ್ತದೆ.

"ಏನಾದ್ರೂ ಬೇಕಿತ್ತಾ? ಎಂದು ಕೇಳುವ ಬಯಕೆ, ಭಯ"

ಇಮಾಮು ಸಾಬನಾಗಿದ್ರೆ ಈಗಾಗಲೇ ತನ್ನನ್ನು ಬಿಗಿದು ಪುಡಿ ಮಾಡಿ ಮೂಲೆ ಸೇರುಸುತ್ತಿದ್ದ...ಎಲ್ಲವು ಅವಸರ, ಒರಟು. ಮುಂದಿನ ಚಣ ಮತ್ತೆ ಅವನು ಅಲ್ಲಿರಲಾರ. ಇಲ್ಲಿ ತಾನು ಒತ್ತಾಯದಿಂದ ಕಾಲೆಳೆದು ಒಳಕ್ಕೆ ಬಂದು ಕೂತದ್ದೂ...ಒತ್ತುತ್ತಿದ್ದಂತೆ ಮೈ ಕಾವೇರಿದ್ದೂ ಆದರೆ ಈ ಕಾಲುಗಳು ಬೆಳಗ್ಗಿನಲ್ಲಿ ತಾನು ಮುಸುರೆಗಾಗಿ ತಂದಿಡುವ ನೀರಿನಷ್ಟು ತಣ್ಣಗೇ ಅವಳ ಮನಸ್ಸಿನ ಮೂಲೆಯಲ್ಲಿ ಹಸಿವೆಯ ನೆನಪು ಹಣಕಿಹಾಕು ತ್ತದೆ, ಮೆಲ್ಲನೆ ಸ್ವಲ್ಪ ಜೋರಾಗಿ ಅಮುಕಿ ಒತ್ತುತ್ತಾಳೆ. ಪಾದಗಳ ಮೇಲೆ ತಲೆ ಇಡಲು ಆಸೆ ಉಕ್ಕುತ್ತದೆ.

"ತುಂಬ ಚೆನ್ನಾಗಿ ಒತ್ತುತ್ತಿ ನಾಗೂ, ಶೀನ ಮಾಡೋ ಕೆಲ್ಸವೆಲ್ಲ ಬಿಟ್ಟಿನೇ. ನೀನು ಒತ್ತಿದ್ರೆ ಸಾಕು ಎನ್ನೋದಕ್ಕೆ ಮನಸ್ಸಾಗೋದಿಲ್ಲ." ಸಾಹೇಬ್ರು ಎದ್ದು ಕೂತು ಹೀಗೆ ಆಡಿದ್ದಕ್ಕೆ ನಾಗೂ ಮೆಲ್ಲನೊಮ್ಮೆ ತಲೆ ಯೆತ್ತಿ ನೋಡುತ್ತಾಳೆ. ಎದುರು ಕಾಣುವ ಕಣ್ಣಿನಲ್ಲಿ ಏನಾದರೂ ಬೇಡಿಕೆ ಇದೆಯೋ? ಒತ್ತುವ ನೆಪದಲ್ಲಿ ಅವಳು ಮೆಲ್ಲನೆ ಬಾಗುತ್ತಾಳೆ. "ನಾಗೂ ಮನೆಯಲ್ಲಿ ಯಾರ್‍ಯಾರಿದ್ದಾರೆ?" ಸಾಹೇಬರು ಹೀಗೆ ಹೇಳುವಾಗ ಅವಳು ಗಮನಿಸುವುದು ಅವರ ಚಲಿಸದೆ ನಿಂತ ಆ ಕಣ್ಣುಗಳನ್ನು. ಬೇಡಿಕೆ ಅಲ್ಲಿ

ಮಾಡಿದ್ದನ್ನೂ ಕಂಡು ತಂಪೇರಿದ್ದ ಆಸೆ ಬಿಸಿಗೊಳ್ಳುತ್ತದೆ. ಕಾಲೊತ್ತುತ್ತ ಅವಳ ಬೆರಳು ಮೆಲ್ಲನೆ ಮೇಲೆ ಸರಿಯುತ್ತದೆ. "ನ:ಗೂ ನಿಂಗೆ ಮದುವೆ ಯಾಗಿಲ್ವೆ?" ಮುಂದಿನ ಮಾತು ಯಾಂತ್ರಿಕವಾಗಿ ನಾಗೂ ಆಡುತ್ತಾಳೆ. ಅವಳೀಗ ಸಾಹೇಬರನ್ನು ಅರ್ಥ ಮಾಡಿಕೊಳ್ಳುವ ಸ್ಥಿತಿಗೆ ಬಂದಿದ್ದಾಳೆ. ತಾನು ಬೇರೇನೂ ಅವರಿಗೆ ಕೊಡಲಾರಳು ಎನ್ನುವುದು ತಿಳಿದಿದೆ...

ಅರ್ಧ ಗಂಟೆಗೊಂದು ಶೀನು ಒಂದು ಗಂಟೆಗೆ ಬರುವುದು ಎಂದುಕೊಂಡ ನಾನೂ ಗಡಿಬಿಡಿಯಿಂದಲೇ ಕೋಣೆಯಿಂದ ಹೊರಡಲು ಸಿದ್ಧಳಾದಾಗ, ಸಾಹೇಬರು ಕೈ ಚಾಚಿ "ತಕೋ ಈ ಹಣ ಇಟ್ಟುಕೋ...ಬಹಳ ದಿನದ ಆಸೆ ನೀನ್ನ ಉಪಕಾರ ನನ್ನ ಮೇಲೆ ಜಾಸ್ತಿಯಾಯ್ತು..." ಎಂದಾಗ ನಾಗೂಗೆ ದಃಖ ಉಮ್ಮಳಿಸಿ ಬರುತ್ತದೆ. ಹಣವನ್ನು ಕೈಯಿಂದ ಮುಟ್ಟಲೂ ಅವಳಿಗಾಗದು. "ನೀವು ಕೊಟ್ಟ ಸೀರೆ ಇನ್ನೂ ಉಡುತ್ತಿದ್ದೇನೆ, ಅದು ಹರಿಯಲಿ" ಆಗ, ನಿಮ್ಮ ಹಣ ತಕ್ಕೊಳುತ್ತೇನೆ" ಇಷ್ಟು ಹೇಳಿ ನಾಗೂ ಹೊರಕ್ಕೆ ಬರುವಂತೆ ಯಾವಾಗಲೋ ಶೀನಪ್ಪ ಬಂದು ಮುಂದಿನ ಬಾಗಿಲಿನ ಮೆಟ್ಟಲಲ್ಲಿ ಕೂತುಬಿಟ್ಟಿದ್ದ.

"ಏನು ನಾಗೂ? ಬಾಗಿಲ ಬಳಿ ಕೂತು ಕಾ ಅಂದ್ರೆ...ಬಾಗಿಲು ಹಾಕಿ ಒಳಗೇ ಹೋಗಿಬಿಡೋದೆ? ಅಂತೂ ಲೆವೆಂಡರಿನ ಪರಿಮಳ . ನಿಂಗೂ ಬಂತಲ್ಲ? ಏನು ಕಥೆ ಇದು? ಏನೂ ಗೊತ್ತಿಲ್ಲದ ಗುಬ್ಬಿಯ ಹಾಗೆ ಚೀವ್ ಚೀವ್ ಎಂದವಳು, ಗಿಡುಗನ ಹಾಗೆ ಕುಕ್ಕಿಯೇ ಬಿಟ್ಟಿದ್ಯಾ? ಅಮ್ಮನವರಿಗೆ ಇದು ಗೊತ್ತಾದ್ರೆ? ನಿಂದು ಹೋಗಲಿ ಎಲ್ಲಿಯಾದರೂ ಹಾಳಾಗಿ ಹೋಗ್ತಿ, ಈ ಮನೆಯಲ್ಲದಿದ್ರ ಇನ್ನೂ ನಾಲ್ಕಾರು! ಆದ್ರೆ,ಪಾಪ ಸಾಹೇಬ್ರು ಗತಿ? ಅಮ್ಮಾವರ ತಟ್ಟೇಲ್."

ನಾಗೂ ಶೀನಪ್ಪನ ಕೋಲು ಕಾಲನ್ನು ಭದ್ರವಾಗಿ ಹಿಡಿದು ಕೂಗಿ ಕೊಳ್ಳುತ್ತಾಳೆ. "ದಮ್ಮಯ್ಯ ಶೀನಪ. ಈ ತಪ್ಪು ನಿಮ್ಮ ಹೊಟ್ಟೆಯಲ್ಲಿ ಹಾಕ್ಕೋಬೇಕು, ಸಾಹೇಬ್ರು ತಪ್ಪಿಲ್ಲ...ಅವರ ವನವಾಸ ನೋಡಲಾಗಲಿಲ್ಲ

...ಏನು ಶಿಕ್ಷೆ ಬೇಕಾದ್ರೂ ಕೊಡಿ. ಈ ಮನೆಯಲ್ಲಿ ಹಾಗೆ ದುಡಿತ್ತೇನೆ. ಋಣ ತಪ್ಪಿಸಬೇಡಿ. ಅಮ್ಮಾವರಿಗೆ ಸಾಹೇಬರ ಹೆಸರು ಹೇಳಬೇಡಿ. ಅವರ ಸಂಕಟ ನೋಡಲಾರದೆ..."

ಶೀನಪ್ಪ ಕಾಲಿಗೆಬಿದ್ದ ನಾಗೂನ್ನ ಎರಡೂ ಕೈ ಚಾಚಿ ಎತ್ತಿಕೊಳ್ಳು ತ್ತಾನೆ. ಹಾಗೆ ಮೆಲ್ಲನೆ ಅಮುಕಿ "ಏಳು, ಏಳು ಅಷ್ಟು ಹೆದರಿಕೊಳ್ಳಬೇಡ. ನನಗೂ ಜೀವ ಇದೆ. ಪಾಪ ನೀನು ಬಡವಿ, ನಿನ್ನ ಹೊಟ್ಟೆಗೆ ನಾನ್ಯಾಕೆ ಕಲ್ಲು ಹಾಕಲಿ?" ಹೀಗೆಂದಾಗ ಅವನ ಮುಖ ಅವಳ ಮೂಗಿನ ತೀರ ಹತ್ತಿರಕ್ಕೆ ಬರುತ್ತದೆ. ವಾಸನೆಗೆ ಓಕರಿಕೆ ಬರುತ್ತದೆ. ಕರಿಯ ಕೋಲು ಮುಖ, ಉಬ್ಬು ಹಲ್ಲು, ಕಣ್ಣು ಮುಚ್ಚಿಯೇ ಮಾತು ಕೇಳುತ್ತಾಳೆ,

ಮುಂದಿನ ಬಾಗಿಲು ನಾನು ಹಾಕ್ತೇನೆ. ನೀನು ಹಿಂದಿನ ಬಾಗಿಲಿನಿಂದ ಒಳಗೆ ಬಂದುಬಿಡು, ಹಾಗ್ಯಾಕೆ ನೋಡ್ತಿ?" ನಾಗೂ ಹಿಂದು ಮುಂದು ನೋಡಿ ಹೊರಗೇ ನಿಲ್ಲುತ್ತಾಳೆ. ಹಿಂದಿದ್ದ ಗಡಸು, ಧೈರ್ಯ ಕಳೆದು ಕೊಂಡದ್ದು ಅರಿವಾಗುತ್ತದೆ. ಆ ಕೋಲು ಮುಖದಲ್ಲಿ ಕಾಣುವ ಕಣ್ಣು ಗಳಲ್ಲಿ ತನ್ನ ಭವಿಷ್ಯಕ್ಕೂ ಹೆಚ್ಚಾಗಿ ಇನ್ನೊಂದು ಜೀವದ ಬಗ್ಗೆ ಭಯ ಹುಟ್ಟುತ್ತದೆ.

"ಏನು ನಾ ಹೇಳಿದ ಹಾಗೆ ಹಿಂದಿನ ಬಾಗಿಲಿನಿಂದ ಬರ್ತೀಯಾ? ಅಮ್ಮಾವ್ರು ಬರೋವರೆಗೆ ಹೀಗೇ ನಿಲ್ಲುತ್ತೀಯಾ? "ಶೀನಪ್ಪನ ಕಿಸಿಕಿಸಿ ನಗು ಈಗ ಕಾಣೋದಿಲ್ಲ. ಅಧಿಕಾರ ದನಿಯಲ್ಲಿ ಒತ್ತಿನಿಂತಿದೆ. ಕುರಿಮರಿಯಂತೆ ನಾಗೂ ಕಾಲೆತ್ತಿ ಹೆಜ್ಜೆ ಮುಂದಕ್ಕಿರಿಸುತ್ತಾಳೆ,

ಹುಂಜ ಅವಳೆದುರೇ ಹೇಟೆಯ ಬೆನ್ನು ಹಿಂದೆ ಓಡುವುದು ಕಾಣು ತ್ತದೆ. ಶೀನಪ್ಪ ಅಡುಗೆ ಕೋಣೆಯ ಸರಳುಗಳ ನಡುವೆ ಅವಳಿಗಾಗಿ ಕಾಯೋದು ತಿಳಿದಿದೆ, "ಬೇಗ ಬಾ ಮತ್ತೆ, ಅಡಿಗೆ ಕೋಣೆಗೆ ಕಾಲಿಡ ಬಾರದೆಂದೇ? ಅದೆಲ್ಲ ಅಮ್ಮನವರು ಇದ್ದಾಗ ಈಗೆಲ್ಲ ನಡೆಯುತ್ತದೆ. ಬೇಗ ಬಾ ಮತ್ತೆ."

ಬಲಿಗಾಗಿ ಕೊರಳು ಚಾಚಿ ನಿಂತಂತೆ ನಾಗೂ ನಿಂತಿದ್ದಾಳೆ. ಅವಳೊಂದು ಯಜ್ಞಪಶುವಾಗಿ. ಅವಳ ತೀರ ಸಮೀಪಕ್ಕೆ ದುರ್ಗಂಧ ವಾಸನೆ, ಉಬ್ಬು ಹಲ್ಲು, ಕರಿಯ ಹಾವು ಸುತ್ತು ಬಳಸಿದ್ದೂ ಅವಳಿಗೆ ತಿಳಿಯುತ್ತದೆ, ಅದನ್ನು ದೂರ ಬಿಸುಟಿ, ಓಡಿ ಹೋಗುವ ಯತ್ನವನ್ನೂ ಅವಳು ಮಾಡಲಿಲ್ಲ. ಹಾವು ಅವಳನ್ನು ಸುತ್ತುಹಾಕಿತ್ತು.



# ಹೊಸ ಅಲೆ

—ಶಾಂತಾದೇವಿ ಕಣವಿ

ಕಿರ್ರೆಂದು ಬಾಗಿಲು ಕಿರುಗುಟ್ಟಿದಾಗ ಶಂಕರಪ್ಪ ಎಚ್ಚರವಾದ. ಬಸವಣ್ಣೆವ್ವ ಎದ್ದು ಹೊರಗೆ ಹೊರಟದ್ದು ತಿಳಿದ. ಬೆಳಂಡಿಯಿಂದ ಹರಿದು ಬರುವಷ್ಟು ಬೆಳಕು ಇನ್ನೂ ಮೂಡಿರಲಿಲ್ಲ. ಹೊತ್ತುಕೊಂಡ ಕಂಬಳಿ ಕಿತ್ತೆಸೆದು ಹೊರಸಿದ ಮೇಲೆಯೇ ಎದ್ದು ಕುಳಿತ,

"ಬಸ್ಸೀs."

"ಅಂ," ಕಣ್ಣು ಹೊಸಕಿಕ್ಕೊಳ್ಳುತ್ತ ಹೊರಳಿದಳಾಕೆ.

"ನಾ ಇವತ್ತ ಶಾರಕ ಹೋಗಬೇಕಾಗೇತಿ. ಕಚೇರ್‍ಯಾಗ ಕೆಲಸ ಐತಿ. ಲಗೂನ ನೀರಿಗೆ ಉರಿ ಹಾಕು, ಜಳಕಾ, ಪೂಜಿ, ನ್ಯಾರಿ ಮುಗಿಸ್ಕೊಂಡss ಹೋಕ್ಕೇನಿ "

"ಹೂಂ," ಎಂದು ಹೊರಬಿದ್ದವಳು ಮುಖಕ್ಕೆ ನೀರು ಹನಿಸಿಕೊಂಡು ಡರಿಗೆ ತುಂಬಿ ತಂದು ಹೊರಗಿನ ಕಟ್ಟೆಯ ಮೇಲಿಟ್ಟು ಬಾಗಿಲಿಗೆ ನೀರು ಹಾಕಹತ್ತಿದಳು. ಶಂಕರಪ್ಪ ಎದ್ದು ಚರಿಗೆ ಹಿಡಿದು, ಕಟ್ಟೆ ಇಳಿದು ಕಾಲನ್ನು ಮೆಟ್ಟುತ್ತ ಪಡಸಾಲೆಯತ್ತ ನೋಡಿದ, ಅವ್ವನ ಒಂದು ಮಗ್ಗಲು ಗಂಡು ಮೊಮ್ಮಕ್ಕಳು, ಇನ್ನೊಂದು ಮಗ್ಗಲು ಹೆಣ್ಣು ಮೊಮ್ಮಕ್ಕಳು ಮಲಗಿದ್ದರು. ತನ್ನವೂ ತಮ್ಮನವೂ ಕೂಡಿ ಎಂಟು ಹುಡುಗರು. ಏಳು ಇಲ್ಲಿ ಅಜ್ಜಿಯ ಮಗ್ಗುಲಲ್ಲಿವೆ, ಇನ್ನೊಂದು ಕೂಸು

ತನ್ನ ಕೋಣೆಯಲ್ಲಿ ಬೆಳತನಕ ಕೆಮ್ಮುತ್ತ ಎಚ್ಚರವಾಗಿದ್ದ ಅಪ್ಪನಿಗೆ ಈಗ ತಾನೇ ನಿದ್ದೆ ಹತ್ತಿರಬೇಕೆಂದುಕೊಂಡ. ಉಹುಂ. ಎಚ್ಚರವಾಗಿಯೇ ಇದ್ದಳು ಕೆಂಚವ್ವ. ಹಿರಿಯ ಸೊಸೆ ಎದ್ದಿದ್ದು ಗೊತ್ತಾದೊಡನೆ ಕಟ್ಟೆಯ ಮೇಲಿನ ಎಡಕೋಣೆಯಲ್ಲಿ ಮಲಗಿದ್ದ ಸಣ್ಣ ಸೊಸೆಯನ್ನೂ ಕೂಗಿದಳು, ಕೌದಿಯ ಮುಸುಕಿನಲ್ಲಿಂದಲೇ, "ನಾಗವ್ವಾ ಏಳವ್ವಾ. ಗಡಾನ ಎದ್ದು ನೀರಿಗೆ ಉರಿ ಹಾಕು, ಮಾವ ಎದ್ದು ಹಿತ್ತಲಕ ಹೋಗ್ಯಾನ." ಅಜ್ಜಿಯ ದನಿಗೂ. ದ್ಯಾಮಿ ಕಡಿದದ್ದಕ್ಕೂ ಎಚ್ಚತ್ತ ಮೊಮ್ಮಗ ಮಿಸುಕಾಡಿದಾಗ ಎಳೆದು ತನ್ನ ಕೌದಿ ಹೊಚ್ಚಿ ಚುಕ್ಕು ಬಡಿದಳು.

ಕೆಂಚವ್ವ ಹಿತ್ತಿಲು ಎಂದಿದ್ದರೂ ಹಳ್ಳದ ದಂಡೆ ದೂರವೇ ಇತ್ತು. ಸಗಣಿ ಬುಟ್ಟಿ ತಲೆಯ ಮೇಲಿಟ್ಟುಕೊಂಡು ಎದುರಿಗೆ ಬಂದ ಭರಮನನ್ನು ಶಂಕರಪ್ಪ ಕೇಳಿದ: "ಗೌಡರು ಬಂದರೇನೋ ಭರಮಾ?"

"ಇಲ್ರೀ ಯಪಾ, ಇನ್ನೂ ಬಂದಿಲ್ಲ. ಈ ಸರೆ ಬರೂವಾಗ ಕಾರಗಾಡಿ ತೊಗೊಂಡಽ ಬರತಾರಂತ್ರೀ. ಅದಕ್ಕಽ ಇನ್ನೂ ಎಡ್ಡ ದಿನಾ ತಡಾ ಆಗ್ತೈತಿ ಅಂತ ಪತ್ರಾ ಬರದಾರಂತ್ರೀ—ಅಪ್ಪನೋರ ಅಂತಿದ್ರು." ಜೀತದ ಆಳು ಭರಮನಿಗೆ ತನ್ನದೇ ಕಾರು ಬರುತ್ತಿದೆಯೇನೋ ಎನ್ನುವಷ್ಟು ಸಂತೋಷ.

ಊರಲ್ಲಿ ಮೂರ್ನಾಲ್ಕು ಸೈಕಲ್ಲುಗಳೇನೋ ಇದ್ದವು. ಆದರೆ ಕಾರು ಇಡುವ ತಾಖತ್ ಉಳ್ಳವರು ಚಂದಪ್ಪ ಗೌಡರೊಬ್ಬರೇ. ಇನ್ನೂರು ಎಕರೆ ಜಮೀನು, ಎಂಟೆತ್ತಿನ ಕಮತ, ಹಾಲು—ಹೈನಿನ ಹೊಳೆ, ಕಾಳು-ಕಡಿ ಕಣಜದಲ್ಲಿ ತುಂಬಿ ತುಳುಕುತ್ತಿದ್ದವು. ಹಣವು ಹೆಚ್ಚಾಗಿ ಕೈಯಲ್ಲಿ ಓಡಾಡಹತ್ತಿದಂತೆ ಖರ್ಚು ಮಾಡುವ ದಾರಿಯನ್ನೂ ಕಂಡುಹಿಡಿದಿದ್ದರು ಗೌಡರು. ಊರಿಗೆ ಯಾವ ದೊಡ್ಡ ಮನುಷ್ಯರು ಬಂದರೂ ಗೌಡರ ಮನೆಯಲ್ಲೇ ಊಟ—ವಸತಿ, ದೊಡ್ಡವರ ಸ್ನೇಹ ಬೆಳೆದಂತೆ ನಡೆ ನುಡಿ ಬದಲಾಗಿ ನಾಗರಿಕರಾಗಹತ್ತಿದ್ದರು, ಮಕ್ಕಳನ್ನು

ಹೈಸ್ಕೂಲಿಗೇ ಬಿಡಸದೆ ಕಾಲೇಜು ಕಟ್ಟೆಯನ್ನೂ ಹತ್ತಿಸಿದರು. ಮನೆಗೆ ರೇಡಿಯೋ ಬಂದಿತು. ದೊಡ್ಡವರ ಬೀಗತನ ಮಾಡಿದರು. ವಕೀಲರ ಮಗಳು, ಕಲಿತ ಕನ್ಯೆ, ಸೊಸೆಯಾಗಿ ಬಂದಳು. ತಾಲೂಕಿನಲ್ಲಾಗಲಿ, ಜಿಲ್ಲಾ ಸ್ಥಳದಲ್ಲಾಗಲಿ ಯಾರಿಗೆ ಏನು ಕೆಲಸವಾಗಬೇಕಾದರೂ ಗೌಡರ ವಶೀಲಿ ಬೇಕೇ ಬೇಕು. ಎಲ್ಲರೂಡನೆ ಓಡಾಡಿ, ಮುತುವರ್ಜಿ ವಹಿಸಿ ಅವರ ಕೆಲಸ ಮಾಡಿಸಿ ಕೊಟ್ಟ ಹಳ್ಳಿಗರ ಮುಖಂಡರಾಗಿ ಮೆರೆಯುತ್ತಿದ್ದರು ಚಂದಪ್ಪಗೌಡರು.

'ಅದs ಚಂದಪ್ಪಗೌಡರs ಈಗ ಮಂತ್ರಿ–ಮಗಳ ಮದುವೀಗೆ ಬೆಂಗಳೂರಿಗೆ ಹೋದವರು ಕಾರು ತರಾಕ ನಿಂತಾರ. ಮತ್ತ ಅವರ ಜೋಡಿ ಒಡ್ಯಾಡಿ ನಾನೂ ಅಷ್ಟಿಷ್ಟು ಕಚೇರಿ, ಆಫೀಸು, ಕಾಯ್ದೆ, ಕನೂನು ಎಲ್ಲಾ ತಿಳಕೊಂಡೆನಿ. ತನ್ನ ಹೊಲಾ, ತ್ವಾಟಾ, ಆಣಿ ಕಟ್ಟು ಕಟ್ಟೋ, ಕೆಲಸದಾಗ ನೀರಾಗ ಮುಳುಗಿ ಹೋಗ್ತಾವಂತ ಕೇಳಿ ಒಕ್ಕಲ ತನಾ ಮಾಡಿಕೊಂಡs ಜೀವನಾ ಸಾಗಸೂ ನಾನು ಎದೀನs ಒಡಕೊಂಡಿದ್ದೆ. ಎರಡ ದಿನಾ ಚರಿಗಿ ತೊಗೊಂಡೂ ಹತ್ತಿತ್ತು. ಹಾಂಗ ನೋಡಿದರ ಗೌಡರ ತರುವಾಯ ನಾನs ದೊಡ್ಡ ಕುಳಾ ಆದರ ಜಮೀನs ಹೋದ ಮ್ಯಾಲೆ ಏನ ಮಾಡೂದು. ಆಕಾಶಾನ ತಲೀ ಮ್ಯಾಲೆ ಕಡಕೊಂಡು ಬಿದ್ಹಾಂಗ ಆಗಿತ್ತು. ಅವ್ವ ಅಂತೂ ಈ ಸುದ್ದೀ ಕೇಳಿ ಎರಡ ದಿನಾ ನೀರ ಸುದ್ದಾ ಮುಟ್ಟಲಿಲ್ಲಾ. ಮೊದಲs ವಯಸ್ಸಾದಾಕಿ, ಎಲ್ಲಿ ಗೊಟಕ್ ಅಂತಾಳೋ ಅಂತ ಮಾಡಿದ್ವಿ. ಮೈಯ್ಯಾಗ ಎಲುಬು, ತೊಗಲು ಎಷ್ಟೋs ಉಳದಾವ. ಅಪ್ಪ ಸತ್ತಾಗಿಂದ ಖಮ್ಮಗ ಉಂಡಾ ಕೆಲ್ಲಾ, ತಿಂದಾಕೆಲ್ಲಾ, ಹೊಸಾ ಸೀರಿ ತಂದು ಕೊಟ್ಟು, "ಮೈ ತುಂಬ ಉಟಕೊಂಡು ಬೆಚ್ಚಗ ಕುಂಡ್ರು" ಅಂದರ, "ನನಗ್ಯಾಕ ಬೇಕು ಅದೆಲ್ಲಾ" ಅಂತ ಸೊಸ್ತೇರು ಉಟ್ಟುಬಿಟ್ಟ ಹಳೇ ಕೋರಿ ಉಟಕೊಂಡು ಮುದ್ದ್ಯಾಗಿ ಕುಂಡರತಾಳ. ಆಕೀ ಮಾತು, ನಗೀ ಎಲ್ಲಾ ಮೊಮ್ಮಕ್ಕಳ ಜೋಡೀನ. "ಚಿಲಿ ಪಿಲಿ ಅನ್ನೂ ಹಕ್ಕೀ ಹಾಂಗ ಇವಿಷ್ಟು ಅದಾವಂತ ನಾ ಜೀವಾ ಹಡ ದೇನಿ" ಅಂತಾಳ. ಎಲ್ಲಾ ಹಿರೇತನಾ ಬಸವಣ್ಣಿಗೆ ಬಂದೈತಿ. ಹಿರೀತನಾ

ಅನ್ನಾಕ ಏನ ಸುಕಾ ಅವ ಆಕೀಗರೆ. ಮುಂಜಾನಿಂದ ಸಂಜೀತನಾ ಕತ್ತಿ
ದುಡದಂಗ ದುಡಿಯೂದs. ಒಕ್ಕಲತನದ ಮನೀ, ದನಾ–ಕರಾ ಅಂದ
ಮ್ಯಾಲೆ ಕೆಲಸ ಇದ್ದs ಇರತಾವ. ಹಾಂಗೆಲ್ಲಾ ನೋಡಿದರ ನಾಗವ್ವನೂ
ಒಳ್ಳೇ ಹುಡುಗಿ, ಬಾಳೀವಂತಿ, ಭೋಲೋತ್ನಾಂಗ ಹೊಂದಿಕೊಂಡು
ಹೋಗತಾಳ. ಮೊದಮೊದಲ ಏನೇನೋ ಕಿಶಿಬಿ ಮಾಡತಿದ್ದಳಂತ.
ಆದರ ಗಂಗಪ್ಪ ಬಿಟ್ಟಾನ? ಬಾರಕೋಲ ತೊಗೊಂಡು ಒಮ್ಮೆ ಝಾಡಿಸಿ
ಬಿಟ್ನಂತ. "ಇದೆಲ್ಲಾ ನಮ್ಮ ಮನ್ಯಾಗ ನಡಿಯುದಿಲ್ಲಾ ಅತ್ತಿಗಿ,
ಅವ್ವ ಹೇಳಿದಾಂಗ ಕೇಳಿಕೊಂಡ ಬಿದ್ದಿರಬೇಕು. ಅಣ್ಣ ನನಗ ಅಪ್ಪನ
ಸಮಾನ. ನಾವು ಬ್ಯಾರೇ ಆಗಾಕ ಸಾಧ್ಯ ಇಲ್ಲಾ. ನೀ ಬಂದು ಈ
ಮನೀ ಒಡೀಬ್ಯಾಡ" ಅಂತ ಹೇಳಿದ್ನಂತ. ಹೌದು, "ಅಣ್ಣಾ
ತಮ್ಮಾ ರಾಮಾ–ಲಕ್ಷ್ಮಣಾ ಇದ್ದಾಂಗ ಅದೀರಿ" ಅಂತಿರತಾಳ ಅವ್ವ.
ಗಂಗಪ್ಪ ನನಗ ಅಷ್ಟ ಸಹಾಯ ಆಕ್ಕಾನಂತ ನಾಲ್ಕೆತ್ತಿನ ಕಮತಾ ಇಟ
ಕೊಂಡು ಹೊಲಾ, ಪ್ಯಾರಲತ್ವಾಟಾ, ಲಿಂಬೀ ತ್ವಾಟಾ ನೋಡಿ
ಕೊಳ್ಳಾಕ ಆಕ್ಕೈತಿ. ಇಲ್ಲಾಂದರ ಬರೇ ಆಳಿನ ಮ್ಯಾಲೆ ಅಂದರ
ಸಾಧ್ಯಾನs ಇಲ್ಲಾ. ಅದೂ ಈಗಿನ ಕಾಲದಾಗಿನ ಆಳಿನ ಕೆಲಸಾ ಅಂದರ
ಕಚ್ಚಿಗೊಂದು ಕೈ, ಮಚ್ಚಿಗೊಂದು ಕೈ. ನಂಬಿಗೀಯಿಂದ ದುಡಿಯೂ
ವವ ಇಲ್ಲಾ. ನಮ್ಮಪ್ಪನ ಕಾಲಕ್ಕ ಇದ್ನಲ್ಲ ಜೀತದಾಳು ಭರಮಪ್ಪ.
ಮಾಪರವ ಆವರೂ ಏನ ನಿಷ್ಠಾ, ಏನ ದುಡತಾ, ಗಾಣದ ಎತ್ತು
ದುಡದಾಂಗ ದುಡೀತಿದ್ದಾ. ಎಪ್ಪದರೂ ಸಿಟ್ಟು ಬಂದಾಗ ಅಪ್ಪ ಬಾರ
ಕೋಲ ಬೀಸದ ಇರತಿದ್ದಿಲ್ಲಾ. ಅವನ ಮಗಾ ಸಾಲೀ ಕಲೀತಿನಿ, ದುಡಿ
ಯಾಕ ಒಲ್ಲೆ ಅಂತಿದ್ದಾ. ಈಗಿನ ದಿನಮಾನಾನ ತಿರುವು–ಮುರುವು
ಆಗಲಿಕ್ಕೆ ಹತ್ಯಾವು."

ಹಳ್ಳದಲ್ಲಿ ಕೈ ಕಾಲು ತೊಳೆದುಕೊಂಡು. ಚರಿಗೆ ತಿಕ್ಕಿದ ಶಂಕರಪ್ಪ
ತನ್ನಷ್ಟಕ್ಕೆ ತಾನೇ ನಗುತ್ತ ಹಾದೀ ಹಿಡಿದ. 'ನನ್ನದೊಂದು ಹುಚ್ಚು
ತಲೀನ, ಹೊಲಾ, ತ್ವಾಟಾ ನೀರೊಳಗೆ ಮುಳುಗಿ ಹೋಂಟಾವ;
ಈಗ ಆಳಿನ ಕಾಳಜೀ ಮಾಡತೇನಿ, ನಮ್ಮದs ನಮಗ ನೆಲೀ ಇಲ್ಲದಾಗ

ಉಳಿದದ್ದು ತೊಗೊಂಡ ಮಾಡೂದೇನವ. ಗೌಡರ ಜೋಡಿ ನಾಲ್ಕೈದ ಸಾರೆ ಶಹರಕ ಹೋಗಿ, ದೊಡ್ಡ ದೊಡ್ಡ ಸಾಹೇಬರಿಗೆ ಹೇಳಿಕೊಂಡು ನೀರೊಳಗ ಮುಳುಗೂ ಭೂಮಿಗೆ ಹೆಚ್ಚೆಚ್ಚು ರೊಕ್ಕಾಕೊಡೂವಾಂಗ ಕೇಳಿ ಕೊಂಡು ಅವರ ಕೈ ಬೆಚ್ಚಗ ಮಾಡಿ ಬಂದೇನಿ. ಅವರ ಕೈ ಬೆಚ್ಚಗ ಮಾಡಾಕನs ನಾಗಪ್ಪನ ಪಾಟ್ಲಿ, ಬಸವಣ್ಣಿ ಪದಕದ ಸರ ಮಾರಿ ಬಂದಿದೆಲ್ಲಾ. ಗೌಡರು ಎಲ್ಲಾ ಸಮಾಧಾನ ಹೇಳತಾರ. "ನಿನಗ ಸರಕಾರದವರು ಐವತ್ತು ಅರವತ್ತು ಸಾವಿರ ರೂಪಾಯಿ ಕೊಡತಾರ, ಮತ್ತ ಬ್ಯಾರೆ ಪಡಭೂಮಿ ಜಾಗ ಕೊಡತಾರ. ಅದs ರೊಕ್ಕದಾಗ ಬ್ಯಾರೆ ಜಮೀನು ಕೊಂಡಕೊಂಡರಾತು. ಆಷ್ಟ್ಯಾಕ ಕಾಳಜೀ ಮಾಡತೀ? ಹಿಂಗ ನಿನ್ನೊಬ್ಬನವ ಏನು ಹೊಲಾ ಮುಳುಗೊದಿಲ್ಲಾ. ಇನ್ನೂ ಎಷ್ಟೋ ಮಂದಿವೂ ಹೋಗತಾವ. ನೀವು ಅಷ್ಟು ಮಂದಿ ಸ್ವಾರ್ಥಾ ಬಿಡಬೇಕು. ಡ್ಯಾಮು ಕಟ್ಟೋದರಿಂದ ಭಾಳ ಮಂದಿಗೆ ನೀರಾವರಿ ಸಿಗತೈತಿ. ಹೆಚ್ಚು ಬೆಳಿ ಬರತೈತಿ. ನಮ್ಮ ದೇಶಕ್ಕ ನಾವು ತ್ಯಾಗಾ ಮಾಡಬೇಕು" ಅಂತ ಹೇಳತಿರತಾರ. ಆದರ ಹುಟ್ಟಿದ ಊರು. ಮನಿ-ಮನೀ ಮುಳಗದಿದ್ದರೂ ಹೊಲಾ ನಾವು ಎಲ್ಲಿ ಕೊಳ್ಳತೇವಿ ಅಲ್ಲೇ ಹೋಗಿ ಇರಾಕ ಬೇಕಲ್ಲ. ಅದಕ್ಕs ಮನೀನೂ ಬಿಡಬೇಕು. ಇಷ್ಟ ದಿನಾ ಅನ್ನ ಕೊಟ್ಟ ಭೂಮಿ ತಾಯಿನ್ನೂ ಬಿಡಬೇಕು. ಸಣ್ಣಾಂದಿರತ ತಿಂದ ಪ್ಯಾರಲಹಣ್ಣು. ಲಿಂಬೀ ಕಾಯಿ ನೆನಸಿಕೊಂಡರ ಇನ್ನೂ ಬಾಯಾಗ ನೀರು ಬರತಾವ. ಎಲ್ಲಾ ನಮ್ಮ ಕಣ್ಣು ಮುಂದs ನೀರ ಪಾಲಾಗತೈತಿ ಅಂತ ಹೊಟ್ಟ್ಯಾಗ ಸಂಕಟ ಆಗತೈತಿ. ಆದರ ಏನ ಮಾಡೂದು? ಆದಷ್ಟು ಹೆಚ್ಚು ರೊಕ್ಕಾ ತೊಗೊಂಡು ಲಗೂನ ಛೊಲೆ ೀ ಭೂಮಿ ಕೊಳ್ಳೂದು. ಈಗs ಅಂದರೂ ಇನ್ನೂ ಎರಡ ವರ್ಸ ಬೆಳಿ ತೊಗೊಳ್ಳಾಕ ಬರತೈತಿ. ಅಷ್ಟರಾಗs ಬ್ಯಾರೆ ಠಿಕಾಣಿ ಹುಡುಕೂದು. ಗಂಗಪ್ಪನ ಎಲ್ಲಾ ತಿಳಿಸೇನಿ. ಅಂವಾ ನೀ ಹ್ಯಾಂಗೆ ಹೇಳತಿ ಹಾಂಗ ಮಾಡೂಣು ಅಂತಾನ. ಆದರ ಆವ್ವಗ ಏನೇನೂ ತಿಳಿಯೂದಿಲ್ಲಾ. ಎಷ್ಟ ಹೇಳಿದರೂ "ದೇವರು ಲಗೂನ ನನ್ನಕಣ್ಣು ಮುಚ್ಚಲಿ, ಇಲ್ಲೇ ಸಾಯತೇನಿ ಹೊಲದಾಗ ಹಿರ್‍ಯಾನ ಹಂತ್ಯಾಕ ಹುಗೀರೀನನ್ನೂ" ಅಂತ ಅಳತಾಳ. ಅಕಿ ಅತ್ತಾಗಲ್ಲಾ

ನನ್ನ ಕೈಕಾಲs ಹೊಕ್ಕಾವು. ಅದರಾಗ ನಿನ್ನೆ ಮೂಲಿಮನಿ ಬಸಲಿಂಗ್ಯಾ ಬಂದಿದ್ನಲ್ಲಾ, ಜುಜೀಮುಂದ, ಅವನs ಹೇಳಿದಾ ನಮುಗ ರೊಕ್ಕಾ ಕೊಡೂ ಸಾಹೇಬರಿಗೆ ವರ್ಗ ಆಗ್ಯೆತಿ: ಅವರ ಬದಲೀ ಮತ್ತೊಬ್ಬರು ಬಂದಾರ ಅಂತ. ಆವಾಗಿಂದ ನನ್ನ ಹೊಟ್ಟಿ ಕಡ್ಯಾಕs ಹತ್ತ್ಯೆತಿ. ಮೊದಲನ ಸಾಹೇಬರಿಗೆ ಕೈ ಬೆಚ್ಚಗ ಮಾಡಿ ಎಲ್ಲಾ ಬರೋಬ್ಬರಿ ಮಾಡಿ ಬಂದಿದ್ವಿ– ನಾನೂ ಗೌಡರೂ; ಈಗನವರು ಏನ ಮಾಡತಾರೋ. ಕಾಗದ್ಪಾ ಗಂತೂ ಎಲ್ಲಾ ಅವರ ಕೈಯಾಗ ಇರತ್ಯೆತಂತ. "ಅವರು ಹೂಂ ಅಂತ ಸಹೀ ಮಾಡಿವರ ಸಾಕು, ರೊಕ್ಕ ಬಂದಾಗಂತs ತಿಳಿಕೋ" ಅಂದಿದ್ರು ಗೌಡರು. ಆದರ ಇದೊಂದು ಹೊಸಾ ತೊಡಕ ಗಂಟುಬಿತ್ತಲ್ಲಾ. ಗೌಡರು ಬರೋದು ಇನ್ನೂ ತಡಾನೋ. ಏನೋ. ಎಷ್ಟು ದಿನಾ ಅಂತ ದಾರೀ ನೋಡೂದು. ಸಾಹೇಬರ ಗುರ್ತು ಇಲ್ಲದಿದ್ದರ ಏನಾತು: ಹೋಗಿ ನೋಡಿ ಬಂದರಾತು,' ತನ್ನಷ್ಟಕ್ಕೆ ತಾನೇ ಗೊಣಗಿಕೊಳ್ಳುತ್ತ ಹೊರಟಿದ್ದ ಶಂಕರಪ್ಪನನ್ನು, ಯಪ್ಪಾs ಎತ್ಲಾಗ ಹೊಂಟೀ?" ಮನೆಯ ಬಾಗಿಲಲ್ಲಿ ನಿಂತ ಗೌರಿ ಕೂಗಿ ಎಚ್ಚರಿಸಿದಳು. ವಿಚಾರ ಮಾಡುತ್ತ ನನ್ನ ಮನೆ ದಾಟಿಯೇ ಹೋಗಿದ್ದ ಶಂಕರಪ್ಪ ತಿರುಗಿ ಬಂದ.

ಅವನ ಕೈಗೆ ನೀರು ಹನಿಸುತ್ತ, "ಯಪ್ಪಾs, ಶಾರಕ ಹೋಕ್ಕಿಯಂತ. ನನಗ ಕೆಂಪು ರಿಬ್ಬನ್ನು ತೊಗೊಂಡ ಬಾರಪ್ಪಾ" ಅಂಲಾಚಿದಳು ಗೌರಿ, ಅವನಿಗೆ ಗೊತ್ತು ಐದು ಜನ ಹೆಣ್ಣು ಮಕ್ಕಳಿಗೂ ಕೂಡಿ ರಿಬ್ಬನ್ನಿನ ಬಂಡಲ್ಲೇ ಬೇಕಾಗುವದೆನ್ನುವದು. ಆದರೂ ಆಸೆಯಿಂದ ಬೇಡು ವಾಗ ಇಲ್ಲವನ್ನುವದು ಹೇಗೆ? "ಹೂಂ" ಎಂದ.

ಬಚ್ಚಲು ಮನೆಗೆ ಹೊರಟ ಶಂಕರಪ್ಪನಿಗೆ ರೊಟ್ಟಿಯ ಸಪ್ಪಳ ಕೇಳು ತ್ತಿತ್ತು. ಗಂಗಣ್ಣ ಆಗಲೇ ಎದ್ದು ಜಳಕ ಮಾಡಿನ್ಯಾರೀ ಮಾಡುತ್ತಿದ್ದ. ಹಿರಿಯ ಮಗಳು ಓಡಾಡಿ ತಾಮ್ರದ ತಂಬಿಗೆ, ಮಜ್ಜನಸಾಲಿ ತಿಕ್ಕಿ ತಂದು ಶಿವಪೂಜೆಗೆ ಅಣಿ ಮಾಡಿದಳು. ತುಂಬಿದ ಕೊಡ ಇಲ್ಲದ್ದರಿಂದ ಬಿಂದಿಗೆ ಹಿಡಿದು ಹಿತ್ತಲಿನ ಬಾವಿಗೆ ಹೋದಳು. ಅವಳ ಹಿಂದಿನಿಂದ ತಮ್ಮನ

ಮಗ ಹಗ್ಗ ಹಿಡಿದು ಹೊರಟ. ಇನ್ನೊಬ್ಬ ಮಗಳು ಹೂವು ಬಿಡಿಸಿ ತಂದಳು. ಶಂಕರಪ್ಪ ಶಿವಪೂಜೆ ಮುಗಿಸಿ ಪಡಸಾಲೆಯ ಬಾಗಿಲ ಮೇಲಿನ ಗಣಪತಿಯ ಪೂಜೆಗೆ ಬಂದಾಗ ಆವನ ಸಣ್ಣ ಮಗು ಐದು ತಿಂಗಳ ಕೂಸು ಅಜ್ಜಿಯ ತೊಡೆಯ ಮೇಲೆ ಅಳುತ್ತಿತ್ತು. ಸುಮ್ಮನಿರಿಸಿ ಸಾಕಾಗಿ ಕೊನೆಗೆ ಕೆಂಚಪ್ಪ ಕೂಗಿದಳು: "ಬಸವಣ್ಣೀ ಬಾರಬೇ, ಒಂದಿಷ್ಟು ಮಲೀ ಸೀಪಿಸಿ ಹೋಗು."

ಅತ್ತೆಯ ಕೂಗು ಕಿವಿಗೆ ಬಿದ್ದರೂ ಸುಮ್ಮನೆ ರೊಟ್ಟಿ ಬಡಿಯುತ್ತಿದ್ದ ನೆಗೆಣ್ಣಿಯನ್ನು ನಾಗಪ್ಪ ಎಬ್ಬಿಸಿದಳು.

"ಯಕ್ಕಾ, ನಾ ರೊಟ್ಟಿ ಮಾಡ್ತೀನಿ ಏಳು ನೀ ಮಲೀ ಕುಡಿಸಿ ಬಂದು ಮಾವಗ ಊಟಕ್ಕ ಕೊಡು."

ಆಳು ಬಂದು ಹಕ್ಕಿ ಉಡುಗಿ, ಸಗಣಿ ತಿಪ್ಪಿಗೆ ಹಾಕಿ' ದನದ ಬಚ್ಚೀ ತುಂಬಿ ಗುಂಡಿಗೆ ಹಾಕಿ, "ಯವ್ವಾ ಅತ್ರೀ" ಎಂದಾಗ ಕೆಂಚವ್ವ ತಾನೇ ಎದ್ದು ನಾಲ್ಕು ರೊಟ್ಟಿ, ಹಿಂಡಿ ಇಟ್ಟು ತಂದು ಅವರಿಗೆ ನ್ಯಾರೀ ಕೊಟ್ಟಳು. ಮಣಿ, ಅಡ್ಡಣಿಗೆ ಇಟ್ಟು, ಗಂಗಾಳದಲ್ಲಿ ಬಿಸಿ ರೊಟ್ಟಿಯ ಮೇಲೆ ಉಸುಳಿ. ಕರಿಹಿಂಡಿ, ಖಾರದ ಚಟ್ನಿ, ಬೆಣ್ಣೆ ಇಟ್ಟು ಶಂಕರಪ್ಪ ನಿಗೂ ಕೊಟ್ಟಳು. ಬಸವಣ್ಣಿ ಬಂದು ಚಹ ಸೋಸಿ ಗಂಡನಿಗೂ ವೈದು ನನಿಗೂ ಹಾಕಿಟ್ಟಳು. ಗೌಡರೊಡನೆ ಓಡಾಟ ಜಾಸ್ತಿ ಆದಾಗಿನಿಂದ ಶಂಕರಪ್ಪ ತಮ್ಮ ಮನೆಗೂ ಸಕ್ಕರೆ. ಚಹಾಪುಡಿ ತರುತ್ತಿದ್ದ. ಆದರೆ ನಾಜೂಕಿನವರಂತೆ ಇವರು ಕಪ್ಪು ಬಸಿಯಲ್ಲಿ ಚಹ ಕುಡಿಯದೆ, ಊಟ ಮಾಡಿದ ಗಂಗಾಳ ತೊಳೆದು ನೀರು ಕುಡಿದು ಅದರಲ್ಲಿಯೇ ಚಹ ಕುಡಿಯುವವರು. ಅಣ್ಣ ಊರಿಗೆ ಹೋಗುವವನಿದ್ದಾನೆಂದು ತಿಳಿದ ಗಂಗಣ್ಣ ಹೊಲಕ್ಕೆ ಹೋಗದೆ ತಡ ಮಾಡುತ್ತ ಪಡಸಾಲೆಯಲ್ಲಿ ಸುತ್ತಾಡುತ್ತಿದ್ದ. ಆಳು ಆಗಲೇ ಎತ್ತು ಹೊಡೆದುಕೊಂಡು ಹೊಲಕ್ಕೆ ಹೋಗಿದ್ದ.

ಕೋಟು. ರುಮಾಲು ಧರಿಸಿದ ಶಂಕರಪ್ಪ ಪಟ್ಟಣದಲ್ಲಿ ಅಷ್ಟಾಡ

ಲೆಂದೇ ತಂದಿದ್ದ ನಾಜೂಕಿನ ಚಪ್ಪಲು ಮೆಟ್ಟಿ ತಮ್ಮನಿಗೆ ಹೇಳಿದ, "ನಾ ಒಂದಿಷ್ಟು ಕಚೇರಿಗೆ ಹೋಗಿ ಸಾಹೇಬರಿಗೆ ಭೆಟ್ಟಿ ಆಗಿ ಬರತೇನಿ. ಕೆಲಸ ಮುಗದರ ಸಂಜೀಕss ಬರತೇನಿ." ಇಲ್ಲಾಂದರ ನಾಳೀ ಬರತೇನಿ" ಗಂಗಣ್ಣ ಹೆಚ್ಚು ಮಾತಿನವನಲ್ಲ. ಸುಮ್ಮನೆ ಗೋಣು ಹಾಕಿದ, ಕೋಣೆ ಮೂಲ್ಲಿ ಹೊರಸಿನ ಬುಡದಲ್ಲಿದ್ದ ಕಬ್ಬಿಣದ ಪೆಟ್ಟಿಗೆಯಿಂದ ನೂರು ರೂಪಾಯಿ ತೆಗೆದಿಟ್ಟುಕೊಳ್ಳಲು ಶಂಕರಪ್ಪ ಮರೆಯಲಿಲ್ಲ. ಅವನು ಮೆಟ್ಟಲಿಳಿದಾಗ ಗೌರಿ ಮತ್ತೊಮ್ಮೆ ನೆನಪುಮಾಡಿದಳು, "ಯಪ್ಪಾss ಕೆಂಪು ರಿಬ್ಬನ್ನೂ ತಾ."

ಊರಿಗೆ ಬಂದು ಕಚೇರಿಗೆ ಮುಟ್ಟಿದಾಗ ಹನ್ನೆರಡು ಹೊಡೆದು ಹೋಗಿತ್ತು, ಹಾಲಿನಲ್ಲಿ ಕುಳಿತ ಗುರ್ತಿನ ಕಾರಕೂನರಿಗೆಲ್ಲ ನಮಸ್ಕಾರ ಹಾಕುತ್ತಾ, ಸಾಹೇಬರ ಕೋಣೆಯ ಬಾಗಿಲಿಗೆ ಬಂದು ಹುಸೇನಿಯನ್ನು ಪಿಸು ದನಿಯಲ್ಲಿ ಕೇಳಿದ: "ಸಾಹೇಬ್ರು ಬಂದಾರೇನಪಾ?"

"ಹೌದ್ರೀಯಣ್ಣಾ ಬಂದಾರ, ಆದರ ನಿಮ್ಮ ಹೆಸರಿನ ಚೀಟಿ ಬರ ಕೊಡ್ರಿ. ಒಯ್ದು ತೋರಸತೀನಿ, ಹೊಸಾ ಸಾಹೇಬರು ಬಂದಾಗಿಂದ ಇದನ್ನss ಚಾಲ್ತಿಯೊಳಗೆ ಇಟ್ಟಾರ," ಎಂದ ಹುಸೇನಿ.

ಶಂಕರಪ್ಪ ಚೀಟಿಯೊಡನೆ ಹುಸೇನಿಯ ಕೈಯಲ್ಲಿ ಎಂಟಾಣೆ ತುರುಕಿದ. ಹುಸೇನಿ ಮೆಟ್ಟಿ ಬೀಳುತ್ತ ಅದನ್ನು ಹಿಂದಿರುಗಿಸಿದ.

"ಅದೆಲ್ಲಾ ಬ್ಯಾಡ್ರಿ, ಸಾಹೇಬ್ರಿಗೆ ಗೊತ್ತಾದರೆ ನನ್ನ ನೌಕರೀ ಹೋದೀತು. ಅವರಿಗೆ ಇದೆಲ್ಲಾ ಸೇರೂದಿಲ್ಲಾ." ಎಂದು ಮೆಲ್ಲಗೆ ಹೇಳು ತ್ತಲೇ ಬಾಗಿಲು ನೂಕಿ ಒಳಗೆ ಹೋದ ಹುಸೇನಿ.

* * * *

ಬಾಗಿಲು ತೆರೆದುಕೊಂಡಿತ್ತು. ಶಂಕರಪ್ಪ ಒಳಗೆ ಹೋದ. ಚೀಟಿ ಯನ್ನು ಓದಿ ತಲೆ ಎತ್ತಿದ ಸಾಹೇಬರು ಅವನನ್ನೇ ದಿಟ್ಟಿಸಿದರು, ಹೌದೇ ಅದೆ ಶಂಕರನೇ ಇವನು? ಇರಬಹುದೇ? ಉಹುಂ, ಕಣ್ಣು, ಮೂಗು,

ಗುಳಿ ಬಿದ್ದಗಲ್ಲ, ಸಡಿಲಾದ ಹಲ್ಲು, ಮಾಸಿದ ಒರಿಯ ರುಮಾಲು, ಹರಿದ ಕರಿಯ ಕೋಟು...ಊಹುಂ. ಯಾವುದರಲ್ಲೂ-ಆ ಹಿಂದಿನ ಲಂಡಂಗಿ ಚೊಣ್ಣದ, ರಷ್ಟ ಪುಷ್ಟನಾಗಿದ್ದ, ದರ್ಪದ, ಜಗಗಂಟಿ ಶಂಕರನ ಹೋಲಿಕೆ ಯಾವುದರಲ್ಲೂ ಕಾಣಲಿಲ್ಲ. ಹುಡುಕಾಡುವಂತೆ ಮತ್ತೆ ಮತ್ತೆ ಅವನನ್ನೇ ನೋಡಿದರು ಸಾಹೇಬರು.

ತನ್ನನ್ನೇ ದಿಟ್ಟಿಸುತ್ತಿದ್ದ ಸಾಹೇಬರೆದುರಿಗೆ ಬಾಗಿ ಕೈ ಮುಗಿದು ವಿನುತಭಾವದಿಂದ ನಮಸ್ಕರಿಸಿದ ಶಂಕರಪ್ಪ, ಹೇಳಿದ ಸಾಹೇಬರಿಗೆ ನನ್ನ ಗುರ್ತು ಇಲ್ರೀ. ನಾನು ಬ್ಯಾತನಾಳದ ಶಂಕರಪ್ಪ,ಹೊಲದ ಕೆಲಸಕ್ಕ ಬಂದೀನಿ," ಎಂದು ಮತ್ತೆ ಬಗ್ಗಿದ.

ಮುಗಿದ ಆ ಕೈಗಳನ್ನೇ ನೋಡುತ್ತಿದ್ದ "ಸಾಹೇಬರಿಗೆ ಬೇಡವಾದ ನೆನಪೊಂದು ಮಿಂಚಿತು ಮನಸ್ಸಿನಲ್ಲಿ. ಅದೇ ಕೈಗಳೇ ತನ್ನನ್ನು ಎಷ್ಟೋ ಸಲ ಕೋಲಿನಿಂದ ಹೊಡೆದಿದ್ದವು; ಮನೆಯ ಕಟ್ಟೆಯ ಹತ್ತಿರ ಬಂದು ನಿಲ್ಲಲೂ ಅವಕಾಶ ಕೊಡದೆ ದೂರ ತಳ್ಳಿದ್ದವು. ಯಜಮಾನತಿ ತನಗೆ ನ್ಯಾರೀ ಕೊಟ್ಟಾಗ; ರೊಟ್ಟಿಯನ್ನುಮೇಲಿನಿಂದ ಚೆಲ್ಲುತ್ತಿದ್ದವು. ಚೆಲ್ಲಿದಾಗ ಒಮ್ಮೊಮ್ಮೆ ರೊಟ್ಟಿಯ ಮೇಲಿನ ಪಲ್ಲೆ ನೆಲಕ್ಕೆ ಬಿದ್ದು ಮಣ್ಣು ಪಾಲಾಗು ತ್ತಿತ್ತು. ಹಾಗಾದಾಗ ತಾನು ಒಣ ರೊಟ್ಟಿ ತಿನ್ನಬೇಕಾಗುತ್ತಿತ್ತು, ಅದನ್ನು ನೋಡಿದ ಗಂಗಣ್ಣ ಸಣ್ಣವನಾದರೂ ಕರುಳಿನವ. ಅವ್ವನ ಹತ್ತಿರ ಮಜ್ಜಿಗೆ ಕೇಳಿ ತಂದು ತೆಂಗಿನ ಕರಟದಲ್ಲಿ ಸುರಿಯುತ್ತಿದ್ದ. ತನ್ನಹೊಟ್ಟೆ ತಂಪಾಗುತ್ತಿತ್ತು. ಹೆಚ್ಚಾಗಿ ತನಗೆ ರೊಟ್ಟಿ ಕೊಡುತ್ತಿದ್ದವನು ಅವನೇ. ರೊಟ್ಟಿ ಒಂದೇ ಏನು ಗೋಲಿಗುಂಡು, ಬಳಪ್ಪ, ಒಡಕ ಪಾಟಿ, ಸಾಲೆಯಲ್ಲಿ ತನಗೆ ಬೇಕಾದುದೆಲ್ಲ ಕೊಡುತ್ತಿದ್ದ, ತನ್ನೊಡನೆ ಆಡುತ್ತಿದ್ದ. ಮನೆಗೆ ಬಂದೊಡನೆ ಹಿರಿಯರ ಹೆದರಿಕೆಗೆ ಮತ್ತೆ ದೂರ ದೂರ, ಆದರು ಆ ಕಣ್ಣುಗಳಲ್ಲಿಯ ಪ್ರೀತಿ, ಸ್ನೇಹ ಎಷ್ಟೂ ಮಾಸುತ್ತಿರಲಿಲ್ಲ.

ಕೈ ಘೈಲು ತಿರುವುತ್ತಿತ್ತು, ಮನಸ್ಸು ಎಲ್ಲೆಲ್ಲೋ ಹಾರುತ್ತಿತ್ತು.

ಫ್ಯಾನಿನ ಸ್ವಿಚ್ ಒತ್ತಿದರು; ತಂಗಾಳಿ ಸುಳಿಯಿತು. ಮುಖವೆತ್ತಿ ಮುಂದಿದ್ದ ಕುರ್ಚಿಯತ್ತ ಕೈ ಮಾಡಿ, "ಕೂಡ್ರಿ," ಎಂದರು ಸಾಹೇಬರು.

ಸಾಹೇಬರ ಗಂಭೀರ ಮುಖ ಕಂಡು ಗಾಬರಿಯಾಗಿದ್ದ ಶಂಕರಪ್ಪ ಆಶ್ಚರ್ಯದಿಂದ ನೋಡಿದ. ಇದುವರೆಗ ಯಾವ ಸಾಹೇಬರೂ ಅವನಿಗೆ ಕೂಡ್ರಲು ಹೇಳಿರಲಿಲ್ಲ, ಅನುಮಾನಿಸುತ್ತಿದ್ದ ಅವನತ್ತ ತಿರುಗಿ ಮತ್ತೊಮ್ಮೆ, ಕೊತ್ಕೊಳ್ರಿ ಮೊದಲ. ಎಂದರು. ಎದೆ ಡವ ಡವ ಎನ್ನುತ್ತಿದ್ದಾಗಲೇ ಗಟ್ಟಿ ಧೈರ್ಯ ಮಾಡಿ ಕುಳಿತೇ ಬಿಟ್ಟ ಶಂಕರಪ್ಪ.

ತಟ್ಟನೆ ಬಂದಿತು ಸಾಹೇಬರ ಪ್ರಶ್ನೆ: "ಚಹಾ ಕುಡೀತೀರೇನ್ರೀ?"

ಶಂಕರಪ್ಪ ತೊದಲಿದ, "ಹೂಂ ಹೌದು," ಎಂದು. ತಾನು ಬಂದಿದ್ದು ರೊಕ್ಕಾ ಕೊಡೂ ಸಾಹೇಬರ ಕಡೆಗೋ ಹೌದೋ ಅಲ್ಲವೋ ಎಂದು ಸಂಶಯಿತನಾಗಿದ್ದ. ಹಿಂದಿನವರೆಲ್ಲಾ ತನ್ನ ಹಣದಲ್ಲೇ ಮೋಜು ಮಾಡಿ ಜಬರ್ದಸ್ತಿಯಿಂದ ಮಾತನಾಡುತ್ತಿದ್ದರು. ಇವರೇಕೆ ಹೀಗೆ? ಓಹೋ! ಇವರಿಗೂ ಚಹಾ ಬೇಕೇನೋ. ಢಟುಕ್ಕನೇ ಎದ್ದವನೇ, "ನಾ ತರಸ್ತೀನಿ ಸಾಹೇಬರ್ರ ಚಹಾ, ಸೀ. ಖಾರಾ, ಹೇಳಿ ಬರಲೇನ್ರಿ?" ಎಂದ.

"ಕೊತ್ಕೊಳ್ರಿ ಸುಮ್ಮನ, ನೀವು ಹೋಗೂದಬ್ಯಾಡಾ ಹುಸೇನಿ ಹೇಳಿ ಬರತಾನ, ಉಡುಪಿ ಹಾಟೆಲ್ ಮಾಣಿ ತರತಾನ. ಈಗ ನಾ ತರಸೂದು ಬರೇ ಚಹಾ ಅಷ್ಟ. ನಾ ನಿನ ಕೈಲೆ ಮುಟ್ಟೂದಿಲ್ಲಾ, ನೀವು ಕುಡೀ ತೀರಲ್ಲಾ?" ಪ್ರಶ್ನೆ ಕಟುವಾಗಿತ್ತು.

ಶಂಕರಪ್ಪನಿಗೆ ದಿಕ್ಕು ತಪ್ಪಿತು. ಏನು ಉತ್ತರ ಕೊಡಬೇಕೊ ತಿಳಿಯಲಿಲ್ಲ. ಪೆಚ್ಚಾಗಿ ನಕ್ಕ. "ನಾನು ಮನೀಯೊಳಗ ಶಿವಪೂಜಿ. ಮಡೀ ಮಾಡಿದರೂ ಹೊರಗೆ ಬಂದಾಗ ಎಲ್ಲಾ ತೊಗೋತೇನಿ. ಅದರಾಗ ನೀವು ಕೊಡುತೀನಂದರ ನಾಯಾಕ ಬ್ಯಾಡ ಅನ್ನಲಿ?" ಎಂದು ಅವರನ್ನು ಪ್ರಸನ್ನಗೊಳಿಸಲು ಮತ್ತೆ ಹಲ್ಲು ಕಿರಿದ.

ಸಾಹೇಬರ ಹುಬ್ಬು ಗಂಟಾಯಿತು. "ನಾ ಮುಟ್ಟಿದ್ದು ನೀವು ಹ್ಯಾಂಗ ಕುಡೀತಿರಿ? ನಾ ಯಾರು ಅನ್ನೂದು ನಿಮಗ ಗೊತ್ತ ಹತ್ತಿಲ್ಲಾ,'

ಅದಕ್ಕ ಹಾಂಗೆ ಮಾತಾಡತೀರಿ. ನನ್ನ ಕುಲಾ ಹೇಳದೆ ನಿಮಗ ಪೋಸ ಮಾಡೂದಿಲ್ಲಾ. ನಾನು ನಿಮ್ಮ ಜೀತದಾಳು ದ್ಯಾಮಪ್ಪನ ಮಗಾ ಮರಿಯಪ್ಪ ಗುರುತು ಹತ್ತಿತೇನು?"

ಮುಖಕ್ಕೆ ರಾಚಿದಂತೆ ಬಂದ ಸವಾಲಿಗೆ ಹೆದರಿ ತತ್ತರಿಸಿದ ಶಂಕರಪ್ಪ. ಕೈ ಕಾಲು ನಡುಗ ಹತ್ತಿದವು. ಕುರ್ಚಿಯ ಕೈಗಳನ್ನು ಬಿಗಿಯಾಗಿ ಹಿಡಿದ. ಗುರುತು ಹಿಡಿಯಲು ಸಾಹೇಬರ ಮುಖವನ್ನೇ ನೋಡಬೇಕಲ್ಲ. ಧೈರ್ಯವಾಗಲೊಲ್ಲದು. ಗಂಟಲು ಒಣಗಿತು ಕುಳಿತಲ್ಲೇ ಚಡಪಡಿಸಿದ 'ಮರಿಯ' 'ಮರಿಯ' ಎಂದು ಗಂಟಲೊಳಗೇ ಗುಣುಗುಣಿಸಿದ.

ದ್ಯಾಮನ ಹೆಂಡತಿ ತಮ್ಮ ಮನೆಗೆ ಕೆಲಸಕ್ಕೆ ಬಂದಾಗಲೆಲ್ಲಾ ಒಂದು ಪುಟ್ಟಬೆತ್ತಲೆ ಹುಡುಗನನ್ನು ಕರೆದುಕೊಂಡು ಬರುತ್ತಿದ್ದದ್ದು ನೆನಪಾಯಿತು. ಅದು ಅಂಬೆಗಾಲಿಡುತ್ತಾ ಹಕ್ಕಿ ಬಿಟ್ಟು, ಅಂಗಳದ ಸಮೀಪ ಬಂದಾಗಲೆಲ್ಲಾ ಅಪ್ಪ ಗುಡುಗುತ್ತಿದ್ದ" ಎಲೇ ಎಲ್ಲ್ಯಾದಿ, ಕರಕೊಂಡು ಹೋಗ ಅತ್ಲಾಗ, ಮುಟ್ಟಿಗಿಟ್ಟೀತು." ಎಂದು, ತನಗಿನ್ನೂ ನೆನಪಿದೆ. ಒಮ್ಮೆ ತಾನು, ಗಂಗಣ್ಣ ಗೆಳೆಯರೊಡನೆ ಚಿಣ್ಣಿ ಕೋಲು ಆಡುವಾಗ ಆಟ ನೋಡುವ ಆಸೆಯಿಂದ ಮುಂದೆ ಬಂದ ಮರಿಯ ತೀರ ಸನಿಹಕ್ಕೆ ಬಂದು ನಿಂತಿದ್ದ. ತಾನು ನೋಡಿದವನೇ ಅಪ್ಪನ ಹಾಗೆಯೇ ಹಾರಾಡಿ. ಕೋಲು ತಂದು ಅವನನ್ನು ಹೊಡೆಯಲು ಬೆನ್ನು ಹತ್ತಿದ್ದ. ಓಡುತ್ತಿದ್ದ ಮರಿಯ ಮುಗ್ಗರಿಸಿ ಬಿದ್ದಿದ್ದ. ಬಾಯಿ ತುಂಬ ಬಳ ಬಳ ರಕ್ತ ಸುರಿದಿತ್ತು, ಹಲ್ಲಿಗೆ ಪೆಟ್ಟುಹಾಕಿ.

ಶಂಕರಪ್ಪನಿಗೆ ಕಣ್ಣು ಕತ್ತಲೆಯಿಟ್ಟಿತು. ಕಣ್ಣು ಮುಚ್ಚಿಕೊಂಡು ಕೂತು ಸುಧಾರಿಸಿಕೊಂಡ. ಹಾಗೆಯೇ ಕಣ್ಣೆತ್ತಿ ಸಾಹೇಬರತ್ತ ನೋಡಿದ. ಅವರು ಮತ್ತೆ ಫೈಲಿನ ಮೇಲೆ ಕಣ್ಣಾಡಿಸುತ್ತಿದ್ದರು. ಅದು ತನ್ನದೇ, ಈಗ ಧೈರ್ಯವಾಗಿ ಅವರ ಮುಖವನ್ನೇ ದಿಟ್ಟಿಸಿದ. ತಾನು ತೊಟ್ಟು ಬಿಟ್ಟ ಅಂಗಿ ಚಡ್ಡಿ ಹಾಕಿದ್ದ, ಸಣಕಲಾಗಿದ್ದ, ಎಣ್ಣೆ ಕಾಣದ ಕೂದಲಿನ, ಹೊಲದ ಕೆಲಸಗಳಿಂದ ಒರಟಾಗಿ ಬಡಕಲಾಗಿದ್ದ ಕರಿಯ ಹುಡುಗ ಮರಿಯ ನಲ್ಲಿ–ಶುಭ್ರವಾದ ಅರಿವೆ ಹಾಕಿಕೊಂಡು. ದುಂಡು ದುಂಡಗೆ ದಷ್ಟ ಪುಷ್ಟ

ವಾಗಿ, ಬಣ್ಣವೇರಿದ, ಆಕರ್ಷಕ ಕ್ರಾಪಿನ, ದರ್ಪ. ಮಂದಹಾಸ ಎರಡೂ ಕೂಡಿದ ಮುಖವ ಅಧಿಕಾರದ ಕುರ್ಚಿಯಲ್ಲಿ ಕುಳಿತ ಈ ಸಾಹೇಬರೆಲ್ಲಿ? ಎಳ್ಳಷ್ಟೂ ಹೋಲಿಕೆಯಿಲ್ಲ "ಉಹುಂ" ಎಂದ.

"ನಿಮಗ ಜುಲುಮಿ ಮಾಡೂದಿಲ್ಲ, ನೀವು ನನ್ನ ಅತಿಥಿ. ಅದಕ್ಕs ಚಹಾ ಕುಡೀತೀರೇನು ಅಂತ ಕೇಳಿದೆ. ಬ್ಯಾಡಾದರ ಬಿಡ್ರಿ." ಮಾತಿನಲ್ಲಿ ಮೃದುತನವಿತ್ತು.

"ಇಲ್ರೀ ನಾ ಏನು ಚಹಾ ಬ್ಯಾಡ ಅನ್ನೂದಿಲ್ಲಾ. ತರಸ್ರಿ ಕುಡೀತೀನಿ," ಸಾಹೇಬರಿಗೆ ಅಸಮಾಧಾನವಾದೀತೆನ್ನುವ ಹೆದರಿಕೆಯಿಂದ ಶಂಕರಪ್ಪ ನುಡಿದ.

ಚಹ ಕುಡಿದಾದ ಮೇಲೆ ಸಿಗರೇಟು ಹೊತ್ತಿಸಿದ ಸಾಹೇಬರು,"ಹುಂ. ಈಗ ಹೇಳ್ರಿ ನಿಮ್ಮ ಪ್ರಾಬ್ಲೆಮ್ ಏನು ಅಂತ?" ಎಂದು ಕುರ್ಚಿಯಲ್ಲೊರಗಿ ಕಣ್ಣು ಮುಚ್ಚಿದರು. ಶಂಕರಪ್ಪ ಎಲ್ಲವನ್ನೂ ವಿವರಿಸಿದ. "ಒಕ್ಕಲತನಾ ಮಾಡಿ ಬದುಕುವವರು ನಾವು. ತ್ವಾಟಾ ಹೊಲಾ ಎಲ್ಲಾ ನಿರೂಳಗೆ ಮುಳುಗಿಹೋಗತಾವ. ಮನೀಯೊಳಗ ಮಂದೀನೂ ಭಾಳ. ಮುಂದ ಬಾಳೇ ಮಾಡೂದು ಕಠಿಣ ಆಗತೈತಿ. ಬ್ಯಾರೇ ಹೊಲಾ ಕೊಳ್ಳಬೇಕು ಅಂತ ಮಾಡೀವಿ. ಅದನ್ನ ಬಿಟ್ಟರ ಗತೀನs ಇಲ್ಲಾ ನಮಗ. ಅದಕ್ಕ ತಾವು ದೊಡ್ಡಮನಸ್ಸು ಮಾಡಿ ಹೊಲಕ್ಕ ತ್ವಾಟಕ್ಕ ಹೆಚ್ಚು ರೊಕ್ಕಾ ಸಿಗೂ ಹಾಂಗ ಮಾಡಬೇಕು. ಎಲ್ಲಾ ನಿಮ್ಮ ಕೈಯಾಗ ಇರತೈತಂತ ಗೌಡರು ಹೇಳತಾರ" ಎಂದು ಮತ್ತೆ ಮತ್ತೆ ಕೈ ಮುಗಿದ. ಮರಿಯ ನಾವರೂ ಅವನೀಗ ಸಾಹೇಬ ಅವನಿಗೆ ಕೈ ಮುಗಿದರೆ ತಪ್ಪಿಲ್ಲ.

ಸಾಹೇಬರ ಮನಸ್ಸು ಮತ್ತೆ ಹಿಂದಕ್ಕೋಡಿತು. ನಾನು ಸಾಲೆ ಕಲಿಯುತ್ತೇನೆಂದು ಹಟ ಮಾಡಿದಾಗ ಅಪ್ಪ-ಅವ್ವ ತನ್ನ ಮನಸ್ಸು

ನೋಯಿಸಲಿಚ್ಛಿಸದೆ ಸಾಲೆಗೆ ಕಳಿಸಿದರು. ಗಾಂಧೀವಾದಿ ಬೂದಿಹಾಳಿ ಮಾಸ್ತರರಂತಹ ಪುಣ್ಯಾತ್ಮರ ಸಹೃದಯತೆಯಿಂದ, ಗಂಗಣ್ಣನ ಪುಸ್ತಕ ಪಾಟಿಗಳ ನೆರವಿನಿಂದ ತಾನು ಮುಲಕೀ ಪರೀಕ್ಷೆ ಪಾಸಾಗಿದ್ದ. ಬರೀ ಜೀತ ದಾಳಾಗಿ ದುಡಿಯುವದರಲ್ಲಿ ಸುಖವಿಲ್ಲವೆನ್ನುವದನ್ನು ಮನಗಂಡು ಇನ್ನೂ ಮುಂದೆ ಕಲಿಯುವ ಆಸೆ ಮಾಡಿದ್ದ. ಆ ಮಾತು ದೊಡ್ಡ ಸಾವುಕಾರರ ಕಿವಿಗೆ ಬಿದ್ದಾಗ ಅವರೆಂದ ಮಾತು ಇನ್ನೂ ತನ್ನ ಎದೆಯಲ್ಲಿ ಕೊರೆದಂತಿವೆ.

"ಇಂಥಾ ದರಿದ್ರ ಮುಂಡೇವು ಎಲ್ಲಾ ಸಾಲೀಕಲಿತರ ಸರಸೋತಿಗೆ ಮೈಲಿಗಿ ಆಗತದ. ಸುಮ್ಮನ ನಿನ್ನ ಮಗನ್ನ ಜೀತಕ್ಕ ಇಡಲೇದ್ಯಾಮ್ಯಾ. ಇಲ್ಲದs ಸಲಿಗೀ ಕೊಡಬ್ಯಾಡಾ. ಸಲಿಗೀ ನಾಯಿ ತಲೀಗೆ ಏರಿತಂತ. ಹಾಂಗ ಆದೀತು. ಇಲ್ಲೇ ಇದ್ದರ ಸತ್ತಾಗ ನಿನಗ ಬಾಯಾಗ ಹನಿ ನೀರು ಬಿಟ್ಟಾನು—ಅವನ್ನ ಎಲ್ಲೂ ಕಳಸಬ್ಯಾಡಾ."

ತಾನು ಮಾತ್ರ ಹಟ ಬಿಟ್ಟಿರಲಿಲ್ಲ: ಅಪ್ಪನಿಗೆ ಮಾಸ್ತರರು ಬುದ್ಧೀ ಹೇಳಿದ್ದರು: "ಸರಸ್ವತಿ ಅವಗ ಒಲೀತಾಳ ಅನ್ನೂದು ನನಗೆ ಖಾತ್ರಿ ಅದ. ನಿಮಗ ಸಾಲೀ ಫೀ ತೊಗೊಳ್ಳುದಿಲ್ಲಾ. ಮಗಾ ಶಾಣ್ಯಾ ಅದಾನ, ಅವಗ ಸ್ಕಾಲರಶಿಪ್ಪೂ ಸಿಗತದ. ಮುಂದ ಸಾಲೀ ಕಲಿಸು," ಎಂದು, ತಾನು ಈಗ ಈ ಸ್ಥಿತಿಯಲ್ಲಿರಲು ಕಾರಣ ಮಾಸ್ತರರೇ ಅನ್ನಬೇಕು; ಅವರೇ ಕಾರಣ, ಛೇ ಆದರ ಅವರೊಬ್ಬರೇ ಅಲ್ಲ, ಇನ್ನೊಂದು ದೊಡ್ಡ ಜೀವ ಇತ್ತು—ಯಜಮಾನತಿ ಕೆಂಚವ್ವ. ಅಪ್ಪನ ಪಾಲಿನ ದೇವರು ಆಕೆ. ಅವರ ಹತ್ತಿರ ಹೋಗಿ ತನ್ನೆಲ್ಲ ಕಷ್ಟ ತೋಡಿಕೊಂಡಿದ್ದ ಅಪ್ಪ. ಮಗನನ್ನು ದೂರದ ಶಾಲೆಗೆ ಕಳಿಸಲಿಕ್ಕೆ ಹಣ ಬೇಕಾಗಿತ್ತು. ಅಪ್ಪನ ಹತ್ತಿರ ಒಂದು ದುಡ್ಡೂ ಇರಲಿಲ್ಲ. ಎಲ್ಲವನ್ನೂ ಕೇಳಿದ ಕೆಂಚವ್ವ ಒಳಗೆ ಹೋಗಿ, ಮೆಣಸಿನಕಾಯಿ, ಕಾಳು-ಕಡಿ ಮಾರಿ, ಗಂಡನಿಗೆ ಗೊತ್ತಿಲ್ಲದಂತೆ ಕೂಡಿಟ್ಟ ಕಳ್ಳಗಂಟಿನಿಂದ ಐವತ್ತು ರೂಪಾಯಿ ತಂದು ಕೊಟ್ಟು, "ಇಕಾ ದ್ಯಾಮಾ, ಈ ರೊಕ್ಕಾ ತೊಗೋ. ಮಗನ್ನ ಸಾಲಿಗೆ ಹಾಕು. ಅವನ ನಸೀಬ ದಾಗ ಇದ್ದಾಂಗ ಆಗತೈತಿ. ದೇವರ ಮ್ಯಾಲೆ ಭಾರಾ ಹಾಕು. ಮತ್ತs

ಈ ವರ್ಷ ಜೀತಾ ಮುಗದ ಮ್ಯಾಲೆ ನೀವೂ ಹೋಗಿ ಅವನ ಹಂತ್ಯಾಕ ಇದ್ದ ಬಿಡ್ರಿ. ಇಲ್ಲಿ ದುಡಿಯೂದ ಅಲ್ಲೇ ದುಡಕೊಂಡ ಇರ್ರೀ," ಎಂದಿದ್ದರು. ಆ ತಾಯೀನ್ನ ಸಂಪ್ರೀತ್ತಿನೊಳಗ ನೆನೀಬೇಕು. ಪಟ್ಟನೆ ಕಣ್ಣು ತೆರೆದ ಸಾಹೇಬರು. "ಕೆಂಚವ್ವನೋರು ಹಾಂಗದಾರ?" ಎಂದರು. ಉತ್ತರ ಏನೆಂದು ಬರುವದೋ ಎನ್ನುವ ಅಳುಕು ಇತ್ತು ಧ್ವನಿಯಲ್ಲಿ.

"ಅದಾಳ್ರಿ ಹಾಂಗs ಇದ್ದೂ ಸತ್ಹಾಂಗ. ಅಪ್ಪ ಹೋದಾಗಿಂದ ಆಕೀ ಜೀವಕ ಏನೂ ಸುಕಾ ಇಲ್ಲಾ. ಹೊಲಾ ಮುಳುಗೂ ಸುದ್ದೀ ಕೇಳಿದಾಗಿಂದಂತೂ ಹೊಟ್ಟಿ ಬ್ಯಾನಿ ಹಚಿಕೊಂಡಾಳ. ದೇವರು ಲಗೂನs ನನ್ನ ಕಣ್ಣು ಮುಚ್ಚಲಿ ಅಂತ ಅಳತಾಳ." ಶಂಕರಪ್ಪ ದೈನಾಸದಿಂದ ಹೇಳಿದ, ಸಾಹೇಬರ ಮನಸ್ಸಿನಲ್ಲಿ ಮರುಕ ಹುಟ್ಟಿಸಲು. ಆದರೆ ಅಲ್ಲಿ ಆಗಲೇ ಸೆಲೆ ಒಡೆದಿತ್ತು. ತಮ್ಮ ಭಾವನೆ ಶಂಕರಪ್ಪನಂಥ ಶುಷ್ಕ ಹೃದಯಿಗೆ ಕಾಣದಂತೆ ಕಣ್ಣು ಮುಚ್ಚಿದರು.

ತಾನು ಚಿಕ್ಕಂದಿನಲ್ಲಿ ಕೆಲಸ ಮಾಡಿದ ಹೊಲ ಅವರ ಕಣ್ಣ ಮುಂದೆಯೇ ಮಾಯವಾಯಿತು. ಹಸಿರು ತುಂಬಿ ತೊನೆಯುತ್ತಿದ್ದ ಬೆಳೆ ಪ್ರವಾಹದಲ್ಲಿ ಮುಳುಗಿ ಹೋಯಿತು. ಗಂಗಣ್ಣನೊಡನೆ ಕಣ್ಣು ಮುಚ್ಚಾಲೆ ಆಡಿದ, ಲಿಂಬೀತೋಟ ತೇಲಿಹೋಯಿತು. ಪೇರಲ ಗಿಡದ ತುಂಬ ಸುರಿದ ಹಣ್ಣುಗಳ ಚಿತ್ರ ಕಣ್ಣ ಮುಂದೆ ಕಟ್ಟಿತು. ಒಂದು ದಿನ ತಾನು ಗಂಗಣ್ಣ ಕೂಡಿ ಒಂದೇ ಪೇರಲಹಣ್ಣನ್ನು ಕಚ್ಚಿ ತಿಂದದ್ದನ್ನು. ಈ ಶಂಕರಪ್ಪ ಬಾಗಿ ಬಾಗಿ ಕೈ ಮುಗಿಯುತ್ತ. ಹಲ್ಲು ಕಿರಿಯುತ್ತ ನಿಂತಿದ್ದಾನಲ್ಲ, ಇದೇ ಶಂಕರಪ್ಪ, ನೋಡಿ, ಚಾಡಿ ಹೇಳಿದ್ದ ತನ್ನ ತಂದೆಯ ಮುಂದೆ.

ಸಾವುಕಾರರು ರಾಕ್ಷಸಾವತಾರ ತಾಳಿದ್ದರು. "ಸೂಳೇಮಗನs ಇಷ್ಟು ಸೊಕ್ಕು ಬಂತೇನು ನಿನಗ? ನಿನ್ನ ಚರ್ಮಾನs ಸುಲಿತೀನಿ ಇವತ್ತ," ಎನ್ನುತ್ತ ತನ್ನ ಬೆನ್ನ ಮೇಲೆ ಬಾರಕೋಲು ಬೀಸಿ ಬೀಸಿ ಹೊಡೆದಿದ್ದರು.

ನೆಲದ ಮೇಲೆ ಉರುಳಾಡಿಸಿದ್ದರು. ಥರ ಥರ ನಡುಗುತ್ತ ಅಪ್ಪ ಒಂದು ಮೂಲೆಯಲ್ಲಿ ಅಳುತ್ತ ನಿಂತಿದ್ದ. ಅವ್ವನಂತೂ ತನ್ನ ಅವಸ್ಥೆ ನೋಡ ಲಾರದೆ. ಸಂಕಟಪಡುತ್ತ ಗುಡಿಸಲಿಗೆ ಓಡಿಹೋಗಿದ್ದಳು. ಅವರ ಕೈಯಿಂದ ತನ್ನನ್ನು ಬಿಡಿಸಿಕೊಳ್ಳುವ ಎದೆಗಾರಿಕೆ ಯಾರಿಗೂ ಆಗಲಿಲ್ಲ. ಅಂದು ಸಂಜೆಯವರೆಗೂ ಏಳಲು ಆಗದೆ ಅಳುತ್ತ, ಹಸಿವಿನಿಂದ ಸಂಕಟ ಪಡುತ್ತ ಹಕ್ಕಿಯಲ್ಲೇ ಹೊರಳಾಡಿದ್ದೆ ತಾನು. ಅಂದಿನ ನೆನಪಾದರೆ ಇಂದಿಗೂ ಮೈ ಜುಮ್ಮೆನ್ನುತ್ತದೆ. ಹೊಟ್ಟೆಯಕಿಚ್ಚು ಉರಿಯಾಗಿ ಸಾವಿ ರಾರು" ನಾಲಗೆಗಳಿಂದ ಧಗ ಧಗ ಎಂದು ಪ್ರಜ್ವಲಿಸತೊಡಗುತ್ತದೆ. ತಮ್ಮನ್ನು ದನಕ್ಕಿಂತಲೂ ಕಡೆಯಾಗಿ ಕಂಡಿದ್ದರಲ್ಲ ಇವರು. ಅಂದಿಗೂ ಇಂದಿಗೂ ಎಷ್ಟು ಅಂತರ! ಆಕಾಶ–ಪಾತಾಳ!! ಅದೇ ಶಂಕರಪ್ಪನನ್ನು ಇಂದು ಸನ್ನೆಮಾತ್ರದಿಂದ ಕುಣಿಸಬಲ್ಲರು. ಒಂದೇ ಒಂದು ಮಾತಿನಿಂದ ನಾಶಮಾಡಬಲ್ಲರು. ಹೌದು, ಮಾಡಬೇಕು, ಕುಣಿಸಬೇಕು. ಉಸಿರು ಗಟ್ಟಿಸಿ ಕೊಲ್ಲಬೇಕು, ನಾಶಮಾಡಬೇಕು ಇವರನ್ನು ಕುರ್ಚಿಯ ಹಿಡಿಪು ಮೇಲಿದ್ದ ಕೈಪು ಹಿಡಿತ ಬಿಗಿಯಾಯಿತು. ಕಣ್ಣು ತೆರೆದ ಸಾಹೇಬರ ಮುಖ ನೋಡಿದ ಶಂಕರಪ್ಪ ದಂಗು ಬಡೆದ, ಮುಖದಲ್ಲಿ ರೌದ್ರ ಕಳೆ. ಆಜ್ಞೆ ಮಾಡಿದರು: "ನಿಮ್ಮ ಕಾಗದಾ ನೋಡಿ ಇಟ್ಟಿರತೇನಿ. ಹೋಗಿ ಬರ್ರಿ."

ತನ್ನ ಕೆಲಸ ಕೆಡುವದೆನ್ನುವದು ಖಾತ್ರಿಯಾಯಿತು ಶಂಕರಪ್ಪನಿಗೆ. ಮೊದಲು ಚೆನ್ನಾಗಿ ಮಾತನಾಡಿದ ಸಾಹೇಬರು ಈಗ ಸಿಟ್ಟಾಗಿದ್ದುದರ ಕಾರಣ ಅವನ ಮಂದಮತಿಗೆ ಹೊಳೆಯಲಿಲ್ಲ, ಧೈರ್ಯ ಮಾಡಿ ಹೇಳಿದ "ಅವ್ವಗ ನಿಮ್ಮ ಸುದ್ದೀ ಹೇಳತೇನಿ, ಕೇಳಿ ಸಂತೋಷ ಪಡತಾಳ."

ಶಂಕರಪ್ಪನ ಬಾಣ ತಾಕಿತು, ಅವ್ವನೋರ ಹೆಸರು ಕೇಳಿದಾಗ ಸಾಹೇಬರ ಮುಖ ಮೃದುವಾಯಿತು. ಆವತ್ತು ತಾನು ಬಾಸುಂಡೆಗಳ ನೋವಿನಿಂದ, ಜ್ವರದಿಂದ ನರಳುತ್ತ ಹಕ್ಕಿಯಲ್ಲಿ ಬಿದ್ದಾಗ, ಗಂಡ ಹೊರಗೆ

ಹೋಗುವುದನ್ನೇ ಕಾಯುತ್ತಿದ್ದ. ಕೆಂಚವ್ವ ಎಣ್ಣೆ ಅರಿಸಿಣ ಕಲಿಸಿ ತಂದು ಗಂಗಣ್ಣನಿಂದ ತನ್ನ ಬೆನ್ನಿಗೆ ಹಚ್ಚಿಸಿ, ಕಾವು ಕೊಡಿಸಿದ್ದರು. ತಿನ್ನಲು ರೊಟ್ಟಿ, ಬೆಲ್ಲ ಕೊಟ್ಟು ರಮಿಸಿದ್ದರು. ಆ ಅಂತಃಕರಣದ ಮೂರ್ತಿಯನ್ನು ಮರೆಯೋದು ಹೇಗೆ ಸಾಧ್ಯ? ಗಂಗಣ್ಣನಿಗೋ ಅಣ್ಣನಿಗಿಂತಲೂ ತಾನು ಸಮೀಪದವ. ಪ್ರೀತಿಯ ಮಹಾ ಸೆಲೆ. ಈಗಲೂ ಅವನ ಕೈ ತಮ್ಮ ಬೆನ್ನು ನೇವರಿಸುತ್ತಿರುವಂತೆ ಅನುಭವವಾಯಿತು ಸಾಹೇಬರಿಗೆ. ಆ ಗುಂಗಿನಲ್ಲೇ ಇದ್ದರು ಸ್ವಲ್ಪ ಹೊತ್ತು.

"ಸಾಹೇಬರ," ಎನ್ನುತ್ತ ಶಂಕರಪ್ಪ ತಮ್ಮ ಕಡೆಗೆ ಹಸಿರು ನೋಟು ಚಾಚಿದ್ದನ್ನು ಕಂಡರು. "ಇನ್ನೊಮ್ಮೆ ಬರೂಮುಂದ ಇನ್ನಷ್ಟ ತರತೇನಿ," ಎಂದು ಪಿಸುಗುಡುತ್ತ ಪೆಚ್ಚು ನಗೆ ನಕ್ಕ ಶಂಕರಪ್ಪ.

'ಓಹ್!! ಇವನು ಹಣದಿಂದ ನನ್ನನ್ನು ಕೊಳ್ಳಬಯಸುತ್ತಿದ್ದಾನೆ' ಹಿಂದೆಯೂ ನನ್ನನ್ನು ಕೊಂಡುಕೊಂಡಿದ್ದ. ತನ್ನ ಇಚ್ಛೆಯಂತೆಯೇ ಕುಣಿಸಿದ, ಹಿಂಡಿ ಹಿಪ್ಪೆ ಮಾಡಿದ, ಕೊಂದ. ಈಗಲೂ ಹಾಗೆಯೇ? ಅವನಿಗೆ ನನ್ನನ್ನೇ ಮಾರಿ ಕೊಳ್ಳಲೇ? ಛೇ ನನಗೆ ನನ್ನ ಸ್ವಾತಂತ್ರ್ಯ ಬೇಕು. ನಾನು ನನ್ನನ್ನು ಯಾರಿಗೂ ಮಾರಿಕೊಳ್ಳಲಾರೆ. ಗುಲಾಮನಾಗಲಾರೆ. ನಾನು ನಾನೇ. ನಾನೇ ನಾನು, ನಾನೇ ಅವನನ್ನು ಕೊಂಡುಕೊಳ್ಳಬೇಕು. ನನ್ನ ಬೆಲೆ ಕೊಡೋದು ಅವನಿಂದ ಸಾಧ್ಯವಿಲ್ಲ ಅನ್ನೊದನ್ನ ಹೇಳಬೇಕು. ಕೊಳ್ಳಬೇಕು. ಹೌದು ನಾನೇ ಕೊಳ್ಳಬೇಕು. ಅವನನ್ನು ನನ್ನ ಔದಾರ್ಯದಿಂದ.'

ತಿರಸ್ಕಾರದಿಂದ ಅವನತ್ತ ನೋಡಿದರು.

"ಮತ್ತೆ ಇನ್ನಷ್ಟು ತರತೇನಿ ಸಾಹೇಬರ. ಇದು ನಿಮ್ಮ ಸಿಗರೇಟಿಗೆ," ಎಂದ ಶಂಕರಪ್ಪ ಧೈರ್ಯದಿಂದ.

ಕೈಯಲ್ಲಿದ್ದ ಸಿಗರೇಟನ್ನು ಆಶ್‌ಟ್ರೇಯಲ್ಲಿ ಅದ್ದಿ, ಆರಿಸಿ. ಕಿಸೆಯ

ಲ್ಲಿಯ ಪ್ಯಾಕ್ ತೆಗೆದು ಅಪ್ಪನಿಗೆ ತೋರಿಸಿ, "ನನ್ನ ಹತ್ರ ಸಿಗರೇಟು ಅವೆ ಆ ನೋಟು ಕಿಸೇಕ ಹಾಕ್ಕೊಂಡು ಊರಿಗೆ ಹೋಗ್ರಿ. ನಾನು ಊರಿಗ ಬಂದು ಕೆಂಚಪ್ಪನೋರನ. ಗಂಗಣ್ಣನ್ನ ಭೆಟ್ಟಿ ಆಗತೇನಿ. ಅವರ ಆಶೀರ್ವಾದಾ ಬೇಕು ನನಗ." ಎಂದರು.

ಆಶ್ಚರ್ಯದಿಂದ ಬಾಯಿ ತೆರೆದು ಅವರನ್ನೇ ನೋಡುತ್ತ ಶಾರಪ್ಪ ನಿಂತಾಗ ಹುಸೇನಿ ಜೇರೆಯುವರ ಚೀಟಿಯೊಡನೆ ಒಳಗೆ ಬಂದ.



# ಆಸೆಗಳು ನೂರಾರು

—ಉಷಾ ನವರತ್ನರಾವ್

ಅವಳು ಜೇಡಿರ ಬಲೆಯಂತೆ ನವಿರಾದ ನಸುನೀಲಿಯ ಪರದೆಯನ್ನು ಸದ್ದಿಲ್ಲದೇ ತೆರೆದು ನೋಡಿದಾಗ ನೀನಿನ್ನೂ ಅಲಂಕಾರವನ್ನೇ ಮುಗಿಸಿರ ಲಿಲ್ಲ. ಕೈ ಬೆರಳುಗಳಿಗೆ ಹಾಕಿದ್ದ ಕೆಂಪು ಬಣ್ಣವನ್ನು ಸರಿಯಾಗಿದೆಯೋ ಇಲ್ಲವೋ ಎಂದು ಕಿಟಕಿಯಿಂದ ಬೀಳುತ್ತಿದ್ದ ಹಾಡುಹಗಲಿನ ಹೊಂಗಿರಣ ಗಳಿಗೆ ಎದುರಾಗಿ ಹಿಡಿದು ನೋಡುತ್ತಿದ್ದೆ. ಕಣ್ಣುಗಳು ಬಣ್ಣದ ಉಗುರು ಗಳನ್ನು ನೋಡುತ್ತಿದ್ದರೂ ಅದರ ಬೆಳಕಿನಲ್ಲಿ ನೀನೇನೇನೋ ಮಧುರ ನೆನಪುಗಳನ್ನು ಕಂಡು ಅಳಿಸಲಶಕ್ಯಳಾಗಿದ್ದೆ. ತುಟಿಯಲ್ಲಿ ಕಿರುನಗೆ ಯೊಂದು ಇಣುಕಿತ್ತು. ನಿನ್ನ ತನ್ಮಯತೆಯನ್ನು ಕಂಡು ಅವಳು ಕೊಂಚ ಕಸಿವಿಸಿಗೊಂಡಳು. "ಇನ್ನೂ ಮುಗಿದಿಲ್ಲವೇ ನಿನ್ನ ಅಲಂಕಾರ? ಬಂದ ವರನ್ನು ಎಷ್ಟು ಹೊತ್ತು ಕಾಯಿಸುವುದು?" ಕೊಂಚ ಗಡುಸಾಗಿದ್ದ ಅವಳ ಧ್ವನಿಯನ್ನು ಕೇಳಿ ನೀನು ಅವಳತ್ತ ತಿರುಗಿ ನೋಡುತ್ತೀ. ಕರಿಯ ದೊಡ್ಡ ಮಡಕೆಯನ್ನು ಹೋಲುತ್ತಿದ್ದ ಅವಳನ್ನು ನೋಡಿ ನಿನಗೆ ನಗು ಉಕ್ಕಿ ಬರುತ್ತದೆ. ಆದರೂ ಅದು ನಿನ್ನ ತುಟಿ ದಾಟಿ ಬರದಂತೆ ತಡೆದಿದ್ದೀಯೆ.

"ಕಾಯಲಿ ಬಿಡು...ಕಾದಷ್ಟು ರುಚಿ ಜಾಸ್ತಿಯೆಂದು ನಿನಗೆ ಗೊತ್ತಿ ಲ್ಲವೇ?" ನೀನು ಮತ್ತೆ ಉಗುರಿಗೆ ಬಣ್ಣ ಹಚ್ಚಲು ತೊಡಗಿದ್ದೆ.

ಅವಳಿಗೆ ಕೋಪ ಬಂದರೂ ನುಂಗಿಕೊಳ್ಳುತ್ತಾಳೆ. ನೀನು ಅವಳ ಪಾಲಿನ ಸಿರಿಯಲ್ಲವೇ? ಅವಳ ಭಾಗ್ಯ ದೇವತೆಯಲ್ಲವೇ? ನಿನ್ನಿಂದಲ್ಲವೇ

ಅವಳಿಗೆ ಈ ಎರಡಂತಸ್ತಿನ ಮನೆ, ಹಗಲೂ ರಾತ್ರಿಯೂ ನಡೆಯುವ ವ್ಯಾಪಾರ, ನೂರಾರು ಕಂತೆಗಳ ನೋಟಿನ ಸುರಿಮಳೆ! ಆದರೆ ಅವಳಿಗೇನು ಗೊತ್ತು ನಿನ್ನ ಮನಸ್ಸಿನ ಆಶಾಗೋಪುರ? ಅವಳಿಗೇಕೆ ನಿನ್ನ ಸುಖದಗೊಡವೆ? ಅವಳಿಗೇನು ಗೊತ್ತು ನೀನು ಪಂಜರದಿಂದ ಹಾರಿ ಹೋಗಲು ಸಮಯ ಸಿಕ್ಕಿದರೆ ಸಾಕೆಂದು ಕಾಯುತ್ತಿರುವ ಬಣ್ಣದ ಪುಚ್ಛದ ಹಕ್ಕಿಯೆಂದು. ನಿನ್ನದೇ ಆದ ಹೂದೋಟವೊಂದರಲ್ಲಿ ಮಧುಪಾನಕ್ಕಾಗಿ ಹಾತೊರೆಯುತ್ತಿರುವ ಒಂದು ಹಸಿದ ಘಟ್ಟವೆಂದು!

"ಹಾಗೆಂದರೆ ಹೇಗೆ? ಅವರುಗಳನ್ನು ಕಾಯಿಸುವುದು ಸರಿಯಲ್ಲ. ಬೇಗ ತಯಾರಾಗು. ನಿನ್ನ ನೋಡಿ, ನಿನ್ನ ನರ್ತನ ನೋಡಿ ಅವರುಗಳು ಹೇಳುವ ಬೆಲೆಯನ್ನು ಕೇಳಿ ಆಮೇಲೆ ಸಂಜೆಗೆ ಸರಿಯಾದವರನ್ನು ಗೊತ್ತುಮಾಡಿಕೊಳ್ಳಬೇಕು. ನಿನ್ನ ಬೆಲೆ ದಿನದಿನಕ್ಕೆ ಹೆಚ್ಚಾಗುತ್ತಿದೆ. ನೋಡು ನಿನಗಾಗಿ ಲಂಚ ಕೂಡ ಬಂದಿದೆ." ಅವಳು ರವಿಕೆಯ ಮುಂಭಾಗದಲ್ಲಿ ಮಡಚಿಬಿಟ್ಟಿದ್ದ ನೂರರ ಒಂದು ನೋಟು ನಿನ್ನ ಮುಂದೆ ಹಿಡಿಯುತ್ತಾಳೆ.

"ಅದಕ್ಕೆ ಬೆಲೆಯೇ ಇಲ್ಲ ನನಗೆ...ನಾನು ಮನಸ್ಸು ಮಾಡಿದರೆ ಅಂತಹ ಇಪ್ಪತ್ತು ಸಂಪಾದಿಸಿಕೊಳ್ಳಬಲ್ಲೆ..." ನೀನು ನಸುನಕ್ಕು ಕಪ್ಪು ಅಲೆಗೂದಲನ್ನು ಬಿಚ್ಚಿ ಅಲಂಕಾರವಾಗಿ ಹೆರಳು ಹಾಕಿಕೊಳ್ಳುತ್ತಿ.

"ಛೀ! ಹಾಗೆ ಬೇಡ ನಾನು ಹಾಕುತ್ತೇನೆ ತಾಳು. ನಿನ್ನ ಮುಖಕ್ಕೆ ಯಾವ ಹೆರಳು ಒಪ್ಪುತ್ತದೆಯೆಂದು ನಿನಗಿಂತ ನನಗೆ ಗೊತ್ತು" ಅವಳು ನಿನ್ನ ಕೈಯಿಂದ ಬಾಚಣಿಗೆಯನ್ನು ತೆಗೆದುಕೊಳ್ಳುತ್ತಾಳೆ. ಅವಳು ನಿನ್ನ ಕೂದಲನ್ನು ನವಿರಾಗಿ ಬಾಚಿದಾಗ ನಿನಗೆ ಯಾವುದೋ ಮಧುರ ಅನುಭವದ ನೆನಪು ಮರುಕಳಿಸುತ್ತದೆ...

'ಹೌದು, ಅದು ಅವನ ಸ್ಪರ್ಶದ ನೆನಪಾಗುತ್ತದೆ. ಅವನು ನಿನ್ನ

ತಲೆಗೂದಲ ಮೇಲೆ ಕೈಯ್ಯಾಡಿಸಿ ಹೇಳಿರಲಿಲ್ಲವೇ? "ಈ ಕರಿಯ ರೇಷಿಮೆಯಲ್ಲಿ ನಾನೊಂದು ಹೊದಿಕೆ ಮಾಡಿಕೊಂಡು ಅದರಲ್ಲಿ ಮುದುಡಿ ಬೆಚ್ಚಗೆ ಮಲಗುವಾಸೆ." ಅವನ ಮುದ್ದು ಮುಖ ನಿನ್ನ ಕಣ್ಮುಂದೆ ನಿಲ್ಲುತ್ತದೆ. ಆ ಮಾದಕ ನಗು. ಆ ಮಾರಕ ನೋಟ, ಅವನ ಬಾಹುಗಳಲ್ಲಿದ್ದ ಅಯಸ್ಕಾಂತತೆ—ನಿನ್ನ ಚೆಲುವಿನ ಪೂಜೆಯಲ್ಲಿ ಅವನು ಮಹಾ ಆರಾಧಕ. ನಿನ್ನ ಸೌಂದರ್ಯೋಪಾಸನೆಯಲ್ಲಿ ಅವನೊಬ್ಬ ರಸಿಕ ದೊರೆ. ಅವನ ರಸಿಕತೆಯಲ್ಲಿ ಮಿಂದು ಮುಳುಗುವ ಬಯಕೆ ನಿನಗೆ.ಹಗಲೆನ್ನದೆ, ಇರುಳೆನ್ನದೆ ಅವನ ಸಾಮೀಪ್ಯವನ್ನೇ ಬಯಸುವವಳು ನೀನು. ಅವನಿಗಾಗಿಯೇ ನೀನು ಮೀಸಲಾಗುವ ಉತ್ಕಟಾಕಾಂಕ್ಷೆ—"ನಿನ್ನ ತುಟಿಯಲ್ಲದೇನು ಜೇನು ಸಕ್ಕರೆ?"; "ನಿನ್ನ ಸ್ಪರ್ಶ ಮಾತ್ರದಿಂದ ನಾನು ಸ್ವರ್ಗಕ್ಕೆ ಹೋಗಬಲ್ಲೆ." "ನೀನು ನಕ್ಕರೆ ಜಗವೆಲ್ಲ ನಕ್ಕಹಾಗಾಗುತ್ತದೆ," ನಿನ್ನ ಕಣ್ಣಲ್ಲಿ ಅದೇಕೋ ಇಂದು ಮುನಿಸಿಕೊಂಡಂತಿದೆ. ನನ್ನ ಕೈಗೇ ಸಿಕ್ಕುವುದಿಲ್ಲ ಅನ್ನುತ್ತಿದೆ." ಇಂದು ಒಂದು ಹೊಸಕಿರಣ ಮೂಡಿದೆ", "ನಿನ್ನ ಮುಂಗುರುಳೇಕೋ "ನೀನಿಲ್ಲದೆಡೆಯೇ ಗಂಧರ್ವ, ಕಿನ್ನರಲೋಕ..." ಅವನ ಮಾತುಗಳು ನಿನಗೆ ನೆನಪಿಗೆ ಬಂದು ಮುಗುಳ್ನಗೆಯೊಂದು ನಿನ್ನ ಚಿಂದುಟಿಯ ಬಳಿ ಇಣಕುತ್ತಿತ್ತೆ. ಅದನ್ನು ಕನ್ನಡಿಯಲ್ಲಿನ ನಿನ್ನ ಪ್ರತಿಬಿಂಬದಲ್ಲಿ ಕಂಡ ಅವಳು ಬೇಗ ಬೇಗನೇ ಹೆರಳು ಹಾಕುತ್ತಾಳೆ.

"ಅದೇನು ನೆನೆಸಿಕೊಂಡು ನಗುತ್ತಿ?" ಅವಳಿಗೆ ನಿನ್ನ ಈ ನಗುವನ್ನು ಕಂಡರೇ ಅಳುಕು. ಅವಳಿಗೂ ಗೊತ್ತು ನೀನು, ಅವನಿಗೆ ಮಾರುಹೋಗಿದ್ದೀಯೆಂದು.

"ಏನೋ ನೆನೆಸಿಕೊಂಡೆ...ಅಂದಹಾಗೆ ಅವರು ನಿನ್ನೆಯೇಕೋ ಬರಲಿಲ್ಲವಲ್ಲ...?" ನೀನು ಬೇಕೆಂತಲೇ ಅವಳ ಕಡೆ ನೋಡದೆ ಹೇಳುತ್ತೀಯೆ. ನಿನ್ನ ಬಿಲ್ಲಿನಂತಿದ್ದ ಹುಬ್ಬುಗಳ ನಡುವೆ ಗೆರೆಗಳು ಮೂಡುತ್ತವೆ ಅವನು ಆರು ತಿಂಗಳಿನಿಂದ ಒಂದು ದಿನವೂ ಬರದೇ ಇರಲಿಲ್ಲ. "ನೀನಿಲ್ಲದೇ ನಾನು ಬದುಕಲಾರೆ..." ಎಂದು ಹೇಳಿರಲಿಲ್ಲವೇ? ಅದೇಕೋ ನಿನೆ

ಬರಲಿಲ್ಲ. ಮೈಗೆ ಸ್ವಸ್ಥವಿದೆಯೋ ಇಲ್ಲವೋ...ದಾರಿಯಲ್ಲಿ ಬರುವಾಗ ಏನಾದರೂ....ಆಯಿತೋ! ಮೊದಲೇ ವಾಹನಗಳ ಹುಚ್ಚು ಓಡಾಟ...! ನಿನ್ನ ಮ್ಲಾನ ಮುಖ ನೋಡಿ ಅವಳು ಅವಡುಗಚ್ಚುತ್ತಾಳೆ.

“ಬರದಿದ್ದರೆ ಹಾಳಾಗಲಿ ಬಿಡು...” ಅವಳಿಗೆ ಅವನನ್ನು ಕಂಡರೆ ಆಗುವುದಿಲ್ಲ. ದುಡ್ಡೇನೋ ನೀರು ಚೆಲ್ಲಿದ ಹಾಗೆ ಸುರಿಯುತ್ತಾನೆ. ಆದರೆ ಅವನು ಎಲ್ಲರಂತೆ ನಿನ್ನ ಸವಿಯುಂಡು ಹೊರಟು ಹೋಗದೆ ನಿನ್ನ ಮೇಲೆ ಸಾಮ್ರಾಜ್ಯಶಾಹಿ ಸ್ಥಾಪಿಸಿಕೊಳ್ಳುತ್ತಿದ್ದಾನೆಂದು ಅವಳ ನಂಬಿಕೆ. ಅವನು ಬಂದು ಹೋದರೆ ನೀನು ನೀನಲ್ಲವೆಂದು ಅವಳಿಗೆ ಗೊತ್ತು. ಒಂದು ದಿನ ಅವಳ ಮುಂದೆ ನೀನೇ ಹೇಳಿದ್ದೆ, “ಇಂತಹವರು ನನಗೆ ಸಿಕ್ಕರೆ ಅವರ ಚರಣದಾಸಿಯಾಗಿ ಕೊನೆಯವರೆಗೂ ಇರಬಲ್ಲೆ” ಎಂದು. ಆರು ತಿಂಗಳಿನಿಂದಲೂ ನೀನು ಯಾರೊಡನೆಯೂ ಬೆರೆಯುತ್ತಿರಲಿಲ್ಲ. ನಿನ್ನೆ ಪೂರ್ತಿ ರೂಮಿನ ಬಾಗಿಲನ್ನುಹಾಕಿಕೊಂಡು ಕಾಲತಳ್ಳಿದ್ದೆ. ದಿನ, ರಾತ್ರಿಯೆಲ್ಲ ಅವನ ನೆನಪಿನ ಸುರುಳಿಯಲ್ಲೇ ಸೊರಗಿದ್ದೆ. ಅವನು ಬಂದರೆ ಅವನನ್ನು ಕಾಲು ಹಿಡಿದು ಕೇಳಬೇಕು. “ದಯವಿಟ್ಟು ನನ್ನ ಬಿಟ್ಟು ಹೋಗಬೇಡಿ...ನಾನೂ ನಿಮ್ಮ ಜೊತೆ ಬಂದುಬಿಡುತ್ತೇನೆ” ಎಂದೂ ಕೊಂಡಿದ್ದೆ. ಆದರೆ ಬೆಳಿಗ್ಗೆ ಕಣ್ಣು ಬಿಟ್ಟಾಗ ಅವಳು ಉಗ್ರಳಾಗಿದ್ದಳು. “ಏನು ಹೀಗೆ ಮಾಡಿ ನಾನೂ ನೀನೂ ಬೀದಿಯಲ್ಲಿ ಭಿಕ್ಷೆ ಬೇಡೋಣ ವೇನು?”

ಆಸೆಯ ಕಿರಣವೊಂದು ನಿನ್ನ ಮುಂದೆ ಸುಳಿಯಿತು. ಇಂದು ಅವನು ಖಂಡಿತ ಬಂದೇ ಬರುತ್ತಾನೆ. ನಿನಗೆ ಗೊತ್ತು, ನಿನ್ನನ್ನು ಬಿಟ್ಟು ಅವನು ಇರಲಾರನೆಂದು

“ಕೇಳಿಸ್ತಾ, ನಾನು ಹೇಳಿದ್ದು...ಬರದಿದ್ದರೆ ಹಾಳಾಗಲಿ ಬಿಡು. ಅವನಂತಹವರು ನಿನಗೇನು ಕಾಸಿಗೊಂದು ಕೊಸರಿಗೊಂದು!” ಅವಳು ಹೆರಳು ಮುಗಿಸಿ ಅವರ ಸುತ್ತ ಹೂ ಮುಡಿಸುತ್ತಾಳೆ.

'ಅವನೇಕೆ ಹಾಳಾಗಬೇಕು. ನಿನ್ನಂತಹವರು ಹಾಳಾಗಬೇಕು ಅಷ್ಟೆ' ಎಂದು ಹೇಳುವ ಬಯಕೆ ನಿನಗೆ. ಆದರೆ ಅವಳೆದುರು ತುಟಿಯೆರಡು ಮಾಡದೇ ಸುಮ್ಮನಿರುತ್ತೀಯೆ.

ಅವಳಿಗೇನು ಗೊತ್ತು ನಿನ್ನ ಅಂತರಂಗ. ಅವಳಿಗೆ ಬೇಕಾಗಿರುವುದು ನಿನ್ನ ಸಂಪಾದನೆ. ನಿನಗೋ ಅವನನ್ನು ಯಾರು ಏನೆಂದರೂ ಸಹಿಸುವುದಿಲ್ಲ. ಎಲ್ಲರೂ ನಿನ್ನ ಸಂಗ ಬಯಸಿದರೆ ಅವನು ನಿನ್ನ ಅಂತರಂಗ ಬಯಸುತ್ತಿದ್ದ. ಎಲ್ಲರೂ ನಿನ್ನ ಚೆಲುವು ಹೀರಿ ಕಾಣಿಕೆಯಿತ್ತರೆ ಅವನು ನಿನ್ನೊಲವಿನ ಸವಿಯುಂಡು ನಿನ್ನ ಆರಾಧಿಸುತ್ತಾನೆ. ಅವರೆಲ್ಲ ನಿನ್ನ ಬದುಕಿನಲ್ಲಿ ಸರಿದು ಹೋಗುವ ನೆರಳಾದರೆ ಅವನು ನಿನ್ನ ಬದುಕಿನಲ್ಲಿ ನಿನ್ನ ಉಸಿರಿನಂತೆ ಹಾಸುಹೊಕ್ಕಾಗಿ ಹೋಗಿದ್ದಾನೆ.

"ನೋಡಿ...ಆ ಹಾಳಾದವನ ಯೋಚನೆ ಬಿಡು...ಅವನು ಬಂದು ನಿನ್ನ ಕೆಡಿಸುತ್ತಾನೆ ಅವನು ಬರದಿದ್ದರೇ ವಾಸಿ...ಅವನ ದುಡ್ಡು ಯಾರಿಗೆ ಬೇಕು....? ಏನೋ ಅವನು ನಿನ್ನ ಕೈ ಹಿಡಿದ ಗಂಡ ಅನ್ನುವ ಹಾಗೆ ಆಡ್ತೀಯಲ್ಲಾ!" ಅವಳು ಬಾಯಲ್ಲಿದ್ದ ತಾಂಬೂಲವನ್ನು ಕಿಟಕಿಯಿಂದ ಹೊರಗೆ ಉಗುಳುತ್ತಾಳೆ.

ನಿನ್ನ ಮೈ ಕಾವೇರುತ್ತದೆ. ಹೌದು...ಅವನೂ ತಾನು ಆರು ತಿಂಗಳಿನಿಂದ ಹಾಗೆ ಇಲ್ಲವೇ? ಅವನ ಪತ್ನಿಯಾಗುವ ಸೌಭಾಗ್ಯ ನಿನಗಾದರೆ .ನಿನ್ನ ಭಾಗ್ಯಕ್ಕೆಣೆಯಿಲ್ಲ! ಅದೇಕೆ ತನಗೆ ಹೊಳೆಯಲಿಲ್ಲ! ಅವನು ಯೌವನ, ಸೌಕುಮಾರ್ಯ, ಮುಗ್ಧತೆ, ರಸಿಕತೆ, ಪೌರುಷ ಪ್ರೀತಿಗಳ ಮಧುರ ಸಮ್ಮಿಲನ. ಅವನೇ ನಿನಗೆ ಪತಿಯಾಗಿ ಜೀವನಪಥದಲ್ಲಿ ಹೆಜ್ಜೆಯಿಡಿಸುವವನಾದರೆ...! ನಿನ್ನ ತುಟಿಗಳು ಮೆಲ್ಲನೆ ನಡುಗುತ್ತವೆ. ನಿನ್ನ ಗಂಟಲಲ್ಲೊಂದು ಬಂಡೆ ತರುಕಿದ ಹಾಗಾಗುತ್ತದೆ. ನಿನ್ನ ಕಣ್ಣುಗಳು ಹನಿಗೂಡುತ್ತವೆ.

"ತೊಗೋ...ಇದೆಲ್ಲಾ ಹಾಕಿಕೊಂಡು ಬೇಗ ತಯಾರಾಗು...ಅವನ ಯೋಚನೆ ಸಾಕುಮಾಡು..." ಅವಳು ನಿನ್ನ ಕೈಗೆ ನವಿಲು ಬಣ್ಣದ ಉಡಿಗೆ ತೊಡಿಗೆಗಳನ್ನು ಕೊಡುತ್ತಾಳೆ. ಕಾಲಿನ ಬೆಳ್ಳಿಯ ಗೆಜ್ಜೆ ನಿನ್ನ ಮುಂದಿಡುತ್ತಾಳೆ. ನೀನು ಅಲುಗದೇ ನಿಂತಿರುವುದನ್ನು ಕಂಡು ತಲೆಯೆತ್ತಿ ನೋಡುತ್ತಾಳೆ. ನಿನ್ನ ಕಣ್ಣಿನಲ್ಲಿನ ಹೆಪ್ಪುಗಟ್ಟಿದ ನೀರನ್ನು ಕಂಡು ಅವಳು ಕಣ್ಣು ಕಿರಿದು ಮಾಡುತ್ತಾಳೆ. "ಸಾಕು...ಸಾಕು ನಿನ್ನ ನಾಟಕ...ನಿನಗೇನು ಇಲ್ಲಿ ಕಷ್ಟ? ಕೈಗೊಬ್ಬರು ಕಾಲಿಗೊಬ್ಬರು ಸೇವಗೆ-ರಾಣಿಯ ಹಾಗಿದ್ದಿಯಾ...ಅವನೇನಾದರೂ ಬರಲಿ, ಹೇಳುತ್ತೇನೆ...ಇವಳನ್ನು ಮದುವೆ ಮಾಡಿಕೊಂಡು ಕರೆದುಕೊಂಡು ಹೋಗು. ನೀನಿಲ್ಲದೇ ಕೊರಗಿ ಸಾಯುತ್ತಾಳೇಂತ ಹೂ...ಹೇಳಿದ್ದು ಕೇಳಿಸಲಿಲ್ಲವೇ?...ನಾನು ಕೆಳಗೆ ಹೋಗಿ ಬರುವಷ್ಟರಲ್ಲಿ ತಯಾರಾಗು..." ಅವಳ ಮುಖದಲ್ಲಿ ಅಣಕು ನಗೆ ಹೊಮ್ಮುತ್ತದೆ.

ಅವಳು ಬಾಗಿಲು ಮುಂದು ಮಾಡಿಕೊಂಡು ಹೊರಗೆ ಹೋಗುತ್ತಾಳೆ. ನೀವು ಅಲ್ಲಿಯೇ ಇದ್ದ ಪಲ್ಲಂಗದ ಮೇಲೆ ಕುಳಿತು ಬಿಕ್ಕಿ ಬಿಕ್ಕಿ ಅಳುತ್ತೀಯೆ. ಹೌದು, ಅವಳು ಹೇಳಿದ ಹಾಗೆ ನೀನು ಅವನ ಜೊತೆ ಹೊರಟು ಹೋಗಬೇಕು. ಅವನನ್ನು ಮದುವೆಯಾಗಿ ಅವನ ಬಾಳು ತುಂಬಬೇಕು, ಅವನ ಗೃಹಿಣಿಯಾಗಿ ಅವನ ಮನೆ ತುಂಬಬೇಕು...ಅವನ ಮಕ್ಕಳ ತಾಯಾಗಿ ಅವನ ಮಡಿಲು ತುಂಬಬೇಕು...ಇಂದು ಅವನು ಬಂದರೆ ಅವನ ಕಾಲು ಹಿಡಿದು ಬೇಡಿ, ಕಾಡಿ ಅವನನ್ನು ಮದುವೆಯಾಗೆಂದು ಕೇಳಬೇಕೆಂದುಕೊಳ್ಳುತ್ತೀಯೆ. ಅವನಿನ್ನೂ ಜೀವನದಲ್ಲಿ ಹೊಸ ಹೊಚ್ಚ ಬದುಕಿನಲ್ಲಿ ಕಾಲಿಡುವ ಹಾಗೇ ಇದ್ದಾನೆ. ಯಾವ ಹೆಣ್ಣಿನ ವಿಚಾರವನ್ನೂ ಅವನು ನಿನ್ನೊಡನೆ ಮಾತಾಡಿಲ್ಲ, ಅವನು ತನ್ನ ಬಗ್ಗೆ ನಿನಗೆ ಏನೂ ಹೇಳಿಲ್ಲ. ಅವನು ಒಬ್ಬ ಏಕಾಂಗಿಯಿರಬೇಕು. ನಿನ್ನ ಸ್ನೇಹ, ಪ್ರೀತಿ, ಒಲವಿಗಾಗಿ ಹಾತೊರೆದು ಬರುವವನು, ಅವನಿಗಾಗಿ ನೀನು-ನಿನಗಾಗಿ ಅವನು.

ಅಂದು ನೀವಿಬ್ಬರೇ ಇದ್ದಾಗ ಅವನು ನಿನ್ನ ತೊಡೆಯ ಮೇಲೆ

ಕಣ್ಮುಚ್ಚಿ ಮಲಗಿ ಕನಸಿನಲ್ಲಿರುವಂತೆ ಹೇಳಿರಲಿಲ್ಲವೇ; "ನೀನು ಅಳಿಯದ ಹಾಗೆ ನಾನೇನು ಮಾಡಲಿ? ನಿನ್ನ ಬಿಟ್ಟು ನಾನು ಒಂದು ಕ್ಷಣ ಕಳೆಯಲಾರೆ. ನಿನಗಾಗಿ ನಾನು ಎಷ್ಟು ಬೇಯುತ್ತೇನೆ, ಕಾಯುತ್ತೇನೆಂದು ನಿನಗೇನು ಗೊತ್ತು?"

ನೀನು ಅವನ ತಲೆಗೂದಲಲ್ಲಿ ಕೈಯ್ಯಾಡಿಸಿ ಕೇಳಿದ್ದೆ, "ನನ್ನ ಬಿಟ್ಟರೆ ನಿಮಗಾಗಿ. ನಿಮ್ಮವರು ಯಾರೂ ಇಲ್ಲವೇ ಈ ಪ್ರೀತಿಯಲ್ಲಿ ಪಾಲ್ಗೊಳ್ಳಲು?"

ಆಗ ಅವನು ಎದ್ದು ಕುಳಿತು ನಿನ್ನ ಭುಜ ಹಿಡಿದು ಹೇಳಿದ್ದ, "ಇನ್ನೊಬ್ಬರ ಗೊಡವೆ ನಿನಗೇಕೆ? ನಾನು ನಿನ್ನವನು, ನೀನು ನನ್ನವಳು... ಹೀಗಿರುವಾಗ ಮೂರನೆಯವರ ಮಾತೇಕೆ?" ನೀನು ಉತ್ತರಿಸುವ ಮೊದಲು ನಿನ್ನ ಬಾಯನ್ನು ಅವನ ಒಲವಿನ ಚುಂಬನದಿಂದ ಮುಚ್ಚಿದ್ದ.

ಹಾಗೆಂದಲ್ಲಿ ಅವನು ಖಂಡಿತ ನಿನಗಾಗಿ ಬಂದೇ ಬರುತ್ತಾನೆ. ನೀನು ಕೈಲ್ಲಿದ್ದ ಉಡಿಗೆ ತೊಡಿಗೆಯನ್ನು ಹಾಸಿಗೆಯ ಮೇಲಿಟ್ಟು ಮುಖದ ಶೃಂಗಾರಕ್ಕಾಗಿ ಕನ್ನಡಿಯ ಮುಂದೆ ಕುಳಿತುಕೊಳ್ಳುತ್ತೀಯೆ. ಬೇಗ ಅಲಂಕಾರ ಮುಗಿಸಿ, ನರ್ತನ ಮುಗಿಸಿ ಬಂದುಬಿಟ್ಟರೆ ಸಾಕು. ಸಂಜೆಗೆ ಅವನು ಬಂದೇ ಬರುತ್ತಾನೆ. ಅವನು ಬಂದರೆ ನೀನು ಬೇರೆ ಯಾರನ್ನೂ ನೋಡುವುದಿಲ್ಲ. ಅಲ್ಲಿಯವರೆಗೆ ಅವಳಿಗೆ ಕೋಪ ಬರದ ಹಾಗೆ ನಡೆಸಿಕೊಂಡರೆ ಸಾಕು. ಅವಳಿಗೆ ಕೋಪ ಬಂದರೆ ನಿನ್ನ ಕೆಲಸವೆಲ್ಲಾ ಹಾಳೆಂದು ನಿನಗೆ ಗೊತ್ತು.

ನೀನು ಅಲಂಕಾರ ಮುಗಿಸುವ ಹೊತ್ತಿಗೆ ಅವಳು ಮತ್ತೆ ಮೆಟ್ಟಲೇರಿ ಬರುತ್ತಾಳೆ. ನಿನ್ನ ಅಲಂಕಾರ ಕಂಡು ಅವಳ ಕಣ್ಣುಗಳು ಅರಳುತ್ತವೆ. ಅವಳು ನಿನ್ನ ಕೈ ಹಿಡಿದು ಕೆಳಗೆ ಕರೆದೊಯ್ಯುತ್ತಾಳೆ. ವಾದ್ಯಗಳು ಶ್ರುತಿ ಸರಿಮಾಡಿಕೊಳ್ಳುತ್ತಿರುವ ಸದ್ದು ನಿನ್ನ ಕಿವಿಗೆ ಬೀಳುತ್ತದೆ. ಮೂಗಿಗೆ

ಎಲ್ಲೆಡೆಯಲೂ ಪಸರಿಸಿದ್ದ ಯಾವುದೋ ಪರಿಮಳ ತಗಲುತ್ತದೆ. ಸುತ್ತಲೂ ದಿಂಬಿಗೊರಗಿ ಕುಳಿತವರ ಬಿಸಿಯುಸಿರು' ಪಿಸುಮಾತು ನಿನ್ನ ಕಿವಿಗೆ ಬೀಳು ತ್ತದೆ. ನೀನು ಯಾರನ್ನೂ ನೋಡುವುದಿಲ್ಲ. ನೀನು ನರ್ತಿಸುವಾಗ ಅವರೆಲ್ಲಾ ಹಸಿದ ಕಣ್ಣಿನಿಂದ ನಿನ್ನ ನೋಡುತ್ತಾರೆ. ಅವರ ಕೈಗಳು ಕಿಸೆ ಯಲ್ಲಿದ್ದ ನೋಟುಗಳ ಮೇಲಿರುತ್ತವೆ. ಆದರೆ ನಿನಗೆ ಅವರ್‍ಯಾರ ಮುಖ ಗಳೂ ಗೋಚರಿಸುವುದಿಲ್ಲ. ಅವರ ಯಾವ ಪ್ರತಿಕ್ರಿಯೆಯೂ ನಿನ್ನ ಕಣ್ಣಿಗೆ ಬೀಳುವುದಿಲ್ಲ. ನಿನ್ನ ಕಣ್ಣ ಮುಂದೆ ಅವನೊಬ್ಬನೇ .. ಅನಂತರ ನೀವಿಬ್ಬರೇ ನದೀ ತೀರದಲ್ಲಿ ಬೆಟ್ಟದ ಮೇಲೆ...ಹೆಮ್ಮರದಲ್ಲಿ ಪುಟ್ಟ ಗೂಡು ಕಟ್ಟಿಕೊಂಡು...ನೀವಿಬ್ಬರೇ...ನೀವಿಬ್ಬರೇ .

ನರ್ತನ ಮುಗಿಸಿ ಹೊರಟಾಗ ಕಾಲಿನ ಬಳಿ ಬಿದ್ದ ನೋಟಿನ ರಾಶಿ ಯನ್ನು ಮೆಟ್ಟಿಕೊಂಡು ನೀನು ಮಹಡಿಯೇರಿ ಓಡಿಹೋಗುತ್ತೀಯೆ. ನಿನ್ನ ಹಿಂದೆಯೇ ಕೆಲಸದವಳು ಓಡಿ ಬರುತ್ತಾಳೆ, ಈಗ ನೀನೊಬ್ಬ ಉನ್ಮಾದಿನಿ. ಕೆಲಸದವಳು ನಿನ್ನ ಹೆರಳು, ಅಲಂಕಾರ ಬಿಚ್ಚಲು ಸಹಾಯಕ್ಕೆ ಬಂದಾಗ ನೀನು ಅವಳನ್ನು ದೂರ ತಳ್ಳುತ್ತೀಯೆ. "ಹೋಗು ಹೊರಟು ಹೋಗು—ನನಗ್ಯಾರ ಸಹಾಯವೂ ಬೇಡ..." ಅವಳು ದೂರ ಸರಿಯು ತ್ತಾಳೆ. ಮತ್ತೊಬ್ಬಳು ಕೈಯ್ಯಲ್ಲಿ ಸಿಹಿ ತಂಪು ಪಾನೀಯ ಹಿಡಿದು ನಿನ್ನ ಮುಂದೆ ಹಿಡಿಯುತ್ತಾಳೆ. ನಿನಗೆ ಅವಳ ಮೇಲೂ ರೋಷವುಕ್ಕಿ ಬರುತ್ತದೆ. ಅವಳ ಕೈಯ್ಯಿಂದ ಪಾನೀಯವನ್ನು ತೆಗೆದುಕೊಂಡು ಅವಳ ಮುಖಕ್ಕೇ ಎರಚುತ್ತೀಯೆ.

ಅಷ್ಟರಲ್ಲಿ ಅವಳೂ ಬರುತ್ತಾಳೆ. ಅವಳ ಮುಖದಲ್ಲಿ ಮಂದಹಾಸ ಮಿನುಗುತ್ತಿದೆ. ಅವಳ ಕೈಯ್ಯಲ್ಲಿ ನೋಟುಗಳ ಕಂತೆ! ನಿನ್ನ ಮುಂದೆ ಹೆದರಿ ನಿಂತಿದ್ದ ಇಬ್ಬರು ಕೆಲಸದವರನ್ನೂ ನಿನ್ನನ್ನೂ ನೋಡುತ್ತಾಳೆ. ಅವಳಿಗೆಲ್ಲಾ ಅರ್ಥವಾಗುತ್ತಿದೆ. ಅವಳು ಜೋರಾಗಿ ನಗುತ್ತಾಳೆ.

"ನೋಡು, ನಿನ್ನ ಮುಖ ದರ್ಶನದಿಂದ ಇಷ್ಟು ಸಿರಿ ಮಳೆಗರೆ

ಯಿತು. ಇನ್ನು ನಿನ್ನ ಅನುಭವಿಸಿದರೆ ಇನ್ನೇನು ಹೇಳು....ತೊಗೋ ಇದೆಲ್ಲಾ ನಿನಗೇ ನೀನು ಹೋಗಿ ಸ್ನಾನಮಾಡಿ, ಊಟಮಾಡಿ ವಿಶ್ರಮಿಸು, ಸಂಜೆಯ ಮೇಲೆ ನಿನಗೆ ವಿಶ್ರಾಂತಿ ಸಿಕ್ಕುವುದಿಲ್ಲ ಇಂದು..." ಅವಳು ನಿನ್ನ ಮುಂದೆ ನೋಟುಗಳ ಕಂತೆ ಹಿಡಿಯುತ್ತಾಳೆ. ನೀನು ಕೋಪದಿಂದ ಅದನ್ನು ಕಿತ್ತೊಗೆಯುತ್ತೀಯೆ. ನೋಟುಗಳು ಗಾಳಿಯಲ್ಲಿ ಹಾರಾಡಿ ನೆಲದ ಮೇಲೆಲ್ಲಾ ಚೆಲ್ಲಾಡುತ್ತದೆ. ಅವರು ಸಿಡಿದೇಳುತ್ತಾಳೆ.

"ಇಷ್ಟಕ್ಕೇ ಬಂತೆ ನಿನ್ನ ಪೊಗರು...? ತಾಳು ಅವನು ಬರಲಿ, ಕೆಲಸದವರ ಕೈಲಿ ಕುತ್ತಿಗೆ ಕೈಹಾಕಿ ನೂಕಿಸುತ್ತೇನೆ ಹೊರಗೆ...ಹುಷಾರು...!"

ನಿನ್ನ ಮನಸ್ಸು ನಿನ್ನ ಹತೋಟಿಯಲ್ಲಿಲ್ಲ—ನಿನಗೆ ಅವನು ಬೇಕು... ಬಾಳು ಬೇಕು...ಇಲ್ಲಿಂದ ಬಿಡುಗಡೆ ಬೇಕು, ನೀನೂ ಉರಿದೇಳುತ್ತೀಯೆ.

"ನೀನೂ ಅಷ್ಟೆ ಹುಷಾರು, ಅವರ ಸುದ್ದಿಗೆ ಬಂದರೆ ನಿನ್ನನ್ನು ಕತ್ತು ಹಿಸುಕಿ ಕೊಂದುಬಿಡುತ್ತೇನೆ!" ನೀನು ಅವಳ ಮೇಲೆ ಏರಿ ಹೋಗುತ್ತೀಯೆ. ಅವಳು ನಿನ್ನ ಕೈಗಳೆರಡನ್ನೂ ಬಿಗಿಯಾಗಿ ಹಿಡಿಯುತ್ತಾಳೆ. ಇಲ್ಲಿಯವರೆಗೆ ಸುಮ್ಮನೇ ನಿಂತಿದ್ದ ಕೆಲಸದವರು ಅವಳ ಸಹಾಯಕ್ಕೆ ಬರುತ್ತಾರೆ. ಇಬ್ಬರು ನಿನ್ನನ್ನು ಬಿಗಿಯಾಗಿ ಹಿಡಿಯುತ್ತಾರೆ. ಅವಳು ನಿನ್ನ ಕೆನ್ನೆಗೆ 'ಛಟೀರನೆ' ಹೊಡೆಯುತ್ತಾಳೆ. ಆ ಏಟಿಗೆ ನೀನು ತತ್ತರಿಸುತ್ತೀಯೆ. ಹಾರಾಡುತ್ತಿದ್ದ ಮನಸ್ಸು ಎಚ್ಚೆತ್ತು ನಿಲ್ಲುತ್ತದೆ. ಏಟಿನ ನೋವಿಗಿಂತಲೂ ವಾಸ್ತವತೆಯ ಅರಿವಾಗಿ ಕಣ್ಣಾಳಗಲ್ಲಿ ನೀರಿಳಿಯುತ್ತದೆ.

"ನನ್ನ ಮೇಲೆ ಕೈ ಮಾಡ್ತೀಯಾ...ನನ್ನ ಕತ್ತು ಹಿಸುಕಿ ಕೊಲ್ತೀಯಾ, ನೋಡ್ತೀನಿ...!" ಅವಳು ಮತ್ತೆ ಕೆನ್ನೆಗೆ ಹೊಡೆಯುತ್ತಾಳೆ. ನೀನು ನೆಲದ ಮೇಲೆ ಕುಸಿಯುತ್ತೀಯೆ, ಕೈಗಳಲ್ಲಿ ಮುಖ ಮುಚ್ಚಿ ಬಿಕ್ಕಿ ಬಿಕ್ಕಿ ಅಳುತ್ತೀಯೆ. ಅವನು ಈಗ ಬರಬಾರದೆ? ನಿನ್ನನ್ನು ಈ ನರಕದಿಂದ ಪಾರು ಮಾಡಬಾರದೇ"

"ಅವನು ಬಂದರೆ...ಅವನೊಡನೆ...ನಾನು ಹೊರಟು ಹೋಗುತ್ತೇನೆ...ಅವನು ನನ್ನನ್ನು ಮದುವೆ ಮಾಡಿಕೊಳ್ಳುತ್ತಾನೆ ಖಂಡಿತ" ನೀನು ಬಿಕ್ಕುತ್ತೀಯೆ.

ಅವಳು ನಿನ್ನ ಕಣ್ಣೀರಿನಿಂದ ತೊಯ್ದ ಮುಖ ನೋಡುತ್ತಾಳೆ. ಅವಳ ಕೋಪ ಹಾರಿ ಹೋದಂತೆ ಕಾಣುತ್ತದೆ. ಅವಳು ನಿನ್ನ ಗಲ್ಲವೆತ್ತಿ ಕಣ್ಣೀರೊರೆಸುತ್ತಾಳೆ. "ನನ್ನ ಬಂಗಾರ...ನನ್ನ ಚಿನ್ನ...ಅಳಬೇಡ. ಇನ್ನೊಮ್ಮೆ ನಾನು ನಿನ್ನ ಮೇಲೆ ಕೈಮಾಡೋಲ್ಲ "ನಿನ್ನನ್ನು ಅಪ್ಪಿಕೊಂಡು ಸಾಂತ್ವನಗೊಳಿಸುತ್ತಾಳೆ. ನೀನು ಅವಳ ಅಪ್ಪುಗೆಯಲ್ಲಿ ಬಿಕ್ಕುತ್ತೀಯೆ. "ನೋಡು ಬಂಗಾರಾ...ಅವನು ನಿನ್ನ ಮದುವೆ ಮಾಡಿಕೊಂಡರೆ ಮಾಡಿಕೊಳ್ಳಲಿ. ಆದರೆ ನಿನ್ನ ಮನಸ್ಸು ಮುರಿಯುವಂತಿದ್ದರೆ ನಾನು ಅವನನ್ನ ಸುಮ್ಮನೇ ಬಿಡುವುದಿಲ್ಲ...ಮದುವೆಯಾಗುವವರು ಇಲ್ಲಿಗೆ ಯಾರೂ ಬರುವುದಿಲ್ಲ."

ಅವಳ ಮಾತು ಮುಗಿಸುವ ಮುನ್ನ ನೀನು ಅವಳ ಬಾಯಿಯನ್ನು ಮುಚ್ಚುತ್ತೀಯೆ.

"ಇಲ್ಲ ಅವರು ಹಾಗಲ್ಲ. ನನ್ನನ್ನು ಪ್ರೀತಿಸುತ್ತಾರೆ. ಖಂಡಿತ ಅವರು ನನ್ನ ಕೈ ಹಿಡಿಯುತ್ತಾರೆ...

"ಆಗಲಿ ಮುಂಚೆ ಅವನು ಬರಲಿ...ನಂತರ ಮಾತಾಡೋಣ...ಎಲ್ಲಿ ಚಿನ್ನ ನಡಿ, ಸ್ನಾನಮಾಡಿ, ಊಟಮಾಡಿ ವಿಶ್ರಾಂತಿ ತೊಗೋ....

ಅವಳೇ ಖುದ್ದಾಗಿ ನಿಂತು ನಿನಗೆ ಸ್ನಾನ ಮಾಡಿಸುತ್ತಾಳೆ. ಅವಳೇ ತನ್ನ ಕೈಯಿಂದಲೇ ನಿನಗೆ ಉಣಬಡಿಸುತ್ತಾಳೆ. ಘಳಿಗೆಗೊಮ್ಮೆ ನಿನ್ನ ತಲೆ ತಡವುತ್ತಾಳೆ. ನೀನೀಗ ಅವಳ ಕೈಗೊಂಬೆ.

ನಿನ್ನನ್ನು ಹಾಸಿಗೆಯ ಮೇಲೆ ಒರಗಿಸಿ ಬೀಸಣಿಗೆಯಿಂದ ಗಾಳಿ ಹಾಕು ತ್ತಾಳೆ. ನಿನಗೆ ನಿದ್ರೆ ಬಾರದು. ಇಂದೂ ಅವನು ಬರದಿದ್ದರೆ ನಿನ್ನ ಗತಿ!

"ಕಣ್ಮುಚ್ಚಿ ಮಲಗು..." ಅವಳು ನಿನ್ನ ಕಣ್ಣಮೇಲೆ ಕೈಯಿಟ್ಟು ಬಲವಂತದಿಂದ ಕಣ್ಣು ಮುಚ್ಚುತ್ತಾಳೆ. ನೀನು ಕಣ್ಣು ಮುಚ್ಚಿ ಕಣ್ಣೀರಿ ಡುತ್ತೀಯೆ. ಅವನ ನೆನಪೊಂದೇ ಅವನಿಗೆ ಆಧಾರ...ಅವನ ಇರುವೊಂದೇ ನಿನಗೆ ಆಧಾರ! ಅವನ ನೆನಪಿನ ಗುಂಗಿನಲ್ಲೇ ನಿನಗೆ ನಿದ್ದೆ ಹತ್ತುತ್ತದೆ.

ಎಚ್ಚೆತ್ತಾಗ ಸಂಜೆಗೆಂಪು ಇಳಿದಿದೆ. ರೂಮಿನಲ್ಲಿ ಸಣ್ಣದೊಂದು ದೀಪ ಉರಿಯುತ್ತಿದೆ. ನಿನಗಾಗಿ ಕಾದು ಕುಳಿತಿರುವ ಕೆಲಸದವಳು ನಿನ್ನ ಡೆಗೆ ಬರುತ್ತಾಳೆ. ನೀನು ಕೊಠಡಿಯ ಸುತ್ತಾ ಕಣ್ಣಾಡಿಸುತ್ತೀಯೆ. ತಟ್ಟೆಯ ತುಂಬಾ ಹೂವಿನ ದಂಡೆಗಳು ಅಲ್ಲಲ್ಲಿ ಹಚ್ಚಿಸಿದ್ದ ಊದುಕಡ್ಡಿಯ ಪರಿಮಳ. ಇಳಿಬಿಟ್ಟಿದ್ದ ತೆಳು ಪರದೆಗಳು. ನಿನಗಾಗಿ ಎತ್ತಿಟ್ಟಿದ ಥಳ ಥಳಿಸುತ್ತಿದ್ದ ಆಭರಣಗಳು - ಕಣ್ಣೆಗಿಂಪಾದ ಉಡಿಗೆ ತೊಡಿಗೆ. ಕಣ್ಣು ಹೊಸಕಿಕೊಂಡು ಏಳುತ್ತೀಯೆ. ನೀನಗೇನೋ ಆತಂಕ! ಅವನು ಬರದಿದ್ದರೆ. ನಿನ್ನ ಒಳ ಮನಸ್ಸು ಮಾತ್ರ ಒಂದೇ ಬರುತ್ತಾನೆಂದು ಹೇಳುತ್ತಿದೆ! ಕೆಲಸದವಳು ನಿನ್ನ ಮುಂದೆ ಬಿಸಿ ನೀರಿನ ಪಾತ್ರೆ ಹಿಡಿಯುತ್ತಾಳೆ. ನೀನು ಮುಖ ತೊಳೆದ ಮೇಲೆ ಮುಖ ಒರೆಸಿಕೊಳ್ಳಲು ನಯವಾದ ವಸ್ತ್ರ ನೀಡುತ್ತಾಳೆ. ಕುಡಿಯುವದಕ್ಕೆ ಕೇಸರಿ, ಬಾದಾಮಿ ಹಾಕಿದ ಹಾಲು ಕೊಡುತ್ತಾಳೆ.

ನೀನು ಹಾಲು ಕುಡಿಯುವ ಹೊತ್ತಿಗೆ ಅವಳು ಬಂದು ನಿಲ್ಲುತ್ತಾಳೆ. ಅವಳು ಗೇಣಗಲ ಜರತಾರಿ ಸೀರೆ ಉಟ್ಟಿದ್ದಾಳೆ. ತಲೆಯ ತುಂಬ ಹೂವು ಮುಡಿದಿದ್ದಾಳೆ. ಬಾಯಲ್ಲಿ ತಾಂಬೂಲ ಮೆಲ್ಲುತ್ತಿದ್ದಾಳೆ. ಅವಳು ಬಂದು ನಿನ್ನಪಕ್ಕ ಕೂರುತ್ತಾಳೆ. ನಿನ್ನ ತಲೆ ಸವರುತ್ತಾಳೆ.

"ನಿದ್ದೆ ಚೆನ್ನಾಗಿ ಮಾಡಿದೆ. ಏಳು, ದೀಪ ಹಚ್ಚಿಯಾಯಿತು. ಎಲ್ಲಾ ತೆಗೆದಿರಿಸಿದ್ದೇನೆ. ಅಲಂಕಾರ ಮುಗಿಸಿಕೋ. ಇನ್ನೇನ್ನು ಬೆಳಗಿನ ಜನಗಳು ಬರುವ ಹೊತ್ತು."

ನಿನಗೆ ಒಮ್ಮೆಲೆ ಭಯವಾಗುತ್ತದೆ. ಅವರೆಲ್ಲಾ ಬಂದು ಕಾದಿರುವಾಗ ಅವನು ಬಂದರೆ! ಅವನನ್ನು ಬಾಗಿಲಲ್ಲೇ ತಡೆದು ಅವಳು ಕಳುಹಿಸಿಬಿಟ್ಟರೆ! ನೀನು ಅಲುಗದೇ ಕುಳಿತಿರುವುದನ್ನು ಕಂಡು ಅವಳು ನಿನ್ನ ಕೆನ್ನೆಯ ಮೇಲಿನ ಇಳಗೂದಲನ್ನು ಹಿಂದೆ ಸರಿಸುತ್ತಾಳೆ.

"ಯಾಕೆ ಸುಮ್ಮನೇ ಕುಳಿತೆ. ಏಳಮ್ಮಾ...ಚಿನ್ನ ಬಾ ನಾನೇ ಅಲಂಕರಿಸುತ್ತೇನೆ, ನಿನಗೆ ಬೇಸರವಾದರೆ!"

ನೀನು ಅವಳ ಮುಖ ನೋಡುತ್ತೀಯೆ, ನಿನ್ನ ಕಣ್ಣಲ್ಲಿನ ಆಂತಕ ನೋವು ಅವಳಿಗೆ ಬೇರೊಂದು ಕತೆ ಹೇಳುತ್ತದೆ. "ಅಯ್ಯೋ ಹುಚ್ಚಿ! ಯಾಕೆ ಹೇದರುತ್ತೀಯೆ? ಅವನು ಬರುವುದಕ್ಕೆ ಪ್ರಾರಂಭಿಸಿದ ಮೇಲೆ ನಿನಗೆ ಅಭ್ಯಾಸ ಬಿಟ್ಟು ಹೋಗಿದೆ ಅಷ್ಟೆ.... ಮೊದಲಿನ ಹಾಗಿರು ಸುಮ್ಮನೇ ತಲೆ ಕೆಡಸಿಕೊಳ್ಳಬೇಡ. ಬೇಗ ಮುಪ್ಪು ಮುಚ್ಚಿಕೊಳ್ಳುತ್ತದೆ. ಆಗ ನಿನ್ನನ್ನು ಯಾರೂ ಮೂಸಿ ಕೂಡ ನೋಡುವುದಿಲ್ಲ...!"

ಅವಳ ಮಾತು ನಿನಗೆ ರುಚಿಸುವುದಿಲ್ಲ ನೀನು ಅವಳ ಕೈ ಹಿಡಿದು ಕೇಳುತ್ತೀಯೆ,

"ಅವರು ಬಂದರೆ !"

ಅವಳು ತಕ್ಷಣ ನಿನ್ನ ಕೈ ದೂರ ಮಾಡುತ್ತಾಳೆ. ನಿನ್ನನ್ನೇ ದಿಟ್ಟಿಸಿ ನೋಡುತ್ತಾಳೆ.

"ಪುನಃ ಪ್ರಾರಂಭಿಸಿದೆಯಾ? ಇವೊತ್ತು ಅವನು ಬರುವುದಿಲ್ಲ...! ನಿನಗೆ ತಿಳಿಯುವುದಿಲ್ಲವೇ, ನಿನ್ನೆ ಒಂದು ಕಾಸು ಸಂಪಾದನೆಯಿರಲಿಲ್ಲವೆಂದು? ನಿನ್ನ ನಂಬಿಕೊಂಡರೆ ಆಯಿತು....!"

ನೀನು ಮತ್ತೆ ಅವಳ ಕೈ ಹಿಡಿಯುತ್ತೀಯೆ. ಆರ್ತಳಾಗಿ ಅವಳತ್ತ ನೋಡುತ್ತೀಯೆ.

"ಅವರು ಬಂದರೆ ನಾನು ಬೇರೆ ಯಾರನ್ನೂ ಸೇರಿಸುವುದಿಲ್ಲ! ಇವೊತ್ತೊಂದು ದಿನ ದಯವಿಟ್ಟು ನನ್ನ ಮಾತು ನಡೆಸಿಕೊಡು! ಆ ಮೇಲೆ ನೀನು ಹೇಳಿದ ಹಾಗೆ ಕೇಳುತ್ತೇನೆ!''

ಇವೊತ್ತೊಂದು ದಿನ ಸಾಕು ಅವನು ಬಂದರೆ....! ಅವನಿಂದ ನೀನು ಮುಕ್ತಿ ಸಾಧಿಸುತ್ತೀಯೆಂದು ನಿನ್ನ ನಂಬಿಕೆ. ಅವನು ನಿನ್ನನ್ನು ವರಿಸಲು ಒಪ್ಪಿಬಿಟ್ಟರೆ ನಾಳೆಯಿಂದ ನೀನು ಅವನ ಚಿರಬಂಧಿ, ಅವಳು ಕಣ್ಣು ಕಿರಿದು ಮಾಡುತ್ತಾಳೆ. "ಅವನು ಬಂದರೆ ಸರಿ. ಬರದಿದ್ದರೆ? ಅವಳಿಗೆ ಗೊತ್ತು ನೀನು ಸಹಕರಿಸದಿದ್ದರೆ ಅವಳ ಕೆಲಸವಾಗುವುದಿಲ್ಲವೆಂದು.

"ಬರದಿದ್ದರೆ....!'' ನೀನು ವಾಕ್ಯ ಪೂರ್ತಿ ಮಾಡಲಾರೆ! ಬರದಿದ್ದರೆ ನಿನ್ನ ಗತಿ! ನೀನು ಬಲಿಪೀಠದ ಬಲ! ನಿನ್ನ ಕಣ್ಣಲ್ಲಿ ನೀರುಕ್ಕುತ್ತದೆ.

"ಬರದಿದ್ದರೆ...ನಾನು ಬೇರೆಯವರನ್ನು ಸೇರಿಸುತ್ತೇನೆ...!"ಪ್ರಯಾಸದಿಂದ ನೀನು ಮತ್ತೆ ಉತ್ತರಿಸುತ್ತೀಯೆ.

ಅವಳು ಮನಸ್ಸಿನಲ್ಲೇ ನಗುತ್ತಾಳೆ.

"ಸರಿ, ಅವನು ಬಂದರೆ ತಾನೇ...? ಹಾಗೇ ಆಗಲಿ, ಬಂದರೆ ಅವನನ್ನೇ ನಿನ್ನ ಬಳಿ ಕಳಿಸುತ್ತೇನೆ. ಆಯಿತಾ? ನಡಿ. ಏಳು ಬೇಗ ಬೇಗ ತಯಾರಾಗು .."

ಅವಳು ನಿನ್ನನ್ನು ಬಲವಂತದಿಂದ ಎಬ್ಬಿಸುತ್ತಾಳೆ. ತಾನೇ ನಿಂತು ನಿನಗೆ ಅಲಂಕರಿಸುತ್ತಾಳೆ. ನಿನ್ನ ದುಗುಡದ ಮನಸ್ಸು ಅವಳಿಗೆ ಹಾಸ್ಯ. ನಿನ್ನ ಭಾವನೆಗಳು ಅವಳಿಗೆ ಬಹು ವಿಚಿತ್ರವಾಗಿ ಕಾಣುತ್ತದೆ. ಅವಳು ನಿನ್ನ ಅಲಂಕಾರ ಮುಗಿಸಿ ನಿನ್ನ ಕಣ್ತುಂಬಾ ನೋಡುತ್ತಾಳೆ.

"ಈ ಹಾಳು ಚೆಲುವು ಯಾರನ್ನು ಕೊಲ್ಲೋಕೆ ಹೊರಟಿದೆಯೋ?" ಕೆನ್ನೆ ಸವರಿ ನೆಟಿಕೆ ಮುರಿಯುತ್ತಾಳೆ. "ಹಾಳು ನನ್ನ ಕಣ್ಣೇ ತಗಲೀತು" ಎಂದು ಕರಿಯ ಚುಕ್ಕಿಯೊಂದನ್ನು ಎಡಗೆನ್ನೆಯ ಮೇಲಿಡುತ್ತಾಳೆ.

ಅಷ್ಟರಲ್ಲಿ ಕೆಲಸದವಳು ಮೇಲೇರಿ ಬರುತ್ತಾಳೆ. ಅವಳು ಏದುತ್ತಾ ಹೇಳುತ್ತಾಳೆ.

"ಅಮ್ಮಾ, ಅವರು ಬಂದರು" ಅವಳು ಹುಬ್ಬಗಂಟು ಹಾಕುತ್ತಾಳೆ, ಆದರೆ ನಿನ್ನ ಹೃದಯದ ಮಿಡಿತ ಇಮ್ಮಡಿಯಾಗುತ್ತದೆ, ನಿನ್ನ ಸುಮಧುರ ಭಾವನೆಗಳೆಲ್ಲಾ ಒಮ್ಮೆಗೇ ಉಕ್ಕಿ ಬಂದು ಮೈ ಮೋದದಷ್ಟು ಹಗುರವಾಗುತ್ತದೆ. ಉಕ್ಕಿ ಬರುವ ಸಂತಸ ಹೃದಯದಿಂದ ಸುರಿದು ಹೋಗದಿರಲೆಂದು ಎದೆಯನ್ನು ಅದುಮಿ ಹಿಡಿಯುತ್ತೀಯೆ.

ಅವಳು ನಿನ್ನ ಕಡೆ ನೋಟ ಹರಿಸಿ ಸೆರಗನ್ನು ಸೊಂಟಕ್ಕೆ ಕಟ್ಟುತ್ತಾಳೆ. ನೀನು ದೈನ್ಯದಿಂದ ಕೇಳುತ್ತೀಯೆ.

"ನೀನು ಒಪ್ಪಿದ್ದೀಯೆ...ಜ್ಞಾಪಕವಿರಲಿ!"

ಅವಳು ದಢಾರನೆ ಬಾಗಿಲು ಹಾಕಿಕೊಂಡು ಹೊರಗೆ ಹೋಗುತ್ತಾಳೆ. ಅವಳ ಹಿಂದೆ ಕೆಲಸದವಳು ಮೆಲ್ಲಗೆ ಬಾಗಿಲು ತೆರದು ಮುಂದೆ ಮಾಡಿ ಹೋಗುತ್ತಾಳೆ.

ನೀನು ಆ ಮಂದವಾದ ಬೆಳಕಿನಲ್ಲಿ ಶಿಲೆಯಂತೆ ನಿಂತಿರುತ್ತೀಯೆ. ಮಹಡಿಯ ಮೇಲೇರಿ ಬರುವ ಸುದ್ದಿಗಾಗಿ ಚಾತಕದಂತೆ ಕಾಯುತ್ತಿದ್ದೀಯೆ. ಅವನು ಬಂದನೆಂದು ಕೇಳಿಯೇ ನಿನ್ನ ಆಸೆಗಳೆಲ್ಲಾ ಗರಿಗೆದರಿ ಕುಣಿಯುತ್ತಿವೆ. ನೀನು ಅವನನ್ನು ಎದುರಿಸಲೇ ಆಗದಷ್ಟು ಉನ್ಮಾದಕತೆ ನಿನ್ನಲ್ಲಿ ಮನೆಮಾಡುತ್ತಿದೆ. ಅಗೋ! ಮಹಡಿಯೇರಿ ಬರುವ ಸದ್ದು! ಹೌದು,

ಅವನೇ! ಅದು ನಿನಗೆ ಚಿರಪರಿಚಿತ. ಬಾಗಿಲ ಬಳಿ ಬರುತ್ತಿದೆ. ನಿನಗೆ ಅದೇಕೋ ಕೆಲಜ್ಜೆಯಿಂದ ಮುಖ ಕೆಂಪೇರುತ್ತದೆ. ಬೇಕೆಂತಲೇ ಬಾಗಿಲಿಗೆ ಬೆನ್ನು ಮಾಡಿ ನಿಲ್ಲುತ್ತೀಯೆ...

ಅವನು ಬಾಗಿಲು ಮೆಲ್ಲನೆ ಸರಿಸಿ ಒಳಗೆ ಬರುತ್ತಾನೆ. ಒಂದು ಕ್ಷಣ ನಿನ್ನ ಹಿಂಭಾಗವನ್ನು ನೋಡುತ್ತಾನೆ. ಮೆಲ್ಲನಡಿಯಿಟ್ಟು ಬಂದು ಹಿಂದಿನಿಂದ ಅಪ್ಪುತ್ತಾನೆ. ಅವನ ಸ್ಪರ್ಶದಿಂದ ನಿನಗೆ ವಿದ್ಯುತ್ಸಂಚಾರವಾದಂತಾಗುತ್ತದೆ. ಅವನ ಕೈಯೆತ್ತಿ ತುಟಿಗಿಟ್ಟುಕೊಳ್ಳುವಾಗ ಅವನ ಮುಷ್ಟಿಯಲ್ಲಿ ಏನೋ ಇರುತ್ತದೆ. ಅಚ್ಚರಿಯಿಂದ ಅವನೆಡೆಗೆ ತಿರುಗುತ್ತೀಯಾ. ಅವನು ನಿನ್ನ ಮುಖವನ್ನು ಕಣ್ಣಲ್ಲಿ ಹೀರಿಕೊಂಡು ಹೇಳುತ್ತಾನೆ.

"ಕ್ಷಮಿಸು, ನಿನ್ನೆ ಬರಲಾಗಲಿಲ್ಲ. ಅದಕ್ಕೆ ಮುನಿಸೇನು...?" ಅವನ ಸ್ವರ ನಿನ್ನ ದೇಹದಲ್ಲಿನಾದ ತರಂಗಗಳನ್ನು ಎಬ್ಬಿಸುವ ಅನುಭವ ನಿನಗೆ, ನಿನ್ನೆಯೆಲ್ಲಾ ಕಾಣದ ಮುಖ ಕಂಡಾಗ ನಿನಗೆ ದುಃಖ ಸಂತಸ ಎರಡೂ ಉಕ್ಕಿ ಬರುತ್ತದೆ. ತುಟಿಯಲ್ಲಿ ಕಿರುನಗೆ ಮಿಂಚಿಸಿ ಕಣ್ಣಲ್ಲಿ ನೀರು!

ಅವನು ನಿನ್ನ ತುಟಿಯೆಡೆಗೆ ಬಾಗಿ ಹೇಳುತ್ತಾನೆ.

"ಛೇ ಕಣ್ಣಲ್ಲೇಕೆ ನೀರು? ನಿನಗೆ ಒಂದು ಶುಭ ಸಮಾಚಾರ ಹೇಳಬೇಕೆಂದು ಬಂದೆ, ನಗುತ್ತಾ ಕೇಳಬೇಕು, ಎಲ್ಲ!" ಅವನ ತುಟಿ ನಿನ್ನ ತುಟಿಗೆ ತಗುಲುತ್ತದೆ.

ಏನು ಶುಭ ಸಮಾಚಾರವಿರಬಹುದು? ಅವಳನ್ನು ಕೊಲ್ಲಿರಬಹುದೇ? ನಿನ್ನನ್ನು ಕರೆದುಕೊಂಡು ಹೋಗಲು ಬಂದಿರಬಹುದೇ? ಅವಳೇ ನಿನ್ನ ಗೋಳು ನೋಡಲಾರದೆ ಅವನಿಗೆ ಹೇಳಿರಬಹುದೇ? ಅವನಿಂದ ನೀನು ಬೇರೆಯಾಗದಿರುವಂತೆ ಅವನನ್ನು ನೀನೇ ಬಲವಾಗಿ ಅಪ್ಪುತ್ತೀಯೆ. ಕಣ್ಮುಚ್ಚಿ ನಿನ್ನನ್ನು ಕಾಪಾಡಿದ ದೇವರನ್ನು ವಂದಿಸಿ ಅವನ ಎದೆಯ ಮೇಲೆ ಮುಖವಿಡುತ್ತೀಯೆ.

ಅವನು ನಿನ್ನನ್ನು ಮೆಲ್ಲನೆ ದೂರ ಸರಿಸುತ್ತಾನೆ. ನಿನ್ನ ಮುಖ ವನ್ನೇ ನೋಡುತ್ತಾ ಮುಷ್ಟಿಯನ್ನು ನಿನ್ನ ಮುಂದೆ ಬಿಟ್ಟು ಹಿಡಿಯುತ್ತಾನೆ. ಕೆಂಪು ಕಲ್ಲುಸಕ್ಕರೆ! ನೀನು ಕಣ್ಣರಳಿಸಿ ನೋಡುತ್ತೀಯೆ. ಅವನ ಮುಖ ವನ್ನೊಮ್ಮೆ ನೋಡುತ್ತೀಯೆ. ಅವನ ಮುಖದಲ್ಲಿ ಮಂದಹಾಸ ಮಿನುಗುತ್ತಿದೆ.

"ಶುಭ ಸಮಾಚಾರ ಹೇಳುವಾಗ ಸಿಹಿ ಕೊಡಬೇಕು... ಅಲ್ಲವೇ" ಅವನು ಕೆಂಪು ಕಲ್ಲುಸಕ್ಕರೆಯನ್ನು ನಿನ್ನ ತುಟಿಯ ಬಳಿ ಇಡುತ್ತಾನೆ. "ನಿನ್ನೆ ನನ್ನ ಬಾಳಿನ ದೇವತೆ ನನ್ನ ಮನೆ ಬೆಳಗಲು ಪುಟ್ಟದೀಪದೊಂದಿಗೆ ಬಂದಳು. ನನ್ನ ಹೆಂಡತಿ, ನನ್ನ ಪುಟ್ಟ ಮಗಳು ಬಂದಿದ್ದಾರೆ. ಅವಳು ಬಾಣಂತನಕ್ಕೆ ಹೋದಂದಿನಿಂದ ಇಂದಿನವರೆಗೆ ನನ್ನ ಒಂಟಿಬಾಳು ತುಂಬಿದ್ದಕ್ಕೆ ನಿನಗೆ ನಾನೇನು ಕೊಟ್ಟರೂ ಸಾಲದು...!"

ನಿನ್ನ ತುಟಿಯ ಮೇಲಿದ್ದ ಕಲ್ಲುಸಕ್ಕರೆ ಕೆಂಡದಂತಾಗುತ್ತದೆ. ಸಕ್ಕ ರೆಯ ಸಿಹಿ ವಿಷದಷ್ಟು ಕಹಿಯಾಗುತ್ತದೆ. ನಿನ್ನ ರಕ್ತವೆಲ್ಲ ಒಮ್ಮೆಲೇ ಕಹಿಯಾಗಿ ಹರಿದುಬಂದಂತೆ ತೋರಿ ನಾಲಿಗೆ ಗಂಟಲೆಲ್ಲಾ ಕಹಿಯಾದ ಅನುಭವವಾಗುತ್ತದೆ. ತಲೆ 'ಧಿಂ' ಎಂದು ತಿರುಗಿ ಬಿರುಗಾಳಿಗೊಡ್ಡಿದ್ದ ತರಗೆಲೆಯಂತೆ ನಿಂತು ನಿಂತಲ್ಲೇ ಕುಸಿಯುತ್ತೀಯೆ. ಅವನು ಬೆದರಿ ನಿನ್ನೆ ಡೆಗೆ ಬಗ್ಗಿ ಭುಜ ಹಿಡಿದು ಎಬ್ಬಿಸಲೆತ್ನಿಸುತ್ತಾನೆ. ನೀನು ಅವನ ಕೈ ದೂರ ಮಾಡುತ್ತೀಯೆ.

"ದಯವಿಟ್ಟು ಮುಟ್ಟಬೇಡಿ. ಮನೆಯಲ್ಲಿ ದೇವತೆಯಿರಬೇಕಾದರೆ ಈ ನರಕಕ್ಕೆ ನೀವು ಬರಬಾರದು...!" ಮೆಲ್ಲನುಸುರುತ್ತೀಯೆ,

ಅವನು ಬೆದರಿ ಹಿಂದೆ ಸರಿಯುತ್ತಾನೆ. ನೀನು ಅವನೆಡೆಗೆ ದೃಷ್ಟಿ ಹರಿಸುವುದಿಲ್ಲ. ಅವನ ಹತ್ತಿರ ಬೇರೆ ಯಾವ ಮಾತನ್ನೂ ಆಡು ವುದಿಲ್ಲ. ಅವನು ನಿಂತಲ್ಲೇ ಕಲ್ಲಾಗಿ ನಿಲ್ಲುತ್ತಾನೆ. ನೀನು ಕುಳಿತಲ್ಲೇ ಕಲ್ಲಾಗುತ್ತೀಯೆ.

ಒಂದೆರಡು ನಿಮಿಷ ಹಾಗೇ ನಿಂತು ಅವನು ಬಾಗಿಲ ಬಳಿಗೆ ಹೋಗು ತ್ತಾನೆ. ಹಿಂತಿರುಗಿ ನಿನ್ನ ಕಡೆ ನೋಡಿ ಹೇಳುತ್ತಾನೆ. "ನಿನಗೆ ಹೇಳಿ ಹೋಗೋಣವೆಂದು ಬಂದೆ ಅಷ್ಟೆ....!" ಅವನು ಬಾಗಿಲು ತೆರೆದು ಹೊರಗೆ ಹೋಗುತ್ತಾನೆ, ನಿನ್ನ ಹೃದಯದ ಬಾಗಿಲು ತೆರೆದು ಹಾಗೆ ಹೊರಗೆ ಹೊರಟುಹೋಗುತ್ತಿದ್ದಾನೆ.

ನಿನ್ನ ಕೆನ್ನೆಯ ಮೇಲೆ ಹರಿದು ಬಂದ ಕಣ್ಣೀರು ನೆಲದ ಮೇಲೆ ಬೀಳು ತ್ತದೆ. ನೀನು ಸೆರಗಿನಿಂದ ಕಣ್ಣೊರೆಸಿಕೊಳ್ಳುತ್ತೀಯೆ. ಅಷ್ಟರಲ್ಲಿ ಅವಳು ಬಾಗಿಲು ತೆರೆದು ಒಳಗೆ ಬರುತ್ತಾಳೆ. ಅವಳ ಮುಖದಲ್ಲಿ ವಿಜ ಯೋತ್ಸಾಹದ ನಗೆಯಿದೆ. ನೀನು ಅವಳ ಕಡೆ ನೋಡದೆಯೆ ಹೇಳುತ್ತೀಯೆ.

"ಕೆಳಗೆ ಕಾದಿರುವವರನ್ನು ಕಳುಹಿಸು..."



# ನಾನು - ಇವಳು

—ಎಚ್. ಎಸ್. ಪಾರ್ವತಿ

ಸಭೆ ಮುಗಿಸಿಕೊಂಡು, ಆಗಲೇ ಹೊತ್ತಾಗಿದ್ದುದರಿಂದ ಸರಸರನೇ ಹೊರಗಡೆ ಬರುತ್ತಿದ್ದಾಗ ಹಿಂದಿನಿಂದ ಬಂದ ಆಕೆ:

'ಹೊರಟ್ರೇನ್ರೀ ಉಮಾದೇವಿ? ಅಂದಹಾಗೆ ಇವರು ನಿಮ್ಮ ತಮ್ಮ ಅಲ್ವಾ?'

ಎಂದು ಕೇಳಿದಾಗ ನನ್ನ ಜೊತೆ ಬರುತ್ತಿದ್ದ ಇವಳ ಮುಖ ಸಿಮ್ಲಾ ಸೇಬಿನಂತೆ ಕೆಂಪಗಾಯಿತು. ಆಕೆಯ ಮಾತು ಕೇಳಿದರೂ ಕೇಳದವಳಂತೆ ನಡಿಗೆಯ ವೇಗವನ್ನು ಮತ್ತಷ್ಟು ಹೆಚ್ಚಿಸಿದಳು. ಹೆಚ್ಚು ಕಡಿಮೆ ಓಡುವವಳಂತೆಯೇ ನಡೆದು ಹೊರಗಡೆ ಬಂದು ಕಾರು ಹತ್ತಿ ಕುಳಿತಳು, ಅವಳ ವೇಗಕ್ಕೆ ಸಮನಾಗಿ ನಡೆಯಲಾರದೆ ನಾನೂ ಸೊತೆ.

ಇದೊಂದು ಬಾರಿ ಮಾತ್ರವಲ್ಲ, ನಮ್ಮಿಬ್ಬರ ಪರಿಚಯವಿಲ್ಲದ ಅನೇಕರು ಅನೇಕ ಬಾರಿ ಇಂಥ ಪ್ರಶ್ನೆ ಕೇಳಿದ್ದುಂಟು.

"ನಿಮ್ಮ ತಮ್ಮ ಕಾಯ್ತಿದಾರೆ ನೋಡಿ ಉಮಾದೇವಿ"

"ನಿಮ್ಮ ಅಕ್ಕ ಬಂದರು ಮಿ...ಇವರೇ,"

"ಹೌದು, ಇಚೀಚೆಗೆ ನನಗೂ ಸದಾ ಅನ್ನಿಸುತ್ತಲೇ ಇರುತ್ತದೆ. ಅವಳು ಬೆಳೆದಿದ್ದಾಳೆ. ನನಗಿಂತ ತುಂಬಾ ದೊಡ್ಡದಾಗಿ ಬೆಳೆದಿದ್ದಾಳೆ. ಇನ್ನೂ ಬೆಳೆಯುತ್ತಲೇ ಇದ್ದಾಳೆ."

ನಾನು ಮದುವೆಯಾಗುವ ಮುನ್ನ ಅವಳು ಹೀಗೆ ಇರಲಿಲ್ಲ. ಎತ್ತರ

ವಾಗಿ ಕಂಡರೂ ತುಂಬಾ ತೆಳುವಾಗಿ, ನನಗಿಂತ ಸಣ್ಣದಾಗಿಯೇ ಕಾಣು ತ್ತಿದ್ದಳು. "ಹುಡುಗಿ ಎತ್ತರವಲ್ಲವೇನ್ರಿ?" ಅಂದವರಿಗೂ ನನ್ನ ತಾಯಿ "ಇಲ್ಲವಲ್ಲ, ಇಬ್ಬರೂ ಸಮವಾಗೇ ಇದಾರೆ, ಪಕ್ಕದಲ್ಲಿ ನಿಂತರೆ ನನ್ನ ಮಗನೇ ಅರ್ಧ ಅಂಗುಲ ಎತ್ತರ" ಎಂದೇ ಹೇಳಿಕೊಳ್ಳುತ್ತಿದ್ದರು. ಕಾರಣ, ನನ್ನ ಸೋದರ ಸಂಬಂಧದ ಹೆಣ್ಣು ಉಮಾಳನ್ನು ಕಂಡರೆ ನನ್ನ ತಾಯಿಗಿದ್ದ ಅಭಿಮಾನ, ಅವಳನ್ನೇ ತನ್ನ ಸೊಸೆಯಾಗಿ ತಂದುಕೊಳ್ಳ ಬೇಕೂ ಎನ್ನುವ ಹಠ!...ನನ್ನ ದೃಷ್ಟಿಯಲ್ಲಿ ಯಾವ ಹೆಣ್ಣಾದರೂ ಒಂದೇ. ನಾನು ಎಂ.ಎಸ್.ಸಿ. ರ್‍ಯಾಂಕ್ ಸ್ಟೂಡೆಂಟ್! ತಾತಾ ಇನ್‌ಸ್ಟಿಟ್ಯೂಟ್‌ನಲ್ಲಿ ಪಿ.ಎಚ್.ಡಿ. ಮುಗಿಸಿ ಅಲ್ಲೇ ರಿಸರ್ಚ್ ಮುಂದುವರಿಸಿದ್ದೆ! ಎದುರಿಗೆ ಬಂದ ಹಲವಾರು ದೃಷ್ಟಿಗಳು ನಾನು ಸುಂದರನೆಂಬ ಹೆಮ್ಮೆಯನ್ನೂ ನನ್ನಲ್ಲಿ ಮೂಡಿಸಿದ್ದವು. ನನ್ನ ಅಭಿಪ್ರಾಯದಲ್ಲಿ ಈ ಮದುವೆ-ಗಿದುವೆ ಗಳಿಗೆಲ್ಲಾ ಪ್ರಾಮುಖ್ಯತೆ ಇಲ್ಲ, ಆದರೆ ಅಮ್ಮನ ಬಲವಂತ, ದಿನಕ್ಕಿಬ್ಬ ರಂತೆ ಬರುತ್ತಿದ್ದ ಕನ್ಯಾಪಿತೃಗಳ ಕಾಟ, ಭುಜದ ಮೇಲೆ ಕೈ ಹಾಕಿಕೊಂಡು ಒಟ್ಟೊಟ್ಟಿಗೆ ಓಡಾಡುತ್ತಿದ್ದ ಹೆಣ್ಣು ಗಂಡುಗಳು, ಅವರ ಕುಲುಕುಲು ನಗು: ನನ್ನ ಮನಸ್ಸಿನಲ್ಲಿ ಯಾವು ಯಾವುದೋ ಆಸೆಯನ್ನು ಕೆರಳಿಸಿ ದ್ದುಂಟು, ಆಗೆಲ್ಲಾ ನನಗೂ ಒಬ್ಬ ಹೆಣ್ಣು ಬೇಕೂ ಎನಿಸಿದ್ದೂ ಉಂಟು. ಆದರೆ ಆ ಹೆಣ್ಣು ಇಂಥವಳೇ ಆಗಬೇಕೆಂಬ ಹಠವೇನೂ ನನಗಿರಲಿಲ್ಲ.

ತಾಯಿಗೆ ಮಾತ್ರ ಉಮೆಯ ಮೇಲೆ ವಿಶೇಷ ಅಭಿಮಾನ, ಅವಳು ತಮ್ಮ ಸೋದರ ಸಂಬಂಧಿ ಎನ್ನುವುದೇ ಇದಕ್ಕೆ ಮುಖ್ಯ ಕಾರಣವಿರಬಹು ದೇನೋ? ಉಮಾ ಹೆಚ್ಚು ಓದಿಯೂ ಇರಲಿಲ್ಲ. ನೋಡುವುದಕ್ಕೆ ರೂಪವತಿ ಎಂದೇನೋ ಹೇಳುವಂತಿರಲಿಲ್ಲ. "ಫಳ ಫಳನೇ ಮಿಂಚುವ ಆ ಕಣ್ಣುಗಳನ್ನು ಬಿಟ್ಟರೆ ಮಿಕ್ಕಂತೆ ಸಾಧಾರಣ" ತೀರಾ ಸಾಧಾರಣ...ಸಣ್ಣಗೆ ಉದ್ದವಾಗಿದ್ದ ದೇಹ, ಬಡಕಲು ಎನ್ನಿಸಿಕೊಳ್ಳುವ ಹಾಗೆ ಇತ್ತು. ಬಂದಿದ್ದ ಮಿಕ್ಕ ಅನೇಕ ಹೆಣ್ಣುಗಳನ್ನು ಒಂದಲ್ಲ ಒಂದು ನೆಪ ಹೇಳಿ ತಿರಸ್ಕರಿಸಿದ್ದ ತಾಯಿ ಇವಳನ್ನು ಮಾತ್ರ ನನ್ನ ಮುಂದೆ ಹಾಡಿ ಹೊಗಳು ತ್ತಿದ್ದಳು,

"ಉಮಾ ತುಂಬಾ ಒಳ್ಳೇ ಹುಡುಗಿ. ಮನೆ ಕೆಲಸ ಎಷ್ಟು ಅಚ್ಚು ಕಟ್ಟಾಗಿ ಮಾಡ್ತಾಳೆ ಅಂತ! ಅಷ್ಟೆ ಅಲ್ಲ. ಇವಳು ಕಥೆ, ಲೇಖನ ಏನೇನೋ ಬರೀತಿರ್ತಾಳೆ ಕಣೋ. ಆಗಲೇ ಪೇಪರಿನಲ್ಲೆಲ್ಲಾ ಅಚ್ಚಾಗಿದೆ."

"ಓಹೋ ಎಂಥ ಕಥೇನೋ! ಕಾಗೆ ಗುಬ್ಬಚ್ಚಿ ಕಥೆನೋ, ಸಿಂಹ ಇಲಿ ಕಥೇನೋ!"

ಎಂದು ನಾನು ಕೇಳಿದಾಗ ಉಮಾ ಸಿಟ್ಟಿನಿಂದ ಮುಖ ಉಬ್ಬಿಸಿದ್ದಳು.

"ಬಿಡಿ ಅತ್ತೆ. ಕನ್ನಡವೇ ಬರದಿರೋರ್ಗೆ ಕಥೆ ವಿಚಾರ ಯಾಕೆ ಹೇಳ್ತೀರಾ?—" ಎಂದು ಕೇಳಿದಾಗಿನ ಆವಳ ಮುಖಭಾವ ನನಗೆ ವಿಚಿತ್ರವಾಗಿ ಕಂಡಿತ್ತು...

ಮದುವೆಯ ದಿನ ಎಲ್ಲರೂ ನನ್ನನ್ನು ಮೆಚ್ಚುವವರೇ. "ಹುಡುಗಿ ತುಂಬಾ ಅದೃಷ್ಟವಂತೆ" ಎಂದು ಹೊಗಳುವ ನೆಪದಲ್ಲಿ. ಇವಳು ನನಗೆ ಯಾವ ರೀತಿಯಲ್ಲೂ ಸರಿಯಾದ ಜೋಡಿಯಲ್ಲ ಎಂದು ಅಪ್ರತ್ಯಕ್ಷವಾಗಿ ಮೂದಲಿಸುವವರೇ! ಆವರ ಹೊಗಳಿಕೆಯಿಂದ ನಾನು ಹೊಸದಾಗಿ ಉಬ್ಬಬೇಕಾದುದೇನೂ ಇರಲಿಲ್ಲ. ಯಾಕೆಂದರೆ ನಾನು ಸುರೂಪಿ. ರ್ಯಾಂಕ್ ಪಡೆದ ಬುದ್ಧಿವಂತ. ರಿಸರ್ಚ್ ಮುಗಿಸಿ ಸ್ವಪ್ರಯತ್ನದಿಂದ ದೊಡ್ಡ ಪದವಿಗೇರಿದವನು. ಸಾಕಷ್ಟು ಶ್ರೀಮಂತ. ಒಟ್ಟಿನಲ್ಲಿ ಎಲ್ಲ ಕಡೆಗಳಿಂದ ಬೆಳೆದಿದ್ದವನು ಎನ್ನುವುದು ನನಗೆ ತಿಳಿದಿದ್ದ ವಿಚಾರವೇ! ಆದರೆ ಈ ಮಾತುಗಳನ್ನು ಕೇಳಿದಾಗ ಉಮೆಯ ಮನಸ್ಸಿಗೆ ಏನನ್ನಿಸಿತೋ! ನಾನಂತೂ ಆವಳ ಮುಖವನ್ನು ಪರೀಕ್ಷಿಸಿ ನೋಡುವ ಪ್ರಯತ್ನ ಮಾಡಿರಲಿಲ್ಲ.

ಉಮೆಗೆ ನನ್ನನ್ನು ಕಂಡರೆ ತುಂಬಾ ಗೌರವ, ಸ್ವಲ್ಪ ಭೀತಿಯೂ ಇರಬಹುದೇನೋ! ಇದ್ದೀತು! ನಾನು ಮಿಕ್ಕವರಂತೆ ಹೆಂಡತಿ ಎಂದ ಕೂಡಲೇ ಜೊಲ್ಲು ಸುರಿಸುತ್ತಾ ಆವಳ ಹಿಂದೆ ಮುಂದೆ ಓಡಾಡಿದವನೂ ಅಲ್ಲ. ಹಾಗೆ ಹೆಂಡತಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡುವುದಕ್ಕೆ ನನ್ನ ಬಿಂಕ ಅವಕಾಶ ಕೊಡಬೇಕಲ್ಲ! ನಾನು ಬುದ್ಧಿವಂತ, ಹೊಸ ಸಂಶೋಧನೆಯಲ್ಲಿ ತೊಡಗಿರುವವನು. ಇತರ ಸಣ್ಣ ಪುಟ್ಟ ವಿಚಾರಗಳನ್ನೆಲ್ಲಾ ಗಮನಿಸುತ್ತಾ ಕೂರು

ವಷ್ಟು ನನಗೆ ಬಿಡುವಾದರೂ ಎಲ್ಲಿ! ತುಂಬಾ ಎತ್ತರ ಬೆಳೆದಿದ್ದ ನನಗೂ ಇವಳಿಗೂ ಎಲ್ಲಿಯ ಹೋಲಿಕೆ! ಸಮಾನತೆ! ಇವಳು ನನಗೆ ಹೆದರುವುದು ಸಹಜವೇ! ಹಾಸಿಗೆಯಲ್ಲಿ ಜೊತೆ ಬೇಕೆನಿಸಿದಾಗ ಮಾತ್ರ ನನಗವಳ ಅವಶ್ಯ ಕತೆ ಎನ್ನಿಸುತ್ತಿತ್ತು. ಮಿಕ್ಕಂತೆ ದಿನವೆಲ್ಲಾ ಅವಳು ಏನು ಮಾಡು ತ್ತಿದ್ದಳೋ ಯಾರಿಗೆ ಗೊತ್ತು!

ಈ ಹತ್ತು ವರ್ಷಗಳಲ್ಲಿ ನಾನು ಇದ್ದಂತೆಯೇ ಇದ್ದೆ. ವರ್ಷ ಕ್ಕೊಂದು ಇಂಕ್ರಿಮೆಂಟ್, ಒಂದೆರಡು ಬಾರಿ ಪ್ರಮೋಶನ್, ಇಷ್ಟರಲ್ಲಿ ನನ್ನ ಪ್ರಗತಿ ಮುಗಿದಿತ್ತು. ಶರೀರದ ಗಾತ್ರವೂ ಇದ್ದಂತೆಯೇ ಇತ್ತು ಅಥವಾ ಮೊದಲಿಗಿಂತ ಎರಡು ಬೆಟ್ಟು ಸಣ್ಣಕ್ಕೇ ಆಗಿದ್ದೆನೇನೋ!

ಆದರೆ ಇವಳು-ಅಂದು ಒಣಕಲು ಕಡ್ಡಿಯಂತಿದ್ದ ಇವಳು ತುಂಬಿ ಕೊಂಡಿದ್ದಾಳೆ. ಒಂದು ಮಗುವಾದ ಮೇಲಂತೂ ಬಣ್ಣವೂ ತೇಲಿಕೊಂಡು ಮುಖಕ್ಕೊಂದು ಕಳೆ ಬಂದಿದೆ. ಅಷ್ಟೆ ಅಲ್ಲ, "ನಿಮಗಿದೆಲ್ಲಾ ಗೊತ್ತಾ ಗೊಲ್ಲ ಬಿಡ್ರಿ" ಎಂದು ಪದೇ ಪದೇ ನನ್ನ ಪೆದ್ದುತನವನ್ನು ಕೆಣಕುತ್ತಾಳೆ. ಅವಳು ಹಾಗೆಂದಾಗಲೆಲ್ಲಾ, ಅವಳನ್ನು ವಿರೋಧಿಸಬೇಕೂ. ಅವಳ ಮೇಲೆ ರೇಗಬೇಕೂ ಅನ್ನಿಸುವುದರ ಬದಲು, ಇವಳು ಹೇಳುತ್ತಿರುವ ವಿಚಾರದಲ್ಲಿ ನಾನು ಪೆದ್ದನೇ ಹೌದು ಎಂದು ಒಪ್ಪಿಕೊಂಡು ತಲೆಬಾಗಿಸ ಬೇಕಾಗುತ್ತದೆ.

ಇವಳು ಮೊದಲು ನನ್ನನ್ನು ಹೀಗೆ ಮೂದಲಿಸಿದ್ದು ನಮ್ಮ ಮೊದಲ ಮಗು ಹುಟ್ಟಿದ ಮೇಲೆ, ಒಂದು ದಿನ ರಾತ್ರಿ ರಾಜ ಯಾಕೋ ಹಠ ತೆಗೆದ. ಒಳಗೆ ಇವಳು ಯಾವುದೋ ಕೆಲಸದಲ್ಲಿದ್ದಳು. ನಾನೇ ಸಮಾಧಾನ ಮಾಡೋಣವೆಂದುಕೊಂಡು ಮಗುವನ್ನೆತ್ತಿಕೊಂಡೆ. ರಾಜನ ರಾಗಾಲಾಪನೆ ನಿಲ್ಲುವುದರ ಬದಲು ಮೆಟ್ಟಿಲು ಮೆಟ್ಟಿಲಾಗಿ ಹೆಚ್ಚುತ್ತಲೇ ಹೋಯಿತು. ನಾನು ಎಷ್ಟು ಉಪಾಯ ಮಾಡಿದರೂ ಅವನ ಅಳು ನಿಲ್ಲಲೇ ಇಲ್ಲ. ಕೊನೆಗೆ ಇವಳೇ ಬಂದಳು!

"ಕೊಡ್ರೀ ಇಲ್ಲಿ ಮಗೂನ. ಯಾವುದಾದರೂ ಪುಸ್ತಕ ಹಿಡ್ಕೊಂಡು ಕೂತ್ಕೊಳ್ಳಿ ಹೋಗಿ. ಇವನ್ನ ಸಮಾಧಾನ ಮಾಡೋದಕ್ಕೆ ನಿಮಗೆಲ್ಲಿ ಬರುತ್ತೆ?"

ಎಲಾ ಇವಳ! ಡಾಕ್ಟರೇಟ್ ಪಡೆದ ನನಗೆ ಒಂದು ಮಗೂನ ಸಮಾಧಾನ ಮಾಡೋದಕ್ಕೆ ತಿಳಿಯೋದಿಲ್ವಂತೆ! ಆದರೆ, ಎಲಾ ಪೋರ! ಅವರಮ್ಮ ಎತ್ತಿಕೊಂಡ ತಕ್ಷಣ ಇವನು ತಾನೇ ರಾಗ ನಿಲ್ಲಿಸೇಬಿಡೋದೇ!

ಅವತ್ತೇ ಶುರುವಾಗಿತ್ತು ಅವಳು ಬೆಳೆಯೋದಕ್ಕೆ ನಾನು ಸೋತು ಕುಗ್ಗೋದಕ್ಕೆ! ಒಂದು ಎರಡು ಮೂರು ಇಂಕ್ರಿಮೆಂಟ್ ನನಗೆ ಬಂದ ಹಾಗೇ ಇವಳೂ ಒಂದು, ಎರಡು, ಮೂರು ಮಕ್ಕಳನ್ನ ಪಡೆದಳು. ಇನ್‌ಕ್ರಿಮೆಂಟ್ ಪಡೆದು ನಾನು ಬೆಳೆದಿದ್ದಕ್ಕಿಂತ ಹೆಚ್ಚಾಗಿ. ಒಂದೊಂದು ಮಕ್ಕಳಾದ ಹಾಗೂ ಇವಳು ಬೆಳೀತಾನೇ ಹೋದಳು! ನನ್ನ ತಾಯಿ ತೀರಿಕೊಂಡಮೇಲಂತೂ ನನಗೂ ತಾಯಿಯಾಗೋದಕ್ಕೆ ಪ್ರಯತ್ನಿಸುತ್ತಿದ್ದಾಳೆ.

ಈಗೀಗ ಯಾವ ಪೇಪರಿನಲ್ಲಿ ನೋಡಿದರೂ ಇವಳ ಹೆಸರೇ! ಮೊದಮೊದಲು "ನನ್ನ ಕಥೆ ಪೇಪರಿನಲ್ಲಿ ಬಂದಿದೆ ನೋಡ್ರೀ" ಎಂದು ತೋರಿಸುತ್ತಿದ್ದಳು, ನಾನೂ ಹೂಗುಟ್ಟಿ "ಸುಮ್ಮನಾಗುತ್ತಿದೆ. ಆದರೀಗ ಇವಳು ತೋರಿಸುವುದಿಲ್ಲ. ಅವರೂ—ಇವರೂ, ನೆಂಟರೂ—ಸ್ನೇಹಿತರೂ; "ಈ ವಾರ ಪತ್ರಿಕೇಲಿ ನಿಮ್ಮಾಕೆಯ ಕಥೆ ಬಂದಿದೆ ಯಲ್ಲಪ್ಪಾ" ಎಂದು ಆರಂಭಿಸಿ "ಸ್ವೀಟ್ಸ್ ಎಲ್ಲಿ?" ಎಂದು ಡಿಮ್ಯಾಂಡ್ ಮಾಡುತ್ತಿದ್ದರು, ಇತ್ತೀಚೆಗೆ ಅವಳ ಹೆಸರಿನಲ್ಲಿ ಎರಡು ಪುಸ್ತಕಗಳು ಅಚ್ಚಾಗಿದ್ದವು. ಕನ್ನಡದಲ್ಲಿ ಇವಳು ಬರೆದಿದ್ದ ಪುಸ್ತಕಕ್ಕೆ ಇಂಗ್ಲೀಶ್ ಪತ್ರಿಕೆಯಲ್ಲಿ ಬಂದಿದ್ದ ವಿಮರ್ಶೆ ಓದಿದಾಗ, ಆ ವಿಮರ್ಶೆಯಲ್ಲಿ ಮೆಚ್ಚಿಗೆಯ ಅಂಶವೇ ಹೆಚ್ಚಾಗಿದೆ ಎಂದು ಕಂಡಾಗ ನನಗೆ ಹೇಗೆ ಹೇಗೋ ಅನ್ನಿಸಿತು.

ಜೊತೆಗೆ ಭಾಷಣಗಳು ಬೇರೆ. "ಈ ಪುಣ್ಯಾತ್ಗಿತ್ತಿ ಅದೇನು ಮಾತಾಡುತ್ತಾಳೋ" ಎಂದು ನನ್ನ ರ್‍ಯಾಂಕು ಬುದ್ಧಿ ಮೂದಲಿಕೆ ಎತ್ತುತ್ತಿದ್ದ ಹಾಗೇ, ನನ್ನ ಆಪ್ತ ಸ್ನೇಹಿತರು ಯಾರಾದರೂ ನುಡಿಯುತ್ತಿದ್ದರು.

"ಮೊನ್ನೆ ಸಮ್ಮೇಳನದಲ್ಲಿ ನಿಮ್ಮ ಮಿಸೆಸ್ ಭಾಷಣ ಕೇಳಿದೆನಯ್ಯಾ! ತುಂಬಾ ಚೆನ್ನಾಗಿ ಮಾತಾಡ್ತಾರೆ ಮನೇಲಿ ಟ್ರೈನಿಂಗ್ ಕೊಟ್ಟಿರ್ತೀ ಅಂತ ಕಾಣುತ್ತೆ. ಅಂಥ ಹಾಗೇ ನೀವ್ಯಾಕೆ ಬರಲಿಲ್ಲ?"

ಈಚೀಚೆಗೆ ನಮ್ಮ ಮನೆಗೆ ಬರುವವರಲ್ಲಿ ಮುಕ್ಕಾಲು ಜನ ಇವಳನ್ನು ಹುಡುಕಿಕೊಂಡೇ ಬರುತ್ತಿದ್ದರು. ಇವಳಿಗೆ ಬದಲು ಆಕಸ್ಮಾತ್ ನಾನೇ ಮೊದಲು ಕಣ್ಣಿಗೆ ಬಿದ್ದರೆ, ಗೊತ್ತಿದ್ದರೂ ಕೇಳುತ್ತಿದ್ದ ಪ್ರಶ್ನೆ. "ಉಮಾ ದೇವಿಯವರ ಮನೆ ಇದೇ ತಾನೇ?"

"ಉಮಾದೇವಿಯರುತೆ! ನನ್ನದು. ನಮ್ಮಪ್ಪ ಕಟ್ಟಿಸಿದ್ದು!" ಎನ್ನಬೇಕೆಂದು ಮನಸ್ಸು ಹಲ್ಲು ಕಡಿಯುತ್ತಿದ್ದರೂ ಮೇಲೆ ವಿನಯವಾಗಿ: "ಹೌದು, ಏನಾಗಬೇಕಾಗಿತ್ತು?" ಎಂದು ಪ್ರಶ್ನಿಸುತ್ತಿದ್ದೆ. ಬಂದಿದ್ದ ವನು ಹಲ್ಲು ಕಿರಿಯುತ್ತಾ ಉತ್ತರ ಕೊಡುತ್ತಿದ್ದ.

"ಹ ಹ...ಸ್ವಲ್ಪ ಅವರನ್ನು ನೋಡಬೇಕಾಗಿತ್ತು.

ಪರವಾಗಿಲ್ವೇ! ಅವಳ ಕೈ ಹಿಡಿದ ಗಂಡ ಎನ್ನಿಸಿಕೊಂಡ ನಾನೇ ಎದುರಿದ್ದರೂ ಅವರನ್ನು ಸ್ವಲ್ಪ ನೋಡಬೇಕಾಗಿತ್ತಂತೆ! ಇದೆಲ್ಲಾ ಮನಸ್ಸಿನೊಳಗಿನ ಮಾತು. ಮೇಲೆ ಏನೂ ಹೇಳದೇ ಮಿಕಿ ಮಿಕಿ ನೋಡು ತ್ತಿದ್ದಾಗ, ನನ್ನ ಮನೋಭಾವ ಅರ್ಥವಾದವನಂತೆ ಅವನು ಗೊಣ ಗುಟ್ಟುತ್ತಿದ್ದ.

"ಹದಿನೈದನೇ ತಾರೀಖು ನಮ್ಮ ಸಂಘದ ವಾರ್ಷಿಕೋತ್ಸವ. ಉಮಾ ದೇವಿಯವರನ್ನು ಅಧ್ಯಕ್ಷತೆಗೆ ಕರೀಬೇಕಾಗಿತ್ತು.

"ಓಹೋ!" ಇನ್ನು ಹೇಳುವುದೇನು! ಬಂದವನಿಗೆ ಜಾಗ ಬಿಟ್ಟು ಒಳಗೆ ಹೋಗುತ್ತಿದ್ದೆ.

ರಸ್ತೆಯಲ್ಲಿ ಸಭೆ ಸಮಾರಂಭಗಳಲ್ಲಿ ಜನ ನನ್ನನ್ನು ಪರಿಚಯ ಮಾಡಿಸುತ್ತಿದ್ದುದು!

"ಇವರು, ಮಿಸ್ಟರ್ ಇವರು...! ಅದೇ ನಮ್ಮ ಉಮಾದೇವಿ

ಎಲ್ಲೆಡೆಯೂ ಪಸರಿಸಿದ್ದ ಯಾವುದೋ ಪರಿಮಳ ತಗಲುತ್ತದೆ. ಸುತ್ತಲೂ ದಿಂಬಿಗೊರಗಿ ಕುಳಿತವರ ಬಿಸಿಯುಸಿರು' ಪಿಸುಮಾತು ನಿನ್ನ ಕಿವಿಗೆ ಬೀಳುತ್ತದೆ. ನೀನು ಯಾರನ್ನೂ ನೋಡುವುದಿಲ್ಲ. ನೀನು ನರ್ತಿಸುವಾಗ ಅವರೆಲ್ಲಾ ಹಸಿದ ಕಣ್ಣಿನಿಂದ ನಿನ್ನ ನೋಡುತ್ತಾರೆ. ಅವರ ಕೈಗಳು ಕಿಸೆಯಲ್ಲಿದ್ದ ನೋಟುಗಳ ಮೇಲಿರುತ್ತವೆ, ಆದರೆ ನಿನಗೆ ಅವರ್ಯಾರ ಮುಖಗಳೂ ಗೋಚರಿಸುವುದಿಲ್ಲ. ಅವರ ಯಾವ ಪ್ರತಿಕ್ರಿಯೆಯೂ ನಿನ್ನ ಕಣ್ಣಿಗೆ ಬೀಳುವುದಿಲ್ಲ. ನಿನ್ನ ಕಣ್ಣ ಮುಂದೆ ಅವನೊಬ್ಬನೇ .. ಅನಂತರ ನೀವಿಬ್ಬರೇ ನದೀ ತೀರದಲ್ಲಿ ಬೆಟ್ಟದ ಮೇಲೆ...ಹೆಮ್ಮರದಲ್ಲಿ ಪುಟ್ಟ ಗೂಡು ಕಟ್ಟಿಕೊಂಡು...ನೀವಿಬ್ಬರೇ...ನೀವಿಬ್ಬರೇ .

ನರ್ತನ ಮುಗಿಸಿ ಹೊರಟಾಗ ಕಾಲಿನ ಬಳಿ ಬಿದ್ದ ನೋಟಿನ ರಾಶಿಯನ್ನು ಮೆಟ್ಟಿಕೊಂಡು ನೀನು ಮಹಡಿಯೇರಿ ಓಡಿಹೋಗುತ್ತೀಯೆ. ನಿನ್ನ ಹಿಂದೆಯೇ ಕೆಲಸದವಳು ಓಡಿ ಬರುತ್ತಾಳೆ, ಈಗ ನೀನೊಬ್ಬ ಉನ್ಮಾದಿನಿ. ಕೆಲಸದವಳು ನಿನ್ನ ಹೆರಳು, ಅಲಂಕಾರ ಬಿಚ್ಚಲು ಸಹಾಯಕ್ಕೆ ಬಂದಾಗ ನೀನು ಅವಳನ್ನು ದೂರ ತಳ್ಳುತ್ತೀಯೆ. "ಹೋಗು ಹೊರಟು ಹೋಗು–ನನಗ್ಯಾರ ಸಹಾಯವೂ ಬೇಡ..." ಅವಳು ದೂರ ಸರಿಯುತ್ತಾಳೆ. ಮತ್ತೊಬ್ಬಳು ಕೈಯ್ಯಲ್ಲಿ ಸಿಹಿ ತಂಪು ಪಾನೀಯ ಹಿಡಿದು ನಿನ್ನ ಮುಂದೆ ಹಿಡಿಯುತ್ತಾಳೆ. ನಿನಗೆ ಅವಳ ಮೇಲೂ ರೋಷವುಕ್ಕಿ ಬರುತ್ತದೆ. ಅವಳ ಕೈಯ್ಯಿಂದ ಪಾನೀಯವನ್ನು ತೆಗೆದುಕೊಂಡು ಅವಳ ಮುಖಕ್ಕೇ ಎರಚುತ್ತೀಯೆ.

ಅಷ್ಟರಲ್ಲಿ ಅವಳೂ ಬರುತ್ತಾಳೆ. ಅವಳ ಮುಖದಲ್ಲಿ ಮಂದಹಾಸ ಮಿನುಗುತ್ತಿದೆ. ಅವಳ ಕೈಯ್ಯಲ್ಲಿ ನೋಟುಗಳ ಕಂತೆ! ನಿನ್ನ ಮುಂದೆ ಹೆದರಿ ನಿಂತಿದ್ದ ಇಬ್ಬರು ಕೆಲಸದವರನ್ನೂ ನಿನ್ನನ್ನೂ ನೋಡುತ್ತಾಳೆ. ಅವಳಿಗೆಲ್ಲಾ ಅರ್ಥವಾಗುತ್ತಿದೆ. ಅವಳು ಜೋರಾಗಿ ನಗುತ್ತಾಳೆ.

"ನೋಡು, ನಿನ್ನ ಮುಖ ದರ್ಶನದಿಂದ ಇಷ್ಟು ಸಿರಿ ಮಳೆಗರೆ

ಯಿತು. ಇನ್ನು ನಿನ್ನ ಅನುಭವಿಸಿದರೆ ಇನ್ನೇನು ಹೇಳು....ತೊಗೋ ಇದೆಲ್ಲಾ ನಿನಗೇ ನೀನು ಹೋಗಿ ಸ್ನಾನಮಾಡಿ, ಊಟಮಾಡಿ ವಿಶ್ರಮಿಸು, ಸಂಜೆಯ ಮೇಲೆ ನಿನಗೆ ವಿಶ್ರಾಂತಿ ಸಿಕ್ಕುವುದಿಲ್ಲ ಇಂದು..." ಅವಳು ನಿನ್ನ ಮುಂದೆ ನೋಟುಗಳ ಕಂತೆ ಹಿಡಿಯುತ್ತಾಳೆ. ನೀನು ಕೋಪದಿಂದ ಅದನ್ನು ಕಿತ್ತೊಗೆಯುತ್ತೀಯೆ. ನೋಟುಗಳು ಗಾಳಿಯಲ್ಲಿ ಹಾರಾಡಿ ನೆಲದ ಮೇಲೆಲ್ಲಾ ಚೆಲ್ಲಾಡುತ್ತದೆ. ಅವರು ಸಿಡಿದೇಳುತ್ತಾಳೆ.

"ಇಷ್ಟಕ್ಕೇ ಬಂತೆ ನಿನ್ನ ಪೊಗರು...? ತಾಳು ಅವನು ಬರಲಿ, ಕೆಲಸದವರ ಕೈಲಿ ಕುತ್ತಿಗೆ ಕೈಹಾಕಿ ನೂಕಿಸುತ್ತೇನೆ ಹೊರಗೆ...ಹುಷಾರು...!"

ನಿನ್ನ ಮನಸ್ಸು ನಿನ್ನ ಹತೋಟಿಯಲ್ಲಿಲ್ಲ–ನಿನಗೆ ಅವನು ಬೇಕು... ಬಾಳು ಬೇಕು...ಇಲ್ಲಿಂದ ಬಿಡುಗಡೆ ಬೇಕು, ನೀನೂ ಉರಿದೇಳುತ್ತೀಯೆ,

"ನೀನೂ ಅಷ್ಟೆ ಹುಷಾರು, ಅವರ ಸುದ್ದಿಗೆ ಬಂದರೆ ನಿನ್ನನ್ನು ಕತ್ತು ಹಿಸುಕಿ ಕೊಂದುಬಿಡುತ್ತೇನೆ!" ನೀನು ಅವಳ ಮೇಲೆ ಏರಿ ಹೋಗುತ್ತೀಯೆ. ಅವಳು ನಿನ್ನ ಕೈಗಳೆರಡನ್ನೂ ಬಿಗಿಯಾಗಿ ಹಿಡಿಯುತ್ತಾಳೆ. ಇಲ್ಲಿಯವರೆಗೆ ಸುಮ್ಮನೇ ನಿಂತಿದ್ದ ಕೆಲಸದವರು ಅವಳ ಸಹಾಯಕ್ಕೆ ಬರುತ್ತಾರೆ. ಇಬ್ಬರು ನಿನ್ನನ್ನು ಬಿಗಿಯಾಗಿ ಹಿಡಿಯುತ್ತಾರೆ. ಅವಳು ನಿನ್ನ ಕೆನ್ನೆಗೆ 'ಛಟೀರನೆ' ಹೊಡೆಯುತ್ತಾಳೆ. ಆ ಏಟಿಗೆ ನೀನು ತತ್ತರಿಸುತ್ತೀಯೆ, ಹಾರಾಡುತ್ತಿದ್ದ ಮನಸ್ಸು ಎಚ್ಚೆತ್ತು ನಿಲ್ಲುತ್ತದೆ. ಏಟಿನ ನೋವಿಗಿಂತಲೂ ವಾಸ್ತವತೆಯ ಅರಿವಾಗಿ ಕಣ್ಣುಗಳಲ್ಲಿ ನೀರಿಳಿಯುತ್ತದೆ.

"ನನ್ನ ಮೇಲೆ ಕೈ ಮಾಡ್ತೀಯಾ...ನನ್ನ ಕತ್ತು ಹಿಸುಕಿ ಕೊಲ್ತೀಯಾ, ನೋಡ್ತೀನಿ...!" ಅವಳು ಮತ್ತೆ ಕೆನ್ನೆಗೆ ಹೊಡೆಯುತ್ತಾಳೆ. ನೀನು ನೆಲದ ಮೇಲೆ ಕುಸಿಯುತ್ತೀಯೆ, ಕೈಗಳಲ್ಲಿ ಮುಖ ಮುಚ್ಚಿ ಬಿಕ್ಕಿ ಬಿಕ್ಕಿ ಅಳುತ್ತೀಯೆ. ಅವನು ಈಗ ಬರಬಾರದೆ? ನಿನ್ನನ್ನು ಈ ನರಕದಿಂದ ಪಾರು ಮಾಡಬಾರದೇ"

"ಅವನು ಬಂದರೆ...ಅವನೊಡನೆ...ನಾನು ಹೊರಟು ಹೋಗು ತ್ತೇನೆ...ಅವನು ನನ್ನನ್ನು ಮದುವೆ ಮಾಡಿಕೊಳ್ಳುತ್ತಾನೆ ಖಂಡಿತ" ನೀನು ಬಿಕ್ಕುತ್ತೀಯೆ.

ಅವಳು ನಿನ್ನ ಕಣ್ಣೀರಿನಿಂದ ತೊಯ್ದ ಮುಖ ನೋಡುತ್ತಾಳೆ. ಅವಳ ಕೋಪ ಹಾರಿ ಹೋದಂತೆ ಕಾಣುತ್ತದೆ. ಅವಳು ನಿನ್ನ ಗಲ್ಲವೆತ್ತಿ ಕಣ್ಣೀರೊರೆಸುತ್ತಾಳೆ. "ನನ್ನ ಬಂಗಾರ...ನನ್ನ ಚಿನ್ನ...ಅಳಬೇಡ. ಇನ್ನೊಮ್ಮೆ ನಾನು ನಿನ್ನ ಮೇಲೆ ಕೈಮಾಡೋಲ್ಲ "ನಿನ್ನನ್ನು ಅಪ್ಪಿ ಕೊಂಡು ಸಾಂತ್ವನಗೊಳಿಸುತ್ತಾಳೆ. ನೀನು ಅವಳ ಅಪ್ಪುಗೆಯಲ್ಲಿ ಬಿಕ್ಕು ತ್ತೀಯೆ. "ನೋಡು ಬಂಗಾರಾ...ಅವನು ನಿನ್ನ ಮದುವೆ ಮಾಡಿ ಕೊಂಡರೆ ಮಾಡಿಕೊಳ್ಳಲಿ. ಆದರೆ ನಿನ್ನ ಮನಸ್ಸು ಮುರಿಯುವಂತಿದ್ದರೆ ನಾನು ಅವನನ್ನ ಸುಮ್ಮನೇ ಬಿಡುವುದಿಲ್ಲ...ಮದುವೆಯಾಗುವವರು ಇಲ್ಲಿಗೆ ಯಾರೂ ಬರುವುದಿಲ್ಲ."

ಅವಳ ಮಾತು ಮುಗಿಸುವ ಮುನ್ನ ನೀನು ಅವಳ ಬಾಯಿಯನ್ನು ಮುಚ್ಚುತ್ತೀಯೆ.

"ಇಲ್ಲ ಅವರು ಹಾಗಲ್ಲ. ನನ್ನನ್ನು ಪ್ರೀತಿಸುತ್ತಾರೆ. ಖಂಡಿತ ಅವರು ನನ್ನ ಕೈ ಹಿಡಿಯುತ್ತಾರೆ...

"ಆಗಲಿ ಮುಂಚೆ ಅವನು ಬರಲಿ...ನಂತರ ಮಾತಾಡೋಣ...ಎಲ್ಲಿ ಚಿನ್ನ ನಡಿ. ಸ್ನಾನಮಾಡಿ, ಊಟಮಾಡಿ ವಿಶ್ರಾಂತಿ ತೊಗೋ....

ಅವಳೇ ಖುದ್ದಾಗಿ ನಿಂತು ನಿನಗೆ ಸ್ನಾನ ಮಾಡಿಸುತ್ತಾಳೆ. ಅವಳೇ ತನ್ನ ಕೈಯಿಂದಲೇ ನಿನಗೆ ಊಟಬಡಿಸುತ್ತಾಳೆ. ಘಳಿಗೆಗೊಮ್ಮೆ ನಿನ್ನ ತಲೆ ತಡವುತ್ತಾಳೆ. ನೀನೀಗ ಅವಳ ಕೈಗೊಂಬೆ.

ಯಿತು. ಇನ್ನು ನಿನ್ನ ಅನುಭವಿಸಿದರೆ ಇನ್ನೇನು ಹೇಳು....ತೊಗೋ ಇದೆಲ್ಲಾ ನಿನಗೇ ನೀನು ಹೋಗಿ ಸ್ನಾನಮಾಡಿ, ಊಟಮಾಡಿ ವಿಶ್ರಮಿಸು, ಸಂಜೆಯ ಮೇಲೆ ನಿನಗೆ ವಿಶ್ರಾಂತಿ ಸಿಕ್ಕುವುದಿಲ್ಲ ಇಂದು..." ಅವಳು ನಿನ್ನ ಮುಂದೆ ನೋಟುಗಳ ಕಂತೆ ಹಿಡಿಯುತ್ತಾಳೆ. ನೀನು ಕೋಪದಿಂದ ಅದನ್ನು ಕಿತ್ತೊಗೆಯುತ್ತೀಯೆ. ನೋಟುಗಳು ಗಾಳಿಯಲ್ಲಿ ಹಾರಾಡಿ ನೆಲದ ಮೇಲೆಲ್ಲಾ ಚೆಲ್ಲಾಡುತ್ತದೆ. ಅವರು ಸಿಡಿದೇಳುತ್ತಾಳೆ.

"ಇಷ್ಟಕ್ಕೇ ಬಂತೆ ನಿನ್ನ ಪೊಗರು...? ತಾಳು ಅವನು ಬರಲಿ, ಕೆಲಸದವರ ಕೈಲಿ ಕುತ್ತಿಗೆ ಕೈಹಾಕಿ ನೂಕಿಸುತ್ತೇನೆ ಹೊರಗೆ...ಹುಷಾರು...!"

ನಿನ್ನ ಮನಸ್ಸು ನಿನ್ನ ಹತೋಟಿಯಲ್ಲಿಲ್ಲ—ನಿನಗೆ ಅವನು ಬೇಕು... ಬಾಳು ಬೇಕು...ಇಲ್ಲಿಂದ ಬಿಡುಗಡೆ ಬೇಕು, ನೀನೂ ಉರಿದೇಳುತ್ತೀಯೆ,

"ನೀನೂ ಅಷ್ಟೆ ಹುಷಾರು, ಅವರ ಸುದ್ದಿಗೆ ಬಂದರೆ ನಿನ್ನನ್ನು ಕತ್ತು ಹಿಸುಕಿ ಕೊಂದುಬಿಡುತ್ತೇನೆ!" ನೀನು ಆವಳ ಮೇಲೆ ಏರಿ ಹೋಗುತ್ತೀಯೆ. ಅವಳು ನಿನ್ನ ಕೈಗಳೆರಡನ್ನೂ ಬಿಗಿಯಾಗಿ ಹಿಡಿಯುತ್ತಾಳೆ. ಇಲ್ಲಿಯವರೆಗೆ ಸುಮ್ಮನೇ ನಿಂತಿದ್ದ ಕೆಲಸದವರು ಅವಳ ಸಹಾಯಕ್ಕೆ ಬರುತ್ತಾರೆ. ಇಬ್ಬರು ನಿನ್ನನ್ನು ಬಿಗಿಯಾಗಿ ಹಿಡಿಯುತ್ತಾರೆ. ಅವಳು ನಿನ್ನ ಕೆನ್ನೆಗೆ 'ಛಟೀರನೆ' ಹೊಡೆಯುತ್ತಾಳೆ. ಆ ಏಟಿಗೆ ನೀನು ತತ್ತರಿಸುತ್ತೀಯೆ, ಹಾರಾಡುತ್ತಿದ್ದ ಮನಸ್ಸು ಎಚ್ಚೆತ್ತು ನಿಲ್ಲುತ್ತದೆ. ಏಟಿನ ನೋವಿಗಿಂತಲೂ ವಾಸ್ತವತೆಯ ಅರಿವಾಗಿ ಕಣ್ಣುಗಳಲ್ಲಿ ನೀರಿಳಿಯುತ್ತದೆ.

"ನನ್ನ ಮೇಲೆ ಕೈ ಮಾಡ್ತೀಯಾ...ನನ್ನ ಕತ್ತು ಹಿಸುಕಿ ಕೊಲ್ತೀಯಾ, ನೋಡ್ತೀನಿ...!" ಅವಳು ಮತ್ತೆ ಕೆನ್ನೆಗೆ ಹೊಡೆಯುತ್ತಾಳೆ. ನೀನು ನೆಲದ ಮೇಲೆ ಕುಸಿಯುತ್ತೀಯೆ, ಕೈಗಳಲ್ಲಿ ಮುಖ ಮುಚ್ಚಿ ಬಿಕ್ಕಿ ಬಿಕ್ಕಿ ಅಳುತ್ತೀಯೆ. ಅವನು ಈಗ ಬರಬಾರದೆ? ನಿನ್ನನ್ನು ಈ ನರಕದಿಂದ ಪಾರು ಮಾಡಬಾರದೇ"

"ಅವನು ಬಂದರೆ...ಅವನೊಡನೆ...ನಾನು ಹೊರಟು ಹೋಗುತ್ತೇನೆ...ಅವನು ನನ್ನನ್ನು ಮದುವೆ ಮಾಡಿಕೊಳ್ಳುತ್ತಾನೆ ಖಂಡಿತ" ನೀನು ಬಿಕ್ಕುತ್ತೀಯೆ.

ಅವಳು ನಿನ್ನ ಕಣ್ಣೀರಿನಿಂದ ತೊಯ್ದ ಮುಖ ನೋಡುತ್ತಾಳೆ. ಅವಳ ಕೋಪ ಹಾರಿ ಹೋದಂತೆ ಕಾಣುತ್ತದೆ. ಅವಳು ನಿನ್ನ ಗಲ್ಲವೆತ್ತಿ ಕಣ್ಣೀರೊರೆಸುತ್ತಾಳೆ. "ನನ್ನ ಬಂಗಾರ...ನನ್ನ ಚಿನ್ನ...ಅಳಬೇಡ. ಇನ್ನೊಮ್ಮೆ ನಾನು ನಿನ್ನ ಮೇಲೆ ಕೈಮಾಡೋಲ್ಲ "ನಿನ್ನನ್ನು ಅಪ್ಪಿಕೊಂಡು ಸಾಂತ್ವನಗೊಳಿಸುತ್ತಾಳೆ. ನೀನು ಅವಳ ಅಪ್ಪುಗೆಯಲ್ಲಿ ಬಿಕ್ಕುತ್ತೀಯೆ. "ನೋಡು ಬಂಗಾರಾ...ಅವನು ನಿನ್ನ ಮದುವೆ ಮಾಡಿಕೊಂಡರೆ ಮಾಡಿಕೊಳ್ಳಲಿ. ಆದರೆ ನಿನ್ನ ಮನಸ್ಸು ಮುರಿಯುವಂತಿದ್ದರೆ ನಾನು ಅವನನ್ನ ಸುಮ್ಮನೇ ಬಿಡುವುದಿಲ್ಲ...ಮದುವೆಯಾಗುವವರು ಇಲ್ಲಿಗೆ ಯಾರೂ ಬರುವುದಿಲ್ಲ."

ಅವಳ ಮಾತು ಮುಗಿಸುವ ಮುನ್ನ ನೀನು ಅವಳ ಬಾಯಿಯನ್ನು ಮುಚ್ಚುತ್ತೀಯೆ.

"ಇಲ್ಲ ಅವರು ಹಾಗಲ್ಲ. ನನ್ನನ್ನು ಪ್ರೀತಿಸುತ್ತಾರೆ. ಖಂಡಿತ ಅವರು ನನ್ನ ಕೈ ಹಿಡಿಯುತ್ತಾರೆ...

"ಆಗಲಿ ಮುಂಚೆ ಅವನು ಬರಲಿ...ನಂತರ ಮಾತಾಡೋಣ...ಏಳು ಚಿನ್ನ ನಡಿ. ಸ್ನಾನಮಾಡಿ, ಊಟಮಾಡಿ ವಿಶ್ರಾಂತಿ ತೊಗೋ....

ಅವಳೇ ಖುದ್ದಾಗಿ ನಿಂತು ನಿನಗೆ ಸ್ನಾನ ಮಾಡಿಸುತ್ತಾಳೆ. ಅವಳೇ ತನ್ನ ಕೈಯಿಂದಲೇ ನಿನಗೆ ಉಣಬಡಿಸುತ್ತಾಳೆ. ಘಳಿಗೆಗೊಮ್ಮೆ ನಿನ್ನ ತಲೆ ತಡವುತ್ತಾಳೆ. ನೀನೀಗ ಅವಳ ಕೈಗೊಂಬೆ.

ಯಿತು. ಇನ್ನು ನಿನ್ನ ಅನುಭವಿಸಿದರೆ ಇನ್ನೇನು ಹೇಳು....ತೊಗೋ
ಇದೆಲ್ಲಾ ನಿನಗೇ ನೀನು ಹೋಗಿ ಸ್ನಾನಮಾಡಿ, ಊಟಮಾಡಿ ವಿಶ್ರ
ಮಿಸು, ಸಂಜೆಯ ಮೇಲೆ ನಿನಗೆ ವಿಶ್ರಾಂತಿ ಸಿಕ್ಕುವುದಿಲ್ಲ ಇಂದು..."
ಅವಳು ನಿನ್ನ ಮುಂದೆ ನೋಟುಗಳ ಕಂತೆ ಹಿಡಿಯುತ್ತಾಳೆ. ನೀನು ಕೋಪ
ದಿಂದ ಅದನ್ನು ಕಿತ್ತೊಗೆಯುತ್ತೀಯೆ. ನೋಟುಗಳು ಗಾಳಿಯಲ್ಲಿ ಹಾರಾಡಿ
ನೆಲದ ಮೇಲೆಲ್ಲಾ ಚೆಲ್ಲಾಡುತ್ತದೆ. ಅವರು ಸಿಡಿದೇಳುತ್ತಾಳೆ.

"ಇಷ್ಟಕ್ಕೇ ಬಂತೆ ನಿನ್ನ ಪೊಗರು...? ತಾಳು ಅವನು ಬರಲಿ, ಕೆಲಸ
ದವರ ಕೈಲಿ ಕುತ್ತಿಗೆ ಕೈಹಾಕಿ ನೂಕಿಸುತ್ತೇನೆ ಹೊರಗೆ...ಹುಷಾರು...!"

ನಿನ್ನ ಮನಸ್ಸು ನಿನ್ನ ಹತೋಟಿಯಲ್ಲಿಲ್ಲ—ನಿನಗೆ ಅವನು ಬೇಕು...
ಬಾಳು ಬೇಕು...ಇಲ್ಲಿಂದ ಬಿಡುಗಡೆ ಬೇಕು, ನೀನೂ ಉರಿದೇಳುತ್ತೀಯೆ.

"ನೀನೂ ಅಷ್ಟೆ ಹುಷಾರು, ಅವರ ಸುದ್ದಿಗೆ ಬಂದರೆ ನಿನ್ನನ್ನು
ಕತ್ತು ಹಿಸುಕಿ ಕೊಂದುಬಿಡುತ್ತೇನೆ!" ನೀನು ಅವಳ ಮೇಲೆ ಏರಿ ಹೋಗು
ತ್ತೀಯೆ. ಅವಳು ನಿನ್ನ ಕೈಗಳೆರಡನ್ನೂ ಬಿಗಿಯಾಗಿ ಹಿಡಿಯುತ್ತಾಳೆ.
ಇಲ್ಲಿಯವರೆಗೆ ಸುಮ್ಮನೇ ನಿಂತಿದ್ದ ಕೆಲಸದವರು ಅವಳ ಸಹಾಯಕ್ಕೆ ಬರು
ತ್ತಾರೆ. ಇಬ್ಬರು ನಿನ್ನನ್ನು ಬಿಗಿಯಾಗಿ ಹಿಡಿಯುತ್ತಾರೆ. ಅವಳು ನಿನ್ನ
ಕೆನ್ನೆಗೆ 'ಛಟೀರನೆ' ಹೊಡೆಯುತ್ತಾಳೆ. ಆ ಏಟಿಗೆ ನೀನು ತತ್ತರಿಸುತ್ತೀಯೆ.
ಹಾರಾಡುತ್ತಿದ್ದ ಮನಸ್ಸು ಎಚ್ಚೆತ್ತು ನಿಲ್ಲುತ್ತದೆ. ಏಟಿನ ನೋವಿಗಿಂತಲೂ
ವಾಸ್ತವತೆಯ ಅರಿವಾಗಿ ಕಣ್ಣುಗಳಲ್ಲಿ ನೀರಿಳಿಯುತ್ತದೆ.

"ನನ್ನ ಮೇಲೆ ಕೈ ಮಾಡ್ತೀಯಾ...ನನ್ನ ಕತ್ತು ಹಿಸುಕಿ ಕೊಲ್ತೀಯಾ,
ನೋಡ್ತೀನಿ...!" ಅವಳು ಮತ್ತೆ ಕೆನ್ನೆಗೆ ಹೊಡೆಯುತ್ತಾಳೆ. ನೀನು ನೆಲದ
ಮೇಲೆ ಕುಸಿಯುತ್ತೀಯೆ, ಕೈಗಳಲ್ಲಿ ಮುಖ ಮುಚ್ಚಿ ಬಿಕ್ಕಿ ಬಿಕ್ಕಿ ಅಳು
ತ್ತೀಯೆ. ಅವನು ಈಗ ಬರಬಾರದೆ? ನಿನ್ನನ್ನು ಈ ನರಕದಿಂದ ಪಾರು
ಮಾಡಬಾರದೇ"

"ಅವನು ಬಂದರೆ...ಅವನೊಡನೆ...ನಾನು ಹೊರಟು ಹೋಗುತ್ತೇನೆ...ಅವನು ನನ್ನನ್ನು ಮದುವೆ ಮಾಡಿಕೊಳ್ಳುತ್ತಾನೆ ಖಂಡಿತ" ನೀನು ಬಿಕ್ಕುತ್ತೀಯೆ.

ಅವಳು ನಿನ್ನ ಕಣ್ಣೀರಿನಿಂದ ತೊಯ್ದ ಮುಖ ನೋಡುತ್ತಾಳೆ. ಅವಳ ಕೋಪ ಹಾರಿ ಹೋದಂತೆ ಕಾಣುತ್ತದೆ. ಅವಳು ನಿನ್ನ ಗಲ್ಲವೆತ್ತಿ ಕಣ್ಣೀರೊರೆಸುತ್ತಾಳೆ. "ನನ್ನ ಬಂಗಾರ...ನನ್ನ ಚಿನ್ನ...ಅಳಬೇಡ. ಇನ್ನೊಮ್ಮೆ ನಾನು ನಿನ್ನ ಮೇಲೆ ಕೈಮಾಡೋಲ್ಲ "ನಿನ್ನನ್ನು ಅಪ್ಪಿಕೊಂಡು ಸಾಂತ್ವನಗೊಳಿಸುತ್ತಾಳೆ. ನೀನು ಅವಳ ಅಪ್ಪುಗೆಯಲ್ಲಿ ಬಿಕ್ಕುತ್ತೀಯೆ. "ನೋಡು ಬಂಗಾರಾ...ಅವನು ನಿನ್ನ ಮದುವೆ ಮಾಡಿಕೊಂಡರೆ ಮಾಡಿಕೊಳ್ಳಲಿ. ಆದರೆ ನಿನ್ನ ಮನಸ್ಸು ಮುರಿಯುವಂತಿದ್ದರೆ ನಾನು ಅವನನ್ನ ಸುಮ್ಮನೇ ಬಿಡುವುದಿಲ್ಲ...ಮದುವೆಯಾಗುವವರು ಇಲ್ಲಿಗೆ ಯಾರೂ ಬರುವುದಿಲ್ಲ."

ಅವಳ ಮಾತು ಮುಗಿಸುವ ಮುನ್ನ ನೀನು ಅವಳ ಬಾಯಿಯನ್ನು ಮುಚ್ಚುತ್ತೀಯೆ.

"ಇಲ್ಲ ಅವರು ಹಾಗಲ್ಲ. ನನ್ನನ್ನು ಪ್ರೀತಿಸುತ್ತಾರೆ. ಖಂಡಿತ ಅವರು ನನ್ನ ಕೈ ಹಿಡಿಯುತ್ತಾರೆ...

"ಆಗಲಿ ಮುಂಚೆ ಅವನು ಬರಲಿ...ನಂತರ ಮಾತಾಡೋಣ...ಎಲ್ಲಿ ಚಿನ್ನ ನಡಿ. ಸ್ನಾನಮಾಡಿ, ಊಟಮಾಡಿ ವಿಶ್ರಾಂತಿ ತೊಗೋ....

ಅವಳೇ ಖುದ್ದಾಗಿ ನಿಂತು ನಿನಗೆ ಸ್ನಾನ ಮಾಡಿಸುತ್ತಾಳೆ. ಅವಳೇ ತನ್ನ ಕೈಯಿಂದಲೇ ನಿನಗೆ ಉಣಬಡಿಸುತ್ತಾಳೆ. ಘಳಿಗೆಗೊಮ್ಮೆ ನಿನ್ನ ತಲೆ ತಡವುತ್ತಾಳೆ. ನೀನೀಗ ಅವಳ ಕೈಗೊಂಬೆ.

ನಿನ್ನನ್ನು ಹಾಸಿಗೆಯ ಮೇಲೆ ಒರಗಿಸಿ ಬೀಸಣಿಗೆಯಿಂದ ಗಾಳಿ ಹಾಕು ತ್ತಾಳೆ. ನಿನಗೆ ನಿದ್ರೆ ಬಾರದು. ಇಂದೂ ಅವನು ಬರದಿದ್ದರೆ ನಿನ್ನ ಗತಿ!

"ಕಣ್ಮುಚ್ಚಿ ಮಲಗು..." ಆವಳು ನಿನ್ನ ಕಣ್ಣಮೇಲೆ ಕೈಯಿಟ್ಟು ಬಲವಂತದಿಂದ ಕಣ್ಣು ಮುಚ್ಚುತ್ತಾಳೆ. ನೀನು ಕಣ್ಣು ಮುಚ್ಚಿ ಕಣ್ಣೀರಿ ಡುತ್ತೀಯೆ. ಅವನ ನೆನಪೊಂದೇ ಅವನಿಗೆ ಆಧಾರ...ಅವನ ಇರುವೊಂದೇ ನಿನಗೆ ಆಧಾರ! ಅವನ ನೆನಪಿನ ಗುಂಗಿನಲ್ಲೇ ನಿನಗೆ ನಿದ್ದೆ ಹತ್ತುತ್ತದೆ.

ಎಚ್ಚೆತ್ತಾಗ ಸಂಜೆಗೆಂಪು ಇಳಿದಿದೆ. ರೂಮಿನಲ್ಲಿ ಸಣ್ಣದೊಂದು ದೀಪ ಉರಿಯುತ್ತಿದೆ. ನಿನಗಾಗಿ ಕಾದು ಕುಳಿತಿರುವ ಕೆಲಸದವಳು ನಿನ್ನೆ ಡೆಗೆ ಬರುತ್ತಾಳೆ. ನೀನು ಕೊಠಡಿಯ ಸುತ್ತಾ ಕಣ್ಣಾಡಿಸುತ್ತೀಯೆ. ತಟ್ಟೆಯ ತುಂಬಾ ಹೂವಿನ ದಂಡೆಗಳು ಅಲ್ಲಲ್ಲಿ ಹಚ್ಚಿಸಿದ್ದ ಊದುಕಡ್ಡಿಯ ಪರಿಮಳ. ಇಳಿಬಿಟ್ಟಿದ್ದ ತೆಳು ಪರದೆಗಳು. ನಿನಗಾಗಿ ಎತ್ತಿಟ್ಟಿದ ಥಳ ಥಳಿಸುತ್ತಿದ್ದ ಆಭರಣಗಳು - ಕಣ್ಣಿಗಿಂಪಾದ ಉಡಿಗೆ ತೊಡಿಗೆ. ಕಣ್ಣು ಹೊಸಕಿಕೊಂಡು ಏಳುತ್ತೀಯೆ. ನೀನಗೇನೋ ಆತಂಕ! ಅವನು ಬರದಿದ್ದರೆ. ನಿನ್ನ ಒಳ ಮನಸ್ಸು ಮಾತ್ರ ಒಂದೇ ಬರುತ್ತಾನೆಂದು ಹೇಳುತ್ತಿದೆ! ಕೆಲಸದವಳು ನಿನ್ನ ಮುಂದೆ ಬಿಸಿ ನೀರಿನ ಪಾತ್ರೆ ಹಿಡಿಯುತ್ತಾಳೆ. ನೀನು ಮುಖ ತೊಳೆದ ಮೇಲೆ ಮುಖ ಒರೆಸಿಕೊಳ್ಳಲು ನಯವಾದ ವಸ್ತ್ರ ನೀಡುತ್ತಾಳೆ. ಕುಡಿಯುವದಕ್ಕೆ ಕೇಸರಿ, ಬಾದಾಮಿ ಹಾಕಿದ ಹಾಲು ಕೊಡುತ್ತಾಳೆ.

ನೀನು ಹಾಲು ಕುಡಿಯುವ ಹೊತ್ತಿಗೆ ಅವಳು ಬಂದು ನಿಲ್ಲುತ್ತಾಳೆ. ಅವಳು ಗೇಣಗಲ ಜರತಾರಿ ಸೀರೆ ಉಟ್ಟಿದ್ದಾಳೆ. ತಲೆಯ ತುಂಬ ಹೂವು ಮುಡಿದಿದ್ದಾಳೆ. ಬಾಯಲ್ಲಿ ತಾಂಬೂಲ ಮೆಲ್ಲುತ್ತಿದ್ದಾಳೆ. ಅವಳು ಬಂದು ನಿನ್ನ ಪಕ್ಕ ಕೂರುತ್ತಾಳೆ. ನಿನ್ನ ತಲೆ ಸವರುತ್ತಾಳೆ.

"ನಿದ್ದೆ ಚೆನ್ನಾಗಿ ಮಾಡಿದೆ. ಏಳು, ದೀಪ ಹಚ್ಚಿಯಾಯಿತು. ಎಲ್ಲಾ ತೆಗೆದಿರಿಸಿದ್ದೇನೆ. ಅಲಂಕಾರ ಮುಗಿಸಿಕೋ. ಇನ್ನೇನ್ನು ಬೆಳಗಿನ ಜನಗಳು ಬರುವ ಹೊತ್ತು."

ನಿನಗೆ ಒಮ್ಮೆಲೆ ಭಯವಾಗುತ್ತದೆ. ಅವರೆಲ್ಲಾ ಬಂದು ಕಾದಿರುವಾಗ ಅವನು ಬಂದರೆ! ಅವನನ್ನು ಬಾಗಿಲಲ್ಲೇ ತಡೆದು ಅವಳು ಕಳುಹಿಸಿಬಿಟ್ಟರೆ! ನೀನು ಅಲುಗದೇ ಕುಳಿತಿರುವುದನ್ನು ಕಂಡು ಅವಳು ನಿನ್ನ ಕೆನ್ನೆಯ ಮೇಲಿನ ಇಳಗೂದಲನ್ನು ಹಿಂದೆ ಸರಿಸುತ್ತಾಳೆ.

"ಯಾಕೆ ಸುಮ್ಮನೇ ಕುಳಿತೆ. ಏಳಮ್ಮಾ...ಚಿನ್ನ ಬಾ ನಾನೇ ಅಲಂಕರಿಸುತ್ತೇನೆ, ನಿನಗೆ ಬೇಸರವಾದರೆ!"

ನೀನು ಅವಳ ಮುಖ ನೋಡುತ್ತೀಯೆ, ನಿನ್ನ ಕಣ್ಣಲ್ಲಿನ ಆತಂಕ ನೋವು ಅವಳಿಗೆ ಬೇರೊಂದು ಕತೆ ಹೇಳುತ್ತದೆ. "ಅಯ್ಯೋ . ಹುಚ್ಚಿ! ಯಾಕೆ ಹೇದರುತ್ತೀಯೆ? ಅವನು ಬರುವುದಕ್ಕೆ ಪ್ರಾರಂಭಿಸಿದ ಮೇಲೆ ನಿನಗೆ ಅಭ್ಯಾಸ ಬಿಟ್ಟು ಹೋಗಿದೆ ಅಷ್ಟೆ.... ಮೊದಲಿನ ಹಾಗಿರು ಸುಮ್ಮನೇ ತಲೆ ಕೆಡಸಿಕೊಳ್ಳಬೇಡ. ಬೇಗ ಮುಪ್ಪು ಮುಚ್ಚಿಕೊಳ್ಳುತ್ತದೆ. ಆಗ ನಿನ್ನನ್ನು ಯಾರೂ ಮೂಸಿ ಕೂಡ ನೋಡುವುದಿಲ್ಲ...!"

ಅವಳ ಮಾತು ನಿನಗೆ ರುಚಿಸುವುದಿಲ್ಲ ನೀನು ಅವಳ ಕೈ ಹಿಡಿದು ಕೇಳುತ್ತೀಯೆ,

"ಅವರು ಬಂದರೆ !"

ಅವಳು ತಕ್ಷಣ ನಿನ್ನ ಕೈ ದೂರ ಮಾಡುತ್ತಾಳೆ. ನಿನ್ನನ್ನೇ ದಿಟ್ಟಿಸಿ ನೋಡುತ್ತಾಳೆ.

"ಪುನಃ ಪ್ರಾರಂಭಿಸಿದೆಯಾ? ಇವೊತ್ತು ಅವನು ಬರುವುದಿಲ್ಲ...! ನಿನಗೆ ತಿಳಿಯುವುದಿಲ್ಲವೇ, ನಿನ್ನೆ ಒಂದು ಕಾಸು ಸಂಪಾದನೆಯಿರಲಿಲ್ಲವೆಂದು? ನಿನ್ನ ನಂಬಿಕೊಂಡರೆ ಆಯಿತು....!"

ನೀನು ಮತ್ತೆ ಅವಳ ಕೈ ಹಿಡಿಯುತ್ತೀಯೆ. ಆರ್ತಳಾಗಿ ಅವಳತ್ತ ನೋಡುತ್ತೀಯೆ.

"ಅವರು ಬಂದರೆ ನಾನು ಬೇರೆ ಯಾರನ್ನೂ ಸೇರಿಸುವುದಿಲ್ಲ! ಇವೊತ್ತೊಂದು ದಿನ ದಯವಿಟ್ಟು ನನ್ನ ಮಾತು ನಡೆಸಿಕೊಡು! ಆ ಮೇಲೆ ನೀನು ಹೇಳಿದ ಹಾಗೆ ಕೇಳುತ್ತೇನೆ!''

ಇವೊತ್ತೊಂದು ದಿನ ಸಾಕು ಅವನು ಬಂದರೆ... ! ಅವನಿಂದ ನೀನು ಮುಕ್ತಿ ಸಾಧಿಸುತ್ತೀಯೆಂದು ನಿನ್ನ ನಂಬಿಕೆ. ಅವನು ನಿನ್ನನ್ನು ವರಿಸಲು ಒಪ್ಪಿಬಿಟ್ಟರೆ ನಾಳೆಯಿಂದ ನೀನು ಅವನ ಚಿರಬಂಧಿ, ಅವಳು ಕಣ್ಣು ಕಿರಿದು ಮಾಡುತ್ತಾಳೆ. "ಅವನು ಬಂದರೆ ಸರಿ. ಬರದಿದ್ದರೆ? ಅವಳಿಗೆ ಗೊತ್ತು ನೀನು ಸಹಕರಿಸದಿದ್ದರೆ ಅವಳ ಕೆಲಸವಾಗುವುದಿಲ್ಲವೆಂದು.

"ಬರದಿದ್ದರೆ....!'' ನೀನು ವಾಕ್ಯ ಪೂರ್ತಿ ಮಾಡಲಾರೆ! ಬರದಿದ್ದರೆ ನಿನ್ನ ಗತಿ! ನೀನು ಬಲಿಪೀಠದ ಬಲ! ನಿನ್ನ ಕಣ್ಣಲ್ಲಿ ನೀರುಕ್ಕುತ್ತದೆ.

"ಬರದಿದ್ದರೆ...ನಾನು ಬೇರೆಯವರನ್ನು ಸೇರಿಸುತ್ತೇನೆ...!"ಪ್ರಯಾಸದಿಂದ ನೀನು ಮತ್ತೆ ಉತ್ತರಿಸುತ್ತೀಯೆ.

ಅವಳು ಮನಸ್ಸಿನಲ್ಲೇ ನಗುತ್ತಾಳೆ.

"ಸರಿ, ಅವನು ಬಂದರೆ ತಾನೇ...? ಹಾಗೇ ಆಗಲಿ, ಬಂದರೆ ಅವನನ್ನೇ ನಿನ್ನ ಬಳಿ ಕಳಿಸುತ್ತೇನೆ. ಆಯಿತಾ? ನಡಿ. ಏಳು ಬೇಗ ಬೇಗ ತಯಾರಾಗು .."

ಅವಳು ನಿನ್ನನ್ನು ಬಲವಂತದಿಂದ ಎಬ್ಬಿಸುತ್ತಾಳೆ. ತಾನೇ ನಿಂತು ನಿನಗೆ ಅಲಂಕರಿಸುತ್ತಾಳೆ. ನಿನ್ನ ದುಗುಡದ ಮನಸ್ಸು ಅವಳಿಗೆ ಹಾಸ್ಯ. ನಿನ್ನ ಭಾವನೆಗಳು ಅವಳಿಗೆ ಬಹು ವಿಚಿತ್ರವಾಗಿ ಕಾಣುತ್ತದೆ. ಅವಳು ನಿನ್ನ ಅಲಂಕಾರ ಮುಗಿಸಿ ನಿನ್ನ ಕಣ್ತುಂಬಾ ನೋಡುತ್ತಾಳೆ.

"ಈ ಹಾಳು ಚೆಲುವು ಯಾರನ್ನು ಕೊಲ್ಲೋಕೆ ಹೊರಟಿದೆಯೋ?" ಕೆನ್ನೆ ಸವರಿ ನೆಟಿಕೆ ಮುರಿಯುತ್ತಾಳೆ. "ಹಾಳು ನನ್ನ ಕಣ್ಣೇ ತಗಲೀತು" ಎಂದು ಕರಿಯ ಚುಕ್ಕೆಯೊಂದನ್ನು ಎಡಗೆನ್ನೆಯ ಮೇಲಿಡುತ್ತಾಳೆ.

ಅಷ್ಟರಲ್ಲಿ ಕೆಲಸದವಳು ಮೇಲೇರಿ ಬರುತ್ತಾಳೆ. ಅವಳು ಏದುತ್ತಾ ಹೇಳುತ್ತಾಳೆ:

"ಅಮ್ಮಾ, ಅವರು ಬಂದರು" ಅವಳು ಹುಬ್ಬುಗಂಟು ಹಾಕುತ್ತಾಳೆ, ಆದರೆ ನಿನ್ನ ಹೃದಯದ ಮಿಡಿತ ಇಮ್ಮಡಿಯಾಗತ್ತದೆ, ನಿನ್ನ ಸುಮಧುರ ಭಾವನೆಗಳೆಲ್ಲಾ ಒಮ್ಮೆಗೇ ಉಕ್ಕಿ ಬಂದು ಮೈ ಮೋದದಷ್ಟು ಹಗುರವಾಗುತ್ತದೆ. ಉಕ್ಕಿ ಬರುವ ಸಂತಸ ಹೃದಯದಿಂದ ಸುರಿದು ಹೋಗದಿರಲೆಂದು ಎದೆಯನ್ನು ಅದುಮಿ ಹಿಡಿಯುತ್ತೀಯೆ.

ಅವಳು ನಿನ್ನ ಕಡೆ ನೋಟ ಹರಿಸಿ ಸೆರಗನ್ನು ಸೊಂಟಕ್ಕೆ ಕಟ್ಟುತ್ತಾಳೆ. ನೀನು ದೈನ್ಯದಿಂದ ಕೇಳುತ್ತೀಯೆ.

"ನೀನು ಒಪ್ಪಿದ್ದೀಯೆ...ಜ್ಞಾಪಕವಿರಲಿ!"

ಅವಳು ದಢಾರನೆ ಬಾಗಿಲು ಹಾಕಿಕೊಂಡು ಹೊರಗೆ ಹೋಗುತ್ತಾಳೆ. ಅವಳ ಹಿಂದೆ ಕೆಲಸದವಳು ಮೆಲ್ಲಗೆ ಬಾಗಿಲು ತೆರದು ಮುಂದೆ ಮಾಡಿ ಹೋಗುತ್ತಾಳೆ.

ನೀನು ಆ ಮಂದವಾದ ಬೆಳಕಿನಲ್ಲಿ ಶಿಲೆಯಂತೆ ನಿಂತಿರುತ್ತೀಯೆ. ಮಹಡಿಯ ಮೇಲೇರಿ ಬರುವ ಸುದ್ದಿಗಾಗಿ ಚಾತಕದಂತೆ ಕಾಯುತ್ತಿದ್ದೀಯೆ. ಅವನು ಬಂದನೆಂದು ಕೇಳಿಯೇ ನಿನ್ನ ಆಸೆಗಳೆಲ್ಲಾ ಗರಿಗೆದರಿ ಕುಣಿಯುತ್ತಿವೆ. ನೀನು ಅವನನ್ನು ಎದುರಿಸಲೇ ಆಗದಷ್ಟು ಉನ್ಮಾದಕತೆ ನಿನ್ನಲ್ಲಿ ಮನೆಮಾಡುತ್ತಿದೆ. ಆಗೋ! ಮಹಡಿಯೇರಿ ಬರುವ ಸದ್ದು! ಹೌದು,

ಅವನೇ! ಅದು ನಿನಗೆ ಚಿರಪರಿಚಿತ. ಬಾಗಿಲ ಬಳಿ ಬರುತ್ತಿದೆ. ನಿನಗೆ ಆದೇಕೋ ಕೆಲಜ್ಜೆಯಿಂದ ಮುಖ ಕೆಂಪೇರುತ್ತದೆ, ಬೇಕೆಂತಲೇ ಬಾಗಿಲಿಗೆ ಬೆನ್ನು ಮಾಡಿ ನಿಲ್ಲುತ್ತೀಯೆ...

ಅವನು ಬಾಗಿಲು ಮೆಲ್ಲನೆ ಸರಿಸಿ ಒಳಗೆ ಬರುತ್ತಾನೆ. ಒಂದು ಕ್ಷಣ ನಿನ್ನ ಹಿಂಭಾಗವನ್ನು ನೋಡುತ್ತಾನೆ. ಮೆಲ್ಲನಡಿಯಿಟ್ಟು ಬಂದು ಹಿಂದಿನಿಂದ ಅಪ್ಪುತ್ತಾನೆ. ಅವನ ಸ್ಪರ್ಶದಿಂದ ನಿನಗೆ ವಿದ್ಯುತ್ಸಂಚಾರವಾದಂತಾಗುತ್ತದೆ. ಅವನ ಕೈಯೆತ್ತಿ ತುಟಿಗಿಟ್ಟುಕೊಳ್ಳುವಾಗ ಅವನ ಮುಷ್ಟಿಯಲ್ಲಿ ಏನೋ ಇರುತ್ತದೆ. ಅಚ್ಚರಿಯಿಂದ ಅವನೆಡೆಗೆ ತಿರುಗುತ್ತೀಯಾ. ಅವನು ನಿನ್ನ ಮುಖವನ್ನು ಕಣ್ಣಲ್ಲಿ ಹೀರಿಕೊಂಡು ಹೇಳುತ್ತಾನೆ.

"ಕ್ಷಮಿಸು, ನಿನ್ನೆ ಬರಲಾಗಲಿಲ್ಲ. ಅದಕ್ಕೆ ಮುನಿಸೇನು...?" ಅವನ ಸ್ವರ ನಿನ್ನ ದೇಹದಲ್ಲಿನಾದ ತರಂಗಗಳನ್ನು ಎಬ್ಬಿಸುವ ಅನುಭವ ನಿನಗೆ, ನಿನ್ನೆಯೆಲ್ಲಾ ಕಾಣದ ಮುಖ ಕಂಡಾಗ ನಿನಗೆ ದುಃಖ ಸಂತಸ ಎರಡೂ ಉಕ್ಕಿ ಬರುತ್ತದೆ, ತುಟಿಯಲ್ಲಿ ಕಿರುನಗೆ ಮಿಂಚಿಸಿ ಕಣ್ಣಲ್ಲಿ ನೀರು!

ಅವನು ನಿನ್ನ ತುಟಿಯೆಡೆಗೆ ಬಾಗಿ ಹೇಳುತ್ತಾನೆ.

"ಛೇ ಕಣ್ಣಲ್ಲೇಕೆ ನೀರು? ನಿನಗೆ ಒಂದು ಶುಭ ಸಮಾಚಾರ ಹೇಳಬೇಕೆಂದು ಬಂದೆ, ನಗುತ್ತಾ ಕೇಳಬೇಕು, ಎಲ್ಲ!" ಅವನ ತುಟಿ ನಿನ್ನ ತುಟಿಗೆ ತಗುಲುತ್ತದೆ.

ಏನು ಶುಭ ಸಮಾಚಾರವಿರಬಹುದು? ಅವಳನ್ನು ಕೇಳಿರಬಹುದೇ? ನಿನ್ನನ್ನು ಕರೆದುಕೊಂಡು ಹೋಗಲು ಬಂದಿರಬಹುದೇ? ಅವಳೇ ನಿನ್ನ ಗೋಳು ನೋಡಲಾರದೆ ಅವನಿಗೆ ಹೇಳಿರಬಹುದೇ? ಅವನಿಂದ ನೀನು ಬೇರೆಯಾಗದಿರುವಂತೆ ಅವನನ್ನು ನೀನೇ ಬಲವಾಗಿ ಅಪ್ಪುತ್ತೀಯೆ. ಕಣ್ಮುಚ್ಚಿ ನಿನ್ನನ್ನು ಕಾಪಾಡಿದ ದೇವರನ್ನು ವಂದಿಸಿ ಅವನ ಎದೆಯ ಮೇಲೆ ಮುಖವಿಡುತ್ತೀಯೆ.

ಅವನು ನಿನ್ನನ್ನು ಮೆಲ್ಲನೆ ದೂರ ಸರಿಸುತ್ತಾನೆ. ನಿನ್ನ ಮುಖ ವನ್ನೇ ನೋಡುತ್ತಾ ಮುಷ್ಟಿಯನ್ನು ನಿನ್ನ ಮುಂದೆ ಬಿಟ್ಟು ಹಿಡಿಯುತ್ತಾನೆ. ಕೆಂಪು ಕಲ್ಲುಸಕ್ಕರೆ! ನೀನು ಕಣ್ಣರಳಿಸಿ ನೋಡುತ್ತೀಯೆ, ಅವನ ಮುಖ ವನ್ನೊಮ್ಮೆ ನೋಡುತ್ತೀಯೆ. ಅವನ ಮುಖದಲ್ಲಿ ಮಂದಹಾಸ ಮಿನುಗುತ್ತಿದೆ.

"ಶುಭ ಸಮಾಚಾರ ಹೇಳುವಾಗ ಸಿಹಿ ಕೊಡಬೇಕು... ಅಲ್ಲವೇ" ಅವನು ಕೆಂಪು ಕಲ್ಲುಸಕ್ಕರೆಯನ್ನು ನಿನ್ನ ತುಟಿಯ ಬಳಿ ಇಡುತ್ತಾನೆ. "ನಿನ್ನೆ ನನ್ನ ಬಾಳಿನ ದೇವತೆ ನನ್ನ ಮನೆ ಬೆಳಗಲು ಪುಟ್ಟದೀಪದೊಂದಿಗೆ ಬಂದಳು. ನನ್ನ ಹೆಂಡತಿ, ನನ್ನ ಪುಟ್ಟ ಮಗಳು ಬಂದಿದ್ದಾರೆ. ಅವಳು ಬಾಣಂತನಕ್ಕೆ ಹೋದಂದಿನಿಂದ ಇಂದಿನವರೆಗೆ ನನ್ನ ಒಂಟಿಬಾಳು ತುಂಬಿದ್ದಕ್ಕೆ ನಿನಗೆ ನಾನೇನು ಕೊಟ್ಟರೂ ಸಾಲದು...!"

ನಿನ್ನ ತುಟಿಯ ಮೇಲಿದ್ದ ಕಲ್ಲುಸಕ್ಕರೆ ಕೆಂಡದಂತಾಗುತ್ತದೆ. ಸಕ್ಕರೆಯ ಸಿಹಿ ವಿಷದಷ್ಟು ಕಹಿಯಾಗುತ್ತದೆ. ನಿನ್ನ ರಕ್ತವೆಲ್ಲ ಒಮ್ಮೆಲೇ ಕಹಿಯಾಗಿ ಹರಿದುಬಂದಂತೆ ತೋರಿ ನಾಲಿಗೆ ಗಂಟಲೆಲ್ಲಾ ಕಹಿಯಾದ ಅನುಭವವಾಗುತ್ತದೆ. ತಲೆ 'ಧಿಂ' ಎಂದು ತಿರುಗಿ ಬಿರುಗಾಳಿಗೊಡ್ಡಿದ್ದ ತರಗೆಲೆಯಂತೆ ನಿಂತು ನಿಂತಲ್ಲೇ ಕುಸಿಯುತ್ತೀಯೆ. ಅವನು ಬೆದರಿ ನಿನ್ನೆಡೆಗೆ ಬಗ್ಗಿ ಭುಜ ಹಿಡಿದು ಎಬ್ಬಿಸಲೆತ್ನಿಸುತ್ತಾನೆ. ನೀನು ಅವನ ಕೈ ದೂರ ಮಾಡುತ್ತೀಯೆ.

"ದಯವಿಟ್ಟು ಮುಟ್ಟಬೇಡಿ. ಮನೆಯಲ್ಲಿ ದೇವತೆಯಿರಬೇಕಾದರೆ ಈ ನರಕಕ್ಕೆ ನೀವು ಬರಬಾರದು...!" ಮೆಲ್ಲನುಸುರುತ್ತೀಯೆ.

ಅವನು ಬೆದರಿ ಹಿಂದೆ ಸರಿಯುತ್ತಾನೆ. ನೀನು ಅವನೆಡೆಗೆ ದೃಷ್ಟಿ ಹರಿಸುವುದಿಲ್ಲ. ಅವನ ಹತ್ತಿರ ಬೇರೆ ಯಾವ ಮಾತನ್ನೂ ಆಡುವುದಿಲ್ಲ. ಅವನು ನಿಂತಲ್ಲೇ ಕಲ್ಲಾಗಿ ನಿಲ್ಲುತ್ತಾನೆ. ನೀನು ಕುಳಿತಲ್ಲೇ ಕಲ್ಲಾಗುತ್ತೀಯೆ.

ಒಂದೆರಡು ನಿಮಿಷ ಹಾಗೇ ನಿಂತು ಅವನು ಭಾಗಿಲ ಬಳಿಗೆ ಹೋಗುತ್ತಾನೆ. ಹಿಂತಿರುಗಿ ನಿನ್ನ ಕಡೆ ನೋಡಿ ಹೇಳುತ್ತಾನೆ. "ನಿನಗೆ ಹೇಳಿ ಹೋಗೋಣವೆಂದು ಬಂದೆ ಅಷ್ಟೆ....!" ಅವನು ಬಾಗಿಲು ತೆರೆದು ಹೊರಗೆ ಹೋಗುತ್ತಾನೆ. ನಿನ್ನ ಹೃದಯದ ಬಾಗಿಲು ತೆರೆದು ಹಾಗೆ ಹೊರಗೆ ಹೊರಟುಹೋಗುತ್ತಿದ್ದಾನೆ.

ನಿನ್ನ ಕೆನ್ನೆಯ ಮೇಲೆ ಹರಿದು ಬಂದ ಕಣ್ಣೀರು ನೆಲದ ಮೇಲೆ ಬೀಳುತ್ತದೆ. ನೀನು ಸೆರಗಿನಿಂದ ಕಣ್ಣೊರೆಸಿಕೊಳ್ಳುತ್ತೀಯೆ. ಅಷ್ಟರಲ್ಲಿ ಅವಳು ಬಾಗಿಲು ತೆರೆದು ಒಳಗೆ ಬರುತ್ತಾಳೆ. ಅವಳ ಮುಖದಲ್ಲಿ ವಿಜಯೋತ್ಸಾಹದ ನಗೆಯಿದೆ. ನೀನು ಅವಳ ಕಡೆ ನೋಡದೆಯೆ ಹೇಳುತ್ತೀಯೆ.

"ಕೆಳಗೆ ಕಾದಿರುವವರನ್ನು ಕಳುಹಿಸು..."



# ನಾನು - ಇವಳು

—ಎಚ್. ಎಸ್. ಪಾರ್ವತಿ

ಸಭೆ ಮುಗಿಸಿಕೊಂಡು, ಆಗಲೇ ಹೊತ್ತಾಗಿದ್ದುದರಿಂದ ಸರಸರನೇ ಹೊರಗಡೆ ಬರುತ್ತಿದ್ದಾಗ ಹಿಂದಿನಿಂದ ಬಂದ ಆಕೆ:

'ಹೊರಟ್ರೇನ್ರೀ ಉಮಾದೇವಿ? ಅಂದಹಾಗೆ ಇವರು ನಿಮ್ಮ ತಮ್ಮ ಅಲ್ವಾ?'

ಎಂದು ಕೇಳಿದಾಗ ನನ್ನ ಜೊತೆ ಬರುತ್ತಿದ್ದ ಇವಳ ಮುಖ ಸಿಪ್ಪಾ ಸೇಬಿನಂತೆ ಕೆಂಪಗಾಯಿತು. ಆಕೆಯ ಮಾತು ಕೇಳಿದರೂ ಕೇಳದವಳಂತೆ ನಡಿಗೆಯ ವೇಗವನ್ನು ಮತ್ತಷ್ಟು ಹೆಚ್ಚಿಸಿದಳು. ಹೆಚ್ಚು ಕಡಿಮೆ ಓಡು ವವಳಂತೆಯೇ ನಡೆದು ಹೊರಗಡೆ ಬಂದು ಕಾರು ಹತ್ತಿ ಕುಳಿತಳು, ಅವಳ ವೇಗಕ್ಕೆ ಸಮನಾಗಿ ನಡೆಯಲಾರದೆ ನಾನೂ ಸೋತೆ.

ಇದೊಂದು ಬಾರಿ ಮಾತ್ರವಲ್ಲ, ನಮ್ಮಿಬ್ಬರ ಪರಿಚಯವಿಲ್ಲದ ಅನೇಕರು ಅನೇಕ ಬಾರಿ ಇಂಥ ಪ್ರಶ್ನೆ ಕೇಳಿದ್ದುಂಟು.

"ನಿಮ್ಮ ತಮ್ಮ ಕಾಯ್ತಿದಾರೆ ನೋಡಿ ಉಮಾದೇವಿ"

"ನಿಮ್ಮ ಅಕ್ಕ ಬಂದರು ಮಿ... ಇವರೇ,"

"ಹೌದು, ಇಚೀಚೆಗೆ ನನಗೂ ಸದಾ ಅನ್ನಿಸುತ್ತಲೇ ಇರುತ್ತದೆ. ಅವಳು ಬೆಳೆದಿದ್ದಾಳೆ. ನನಗಿಂತ ತುಂಬಾ ದೊಡ್ಡದಾಗಿ ಬೆಳೆದಿದ್ದಾಳೆ. ಇನ್ನೂ ಬೆಳೆಯುತ್ತಲೇ ಇದ್ದಾಳೆ."

ನಾನು ಮದುವೆಯಾಗುವ ಮುನ್ನ ಅವಳು ಹೀಗೆ ಇರಲಿಲ್ಲ. ಎತ್ತರ

ವಾಗಿ ಕಂಡರೂ ತುಂಬಾ ತೆಳುವಾಗಿ, ನನಗಿಂತ ಸಣ್ಣದಾಗಿಯೇ ಕಾಣು ತ್ತಿದ್ದಳು. "ಹುಡುಗಿ ಎತ್ತರವಲ್ಲವೇನ್ರಿ?" ಅಂದವರಿಗೂ ನನ್ನ ತಾಯಿ "ಇಲ್ಲವಲ್ಲ, ಇಬ್ಬರೂ ಸಮವಾಗೇ ಇದಾರೆ, ಪಕ್ಕದಲ್ಲಿ ನಿಂತರೆ ನನ್ನ ಮಗನೇ ಅರ್ಧ ಅಂಗುಲ ಎತ್ತರ" ಎಂದೇ ಹೇಳಿಕೊಳ್ಳುತ್ತಿದ್ದರು. ಕಾರಣ, ನನ್ನ ಸೋದರ ಸಂಬಂಧದ ಹೆಣ್ಣು ಉಮಾಳನ್ನು ಕಂಡರೆ ನನ್ನ ತಾಯಿಗಿದ್ದ ಅಭಿಮಾನ, ಅವಳನ್ನೇ ತನ್ನ ಸೊಸೆಯಾಗಿ ತಂದುಕೊಳ್ಳ ಬೇಕೂ ಎನ್ನುವ ಹಠ!...ನನ್ನ ದೃಷ್ಟಿಯಲ್ಲಿ ಯಾವ ಹೆಣ್ಣಾದರೂ ಒಂದೇ. ನಾನು ಎಂ.ಎಸ್.ಸಿ. ರ್‍ಯಾಂಕ್ ಸ್ಟೂಡೆಂಟ್! ತಾತಾ ಇನ್‌ಸ್ಟಿಟ್ಯೂಟ್‌ನಲ್ಲಿ ಪಿ.ಎಚ್.ಡಿ, ಮುಗಿಸಿ ಅಲ್ಲೇ ರಿಸರ್ಚ್ ಮುಂದುವರಿಸಿದ್ದೆ! ಎದುರಿಗೆ ಬಂದ ಹಲವಾರು ದೃಷ್ಟಿಗಳು ನಾನು ಸುಂದರನೆಂಬ ಹೆಮ್ಮೆಯನ್ನೂ ನನ್ನಲ್ಲಿ ಮೂಡಿಸಿದ್ದವು. ನನ್ನ ಅಭಿಪ್ರಾಯದಲ್ಲಿ ಈ ಮದುವೆ-ಗಿದುವೆ ಗಳಿಗೆಲ್ಲಾ ಪ್ರಾಮುಖ್ಯತೆ ಇಲ್ಲ, ಆದರೆ ಅಮ್ಮನ ಬಲವಂತ, ದಿನಕ್ಕಿಬ್ಬ ರಂತೆ ಬರುತ್ತಿದ್ದ ಕನ್ಯಾಪಿತೃಗಳ ಕಾಟ, ಭುಜದ ಮೇಲೆ ಕೈ ಹಾಕಿಕೊಂಡು ಒಟ್ಟೊಟ್ಟಿಗೆ ಓಡಾಡುತ್ತಿದ್ದ ಹೆಣ್ಣು ಗಂಡುಗಳು, ಅವರ ಕುಲುಕುಲು ನಗು: ನನ್ನ ಮನಸ್ಸಿನಲ್ಲಿ ಯಾವು ಯಾವುದೋ ಆಸೆಯನ್ನು ಕೆರಳಿಸಿ ದ್ದುಂಟು, ಆಗೆಲ್ಲಾ ನನಗೂ ಒಬ್ಬ ಹೆಣ್ಣು ಬೇಕೂ ಎನಿಸಿದ್ದೂ ಉಂಟು. ಆದರೆ ಆ ಹೆಣ್ಣು ಇಂಥವಳೇ ಆಗಬೇಕೆಂಬ ಹಠವೇನೂ ನನಗಿರಲಿಲ್ಲ.

ತಾಯಿಗೆ ಮಾತ್ರ ಉಮೆಯ ಮೇಲೆ ವಿಶೇಷ ಅಭಿಮಾನ, ಅವಳು ತಮ್ಮ ಸೋದರ ಸಂಬಂಧಿ ಎನ್ನುವುದೇ ಇದಕ್ಕೆ ಮುಖ್ಯ ಕಾರಣವಿರಬಹು ದೇನೋ? ಉಮಾ ಹೆಚ್ಚು ಓದಿಯೂ ಇರಲಿಲ್ಲ. ನೋಡುವುದಕ್ಕೆ ರೂಪವತಿ ಎಂದೇನೋ ಹೇಳುವಂತಿರಲಿಲ್ಲ. "ಫಳ ಫಳನೇ ಮಿಂಚುವ ಆ ಕಣ್ಣುಗಳನ್ನು ಬಿಟ್ಟರೆ ಮಿಕ್ಕಂತೆ ಸಾಧಾರಣ" ತೀರಾ ಸಾಧಾರಣ...ಸಣ್ಣಗೆ ಉದ್ದವಾಗಿದ್ದ ದೇಹ, ಬಡಕಲು ಎನ್ನಿಸಿಕೊಳ್ಳುವ ಹಾಗೆ ಇತ್ತು. ಬಂದಿದ್ದ ಮಿಕ್ಕ ಅನೇಕ ಹೆಣ್ಣುಗಳನ್ನು ಒಂದಲ್ಲ ಒಂದು ನೆಪ ಹೇಳಿ ತಿರಸ್ಕರಿಸಿದ್ದ ತಾಯಿ ಇವಳನ್ನು ಮಾತ್ರ ನನ್ನ ಮುಂದೆ ಹಾಡಿ ಹೊಗಳು ತ್ತಿದ್ದಳು,

"ಉಮಾ ತುಂಬಾ ಒಳ್ಳೇ ಹುಡುಗಿ. ಮನೆ ಕೆಲಸ ಎಷ್ಟು ಅಚ್ಚು ಕಟ್ಟಾಗಿ ಮಾಡ್ತಾಳೆ ಅಂತ! ಅಷ್ಟೆ ಅಲ್ಲ. ಇವಳು ಕಥೆ, ಲೇಖನ ಏನೇನೋ ಬರೀತಿರ್ತಾಳೆ ಕಣೊ. ಆಗಲೇ ಪೇಪರಿನಲ್ಲೆಲ್ಲಾ ಅಚ್ಚಾಗಿದೆ."

"ಓಹೋ ಎಂಥ ಕಥೇನೋ! ಕಾಗೆ ಗುಬ್ಬಚ್ಚಿ ಕಥೆನೋ, ಸಿಂಹ ಇಲಿ ಕಥೇನೋ!"

ಎಂದು ನಾನು ಕೇಳಿದಾಗ ಉಮಾ ಸಿಟ್ಟಿನಿಂದ ಮುಖ ಉಬ್ಬಿಸಿದ್ದಳು. "ಬಿಡಿ ಅತ್ತೆ. ಕನ್ನಡವೇ ಬರದಿರೋರ್ಗೆ ಕಥೆ ವಿಚಾರ ಯಾಕೆ ಹೇಳ್ತೀರಾ?—" ಎಂದು ಕೇಳಿದಾಗಿನ ಅವಳ ಮುಖಭಾವ ನನಗೆ ವಿಚಿತ್ರ ವಾಗಿ ಕಂಡಿತ್ತು...

ಮದುವೆಯ ದಿನ ಎಲ್ಲರೂ ನನ್ನನ್ನು ಮೆಚ್ಚುವವರೇ. "ಹುಡುಗಿ ತುಂಬಾ ಅದೃಷ್ಟವಂತೆ" ಎಂದು ಹೊಗಳುವ ನೆಪದಲ್ಲಿ, ಇವಳು ನನಗೆ ಯಾವ ರೀತಿಯಲ್ಲೂ ಸರಿಯಾದ ಜೋಡಿಯಲ್ಲ ಎಂದು ಅಪ್ರತ್ಯಕ್ಷವಾಗಿ ಮೂದಲಿಸುವವರೇ! ಅವರ ಹೊಗಳಿಕೆಯಿಂದ ನಾನು ಹೊಸದಾಗಿ ಉಬ್ಬ ಬೇಕಾದುದೇನೂ ಇರಲಿಲ್ಲ. ಯಾಕೆಂದರೆ ನಾನು ಸುರೂಪಿ. ರ್‍ಯಾಂಕ್ ಪಡೆದ ಬುದ್ಧಿವಂತ. ರಿಸರ್ಚ್ ಮುಗಿಸಿ ಸ್ವಪ್ರಯತ್ನದಿಂದ ದೊಡ್ಡ ಪದವಿಗೇರಿದವನು. ಸಾಕಷ್ಟು ಶ್ರೀಮಂತ. ಒಟ್ಟಿನಲ್ಲಿ ಎಲ್ಲ ಕಡೆಗಳಿಂದ ಬೆಳೆದಿದ್ದವನು ಎನ್ನುವುದು ನನಗೆ ತಿಳಿದಿದ್ದ ವಿಚಾರವೇ! ಆದರೆ ಈ ಮಾತುಗಳನ್ನು ಕೇಳಿದಾಗ ಉಮೆಯ ಮನಸ್ಸಿಗೆ ಏನನ್ನಿಸಿತೋ! ನಾನಂತೂ ಅವಳ ಮುಖವನ್ನು ಪರೀಕ್ಷಿಸಿ ನೋಡುವ ಪ್ರಯತ್ನ ಮಾಡಿರಲಿಲ್ಲ.

ಉಮೆಗೆ ನನ್ನನ್ನು ಕಂಡರೆ ತುಂಬಾ ಗೌರವ. ಸ್ವಲ್ಪ ಭೀತಿಯೂ ಇರಬಹುದೇನೋ! ಇದ್ದೀತು! ನಾನು ಮಿಕ್ಕವರಂತೆ ಹೆಂಡತಿ ಎಂದ ಕೂಡಲೇ ಜೊಲ್ಲು ಸುರಿಸುತ್ತಾ ಅವಳ ಹಿಂದೆ ಮುಂದೆ ಓಡಾಡಿದವನೂ ಅಲ್ಲ. ಹಾಗೆ ಹೆಂಡತಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡುವುದಕ್ಕೆ ನನ್ನ ಬಿಂಕ ಅವಕಾಶ ಕೊಡಬೇಕಲ್ಲ! ನಾನು ಬುದ್ಧಿವಂತ. ಹೊಸ ಸಂಶೋಧನೆಯಲ್ಲಿ ತೊಡಗಿರು ವವನು. ಇತರ ಸಣ್ಣ ಪುಟ್ಟ ವಿಚಾರಗಳನ್ನೆಲ್ಲಾ ಗಮನಿಸುತ್ತಾ ಕೂರು

ವಷ್ಟು ನನಗೆ ಬಿಡುವಾದರೂ ಎಲ್ಲಿ! ತುಂಬಾ ಎತ್ತರ ಬೆಳೆದಿದ್ದ ನನಗೂ ಇವಳಿಗೂ ಎಲ್ಲಿಯ ಹೋಲಿಕೆ! ಸಮಾನತೆ! ಇವಳು ನನಗೆ ಹೆದರುವುದು ಸಹಜವೇ! ಹಾಸಿಗೆಯಲ್ಲಿ ಜೊತೆ ಬೇಕೆನಿಸಿದಾಗ ಮಾತ್ರ ನನಗವಳ ಅವಶ್ಯ ಕತೆ ಎನ್ನಿಸುತ್ತಿತ್ತು. ಮಿಕ್ಕಂತೆ ದಿನವೆಲ್ಲಾ ಅವಳು ಏನು ಮಾಡು ತ್ತಿದ್ದಳೋ ಯಾರಿಗೆ ಗೊತ್ತು!

ಈ ಹತ್ತು ವರ್ಷಗಳಲ್ಲಿ ನಾನು ಇದ್ದಂತೆಯೇ ಇದ್ದೆ. ವರ್ಷ ಕ್ಕೊಂದು ಇಂಕ್ರಿಮೆಂಟ್, ಒಂದೆರಡು ಬಾರಿ ಪ್ರಮೋಶನ್, ಇಷ್ಟರಲ್ಲಿ ನನ್ನ ಪ್ರಗತಿ ಮುಗಿದಿತ್ತು. ಶರೀರದ ಗಾತ್ರವೂ ಇದ್ದಂತೆಯೇ ಇತ್ತು ಅಥವಾ ಮೊದಲಿಗಿಂತ ಎರಡು ಬೆಟ್ಟು ಸಣ್ಣಕ್ಕೇ ಆಗಿದ್ದೇನೋ!

ಆದರೆ ಇವಳು-ಅಂದು ಒಣಕಲು ಕಡ್ಡಿಯಂತಿದ್ದ ಇವಳು ತುಂಬಿ ಕೊಂಡಿದ್ದಾಳೆ. ಒಂದು ಮಗುವಾದ ಮೇಲಂತೂ ಬಣ್ಣವೂ ತೇಲಿಕೊಂಡು ಮುಖಕ್ಕೊಂದು ಕಳೆ ಬಂದಿದೆ. ಅಷ್ಟೆ ಅಲ್ಲ, "ನಿಮಗಿದೆಲ್ಲಾ ಗೊತ್ತಾ ಗೊಲ್ಲ ಬಿಡ್ರಿ" ಎಂದು ಪದೇ ಪದೇ ನನ್ನ ಪೆದ್ದುತನವನ್ನು ಕೆಣಕುತ್ತಾಳೆ. ಅವಳು ಹಾಗೆಂದಾಗಲೆಲ್ಲಾ, ಅವಳನ್ನು ವಿರೋಧಿಸಬೇಕೂ. ಅವಳ ಮೇಲೆ ರೇಗಬೇಕೂ ಅನ್ನಿಸುವುದರ ಬದಲು, ಇವಳು ಹೇಳುತ್ತಿರುವ ವಿಚಾರದಲ್ಲಿ ನಾನು ಪೆದ್ದನೇ ಹೌದು ಎಂದು ಒಪ್ಪಿಕೊಂಡು ತಲೆಬಾಗಿಸ ಬೇಕಾಗುತ್ತದೆ.

ಇವಳು ಮೊದಲು ನನ್ನನ್ನು ಹೀಗೆ ಮೂದಲಿಸಿದ್ದು ನಮ್ಮ ಮೊದಲ ಮಗು ಹುಟ್ಟಿದ ಮೇಲೆ, ಒಂದು ದಿನ ರಾತ್ರಿ ರಾಜ ಯಾಕೋ ಹಠ ತೆಗೆದ. ಒಳಗೆ ಇವಳು ಯಾವುದೋ ಕೆಲಸದಲ್ಲಿದ್ದಳು. ನಾನೇ ಸಮಾಧಾನ ಮಾಡೋಣವೆಂದುಕೊಂಡು ಮಗುವನ್ನೆತ್ತಿಕೊಂಡೆ. ರಾಜನ ರಾಗಾಲಾಪನೆ ನಿಲ್ಲುವುದರ ಬದಲು ಮೆಟ್ಟಿಲು ಮೆಟ್ಟಿಲಾಗಿ ಹೆಚ್ಚುತ್ತಲೇ ಹೋಯಿತು. ನಾನು ಎಷ್ಟು ಉಪಾಯ ಮಾಡಿದರೂ ಅವನ ಅಳು ನಿಲ್ಲಲೇ ಇಲ್ಲ. ಕೊನೆಗೆ ಇವಳೇ ಬಂದಳು!

"ಕೊಡ್ರೀ ಇಲ್ಲಿ ಮಗೂನ. ಯಾವುದಾದರೂ ಪುಸ್ತಕ ಹಿಡ್ಕೊಂಡು ಕೂತ್ಕೊಳ್ಳಿ, ಹೋಗಿ. ಇವನ್ನ ಸಮಾಧಾನ ಮಾಡೋದಕ್ಕೆ ನಿಮಗೆಲ್ಲಿ ಬರುತ್ತೆ?"

ಎಲಾ ಇವಳ! ಡಾಕ್ಟರೇಟ್ ಪಡೆದ ನನಗೆ ಒಂದು ಮಗೂನ ಸಮಾಧಾನ ಮಾಡೋದಕ್ಕೆ ತಿಳಿಯೋದಿಲ್ವಂತೆ! ಆದರೆ, ಎಲಾ ಘೋರ! ಅವರಮ್ಮ ಎತ್ತಿಕೊಂಡ ತಕ್ಷಣ ಇವನು ತಾನೇ ರಾಗ ನಿಲ್ಲಿಸೇಬಿಡೋದೇ!

ಅವತ್ತೇ ಶುರುವಾಗಿತ್ತು ಅವಳು ಬೆಳೆಯೋದಕ್ಕೆ ನಾನು ಸೋತು ಕುಗ್ಗೋದಕ್ಕೆ! ಒಂದು ಎರಡು ಮೂರು ಇಂಕ್ರಿಮೆಂಟ್ ನನಗೆ ಬಂದ ಹಾಗೇ ಇವಳೂ ಒಂದು, ಎರಡು, ಮೂರು ಮಕ್ಕಳನ್ನ ಪಡೆದಳು. ಇನ್‌ಕ್ರಿಮೆಂಟ್ ಪಡೆದು ನಾನು ಬೆಳೆದಿದ್ದಕ್ಕಿಂತ ಹೆಚ್ಚಾಗಿ. ಒಂದೊಂದು ಮಕ್ಕಳಾದ ಹಾಗೂ ಇವಳು ಬೆಳೀತಾನೇ ಹೋದಳು! ನನ್ನ ತಾಯಿ ತೀರಿಕೊಂಡಮೇಲಂತೂ ನನಗೂ ತಾಯಿಯಾಗೋದಕ್ಕೆ ಪ್ರಯತ್ನಿಸುತ್ತಿದ್ದಾಳೆ.

ಈಗೀಗ ಯಾವ ಪೇಪರಿನಲ್ಲಿ ನೋಡಿದರೂ ಇವಳ ಹೆಸರೇ! ಮೊದಮೊದಲು "ನನ್ನ ಕಥೆ ಪೇಪರಿನಲ್ಲಿ ಬಂದಿದೆ ನೋಡ್ರೀ" ಎಂದು ತೋರಿಸುತ್ತಿದ್ದಳು, ನಾನೂ ಹೂಗುಟ್ಟಿ "ಸುಮ್ಮನಾಗುತ್ತಿದೆ. ಆದರೀಗ ಇವಳು ತೋರಿಸುವುದಿಲ್ಲ. ಅವರೂ—ಇವರೂ, ನೆಂಟರೂ—ಸ್ನೇಹಿತರೂ; "ಈ ವಾರ ಪತ್ರಿಕೇಲಿ ನಿಮ್ಮಾಕೆಯ ಕಥೆ ಬಂದಿದೆಯಲ್ಲಪ್ಪಾ" ಎಂದು ಆರಂಭಿಸಿ "ಸ್ವೀಟ್ಸ್ ಎಲ್ಲಿ?" ಎಂದು ಡಿಮ್ಯಾಂಡ್ ಮಾಡುತ್ತಿದ್ದರು, ಇತ್ತೀಚೆಗೆ ಅವಳ ಹೆಸರಿನಲ್ಲಿ ಎರಡು ಪುಸ್ತಕಗಳು ಅಚ್ಚಾಗಿದ್ದವು. ಕನ್ನಡದಲ್ಲಿ ಇವಳು ಬರೆದಿದ್ದ ಪುಸ್ತಕಕ್ಕೆ ಇಂಗ್ಲೀಶ್ ಪತ್ರಿಕೆಯಲ್ಲಿ ಬಂದಿದ್ದ ವಿಮರ್ಶೆ ಓದಿದಾಗ, ಆ ವಿಮರ್ಶೆಯಲ್ಲಿ ಮೆಚ್ಚಿಗೆಯ ಅಂಶವೇ ಹೆಚ್ಚಾಗಿದೆ ಎಂದು ಕಂಡಾಗ ನನಗೆ ಹೇಗೆ ಹೇಗೋ ಅನ್ನಿಸಿತು.

ಜೊತೆಗೆ ಭಾಷಣಗಳು ಬೇರೆ. "ಈ ಪುಣ್ಯಾತ್ಗಿತ್ತಿ ಅದೇನು ಮಾತಾಡುತ್ತಾಳೋ" ಎಂದು ನನ್ನ ರ್‍ಯಾಂಕು ಬುದ್ಧಿ ಮೂದಲಿಕೆ ಎತ್ತುತ್ತಿದ್ದ ಹಾಗೇ, ನನ್ನ ಆಪ್ತ ಸ್ನೇಹಿತರು ಯಾರಾದರೂ ನುಡಿಯುತ್ತಿದ್ದರು.

"ಮೊನ್ನೆ ಸಮ್ಮೇಳನದಲ್ಲಿ ನಿಮ್ಮ ಮಿಸೆಸ್ ಭಾಷಣ ಕೇಳಿದೆನಯ್ಯಾ! ತುಂಬಾ ಚೆನ್ನಾಗಿ ಮಾತಾಡ್ತಾರೆ ಮನೇಲಿ ಟ್ರೈನಿಂಗ್ ಕೊಟ್ಟಿರ್ತೀ ಅಂತ ಕಾಣುತ್ತೆ. ಅವ ಹಾಗೇ ನೀನ್ಯಾಕೆ ಬರಲಿಲ್ಲ?"

ಈಚೀಚೆಗೆ ನಮ್ಮ ಮನೆಗೆ ಬರುವವರಲ್ಲಿ ಮುಕ್ಕಾಲು ಜನ ಇವಳನ್ನು ಹುಡುಕಿಕೊಂಡೇ ಬರುತ್ತಿದ್ದರು. ಇವಳಿಗೆ ಬದಲು ಅಕಸ್ಮಾತ್ ನಾನೇ ಮೊದಲು ಕಣ್ಣಿಗೆ ಬಿದ್ದರೆ, ಗೊತ್ತಿದ್ದರೂ ಕೇಳುತ್ತಿದ್ದ ಪ್ರಶ್ನೆ. "ಉಮಾ ದೇವಿಯವರ ಮನೆ ಇದೇ ತಾನೇ?"

"ಉಮಾದೇವಿಯವರಂತೆ! ನನ್ನದು. ನಮ್ಮಪ್ಪ ಕಟ್ಟಿಸಿದ್ದು!" ಎನ್ನಬೇಕೆಂದು ಮನಸ್ಸು ಹಲ್ಲು ಕಡಿಯುತ್ತಿದ್ದರೂ ಮೇಲೆ ವಿನಯವಾಗಿ: "ಹೌದು. ಏನಾಗಬೇಕಾಗಿತ್ತು?" ಎಂದು ಪ್ರಶ್ನಿಸುತ್ತಿದ್ದೆ. ಬಂದಿದ್ದ ವನು ಹಲ್ಲು ಕಿರಿಯುತ್ತಾ ಉತ್ತರ ಕೊಡುತ್ತಿದ್ದ.

"ಹ ಹ...ಸ್ವಲ್ಪ ಅವರನ್ನು ನೋಡಬೇಕಾಗಿತ್ತು.

ಪರವಾಗಿಲ್ವೇ! ಅವಳ ಕೈ ಹಿಡಿದ ಗಂಡ ಎನ್ನಿಸಿಕೊಂಡ ನಾನೇ ಎದುರಿದ್ದರೂ ಅವರನ್ನು ಸ್ವಲ್ಪ ನೋಡಬೇಕಾಗಿತ್ತಂತೆ! ಇದೆಲ್ಲಾ ಮನಸ್ಸಿನೊಳಗಿನ ಮಾತು. ಮೇಲೆ ಏನೂ ಹೇಳದೇ ಮಿಕಿ ಮಿಕಿ ನೋಡು ತ್ತಿದ್ದಾಗ. ನನ್ನ ಮನೋಭಾವ ಅರ್ಥವಾದವನಂತೆ ಆವನು ಗೊಣ ಗುಟ್ಟುತ್ತಿದ್ದ.

"ಹದಿನೈದನೇ ತಾರೀಖು ನಮ್ಮ ಸಂಘದ ವಾರ್ಷಿಕೋತ್ಸವ. ಉಮಾ ದೇವಿಯವರನ್ನು ಅಧ್ಯಕ್ಷತೆಗೆ ಕರೀಬೇಕಾಗಿತ್ತು.

[illegible] ಹೋ!" [illegible] ಹೇಳುವುದ್ದೇನು! ಬಂದವನಿಗೆ ಜಾಗ ಬಿಟ್ಟು [illegible]

[illegible] ಸಮಾರಂಭಗಳಲ್ಲಿ ಜನ ನನ್ನನ್ನು ಪರಿಚಯ [illegible]

[illegible] ಅವರು,... ಮಿಸ್ಟರ್ [illegible]..! ಅದೇ ನಮ್ಮ ಉಮಾದೇವಿ

ತುಂಬ ದ್ವೇಷದ ಕಡಲು. ಪಕ್ಕದ ಜಗುಲಿಯಲ್ಲಿ ಈರ್ಷೆಯಿಂದ ಕುಳಿತಿದ್ದ ಹಿರೇಗೌಡ ನನ್ನೇ ನುಂಗುವಂತೆ, ನೋಡುತ್ತ ಕುಳಿತಿದ್ದ.

ಹಾಳಾಗಿ ಬಿದ್ದಿದ್ದ ಜಮೀನನ್ನು ಶೂನ್ಯವಾಗಿ ದಿಟ್ಟಿಸುತ್ತ, ಹುಚ್ಚ ನಂತೆ ನಿಂತಿದ್ದ ಪಾಟೀಲರು, ಇದಕ್ಕೆ ಕಾರಣವಾಗಿದ್ದ ದೇಸಾಯಿಯವರನ್ನು ಜರಿದು. ಸಿಟ್ಟು ಸಿರುಬಿಡುತ್ತ ತಮ್ಮ ಮನೆಯತ್ತ ಕಾಲು ಎಳೆದರು. ಜಬ್ಬಿ, ಅಪ್ಪು, ಪಾಟೀಲರನ್ನು ಮುಗಿಸುವ ಹವಣಿಕೆಯಲ್ಲಿ ಶಾರಿಯ ಪಟ್ಟಿಯಲ್ಲಿ ಚಿಂತಿಸುತ್ತಿದ್ದರು. ಜಿಗಿದ ಬಾಗಿಲುಗಳ ಹಿಂದೆ ಇನ್ನೂ ಅನೇ ಕರು ಏನೇನೋ ಲೆಕ್ಕಾಚಾರಗಳಲ್ಲಿ ತೊಡಗಿದ್ದರು.

ಭಣಗುಡುತ್ತಿದ್ದ ಬೋಳು ಅಂಗಳದಿಂದ ಕಾಲಿಕ್ಕದ ಸೋನಾ. ಕಣ್ಣೀರು ಚಿಮ್ಮಿಸುತ್ತ ಸುತ್ತಮುತ್ತ ಅಳುಕಿನ ನೋಟ ಚೆಲ್ಲಿ, ಬಾವಿಯತ್ತ ನಡೆದಳು. ಹಿಂತಿರುಗಿ ಬರುವಾಗ ಅರಳೀ ಕಟ್ಟೆಯ ಬಳಿ ಹೆಂಗಳೆಯರ ತಂಡ, ಗುಳ್ಳನ ಶಿಳ್ಳೆಯ ದನಿ ಕೇಳಿ ಬೆಚ್ಚಿ, ಥಟ್ಟನೆ ಚೆದುರಿತು ಸೋನಾ, ಬೆವರೊರೆಸಿಕೊಳ್ಳುತ್ತ ಮರೆಗೆ ಓಡುವಾಗ. ಎಡವಿ ಬಿದ್ದಳು, ತೊಡರಿದ ಹಲಗೆಯನ್ನು ಕೋಪದ ಉರಿಯಿಂದ ದಿಟ್ಟಿಸಿದಳು,

'ನಿಮ್ಮ ಪ್ರಗತಿಯೇ ನಮ್ಮ ಗುರಿ' ವಿಷಾದದಿಂದ ಅವಳು ತನ್ನ ಉಬ್ಬಿದ ಹೊಟ್ಟೆಯನ್ನು ಸವರಿಕೊಂಡು, ಬಡಗಣ ಬರಡು ಕಾಡಿನತ್ತ ಶೂನ್ಯದೃಷ್ಟಿ ತೇಲಿಸಿದಳು.

# ಭೈರವಿ

—ಬಾಷ್ಯಂ ತನುಜೆ (ಲಲಿತ)

ಮನೆಯ ಮುಂದಿನ ಅಂಗಳದಲ್ಲಿ ಒದ್ದೆಕೂದಲಿನ ಸಿಕ್ಕು ಬಿಡಿಸುತ್ತ ಬಿಸಿಲಿಗೆ ಮೈಯೊಡ್ಡಿ ನಿಂತಳು ವಲ್ಲಿ. ಎದುರು ಮನೆಯ ಮುಂದೆ ಒಂದು ಟೆಂಪೋ ಬಂದು ನಿಂತಿತು. ಕುತೂಹಲದಿಂದ ವಲ್ಲಿಯ ದೃಷ್ಟಿ ಅತ್ತ ಹೊರಳಿತು. ಸುಮಾರು ಇಪ್ಪತ್ತು–ಇಪ್ಪತ್ತೆರಡು ವರ್ಷಗಳಿರಬಹುದಾದ ಹುಡುಗನೊಬ್ಬ ಟೆಂಪೋದಲ್ಲಿದ್ದ ಸಾಮಾನುಗಳನ್ನು ಇಳಿಸ ತೊಡಗಿದ. ಹೊಸದಾಗಿ ಬಾಡಿಗೆಗೆ ಬಂದರೇನೊ ಎಂದುಕೊಂಡಳು. ಇನ್ನುಮೇಲಾದರೂ "ಮನೆ ಖಾಲಿಇದೆಯಾ ?" ಎಂದು ಪದೇ ಪದೇ ಕೇಳಿಕೊಂಡು ಬರುತ್ತಿದ್ದ ಜನರಿಗೆ ಉತ್ತರ ಕೊಡುವುದು ತಪ್ಪಿತೆನಿಸಿತು. ನಾಲ್ಕು ತಿಂಗಳಿನಿಂದ ಖಾಲಿಯಿದ್ದ ಮನೆಯದು. ಮುನ್ನೂರು ರೂಪಾಯಿ ಬಾಡಿಗೆ, ನಾಲ್ಕುಸಾವಿರ ರೂಪಾಯಿ ಅಡ್ವಾನ್ಸ್. ಅಡ್ವಾನ್ಸ್ ಹೆಚ್ಚೆಂದು, ನೋಡಿ ಹೋಗಿದ್ದ ಯಾರೂ ಬಂದಿರಲಿಲ್ಲ.

ಟೆಂಪೋದಲ್ಲಿದ್ದ ಸೋಫ, ಗಾಡ್ರೆಜ್ ಬೀರುಗಳು, ಕರೀ ಮರದ ಮಂಚ ಬಣ್ಣ ಬಣ್ಣದ ಪುಷ್ಪಗಳಿದ್ದ ಹೂವಿನ ಕುಂಡಗಳು, ಸೀಲಿಂಗ್ ಫ್ಯಾನ್‌ಗಳು, ವಿವಿಧ ವಿನ್ಯಾಸದ ಬೆತ್ತದ ಕುರ್ಚಿಗಳು ಅಂಗಳದಲ್ಲಿ ಹರಡಿಕೊಂಡುವು. ಅವುಗಳನ್ನು ನೋಡುತ್ತಿದ್ದಂತೆ ಬಾಡಿಗೆಗೆ ಬಂದವರು ಅನುಕೂಲಸ್ಥರೇ ಇರಬೇಕೆನ್ನಿಸಿತು. ಮೂರ್ನಾಲ್ಕು ಸಲ ಟೆಂಪೋದಲ್ಲಿ ಮನೆಯ ಸಾಮಾನುಗಳು ಸಾಗಿ ಬಂತು.

ಸಂಜೆಯ ಹೊತ್ತಿಗೆ ಮನೆಯ ಮಂದಿಯ ಆಗಮನವಾಯ್ತು. ಧಡೂತಿಯಾದ ವಯಸ್ಸಾದ ಹೆಂಗಸೊಬ್ಬರು, ತುಂಬ ಸಂಪ್ರದಾಯಸ್ಥರಿರ

ಬೇಕು. ಮೇಲು ಕೆಚ್ಚೆ ಹಾಕಿ ಸೀರೆಯುಟ್ಟಿದ್ದರು. ಕೈತುಂಬ ಕಾಣು ವಂತೆ ದಪ್ಪನೆಯ ಚಿನ್ನದ ಬಳೆಗಳು, ಕತ್ತಿನಲ್ಲಿ ತಾಳಿಯ ಜೊತೆಗೆ ಮಿಂಚುವ ನಾಲ್ಕೆಳೆಯ ಚಿನ್ನದ ಸರ, ಅಗಲವಾದ ಅಡ್ಡ ಕುಂಕುಮ ಇಟ್ಟಿದ್ದ ಆಕೆಯೇ ಮನೆಯ ಒಡತಿಯಿರಬೇಕೆನ್ನಿಸಿತು, ಆಕೆಯ ಹಿಂದೆಯೆ ಬಂದ ಸುಮಾರು ೬೦ ವರ್ಷದ ಮುದುಕ , ಆಕೆಯ ಗಂಡನೇನೋ, ಅಲ್ಲಿಯೇ ಒಂದು ಕಡೆ ಒರಗಿಸಿಟ್ಟಿದ್ದ ಈಸಿ ಛೇರನ್ನು ಬಿಡಿಸಿ, ಅಲ್ಲಿಯೇ ಕುಳಿತುಬಿಟ್ಟರು. ಧಡೂತಿಯಾಗಿದ್ದ ಹೆಂಗಸೇ ತೊದಲು ಬಂದಿದ್ದ ಹುಡುಗನಿಗೆ ನಿರ್ದೇಶಿಸುತ್ತ ಅಂಗಳದಲ್ಲಿದ್ದ ಸಾಮಾನುಗಳನ್ನು ಒಳಗಿಡಿ ಸುವ ವ್ಯವಸ್ಥೆ ಮಾಡುತ್ತಿದ್ದರು.

ಕತ್ತಲು ಮುತ್ತುತ್ತಿದ್ದಂತೆ ಅಂಗಳದಲ್ಲಿನ ಸಾಮಾನುಗಳೆಲ್ಲಾ ಒಳ ಸೇರಿದವು. ಈಸಿ ಛೇರಿನಲ್ಲಿ ಕುಳಿತಿದ್ದ ಮುದುಕರು ಗೇಟಿನ ಬಳಿ ಬಂದು ನಿಂತರು.

ಬೆಳಿಗ್ಗಿನಿಂದ ಎದುರು ಮನೆಯ ಚಟುವಟಿಕೆಗಳನ್ನು ಗಮನಿಸುತ್ತಿದ್ದ ವಲ್ಲಿ, ತಮ್ಮ ಬೀದಿಗೆ ಮತ್ತೆ ಮೂವರು ಸದಸ್ಯರ ಸೇರ್ಪಡೆಯಾಯಿತು ಎಂದುಕೊಂಡಳು. ಅವಳ ಎಣಿಕೆ ಸುಳ್ಳಾಗುವಂತೆ ಮತ್ತೆರಡು ಮಂದಿ ಯನ್ನು ಹೊತ್ತ ಟ್ಯಾಕ್ಸಿಯೊಂದು ಆಗಲೇ ಬಂದು ನಿಂತಿತು. ಮೊದ ಲಿಗೆ ಹುಡುಗಿಯೊಬ್ಬಳು ಟ್ಯಾಕ್ಸಿಯಿಂದ ಇಳಿದಳು. ನಂತರ ಯುವಕನೊ ಬ್ಬನನ್ನು ಕೈಕೊಟ್ಟು ಕೆಳಗಿಳಿಸಿ, ಭುಜಕ್ಕೆ ಆಸರೆ ಕೊಟ್ಟು ನಿಲ್ಲಿಸುತ್ತಿ ದ್ದಂತೆ, ಗೇಟಿನ ಬಳಿ ನಿಂತಿದ್ದ ಮುದುಕಿ ದಡದಡನೆ ಓಡಿಹೋಗಿ ಹುಡುಗ ನಿಗೆ ಆಸರೆ ಕೊಟ್ಟರು. ಅಷ್ಟರಲ್ಲಿ ಕುಂಕುಳಿಗೆ ಆನಿಸಿಕೊಳ್ಳಲು ಉಪ ಯೋಗಿಸುವ ಕುಂಟರ ಊರುಗೋಲುಗಳನ್ನು ಟ್ಯಾಕ್ಸಿಯಿಂದ ತೆಗದು ಕೊಟ್ಟಳು ಹುಡುಗಿ. "ಹೂಂ, ಸಿರಿವಂತಿಕೆಯ ಮಡಿಲಲ್ಲಿಯೂ ದುಃಖದ ಛಾಯೆ" ಎಂದುಕೊಳ್ಳುತ್ತ ಒಳಬಂದಳು ವಲ್ಲಿ.

೦ ೦ ೦ ೦

ಮೆಟ್ಟಿಲು ಹತ್ತುವ ಮುನ್ನ ಮತ್ತೊಮ್ಮೆ ಹಿಂತಿರುಗಿ ನೋಡಿದಳು ವಲ್ಲಿ. ಇಲ್ಲ, ಈ ದಿನವೂ ಭೈರವಿ ಕಾಣಲಿಲ್ಲ, ಹೇಗೋ ಅನ್ನಿಸಿತು

ವಲ್ಲಿಗೆ. ದಿನವೂ ಕಾಣುತ್ತಿದ್ದ ಭೈರವಿ ಕಾಣಲಿಲ್ಲ. ಏಕೆ. ಮೊನ್ನೆ
ಯಿಂದ ಇವಳು ಕಾಣುತ್ತಿಲ್ಲ ಎಂದು ಕ್ಷಣ ಚಿಂತಿಸಿ, ಹುಷಾರಿಲ್ಲವೇನೊ
ಎಂದುಕೊಂಡು ಒಳ ಬಂದರು.

ಎದುರು ಮನೆಯ ಹುಡುಗಿ ಭೈರವಿ. ಪ್ರತಿದಿನ ಬೆಳಿಗ್ಗೆ ಅಥವಾ
ಸಂಜೆ ಕೆಲವೊಮ್ಮೆ ಎರಡು ಹೊತ್ತೂ ಕಣ್ಣಿಗೆ ಬೀಳುವುದಿತ್ತು. ಬೆಳಿಗ್ಗೆ
ಕೆಲಸಕ್ಕೆ ಹೊರಡುವಾಗ ತಮ್ಮ ಮನೆಯ ಅಂಗಳಕ್ಕೆ ನೀರು ಚುಮುಕಿಸು
ತ್ತಲೋ, ಇಲ್ಲ ರಂಗವಲ್ಲಿ ಇಡುತ್ತಲೋ ಭೈರವಿ ಕಾಣುತ್ತಿದ್ದರೆ. ಸಂಜೆ
ಕೆಲಸದಿಂದ ಹಿಂತಿರುಗುವಾಗ್ಗೆ ಗುಡಿಸಿದ ಕಸವನ್ನು ಹರಕು ಕಾಗದದ
ತುಂಡಿನಲ್ಲಿ ಸುತ್ತಿ, ತಿರುವಿನಲ್ಲಿನ ಕಸದ ತೊಟ್ಟಿಗೆ ಎಸೆಯಲು ಬಂದಾಗ
ವಲ್ಲಿಯನ್ನು ಮುಗುಳ್ನಗೆಯಲ್ಲಿ ಕುಶಲ ವಿಚಾರಿಸಿ ಹೋಗುವುದಿತ್ತು.
ಎರಡು ದಿನಗಳಿಂದ ಭೈರವಿಯನ್ನು ಕಾಣದುದು ತನ್ನಲ್ಲೇಕೆ ಇಂತಹ ಶೂನ್ಯ
ಭಾವ ಮೂಡಿಸಿದೆ ಎಂಬ ಅಚ್ಚರಿ ಮೂಡಿತು ವಲ್ಲಿಗೆ. ಹಾಗೆ
ಯೋಚಿಸುತ್ತಿದ್ದಂತೆ ಅವಳ ಪರಿಸರ, ಅವಳ ಜನರನ್ನೆಲ್ಲ ಕಣ್ಮುಂದೆ ತಂದು
ಕೊಂಡಳು. ಕುಂಟನನ್ನು ಮದುವೆಯಾಗಿರುವ, ಚೆಂದದ ಹೆಣ್ಣು
ಭೈರವಿ ಎಂಬುದರಿಂದ, ತನ್ನ ಮನಸ್ಸು ಅವಳಲ್ಲಿ ಅನುಕಂಪಗೊಂಡಿದೆ
ಎಂಬ ಸ್ಪಷ್ಟತೆ ಗೋಚರಿಸಿತು. ಅಂದು ಕಂಡ ಧಡೂತಿ ಹೆಂಗಸು ಭೈರ
ವಿಯ ಅತ್ತೆ ಎಂಬುದು ತಾಯಿಯಿಂದ ಗೊತ್ತಾಗಿತ್ತು. ತಾನಿಲ್ಲದ
ವೇಳೆಯಲ್ಲಿ "ಯಾರಾದರೂ ಕೆಲಸದವರಿದ್ದರೆ ತಿಳಿಸಿರಿ" ಎಂದು ವಿಚಾರಿಸ
ಲಿಕ್ಕೆ ಬಂದಿದ್ದರಂತೆ. ಆಗಲೇ ತಮ್ಮ ಮನೆಯ ಸಂಕ್ಷಿಪ್ತ ವರದಿಯನ್ನು
ತಿಳಿಸಿದ್ದರಾಕೆ. ಪ್ರೈಮರಿ ಶಾಲೆಯಲ್ಲಿ ಕಲಿಯುತ್ತಿದ್ದಾಗಲೇ ಮಗನಿಗೆ
ಪೋಲಿಯೋ ಬಂದು ಕಾಲ್ಗಳು ಊನವಾಗಿಬಿಟ್ಟಿತ್ತಂತೆ. ಕಲಿಕೆಯಲ್ಲಿ
ಜಾಣನಿದ್ದು ಬಿ.ಕಾಮ್. ಮೊದಲಸಲವೇ ಮೊದಲ ದರ್ಜೆಯಲ್ಲೇ ಪಾಸಾ
ದನಂತೆ ಹಾಗಾಗಿ ಒಳ್ಳೆಯ ಉದ್ಯೋಗವೂ ಬ್ಯಾಂಕಿನಲ್ಲಿ ಸಿಕ್ಕಿತಂತೆ.
ಈಗ ಆಫೀಸರ್ ಕೂಡ ಆಗಿದ್ದಾನೆ ಎಂದು ಹೇಳಿದ ಆಕೆಯ ಸಂಗತಿ
ಯನ್ನು ವಲ್ಲಿಗೆ ತಿಳಿಸಿದ ಪದ್ಮಮ್ಮ "ಆ ಹುಡುಗನ ಅದೃಷ್ಟ ನೋಡೇ"
ಎಂದು ಮಗಳ ಬಳಿ ತಿಳಿಸಿದ್ದರು.

"ಒಳ್ಳೆಯ ಅದೃಷ್ಟವೇ ಮತ್ತೆ, ಭೈರವಿಯಂತಹ ಚೆಂದದ ಹೆಣ್ಣು ಸಿಕ್ಕಬೇಕಾದರೆ" ಎಂದು ವಲ್ಲಿ ಹೇಳಿಯೂ ಇದ್ದಳು ತಾಯಿಯ ಮಾತಿಗೆ ದನಿ ಕೂಡಿಸಿ.

ಭೈರವಿಯ ಮುಖ ಮತ್ತೆ, ನೆನಪಿಗೆ ಬಂತು ವಲ್ಲಿಗೆ. ತೀರ ಬಿಳುಪಲ್ಲ ದಿದ್ದರೂ ಆಕರ್ಷಣೀಯವಾದ ಮುಖ ಭೈರವಿಯದು. ಅಂದವಾದ ಅಗಲ ಕಣ್ಣುಗಳು. ಕಾಡಿಗೆ ಇಟ್ಟುಕೊಂಡರೆ ಮತ್ತಷ್ಟು ಹೊಳಪಿನಿಂದ ಅಗಲವಾಗಿ ಕಾಣುತ್ತೆ ಎಂದುಕೊಂಡಳು ಮನಸ್ಸಿನಲ್ಲಿ. ಮೊಳದಷ್ಟೇ ಉದ್ದವಾದರೂ, ಸುರಳಿ ಸುರಳಿಯಾದ ದಪ್ಪನೆಯ ಜಡೆಯಾಗಬಹುದಾದ, ಸೊಂಪಾದ ಅವಳ ಕೂದಲು, ಅವಳ ಸೊಬಗನ್ನು ಮತ್ತಷ್ಟು ಹೆಚ್ಚಿಸಿದೆಯೇನೋ ಎನ್ನಿಸಿತು. ಅಷ್ಟು ಚೆಂದದ ಹುಡುಗಿ ಕಾಲು ಊನವಾದ ಹುಡುಗನನ್ನು ಮದುವೆಯಾಗುವ ಸಂದರ್ಭ ಬಂದುದೇಕೋ ಎಂದುಕೊಳ್ಳುತ್ತ, ಭೈರ ವಿಯ ಚಿಂತೆಯಲ್ಲಿಯೇ, ತಟ್ಟೆಯಲ್ಲಿ ಅಮ್ಮ ಕೊಟ್ಟ ಉಪ್ಪಿಟ್ಟಿಗೆ ಕೈ ಹಾಕಿದಳು.

ಅದೇ ಸಮಯಕ್ಕೆ "ನಿಮ್ಮ ಮಗಳು ಕೆಲಸದಿಂದ ಬಂದ್ರ?" ಎಂದು ಕೇಳುತ್ತಾ, ಒಳ ಬಂದ ಭೈರವಿಯ ಅತ್ತೆ, ಅಲ್ಲಿಯೇ ಕುಳಿತು ತಿಂಡಿ ತಿನ್ನುತ್ತಿದ್ದ ವಲ್ಲಿಯನ್ನು ನೋಡಿ "ನೋಡು, ನಿನ್ನ...ಹೆಸರು?" 'ವಲ್ಲಿ' ಎಂದು ಮಧ್ಯದಲ್ಲಿಯೇ ಹೇಳಿದರು ವಲ್ಲಿಯ ತಾಯಿ. "ನೋಡು ವಲ್ಲಿ ನನ್ನ ಸೊಸ ಭೈರವಿಗೆ ಕೆಂಡಮುಂಡಲ ಜ್ವರ. ಸಂಜೆಯಿಂದ ನಾಲ್ಕಾರು ಸಲ ವಾಂತಿ ಮಾಡಿಕೊಂಡಳು. ಇವ್ರು ಮನೇಲಿ ಇಲ್ಲ, ನೆನ್ನೆ ನನ್ನ ಮಗ ಕ್ರೋಸಿನ್ ಕೊಟ್ಟಿದ್ದ, ಆದ್ರೂ ಜ್ವರ ನಿಂತಿಲ್ಲ, ಇಲ್ಲಿ ಬಂದು ಒಂದು ತಿಂಗಳಾದರೂ, ನಾವು ಹೊರಗೇ ಅಡ್ಡಾಡದೆ, ಡಾಕ್ಟ್ರ ಶಾಪು ಎಲ್ಲಿದೆ ಅಂತ್ಲೂ ಗೊತ್ತಿಲ್ಲ..." ಬಿಡದೆ ಮಾತನಾಡುತ್ತಿದ್ದ ಅವರ ಮಾತನ್ನು ಅರ್ಧಕ್ಕೇ ತಡೆದ ವಲ್ಲಿ, "ಅಯ್ಯೊ, ಮುಂದಿನ ಬೀದಿಯಲ್ಲಿಯೇ ಶಾಪು

ಇದೇ ತೋರಿಸ್ತೀನಿ. ಇನ್ನೊಂದು ಐದು ನಿಮಿಷದಲ್ಲಿ ಬರ್ತೀನಿ" ಎಂದಳು ಲೋಟದಲ್ಲಿದ್ದ ಕಾಫಿ ಗುಟುಕರಿಸುತ್ತ.

"ಆಗ್ಲಮ್ಮ, ಪುಣ್ಯ ಬರಲಿ ನಿಂಗೆ" ಎನ್ನುತ್ತ ಹೊರಟು ಹೋದರು ಭೈರವಿಯ ಅತ್ತೆ. "ಪಾಪ, ಅದಕ್ಕೇ ಭೈರವಿ ಮೊನ್ನೆಯಿಂದ ಕಾಣು ತ್ತಿಲ್ಲ" ಎಂದು ಕೊಳ್ಳುತ್ತ ತಟ್ಟೆಯಲ್ಲಿಯೇ ಕೈ ತೊಳೆದು "ಅಮ್ಮ, ಶಾಪ್ ತೋರಿಸಿ ಬಂದು ನಾನೇ ಪಾತ್ರೆ ತೊಳೀತಿನಿ, ನಿನ್ನೆಯಿಂದ ಹುಷಾರಿಲ್ಲ ಅಂತಿದ್ದಿ, ನೀನು ತೊಳಿಬೇಡ, ಇಲ್ಲ ಸುಮ್ಮಿ ಕೈಲಿ ತೊಳಿಸು" ಎನ್ನುತ್ತ ಭೈರವಿಯ ಮನೆಯುತ್ತ ಹೆಜ್ಜೆ ಹಾಕಿದಳು ವಲ್ಲಿ.

•

ಮಂಚದಲ್ಲಿ ಮಲಗಿದ್ದ ಭೈರವಿಯ ಮುಖ ಜ್ವರದಿಂದ ಕೆಂಪಡರಿತ್ತು. 100 ಮೇಲೆ ಜ್ವರವಿರಬೇಕೆನ್ನಿಸಿತು. ನಡೆಸಿಕೊಂಡು ಹೋಗಲು ಆಗ ದೆನಿಸಿ ಅಲ್ಲಿಯೇ ಕ್ರಿಕೆಟ್ ಆಡುತ್ತಿದ್ದ ತಮ್ಮ ಶೀನುವನ್ನು ಕರೆದು ರಿಕ್ಷಾ ತರಲು ಹೇಳಿದಳು. ರಿಕ್ಷಾ ಬರುವಲ್ಲಿ ಏನಾದರೂ ಭೈರವಿಯನ್ನು ಮಾತ ನಾಡಿಸೋಣವೆಂದರೆ ಕಣ್ಮುಚ್ಚಿದ್ದ ಅವಳಿಗೆ ಆಯಾಸವಾಗುತ್ತದೆಂದು ಸುಮ್ಮ ನಾದಳು. ಅಂದು ಸಾಮಾನು ಸಾಗಿಸಿದ ಹುಡುಗನ ನೆನಪಾಯ್ತು, "ಅಂದು ಸಾಮಾನು ಸಾಗಿಸುತ್ತಿದ್ದನಲ್ಲ ಆ ಹುಡುಗ ಎಲ್ಲಿ ಕಾಣುವುದೇ ಇಲ್ಲ?" ಎಂದು ಅಲ್ಲಿಯೇ ನಿಂತಿದ್ದ ಕಾಂತಮ್ಮನನ್ನು ಕೇಳಿದಳು. "ಅವನು ಬ್ಯಾಂಕಿನ ಅಟೆಂಡರ್, ನಾಗೇಶ ಹೇಳಿ ಕರೆಸಿದ್ದ" ಎಂದ ಕಾಂತಮ್ಮ "ಒಂದು ತೊಟ್ಟು ಹಾಲು ದಕ್ಕದೆ ವಾಂತಿಯಾಯ್ತು. ನೆನ್ನೆ ರಾತ್ರಿಯೂ ಊಟ ಮಾಡಲಿಲ್ಲ" ಎಂದು ಭೈರವಿಯ ಕುರಿತು ಹೇಳಿದರು. ಅಷ್ಟರಲ್ಲಿ ರಿಕ್ಷಾ ಬಂತು ವಲ್ಲಿಯೇ ಭೈರವಿಯನ್ನು ಶಾಪಿಗೆ ಕರೆದೊಯ್ದಳು.

ಭೈರವಿಗೆ ಇಂಜೆಕ್ಷನ್ ಕೊಟ್ಟ ಡಾಕ್ಟರ್ ಶಾಂತ ನಾಲ್ಕು ತರದ ಮಾತ್ರೆ ಗಳನ್ನು ಕೊಟ್ಟು ಅದನ್ನು ಉಪಯೋಗಿಸುವ ವಿಧಾನ ತಿಳಿಸಿ, ವಾಂತಿ ನಿಲ್ಲದಿದ್ದರ ತಮಗೆ ಫೋನ್ ಮಾಡಲು ಹೇಳಿ ಫೋನ್ ನಂಬರ್ ಕೊಟ್ಟರು.

ಭೈರವಿಯನ್ನು ಕರೆತಂದು ಮಂಚದಲ್ಲಿ ಮಲಗಿಸಿ, ಅವರ ಅತ್ತೆಗೆ ಡಾಕ್ಟರ್ ತಿಳಿಸಿದ ವಿಷಯ ತಿಳಿಸಿ, ಔಷಧಿಗಳನ್ನು ತೆಗೆದುಕೊಳ್ಳುವ ವಿಧಾನ ತಿಳಿಸಿ "ಇನ್ನು ಬರ್ತೀನೆ" ಎಂದು ಹೊರಟ ವಲ್ಲಿಯತ್ತ ಕಣ್ಣಿನಲ್ಲಿಯೇ ಅಪಾರ ಕೃತಜ್ಞತೆ ತೋರಿಸಿದಳು ಭೈರವಿ.

ಅಂದಿನ ಘಟನೆ ಇಬ್ಬರನ್ನೂ ಹತ್ತಿರ ತಂದಿತ್ತು. ಭೈರವಿ ಆಗಾಗ್ಗೆ ವಲ್ಲಿಯ ಮನೆಗೆ ಬರತೊಡಗಿದಳು.

ತುಂಬ ಮಾತನಾಡುವ ಹುಡುಗಿ ಭೈರವಿ. ಪುಸ್ತಕಗಳನ್ನು ಓದುವ ಹವ್ಯಾಸವೂ ಉಂಟು. ಕತೆ ಕಾದಂಬರಿಗಳನ್ನು ಓದಲು ಆಸೆಯಿದ್ದ ಅವಳಿಗೆ, ವಲ್ಲಿಯ ಮನೆಯಲ್ಲಿ ಸಾಕಷ್ಟು ಪುಸ್ತಕಗಳು ಓದಲು ಸಿಕ್ಕುತ್ತಿತ್ತು.

ಭೈರವಿಯನ್ನು ಮತ್ತಷ್ಟು ಹತ್ತಿರ ತಂದುದು ಸಂಗೀತ. ವಲ್ಲಿಗೆ ಪುಸ್ತಕ ವಾಚನದಷ್ಟೇ ಪ್ರೀಯವಾದುದು ಸಂಗೀತ. ಒಳ್ಳೆಯ ಶಾರೀರ ಭೈರವಿಯದು ಬೇಸರವಾದಾಗಲೆಲ್ಲ ಭೈರವಿ ಹಾಡುತ್ತಾಳೆ. ಸುಶ್ರಾವ್ಯ ವಾಗಿ ಹಾಡುವ ಭೈರವಿಯ ಗಾಯನ ಕೇಳಲು ವಲ್ಲಿಗೆ ತುಂಬ ಇಷ್ಟ ಕೆಲವು ಶ್ಲೋಕಗಳನ್ನು, ವಚನಗಳನ್ನು ರಾಗವಾಗಿ ಹಾಡುತ್ತಾಳೆ ಭೈರವಿ. ಅವಳು ಹಾಡುವಾಗ, ಹಾಡಿನಲ್ಲಿ ಅವಳಿಗಿರುವ ತನ್ಮಯತೆ ಬೆರಗು ಹುಟ್ಟಿಸುತ್ತೆ ವಲ್ಲಿಗೆ. ಅವಳ ಪ್ರಿಯವಾದ "ತೇನ ವಿನಾ ತೃಣ ಮಪ್ಪಿನ ಚಲತಿ, ತೇನ ವಿನಾ" ಹಾಡುವಾಗ, ತನ್ನ ಇರವನ್ನೇ ಮರೆತು, ತುಂಬು ತನ್ಮಯತೆಯಿಂದ ಹಾಡುವುದುಂಟು ಭೈರವಿ. ಅವಳ ಇಂಪಾದ ಕಂಠಧ್ವನಿ ಯಿಂದ ಹೊರಡುವ ಆ ಹಾಡನ್ನು ಮತ್ತೆ ಮತ್ತೆ ಕೇಳಬೇಕೆನಿಸುತ್ತದೆ ವಲ್ಲಿಗೆ.

ಅದೊಂದು ದಿನ ಯಾವುದೋ ಒಂದು ಮಾತಿನ ಸಂದರ್ಭದಲ್ಲಿ "ನಿನ್ನ ಬಗ್ಗೆ ಬಹಳ ಅಯ್ಯೋ ಅನ್ನಿಸುತ್ತೆ" ಎಂದು ಬಿಟ್ಟಳು ವಲ್ಲಿ. ಭೈರವಿ ಯತ್ತ ಅನುಕಂಪದ ದೃಷ್ಟಿ ನೆಟ್ಟು. ಹೆಚ್ಚಾಗಿಬಿಟ್ಟಳು ಭೈರವಿ. ತಾನು ಹಾಗೆ ಹೇಳಬಾರದಿತ್ತು ಎನಿಸಿಬಿಟ್ಟಿತು ವಲ್ಲಿಗೆ "ಬೇಜಾರಾಯ್ತು?"

ಎಂದು ತಪ್ಪು ಮಾಡಿದ ಧ್ವನಿಯಲ್ಲಿ ಕೇಳಿದಳು. "ಇಲ್ಲ. ಆದ್ರೂ ನೀವು ಯಾಕೆ ನನ್ನ ಬಗ್ಗೆ ಅಯ್ಯೋ ಅನ್ನಬೇಕು? ನನ್ನ ಗಂಡ ಕುಂಟು ಅಂತ ತಾನೇ ನಿಮ್ಮ ಅನುಕಂಪ?" ಎಂದಳು. ಚುರುಕಾದ ಧ್ವನಿ. ಕೆಂಪಾಗಿದ್ದ ಮೋರೆ. ತಾನೇಕೆ ಹಾಗೆ ಕೇಳಿದೆನೋ ಎಂದು ಪೆಚ್ಚಾಯ್ತು ವಲ್ಲಿಗೆ. "ಇಲ್ಲ...ಎಂದು..." ಮಾತು ತಡವರಿಸಿತು.

ನಕ್ಕುಬಿಟ್ಟಳು ಭೈರವಿ ನಂತರ ಹೇಳಿದಳು. "ನಮ್ಮ ಯಜಮಾನರು ಕುಂಟು ನಿಜ, ಆದರೆ 'ಅದು ನನ್ನ ಬದುಕಿನಲ್ಲಿ ಯಾವ ಕೊರತೆಯನ್ನೂ ತಂದಿಲ್ಲ. ಓದಿದ್ದಾರೆ, ಕೈತುಂಬ ಸಂಪಾದಿಸುತ್ತಾರೆ. ನನ್ನನ್ನು ತುಂಬ ಪ್ರೀತಿಸುತ್ತಾರೆ. ಅದಕ್ಕಿಂತ ನನಗೆ ಬೇಕಾದುದೇನು? ಅತ್ತೆ, ಮಾವ ಎಲ್ಲರಿಗೂ ನನ್ನನ್ನು ಕಂಡರೆ ಅಕ್ಕರೆಯಿದೆ. ನನಗೆ ಇಂತಹ ಸುರಕ್ಷಿತ ಬದುಕು ಸಿಕ್ಕೀತೆಂದು ನಾನೆಣಿಸಿರಲಿಲ್ಲ. ನನ್ನ ಬಗ್ಗೆ ನಿನಗೇನೂ ಗೊತ್ತಿಲ್ಲ, ಒಂದು ದಿನ ನಮ್ಮ ಮನೆಯ ಬಗ್ಗೆ ತಿಳಿಸುತ್ತೇನೆ. ಆಗ ನಿನಗೆ ನನ್ನನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತೆ. ನಾನು ನಿಜಕ್ಕೂ ತುಂಬ ಸಂತೋಷವಾಗಿದ್ದೀನಿ ವಲ್ಲಿ" ಎಂದು ಹೇಳಿದವಳೇ "ಅವರು ಬರುವ ಹೊತ್ತಾಯ್ತು, ಬರ್ತೀನಿ" ಎನ್ನುತ್ತ ಹೊರಟುಬಿಟ್ಟಳು.

ಮತ್ತೊಂದು ದಿನ ವಲ್ಲಿ ಬಿಡುವಾಗಿ ಕುಳಿತಿದ್ದಾಗ, ಭೈರವಿ ಬಂದಳು. "ನಮ್ಮ ಮನೆಯ ಕುರಿತು ಈಗ ಹೇಳುತ್ತೇನೆ" ಎಂದು ಹೇಳತೊಡಗಿದಳು. ಭೈರವಿಯ ಬಗ್ಗೆ ಮಾತಿನಲ್ಲಿ ಅನುಕಂಪ ಪ್ರಕಟಿಸಿ ನೋಯಿಸಿಬಿಟ್ಟೆ ಎಂಬ ಭಾವದಲ್ಲಿ ಒಳಗೊಳಗೇ ಮಿಡುಕುತ್ತಿದ್ದ ವಲ್ಲಿ, ಭೈರವಿಯ ಮಾತನ್ನು ಕೇಳತೊಡಗಿದಳು.

"ನಮ್ಮ ತಂದೆ ಒಳ್ಳೆ ಸಂಗೀತಗಾರರು ವಲ್ಲಿ, ಆದರೆ, ಅಪ್ಪನಿಗೆ ಅದೃಷ್ಟವಿರಲಿಲ್ಲ. ಕಲೆಗಾರರಿಗೆ ಒಳ್ಳೆ ಅದೃಷ್ಟವಿರಬೇಕು, ಹಾಗಿದ್ದರೇ ಅವರದೊಂದು ಬದುಕು, ಇಲ್ಲದಿದ್ದರೆ ಅವರಲ್ಲಿ ಹುದುಗಿರುವ ಎಂತಹ ಉತ್ಕೃಷ್ಟ ಕಲೆಯೂ ಬೆಳಕಿಗೇ ಬರದೆ ವ್ಯರ್ಥವಾಗಿ ಹೋಗುತ್ತೆ. ನಮ್ಮ ತಂದೆ ಚಿಕ್ಕ ರಾಮರಾಯರ ಶಿಷ್ಯರು, ಅವರ ಬಗ್ಗೆ ಕೇಳಿದ್ದೀಯ ವಲ್ಲಿ?"

ಎಂದಳು. ವಲ್ಲಿ ಉತ್ತರಿಸುವ ಯಾವ ಧ್ವನಿಯನ್ನೂ ಹೊರಡಿಸದೆ ತಲೆ ಆಡಿಸಿದಳು. ಕೇಳಿದ್ದೇನೆ ಎಂಬಂತೆ.

"ಅಪ್ಪ ಅವರ ಬಗ್ಗೆ ತುಂಬ ಹೇಳುತ್ತಿದ್ದರು ವಲ್ಲಿ. ಚೆನ್ನಾಗಿ ಹಾಡುತ್ತಿದ್ದರಂತೆ. ಅಂದಿನ ಕಾಲದಲ್ಲಿ ಸಂಗೀತಕ್ಕೆ ಎಂತಹ ಬೆಲೆಯಿತ್ತು ಎಂಬುದನ್ನು ಅಪ್ಪನ ಬಾಯಿಯಲ್ಲಿ ಕೇಳಬೇಕು. ಸಂಗೀತಗಾರರ ಬಗ್ಗೆ ಜನರಲ್ಲಿ ಭಕ್ತಿ, ಗೌರವಗಳಿದ್ದುವಂತೆ. ಮೇಲೆ ಮೇಲೆ ಸಂಗೀತ ಕಛೇರಿಗಳಾಗುತ್ತಿದ್ದರೆ. ಸಭೆ ರಸಿಕ ಜನರಿಂದ ತುಂಬಿ ತುಳುಕುತ್ತಿತ್ತಂತೆ" ಹೇಳುತ್ತ ಮಾತು ನಿಲ್ಲಿಸಿದಳು ಭೈರವಿ. ತಂದೆ ಹೇಳಿದ್ದ ಪ್ರಸಂಗಗಳನ್ನು ನೆನೆಸಿಕೊಳ್ಳುತ್ತಿದ್ದಾಳೇನೋ ಎಂಬಂತೆ ಅವಳ ದೃಷ್ಟಿ ಎತ್ತಲೋ ಇತ್ತು.

ಭೈರವಿಯ ಮಾತು ನಿಜವೆನ್ನಿಸಿತು ವಲ್ಲಿಗೆ. ತನ್ನ ಸಂಗೀತದ ಗುರುಗಳು ಹೇಳಿದ್ದ ಅನೇಕ ಸಂಗತಿಗಳು ನೆನಪಾಯ್ತು. ಅಂದಿನ ಸಂಗೀತಗಾರರು ಸಂಗೀತಕಲೆಯನ್ನು ಗೌರವಿಸಿ ಆರಾಧಿಸುತ್ತಿದ್ದ ಬಗೆ. ಅವರು ನಡೆಸುತ್ತಿದ್ದ ಕಛೇರಿಗಳು, ಪ್ರಸಿದ್ಧ ವಿದ್ವಾಂಸರೆದುರು ಹಾಡುತ್ತ. ಸವಾಲುಗಳನ್ನು ಎದುರಿಸುತ್ತಿದ್ದ ಕೆಚ್ಚು, ರಾಗಗಳನ್ನು ಒಲಿಸಿಕೊಳ್ಳಲು ಅವರು ನಡೆಸುತ್ತಿದ್ದ ಸಾಧನೆ, ಇವುಗಳನ್ನೆಲ್ಲ ಕೇಳಿ ಮೈ ಜುಂ ಎನ್ನುತ್ತಿತ್ತು. ಬಿಡಾರಂ ಕೃಷ್ಣಪ್ಪನವರ ಮಂದಿರದಲ್ಲಿ ನಡೆಯುತ್ತಿದ್ದ-ಮೊನ್ನೆ ಮೊನ್ನೆಯವರೆವಿಗೂ ನಡೆಯುತ್ತಿದ್ದ...ಕಛೇರಿಗಳ ಬಗ್ಗೆಯೂ ಕೇಳಿ ತಿಳಿದಿದ್ದಳು. ಸಂಗೀತದಲ್ಲಿ ಜನರ ಒಲವು ಅಂದಿನಷ್ಟು ಗಾಢವಾಗಿ ಇಲ್ಲ ಎಂಬುದು ನಿಜವೆನಿಸಿತು. ಈ ಆರ್ಕೆಸ್ಟ್ರಾಗಳ ಹಾವಳಿಯಲ್ಲಿ, ಚಿತ್ರಸಂಗೀತದ ಹುಯಿಲಿನಲ್ಲಿ, ಶಾಸ್ತ್ರೀಯ ಸಂಗೀತದತ್ತ ಒಲವು ಹೋಗಿಬಿಟ್ಟಿದೆ ಅನ್ನಿಸಿತು.

"ಅದೃಷ್ಟದ ಬಗ್ಗೆ ನಿನಗೆ ನಂಬಿಕೆ ಇದೆಯಾ ವಲ್ಲಿ?" ಎಂದು ಕೇಳಿದಳು ಭೈರವಿ ಯಾವುದೋ ಗುಂಗಿನಿಂದ ಹೊರಬಂದು.

"ಒಬ್ಬರ ಬದುಕನ್ನು ನಿಯಂತ್ರಿಸುವುದೇ ಅವರ ಅದೃಷ್ಟ. ಬೇಕಾದರೆ, ಅದಕ್ಕೆ ವಿಧಿ, ಕರ್ಮ, ಏನಾದರೂ ಹೇಳಬಹುದು" ಎಂದಳು ವಲ್ಲಿ.

"ನಿಜ ವಲ್ಲಿ, ತುಂಬ ಕೆಟ್ಟ ಅದೃಷ್ಟ ಅಪ್ಪಂದು. ಬಹಳ ವರ್ಷಗಳು ಸಂಗೀತ ಸಾಧನೆ ಮಾಡಿದ್ದರಂತೆ ಅಪ್ಪ. ಅದೊಂದು ದಿನ ಪ್ರಸಿದ್ಧ ವಿದ್ವಾಂಸರೆದುರು ಪರೀಕ್ಷೆಯಿತ್ತಂತೆ. ಹಿಂದಿನ ದಿನವೇ ಅವರಿಗೆ ಜ್ವರ ಬಂದುಬಿಟ್ಟಿತ್ತಂತೆ. ಮತ್ತೆ ಅವರಿಗೆ ಆ ತರಹದ ಮತ್ತೊಂದು ಅವಕಾಶವೇ ಸಿಕ್ಕಲಿಲ್ಲವಂತೆ.

ಬಹಳಷ್ಟು ವರ್ಷ ಸಂಗೀತ ಕಲಿಯುವುದರಲ್ಲೇ ಕಾಲ ಕಳೆದ ಅಪ್ಪನಿಗೆ ಮದುವೆಯಾಗುವ ಬಗ್ಗೆ ಆಸೆಯೇ ಇರಲಿಲ್ಲವಂತೆ. ಅದೇನು ಕಾರಣವೋ ತಮ್ಮ 45ನೆಯ ವಯಸ್ಸಿನಲ್ಲಿ ಮದುವೆಯಾದರಂತೆ. ಮಕ್ಕಳು ಹುಟ್ಟಿದುವು, ಮೂರು ಹೆಣ್ಣು. ಕೊನೆಯವಳೇ ನಾನು. ನನ್ನ ದುರದೃಷ್ಟವೋ ಏನೋ ನಾನು ಹುಟ್ಟಿದಾಗಲೇ ಅಮ್ಮ ಕೊನೆಯುಸಿರೆಳೆದ್ದಳಂತೆ. ಅಮ್ಮನ ಮುಖ ನಾನು ನೋಡಿದ್ದೇ ಇಲ್ಲ.

"ತೀರ ಬಡತನದಲ್ಲಿ ನರಳಿದರಂತೆ, ಅಪ್ಪ." ಹೇಳುತ್ತಿದ್ದುದನ್ನು ಕ್ಷಣ ನಿಲ್ಲಿಸಿ "ಅಹಿರಿ ಅನ್ನೋ ರಾಗ ಕೇಳಿದ್ದೀಯ ವಲ್ಲಿ?" ಎಂದಳು. "ಇಲ್ಲ" ಎಂದು ತಲೆಯಾಡಿಸಿದಳು ವಲ್ಲಿ, " ಆ ರಾಗ ಕಲಿತವರಿಗೆ ಅಥವಾ ಹಾಡಿದವರಿಗೆ ಅನ್ನ ಹುಟ್ಟುವುದಿಲ್ಲವಂತೆ...ನಗ್ತೀಯ...ನಿಜ. ಇದನ್ನೆಲ್ಲ ನೀನು ನಂಬುವುದಿಲ್ಲ, ಆದರೆ ಕೆಲವೊಮ್ಮೆ ಆ ಸಂಗೀತಗಳೆಲ್ಲ ನಿಜವೇನೋ ಅನ್ನಿಸುತ್ತೆ ನನಗೆ. ಆ ರಾಗವನ್ನು ಕಲಿತಿದ್ದರಿಂದಲೇ ಅಪ್ಪನಿಗೆ ಬಡತನ ಕಾಡುತ್ತಿತ್ತಂತೆ. ಶಾಮು ಮಾಮಾ ಆಗಾಗ್ಗೆ ಇದನ್ನು ಹೇಳುತ್ತಿದ್ದುದುಂಟು. ಶ್ಯಾಮು ಮಾಮಾ ಅಂದ್ರೆ, ಅಪ್ಪನ ಒಬ್ಬರೇ ಸ್ನೇಹಿತರು, ಅಪ್ಪನ ಕೊನೆಗಾಲದವರೆಗೂ ಹಾಡಿಸಿ ಕೇಳುತ್ತಿದ್ದರು.

ದೇಶಕ್ಕೆ ಸ್ವಾತಂತ್ರ್ಯ ಬಂತಲ್ಲ. ಆ ಮೇಲೋ ಏನೋ ಶಾಲೆಗಳಲ್ಲೆಲ್ಲ ಸಂಗೀತವನ್ನು ಕಡ್ಡಾಯವಾಗಿ ಕಲಿಸಲು ಪ್ರಾರಂಭಿಸಿದರಂತಲ್ಲ, ಆಗ ಅಪ್ಪಂಗೂ ಒಂದು ಗೌರ್ನಮೆಂಟ್ ಸ್ಕೂಲಿನಲ್ಲಿ ಸಂಗೀತ ಕಲಿಸುವ ಮೇಷ್ಟ್ರ

ಕೆಲಸ ಸಿಕ್ಕಿತಂತೆ. ದಿನಕ್ಕೆ ಎರಡು ಹೊತ್ತು ಊಟ ಕಾಣುವಂತಾದದ್ದು ಆಗಲೇ ಅಂತೆ.

ವರ್ಷಾನುಗಟ್ಟಲೆ ಸಂಗೀತ ಸಾಧನೆ ಮಾಡಿ, ಸಂಗೀತದ ಬಗ್ಗೆ ಭಕ್ತಿ ಗೌರವ ಗಳನ್ನು ಹೊಂದಿದ್ದ ಅಪ್ಪನಿಗೆ, ಸಾಮೂಹಿಕವಾಗಿ ಮಕ್ಕಳ ಕೈಲಿ ಸಾಪಾ ಸಾ ಕೂಗಿಸುತ್ತ, ಅವರುಗಳ ಅಪಸ್ವರ ಕೇಳಿಸಿಕೊಳ್ಳಲು ಅದೇಷ್ಟು ಹಿಂಸೆ ಯಾಗಿತ್ತೋ! ತನ್ನ ಮಕ್ಕಳಿಗಾದರೂ ಶುದ್ಧವಾಗಿ ಸಂಗೀತ ಕಲಿಸಬೇಕೆಂಬ ಇಚ್ಛೆ ಮೂಡಿತೇನೋ, ಮನೆಯ ಮಕ್ಕಳಿಗೆ ಸಂಗೀತ ಕಲಿಸಿದರು. ಅಕ್ಕ ಕಲ್ಯಾಣಿಗಂತೂ ಸಂಗೀತದಲ್ಲಿ ತುಂಬ ಆಸಕ್ತಿ. ಅವಳ ಕಂಠಶ್ರೀಯೂ ಬಹಳ ಚೆನ್ನಿತ್ತು. ತುಂಬ ಇಂಪಾಗಿ ಹಾಡುತ್ತಿದ್ದಳು. ಮೋಹನನಿಗೆ ಆಸಕ್ತಿಯೇ ಇರಲಿಲ್ಲ. ನನಗೆ ಪೂರ್ಣ ಪಾಠವೇ ಸಿಗಲಿಲ್ಲ.

ಕಲ್ಯಾಣಿ ವಯಸ್ಸಿಗೆ ಬರುವಲ್ಲಿ ಅಪ್ಪನಿಗೆ ರಿಟೈರ್ ಆಗಿಹೋಯಿತು. ಮತ್ತೆ ಮನೆಯಲ್ಲಿ ಉಪವಾಸದ ದಿನಗಳು.

ಒಮ್ಮೆ ಕಲ್ಯಾಣಿ ರಾಮೋತ್ಸವಕ್ಕೆ ಸಂಗೀತ ಕೇಳಲಿಕ್ಕೆಂದು ಹೋಗಿದ್ದಳು. ಮುಖ್ಯ ಅತಿಥಿ ಬರುವುದು ತಡವಾಯ್ತೆಂದೋ ಏನೋ ಯಾರಾದರೂ ಹಾಡುವವರಿದ್ದರೆ ಹಾಡಿರಿ ಎಂದರಂತೆ. ಕಲ್ಯಾಣಿ ಎರಡು ದೇವರ ನಾಮ ಹಾಡಿದಳು. ಅವಳ ಕಂಠಧ್ವನಿಗೆ ಮೆಚ್ಚಿದ ಆರ್ಕೆಸ್ಟ್ರಾದ ಮುಖ್ಯಸ್ಥರೊ ಬ್ಬರು ತಮ್ಮ ಆರ್ಕೆಸ್ಟ್ರಾದಲ್ಲಿ ಹಾಡಲು ಕರೆದರು ಅಪ್ಪನಿಗೆ ಇಷ್ಟವಿರಲಿಲ್ಲ. ಆದರೆ ಮನೆಯ ಪರಿಸ್ಥಿತಿ ತುಂಬ ಕಷ್ಟಕರದ್ದಾಗಿತ್ತು. ಹಾಡಲು ಒಪ್ಪಿಗೆ ಕೊಟ್ಟರು.

ಸ್ವಲ್ಪ ದಿನ ಎಲ್ಲ ಚೆನ್ನಿತ್ತು. ಅಕ್ಕ ಹಣ ತಂದು ಕೊಡುತ್ತಿದ್ದಳು. ನಂತರ ಕೆಲವು ದಿನಗಳಲ್ಲೇ ಆರ್ಕೆಸ್ಟ್ರಾದಲ್ಲಿಯೇ ಇದ್ದ ಸಹಕಲಾವಿದನೊಬ್ಬ ಕ್ರಿಶ್ಚಿಯನ್ ಹುಡುಗನನ್ನು ಮದುವೆಯಾಗಿಬಿಟ್ಟಳು.

ತನ್ನ ಕತೆ ಹೇಳುತ್ತಿದ್ದ ಭೈರವಿ ತಟ್ಟನೆ ನಿಲ್ಲಿಸಿಬಿಟ್ಟಳು. ಕಣ್ತುಂಬ ನೀರು ತುಂಬಿಕೊಂಡಿತು. ಮತ್ತೆ ಕಣ್ಣೊರಸಿಕೊಳ್ಳುತ್ತ ಮೇಲು ಧ್ವನಿಯಲ್ಲಿ ಹೇಳತೊಡಗಿದಳು.

" ಅಕ್ಕ ಮಾಡಿದ್ದು ಅಂತಹ ಭಯಂಕರ ತಪ್ಪೇನಲ್ಲ ವಲ್ಲಿ. ಆದರೆ ಆಗ ಅಲ್ಲಿಯ ಜನ ಹೇಗೆಲ್ಲ ಮಾತನಾಡಿದರು ಅಂತ. ನಮ್ಮ ಮನೆಯವರನ್ನು ಆಡಿಕೊಳ್ಳತೊಡಗಿದರು. ಪಾಠಕ್ಕೆ ಕಳಿಸುತ್ತಿದ್ದ ಮೂರು ಹುಡುಗಿಯರನ್ನು ನಿಲ್ಲಿಸಿಬಿಟ್ಟರು. ಅಪ್ಪನಿಗೆ ಕೊರಗು ಹತ್ತಿತ್ತು. ಅಕ್ಕ ಹೋದ ನನಗೆ ವಿದ್ಯೆಯೂ ಹತ್ತಲಿಲ್ಲ. ಖಾಯಿಲೆ ಬೇರೆ, ಔಷಧ ಕೊಡಿಸಲೂ ದುಡ್ಡಿಲ್ಲ. ನಾನು ಹಠ ಹಿಡಿದು, ಅಪ್ಪನನ್ನು ಒಪ್ಪಿಸಿ ಸೇಲ್ಸ್ ಗರ್ಲ್ ಆಗಿ ಬಾಹುಸಾರ್ ಕಂಪೆನಿಯಲ್ಲಿ 60 ರೂಪಾಯಿ ಸಂಬಳಕ್ಕೆ ಸೇರಿದೆ. ನನ್ನ ತಿಂಗಳ ಸಂಬಳ ಕೈಗೆ ಬರುವಲ್ಲಿ ಅಕ್ಕ ಸತ್ತೇಹೋದಳು. ಮಕ್ಕಳನ್ನು ಸಾಕುವ ಯೋಗ್ಯತೆಯಿಲ್ಲದಾಯ್ತಲ್ಲ ಅನ್ನುವ ಕೊರಗಿನಲ್ಲಿಯೇ ಅಪ್ಪ, ಅಕ್ಕ ಸತ್ತ ನಾಲ್ಕು ತಿಂಗಳಿಗೇ ಸತ್ತುಹೋದರು . .

ಈಗ ಹೇಳು ವಲ್ಲಿ, ನನ್ನ ಪರಿಸ್ಥಿತಿ ಹೇಗಿದ್ದಿರಬೇಕು? ನೀನೇ ಹೇಳು ಮತೆ. ಸ್ವಲ್ಪ ರೂಪವೂ ಇದೆ ನನಗೆ. ಒಬ್ಬಳೇ ಇರುವುದು ಹೇಗೆ? ಹತ್ತಿರ ಸೇರಿಸುವ ಬಂಧುಗಳೂ ಇಲ್ಲ. ಹಾಸ್ಟೆಲಿಗೆ ಸೇರೋಣವೆಂದರೆ ನನಗೆ ಬರುವ 60 ರೂಪಾಯಿ ಸಂಬಳದಲ್ಲಿ ಊಟ ಹಾಕುವ ಹಾಸ್ಟೆಲ್ ಎಲ್ಲಿದೆ ಮೈಸೂರಿನಲ್ಲಿ? ಗಂಡು ಹುಡುಗರಾದರೆ ಪರ್ವಾಗಿಲ್ಲ ವಲ್ಲಿ, ಬೀದಿ ಜಗುಲಿಯಲ್ಲಿ ಕಾಲ ಕಳೆಯಬಹುದು. ಹೆಣ್ಣುಮಕ್ಕಳಿಗೆ ಹಾಗೆ ಆಗುತ್ತೆ? ಅಂತಹ ಸ್ಥಿತಿಯಲ್ಲಿದ್ದ ನನಗೆ ಸುರಕ್ಷಿತ ಬದುಕು ಸಿಕ್ಕುತ್ತೆ. ಎಂದು ನೆನಸಲಾದರೂ ಸಾಧ್ಯವಾ? ನನ್ನ ಅದೃಷ್ಟ ದೊಡ್ಡದು. ಶಾಮು ಮಾಮ ಪಾಪ, ನನ್ನ ಸಂಗತಿಯನ್ನು. ನಮ್ಮ ಮಾವನವರಿಗೆ ತಿಳಿಸಿದರಂತೆ. ನಮ್ಮ ಮಾವನವರಿಗೂ ಶಾಮು ಮಾವನಿಗೂ ದೂರದ ಸಂಬಂಧವಿತ್ತು. ಕುಂಟರಾದರೂ ನಮ್ಮ ಯಜಮಾನರಿಗೆ. ಹೆಣ್ಣು ಕೊಡುವವರಿಗೆ ಕಡಿಮೆಯಿರಲಿಲ್ಲ. ನನ್ನಂತಹ ಬಡ ಹುಡುಗಿಯನ್ನು ಹೆತ್ತ ಬಡ ತಂದೆ ತಾಯಿಗಳು ಅಪಾರ. ಆದರೆ

ನಮ್ಮ ಅತ್ತೆ-ಮಾವ ನನ್ನನ್ನು ನೋಡಿದ ದಿನವೇ ಒಪ್ಪಿ ಎಲ್ಲ ಖರ್ಚನ್ನೂ ಹಾಕೊಂಡು ಮದುವೆ ಮಾಡಿಕೊಂಡರು. ಈಗ ಹೇಳು ವಲ್ಲಿ, ನನ್ನ ಅದೃಷ್ಟ ಎಂಥದೆಂದು ! ನನ್ನವರು ನಿಜಕ್ಕೂ ತುಂಬ ಒಳ್ಳೆಯವರು ವಲ್ಲಿ ನನ್ನ ಬಗ್ಗೆ ಅದೆಷ್ಟು ಪ್ರೀತಿ ಗೊತ್ತ ? ಕುಂಟು ಎಂಬುದೊಂದು ದೊಡ್ಡ ಕೊರತೆಯಾ ಬದುಕಿಗೆ ?" ಆವೇಶದಿಂದ ವಲ್ಲಿಯ ತೋಳನ್ನು ಹಿಡಿದು ಅಲುಗಾಡಿಸಿದಳು ಭೈರವಿ,

"ಹೌದು . ಭೈರವಿ, ನೀನು ಅದೃಷ್ಟದ ಹುಡುಗಿ" ಎಂದು ಅವಳ ಭುಜ ತಟ್ಟಿದಳು ವಲ್ಲಿ. ಸಾಂತ್ವನ ಗೊಳಿಸುವಂತೆ.

೦ ೦ ೦ ೦

ಯಾತ್ರೆಗೆ ಹೋಗಿದ್ದರು ಭೈರವಿಯ ಮನೆಯವರು, ಭೈರವಿಯಿಲ್ಲದ್ದು ಬಹಳ ಬೇಸರಕಾಗಿತ್ತು ವಲ್ಲಿಗೆ. "ತೇನ ವಿನಾ ತೃಣಮಪಿ ನಚಲತಿ" ಕೇಳಿ ಅದೆಷ್ಟು ದಿನವಾಯ್ತೋ ಎಂದುಕೊಂಡಳು. ತಾನಾದರೂ ವೀಣೆಯಲ್ಲಿ ನುಡಿಸುವ ಎಂದುಕೊಂಡು ವೀಣೆಯ ಮುಂದೆ ಕುಳಿತಳು. ಒಮ್ಮೆ ನುಡಿಸಿ ದಳು ಕೂಡ, ಆದರೂ ಭೈರವಿಯ ಕಂಠಮಾಧುರ್ಯದ ಸೊಗಸು ವೀಣೆಯ ರವದಲ್ಲಿಲ್ಲ ಅನ್ನಿಸಿತು.

ತುಂಬ ದೈವಭಕ್ತಿ ಭೈರವಿಗೆ. "ಅವನ ಇಚ್ಛೆಯಿಲ್ಲದೆ ಹುಲ್ಲುಕಡ್ಡಿ ಕೂಡ ಚಲಿಸದು ವಲ್ಲಿ," ಎಂದು ಆಗಾಗ್ಗೆ ಹೇಳುತ್ತಿದ್ದಳು. ಆ ಅರ್ಥ ಹೊಮ್ಮಿಸುವ "ತೇನ ವಿನಾ...ಹಾಡುವುದಕ್ಕೆ ಬೇಸರವೇ ಆಗುತ್ತಿರಲಿಲ್ಲ" ಅದೆಷ್ಟುಸಲ ಹಾಡಿದರೂ ಭೈರವಿಗೆ . ವಲ್ಲಿಗೆ ಆ ಮಾತುಗಳಲ್ಲಿ ನಂಬಿಕೆ ಯಿಲ್ಲವಾದರೂ, ಅವಳು ಇಂಪಾಗಿ ಹಾಡುವ ಆ ಹಾಡನ್ನು ಕೇಳಲು ತುಂಬ ಇಷ್ಟ.

ಮದುವೆಯಾಗಿ ನಾಲ್ಕು ವರ್ಷಗಳಾದರೂ ಮಕ್ಕಳಾಗಲ್ಲಿಲ್ಲ ಭೈರವಿ ದಂಪತಿಗಳಿಗೆ ಯಾತ್ರೆ ಹೋಗಿ ಬಂದರೆ ಆಗುತ್ತೆ, ಎಂದು ಯಾರೋ ಶಾಸ್ತ್ರ

ಹೇಳಿದರಂತೆ. ಆದ್ದರಿಂದ ಮನೆಯವರೆಲ್ಲ ಹೋಗಿದ್ದರು. ಅದನ್ನು ನೆನಸಿ ಕೊಂಡು ನಗು ಬಂತು ವಲ್ಲಿಗೆ. ಮೂಢ ನಂಬಿಕೆಗಳಲ್ಲಿ ಅದೆಷ್ಟು ಗಾಢವಾದ ನಂಬಿಕೆ ಭೈರವಿಗೆ ಎನ್ನಿಸಿತು.

ಅನಾಥಳಾದ ಭೈರವಿಯ ಹಿಂದಲ ದಿನಗಳ ನೆನಪು ಬಂತು, ನಿಜಕ್ಕೂ ಭೈರವಿ ಹೇಳಿದಂತೆ ಅವಳ ಅದೃಷ್ಟಕ್ಕೆ ಯಾವ ಕೊರತೆಯೂ ಇಲ್ಲ ಅನ್ನಿಸಿತು ಮಗುವೊಂದು ಆಗಿಬಿಟ್ಟರೆ ಅವಳು ಇಚ್ಛಿಸಿದ ಗತಿಯಲ್ಲಿ ಸಾರ್ಥಕಗೊಂಡಂತೆ ಅವಳ ಬದುಕು ಅನ್ನಿಸಿತು. ಅವಳ ಬಗ್ಗೆ ಮರುಕ ತೋರಿದೆನಲ್ಲ, ಮರುಕ ತೋರುವಂತಹುದು ಏನಾಗಿದೆ ಅವಳಿಗೆ ಎನ್ನಿಸಿತು. ಇನೂ... ಇನೂ...ತನ್ನ ಬಗ್ಗೆ ತಾನೇ ಮರುಕಗೊಳ್ಳಬೇಕೆನ್ನಿಸಿತು. ಅಲ್ಲಿಯೇ ಗೆಳತಿಯೊಡನೆ ಅಳಿಗುಳಿ ಮಣೆ ಆಡುತ್ತಿದ್ದ ತಂಗಿ ಸುಮ್ಮಿಯುತ್ತ ದೃಷ್ಟಿ ಹೊರಳಿತು. ಬದಿಯಲ್ಲಿಯೇ ಗೋಧಿ ಆರಿಸುತ್ತ ಕುಳಿತಿದ್ದ ತಾಯಿ ಸೀನುವಿನ ನೆನಪಾಯ್ತು. ಓದಲು ಆಸಕ್ತಿಯೇ ಇಲ್ಲದ ಹುಡುಗ, ಎಲ್ಲಿಯೋ ಆಡಲಿಕ್ಕೆ ಹೋಗಿರಬೇಕೆನ್ನಿಸಿತು. ಇವರಿಗೆಲ್ಲ ಒಂದು ನೆಲೆ ಕಾಣಿಸುವಲ್ಲಿ ತಾನು ಮುದುಕಿಯಾಗಿ ಹೋಗುತ್ತೇನೆ, ಬದುಕಿನ ಅನುಭವ ಗಳೇ ದಕ್ಕುವುದಿಲ್ಲ ಅನ್ನಿಸಿತು. ತಂದೆ ತಾಯಿಯಿಲ್ಲದ ತಬ್ಬಲಿ ಭೈರವಿ ಸುರಕ್ಷಿತವಾದ, ಸುಖದ ಬದುಕನ್ನು ನಡೆಸುತ್ತಿದ್ದಾಳೆ. ತಾಯಿಯಿದ್ದೂ, ಕೈತುಂಬ ಸಂಪಾದಿಸುವ ವುದ್ಯೋಗವಿದ್ದೂ, ಸಾಕಷ್ಟು ವಿದ್ಯೆಯಿದ್ದೂ,... ಏಕೋ ಅತ್ತುಬಿಡುವ ಮನಸ್ಸಾಯ್ತು ವಲ್ಲಿಗೆ, ಅಪ್ಪ ವಿದ್ಯೆಕಲಿಸಿದ್ದೇ ತನ್ನ ಮಕ್ಕಳನ್ನು ಸಾಕಲೆಂದೇನೋ ಎನ್ನಿಸಿತು, ತನ್ನ ಬದುಕಿನ ಬಗ್ಗೆ ಎಳ್ಳಷ್ಟೂ ಕಾಳಜಿಯಿಲ್ಲದೆ ತಂದುಹಾಕಿದ್ದನ್ನು ಮಾಡಿಹಾಕುವ ಅಮ್ಮ, ಯಜಮಾನಿಕೆಯ ಪಟ್ಟ ಕೊಟ್ಟು. ನೀನು ಹೇಗೆ ಹೇಳಿದರೆ ಹಾಗೆ, ನೀನು ಹೇಳಿದಂತೆ ಮಾಡುತ್ತೇನೆ ಎನ್ನುವ ಅಮ್ಮ...ಯೋಚಿಸುತ್ತ ಅತ್ತೇಬಿಡು ವಂತಾಯ್ತು. ವೀಣೆಯನ್ನು ಮತ್ತೆ ಕೈಗೆ ತೆಗೆದುಕೊಂಡು, ಮತ್ತೆ ಮತ್ತೆ ತೇನವಿನಾ... ನುಡಿಸಿದಳು, ಮನಸ್ಸು ಶಾಂತವಾಗುವವರೆಗೂ. ಮತ್ತೆಂದು ತನ್ನ ಸ್ವಂತ ಬದುಕಿನ ಬಗ್ಗೆ ಯೋಚಿಸಬಾರದು ಎಂದು ಮನಸ್ಸಿನಲ್ಲಿಯೆ ನಿರ್ಧರಿಸಿದಳು. ಸಂಗೀತ, ಸಾಹಿತ್ಯದಲ್ಲಿ ತನ್ನ

ಮನಸ್ಸು ನೆಮ್ಮದಿ ಪಡೆಯುತ್ತಲ್ಲ ಅಷ್ಟು ಸಾಕು ಅನ್ನಿಸಿತು. ಭಾವುಕತೆಯಿಂದ ವೀಣೆಯನ್ನು ಕಣ್ಣೊತ್ತಿಕೊಂಡಳು.

೦ ೦ ೦ ೦

ಯಾತ್ರೆಯಿಂದ ಭೈರವಿಯ ಮನೆಯವರು ಹಿಂತಿರುಗಿ ಬಹಳಷ್ಟೇ ದಿನಗಳಾಗಿವೆ. ಭೈರವಿಗೆ ಮೊದಲಿನಷ್ಟು ಉತ್ಸಾಹವೇ ಇಲ್ಲ, ಮೊದಲಿನಷ್ಟು ಲವಲವಿಕೆಯಿಂದ ಮಾತೇ ಆಡುವುದಿಲ್ಲ. ಏನೋ ಆಗಿದೆ ಭೈರವಿಗೆ ಎಂದು ವಲ್ಲಿಗೆ ತಿಳಿಯಿತಾದರೂ, ಕೇಳಿದರೆ ಏನೆಂದುಕೊಳ್ಳುತ್ತಾಳೋ ಎಂದು ಸುಮ್ಮನೆ ಇದ್ದಳು.

ಒಮ್ಮೆ ಹಳೆಯ 'ಕಸ್ತೂರಿ' ಯೊಂದನ್ನು ಓದಲು ತೆಗೆದುಕೊಂಡಿದ್ದು ಹಿಂತಿರುಗಿಸುವಾಗ 'ಯೂಥನೇಜಿಯ' ಬಗೆಗೆ ಇದರಲ್ಲಿ ಒಂದು ಲೇಖನ ಬಂದಿದೆಯಲ್ಲ ಓದಿದೆಯಾ? ಎಂದು ವಲ್ಲಿಯನ್ನು ಕೇಳಿದಳು.

'ಹೂಂ, ವಾಸಿ ಆಗ್ದೇನೇ ಇರೋ ಖಾಯಿಲೇಲಿ ನರಳುವ ರೋಗಿಯನ್ನು, ದಯೆಯಿಂದ ಸಾಯಿಸುವುದು ಎಂದರ್ಥ, ಜಪಾನಿನಲ್ಲಿ ಅದಕ್ಕೆ ಕಾನೂನಿನ ಬೆಂಬಲವಿದೆಯಂತೆ. ಅದು ಸರಿ, ಆ ಲೇಖನ ನಿನ್ನ ಗಮನ ಸೆಳೆದಿದ್ದು ಹೇಗೆ ?' ಎಂದಳು ವಲ್ಲಿ, ಕಥೆ, ಕಾದಂಬರಿಗಳನ್ನು ಮಾತ್ರ ಓದುತ್ತಿದ್ದ ಭೈರವಿಯ ಆಸಕ್ತಿಯನ್ನು ಆ ಲೇಖನ ಸೆಳೆದದ್ದು ಹೇಗೆ ಎಂದು ಅಚ್ಚರಿ ಪಡುತ್ತ.

'ಮಾನಸಿಕವಾಗಿ ನೋವು ಅನುಭವಿಸುವವರಿಗೂ. ಅಂತಹ ಮರ್ಸಿ ಕಿಲ್ಲಿಂಗ್‌ಗೆ ಕಾನೂನಿನ ಬೆಂಬಲ ಇದ್ರೆ, ಎಷ್ಟು ಚೆನ್ನ ಅಲ್ಲ!" ಎಂದಳು ಎತ್ತಲೋ ದೃಷ್ಟಿ ನೆಟ್ಟು ಭೈರವಿ.

ಏಕೆ ಹೀಗೆ ಮಾತನಾಡುತ್ತಿದ್ದಾಳೆ ಇವಳು ಎನ್ನಿಸಿತು ವಲ್ಲಿಗೆ, ಅವಳಿಗೆ ಬೇರೇನೋ ಹೇಳಲಿಕ್ಕಿದೆ, ಆ ಮಾತುಗಳು ಹೊರಬರಲು

ಕಷ್ಟಪಡುತ್ತಿವೆ, ಅದಕ್ಕೇ ಸಂಬಂಧ ವಿಲ್ಲದ ಏನನ್ನೋ ಹೇಳುತ್ತೀದ್ದಾಳೆನ್ನಿಸಿತು.

"ಯಾಕೆ ಭೈರವಿ. ಏನೇನೋ ಮಾತಾಡ್ತಿದ್ದೀಯ" ಈದಿನ ಎಂದಳು ಕಕ್ಕುಲತೆಯಿಂದ, ವಲ್ಲಿ.

ಬಿಕ್ಕಿಬಿಕ್ಕಿ ಅಳತೊಡಗಿದಳು ಭೈರವಿ.ಬಹಳ ದಿನಗಳಿಂದ ತಡೆದಿಟ್ಟಿದ್ದ ಅಳುವೆನ್ನಿಸಿತು. ಕೊನೆಗೊಮ್ಮೆ, ಅಳುವನ್ನು ಸ್ಥಿಮಿತಕ್ಕೆ ತಂದುಕೊಂಡು ಹೇಳತೊಡಗಿದಳು.

"ನಮ್ಮ ಅತ್ತೆಯ ಬಗ್ಗೆ, ಂಗಡನ ಬಗ್ಗೆ, ತುಂಬಾ ಹೊಗಳಿದ್ದೆ ನಿನ್ನ ಬಳಿ. ಅವರ ಬಗೆಗೇ ಬೇರೆ ರೀತಿ ಈಗ ಹೇಳಿದರೆ ಏನೆಂದುಕೊಳ್ಳುತ್ತೀಯೋ ಆದ್ರೂ ನಿನ್ನ ಬಳಿ ಹೇಳದಿದ್ದರೆ ನನಗಾಗುವುದಿಲ್ಲ. ಮನಷ್ಯರು ಹೇಗೆ ಬದಲಾಯಿಸುತ್ತಾರೆ ನೋಡು ವಲ್ಲಿ. ನನಗೆ ಮಗುವಾಗಲಿಲ್ಲ ಅಂತ ನನ್ನನ್ನು ಹೀನಾಮಾನವಾಗಿ ಬಯ್ತಾರೆ. ದರಿದ್ರ ಮುಂಡೇದು" ಅಂತ ಅತ್ತೆ ದಿನಾ ಬಯ್ತಾರೆ. ನನಗೆ ದೇವ್ರು ಮೇಲೆ ನಿಜವಾದ ಭಕ್ತಿಯಿಲ್ಲವಂತೆ. ಅದಕ್ಕೇ ಯಾತ್ರೆ ಮಾಡಿದ್ರೂ ಮಕ್ಳು ಆಗ್ಲಿಲ್ವಂತೆ, ಮಾವಂಗೆ ನನ್ನ ನೆರಳು ಕಂಡ್ರೆ ಆಗೋಲ್ಲ. ಬಂಜೆ ಅಂತ ನನ್ನ ಕೈಲಿ ನೀರೂ ಕೂಡ ಕುಡಿಯೊಲ್ಲ. ಇವ್ರೂ ........ಇವ್ರೂ........ಅಮ್ಮನ ಜೊತೆ ಸೇರಿ ನನ್ನ ಬಯ್ತಾರೆ." ಮತ್ತೆ ಬಿಕ್ಕಿದಳು.

ಅವಳನ್ನು ಸಾಂತ್ವನಗೊಳಿಸುತ್ತ, "ಡಾಕ್ಟರ ಹತ್ತಿರ ತೋರಿಸ ಬೇಕಿತ್ತು,ಯ ತ್ರೆ ಹೋಗೋಬದಲು" ಎಂದಳು ವಲ್ಲಿ,

"ಡಾಕ್ಟರ್ ಶಾಂತ ಹತ್ತಿರ ಹೋಗಿದ್ದೆ ವಲ್ಲಿ, ನ್ನನಲ್ಲಿ ಯಾವ ಕೊರತೆಯು ಇಲ್ಲವಂತೆ. ಇವರಿಗೆ ಪೋಲಿಯೋ ಬಂದಿದ್ದ ಬಗ್ಗೆ ತಿಳಿಸಿದೆ. ಅವರನ್ನು ಚೆಕ್ ಅಪ್ ಮಾಡಿಸಲು ಹೇಳು ಅಂದರು ಶಾಂತ. ಇವರಿಗೆ

ಹೇಳಿದರೆ ಒಲ್ಲೆ ಎನ್ನುತ್ತಾರೆ. ಒಮ್ಮೆ ತೋರಿಸಿ, ಎಂಥದಾದರೂ ಕೊರತೆಯಿದ್ದರೆ ವಾಸಿ ಮಾಡಿಕೊಳ್ಳಬಾರದಾ? ನನ್ನನ್ನು ಸುಮ್ಮನೆ ಬಯ್ದರೆ ನಾನೇನು ಮಾಡಲಿ? ಮನೆಯಲ್ಲಿ ಉಸಿರು ಕಟ್ಟಿದ ವಾತಾವರಣ, ಸತ್ತುಹೋಗೋಣ ಅನ್ನಿ ಸುತ್ತೆ" ಹೇಳುತ್ತಾ ಮತ್ತೆ ಬಿಕ್ಕಿದಳು.

ಪಾಪ ಅನ್ನಿಸಿತು ವಲ್ಲಿಗೆ. ಅವಳ ಅದೃಷ್ಟ ಚೆನ್ನ ಎಂದುಕೊಂಡೆ ನಲ್ಲ, ಅವಳಿರುವ ಬಂಧನದ ಬದುಕಿಗಿಂತ ಸಮಸ್ಯೆಯಿಲ್ಲದ ಶಾಂತವಾದ ತನ್ನ ಬದುಕು ಸುಖಕರ ಅನ್ನಿಸಿತು. ಏನು ಸಾಂತ್ವನ ಹೇಳಬೇಕೆಂದೇ ತೋರದಾಯ್ತು

೦ ೦ ೦ ೦

ಜಯನಗರದಲ್ಲಿ ಹೊಸ ಮನೆ ಕಟ್ಟಿಸಿಕೊಂಡು ಹೊರಟು ಹೋಗಿದ್ದರು. ಭೈರವಿಯ ಮನೆಯವರು. ಐದಾರು ವರ್ಷಗಳೇ ಆಗಿ ಹೋಗಿತ್ತು, ಅವರು ಹೊರಟು ಹೋಗಿ. "ಪಾಪ, ಭೈರವಿ ಹೇಗಿದ್ದಾಳೋ. ಬರುತ್ತಿರುತ್ತೇನೆ ಆಗಾಗ್ಗೆ ಎಂದವಳು ಬರಲೂ ಇಲ್ಲ" ಎಂದು ಆಗಾಗ್ಗೆ ನೆನೆಸಿಕೊಳ್ಳುತ್ತಾಳೆ ವಲ್ಲಿ.

ಒಮ್ಮೆ ಬೇಡವೆಂದರೂ ತಮ್ಮ ಶೀನುವಿನ ಬಲವಂತಕ್ಕೆ ತಮಿಳು ಚಿತ್ರವೊಂದಕ್ಕೆ ಹೋಗಿದ್ದಳು. ತಾನು ಕುಳಿತ ಸಾಲುಗಳ ಮುಂದಿನ ನಾಲ್ಕನೆಯ ಸಾಲಿನ ಸೀಟೊಂದರಲ್ಲಿ ಭೈರವಿಯಂತಹ ಹುಡುಗಿ! ಅಚ್ಚರಿಯಿಂದ ನೋಡಿಬರಲು ಹೋದಳು, ಭೈರವಿಯೇ!

ಭೈರವಿಗೂ ವಲ್ಲಿಯನ್ನು ನೋಡಿ ಬಹಳ ಸಂತೋಷವಾಯ್ತು. ಭೈರವಿಯ ತೊಡೆಯ ಮೇಲೆ ೩-೪ ವರ್ಷದ ಗಂಡು ಮಗು, ಅಚ್ಚರಿಯಿಂದ ಕಣ್ಣರಳಿಸಿದಳು ವಲ್ಲಿ. ಪಕ್ಕದಲ್ಲಿ ಕುಳಿತಿದ್ದ ಹುಡುಗನನ್ನು ವಲ್ಲಿಯ ಸೀಟಿಗೆ ಕಳುಹಿಸಿ, ಅಲ್ಲಿ ಕುಳಿತು ಕೊಳ್ಳುವಂತೆ ಹೇಳುತ್ತ "ಅವನು ಶಾಮು ಮಾವನ ಮಗ, ಮೊದಲನೆಯ ವರ್ಷದ ಬಿ. ಇ.

ನಮ್ಮ ಮನೆಯಲ್ಲಿಯೇ ಇದ್ದು ಓದುತ್ತಿದ್ದಾನೆ. ನೀನು ಹೇಗಿದ್ದಿ? ಅಮ್ಮ ಹೇಗಿದ್ದಾರೆ?" ಎಂದು ಚಟಪಟನೆ ಮಾತನಾಡಿದಳು.

"ಎಲ್ಲ ಚೆನ್ನಾಗಿದ್ದಾರೆ, ನೀನು ಹೇಗಿದ್ದೀ? ಮಗು..."

"ನೀನೆ ಹೇಳು ನನ್ನ ಮಗ ಹೇಗಿದ್ದಾನೆ ಅಂತ!"

"ಚೆನ್ನಾಗಿದ್ದಾನೆ, ಎಲ್ಲ ನಿನ್ನ ಯಜಮಾನರ ತರಹ ಅಲ್ಲ?" ಎನ್ನುತ್ತ ಮಗುವಿನ ಕೆನ್ನೆ ತಟ್ಟಿದಳು ವಲ್ಲಿ.

ಖಂಡಿತ ಅವರ ತರಹ ಇಲ್ಲ" ಎಂದು ನಕ್ಕಳು ಭೈರವಿ.

"ಮಗನ ಹೆಸರು ಏನು ಗೊತ್ತ? ಶ್ಯಾಮಸುಂದರ ಅಂತ. ಶ್ಯಾಮು ಮಾಮನ ಪಾತ್ರ ನನ್ನ ಜೀವನದಲ್ಲಿ ಬಹಳ. ಅದಕ್ಕೇ ಅವರ ಹೆಸರಿಟ್ಟೆ. ಒಳ್ಳೇ ಸಂಗೀತಗಾರನನ್ನಾಗಿ ಮಾಡ್ತೀನಿ. ಸಂಗೀತ ಅಂದ್ರೆ ಎಷ್ಟು ಇಷ್ಟ ನಿನಗೆ ಅಂತ..." ಎಂದು ಮಗುವಿಗೆ ಮುತ್ತಿಟ್ಟಳು ಭೈರವಿ.

"ಮನೆ ಕಡೆ ಬರ್ಲೇ ಇಲ್ಲ. ನಿನ್ನ ಹಾಡು ಕೇಳಿ ಎಷ್ಟು ದಿನವಾಯ್ತು?" ಎನ್ನುತ್ತಿದ್ದಂತೆ, ನಗುತ್ತಿದ್ದ ಭೈರವಿಯ ಮುಖ ಗಂಭೀರವಾದುದನ್ನು ಗಮನಿಸಿ "ಏನಾಯ್ತು" ಎಂದಳು.

"ಏನಿಲ್ಲ, ಖಂಡಿತ ನಿಮ್ಮ ಮನೆಗೆ ಬರ್ತೀನಿ. ಹಾಡ್ತೀನಿ. ನಿನ್ನ ಜೊತೆ ತುಂಬ ಮಾತನಾಡಬೇಕು ವಲ್ಲಿ. ನಾನು ಮಾಡಿದ ಕೆಲವು ಸಂಗತಿಗಳನ್ನು ನಿನ್ನಲ್ಲಿ ಹೇಳಬೇಕು. ನೀನೇನು ಹೇಳುತ್ತೀಯೋ ಗೊತ್ತಿಲ್ಲ. ನಮ್ಮ ಯಾವ ಕ್ರಿಯೆಗಳೂ, ನಮ್ಮ ಇಚ್ಛೆಯಿಂದ ನಡೆಯೋಲ್ಲ ಅನ್ನೋ ಸಂಗತಿ ಬಗ್ಗೆ ವಿಚಿತ್ರವಾದ ದ್ವಂದ್ವ ನನ್ನಲ್ಲಿ. ನಮ್ಮ ಕೆಟ್ಟ ಕೆಲಸ, ಒಳ್ಳೆಯ ಕೆಲಸ ಎಲ್ಲದಕ್ಕೂ ಅವನೇ ಜವಾಬ್ದಾರ ಅಲ್ವಾ ವಲ್ಲಿ? "ತೇನ ವಿನಾ ತೃಣಮಪಿ ನ ಚಲತಿ" ಅನ್ನುವುದರಲ್ಲಿ....ಆ ಹಾಡು ನಿಂಗೆ ತುಂಬ ಇಷ್ಟ ಅಲ್ಲ? ಒಂದಿನ ಬಂದು ಹಾಡ್ತೀನಿ. ಈಗಲ್ಲ ಯಾವತ್ತಾದರೂ ಒಂದು ದಿನ, ನನ್ನ ಮಗ ದೊಡ್ಡವನಾದ ಮೇಲೆ"

"ಮನೆಯಲ್ಲಿ ಹೇಗೆ?"

"ಎಲ್ಲರಿಗೂ ನನ್ನ ಕಂಡ್ರೆ ತುಂಬ ಪ್ರೀತಿ. ಅತ್ತೆ, ಮಾವ ತುಂಬ ಪ್ರೀತಿಸ್ತಾರೆ. ಇವರಿಗೆ ನನ್ನ ಮೇಲೆ ತುಂಬ ಗೌರವ. ಅವರ ವಂಶದ ಹೆಸರಿಗೆ ಮಗನನ್ನು ಕೊಟ್ಟಿದ್ದೇನಲ್ಲ" ಹೇಳುತ್ತ ಕಣ್ಣಂಚಿನಲ್ಲಿ ನಿಂತ ಹನಿಯನ್ನು ಕರ್‌ಚೀಫ್‌ನಿಂದ ಒರೆಸಿಕೊಂಡಳು, ಅವಳ ಒಗಟಿನ ಮಾತುಗಳನ್ನೇ ಮೆಲುಕು ಹಾಕುತ್ತ, ಮಗುವನ್ನು ಎತ್ತಿಕೊಂಡಳು ವಲ್ಲಿ. ಅಷ್ಟರಲ್ಲಿ ಚಿತ್ರ ಪ್ರಾರಂಭವಾಯ್ತು.



# ಇಜ಼ೊ್ಜೇಡಿ

—ಮಾಲತಿ ರಾಮದಾಸ (ಶಾರದೆ)

ಮೈಸೂರಿನಿಂದ ಕೃಷ್ಣರಾಜ ಸಾಗರಕ್ಕೆ ಹೋಗುವ ದಾರಿಯಲ್ಲಿ ಲಲಿತ ನಿಧಾನವಾಗಿ ಕಾರನ್ನು ಚಲಾಯಿಸುತ್ತಿದ್ದಳು. ಸಾಯಂಕಾಲದ ಸಮಯ. ಹೆದ್ದಾರಿಯ ಅಂಚಿನಲ್ಲಿದ್ದ ಅನೇಕ ಕಾರ್ಖಾನೆಗಳು ಆಗ ತಾನೇ ಬಿಟ್ಟಿದ್ದರಿಂದ ರಸ್ತೆಯಲ್ಲಿ ಅನೇಕ ಜನ ಹಾಗೂ ಸೈಕಲ್ಲುಗಳು ಲಲಿತಳಿಗೆ ಅಡ್ಡಿ ಮಾಡು ತ್ತಿದ್ದವು. ಮೊದಲೇ ಸ್ವಲ್ಪ ಅಧೀರಳಾಗಿದ್ದ ಲಲಿತ ಕಾರನ್ನು ನಡೆಸಲು ಇನ್ನು ಕಷ್ಟಪಡಬೇಕಾಯಿತು. ಮುಂದೆ ಮುಂದೆ ಹೋದಂತೆ ಜನ ಸಂದಣಿಯೂ ಕಡಿಮೆಯಾಯಿತು, ಬೀಸಲಾರಂಭಿಸಿದ್ದ ತಂಗಾಳಿಯೂ ಲಲಿತಳಿಗೆ ಸಾಂತ್ವನ ನೀಡಿತು. ಕಳೆದ ಇಪ್ಪತ್ತು ವರುಷಗಳಿಂದ ಅವಳು ಕಾರನ್ನು ನಡೆಸುತ್ತಿದ್ದಳು. ಎಷ್ಟೋ ಬಾರಿ ಬೃಂದಾವನಕ್ಕೆ ಬಂದೂ ಇದ್ದಳು. ಆದರೆ ಎಂದೂ ಅವಳಿಗೆ ಈ ರೀತಿಯ ಅನುಭವವಾಗಿರಲಿಲ್ಲ. ಒಂದು ರೀತಿಯ ಕಸಿವಿಸಿ ಅವಳನ್ನು ಅಧೀರಳಾಗಿ ಮಾಡಿತ್ತು.

ಲಲಿತ ಹೋಗುತ್ತಿದ್ದುದು ಬೃಂದಾವನದಲ್ಲಿ ಒಂದು ದಿನ ಇದ್ದು ಬರುವುದಕ್ಕಾಗಿ. ಮರುದಿನ ಅವಳ ಮತ್ತು ಮೋಹನನ ಮದುವೆಯ ಇಪ್ಪತ್ತೈದನೆಯ ವಾರ್ಷಿಕೋತ್ಸವ. ಮದುವೆಯ ದಿನವೇ ಇಬ್ಬರೂ ಬಂದು ಅಲ್ಲಿ ಉಳಿದುಕೊಂಡಿದ್ದರು. ಆ ಸಮಯದ ನೆನಪಾದಂತೆ ಎದೆ ಯಲ್ಲಿ ಮುಳ್ಳು ಒತ್ತಿದ ಅನುಭವವಾಯಿತು ಲಲಿತಳಿಗೆ. 'ಛೆ–ನಾನು ಬರಲೇಬಾರದಾಗಿತ್ತು' ಎಂದುಕೊಳ್ಳುವ ವೇಳೆಗೆ ಲಲಿತಳ ಕಾರು ಬೃಂದಾ ವನಕ್ಕೆ ಬಂದುಬಿಟ್ಟಿತು. ಹೋಟೆಲ್ ಬೃಂದಾವನದಲ್ಲಿ ಅವಳಿಗಾಗಿ ಒಂದು ರೂಮನ್ನು ಮುಂದೆಯೇ ಕಾದಿರಿಸಲಾಗಿತ್ತು. ಕಾರನ್ನು ಅದರ ಜಾಗದಲ್ಲಿ

ನಿಲ್ಲಿಸಿ ಕೈಯಲ್ಲಿ ಒಂದು ಸಣ್ಣ ಬ್ರೀಫ್ ಕೇಸನ್ನು ಹಿಡಿದು ಲಲಿತ ಹೋಟ
ಲಿನ ಮೆಟ್ಟಿಲು ಹತ್ತಿದಳು.

"ನಾನು ಡಾಕ್ಟರ್ ಲಲಿತಾ. ಒಂದು ರೂಮು **book** ಮಾಡಿದ್ದೆ–" ಎಂದಳು.

"ಹೌದು–ಬನ್ನಿ." ಎಂದು ಆ ಹುಡುಗಿ ವಿನಯದಿಂದ ಸ್ವಾಗತಿಸಿದಳು. ರಿಜಿಸ್ಟರನ್ನು ಲಲಿತಳ ಮುಂದೆ ಇಟ್ಟು ಒಂದು ಬೀಗದ ಕೈಯನ್ನು ಎತ್ತಿಕೊಂಡಳು.

ನನ್ನ ಹೆಸರು, ಸಮಯ–ದಿನಾಂಕ ಬರೆಯುತ್ತಿದ್ದ ಲಲಿತಳಿಗೆ ಥಟ್ಟನೆ ಒಂದು ವಿಷಯ ನೆನಪಾಯಿತು.

"ನಾನು ಕಾಗದದಲ್ಲಿ 12ನೇ ರೂಮೇ ಬೇಕೂಂತ ಬರೆದಿದ್ದೆ..." ಆ ಹುಡುಗಿ ಮತ್ತೆ ರಿಜಿಸ್ಟರಿನ ಮೇಲೆ ಸರಸರನೆ ಕಣ್ಣೋಡಿಸಿದಳು.

"ಸ್ಸಾರೀ ಮೇಡಮ್– ಆ ರೂಮು ನಿಮಗಿಂತ ಮುಂಚೆ ಬೇರೆಯವರಿಗೆ **book** ಆಗಿದೆ–"

ಲಲಿತಳ ಕಿವಿ ನಿಮಿರಿತು–" ಬೇರೆಯವರು ಎಂದರೆ...ಮೋಹನನಲ್ಲದೆ ಇನ್ಯಾರು...."

"ಅವರ ಹೆಸರು ಹೇಳುತ್ತೀರಾ?–"

"ಎಂ. ಆರ್. ಮೋಹನಾ ಅಂಥ ಬರೆದಿದೆ."

ಲಲಿತಳ ಮೈ ಮೆಲ್ಲನೆ ನಡುಗಿತು, 'ಮೋಹನ್ ಹಾಗಾದ್ರೆ

ಹಿಂದಿನದನ್ನು ಮರೆತಿಲ್ಲ—ಹೇಗೆ ಮರೆಯಲು ಸಾಧ್ಯ? ನಾನು ಮರೆತ್ತಿದ್ದೇನಾ—'

"ಹೋಗೋಣವಾ ಮೇಡಮ್?" ದನಿಯನ್ನು ಕೇಳಿ ಲಲಿತ ಎಚ್ಚತ್ತು ಪಕ್ಕಕ್ಕೆ ತಿರುಗಿದಾಗ ಒಬ್ಬ ಹುಡುಗ ಲಲಿತಳ ಪೆಟ್ಟಿಗೆಯನ್ನು ಹಿಡಿದು ನಿಂತಿದ್ದ. ಲಲಿತ ಅವನ ಜೊತೆಯಲ್ಲಿ ಹೋದಳು. ಮೊದಲನೆಯ ಮಹಡಿಯಲ್ಲೇ ಅವಳ ರೂಮು. ಒಂದು ಮಂಚ, ಸೋಫಾ, ಡ್ರೆಸ್ಸಿಂಗ್ ಟೇಬಲ್‌ಗಳಿಂದ ಸಜ್ಜಾಗಿತ್ತು. ಗಾಳಿ ಬೀಸುತ್ತಿದ್ದರೂ ಲಲಿತ ಮೊದಲು ಫ್ಯಾನಿನ ಸ್ವಿಚ್ ಹಾಕಿದಳು, ಹುಡುಗ ನೀರನ್ನು ತುಂಬಿಸಿಟ್ಟು 'ಏನಾದರೂ ಬೇಕಾದರೆ ಬೆಲ್ ಮಾಡಿ' ಎಂದು ಹೇಳಿ ಹೊರಟು ಹೋದ.

ರೂಮಿನ ವಾತಾವರಣ ಯಾಕೋ ಅಸಹನೀಯವೆನಿಸಿ ಲಲಿತ ಬಾಲ್ಕನಿಯಲ್ಲಿ ನಿಂತಳು. ಬೃಂದಾವನ ಮೇಲಿನಿಂದ ರಮಣೀಯವಾಗಿ ಕಾಣಿಸುತ್ತಿತ್ತು. ಕೆಳಗಿಳಿದು ಕಾರಂಜಿಗಳ ಬಳಿ ಓಡಾಡಿ ನೀರಲ್ಲಿ ನೆನೆಯಲು ಲಲಿತೆಯ ಮನ ಬಯಸಿತು. ಆದರೆ ಅದನ್ನು ಕಾರ್ಯಗತ ಮಾಡಲು ಅವಳಿಗೆ ಧೈರ್ಯ ಬರಲಿಲ್ಲ. ಅವಳೀಗ ಬರೀ ಒಬ್ಬ ಹೆಂಗಸಲ್ಲ. ಮೈಸೂರಿನ ಒಬ್ಬ ಹೆಸರಾಂತ ಡಾಕ್ಟರ್. ಹಾಗೆ ಒಬ್ಬಳೇ ತಿರುಗಾಡಿದರೆ ನೋಡಿದವರು ಏನೆನ್ನಬಹುದು. ಅವಳನ್ನು ಎಷ್ಟು ಜನ ಗುರುತು ಹಿಡಿಯುತ್ತಾರೋ ಏನೋ.

ಲಲಿತ ಕಾಲುಗಳು ನೋಯುವ ತನಕ ಅಲ್ಲೇ ನಿಂತಿದ್ದಳು. ಒಳಗೆ ಬಂದಾಗ ರಾತ್ರಿ 9 ಗಂಟೆ. ಏನೇನೋ ಚಿಂತೆಯಲ್ಲಿ ಊಟದ ಕಡೆ ಗಮನ ಹೋಗಲಿಲ್ಲ. ಬೃಂದಾವನದ ವಾತಾವರಣ ಅವಳಿಗೆ ಪ್ರತಿ ಕ್ಷಣವೂ ತಮ್ಮ ಮಧುಚಂದ್ರದ ನೆನಪನ್ನು ತರುತ್ತಿತ್ತು. ತನ್ನ ನೆನಪಿನ ಸಾಮರ್ಥ್ಯವನ್ನು ತಾನೇ ಶಪಿಸುತ್ತಾ ಲಲಿತ ತನ್ನ ಪರ್ಸಿನಲ್ಲಿದ್ದ ನಿದ್ದೆ ಗುಳಿಗೆಯನ್ನು ಹುಡುಕಿ ತೆಗೆದು ನೀರಿನ ಜೊತೆ ನುಂಗಿದಳು, ಆಯಾಸವಾಗಿದ್ದ ಮೈ–ಮನಸ್ಸಿಗೆ ನಿದ್ರೆ ತುಂಬಾ ಅವಶ್ಯವಾಗಿತ್ತು.

ಇಪ್ಪತ್ತೈದು ವರ್ಷಗಳ ಹಿಂದೆ ಲಲಿತ ಆಗತಾನೇ ಹೌಸ್ ಸರ್ಜನ್ ಕೋರ್ಸ್ ಮುಗಿಸಿ ಯಾವುದಾದರೂ ನರ್ಸಿಂಗ್ ಹೋಮಿನಲ್ಲಿ ಕೆಲಸ ಹುಡುಕುತ್ತಿದ್ದಳು. ಮೋಹನ IPS ಮುಗಿಸಿ ನಾಲ್ಕು ವರ್ಷಗಳಾಗಿತ್ತು. ಗುಲ್ಬರ್ಗದಲ್ಲಿ ಎಸ್.ಪಿ. ಆಗಿ ಕೆಲಸ ಮಾಡುತ್ತಿದ್ದ. ಇಬ್ಬರಿಗೂ ಮದುವೆಗೆ ಅಂತಹ ಆತುರವೇನೂ ಇರಲಿಲ್ಲ. ಆದರೆ ಮಕ್ಕಳ ಮದುವೆಗಾಗಿ ತಂದೆ ತಾಯಿಗಳು ಕಾದು ಕುಳಿತಿದ್ದರು. ಯಾವುದೋ ಒಂದು ಕಾಲದಲ್ಲಿ ಇಬ್ಬರ ತಂದೆಯರೂ ಸ್ನೇಹಿತರಾಗಿದ್ದರಂತೆ. "ನನ್ನ ಹಳೇ ಸ್ನೇಹಿತನ ಮಗಳು. ನಿನಗೆ ಇಷ್ಟವಾದರೆ ಮಾಡಿಕೊ..."ಎಂದು ಮೋಹನನ ತಂದೆ ಹೇಳಿದರು. ತಂದೆಯ ಕೋರಿಕೆಯನ್ನು ಈಡೇರಿಸಲು ಹುಡುಗಿಯ ಮನೆಗೆ ಬಂದ ಮೋಹನ ಲಲಿತೆಯ ಮೈಮಾಟಕ್ಕೆ—ಆಕರ್ಷಕ ಕಣ್ಣುಗಳಿಗೆ, ಗೌರವರ್ಣಕ್ಕೆ ಪೂರ್ತಿ ಮಾರುಹೋದ. ಲಲಿತಳ ಪರಿಸ್ಥಿತಿಯು ಹೆಚ್ಚು ಕಡಿಮೆ ಹೀಗೇ ಇತ್ತು. ಮೋಹನನ ದಿಟ್ಟ ನಿಲುವು—ಪೋಲೀಸ್ ಠೀವಿ—ತೀಕ್ಷ್ಣ ದೃಷ್ಟಿ ಅವಳನ್ನು ಆಕರ್ಷಿಸಿದ್ದವು. ಬೇಡ ಎನ್ನುವುದಕ್ಕೆ ಯಾವ ಕಾರಣವೂ ಅವಳಿಗೆ ಸಿಗಲಿಲ್ಲ. ಆದರೆ ತನ್ನ ಕರ್ತವ್ಯ ಪ್ರಜ್ಞೆಯನ್ನು ಅವಳು ಕಳೆದುಕೊಳ್ಳಲಿಲ್ಲ. "ನಾನು ಡಾಕ್ಟರು-ಮುಂದೆ ಕೂಡ ಪ್ರಾಕ್ಟೀಸ್ ಮಾಡುತ್ತೇನೆ. ಅದಕ್ಕೆ ಅಡ್ಡಿ ಇರಬಾರದು" ಎಂದು ಷರತ್ತು ಹಾಕಿದಳು. ಮೋಹನ ಸ್ವಲ್ಪ ತಬ್ಬಿಬ್ಬಾದ-ಇದುವರೆವಿಗೆ ಅವಳು ಡಾಕ್ಟರು ಎನ್ನುವುದನ್ನು ಅವನು ಸೀರಿಯಸ್ಸಾಗಿ ಯೋಚಿಸಿರಲಿಲ್ಲ. ಮದುವೆಯಾದ ಮೇಲೆ ಹೆಂಡತಿ ಕೆಲಸ ಮಾಡುವುದು ಅವನಿಗೆ ಅಷ್ಟೇನೂ ಇಷ್ಟವಿಲ್ಲದ ವಿಷಯ. ಈಗ ಲಲಿತಳನ್ನು ಮೆಚ್ಚಿಕೊಂಡಾಗಿದ್ದರಿಂದ ಬೇಡ ಎನ್ನಲು ಬಾಯೂ ಬರಲಿಲ್ಲ. ಹೇಗೂ ತನಗೆ ವರ್ಗವಾಗುವ ಕೆಲಸ. ಮೂರು ವರ್ಷಕ್ಕೊಮ್ಮೆ ಜಾಗ ಬದಲಿಸಬೇಕಾಗುತ್ತದೆ. ಅಷ್ಟರಲ್ಲಿ ಇವಳು ಎಸ್ಟಾಬ್ಲಿಶ್ ಆಗಿಬಿಡುತ್ತಾಳೆಯೇ—ಮನೆಯಲ್ಲೇ ಬೇಕಾದರೆ ಬೋರ್ಡ್ ಹಾಕಲಿ—ಎಂತೆಂತಹ ಡಾಕ್ಟರುಗಳೇ ಮಣ್ಣು ತಿನ್ನುತ್ತಿರುವಾಗ ಇವಳದೇನು ಮಹಾ ಎನ್ನಿಸಿತು ಅವನಿಗೆ.

"ನಾನು ಸರ್ಕಾರಿ ಕೆಲಸದಲ್ಲಿರುವವನು—ಬೇಗ ಬೇಗ ವರ್ಗವಾಗತ್ತದೆ,

ಒಂದೇ ಕಡೆ ಇರುತ್ತೇನೆ ಎಂದು ಹೇಳದೆ ನನ್ನ ಜೊತೆ ಬರುತ್ತಿದ್ದರೆ ಸಾಕು. ಮನೆಯಲ್ಲೇ ಪ್ರಾಕ್ಟೀಸ್ ಮಾಡಿಕೊಳ್ಳಲಿ" ಎಂದು ಉದಾರವಾಗಿ ಹೇಳಿದ.

"ಅಷ್ಟಾದರೆ ಸಾಕು. ಡಾಕ್ಟರಾದ ಮಾತ್ರಕ್ಕೆ ನಾನೇನು ಹೆಣ್ಣಲ್ಲವೆ? ಮನೆ, ಮಕ್ಕಳು, ಗಂಡ, ಸಂಸಾರ ಎಲ್ಲಾ ನನಗೂ ಬೇಕು." ಎಂದಳು ಲಲಿತ,–ಹತ್ತಿರದ ಮುಹೂರ್ತದಲ್ಲಿಯೇ ಮದುವೆ ನಡೆದುಹೋಯಿತು. ಅದೇ ದಿನವೇ ಮೋಹನ ಲಲಿತೆಯೊಂದಿಗೆ ಮಧುಚಂದ್ರಕ್ಕೆ ಹೊರಟ. ಬೃಂದಾವನದ ರಮಣೀಯ ವಾತಾವರಣದಲ್ಲಿ ರಾಧಾ ಮಾಧವರಾಗಿ ಇಬ್ಬರೂ ಯೌವ್ವನದ ನಿಶೆಯಲ್ಲಿ ತೇಲಾಡಿದರು. ಒಂದು ಕ್ಷಣ ಕೂಡ ಒಬ್ಬರನ್ನೊಬ್ಬರು ಬಿಟ್ಟಿರಲಾರದಷ್ಟು ಇಬ್ಬರೂ ಒಬ್ಬರನ್ನೊಬ್ಬರು ಹಚ್ಚಿಕೊಂಡರು. ಮೈಸೂರಿನ ಸುತ್ತ ಮುತ್ತ ಅವರು ಓಡಾಡದ ಜಾಗವೇ ಇರಲಿಲ್ಲ—ನೋಡದ ನೋಟವೇ ಇರಲಿಲ್ಲ.

ಮೋಹನನ ಒಂದು ತಿಂಗಳ ರಜೆ ಮುಗಿದ ಮೇಲೆ ಲಲಿತ ಅವನೊಂದಿಗೆ ಸಂಸಾರಕ್ಕೆ ಹೊರಟಳು ಹೊಸ ಪರಿಸರಕ್ಕೆ ತನ್ನನ್ನು ಒಗ್ಗಿಸಿಕೊಂಡು ಮನೆಯನ್ನು ಒಪ್ಪವಾಗಿಟ್ಟುಕೊಳ್ಳುವುದಕ್ಕೆ ಅವಳಿಗೆ ಸುಮಾರು ದಿನ ಬೇಕಾಯಿತು. ಮೋಹನನಂತೂ ಸ್ವರ್ಗದಲ್ಲೇ ಇದ್ದು ಬಿಟ್ಟಿದ್ದ. ಎಲ್ಲರೂ ಒಲೈಸುವಂತಹ ಅಧಿಕಾರ. ಮನೆಗೆ ಬಂದರೆ ಎಲ್ಲಾ ಸೇವೆಗೂ ಸಿದ್ಧಳಾಗಿದ್ದ ಸುಂದರಿ ಹೆಂಡತಿ—ಸುಖವಾಗಿರಲು ಇನ್ನೇನು ಬೇಕು? ಒಂದು ದಿನ ಆಫೀಸು ಮುಗಿಸಿಕೊಂಡು ಮನೆಗೆ ಬಂದಾಗ ಮನೆಯ ಬಾಗಿಲ ಬಳಿ ಸಣ್ಣ ಬದಲಾವಣೆಯೊಂದು ಅವನ ಗಮನಕ್ಕೆ ಬಂತು.

M. R. ಮೋಹನ್, I. P. S. ಎಂಬ ಬೋರ್ಡಿನ ಕೆಳಗೆ ಡಾಕ್ಟರ್ ಲಲಿತಾ ಮೋಹನ್–M.B.B.S., Visiting Hours–2 p.m. to 6 p.m. ಎಂದು ಬರೆಸಿ ಹಾಕಿದ್ದ ಸಣ್ಣ ಬೋರ್ಡು ಅವನ ಗಮನ ಸೆಳೆದಿತ್ತು.

" ಓಹೋ–ಅಮ್ಮಾವರಿಗೆ ತಾನು ಡಾಕ್ಟರು ಎನ್ನುವುದು. ಇವತ್ತು

ನೆನಪಾಯಿತಾ?" ಎಂದುಕೊಂಡು ನಗುತ್ತಾ ಒಳಗಡೆ ಹೋದ. ಸಿಂಗರಿಸಿ ಕೊಂಡಿದ್ದ ಲಲಿತಾ ಆಪನಿಗಾಗಿ ಕಾದು ನಿಂತಿದ್ದಳು.

"ಡಾಕ್ಟರ್ ಲಲಿತಾಮೋಹನ್‌ರವರೆ–ನಿಮಗೆ ಮೊದಲನೆಯ ಪೇಶೆಂಟು ನಾನೇ. ನನಗೆ ತುಂಬಾ ಜ್ವರ–ಪ್ರೇಮದ ಜ್ವರ–ಏನು ಬೇಕಾದರೂ ಔಷಧಿ ಕೊಡಿ. ನಾನು ಹುಷಾರಾಗೋ ತನಕ ನಿಮಗೆ ಬೇರೆ ಪೇಶೆಂಟುಗಳಿಲ್ಲ" ಎಂದು ಆವಳನ್ನು ತಬ್ಬಿಕೊಂಡ.

ಲಲಿತೆಯ ಡಾಕ್ಟರ್ ಗಿರಿ ಅಂದಿನಿಂದ ಪ್ರಾರಂಭವಾಯಿತು. ಎಲ್ಲಾ ಕೆಲಸಗಳನ್ನು ಮುಗಿಸಿ ಎರಡು ಗಂಟೆಯಿಂದ ಲಲಿತ ತನ್ನ ಬಳಿ ಬರುವವರಿಗಾಗಿ ಕಾದು ಕುಳಿತಿದ್ದಳು. ಮೋಹನನ ಆಳುಗಳು ಹಾಗೂ ಅವರ ಸಂಸಾರವೇ ಲಲಿತಳಿಗೆ ಮೊದಲು ಸಿಕ್ಕಿದ್ದು! ಡಾಕ್ಟರಮ್ಮನ ಕೈಗುಣ ಚೆನ್ನಾಗಿದೆ ಎಂಬ ನಂಬಿಕೆ ಅವರಿಂದಲೇ ಬೆಳೆಯಿತು. ಬರುಬರುತ್ತಾ ಇತರರೂ ಬರಲಾರಂಭಿಸಿದರು. ಲಲಿತ ಅವರಿಂದ ಹೆಚ್ಚು ದುಡ್ಡನ್ನು ವಸೂಲು ಮಾಡುತ್ತಿರಲಿಲ್ಲವಾದ್ದರಿಂದ ಆವಳನ್ನು ಹುಡುಕಿಕೊಂಡು ಬರುವವರು ಸಹಜವಾಗಿ ಹೆಚ್ಚಾದರು.

ಈ ವಿಷಯ ಮೋಹನನ ಮನಶಾಂತಿಯನ್ನು ಮೆಲ್ಲನೆ ಕದಡಲಾರಂಭಿಸಿತು. ಮೊದಮೊದಲು ಮೋಹನ ಬಂದರೆ ಸಾಕೆಂದು ಕಾದು ಕುಳಿತಿರುತ್ತಿದ್ದ ಲಲಿತ ಈಗ ಮೋಹನ ಬಂದರೂ ಕ್ಲಿನಿಕ್‌ನಲ್ಲಿಯೇ ಇರುತ್ತಿದ್ದಳು. ಅವಳ ಪರಿಸ್ಥಿತಿಯೂ ಕತ್ತರಿಗೆ ಸಿಕ್ಕಿದಂತಾಗಿತ್ತು. ಬರುವವರು ಎಷ್ಟೇ ಹೇಳಿದರೂ ಬೇಗ ಬರುತ್ತಿರಲಿಲ್ಲ. ವಾಪಸ್ ಹೋಗುತ್ತಿರಲಿಲ್ಲ, ಎಷ್ಟು ಹೊತ್ತಾದರೂ ಕಾದೇ ಕುಳಿತಿರುತ್ತಿದ್ದರು. ಗಂಟೆ ನಿಮಿಷಗಳಿಗೆ ಅವರಲ್ಲಿ ಯಾವ ಬೆಲೆಯೂ ಇಲ್ಲವಾಗ ಲಲಿತೆಯ ಸಂದರ್ಶಕ ಸಮಯ ಮೀರಿದ್ದು ಅವರಿಗೆ ಹೇಗೆ ಅರ್ಥವಾಗಬೇಕು? ಹೋಗಲಿ ಅಷ್ಟು ಹೊತ್ತಿಂದ ಕೂತಿದಾರಲ್ಲ-ಬೇಗ ಕಳಿಸಿಬಿಡೋಣ ಎಂದು ಲಲಿತ ಎಷ್ಟೇ ತರಾತುರಿಯಿಂದ ಮುಗಿಸಿ ಒಳಗೆ ಬಂದರೂ ಮೋಹನನ ಮುಖ ದಪ್ಪ

ವಾಗಿರುತ್ತಿತ್ತು. ಮೊದಮೊದಲು 'ಸ್ಸಾರೀ ಡಾರ್ಲಿಂಗ್' ಎನ್ನಿಸಿಕೊಂಡು ಅವಳಿಂದ ತಪ್ಪು ಕಾಣಿಕೆ ವಸೂಲು ಮಾಡಿ ಸಮಾಧಾನಗೊಳ್ಳುತ್ತಿದ್ದ ಮೋಹನ ಈ ನಡುವೆ ಅವಳಿಗೆ ಕಾಯದೆ ತನ್ನ ಪಾಡಿಗೆ ತಿಂಡಿ, ಕಾಫಿ ಮುಗಿಸಿ ಸಿಗರೇಟು ಸೇದುತ್ತಾ ಕಾಂಪೌಂಡಿನಲ್ಲಿ ತಿರುಗಾಡುತ್ತಿದ್ದ. ಒಬ್ಬರೇ ತಿಂಡಿ ತಿನ್ನುವುದು ಇಬ್ಬರಿಗೂ ಅಭ್ಯಾಸವಾಗಿತ್ತು.

ಲಲಿತಳೇನಾದರೂ ವಿಚಾರಿಸಲು ಹೋದರೆ "ಡಾಕ್ಟ್ರಮ್ಮಾವರಿಗೆ ಈಗ ಗಂಡನ ನೆನಪಾಯಿತೋ—" ಎಂದು ವ್ಯಂಗ್ಯದ ಬಾಣ ಬಿಡುತ್ತಿದ್ದ—ಈ ಬಿರುಕನ್ನು ಮುಚ್ಚಲು ಲಲಿತ ಪಡುತ್ತಿದ್ದ ಪಾಡು ಅಷ್ಟಿಷ್ಟಲ್ಲ. ಎಷ್ಟೇ ಅಸಮಾಧಾನವಿದ್ದರೂ ಲಲಿತೆಯ ತೋಳಿನಲ್ಲಿ ಮೋಹನ ಕರಗಿಹೋಗುತ್ತಿದ್ದ. ಅಂತಹ ಒಂದು ಸಮಯದಲ್ಲಿ ಅವನಿಗೆ ಏನೋ ನೆನಪಾಯಿತು. ಮದುವೆಯಾದಂದಿನಿಂದ ಯಾವೊಂದು ರೀತಿಯ ಕಟ್ಟುಪಾಡೂ ಇಲ್ಲದೆ ಸುಖಪಡುತ್ತಲೇ ಇದ್ದೇವೆ. ಲಲಿತ ತಾಯಿಯಾಗುವ ಸೂಚನೆಯೇ ಇಲ್ಲವಲ್ಲ ಮೋಹನನ ಸಂದೇಹವನ್ನು ಕೇಳಿ ಲಲಿತ ಬಿದ್ದು ಬಿದ್ದು ನಕ್ಕಳು. "ಅಲ್ಲ ಸಾಹೇಬರೇ" ನಾನು ಡಾಕ್ಟರು ಎನ್ನುವುದು ಇಷ್ಟು ಬೇಗ ಮರೆತು ಹೋಯಿತಾ ನಿಮಗೆ? ಮಕ್ಕಳು ಬೇಕು ಎನ್ನಿಸಿದಾಗ ಪಡೆಯೋದು ಹೇಗೆ? ಬೇಡಅನ್ನಿಸಿದಾಗ ತಡೆಯೋದು ಹೇಗೆ ಅಂತ ಡಾಕ್ಟರಿಗೆಗೊತ್ತಿರೋದಿಲ್ವೆ?"

"ಹಾಗದರೆ..ನೀನು..."

ಲಲಿತ ಮಧ್ಯೆ ಅವನ ಮಾತನ್ನು ತಡೆದಳು.

"ನಾವಿಬ್ಬರೂ ಇನ್ನು ಸರಿಯಾಗಿ ಹೊಂದಿಕೊಂಡಿಲ್ಲ—ಇಬ್ಬರಿಗೂ ಹೊಸ ಅನುಭವ-ಇಂತಹ ಸಮಯದಲ್ಲಿ ಮಗುವಿನ ಆಗಮನ ಸರಿ ಅಂತ ನನಗನ್ನಿಸಲಿಲ್ಲ. ಇನ್ನು ಸ್ವಲ್ಪ ದಿನ ಕಳೀಲಿ, ಆಮೇಲೆ ಇದ್ದೇ ಇದೆ ಅಲ್ವಾ?" ಎಂದು ಲಲಿತ ಅವನನ್ನು ಮುದ್ದಿಸಿದಳು.

ಮೋಹನನಿಗೆ ಒಂದು ರೀತಿಯ ಮುಜಗರವೆನಿಸಿತು. ಅನೇಕ

ಗಂಡಸರಿಗೆ ತಾವು ಹೆಂಡತಿಗಿಂತ ಎಲ್ಲದರಲ್ಲೂ ಮೇಲುಗೈಯಾಗಿರಬೇಕು ಎಂಬ ಅಪೇಕ್ಷೆ ಇರುತ್ತದೆ. ಮೋಹನನೂ ಇಂತಹ ಗಂಡಸರಲ್ಲಿ ಒಬ್ಬ. ತನಗಿಂತ ಲಲಿತೆಗೆ ಹೆಚ್ಚು ವಿಷಯ ಗೊತ್ತಿದೆ ಎಂಬ ಅಂಶ ಅವನನ್ನು ಚುಚ್ಚ ತೊಡಗಿತು-ಏನೂ ತಿಳಿಯದ ಹುಡ್ಗಿಗೆ ಎಲ್ಲವನ್ನು ಹೇಳಿಕೊಟ್ಟು ಅವಳನ್ನು ವಶಪಡಿಸಿಕೊಳ್ಳುವುದರಲ್ಲಿ ಎಂತಹ ಆನಂದ ವಿರುತ್ತದೆ. ಇಲ್ಲಿ ನಾನೇ ಅವಳಿಂದ ಕಲಿಯಬೇಕಾಯಿತು,ಡಾಕ್ಟರನ್ನು ಮದುವೆಯಾಗದೆ ಒಬ್ಬ ಸಾಮಾನ್ಯ ಹುಡುಗಿಯನ್ನು ಮದುವೆಯಾಗಿದ್ದರೆ ಇದಕ್ಕಿಂತ ಹೆಚ್ಚು ಸುಖವಾಗಿರುತ್ತಿದ್ದೆ ಎಂದುಕೊಂಡು ಮೋಹನ ಮನಸ್ಸು ಕೆಡಿಸಿಕೊಂಡ-ಇಷ್ಟಾದರೂ ಲಲಿತೆಯ ಮೇಲಿನ ಮೋಹ ಕಡಿಮೆಯಾಗಿರಲಿಲ್ಲ. ಅವಳು ಈಗ ತನಗಾಗಿ ಕಾದಿರುವುದಿಲ್ಲ ಎಂದು ಅನುಭವವಾಗಿದ್ದರೂ ಪ್ರತಿನಿತ್ಯ ಅದೇ ಕಾತುರದಿಂದ ಮನೆಗೆ ಮರಳುತ್ತಿದ್ದ.

ಅಂತಹ ಸ್ಥಿತಿಯಲ್ಲಿ ಒಮ್ಮೆ ಮನೆಗೆ ಬಂದಾಗ ಅವನನ್ನು ಸ್ವಾಗತಿಸಿದ್ದು ತಮ್ಮ ಸರದಿಗಾಗಿ ಕಾದು ಕುಳಿತಿದ್ದ ಹಲವಾರು ರೋಗಿಗಳು-ಅವರ ಕೊಳಕುಬಟ್ಟೆ – ಗಲೀಜುಮಕ್ಕಳು – ಬೆವರುವಾಸನೆಯಾದ ಬಡಕಲು ಶರೀರಗಳು......

ಮೋಹನನ ಸಹನೆ ಹಾರಿ ಹೋಯಿತು—

"ಇದೇನು ಎಸ್. ಪಿ. ಮನೆಯೋ ಅಥವಾ ಧರ್ಮಾಸ್ಪತ್ರೆಯೋ-ರೋಗಿಗಳನ್ನು ನೋಡುವುದಕ್ಕೂ ಸಮಯ ವೇಳೆ ಬೇಡವೆ? ಏ- ಆರ್ಡರ್ಲಿ ಯಾಕೆ ಇವರನ್ನೆಲ್ಲಾ ಒಳಗೆ ಬಿಟ್ಟೆ-ಹೊರಗೆ ಕಳಿಸು-ಎಂದು ಗಟ್ಟಿಯಾಗಿ ಕೂಗಾಡಿದ. ಸಾಹೇಬರ ಕೋಪ ನೋಡಿ ಆಳುಗಳು ನಡುಗಿದರು. ಎಲ್ಲರನ್ನು ಎಬ್ಬಿಸಿ ಹೊರಗೆ ಕಳಿಸಿ ಗೇಟು ಹಾಕಿದರು. ಲಲಿತ ಶಿಲೆಯಾಗಿ ನಿಂತೇ ಇದ್ದಳು. ಕೋಪ ಇಳಿದ ಮೇಲೆ ಮೋಹನನಿಗೆ ನಾಚಿಕೆಯಾಯಿತು ಆಳುಗಳೆದುರಿಗೆ ಹೀಗೆ ಕೂಗಾಡಿ ಬಿಟ್ಟೆನಲ್ಲಾ.ಲಲಿತ ಏನೆಂದು ಕೊಂಡಳೋ ಎಂಬ ಹೆದರಿಕೆಯೂ ಆಯಿತು. ರಾತ್ರಿಯ ತನಕ ಲಲಿತೆ ಯಾವ ಮಾತೂ ಆಡದೆ ಗಂಭೀರವಾಗಿದ್ದಳು. ರಾತ್ರಿ ಅವಳು ಮಲಗಲು ಬಂದಾಗ ಮೋಹನನಿಗೆ ತಡೆಯಲಾಗಲಿಲ್ಲ—

"ಸಾರೀ–ಲಲಿತಾ–ತುಂಬಾ ಬೇಜಾರಾಗಿತ್ತು. ಕೂಗಾಡಿಬಿಟ್ಟೆ." ಎಂದು ಕೈ ಹಿಡಿದು ಕೇಳಿಕೊಂಡ.

ಲಲಿತ ಮೆಲ್ಲನೆ ಅವನಿಂದ ಬಿಡಿಸಿಕೊಂಡಳು.

"ಇದು ಒಂದು ದಿನದ ಮಾತಲ್ಲ ಮೋಹನ್, ನನ್ನ ರೋಗಿಗಳು ಬಂದಾಗಿನಿಂದ ನೀವು ಸಹನೆ ಕಳೆದುಕೊಳ್ಳುತ್ತಿದ್ದೀರಿ. ಹಾಗಾದರೆ ಏನು ಅರ್ಥ? ನಾನು ಈ ಕೆಲಸ ಮಾಡುವುದು ನಮಗೆ ಇಷ್ಟವಿಲ್ಲವೆ? ಮದುವೆಗೆ ಮುಂಚೆಯೇ ನಾನು ಈ ಮಾತು ಹೇಳಿದ್ದೆ. ನೀವೂ ಒಪ್ಪಿ ಕೊಂಡಿದ್ದಿರಿ- ಈಗೇಕೆ ಹೀಗೆ?"

ತಪ್ಪು ತನ್ನದು ಎಂಬುದು ಮೋಹನನಿಗೆ ಸ್ಪಷ್ಟವಾಗಿತ್ತು.

"ಏನೋ ಆಗ ಯೋಚಿಸಲಿಲ್ಲ ಲಲಿತಾ–ನಿಜಕ್ಕೂ ನನಗಿದು ಸರಿ ಹೋಗುತ್ತಿಲ್ಲ-ಏಕೆ ಇದೆಲ್ಲಾ? ಈಗ ನನಗೆ ಬರುವ ಸಂಬಳ ಸಾಲದೆ? ನನ್ನ ಹೆಂಡತಿಯಾಗಿ ನನ್ನ ಮಕ್ಕಳಿಗೆ ತಾಯಿಯಾಗಿ ನೀನು ಯಾಕೆ ಇರ ಬಾರದು?"

"ಹಾಗೆ ಇರುವುದಾದರೆ ನಾನು ಡಾಕ್ಟರಾಗಿ ಏನು ಪ್ರಯೋಜನ? ಹಣ ಸಂಪಾದಿಸುವುದಕ್ಕಾಗಿ ನಾನು ಡಾಕ್ಟರಾಗಲಿಲ್ಲ. ನನ್ನಿಂದ ನಾಲ್ಕು ಜನಕ್ಕೆ ಪ್ರಯೋಜನವಾಗಲೀ ಅಂತ ನನ್ನ ಅಭಿಲಾಷೆ, ಅದನ್ನು ನಾನು ಬಿಡುವುದು ಅಸಾಧ್ಯದ ಮಾತು-" ಲಲಿತೆ ಯಾವ ಭಾವೋದ್ವೇಗವೂ ಇಲ್ಲದೆ ಸ್ಪಷ್ಟವಾಗಿ ಹೇಳಿದಳು.

ಮೋಹನನಿಗೆ ಮತ್ತೆ ಆವೇಶ ಬರಲಾರಂಭಿಸಿತ್ತು.

"ಅದೆಲ್ಲಾ ಬೇಡ–ನಿನ್ನ ಸಂಸಾರದ ಯೋಚನೆ ನೀನು ಮಾಡ

ಬೇಡವೆ? ಹಗಲೆಲ್ಲಾ ಕೆಲಸ ಮಾಡಿ ಸುಸ್ತಾಗಿ ಮನೆಗೆ ಬರುತ್ತೇನೆ. ನೀನು ಕಣ್ಣಿಗೆ ಬೀಳುವುದಿಲ್ಲ–ಯಾವಾಗ ಬಂದರೂ ಈ ಕೊಳಕು ಜನ ಕಾದಿರುತ್ತಾರೆ. ನನ್ನ ಸಹನೆಗೂ ಒಂದು ಮಿತಿ ಇದೆ. ಈ ಮನೆ ನನಗಾಗಿ ಕೊಟ್ಟಿರುವ ಕ್ವಾರ್ಟರ್ಸ್ ಇಲ್ಲಿ ಈ ರೀತಿ Practice ಮಾಡುವುದು ತಪ್ಪು ನೀನೇ ಯೋಚನೆ ಮಾಡು"

"ಅಷ್ಟೇ ಆದರೆ ನಾನು ಬೇರೆಲ್ಲಾದರೂ Clinic ಇಟ್ಟುಕೊಳ್ಳುತ್ತೇನೆ. ನೀವು ಮನೆಗೆ ಬರುವುದರೊಳಗೆ ಮನೆಗೆ ಬರಲು ಪ್ರಯತ್ನಿಸುತ್ತೇನೆ. ನನ್ನಿಂದ ನಿಮಗೆ ತೊಂದರೆಯಾಗುವುದು ಬೇಡ' ಎಂದು ಲಲಿತಾ ಮಾತು ಮುಗಿಸಿದಳು.

ಮರುದಿನ ಲಲಿತಾ ನನ್ನ Clinic ನ ಬೋರ್ಡನ್ನು ಕಳಚಿದಳು ಮನೆಯ ಸಮೀಪದಲ್ಲಿ ಖಾಲಿ ಇದ್ದ ಒಂದುಗ್ಯಾರೇಜನ್ನು ಗೊತ್ತು ಮಾಡಿಕೊಂಡಳು. ಇದನ್ನೆಲ್ಲ ಅವಳು ಮೋಹನನಿಗೆ ಹೇಳಲೂ ಇಲ್ಲ. ಮೋಹನ ಕೇಳಲೂ ಇಲ್ಲ. ಗಂಡಹೆಂಡತಿಯರಲ್ಲಿ ಈಗ ಹೆಚ್ಚು ಮಾತೇ ನಡೆಯುತ್ತಿರಲಿಲ್ಲ, ವಾಚಾಳಿಯಾಗಿದ್ದ ಮೋಹನ ಈಗ ಮೌನದ ಮೊರೆ ಹೊಕ್ಕಿದ್ದ. ತಾನಾಗಿ ಅವನನ್ನು ಮಾತಿಗೆಳೆಯುವ ಸಾಹಸಕ್ಕೆ ಲಲಿತಳೂ ಕೈಹಾಕಲಿಲ್ಲ.

Clinic ಮತ್ತೆ ಪ್ರಾರಂಭವಾಯಿತು ಮೊದ ಮೊದಲು ಯಾವ ಸಮಸ್ಯೆಯೂ ಬರಲಿಲ್ಲ. ಮೋಹನ ನಿಜವಾಗಿ ಸಂತೋಷಗೊಂಡ ಜಾಸ್ತಿ ರೋಗಿಗಳು ಬರುತ್ತಿರಲಿಲ್ಲವಾದ್ದರಿಂದ ಲಲಿತ ಮೋಹನ ಬರುವ ವೇಳೆಗೆ ಮನೆಗೆ ಬಂದುಬಿಡುತ್ತಿದ್ದಳು. ಗಂಡ ಹೆಂಡತಿಯರ ಸಲಿಗೆ ಮೊದಲಿನಂತೆ ಮುಂದುವರೆಯಿತು. ಆದರೆ ಕೆಲವು ದಿನಗಳಲ್ಲಿ ಪರಿಸ್ಥಿತಿ ಮತ್ತೆ ಬದಲಾಯಿಸಿತು. ಅದೇನು ಲಲಿತೆಯ ಅದೃಷ್ಟವೋ ಅಥವ ದುರದೃಷ್ಟವೋ ಏನೋ ರೋಗಿಗಳ ಸಂಖ್ಯೆ ಮೊದಲಿಗಿಂತ ಹೆಚ್ಚಾಗತೊಡಗಿತು. ತನಗಾಗಿ ಅಷ್ಟು ದೂರದಿಂದಬರುತ್ತಿದ್ದವರನ್ನುನೋಡಿ ಲಲಿತೆಯ ಡಾಕ್ಟರ್ ಹೃದಯಮೇಲೆ

ದ್ದಿತು. ಹೆಂಡತಿಯ ಕರ್ತವ್ಯ ಹಿಂದೆ ಸರಿಯಿತು. ಆರು ಗಂಟೆಯವರೆಗೆ ಎಂದು ಬೋರ್ಡ್ ಹಾಕಿದ್ದರೂ ಲಲಿತೆ ರೋಗಿಗಳಿಂದ ಬಿಡಿಸಿಕೊಂಡು ಮನೆಗೆ ಬರುವ ವೇಳೆಗೆ ಏಳು ಗಂಟೆ ದಾಟಿ ಬಿಡುತ್ತಿತ್ತು. ಮೋಹನ ಹತಾಶನಾಗಿದ್ದ. ಸಾಯಂಕಾಲ ಬೇಗ ಮನೆಗೆ ಬರುವುದನ್ನು ತಡೆಗಟ್ಟಲು ಕ್ಲಬ್ಬಿಗೆ ಸೇರಿಕೊಂಡು ಬೇಕೆಂದೇ ಇಸ್ಪೀಟು ಚಟವನ್ನು ಹತ್ತಿಸಿಕೊಂಡು-ಎಂದಾದರು ಒಮ್ಮೊಮ್ಮೆ ಡ್ರಿಂಕ್ಸ್ ತೆಗೆದುಕೊಳ್ಳುತ್ತಿದ್ದವನು. ನಿತ್ಯ ತೆಗೆದು ಕೊಳ್ಳಲಾರಂಭಿಸಿದ. ಈ ಅನಾಹುತಗಳಿಂದ ಹೆದರಿ ಲಲಿತ ಆದಷ್ಟು ಮನೆಗೆ ಅಂಟಿಸಿಕೊಳ್ಳಲಿ ಎಂದೇ ಅವನ ಅಭಿಲಾಷೆಯಾಗಿತ್ತು. ಇವೆಲ್ಲಾ ತನ್ನಳ್ಳು ತಡೆಗಟ್ಟಲು ಮಾಡಿದ ಉಪಾಯ ಎಂದು ಲಲಿತಳಿಗೂ ಅರ್ಥವಾಯಿತು–ಎಷ್ಟು ದಿನ ಹೀಗೆ ಆಡುತ್ತಾರೆ–ಒಂದೆರಡು ದಿನ ಕಳೆದು ಹೋದಮೇಲೆ ಸರಿಯೋಗುತ್ತಾರೆ ಎಂದು ಅವಳು ಉದಾಸೀನ ತೋರಿಸಿದಳು. ಅಡಿಗೆ ಮನೆಯ ಕೆಲಸಗಳನ್ನು ಮುಗಿಸಿ ಕ್ಲೀನಿಕ್ಕಿಗೆ ಧಾವಿದವಳೆಂದರೆ ಮೋಹನನ ನೆನಪಾಗುತ್ತಿದ್ದುದು ಕ್ಲೀನಿಕ್ಕಿನ ಬಾಗಿಲಿಗೆ ಬೀಗ ಹಾಕುವಾಗಲೇ-ಲಲಿತೆಯ ಕೈಗುಣಯಶಸ್ವಿಯಾಗಿ ಒಳ್ಳೆಯ ಹೆಸರು ಬಂದಿತ್ತು-ಆದರೆ ತಾನು ಸಂಸಾರದಲ್ಲಿ ಸೋತಿದ್ದೇನೆ ಎಂಬುದ ಅವಳಿಗೆ ಅರಿವಾಗಲಿಲ್ಲ.

ಕ್ಲಬ್ಬಿನಲ್ಲೂ ಮೋಹನನ ಸಹನೆ ಪರೀಕ್ಷೆಗೆ ಈಡಾಯಿತು - ಎಂದಾದರೂ ಮನೆಗೆ ಬೇಗ ಹೊರಟರ -"ಇಷ್ಟು ಬೇಗ ಹೋಗಿ ಏನು ಮಾಡುತ್ತೀರಿ ಸಾರ್ ? ಡಾಕ್ಟ್ರಮ್ಮ ಬರುವುದು ಎಂಟು ಗಂಟೆಗೆ ಕೂತ್ಕೊಳಿ–ಇನ್ನೊಂದೆರಡು ಆಟ ಆಡೋಣ _" ಎಂದೋ-

"ನಿಮ್ಮ ಮಿಸೆಸ್‌ಗ ಜೋರಾದ ಸಂಪಾದನೆ ಇರಬೇಕು ಸಾರ್ ಯಾವಾಗ ನೋಡಿದರೂ ಜನ ಗಂಟಗಟ್ಟಲೆ ಕ್ಯೂ ನಿಂತಿರುತ್ತಾರೆ-ನೀವು ತುಂಬಾ ಲಕ್ಕೀ "ಎಂದೋ ಕೆಣುಕುತ್ತಿದ್ದರು-ಮೊದಲೇ ಸಿಡಿಮಿಡಿಗೊಂಡಿದ ಮನಸ್ಸನ್ನು ಈ ಮಾತುಗಳು ಚುಚ್ಚತೊಡಗಿದವು.

ಈ ಊರಿನಿಂದ ವರ್ಗಮಾಡಿಕೊಳ್ಳಲೇ ಎಂದು ಮೋಹನ

ಒಮ್ಮೊಮ್ಮೆ ಚಿಂತಿಸುತ್ತಿದ್ದ-ಆದರೆ ಲಲಿತ ಎಲ್ಲಿ ಹೋದರೂ ಬೇಗ ಯಶಸ್ವಿಯಾಗುತ್ತಾಳೆ ಎಂಬುದು ಮನವರಿಕೆಯಾಗಿದ್ದರಿಂದಲೋ ಏನೋ ಮೋಹನ ಆ ಕೆಲಸಕ್ಕೆ ಕೈ ಹಾಕಲಿಲ್ಲ.

ದಿನಗಳು ಕಳೆದಂತೆ ಲಲಿತೆಗೆ ಹೆರಿಗೆಯ ಕೆಲಸಗಳೂ ಬರತೊಡಗಿದವು. ಒಮ್ಮೆಯಂತೂ ರಾತ್ರಿ ಹೋದ ಲಲಿತ ಮನೆಗೆ ಬಂದಾಗ ಬೆಳಗಿನ ಜಾವ ನಾಲ್ಕು ಗಂಟೆ-ರಾತ್ರಿಯಿಡೀ ಹಾಸಿಗೆಯಲ್ಲಿ ಹೊರಳಾಡಿ ಅವಳಿಗಾಗಿ ಕಾಯುತ್ತಿದ್ದ ಮೋಹನ ಲಲಿತೆ ಬಂದ ಕೂಡಲೇ ಅವಳ ಆಯಾಸವನ್ನು ಗಮನಿಸದೆ ಹಾರಾಡಿದ.

"ಪೋಲೀಸ್ ಸೂಪರಿಂಟೆಂಡೆಂಟ್ ಹೆಂಡತಿ ನೀನು-ಹೀಗೆ ರಾತ್ರೋರಾತ್ರಿ ತಿರುಗಾಡಿದರೆ ಜನ ಏನು ಮಾತಾಡ್ತಾರೆ ? ಈಗಾಗಲೇ ಕ್ಲಬ್ಬಿನಲ್ಲಿ ಯಾವಾಗಲೂ ನಿನ್ನ ಮಾತೇ - ನಂಗೆ ಸಾಕಾಗಿ ಹೋಗಿದೆ ಲಲಿತಾ ಸಾಕು - ಇನ್ನು ಮೇಲೆ ನೀನು ಡಾಕ್ಟರು ಅನ್ನೋದನ್ನ ನೀನು ಮರಿಬೇಕು- ಇದೆಲ್ಲಾ ನನಗಿಷ್ಟವಿಲ್ಲ-"

ಆಯಾಸಗೊಂಡಿದ್ದ ಲಲಿತೆಯೂ ಸುಮ್ಮನಿರಲಿಲ್ಲ-

"ನಿಮ್ಮ ಹೆಂಡತಿಯಾಗುವುದಕ್ಕೆ ಮುಂಚೆಯೇ ಡಾಕ್ಟರ್ ಆದೆ. ನನ್ನ ಜೀವ ಇರುವ ತನಕ ಇದನ್ನು ಮರೆಯುವ ಪ್ರಶ್ನೆಯೇ ಇಲ್ಲ-ನಿಮಗೆ ತೊಂದರೆಯಾದರೆ ನಾನು ಹೊರಟು ಹೋಗುತ್ತೇನೆ .ನೀವು...ನೀವು.... ಬೇರೆ ಮದುವೆ ಮಾಡಿಕೊಳ್ಳಿ-"

ಕೊನೆಯ ಮಾತು ಹೇಳುವಾಗ ದುಃಖ ಉಕ್ಕಿ ಬಂದರೂ ಮೋಹನ ನೆದುರಿಗೆ ತೋರಿಕೊಳ್ಳದೆ ಲಲಿತ ಒಳಗೆ ಹೊರಟು ಹೋದಳು. ಎಷ್ಟು ಸುಲಭವಾಗಿ ಹೇಳಿಬಿಟ್ಟಳು-ನನಗಿಂತ ಇವಳಿಗೆ ಇವಳ ಕೆಲಸವೇ ಹೆಚ್ಚಾಗಿದೆಯೇ ಎಂದು ಮೋಹನ ಚಿಂತಿಸುವಂತಾಯಿತು.

ಒಬ್ಬನೇ ಮಗ ಎಂದು ಮೋಹನನ ತಂದೆ ಅವನನ್ನು ಅತಿಶಯ ಪ್ರೀತಿಯಿಂದ ಬೆಳೆಸಿದರು, ಸಿಕ್ಕಿದ್ದೂ ಒಳ್ಳೆಯ ಕೆಲಸ-ತಾನೂ ಹೇಳಿದ್ದೇ ನಡೆಯಬೇಕೆಂಬ ಹಠ ಮೊದಲಿನಿಂದ ಮನೆ ಮಾಡಿತ್ತು. ಈಗ ಲಲಿತ ಳಿಗೆ ಹೊಂದಿಕೊಳ್ಳಲು ಕಷ್ಟವಾಯಿತು. ಕಡೆಗೆ ಮೋಹನ ತನ್ನ ತಂದೆಗೆ ಹಾಗೂ ಲಲಿತೆಯ ತಂದೆ ತಾಯಿಗೆ ಬರುವಂತೆ ಕಾಗದ ಬರೆದ. ಇದುವರೆಗೆ 'ಅವರೆಲ್ಲರಿಗೆ ಈ ಅಸಮಾಧಾನದ ಸುಳಿವೇ ಸಿಕ್ಕಿರಲಿಲ್ಲ-ಎಲ್ಲರೂ ದಿಗ್ಭ್ರಮೆಗೊಂಡರು. ಮೋಹನನ ತಂದೆಯ ಜೊತೆಯಲ್ಲಿ ಲಲಿತೆಯ ತಾಯಿ ಕೂಡ ಲಲಿತಳನ್ನೇ ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿದರು.

"ಇವರಿಗೆ ಎಷ್ಟೋ ಹೇಳಿದೆ. ಹೆಣ್ಣುಮಕ್ಕಳಿಗೆ ಯಾಕೆ ಇಂತಹ ಓದೂ ಅಂತ-ನನ್ನ ಮಾತು ಕೇಳಿದ್ದರೆ ತಾನೆ" ಎಂದು ಲಲಿತಳ ತಾಯಿ ಅತ್ತರು.

ಲಲಿತ ಒಬ್ಬಳೇ ಸಿಕ್ಕಾಗ ಲಲಿತೆಯ ತಂದೆಯೂ ಕಂಬನಿಗರೆದರು- "ಇದೇನು ಮಾಡಿಕೊಂಡೆ ಮಗೂ-ನಿನ್ನನ್ನು ಓದಿಸಿದ್ದೆ ತಪ್ಪಾಯಿತಲ್ಲಾ."

"ಇಲ್ಲಪ್ಪ-ಓದಿಸಿದ್ದು ತಪ್ಪಲ್ಲ- ಇಲ್ಲಿ ಸರಿಹೋಗಲಿಲ್ಲ-ಅಷ್ಟೇ ನೀನು ಧೈರ್ಯ ತೊಗೋ- ಅಮ್ಮನಿಗೂ ಸಮಾಧಾನ ಹೇಳು-ಮೋಹನನಿಗೂ ಒಂದೆರಡು ಮಾತು ಹೇಳು. ಇದರ ಮೇಲೂ ಅವನು ಹಠ ಮಾಡಿದರೆ ನನ್ನನ್ನು ಕರೆದುಕೊಂಡು ಹೋಗು- "ಎಂದು ಲಲಿತ ನಿರ್ವಿಕಾರ ದನಿಯಲ್ಲಿ ಹೇಳಿದಳು. ಪರಿಸ್ಥಿತಿ ಸಾಗುತ್ತಿರುವ ದಾರಿ ನೋಡಿ ಅವಳು ಹತಾಶ ಳಾಗಿದ್ದಳು. ಇಷ್ಟಾದರೂ ಲಲಿತಗೆ ಪೂರ್ತಿ ನಂಬಿಕೆ ಬಂದಿರಲಿಲ್ಲ- ತನ್ನನ್ನು ಬಿಟ್ಟು ಮೋಹನ ಇರಲಾರ-ಖಂಡಿತ ಹಠ ಮಾಡುವುದನ್ನು ಬಿಡುತ್ತಾನೆಂಬ ಭರವಸೆ ಇತ್ತು. ದುರದೃಷ್ಟದ ಸಂಗತಿ ಎಂದರೆ ಇಬ್ಬ ರಿಗೂ ಅದೇ ಭರವಸೆ ಇದ್ದಿದ್ದು ! ತಾನು ಸ್ವಲ್ಪ ಹಠ ಮಾಡಿದರೆ ಲಲಿತೆ ಖಂಡಿತ ದಾರಿಗೆ ಬರುತ್ತಾಳೆ ಎಂದು ಮೋಹನನೂ ನಂಬಿದ್ದ-ಇಬ್ಬರೂ ಸೋಲಲಿಲ್ಲ. ಒಬ್ಬರಿಗೊಬ್ಬರು ಸೋಲುವುದಿಲ್ಲ ಎಂಬುದು ಇಬ್ಬರಿಗೂ

ಮನವರಿಕೆ ಯಾಗುವುದರೊಳಗೆ ಇಬ್ಬರೂ ಹಿಂತಿರುಗಿ ಬರಲ ರದಂತಹ ಸ್ಥಿತಿಗೆ ತಲುಪಿಬಿಟ್ಟಿದ್ದರು.

ಗಂಡ ಹೆಂಡತಿಯರ ಬೇರ್ಪಡೆ ಅನಿವಾರ್ಯವಾಯಿತು. ಮಗಳಿಗೆ ಬುದ್ಧಿ ಹೇಳಿ ಅಳಿಯ ಮಗನನ್ನು ಒಂದುಗೂಡಿಸಲು ಬಂದಿದ್ದ ಲಲಿತೆಯ ತಂದೆ ತಾಯಿ ಮಗಳ ಜೊತೆ ಮೈಸೂರಿಗೆ ಮರಳಬೇಕಾಯಿತು. ಮನಸ್ಸನ್ನುಗಟ್ಟಿಮಾಡಿ ಲಲಿತಾ ತನ್ನ ಕರ್ತವ್ಯದ ಕಡೆ ಗಮನಕೊಟ್ಟಳು. ನಾನಾ ವಿಧವಾದ ಕಿರುಕುಳವನ್ನು ಅನುಭವಿಸಿ ಅನೇಕ ಅಡ್ಡಿ ಆತಂಕಗಳನ್ನು ಎದುರಿಸಿದರೂ ಲಲಿತ ಸೋಲಲಿಲ್ಲ. ಐದಾರು ವರ್ಷಗಳು ಕಳೆಯುವ ತನಕ ಅವಳಲ್ಲಿ ಎಂದಾದರೂ ಮೋಹನ ಬಂದು ತನ್ನನ್ನು ಕರೆದೊಯ್ಯ ಬಹುದು ಎಂಬ ಆಸೆಯ ಕಿರಣ ಇದ್ದೇ ಇತ್ತು.

ಅದೇ ರೀತಿ ಮೋಹನನೂ ಲಲಿತಳ ಆಗಮನವನ್ನೇ ಎದುರು ನೋಡುತ್ತಿದ್ದ-ಮರು ಮದುವೆ ಮಾಡಿಕೊ ಎಂದು ಮೋಹನನ ತಂದೆ ಬಲವಂತ ಮಾಡಿದರು. ಲಲಿತಳಿಂದ ಯಾವ ಅಡ್ಡಿಯೂ ಇರಲಿಲ್ಲ. ಆದರೆ ಮೋಹನನ ಮನಸ್ಸು ಬೇರೆ ಹುಡುಗಿಯತ್ತ ತಿರುಗಲಿಲ್ಲ. ಲಲಿತೆಯನ್ನು ಅವನು ನಿಜವಾಗಿಯೂ ಪ್ರೀತಿಸಿದ್ದ. ತಪ್ಪು ತನ್ನದು ಎಂಬುದು ಅವನಿಗೆ ಮನವರಿಕೆಯಾಗಿತ್ತು. ಅದಕ್ಕೆ ಪ್ರಾಯಶ್ಚಿತ್ತವಾಗಿ ಒಂಟಿಯಾಗಿಯೇ ಉಳಿಯುವ ನಿರ್ಧಾರವನ್ನು ಅವನು ಕೈಗೊಂಡಿದ್ದ ಅವನ ಮನಸ್ಸನ್ನು ತಿರುಗಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ.

ಇತ್ತ ಲಲಿತೆಯ ತಂದೆಯೂ ಮಗಳ ಮರುಮದುವೆಗೆ ಪ್ರಯತ್ನಿಸಿದರು. ಯಾರಾದರೂ ಸಹೃದಯದ ಡಾಕ್ಟರ್ ಗಂಡ ಸಿಕ್ಕಿದರೆ ಮಗಳು ಸುಖಿಯಾದಳು ಎಂಬ ಹಂಬಲ ಅವರಿಗೆ_ಅವರ ಪ್ರಯತ್ನಗಳನ್ನು ಲಲಿತ ನಿರಾಖಂಡಿತವಾಗಿ ನಿಲ್ಲಿಸಿದಳು.

"ಸಂಸಾರ ಸುಖ ನನ್ನ ಹಣೆಯಲ್ಲಿ ಬರೆದಿದ್ದರೆ ಮೋಹನ ಬದಲಾಗು

ತ್ತಿರಲಿಲ್ಲ. ಅವರನ್ನು ಬಿಟ್ಟು ಬಂದಿದ್ದು ಈ ಕೆಲಸಕ್ಕಾಗಿ ಇದನ್ನು ಉಳಿಸಿಕೊಂಡರೆ ಸಾಕು. ಮೋಹನನ್ನು ನಾನು ಮರೆಯಲು ಸಾಧ್ಯವೇ ಇಲ್ಲ."

"ಲಲಿತಾ ನರ್ಸಿಂಗ್ ಹೋಂ" ಆರಂಭವಾದಾಗ ಲಲಿತ ಮೋಹನನ ವಿಳಾಸಕ್ಕೂ ಆಹ್ವಾನ ಪತ್ರಿಕೆ ಕಳಿಸಿದಳು-ಅದನ್ನು ನೋಡಿ ತಾನು ಲಲಿತ ಳನ್ನು ಪೂರ್ತಿ ಕಳೆದುಕೊಂಡಭಾವನೆ ಮೋಹನನಿಗೆ ಅನುಭವವಾಯಿತು. ಶುಭಕೋರಿ ಬಂದ ಎಷ್ಟೋ ಗ್ರೀಟಿಂಗ್ಸ್‌ಗಳ ನಡುವ ಲಲಿತ ಮೋಹನನ ಷನ್ನು ಮಾತ್ರ ಭದ್ರವಾಗಿಟ್ಟುಕೊಂಡಳು.

ನರ್ಸಿಂಗ್ ಹೋಂ ಪ್ರಾರಂಭವಾದ ಮೇಲೆ ಲಲಿತಳಿಗೆ ಕೈತುಂಬ ಕೆಲಸ. ಮೋಹನನನ್ನು ಕುರಿತು ಯೋಚಿಸುವಷ್ಟು ಬಿಡುವು ಸಿಗುತ್ತಿರ ಲಿಲ್ಲ. ಮದುವೆಯಾದ ಹೊಸ ಹುಡುಗಿ ಮೊದಲ ಬಾರಿ ಮುಟ್ಟು ನಿಲ್ಲಿಸಿಕೊಂಡು ತನ್ನ ಬಳಿ ಬಂದಾಗ ಲಲಿತೆಗೆ ವಿಚಿತ್ರವಾದ ಸಂಕಟವಾಗು ತ್ತಿತ್ತು. ಎಷ್ಟೋ ಜನ ಬಂಜೆಯರ ಸಮಸ್ಯೆಯನ್ನು ಪರಿಹರಿಸಿ ತಾಯಿ ಯಾಗುವ ಅವಕಾಶ ಮಾಡಿಕೊಟ್ಟಿದ್ದಳು-ಆದರೆ ತಾನು ತಾಯಿಯಾಗುವ ಅವಕಾಶವನ್ನು ತಾನಾಗಿ ದೂರ ತಳ್ಳಿದ್ದಳು.

ಯೌವನ ಹಿಂದೆ ಸರಿಯುತ್ತಾ ಬಂದಂತೆ ಮೋಹನನ ಹಂಬಲ ಕಡಿ ಮೆಯಾಯಿತು. ಆದರೂ ಪತ್ರಿಕೆಗಳಲ್ಲಿ I. P S. ಆಫೀಸರ್‌ಗಳ ಸಮಾಚಾರವಿದ್ದರೆ ಓದಿ ಮೋಹನನ ಹೆಸರನ್ನು ಹುಡುಕುತ್ತಿದ್ದಳು.

ಮದುವೆಯಾಗಿ ಇಪ್ಪತ್ತೈದು ವರ್ಷಗಳು ಸರಿಯುತ್ತಾ ಬಂದಾಗ ಲಲಿತೆಗೆ ತಮ್ಮ ಮಧುಚಂದ್ರದಲ್ಲಿ ವಿವಾಹದ ರಜತ ಮಹೋತ್ಸವವನ್ನು ಇಲ್ಲಿಯೇ ಆಚರಿಸಬೇಕೆಂದುಕೊಂಡಿದ್ದು ನೆನಪಾಯಿತು. ಹೋಗುವುದೇ ಬೇಡವೇ ಎಂದು ತಿಂಗಳುಗಟ್ಟಲೆ ತರ್ಕ ನಡೆಸಿ ಕೊನೆಗೆ ಇನ್ನೇನೂ ಇಲ್ಲ ದಿದ್ದರೂ ವಿಶ್ರಾಂತಿಯಾದರೂ ಆಗುತ್ತದೆ ಎಂದು ಲಲಿತೆ ಹೊರಡಲು ನಿರ್ಧರಿಸಿದ್ದಳು.

ಟಿಂಗ್ ಟಿಂಗ್ ಎಂಬ ಮೆಲ್ಲನೆಯ ಮಧುರ ದನಿ ಲಲಿತೆಯನ್ನೆಬ್ಬಿಸಿತು. ರಾತ್ರಿ ಲೇಟಾಗಿ ಮಲಗಿದ್ದರಿಂದ ಪೂರ್ತಿ ಎಚ್ಚರವಾಗಲಿಲ್ಲ–ಎರಡನೆಯ ಬಾರಿ ಬೆಲ್ಲಾದಾಗ ಆ ಪುಟ್ಟ ಹುಡುಗನನ್ನು ಮನಸ್ಸಿನಲ್ಲೇ ಬೈಯುತ್ತಾ ಎದ್ದು ಬಂದು ಬಾಗಿಲು ತೆಗೆದಳು.

"ಗುಡ್ ಮಾರ್ನಿಂಗ್ - ಮೆಡಮ್" - ಹುಡುಗನ ಕೀರಲು ದನಿಯ ಬದಲು ಗಡಸು ದನಿಯೊಂದು ನುಡಿಯಿತು.

"ಓ! ಮೋಹನ್!" ಲಲಿತೆ ಉದ್ಗರಿಸಿದಳು—

ಒಳಗೆ ಬರಬಹುದು ತಾನೆ ?" ಎನ್ನುತ್ತಾ ಮೋಹನ ಒಳಗೆ ಬಂದು ಕುಳಿತ. ಲಲಿತೆ ಹಾಗೇ ಗೋಡೆಗೊರಗಿ ನಿಂತಿದ್ದಳು. ಏನೋ ಒಂದು ರೀತಿಯ ವಿಚಿತ್ರ ಅನುಭವವಾಗಿ ತಾನೆಲ್ಲಿ ಬಿದ್ದು ಬಿಡುತ್ತೇನೆಯೋ ಎಂಬ ಹೆದರಿಕೆಯಾಯಿತು-ಎಷ್ಟೇ ತಡೆದರೂ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು.

"ಇದೇಸು ಹಾಗೇ ನಿಂತು ಬಿಟ್ಟೆ ? ಬಾ– ಕುಳಿತುಕೋ..." ...ಎಂದು ಮೋಹನ ಕರೆದ.

ಅಷ್ಟರಲ್ಲಿ ಸ್ವಲ್ಪ ಚೇತರಿಸಿಕೊಂಡ ಲಲಿತೆ ಅವನೆದುರಿಗೆ ಬಂದು ಕುಳಿತಳು. ಇಬ್ಬರೂ ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದರು. ಲಲಿತೆಯಲ್ಲಿ ಅಂತಹ ಬದಲಾವಣೆಯೇನೂ ಆಗಿರಲಿಲ್ಲ. ಮುಖ ಸ್ವಲ್ಪ ಸುಕ್ಕಾಗಿ ತಲೆಗೂದಲು ಅಲ್ಲಲ್ಲಿ ಬೆಳ್ಳಗಾಗಿತ್ತು. ಮೋಹನನಿಗೆ ವಯಸ್ಸಾದಂತೆ ತೋರುತ್ತಿತ್ತು. ಸ್ವಲ್ಪ ಮೈಯ್ಯೂ ಬಂದಿತ್ತು. ಹಿಂದಿನ ಠೀವಿ, ಗತ್ತು ಕಂಡುಬರುತ್ತಿರಲಿಲ್ಲ.

"ಯಾವಾಗ ಬಂದಿರಿ ?"

"ನಿನ್ನೆ ರಾತ್ರಿ ಲೇಟಾಗಿ ಬಂದೆ. ಬರ್‍ತಾ ಹಾಗೇ ಮೈಸೂರಿಗೂ ಹೋಗಿ ನಿನ್ನ ಮನೆಗೂ ಹೋಗಿದ್ದೆ– ಆಕಸ್ಮಾತ್ ನೀನು ಇಲ್ಲಿಗೆಬರುವುದನ್ನು ಮರೆತಿದ್ದರೆ ಜ್ಞಾಪಿಸೋಣ ಅಂತ- ನೀನಿಲ್ಲಿಗೆ ಬಂದಿದೀಯ ಅಂತ ಯಾರೂ ಹೇಳಲಿಲ್ಲ. ಇಲ್ಲಿ ಬಂದ ಮೇಲೆ ವಿಚಾರಿಸಿಕೊಂಡೆ-ಹೋಗಲಿ-ಬಂದೆಯಲ್ಲಾ..."...

"ಬರದೆ ಏನು? ನೀವು ಬರ್ತೀರೋ ಇಲ್ಲವೋ ಅಂತ ನನಗೂ ಅನುಮಾನವಾಗಿತ್ತು. ಹನ್ನೆರಡನೇ ರೂಮನ್ನ ನಾನೂ ಕೇಳಿದ್ದೆ- ಆಗ ನೀವು ಮುಂಚೆ book ಮಾಡಿದ್ದೀರಿ ಅಂತ ತಿಳಿಯಿತು. ಎಂದು ಲಲಿತೆ ಮೆಲ್ಲನೆ ಹೇಳಿದಳು.

"ಒಳ್ಳೆಯದಾಯಿತು-ನಾನೇನೋ ಮುಂಚೆಯೇ ಕೇಳಿ ಆ ರೂಮು book ಮಾಡಿದ್ದ-ಆದರೆ ಹಳೆಯದೆಲ್ಲಾ ನೆನಪಿಗೆ ಬಂದು ರಾತ್ರಿ ಪೂರ್ತಿ ನಿದ್ದೆಯೇ ಬರಲಿಲ್ಲ"

ಮಧುಚಂದ್ರದ ರಾತ್ರಿಯ ನೆನಪಾಗಿ ಲಲಿತೆಯ ಮುಖ ಕೆಂಪಾಯಿತು. ಮೋಹನನ ನೆಟ್ಟನೋಟವನ್ನು ನಿವಾರಿಸಿಕೊಳ್ಳಲು ಎದ್ದು ನಿಂತಳು.

"ನಿಮಗೆ ಕಾಫಿ ಆಗಿರಲಾರದು ಅಲ್ವಾ ?" ಎಂದು ಫೋನ್ ಮಾಡಿ ಕಾಫಿ ತರಲು ಹೇಳಿದಳು.

"ನೀನು ಹಾಗೇ ಇದೀಯ ಲಲಿತಾ—ನಾನು ತುಂಬಾ ಬದಲಾಗಿದೀನಿ ಅಲ್ವಾ ?"

"ಸ್ವಲ್ಪ ದಪ್ಪಗಾಗಿದೀರಾ ಅನ್ನಿಸುತ್ತೆ— ಈಗ ಬೆಂಗಳೂರಿನಲ್ಲೇ ಇದ್ದೀರಿ ಅಂತ ಕೇಳಿದೆ-..."

"ಹೂ- ಕೆಲವು ವರ್ಷ ಇಂಡೋನೇಶಿಯಾಗೂ ಹೋಗಿದ್ದೆ-"

"ಗೊತ್ತಾಯಿತು- ನಿಮಗೆ ಎಲ್ಲೆಲ್ಲಿಗೆ Transfer ಆಯಿತು ಅನ್ನೋದೆಲ್ಲಾ ಪೇಪರ್‌ನಿಂದ ಗೊತ್ತಾಗುತ್ತಿತ್ತು. ಒಂದು ಬಾರಿ ಹರ್ನಿಯಾ ಆಪರೇಶನ್ ಆಯ್ತು ಅಲ್ಲವಾ? "

ಮೋಹನನಿಗೆ ಅಚ್ಚರಿಯಾಯಿತು, "ಅರೇ ! ನಿನಗೆ ಹೇಗೆ ಗೊತ್ತಾಯಿತು?" ನೀವು ಒಂದು ತಿಂಗಳು ರಜಾದಲ್ಲಿದ್ದೀರಾ ಅಂತ ಪೇಪರಿನಲ್ಲಿ ಓದಿದೆ- ಯಾಕೇಂತ ಗೊತ್ತಾಗಲಿಲ್ಲ.- ನಿಮ್ಮ ಊರಿನವರೊಬ್ಬರು ಬಂದಾಗ ಕೇಳಿ ತಿಳಿದುಕೊಂಡೆ. "ಲಲಿತೆಯ ಮಾತಿನಿಂದ ಮೋಹನ ಸಂತೃಪ್ತಿಗೊಂಡಂತೆ ತೋರಿತು- ಅಷ್ಟರಲ್ಲಿ ಕಾಫಿ ಬಂತು.

ಇಬ್ಬರೂ ಕಾಫಿ ಕುಡಿದರು.

"ಹೋಗಲಿ ಅಷ್ಟು ಮಟ್ಟಿಗೆ ನನ್ನ ಆಗಾಗ ನೆನಸಿಕೊಳ್ಳುತ್ತಿದ್ದೆಯಲ್ಲ ಲಲಿತಾ_ ನನ್ನ ಮೇಲೆ ಕೋಪ ಇರಲಿಲ್ಲವೆ ನಿನಗೆ?"

ಲಲಿತೆ ಮೃದುವಾಗಿ ನಕ್ಕಳು.

"ನಿಮ್ಮ ಮೇಲೇಕೆ ಕೋಪ? ಹಠ ಮಾಡಿದ್ದು ನಾನು ತಾನೇ?..."

"ಛೇ... ಪಾಪ ನಿಂದೇನೂ ತಪ್ಪಿಲ್ಲ ಲಲಿತಾ ನಾನೇ ನಿನಗೆ ಅವಕಾಶ ಕೊಡದೆ ದುಡುಕಿದೆ- ಹೋಗಲಿ ಬಿಡು-ಈಗ ಅದನ್ನೆಲ್ಲಾ ನೆನಸಿಕೊಳ್ಳುವುದೇ ಬೇಡ. ಎಷ್ಟೋ ವರ್ಷಗಳ ಮೇಲೆ ಸೇರಿದ್ದೀವಿ- ಒಂದು ದಿನ ಹಾಯಾಗಿ ನಗುತ್ತಾ ಇರೋಣ-ಹೊರಗಡೆ ಬರ್ತೀಯಾ-?"

ಲಲಿತ ಕೂಡಲೇ 'ಹೂ' ಎನ್ನಲಿಲ್ಲ.

"ಯಾಕೆ ಅನುಮಾನ ? ನೀನೀಗ ಫೇಮಸ್ ಡಾಕ್ಟರು ...ನನ್ನ ... ಜೊತೆ ಓಡಾಡಿದರೆ..."...

ಲಲಿತ ತಪ್ಪಿಸಿ ಮಾತನ್ನು ತಡೆದಳು-

"ಹಾಗೇನಿಲ್ಲ ಮೋಹನ್, ಈಗ ನಾನೇನೂ ಹುಡಗಿಯಲ್ಲ-ಯಾರ ಜೊತೆ ಹೋದರೂ ತಪ್ಪಾಗುವುದಿಲ್ಲ. ಸ್ವಲ್ಪ ಹೊತ್ತು ಕುಳಿತಿರಿ ಸ್ನಾನ ಮಾಡಿ ಬರುತ್ತೇನೆ. ಎಂದು ಲಲಿತಾ- ತನ್ನಲ್ಲಿದ್ದ ಪತ್ರಿಕೆಗಳನ್ನು ಅವನ ಮುಂದೆ ಇಟ್ಟಳು.

ಬೃಂದಾವನದೊಳಗೆ ಬಂದಾಗ ವಾತಾವರಣ ಶಾಂತವಾಗಿತ್ತು. ಅಲ್ಲಲ್ಲಿ ಓಡಾಡುತ್ತಿದ್ದ ಒಂದೆರಡು ಜೋಡಿಗಳನ್ನು ಬಿಟ್ಟರೆ ಜನರೇ ಕಾಣಿಸು ತ್ತಿರಲಿಲ್ಲ.

"ಅವರನ್ನು ನೋಡಿದೆಯಾ ಲಲತಾ-ನಾವು ಹಾಗೇ ಇಲ್ಲಿ ತಿರುಗಾಡಿ ದ್ದೆವು. ನೆನಪಿದೆಯಾ?"

"ಇಲ್ಲವೆ ಏನು ?... ಮದುವೆಯಾದ ಹೊಸದರಲ್ಲಿ ಈ ಸರಿಸಮ ಭಾವನೆ ಇರುತ್ತದೆ. ಆಮೇಲೆ ಗಂಡಿಗೆ ತಾನು ಒಡೆಯ ಹೆಂಡತಿ ದಾಸಿ ಎಂಬ ಭಾವನೆ ಬಂದು ಬಿಡುತ್ತದೆ." ಎಂದು ಲಲಿತ ಸ್ವಲ್ಪ ಹರಿತವಾದ ದನಿಯಲ್ಲಿ ಹೇಳಿದಳು.

"ನನ್ನ ರೇಗಿಸುತ್ತಿದ್ದೀಯಾ? ಈಗ ನೀನೇನು ಹೇಳಿದರೂ ನನಗೆ ಕೋಪ ಬರುವುದಿಲ್ಲ. ಆ ಕಾಲ ಮುಗಿದುಹೋಯಿತು-" ಎಂದು ಮೋಹನ ಕಲ್ಲು ಬೆಂಚಿನ ಮೇಲೆ ಕುಳಿತ—

"ಕೂತ್ಕೊ ಬಾ. ನರ್ಸಿಂಗ್ ಹೋಂ ತುಂಬಾ ಚೆನ್ನಾಗಿ ನಡೀತಿದೆ ಯಂತೆ. ಮೈಸೂರಿನಲ್ಲಿ ಯಾರ ಬಾಯಲ್ಲೂ ಲಲಿತಾ ನರ್ಸಿಂಗ್ ಹೋಂ ನ ಮಾತೇ. ಒಬ್ಬಳೇ ಹೇಗೆ ಇಷ್ಟೆಲ್ಲಾ ನೋಡಿಕೊಂಡೆ. ಕಷ್ಟವಾಗಲಿಲ್ಲವೇ?" ಮೋಹನನ ಪ್ರಶ್ನೆ ಲಲಿತಳಿಗೆ ಸ್ಫೂರ್ತಿ ನೀಡಿತು.

ನರ್ಸಿಂಗ್ ಹೋಂ ಪ್ರಾರಂಭಿಸಿದ್ದು, ಅದಕ್ಕೆ ಬಂದ ಅಡಚಣೆಗಳು. ಅವುಗಳನ್ನು ನಿವಾರಿಸಲು ತಾನು ಪಟ್ಟಪಾಡು, ಎಲ್ಲವನ್ನು ಮುಚ್ಚಿಡದೆ ಲಲಿತಾ ಹೇಳಿಕೊಂಡಳು. ತನ್ನ ಸಾಧನೆಗಳ ಬಗ್ಗೆ ಹೇಳುವಾಗ ಅವಳ ಕಣ್ಣುಗಳು ಹೆಮ್ಮೆಯಿಂದ ಮಿನುಗುತ್ತಿತ್ತು.

"ಎಲ್ಲಾ ಸರಿಹೋಯಿತು ಮೋಹನ್. ಆದರೆ ನೀವು ಮತ್ತೆ ಮದುವೆ ಮಾಡಿಕೊಂಡಿದ್ದರೆ ನಾನು ಇನ್ನೂ ಸುಖವಾಗಿರುತ್ತಿದ್ದೆ..." ಎಂದು ನಿಲ್ಲಿಸಿದಳು ಲಲಿತಾ.

ಮೋಹನ ನಕ್ಕ -"ಇದೊಳ್ಳೆ ತಮಾಷೆ. ನಾನು ಹೀಗೇ ಇರುವುದು ನ್ಯಾಯವಾಗಿ ನಿನಗೆ ಸಂತೋಷವಾಗಿರಬೇಡವೇ, ನಿನ್ನನ್ನು ಮರೆತಿಲ್ಲ ನಾನು ಅಂತ-"

"ಅದು ಗೊತ್ತೇ ಇತ್ತು ಮೋಹನ್ - ನನ್ನಪ್ರೀತಿ ಅಪಾತ್ರವಲ್ಲ ಅಂತ ನನಗೆ ಚೆನ್ನಾಗಿ ಗೊತ್ತು. ಒಂದು ವೇಳೆ ಮದುವೆಯಾಗಿದ್ದರೂ ನೀವು ನನ್ನನ್ನು ಮರೆಯುತ್ತಿರಲಿಲ್ಲ...."

ಮೋಹನ ನಿಟ್ಟುಸಿರು ಬಿಟ್ಟ -"ಎಷ್ಟು ಚೆನ್ನಾಗಿ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡಿದ್ದೇವೆ ಲಲಿತಾ-ನಿಜಕ್ಕೂ ಹೆಮ್ಮೆ ಪಡಬೇಕಾದ ಸಂಗತಿ

ನಿಜವಾಗಿ ಅನುರೂಪ ದಾಂಪತ್ಯ- ದೈಹಿಕವಾಗಿ ಅಲ್ಲ - ಮಾನಸಿಕವಾಗಿ- ಅಲ್ವಾ ? ಒಬ್ಬರ ಮನಸ್ಸಿನಲ್ಲೊಬ್ಬರು ಸದಾ ಇದ್ದೇ ಇದ್ದೇವೆ - ಆದರೆ ನಮ್ಮ ವೃತ್ತಿಗಳು- ಮನೋವೃತ್ತಿಗಳು ಹೊಂದಿಕೊಳ್ಳಲಿಲ್ಲ - ಎಷ್ಟೋ ವರ್ಷಗಳು ಕಳೆಯುವ ತನಕ ನಿನಗಾಗಿ ಕಾಯುತ್ತ ಇದ್ದಲೆ ಲಲಿತಾ-"

"ನಾನೂ ಅಷ್ಟೇ ಮೋಹನ್-ನರ್ಸಿಂಗ್ ಹೋಂ ತೆಗೆದ ಮೇಲೂ ನೀವು ಕರೆಯಬಹುದೂಂತ ಕಾದಿದ್ದೆ. ನಿನ್ನ ಹೆಂಡತಿಯಾಗಿ ನನ್ನ ಕರ್ತವ್ಯ ನಾನು ಮಾಡಲಿಲ್ಲ ಎಂಬ ಕೊರಗು ಈಗಲೂ ಹೋಗಿಲ್ಲ...ನಿಮಗೆ... ಒಂದು ಮಗುವನ್ನು ಕೊಡಲಿಲ್ಲ..." ಎಂದಾಗ ಲಲಿತೆಯ ಕಣ್ಣಂಚಿನಲ್ಲಿ ನೀರು ಕಾಣಿಸಿಕೊಂಡಿತು.

ತನ್ನ ಕೈಯ್ಯ ಬಳಿ ಇದ್ದ ಲಲಿತೆಯ ಕೈಯನ್ನು ಮೋಹನ ಮೆಲ್ಲನೆ ಅದುಮಿದ.

"ಛೀ-ಈಗೇಕೆ - ಅದೆಲ್ಲಾ - ಬಿಡು. ಇದರಲ್ಲಿ ನನ್ನ ತಪ್ಪು ಇತ್ತಲ್ಲಾ - ಬೇರೆ ಊರಿಗೆ ವರ್ಗ ಮಾಡಿಸಿಕೊಳ್ಳಬಹುದಾಗಿತ್ತು-ಅಥವಾ ಒಂದು ಮಗುವಾಗುವ ತನಕ ಕಾದಿದ್ದರೆ ನೀನೇನು ಮಾಡುತ್ತಿದ್ದೆಯೋ ನಾನೇ ಸಹನೆ ಕಳೆದುಕೊಂಡೆ. ಅದರ ಪ್ರಾಯಶ್ಚಿತ್ತ ನಾನು ಅನುಭವಿಸಿಸು ತ್ತಿದ್ದೇನೆ. ಆಫೀಸು ಇರುವ ತನಕ ಏನೂ ಯೋಚನೆ ಇಲ್ಲ, ಮನೆ ಯಲ್ಲಿರುವಷ್ಟು ಹೊತ್ತು ಮಾತ್ರ ನರಕ ಅನುಭವಿಸಿದಂತೆಯೇ ಆಗುತ್ತಿದೆ... ಮೋಹನ ನೊಂದ ದನಿಯಲ್ಲಿ ಹೇಳಿದ.

"ಇಷ್ಟು ಕಷ್ಟ ಪಡುವ ಬದಲು ಒಂದು ಬಾರಿ ನನ್ನ ಮುಂದೆ ಬರ ಬಾರದಾಗಿತ್ತೆ ? ನಿಮ್ಮನ್ನು ನೋಡಿದ್ದರೆ—ನಾನು ಖಂಡಿತ ಸೋತು ಹೋಗುತ್ತಿದ್ದೆ. ನಾನಾಗ ಬರಲು ಮಾತ್ರ ಮನಸ್ಸು ಒಪ್ಪಿರಲಿಲ್ಲ ಒಣ ಅಭಿಮಾನಕ್ಕೆ ಕಟ್ಟುಬಿದ್ದು ಇಬ್ಬರೂ ಹಾಳುಮಾಡಿಕೊಂಡೆವು..." ಲಲಿತೆಯ ಮಾತಿನಲ್ಲಿ ಅವಳು ಅನುಭವಿಸಿರಬಹುದಾದ ಕಹಿ ಜಿನುಗುತ್ತಿತ್ತು.

"ಹೋಗಲಿ ಬಿಡು-ಆಗಿದ್ದಾಯಿತು. ಹಳೆಯದನ್ನು ಮರೆಯೋಣ-ಆಗಿದ್ದೆಲ್ಲಾ ಒಳ್ಳೆಯದಕ್ಕೇ ಎಂದುಕೊಂಡರಾಯಿತು. ಹೀಗೆಲ್ಲಾ ಆಗದಿದ್ದರೆ ನಿನ್ನ ನರ್ಸಿಂಗ್ ಹೋಂ ಇಷ್ಟು ಪ್ರಖ್ಯಾತಿ ಹೊಂದುತ್ತಿತ್ತೆ...?" ಎಂದು ಮೋಹನ ಅವಳನ್ನು ಸಾಂತ್ವನಗೊಳಿಸಿದ. ಇಬ್ಬರೂ ಮತ್ತೆ ಎದ್ದು ಇಡೀ ಬೃಂದಾವನವನ್ನೆಲ್ಲಾ ಸುತ್ತುಹಾಕಿದರು. ಊಟ ಮುಗಿಸಿದರು. ಕಾರಿನಲ್ಲಿ ಹೊರಗಡೆಗೂ ಬಂದು ಸುತ್ತು ಹೋಗಿ ಬಂದರು. ಬಹಳ ಕಾಲದ ನಂತರಭೆಟ್ಟಿಯಾದ ಸ್ನೇಹಿತರಂತೆ ಮನಬಿಚ್ಚಿ ಹರಟಿದರು. ನಕ್ಕರು-ಒಬ್ಬರನ್ನೊಬ್ಬರು ಗೇಲಿಮಾಡಿದರು - ಇಬ್ಬರಿಗೂ ಅರಿವೇ ಆಗದಂತೆ ಸಮಯ ಸಾಗಿತು. ರಾತ್ರಿ ಊಟಕ್ಕೆ ಮುಂಚೆ ಮೋಹನ ಪಾನೀಯಕ್ಕೆ ಹೇಳಿದಾಗ ಲಲಿತ ಮೃದುವಾಗಿ ಆಕ್ಷೇಪಿಸಿದಳು.

"ಇನ್ನೂ ಈ ಅಭ್ಯಾಸ ಬಿಟ್ಟಿಲ್ಲವಾ? ಇಷ್ಟು ವಯಸ್ಸಾದಾರೂ?..."

"ಅದನ್ನು ಹಚ್ಚಿಕೊಡಿದ್ದೇ ನಿನ್ನ ಮರೆಯೋದಕ್ಕೆ ಲಲಿತ - ಬಿಡುವುದು ಹೇಗೆ?"

"ಆದರೂ ಹೀಗೆ ದಿನಾ ತೆಗೆದುಕೊಳ್ಳುವುದು ಒಳ್ಳೆಯದಲ್ಲ.-ನಿಮ್ಮ ಆರೋಗ್ಯದ ದೃಷ್ಟಿಯಿಂದ—"

"ನನಗೆ ಅದೂ ಗೊತ್ತು - ಇಷ್ಟಕ್ಕೂ ನನ್ನ ಆರೋಗ್ಯ ಕಟ್ಟಿಕೊಂಡು ಈಗ ಯಾರಿಗೆ ಏನಾಗಬೇಕು? ರಿಟೈರಾಗುವುದಕ್ಕೆ ಮುಂಚೆಯೇ ಆಯಸ್ಸು ತೀರಿ ಹೋದರೆ ತುಂಬಾ ಒಳ್ಳೆಯದು - ಆಮೇಲೆ ಕಷ್ಟಪಡುವುದು ತಪ್ಪಿದರೆ ಸಾಕು—" ಎಂದು ಮೋಹನ ಬಾಟಲಿಯ ಮುಚ್ಚಳವನ್ನು ತೆಗೆದು ಗ್ಲಾಸಿಗೆ ಬಗ್ಗಿಸಿದ - ಲಲಿತ ಮೌನವಾಗಿ ಅವನ ಮಾತುಗಳನ್ನೇ ಮೆಲುಕು ಹಾಕುತ್ತಿದ್ದಳು. ಪಾಪ - ನನ್ನನ್ನಲ್ಲದೆ ಬೇರೆ ಯಾರನ್ನಾದರೂ ಮದುವೆಯಾಗಿದ್ದರೆ ಎಷ್ಟು ಸಂತೋಷವಾಗಿರುತ್ತಿದ್ದರು. ಎಂದು ಪದೇ ಪದೇ ಅನ್ನಿಸುತ್ತಿತ್ತು.

ಬಾಟಲು ಖಾಲಿಯಾಗುವ ತನಕ ಮೋಹನ್ ಮಾತಾಡಲಿಲ್ಲ-ಇಬ್ಬರ ಊಟವೂ ಮೌನದಲ್ಲೇ ಮುಗಿಯಿತು.

"ಇನ್ನು ನಾಳೆ ಬೆಳಿಗ್ಗೆಯೇ ಹೊರಟು ಬಿಡಬೇಕು-" ಮೋಹನ ತನಗೆ ತಾನೇ ಹೇಳಿಕೊಂಡಂತೆ ಹೇಳಿದ,

"ನಾನು ಅಷ್ಟೇ-ಬೆಳಿಗ್ಗೆ ಸಿಗುತ್ತೀರಲ್ಲಿಲ್ಲ..."...

"ಖಂಡಿತ" ಎನ್ನುತ್ತಾ, ಮೋಹನ ಲಲಿತೆಯನ್ನು ಬೀಳ್ಕೊಟ್ಟ-ಲಲಿತೆ ತಲೆ ತಗ್ಗಿಸಿದಳು, ಮೋಹನನ 'ಗುಡ್ ನೈಟ್' ದನಿ ದೂರವಾದಾಗ ಲಲಿತೆ ನೀರು ತುಂಬಿದ್ದ ಕಣ್ಣುಗಳನ್ನು ಮೇಲೆತ್ತಿದಳು,

ಭಾರವಾದ ಹೃದಯದಿಂದ ಲಲಿತ ರೂಮಿಗೆ ಮರಳಿದಳು – ಈಗ ಅವಳಲ್ಲಿ ವಿಚಿತ್ರಬದಲಾವಣೆಯಾಗಿತ್ತು–ಇದುವರೆವಿಗೆ ಮೋಹನನ ಮೇಲೆ ಇದ್ದ ಕೋಪ ಈಗ ಕರುಣೆಯಾಗಿ ಮಾರ್ಪಾಡಾಗಿತ್ತು. ಹೊಸ ಬಯಕೆಯೊಂದು ಈಗ ಅವಳಲ್ಲಿ ಮೂಡುತ್ತಿತ್ತು.

"ಮೋಹನನ ಜೊತೆ ಏಕೆ ಹೋಗಬಾರದು ? ಅವರು ಕರೆಯದಿದ್ದರೂ ಪರವಾಗಿಲ್ಲ. ತಾನಾಗಿ ಹೋಗಬಾರದೆಂಬ ಅಭಿಮಾನ ಈಗೇನೂ ಇಲ್ಲ. ಹೇಗಿದ್ದರೂ ಈಗ ನರ್ಸಿಂಗ್ ಹೋಂ ದೊಡ್ಡದಾಗಿ ಬೆಳದಿದೆ. ಒಳ್ಳೆಯ ಡಾಕ್ಟರ್‌ಗಳೂ ಇದ್ದಾರೆ. ನಾನಿಲ್ಲದಿದ್ದರೂ ಹಾಗೆಯೇ ನಡೆದು ಬರುತ್ತದೆ. ಅವರ ಯೌವ್ವನದ ಬಯಕೆಗಳನ್ನು ನಾನು ತೀರಿಸಲಿಲ್ಲ. ಮೋಹನನ ಮಗುನ್ನು ಹೆರುವ ವಯಸ್ಸು ಮೀರಿ ಹೋಯಿತು-ಆದರೆ ಜೊತೆಗಾತಿಯಾಗಿ ಯಾಕಿರಬಾರದು? ಕೊನೆಗಾಲದಲ್ಲಿ ಅವರಿಗೆ ಶಾಂತಿ ಸಮಾಧಾನ ಕೊಡುವ ಶಕ್ತಿ ನನಗಿನ್ನೂ ಇದ್ದೇ ಇದೆ. ಆದರೆ ಈ ಕೆಲಸ ಬಿಟ್ಟು ಇರುವುದೂ ನನ್ನಿಂದ ಸಾಧ್ಯವೇ? ನೋಡಿದವರು ಏನೆಂದಾರು? ಈ ವಯಸ್ಸಿನಲ್ಲಿ ಇದೇನು ಹುಚ್ಚು ಎನ್ನುವುದಿಲ್ಲವೇ" ಎಂಬ ತರ್ಕ ಅವಳಲ್ಲಿ ಎದ್ದಿತ್ತು.

ಬೆಳಿಗ್ಗೆ ಕಾಲಿಂಗ್‌ಬೆಲ್ ಕರೆದಾಗ ಲಲಿತ ಆತಂಕದಿಂದ ಬಾಗಿಲು ತೆಗೆದಳು. ಅದೇ ಪುಟ್ಟ ಹುಡುಗ ನಿಂತಿದ್ದ.

"ಹನ್ನೆರಡನೇ ರೂಮಿನಲ್ಲಿದ್ದ ಸಾಹೇಬರು ಈ ಕಾಗದವನ್ನು ನಿಮಗೆ

ಕೊಡಲು ಹೇಳಿದರು." ಎಂದು ಕೈ ನೀಡಿದ ಲಲಿತ ಆತುರದಿಂದ ಕಾಗದ ವನ್ನು ಬಿಚ್ಚಿದಳು.

ನನ್ನ ಲಲಿತಾ.

ನಿನಗೆ ಮುಖತೋರಿಸದೆ ಹೇಡಿಯಾಗಿ ಹಿಂತಿರುಗುತ್ತಿದ್ದೇನೆ. ಇವತ್ತು ನಿನ್ನ ನೋಡಿದರೆ ನನ್ನ ಜೊತೆ ಬರುತ್ತೀಯಾ ಎಂದು ಕೇಳಲು ನಾಲಿಗೆ ಮುಂದಾಗುತ್ತದೆ. ಅದಕ್ಕೆ ನೀನೇನು ಹೇಳಬಹುದೆಂಬುದೂ ನನಗೆ ಗೊತ್ತು ಅಗಾಧವಾಗಿ ಬೆಳೆಸಿಕೊಂಡಿರುವ ನರ್ಸಿಂಗ್ ಹೋಂನ್ನು ಬಿಟ್ಟು ನನ್ನ ಹಿಂದೆ ಬರಲು ನಿನಗ ನಿಜಕ್ಕೂ ಮನಸ್ಸು ಬರುವುದುಂಟೆ? ನೀನು ಬರುವುದಿಲ್ಲ ವೆಂದರೆ ಮತ್ತೆ ಮನಸ್ಸಿಗೆ ಬೇಜಾರು. ನೆನ್ನೆಯ ದಿನದ ಸವಿ ನೆನಪುಗಳು ಮೇಲೆ ಮತ್ತೆ ಕಹಿರಸ ಸಿಂಪಡಿಸುವುದು ಬೇಡ. ಎರಡು ವರ್ಷದ ನೆನಪಿನಲ್ಲಿ ಇಪ್ಪತ್ತೈದು ವರ್ಷ ಕಳೆದ ನಮಗೆ ನೆನ್ನೆಯ ನೆನಪಿನಲ್ಲಿ ಉಳಿದ ಆಯುಷ್ಯ ಕಳೆಯುವುದು ಕಷ್ಟವಾಗಲಾರದು ಅಲ್ಲವೆ ?

ಎಂದೆಂದಿಗೂ ನಿನ್ನವನಾಗೇ ಉಳಿದಿರುವ
ಮೋಹನ.

ಎರಡನೆಯ ಬಾರಿ ಕಾಗದವನ್ನು ಓದಿ ಮುಗಿಸಿದಾಗ ಲಲಿತೆಯ ಬಾಯಿ ಯಿಂದ "ಥ್ಯಾಂಕ್ಯೂ ಮೋಹನ್, ಥ್ಯಾಂಕ್ಯೂ." ಎಂಬ ಪದಗಳು ಜಾರಿದವು ಕೆಲವು ಸಮಯದ ನಂತರ ಕಾರು ಶರವೇಗದಿಂದ ಮೈಸೂರಿನತ್ತ ಧಾವಿಸು ತ್ತಿತ್ತು ಅಂದು ತಾನು ಮಾಡಬೇಕಾದ ಆಪರೇಶನ್‌ಗಳು, ನೋಡಬೇಕಾದ ರೋಗಿಗಳನ್ನು ನೆನಸಿಕೊಳ್ಳುವುದರಲ್ಲಿ ಅವಳ ಮನಸ್ಸು ತಲ್ಲೀನವಾಗಿತ್ತು,

— 0 —

# ಗೌರವ

—ಪದ್ಮಾವತೀಬಾಯಿ (ಮಾತಂಗಿ)

ಮೂರು ದಿನದಿಂದ ಒಂದೇ ಸಮನೆ ಸಡಗರ. ಸಂಭ್ರಮ ತಲೆದೋರಿತ್ತು. ಮಹಿಳೆಯರಿಗೆ ಅನಾದಿ ಕಾಲದಿಂದಲೂ ತಮ್ಮನ್ನು ಸೇವಕಿಯಂತೆಯೋ ಅಥವಾ ದೇವತೆಯಂತೆಯೋ ತಿಳಿದೋ ತಿಳಿಯದೆಯೋ ಪುರುಷರು ಅವರನ್ನು ನಾಲ್ಕು ಗೋಡೆಗಳೊಳಗೆ ಇಟ್ಟಿದ್ದರು. ಆದರೆ ಈಗ ಲಗಾಮನ್ನು ಕೈಯಲ್ಲಿಯೇ ಇಟ್ಟುಕೊಂಡು ಕುದುರೆಯನ್ನು ವಿಹರಿಸಲು ಬಿಟ್ಟಂತೆ ಆಗಿದೆ ಅಷ್ಟೆ. ಅಷ್ಟರಲ್ಲೇ ತೃಪ್ತಿಕಂಡ ಈ ಲಲನಾಮಣಿಯರಿಗೆ ಅದೇನೋ ಸಂತಸ, ದಿನಕ್ಕೊಂದೋ ಅಥವಾ ಎರಡು ರೇಶ್ಮೆ ಸೀರೆಗಳನ್ನುಟ್ಟು ಅಲಂಕರಿಸಿಕೊಂಡು ಮಲ್ಲಿಗೆ ದಂಡೆಯನ್ನು ಮುಡಿದು ಓಡಾಡುತ್ತಿದ್ದಾರೆ. ತನ್ನ ಬಳಿಗೂ ಒಂದು ಮಲ್ಲಿಗೆ ದಂಡೆಯನ್ನು ಯಾರೋ ಹಿಡಿದಾಗ ಬೆಚ್ಚಿದಳು ರಮಾ, ಆದರೂ ತೋರಗೊಡದೆ.

'Thanks' ಅಷ್ಟೇ ಹೇಳಿ ತೆಗೆದು ಕೊಂಡಳು. ಸುತ್ತಲೂ ಸಹಪಾಠಿಗಳು, ಸಹೋದ್ಯೋಗಿಗಳು ಯಾರು ಇಲ್ಲದಿರುವುದನ್ನು ಗಮನಿಸಿ ಮುಡಿಯಲ್ಲಿಟ್ಟು ಕೊಂಡಳು. ಸಧ್ಯ, ತನ್ನ ಗೆಳತಿ ಕುಸುಮ ಈ ದಿನದ ಕಾರ್ಯಕ್ರಮಕ್ಕೆ ಬಂದಿರಲಿಲ್ಲ. ಆದರೂ ಮನಸ್ಸಿನಾಳದಲ್ಲಿ ಯಾವುದೋ ಅವ್ಯಕ್ತ ನೋವು ಕಾಣಿಸಿಕೊಂಡಾಗ ವೇದಿಕೆಯ ಮೇಲಿದ್ದ ಕನ್ಯಾಮಣಿಯೋರ್ವಳು ಭಾಷಣ ಪ್ರಾರಂಭಿಸಿದ ಮೇಲೆ ಗಮನ ಅತ್ತ ಹರಿಯಿತು. ರಮಾ ಆಕೆಯ ಮಾತನ್ನು ತದೇಕ ಚಿತ್ತಳಾಗಿ ಕೇಳುತ್ತಿದ್ದಾಳೆ. ತನ್ನಂತೆ ಆಕೆಯೂ ಹೆಣ್ಣು ಆದರಲ್ಲಿ, ಅವಳಲ್ಲಿರುವ ವಾಗ್ಮಿಯತೆ ತನಗೆಲ್ಲಿ ಬರಬೇಕು,

ಹೇಗೆ ಬರಬೇಕು, ತಾಮ ಆಕೆಯಷ್ಟು ಓದಿಲಿಲ್ಲವಲ್ಲಾ ಎಂಬ ಮತ್ತೊಂದು ಚಿಂತೆ, ಇರುವ ಚಿಂತೆಗಳ ಸಾಲಿಗೆ ಬಂದು ಸೇರಿತು. ಹೌದು ಆಕೆಗೆ ತಾನು ಕಲಿತಿದ್ದ ಎಸ್. ಎಸ್. ಎಲ್. ಸಿ. ಒಂದೇ ಸಾಕಾಗಿತ್ತು. ಗಂಡ ಆಫೀಸಿನಲ್ಲಿ ಒಬ್ಬ ಅಧಿಕಾರಿಯಾಗಿದ್ದ ಸಮಯದಲ್ಲಿ ತಾನು ಮನೆಯಲ್ಲಿ ಕುಳಿತು ಬೇಸರವೆಂಬ ಒಂದೇ ಕಾರಣದಿಂದ ಉದ್ಯೋಗವನ್ನು ಅವಲಂಬಿಸಿದಳು. ಆದರಿಂದು ಎಂದೋ ತನ್ನ ಪಾಲಿಗೆ ಸತ್ತ ಗಂಡ ಜನರ ದೃಷ್ಟಿಯಲ್ಲಿ ಸತ್ತಾಗ ಆ ಉದ್ಯೋಗವೇ ಆಕೆಯ ಆಸೆಗಳೆಲ್ಲದರ ಕಲ್ಪತರು. ಒಂದು ದಿನ ಉದ್ಯೋಗಕ್ಕೆ ಹೋಗದಿದ್ದರೆ ಮತ್ತೆ ಮರುದಿನ ಎರಡು ದಿನದ ಕೆಲಸ. ಇನ್ನೂ ಬೇಸರವಾಗಿ ಒಂದು ವಾರವೇನಾದರೂ ಕಛೇರಿಗೆ ಹೋಗದಿದ್ದರೆ ಸಂಬಳಕ್ಕೆ ಸೊನ್ನೆ ಬೀಳುತ್ತಿತ್ತು. ಇದನ್ನೆಲ್ಲ ಕಂಡ ಆಕೆ ಆಫೀಸಿಗೆ ತಪ್ಪಿಸಿಕೊಳ್ಳುತ್ತಿರಲಿಲ್ಲ, ಅದಕ್ಕೂ ಮಿಗಿಲಾಗಿ ಕಛೇರಿಯಲ್ಲಿ ಆಕೆಯನ್ನು ಅರ್ಥಮಾಡಿಕೊಂಡ ಕೆಲವರು ಆಕೆಯ ಕೆಲಸವನ್ನು ತಾವೇ ಮಾಡಿಕೊಟ್ಟು, ಆಕೆಗೆ ಯಾವ ರೀತಿಯಿಂದಲೂ ನೋವು ಕೊಡಬಾರದು ಎಂಬ ಒಂದೇ ಕಾರಣದಿಂದ ಆಕೆಯನ್ನು ನೋಡುತ್ತಿರುವಾಗ ಕಛೇರಿಯಲ್ಲಿಯೇ ತನಗೆ ನೆಮ್ಮದಿ ಎಂದುಕೊಂಡಳು. ವೇದಿಕೆಯಲ್ಲಿ ಮಾತನಾಡುತ್ತಿದ್ದ ವ್ಯಕ್ತಿ "ಈ ಇಪ್ಪತ್ತನೆಯ ಶತಮಾನದಲ್ಲಿ ನಾವು ಗಂಡಸರ ಕೈಯಲ್ಲಿ ತಾಳಿ ಕಟ್ಟಿಸಿಕೊಂಡು ಅವರ ದಾಸ್ಯದಲ್ಲಿ ಬಿದ್ದು ಇಡೀ ಜೀವನವನ್ನು ಆವರ ಕೈಕೆಳಗೆ ಸವೆಸಬೇಕು. ಅವರು ನಮಗೆ ತಾಳಿ ಕಟ್ಟಿ ನಮ್ಮನ್ನು ಆಡಿಯಾಳಾಗಿ ಇರಿಸಿಕೊಂಡಂತೆ ನಾವೂ ಅ ವರಿಗೇನಾದರೂ ಕಟ್ಟಲು ಏಕೆ ಸಾಧ್ಯವಿಲ್ಲ, ಆದುದರಿಂದ ಈ ತಾಳಿ ಕಟ್ಟಿಸಿಕೊಳ್ಳುವುದರ ವಿರುದ್ಧ ಹೋರಾಡಲೇಬೇಕು" ಎಂದಾಗ ತನಗರಿವಿಲ್ಲದೆಯೆ ರಮಾಳ ಕೈ ಎದೆಯ ಗೋಡೆಗಳ ನಡುವೆ ಆಡ್ಡಿತು. ಆದರೆ ಅಲ್ಲಿ ಏನೂ ಇರಲಿಲ್ಲ. ಹೌದು ಈಗ ಆಕೆ ಸರ್ವ ಸ್ವತಂತ್ರಳು ಬಂಧನವೇನೂ ಇರಲಿಲ್ಲ. ಆದರೂ ಆ ಬಂಧನದಲ್ಲಿ ಎಷ್ಟೊಂದು ಸುಖ, ಸಂತೋಷ, ಗೌರವ ಇತ್ತು ತನಗ ತನ್ನ ನೆರೆ ಹೊರೆಯುವರಿಂದ ಬೇರೆಯವರಿಗೇನು ಗೊತ್ತು ತನ್ನ ಬಂಧನದಲ್ಲಿದ್ದ ಸುಖ, ಸಂತೊ,ಷ ಗಂಡನೆನಿಸಿಕೊಂಡ ಪ್ರಾಣಿ ಹೃದಯದ ಕಾಯಿಲೆಯಿಂದ ಮಲಗಿದಾಗ

ಅವನಿಗೆ ಔಷಧಿಕೊಡಿಸುವುದು. ಪಥ್ಯ ಮಾಡುವುದು. ಇಷ್ಟರಲ್ಲಿಯೇ ಇಪ್ಪತ್ತೈದು ವರ್ಷಕ್ಕೆ ನಲವತ್ತರ ಮುಪ್ಪು ಬಂದಿತ್ತು. ಆಂತರ್ಯದಲ್ಲಿ ಯಾವ ದೈಹಿಕ ಸುಖವೂ, ಮಾನಸಿಕ ಸುಖವೂ ಇರಲಿಲ್ಲ. ಆದರೂ ಆಗೊಮ್ಮೆ, ಈಗೊಮ್ಮೆ ಆತನೇ ಈಕೆಯನ್ನೂ ರಮಿಸಲು ಬಂದಾಗ, ಅಪ್ಪಿಕೊಂಡಾಗ ಮೈ ಮೇಲೆ ಚೇಳುಗಳು ಹರಿದಂತಾಗಿ, ಮೃತ್ಯುದೇವತೆಯೇ ತನ್ನನ್ನು ಅಪ್ಪಿಕೊಂಡಿದೆಯೋ ಅನ್ನಿಸುವಷ್ಟು ಬೇಸರ, ಭಯ. ಆದರೂ ಮನೆಯ ಮರ್ಯಾದೆಯ ಪ್ರಶ್ನೆ ಎದುರು ಬಂದಾಗ ತನಗಿಂತಲೂ ದುಃಖದಲ್ಲಿರುವ ಇನ್ನಿತರ ಹೆಣ್ಣು ಮಕ್ಕಳನ್ನು ನೆನೆದು ಸಾಂತ್ವನ ಪಡೆಯುತ್ತಿದ್ದಳು. ಸಹ್ಯವೋ, ಅಸಹ್ಯವೋ ಆಕೆಯೂ ತಾಯಿಯಾದಳು. ಅದೂ ಗಂಡು ಮಗುವಿನ ತಾಯಿ. ಇದು ಆಕೆಗೆ ಇನ್ನಷ್ಟು ಗೌರವವನ್ನು ತಂದುಕೊಟ್ಟಿತ್ತು. ನಮ್ಮ ಜನಗಳೇ, ಅಷ್ಟು ಒಳಗಿನ ನೋವು ಹೇಗಾದರಿರಲಿ, ಒಂದೆರಡು ಮಕ್ಕಳಾದರೆ ಗಂಡ - ಹೆಂಡಿರ ಪ್ರೇಮ ಪ್ರತೀಕವೇ ಆ ಮಕ್ಕಳು ಎಂದು ಅವರ ಸುಖವನ್ನು ಕೊಂಡಾಡುವರೇ ಹೆಚ್ಚು. ಅದು ಯಾವುದೋ ಒಂದು ವಿಷಗಳಿಗೆಯ ಕಾಮವೇಕಾಗಬಾರದು? ಎಂದು ಯೋಚಿಸುವಷ್ಟು ತಿಳುವಳಿಕೆಯೇ ಇಲ್ಲ. ಆದರೂ ಇದೆಲ್ಲ ಸುಖ ಸಂಸಾರದ ಲಕ್ಷಣಗಳು ಎಂದಷ್ಟೇ ಹೇಳುವ ನಮ್ಮ ಈ ಜನ ಎಂದು ಮುಂದುವರೆಯುವರೋ ಎಂದು ಮಲುಕು ಹಾಕುವಷ್ಟರಲ್ಲಿ ಭಾಷಣ ಮಾಡಿದ ಲಲನೆಗೆ ಮಲ್ಲಿಗೆಯ ಹಾರವನ್ನು ಹಾಕಿ ಎಲ್ಲರೂ ಚಪ್ಪಾಳೆ ತಟ್ಟಿದಾಗ ತಾನೂ ಅವರನ್ನನುಸರಿಸಿದಳು. ಏನೋ ಬರುವಾಗ ಇದ್ದಷ್ಟು ಉತ್ಸಾಹ ಈಗ ಇಲ್ಲವೇನೋ ಅನ್ನಿಸಿತು. ಆಕೆ ಬರಬೇಕಾದ ಅವಶ್ಯಕತೆ ತಾನೆ ಏನಿತ್ತು? ಆದರೂ ಅಂದು ಕಛೇರಿಗೆ ರಜೆಯಾದುದರಿಂದ ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಹೆಸರು ಪಡೆದಿರುವ ಹೆಣ್ಣುಗಳನ್ನು ತಾನೂ ನೋಡಬೇಕು. ಅವರ ಜೊತೆಯಲ್ಲಿ ತಾನೂ ನಿಂತು ಭಾವ ಚಿತ್ರವನ್ನು ತೆಗೆಸಿಕೊಳ್ಳಬೇಕು. ಅವರ ಪ್ರತಿಯನ್ನು ತೆಗೆದುಕೊಂಡು ತನ್ನ ಮನೆಯಲ್ಲಿರಿಸಿಕೊಳ್ಳಬೇಕು. ಇದಿಷ್ಟೇ ಕಾರಣದಿಂದ ಬಂದಿದ್ದಳು. ಮೊದಲನೆ ಗೋಷ್ಠಿ ಮುಗಿದು ಇನ್ನು ಮಧ್ಯಾಹ್ನದ ಗೋಷ್ಠಿಗೆ ಒಂದೆರಡು ಗಂಟೆಯ ಅಂತರವಿದೆಯೆಂದು ತಿಳಿದು ಎಲ್ಲರೂ ತಮಗೆ ಬೇಕಾದಂತೆ

ಜಮರಿ ಹೊರಟಾಗ "ಹಲೋ ರಮಾ" ಎನ್ನುವ ಗೆಳತಿ ಕುಸುಮಳ ದನಿಗೆ ಬೆಚ್ಚಿದಳು. ಕಾರಣ ಆಕೆ ಈ ದಿನದ ಕಾರ್ಯಕ್ರಮಕ್ಕೆ ಬರುವುದಿಲ್ಲ ವೆಂದು ಹೇಳಿ ಇದ್ದಕ್ಕಿದಂತೆಯೇ ಪ್ರತ್ಯಕ್ಷವಾದಾಗ, ಮುಡಿದ ಮಲ್ಲಿಗೆಯ ದಂಡೆ ಮುಳ್ಳಿಂತೆ ಚುಚ್ಚಿದಾಗ ತಕ್ಷಣ" ಒಂದು ನಿಮಿಷ ಇಲ್ಲೇ ಇರು ಕುಸುಮ" ಎಂದು ಟಾಯ್ಲೆಟ್ಟಿನತ್ತ ಓಡಿದಳು. ಸೂಕ್ಷ್ಮಮತಿಯಾದ ಕುಸು ಮಳು ಇವಳ ಮುಡಿಯತ್ತ ಕಣ್ಣು ಹಾಯಿಸಿ ನಿಟ್ಟುಸಿರು ಬಿಟ್ಟದ್ದನ್ನು ಆಕೆ ಅರಿಯಲೇ ಇಲ್ಲ.

ಒಳಗೆ ಹೋಗಿ ಹೂವಿನ ದಂಡೆಯನ್ನು ಬ್ಯಾಗಿನಲ್ಲಿರಿಸಿ, "ಬರೋಲ್ಲ ಅಂದಿದ್ದೆ" ಎಂದಳು.

"ಇಲ್ಲ ರಮಾ, ಬರಬಾರದು ಅಂದುಕೊಂಡೆ, ಆದರೂ ನಾಳೆಯ ಗೋಷ್ಠಿಯನ್ನು ನಾನೇ ನಡೆಸಿಕೊಡಬೇಕಲ್ಲ. ಅದಕ್ಕೆ ಅದರಲ್ಲಿ ಭಾಗ ವಹಿಸುವರ ಪರಿಚಯ ಬೇಕಾಗಿತ್ತು ಬಂದೆ, ಅದ್ಸರಿ, ಈಗ ಎತ್ತಕಡೆ ನಿನ್ನ ಪ್ರಯಾಣ?" ಎಂದಳು ಕುಸುಮ.

"ಮನೆಗೆ"

"ಯಾಕೆ? ಮಧ್ಯಾಹ್ನದ ಕಾರ್ಯಕ್ರಮಕ್ಕೆ ಇರೊಲ್ವ!"

"ಇಲ್ಲಮ್ಮಾ ಯಾಕೋ ತಲೆ ನೋವು"

"ನಿಂಗೆ ತಲೆ ಇದೆ. ಅದಕ್ಕೆ ನೋವು ಬರುತ್ತೆ. ನಂಗೆ ನೋಡು ತಲೇನೂ ಇಲ್ಲ ನೋವೂ ಇಲ್ಲ.

ಹೋಗೇ ನಿಂಗೆ ಯಾವಾಗಲೂ ಹುಡುಗಾಟನೆ,ನಾನು ಹೋಗ್ತೀನಿ" ಎಂದ ಗೆಳತಿಯ ಕೈ ಹಿಡಿದು ಕುಸುಮ.

"ಯಾಕೆ ಬೇಜಾರಾಯ್ತಾ? ನಾನು ನಿನಗೋಸ್ಕರವೆ ಓಡೋಡಿ ಬಂದೆ. ಈ ಹೆಂಗಳೆಯರ ಕಿಲ ಕಿಲ ಕಲರವದಲ್ಲಿ ಎಲ್ಲಿ ನೀನು ಇಲ್ಲಿದ್ದವನ್ನು ನೆನೆಸಿಕೊಂಡು ಅಳುವೆಯೋ ಅಂತ ಬಂದರೆ, ಹೋಗ್ತೀನಿ ಅಂತೀಯಲ್ಲಾ, ಬಾ ಯಾವುದಾದರೂ ಹೋಟೆಲಿಗೆ ಹೋಗಿ ಬರೋಣ. ನನಗಂತೂ ತುಂಬಾ ಹಸಿವು. ನೀನು ತಡಮಾಡಿದ್ರೆ ನಿನ್ನೆ ತಿಂದು ಬಿಡ್ತೀನೇನೋ."

"ಅಷ್ಟು ಮಾಡು ಮತ್ತೆ"

"ಮಾಡೋಣ ಹೋಟೆಲಿನಲ್ಲಿ ಊಟವನ್ನು ಬಾ" ಎಂದು ಕೈ ಹಿಡಿದು ಕರೆದೊಯ್ದಳು ಕುಸುಮ,

ಊಟ ಮುಗಿಸಿ ಮತ್ತೆ ಗೋಷ್ಠಿಗೆ ಬಂದಾಗ ಲಲನಾ ಮಣಿಯರೆಲ್ಲ ಒಂದೆಡೆ ಸೇರಿ ಗುಜು ಗುಜು ಪ್ರಾರಂಭಿಸಿದ್ದರು. ಸಂಜೆಯ ವೇಳೆಯಲ್ಲಿ ಯಾವುದೋ ಮರದ ಕೆಳಗೆ ನಿಂತು ಹಕ್ಕಿಗಳ ಗಿಜಿಗಿಜಿ ಶಬ್ದ ಕೇಳಿದಂತಿತ್ತು ಅವರ ಮಾತು. ಎಷ್ಟು ಓದಿದರೇನು ಅವರು ಅವರೆ. ಸುಮ್ಮನೆ ಪುರುಷರನ್ನು ಬಯ್ಯುವುದು. ಮಾಡುವುದು ಎಲ್ಲಾ ಒಂದೇ, ಸೀರೆ ಒಡವೆಗಳ ಅದೇ ಹರಟೆ ಒಣ ಹರಟೆ.

ಮಧ್ಯಾಹ್ನದ ಗೋಷ್ಠಿ ಪ್ರಾರಂಭವಾದಾಗ ಜನರಿನ್ನೂ ಅಷ್ಟಾಗಿ ಸೇರಿರಲಿಲ್ಲ, ಎಷ್ಟಾದರೂ ಮಹಿಳೆಯರ ಕಾರ್ಯಕ್ರಮ, ಅದಕ್ಕೆ ಅವರೆಲ್ಲ ಸಿಂಗರಿಸಿಕೊಂಡು ಬರಬೇಕಾಗಿತ್ತು. ಬಹುಶಃ ಭಾಷಣಕಾರರಿಗೂ ಬೇಜಾರಾಗಿರಬೇಕು ತಮ್ಮ ಭಾಷಣವನ್ನು ಕೇಳಲು ಯಾರು ಇಲ್ಲವಲ್ಲಾಂತ, ಕೊನೆಗೂ ಒಬ್ಬೊಬ್ಬರೇ ಯಾವುದೋ ಫ್ಯಾಷನ್ ಪೆರೇಡಿಗೆ ಬಂದಂತೆ ತಮ್ಮದೆ ಆದ ಶೃಂಗಾರ ವೈಖರಿಯಿಂದ ಹಾಜರಾದರು. ಅವರು ಹಾಕಿಕೊಂಡ ಒಡವೆಗಳೇನು? ಎಲ್ಲಾ ಮ್ಯಾಚಿಂಗ್, ಆಗದಿದ್ದುದು ಅಂದರೆ ಅವರ ಮೈ ಬಣ್ಣವೊಂದೇ ಬೆಳಿಗ್ಗೆ ಗೋಷ್ಠಿಯಲ್ಲಾ ಬರೀ ತಾಳೀ ಕಟ್ಟು

ವುದಕ್ಕೆ ಸಂಬಂಧಿಸಿದರೆ ಮಧ್ಯಾಹ್ನದ ಗೋಷ್ಠಿ ಮಕ್ಕಳು ಮನೆ ಇತ್ಯಾದಿ ಜಮ. ತಾಳಿ ಭಾಗ್ಯ ಎಂಥಹದು. ಮುತ್ತೈದೆಯಾಗಿ ಸಾಯಬೇಕು. ಸ್ವರ್ಗ ಇರುವುದಾದರೆ ಅದು ಗಂಡನ ಸಾನಿಧ್ಯದಲ್ಲಿ ಇತ್ಯಾದಿ ಎನ್ನುವುದೇ ಆಗಿತ್ತು. ರಮಾಳಿಗೆ ಈ ಗೋಷ್ಠಿಯನ್ನು ಯಾಕಾದರೂ ಮಾಡ್ತಾ ಇದ್ದಾರೋ ಅನ್ನಿಸಿತಾದರೂ ಹೆಣ್ಣಿನ ಸಹಜ ಆಸೆಯ ಕಣ್ಣಿನಿಂದ ಅವರ ಒಡವೆಯತ್ತ ಹಾಯಿಸಿದಳು. ಮತ್ತೆ ಅವರನ್ನು ತನ್ನ ಜೊತೆಯಲ್ಲಿ ಹೋಲಿಸಿಕೊಂಡಾಗ ತನಗೆ ತೋರಿಸಿಕೊಳ್ಳುವಷ್ಟು ಐಶ್ವರ್ಯವೇನೂ ಇರಲಿಲ್ಲ. ಇದ್ದ ಒಂದೆರಡು ಒಡವೆಗಳೂ ಗಂಡನ ಕಾಯಿಲೆಗೇ ಖರ್ಚಾಗಿತ್ತು. ಇದ್ದ ಒಂದೇ ಒಂದು ಎಳೆ ಚೈನಿನ ಜೊತೆಗೆ ಕಾಡಿ ಬೇಡಿ ಎರಡೇ ಸವರನ್ನಿಗೆ ಕರಿಮಣಿ ಸರವನ್ನು ಮಾಡಿಸಿ ಕೊಂಡಿದ್ದಳು. ಆದರೆ ಗೆಳತಿಯತ್ತ. ಕಣ್ಣು ಹಾಯಿಸಿ "ನಾನು ಹೋಗ್ತೀನಿ ಕುಸುಮ, ತುಂಬಾ ತಲೆ ನೋವು."

ರಮಾಳನ್ನು ಅರ್ಥಮಾಡಿಕೊಂಡ ಕುಸುಮ "ಸರಿ ನಡಿ ಹೋಗೋಣ" ಎಂದು ಬಸ್ ನಿಲ್ದಾಣದತ್ತ ಬಂದು ಆಕೆಯನ್ನು ಬಸ್ಸಿನಲ್ಲಿ ಕೂರಿಸಿ ತಾನು ಮನೆ ಸೇರಿದಳು.

ಮುಗುಡ ತುಂಬಿದ ಮಗಳ ಮುಖವನ್ನು ಕಂಡು ಶಾರದಮ್ಮ "ಯಾಕಮ್ಮಾ ಒಂದು ಥರಾ ಇದ್ದೀಯಾ" ಎಂದಾಗ

"ಏನೂ ಇಲ್ಲಮ್ಮ, ತುಂಬಾ ತಲೆ ನೋವು"

"ಊಟ ಮಾಡು ಬಾ, ಚಳಿಯಲ್ಲಿ ಬಂದಿದ್ದೀಯಾ. ಬೆಳಿಗ್ಗೇನೂ ಊಟ ಮಾಡಲಿಲ್ಲ. ಅವಕ್ಕೆ ತಲೆನೋವು"

"ನಂಗೇನೂ ಬೇಡಮ್ಮ"

"ಹಾಗಂದ್ರೆ ಹೇಗಮ್ಮ ನೋಡು ಇರುವ ಮಗನಿಗಾದರೂ ಬದುಕಬೇಡವೇ?"

“ಹೌದು, ತಾನು ಯಾರ್ಯಾರಿಗೋ ಬದುಕಬೇಕೇ ವಿನಾ, ತನಗೋ ಸ್ಕರ ಬದುಕಲು ಆಗದು ಅಲ್ಲವೇ.?” ಎಂದುಕೊಂಡು ನಿಟ್ಟುಸಿರುಗರೆದಳು.

“ನಾನು ಆಮೇಲೆ ಮಾಡ್ತೀನಿ, ನೀನು ಮಲಗಮ್ಮ” ಎಂದು ತಾಯಿ ಯನ್ನು ಸಮಾಧಾನಪಡಿಸಿ ಅಡುಗೆ ಮನೆಗೆ ಬಂದಳು.

ಅಲ್ಲಿಯೇ ಯಾವುದೋ ಒಂದು ಡಬ್ಬಿಯಲ್ಲಿದ್ದ ಕರಿಮಣಿಸರವನ್ನು ಕೈಯಲ್ಲಿಡಿದುಕೊಂಡು ಇದಕ್ಕೋಸ್ಕರವೇ ಅಲ್ಲವೇ ನಮ್ಮ ಜನ ಮರ್ಯಾದೆ ಕೊಡುವುದು. ಮನೆಯೊಳಗೆ ಹೇಗಿದ್ದರೇನು ಇದೊಂದು ನಮ್ಮ ಕೊರ ಳನ್ನು ಅಲಂಕರಿಸಿಕೊಂಡು ಇದ್ದರೆ ಆಯ್ತು. ಅವಳಂಥ ಭಾಗ್ಯಶಾಲಿ ಇನ್ನಿಲ್ಲ ನಮ್ಮ ಜನಗಳಿಗೆ ಎಂದುಕೊಂಡವಳೇ, ಇಷ್ಟು ದಿನ ತನಗಿದ್ದ ಸುಖ ವಾದರೂ ಏನು? ಇನ್ನು ಮುಂದೆ ಬರಬಹುದಾದ ಸುಖವಾದರೂ ಏನು? ಆದರೂ ಇದನ್ನು ಕೊರಳಿಗೆ ಉರುಳು ಹಾಕಿಕೊಂಡು ಇನ್ನೆಷ್ಟು ನನ್ನಂಥ ಹೆಣ್ಣು ಮಕ್ಕಳು ಬದುಕಬೇಕು, ಬದುಕಲೇ ಬೇಕು. ಬದುಕುತ್ತಿರಬೇಕೆಂದು ಸೆರಗಿನ ತುದಿಯಲ್ಲಿ ಕಣ್ಣನ್ನು ಒರೆಸಿಕೊಂಡು ಬಂದಳು.

ಅಡುಗೆ ಮನೆಯಿಂದ ಮಗಳು ಬಂದುದನ್ನು ಕಂಡು ಅವಳು ಊಟ ಮಾಡಿ ಬಂದಳೆಂದು ತಾಯಿಯ ಕರುಳು ಸಮಾಧಾನ ಪಟ್ಟಿತ್ತು.



# ಪರಿಹಾರ

—ಲೇ: ಗುಂಡಿಬಂಡೆ ಪೂರ್ಣಿಮಾ

ಬಚ್ಚಲು ಮನೆಯ ಉರಿ ಹೊಗೆಯಾಡುತ್ತಿದೆ. ಅದರ ಜೊತೆ ಗುದ್ದಾಟವಾಡುತ್ತ ನನ್ನ ಮನಸ್ಸು ಲೆಕ್ಕ ಹಾಕುತ್ತ ನಡೆದಿದೆ. ಇದು ಹೀಗೇ ಮುಂದುವರೆದರೆ ಮುಂದಿನ ಕಥೆ ಹೇಗೆ? ಮೊನ್ನೆ ಕಾಮೂ ಹೇಳಿದಳು.

'ನೀನು ಬರೀತಾ ಇರೋ ಕಥೆ ಥೀಮ್ ನಂಗೆ ಭಾಳ ಹಿಡಿಸ್ತು ಸೀಮಾ, ಇದು ಬದುಕಿನಲ್ಲಿ ಕಾಣ್ತಾ ಇರೋ ಸಮಸ್ಯೆ ಇಂಥವನ್ನೆಲ್ಲ ಮುಚ್ಚಿ ಹಾಕಿ ಸಾಭ್ಯಸ್ತರ ಹಾಗೆ ಬರೀ ಒಂದಿಷ್ಟು ರೊಮಾನ್ಸು, ಚಳುವಳಿ, ದುರಂತ ಅಂತೆಲ್ಲ ಕಥೆ ಹೆಣ್ದು ಓದುಗರ ಮುಖಕ್ಕೆ ರಾಚ್ತಾರಲ್ಲ. ತಗೊಳ್ಳಿ ಸಾಹಿತ್ಯಾಂತ. ಅದಕ್ಕಿಂತ ಹೀಗೆ ಸ್ವಲ್ಪ ಬದುಕಿನೊಳಗೆ ಇಳ್ದು ನಿತ್ಯ ತೊಳ ಲಾಡ್ತಾ ಇರೋ ಸಾವಿರಾರು ಮಂದಿ ನೋವನ್ನು ಕುರಿತು ಬರೆದ್ರೆ ಮುಂದಾದ್ರೂ ಜನ ಎಚ್ಚೆತ್ಕೊತಾರೋ ಏನೋ.

"ಇಲ್ಲ ಕಾಮೂ, ಅವ್ರ ದೃಷ್ಟೀಲಿ ನಾನು ಬರೀತಾ ಇರೋದು ಸತ್ಯ ಅಂತ ಅನ್ಸಲ್ಲ, ಭೋಗಸ್ ಅಂತ ತಳ್ಳಿ ಹಾಕ್ತಾರೆ. ಈಗಿನ ಸಾಹಿತ್ಯದ ಕ್ರಮ ಬೇರೇನೇ ಆಗ್ಬಿಟ್ಟಿದೆ. ಫೇಮಸ್ ಅಂತ ಅನ್ನಿಸ್ಕೊಳೋದೇ ಮುಖ್ಯ ಈಗಿನವರ ದೃಷ್ಟೀಲಿ. ನಮ್ಮ ಪರಿಸರಕ್ಕೆ ಹೊಂದದೆ ಇರೋ ವಾತಾವ ರಣಾನ ಸೃಷ್ಟಿಸಿ ಈ ಬದುಕಿಗೆ ಅವಾಸ್ತವವಾದ ಅಂಶಗಳನ್ನ ತುರುಕಿ, ಇದು ಹೀಗೇ ಅಂತ ತೀರ್ಮಾನ ಹೇಳಿಬಿಡೋದೆ ಸಾಹಿತ್ಯದಲ್ಲಿ ಹೊಸ ದಿಕ್ಕನ್ನು ಕೊಟ್ಟ ಹಾಗೆ ಅಂತ ಎಣಿಸೋ ಜನವೇ ಇರೋದು, ಅಂಥದ್ರಲ್ಲಿ ನಾನು ಈ ರೀತಿ ಕಥೆ ಬರೆದ್ರೆ ನಲವತ್ತು ವರ್ಷದ ಹಿಂದೆ ಈ ಕಥೆ ಪ್ರಕಟವಾಗಿದ್ರೆ ಸರಿ ಇರ್ತಿತ್ತು ಅಂತಾರೆ." ಅಂದಿದ್ದೆ.

'ನೀನೆಂಥ ಕ್ರ್ಯಾಕೇ ಹುಡ್ಗೀ? ಅವ್ರು ಬರ್‍ಯೋದು ಹೆತ್ತು ಜನಾನ ಮೆಚ್ಚಿಸ್ಸೋದು ಅವ್ರಂತ ಫಾಲ್ಸ್ ಪ್ರೆಸ್ಟೀಜ್ ಇಟ್ಕೊಂಡಿರೋರ್‍ನ, ಆದ್ರೆ ಹೆಚ್ಚಿನ ಜಗತ್ತು ಯಾವ್ದು ಹೇಳು? ಅಷ್ಟು ಜನಕ್ಕೆ ಹತ್ರ ನೀನಾ ಗೋದೂ ಅಲ್ದೆ ಅವ್ರು ಬದುಕಿಗೊಂದು ದಾರಿ ತೋರಿಸ್ದ ಹಾಗಾಗುತ್ತೆ ಅಲ್ವೇನು"!

ಆದ್ರೆ ನಂಗೆ ಸಂಶಯ, ಅಳುಕು. ಇಂಥದನ್ನ ಬರಿದ್ರೆ ಅಚ್ಚು ಮಾಡೋ ಪ್ರಕಾಶಕರೂ ಇಲ್ಲ ಕತೆ ಅಂತ ಗುರ್ತಿಸೋ ಲೇಖಕರಾಗ್ಲೀ, ವಿಮರ್ಶಕರಾಗ್ಲೀ ಇಲ್ವಲ್ಲಾಂತ. ನನ್ನ ಸಂಶಯಕ್ಕೆ ಕಾಮೂ ಹೀಗೆ ಹೇಳಿದ್ಲು.

"ನೀನು ಬರೀತಾ ಇರೋದು ಜೀವಂತ ಸಮಸ್ಯೆಗಳ್ನ ಕುರ್ತು ಅವು ಗಳ್ಗೆ ಪರಿಹಾರಾನ ಪ್ರಶ್ನಿಸಿ ಅಲ್ವಾ! ಅದ್ರಿಂದ ಎಷ್ಟ ಜನರ ಯೋಚ್ನೆಗೆ ಗ್ರಾಸ ಕೊಟ್ಟ ಹಾಗಾಗುತ್ತೆ ಗೊತ್ತಾ'–

ಒಲೆ ಈಗ ಸರಿಯಾಗಿ ಹತ್ತಿಕೊಂಡು ಉರಯುತ್ತಿತ್ತು. ನಾನು ಒಂದೊಂದೇ ತೆಂಗಿನಗರಿಯನ್ನು ಮಡಿಚಿ, ತಿರುವಿ ಒಲೆಯೊಳಗೆ ಇಡತೊ ಡಗಿದೆ. ಶಾಖ ಹೆಚ್ಚತೊಡಗಿತು. ಅದರೊಳಗೆ ನನ್ನ ಕಥಾನಾಯಕಿ ರಶ್ಮಿ ಸುಳಿದಳು.

"ಸಾಧ್ಯವೇ ಇಲ್ಲ. ನಾನಿನ್ನೂ ಈ ಮನೇಲಿ ಇರ್‍ಲ್ಲಾರೆ. ಈ ರೀತಿ ಬದುಕಿ ಸಲಿಸಿ ಹೋಗೋದಕ್ಕಿಂತ ಏನಾದ್ರೂ ತಗೊಂಡು ಪ್ರಾಣ ಬಿಡೋದು ವಾಸಿ."

'ಹೋಗೆ,ಹೋಗೆ...ಅದೆಲ್ಲಿಗ್ಹೋಗ್ತೀಯ, ಹೊರಟ್ಹೋಗೇ ಆಮೇ ಲಾದ್ರೂ ನಾನು ನಿಶ್ಚಿಂತೆಯಾಗಿ ಇರ್ತೀದು. ನಿನ್ನಂಥವ್ಳನ್ನ ಕಟ್ಕೊಂಡು ಸಾಯೋತನ್ಕ ಅಡ್ಜಸ್ಟ್ ಮಾಡ್ಕೊ ಅಂದ್ರೆ"

ಕತಕತನೆ ಕುದಿಯುವಂತಾದಳು ರಶ್ಮಿ. ಮಂಚದ ಮೇಲೆ ಒಂದು ಕಡೆ ತೀರ ಪಕ್ಕಕ್ಕೆ ವಾಲಿಕೊಂಡು ಮಲಗಿದ್ದ ಕುಮಾರ ಕುಡಿತದ ಅಮಲಿನಲ್ಲಿದ್ದ. ರಶ್ಮಿಯೊಡನೆ ಮಾತನಾಡುವುದಿರಲಿ, ಅವಳೆಡೆ ನೋಡುವುದು ತನಗೆ ಬೇಡದ ವಿಷಯ ಎಂಬಂತೆ ಅಲಕ್ಷ್ಯದಿಂದ ತೂಕವಿಲ್ಲದ ಮಾತನ್ನಾಡಸ್ತ್ರಕ್ಕೆ ಉದ್ದ ಚಾಚಿಕೊಂಡು ಗೊಣಗಿದ.

ಅವನ್ನು ನಿರೀಕ್ಷಿಸದ ರಶ್ಮಿಗೆ ಎದೆಗೇ ಒದ್ದ ಹಾಗಾಯ್ತು. ಸಾವರಿಸಿಕೊಂಡೇ ಹೇಳಿದ್ಲು,

"ನಾನ್ ತಾನೆ ಅದೆಷ್ಟು ದಿನಾಂತ ಈ ದುರ್ನಾತ, ಕೆಟ್ಟ ನಡವಳಿಕೆ. ಸಿಟ್ಟು ತಾಪಾನ ಸಹಿಸ್ಕೊಂಡು ಬದ್ಕಿರೋಕೆ ಆಗುತ್ತೆ. ಮದ್ವೆ ಅದ್ದೇ ಒಂದು ಶಾಪ ಅನ್ಸ್ಕೊಳ್ಳೋ ಹಾಗಾಗಿ ಹೋಯ್ತು" ಅವಳ ಮಾತು ಮುಗಿಯುವ ಮೊದಲೇ ಮಲಗಿದ್ದವನು ದಿಗ್ಗನೆದ್ದು ಹಾಗೇ ಮುಗ್ಗರಿಸಿದ. ನಿಂತಲ್ಲೇ ಹಾಗೇ ಅವನನ್ನ ನೋಡಿದಳು ರಶ್ಮಿ. ಮದ್ವೆ ಆದ ದಿನ ತಾನು ಹೇಳಿದ್ಲು. 'ನನ್ನ ಒಂದ್ ತಿಂಗ್ಳು ಬಲವಂತ ಮಾಡ್ಬಾರ್ದು. ನನ್ನ ಪಾಲಿಗೆ ಬಂದದ್ದು ಪಂಚಾಮೃತ ಅಲ್ಲ ವಿಷಾಮೃತ.

ನಿರೀಕ್ಷಿಸದ ಮಾತು ಕುಮಾರನನ್ನು ಅಪ್ರತಿಭನನ್ನಾಗಿ ಮಾಡಿತ್ತು. ಆದರೂ ತಾಳ್ಮೆಯಿಂದ ಕೇಳಿದ್ದ.

"ಕಾರಣ?"

"ಇಂಡಿಯಾ ದೇಶ್ದಲ್ಲಿ ಮದ್ವೆ ಆಗ್ದ ಹೆಣ್ಮಕ್ಕಳಿಗೆ ಬೆಲೆ ಇಲ್ಲ. ಅದಕ್ಕೋಸ್ಕರ ನಾನು ಮದ್ವೆ ಆಗಿದ್ದು. ಇಲ್ದಿದ್ರೆ ನಿಮ್ಮನ್ನ ಖಂಡಿತ ಮದ್ವೆ ಆಗ್ತಿರಲಿಲ್ಲ. ಈ ವಾತಾವರಣಕ್ಕೆ ಅಡ್ಜಸ್ಟ್ ಮಾಡ್ಕೊಳ್ಳೋಕೆ ನಂಗೆ ಒಂದ್ ತಿಂಗ್ಳು ಟೈಂ ಬೇಕು."

ಮತ್ತೆ ಪ್ರಶ್ನಿಸದೆ ಕೋಣೆಯಿಂದ ಹೊರ ನಡೆದಿದ್ದ ಕುಮಾರ. ನೀವು ಕಾದಿದ್ದು ಸಾಕೇನೋ ನೋಡೋಣ ಎನಿಸಿದಾಗ ರಶ್ಮಿ ಬಿಡುಳಸ್ಸು

ಸೇರಿದ್ದಳು. ಕುಮಾರ, ಗಾಂಧಿಪಾರ್ಕಿನಲ್ಲಿ ಕತ್ತಲೆ ಹೊತ್ತು ಅತ್ತಿತ್ತ ಅಡ್ಡಾಡುತ್ತಿದ್ದ, ಬಯಸಿ ಇವಳನ್ನ್ಯಾಕೆ ಕೈ ಹಿಡಿಯಬೇಕಾಗಿತ್ತು ನಾನು? ಬೇರೆ ಹೆಣ್ಣೇ ನನಗೆ ಸಿಕ್ತಿರಲಿಲ್ವೆ? ಯಾಕೆ ಇಷ್ಟು ಒರಟೊರಟಾಗಿ ನಡ್ಕೊತಾಳೆ ಅನ್ನೋದೆ ಅರ್ಥ ಆಗ್ತಿಲ್ಲ. ನನ್ನ ಕೂದ್ಲು ಬೆಳ್ಳಗಾಗಿರ ಬಹುದು, ಒಡವ ಇರ್ಬ್ಲೋದು. ಖಾಯಿಲೆಯಿಂದ ನರಳ್ತಾ ಇರೋ ತಂದೇನೂ ನಂಗಿರಬಹುದು. ಆದ್ರೆ ಅವ್ಳಿಗೆ ಅವೆಲ್ಲ ಗೊತ್ತಿಲ್ದೆ ಇದ್ವ ವಿಷ್ಯ ಏನಲ್ಲವಲ್ಲ? ಬೇರೆಯವ್ರ ಹತ್ರ ಅದೆಷ್ಟ್ ಚೆನ್ನಾಗಿ ಬೆರೀತಾಳೆ. ಜೋಕ್ಸ್ ಕಟ್ ಮಾಡ್ತಾಳೆ, ಹೊಂದ್ಕೊತಾಳೆ, ನನ್ನ ಮುಖ ಕಂಡ್ರೆ ಮಾತ್ರ ಮೈಲ್‌ದೂರ ಓಡಿ ಹೋಗ್ತಾಳಲ್ಲ. ಅಕ್ಕಂಗೆ ನಾನೆಷ್ಟ್ ದಿನ ಹೇಳಿದ್ದೆ. "ಇಲ್ಲಕ್ಕ ರಶ್ಮಿಗೆ ನನ್ ಮೇಲೆ ಮನಸ್ಸಿಲ್ಲ. ನಂಗೆ ಬೇರೆ ಕಡೇನೆ ಎಲ್ಲಾದ್ರೂ ನೋಡೂ" ಅಂತ,

'ಒಂದ್ ನಾಕ್ ದಿನ ಹಾಗ್ಮಾಡ್ತಾಳೆ ಬಿಡು, ಆಮೇಲೆ ಸರಿ ಹೋಗುತ್ತೆ' ಅಂದಿದ್ಲು. ಇರೋ ಒಬ್ಬ ತಮ್ಮಂಗೆ ತನ್ನ ಮಗಳ್ನೇ ಕೊಡ್ಬೇಕು ಅಂತ ಆವಳಾಸೆ, ರಾಜೀವಂಗಂತೂ ನಾನೊಂದ್ರೆ ಪ್ರಾಣ. "ಇಲ್ಲ ರಾಜ ಅವ್ಳಿಗೆ ನನ್ನ ಕಂಡ್ರೇನೇ ಆಗಲ್ಲಾಂದ್ರೆ." "ಹಾಗೇನಿಲ್ಲ, ಅವ್ಳೇ ಈಗ ಒಪ್ಕೊಂಡಿದಾಳೆ, ನೀನು ಹುಂ ಅನ್ನು ಸಾಕು" ಅಂದಿದ್ದ. ಸ್ವಂತ ಅಣ್ಣ ಯಾಕೆ ಸುಳ್ಳು ಹೇಳ್ತಾನೆ? ಅಮ್ಮ ಈಗ ಒಪ್ಕೊಂಡಿದ್ರೂ ಇರ್ಬ್ಲೋದು ಅನ್ಕೊಂಡಿದ್ದೆ ನಾನು. ಹೀಗೆ ಯಾಕೆ ಆಗ್ಬೇಕಿತ್ತು?

ಕೈ ಚುರುಕ್ ಎನ್ನಿಸಿ ಹಿಂತೆಗೆದುಕೊಂಡವಳು ತೊಟ್ಟಿಯ ಪಕ್ಕ ಇಟ್ಟಿದ್ದ ಬಕೆಟನ್ನ ಬಚ್ಚಲು ಕಟ್ಟೆಯ ಮೇಲಿರಿಸಿ ಸ್ನಾನಕ್ಕೆಂದು ಬಿಸಿ ನೀರು ತೋಡಲಾರಂಭಿಸಿದೆ. ನನ್ನ ಮಿದುಳಿನ ಚಕ್ರ ಸುತ್ತುತ್ತಲೇ ಇತ್ತು,

ಕಾಮೂ ಕೇಳಿದ್ದಳು.

"ಸರಿ, ನೀನಿದುವರ್ಗೆ ಬರ್ದಿರೋದೇನೋ ಸರಿ. ಅವಳ್ಯಾಕೆ ತನೆ

ಮಕ್ಳು ಬೇಡಾಂತ ಅನ್ಕೊಂಡ್ಲು? ತನ್ಗೆ ತಾಳಿ ಇಲ್ಲದ ಗಂಡಿನ ಕೈ ಹಿಡೀಬೇಕಾಗಿ ಬಂದ ಗ, ಅದನ್ನು ಮರ್ಸ್ಕೋದಕ್ಕಾದ್ರೂ ಒಂದು ಮಗು ಇದ್ದಿದ್ರೆ ಒಳ್ಳೇದು ಅಂತ ಯಾಕೆ ಅನ್ನಿಸಲಿಲ್ಲ. ಇದೇನೋ ಅವಾಸ್ತವ ಅನ್ನಿಸುತ್ತೆ ನಂಗೆ.”

ಒಂದು ಕ್ಷಣ ಬಿಟ್ಟು ನಾನು ಹೇಳಿದ್ದೆ.

“ಹಾಗಲ್ಲ ಕಾಮೂ. ಸಹಜವಾಗಿ ಹೆಣ್ಣಿಗಿರೋ ಅಭಿಪ್ರಾಯಗಳು ಅಂತ ಹಿಂದೆ ಗುರ್ತಿಸಿದಾರಲ್ಲ ಅವ್ರ ಆಧಾರದ ಮೇಲೆ ನೀನು ಮಾತಾಡ್ತೀಯ. ಆದ್ರೆ ಅವ್ಳು ಪ್ರತ್ಯೇಕ ವ್ಯಕ್ತಿ ಅನ್ನೋದನ್ನ ಮರ್ಯೋದಕ್ಕಾಗಲ್ಲ. ಇದು ಬಹಳ ಸೂಕ್ಷ್ಮ ವಿಷಯ. ಅದಕ್ಕೇ ಅವ್ಳು ಹೇಳೋದು.

‘ಸರಿ ಮತ್ತೆ...ಇವ್ನಂಥದೇ ಇನ್ನೊಂದು ಮಗ ನಂಗೆ ಹುಟ್ಬಿಟ್ರೆ ಥೂ....ಸಾಕಪ್ಪಾ”

ಬಿಸಿ ನೀರು ಕೈ ಮೇಲೆ ಬಿದ್ದಾಗ ಹಾಯ್! ಎಂದು ತಕ್ಷಣ ಕೈ ಹಿಂದಕ್ಕೆಳೆದುಕೊಂಡೆ. ಕೈ ಎಲ್ಲ ಕೆಂಪಗಾದ ಹಾಗೆ ಚುರು ಚುರು ಉರಿಯುತ್ತಲೇ ಇತ್ತು. ತಣ್ಣೀರಿನ ಒಳಗೆ ಕೈ ಅದ್ದುವಷ್ಟರಲ್ಲಿ ರಶ್ಮಿ ಕುಮಾರರ ನಂತರದ ದಿನಗಳು ಯೋಜನೆಗೆ ಸಿಕ್ಕಿದ್ದುವು.

“ನಾನ್ ತಡೀಲಾರೆ ಅಮ್ಮಾ’

‘ಆಗ್ಹೋಯ್ತು ಬಿಡಮ್ಮಾ, ಇನ್ ಸ್ವಲ್ಪ ಹೊತ್ತಷ್ಟೆ.’

ಯೂಟ್ರಸ್ ಎಕ್ಸ್‌ರೇ ತೆಗೆಸ್ಕೊಳೋಷ್ಟು ಹೊತ್ಗೆ ಭಾಳ ಸುಸ್ತಾಗಿದ್ಲು ರಶ್ಮಿ. ಹ್ಯಾಗಾದ್ರೂ ಒಂದ್ ಮಗು ಬೇಕೂಂತ ಆಪ್ಯಾಸೆ. ಈ ರೀತಿ ನಾವು ಬರ್ದಾಗ ಕಾಮೂ ಜಗಳ ಆಡಿದ್ಲು.

"ಅದೆಂಥದ್ದೇ ನಿಂದು, ಅಸಂಬದ್ಧ ಕತೆ. ಮೊದ್ಲು ಬೇಡ ಅಂದು ಕೊಳ್ಳೋದು, ಆ ಮೇಲೆ ಬೇಕೂಂತ ಇಷ್ಟು ಒದ್ದಾಡೋದು"

"ಅಲ್ಲೇ ಅದ್ರ ಗಮ್ಮತ್ತಿರೋದು ಕಾಮೂ, ನೀನಂದುಕೊಂಡಿ ರೋಷ್ಟು ಸರಳ. ಸೀದಾ, ಆಗಿ ಸಿಗಲ್ಲ ಮನುಷ್ಯನ ಒಳ ಮನಸ್ಸು ಗೊತ್ತೇನು? ಅದು ಅವ್ಳು ತನ್ಗೆ ತಾನೇ ತೃಪ್ತಿ ಪಟ್ಕೋಳೋಕೆ ಕಂಡು ಕೊಂಡ ಮಾರ್ಗ ಅಷ್ಟೆ. ಆದ್ರೆ ಅದ್ರಲ್ಲೂ ಅವ್ಳು ಗೆಲ್ಲಲ್ಲ"

"ಯಾಕೆ?".

"ಯಾಕೇಂದ್ರೆ! ಅದಕ್ಕಿಂತ ಪ್ರಬಲವಾಗಿ ಅವ್ಳಲ್ಲಿ ಕುಮಾರನ ಬಗ್ಗೆ ಜಿಗುಪ್ಸೆ ಇದೆ. ಪ್ರೀತಿ ಇಲ್ಲ. ಅವನ ಮುಖ ಕಂಡ ಕೂಡ್ಲೆ ಅದು ಎಚ್ಚೆತ್ಕೊಳುತ್ತೆ. ಆದ್ರೆ, ಅವನಿಲ್ದೆ ಇದ್ದಾಗ 'ಹೌದು, ಒಂದ್ ಮಗೂನಾದ್ರೂ ಆದ್ರೆ' ಅನ್ಸುತ್ತೆ. ಈ ತಾಕಲಾಟದಲ್ಲಿ ಉಪಾಯ ಕಾಣ್ದೆ ಅವ್ಳು ಮುಂದಕ್ಕೆ ಓದೋದಕ್ಕೋ ಕೆಲ್ಸಕ್ಕೋ ಸೇರ್ಕೊಬೇಕಾಗುತ್ತೆ. ಮನೇಲಿರಕ್ಕೆ ಅವ್ಳಿಗೆ ಖಂಡಿತ ಆಗಲ್ಲ" ಕಾಮೂ ಖುಷಿಯಾಗಿ ಒಂದು ಸಜೆಷನ್ ಕೊಟ್ಲು,

"ಹಾಗಾದ್ರೆ. ಅವ್ಳನ್ನ ಕೆಲ್ಸಕ್ಕೇ ಸೇರ್ಸು. ಇವ್ಳ ಮನಸ್ಥಿತೀಲಿ ಓದೋದಂತೂ ಅಸಾಧ್ಯ ಮಾತೇ! ಅದು ಸಹಜ ಅನ್ಸಲ್ಲ." ನಂಗೂ ಅದು ಸರಿ ಅಂತ ಕಂಡಿತ್ತು.

ಬಿಸಿ ನೀರಿಗೆ ತಣ್ಣೀರು ಹೊಂದಿಸಿಕೊಂಡು ಸ್ನಾನಕ್ಕೆ ಸಿದ್ಧವಾಗು ವಷ್ಟರಲ್ಲಿ ದಿಕ್ಕು ಬದಲಾಗಿತ್ತು.

ಕುಮಾರ ಹೇಳುವವರಿಲ್ಲದೆ, ಕೇಳುವವರಿಲ್ಲದೆ. ಪ್ರೀತಿ ಕಾಣದೆ ಸರಪೇತಲನಾಗಿದ್ದ ತಲೆಗೂದಲು ಪೂರ್ಣ ಬೆಳ್ಳಗಾಗಿತ್ತು. ಕಾಟಾ ಚಾರಕ್ಕೆ ಹೆಂಡತಿಯಾಗಿ ರಶ್ಮಿ ಊಟಕ್ಕೆ ಜೋಡಿಸುತ್ತಿದ್ದಳು. ಹೊಂದಿ ಕೊಂಡಷ್ಟೂ ತನ್ನಿಂದ ದೂರ ದೂರ ಸರಿಯುತ್ತಿರುವ ಅನುಭವ ಕುಮಾರನಿ ಗೊಂದು ದೊಡ್ಡ ಪೆಟ್ಟು. ಇದರ ಮಧ್ಯೆ ತಂದೆ ಕಣ್ಮರೆ. ಉಳಿದವಳು

ಅಕ್ಕ ಒಬ್ಬಳೇ. ಅವಳಲ್ಲಿ ಹೇಳಿಕೊಳ್ಳುವ ಹಾಗಿಲ್ಲ. ತಾನಾಯಿತು ತನ್ನ ಕೆಲಸವಾಯಿತು ಎನ್ನುತ್ತ ಕಾಲ ತಳ್ಳಿದರಾಯಿತು ಎಂದರೆ. ತಳ್ಳಲು ಬರುತ್ತದೆಯೇ ಕಾಲವನ್ನ? ದೇಹ, ಮನಸ್ಸುಗಳು ಕೇಳುತ್ತವೆಯೇ? ತನ್ನ ಶಾಲೆಯ ಮಕ್ಕಳೊಡನೆ ಸೇರಿದ. ನಾಟಕಗಳ ತರಬೇತಿ ಕೊಟ್ಟ. ಕಥೆ ಕವನಗಳನ್ನು ಬರೆದ, ಉಂ...ಹುಂ....ಹ್ಯಾಗೂ ಸರಿಹೋಗಲಿಲ್ಲ. ಚೆಸ್ ಆಡಿದ ಉಂ... ಹುಂ...ಕಾರ್ಡ್ಸ್ ಆಡಿದ ಚೆಂದ ಕಂಡಿತು. ಆಡಿದ... ಆಡಿದ...ಕೊನೆಗೆ ಅದರ ಜೊತೆಗೆ ಕುಡಿಯುವುದೂ ಮಜ ಕೊಟ್ಟಿತು. ಕುಡಿದು ಮಲಗಿದ. ಮಲಗಿ ಕುಡಿದ.

"ಒಬ್ಬ ಮನುಷ್ಯನ ಬಗ್ಗೆ ಇಷ್ಟು ಕ್ರೂರಿಯಾಗಬಾರ್ದು ಸೀಮಾ. ನೀನು ಲೇಖಕಿ ಆದ ಮಾತ್ರಕ್ಕೆ ಸಂತೋಷವಾಗಿರೋದು ಕಾಣ್ದೇಬಾರ್ದೇನು? ಏನಾದ್ರೂ ಒಳ್ಳೆ ಕೊನೆ ಸೂಚಿಸೋದು ಬಿಟ್ಟು ಅಧೋಭ್ರಷ್ಟ. ತಥೋ ಭ್ರಷ್ಟ ಅನ್ನೋಹಾಗೆ ಅವನನ್ನು ಕೂರಿಸಿಬಿಟ್ಟಲ್ಲ ಪಾಪ."

"ಇಲ್ಲ ಕಾಮೂ. ಅವ್ನ ಸಮಸ್ಯೆಗೆ ಕೊನೆ ಇಲ್ದೆ ಇರೋದ್ರಿಂದ್ಲೇ ಅವನ್ಗತಿ ಹಾಗೆ. ಇನ್ನೊಂದು ಮದ್ವೆ ಮಾಡ್ಕೊಬೋದು. ಆದ್ರೆ ಅಕ್ಕನ ಮಗ್ಳು? ಅದ್ ತಾನೇ ಸುಖ ತರುತ್ತೆ ಅನ್ನೋ ನಂಬ್ಕೆ ಎಲ್ಲಿ? ಜೊತೆ ಮಾಡಿಕೊಳೋಕೆ ಆಗುತ್ತೇನು? ಅದು ಪರಿಹಾರ ಆಗೋದಿಲ್ಲ, ಈಗ ನನ್ನ ಸೂಚ್ನೆ ಸರಿ ಇಲ್ದೆ ಇರ್ಬ್ಬೋದು. ಆದ್ರೆ ಅಷ್ಟಲ್ದೆ ಇನ್ನೇನಿದೆ ಹೇಳು?"

"ಹೋಗ್ಲಿ ಈಗೇನ್ಮಾಡ್ತಾಳೆ ರಶ್ಮಿ ಅಂತೀ?"

"ಅವ್ಳು ಏನೂ ಮಾಡೋಕಾಗಲ್ಲ. ಯಾಕೇಂದ್ರೆ ಅವ್ಳ ಮನಸ್ಸು ಗೊತ್ತಿದ್ರೂ ಅವ್ಳ ತಂದೆ-ತಾಯಿ ಕುಮಾರಂಗೇ ಕೊಟ್ಟು ಮದ್ವೆ ಮಾಡಿದ್ರು. ಅವನನ್ನ ಬಿಟ್ರೆ ಬೇರೆ ಗಂಡು ಹುಡುಕೋಕೆ ಆಗಲ್ಲ ಅನ್ನೋದು ಇವ್ಳಿಗೂ ಗೊತ್ತಿತ್ತು. ಹಾಗಂತ ಸ್ವಲ್ಪ ತನ್ನ ಮನಸ್ನೇ ಗಟ್ಟಿ ಮಾಡಿ ವಸ್ತುಸ್ಥಿತಿಗೆ ಹೊಂದಿಕೊಂಡು ಹೋಗಬಹುದಾದ್ದನ್ನ

ಭಾವುಕತೆಗೆ ಸಿಕ್ಕಿ ದೂರ ತಳ್ಳಿದ್ನ್ಲ. ಅದಕ್ಕೆ ಯಾರು ಹೊಣೆ? ಇನ್ನು ಹೀಗ್ಬೇರೆ ಆಗ್ಬಿಟ್ರೆ ಅಪ್ಪ ಗತಿ ಹ್ಯಾಗೆ?"

ಮೈ ಮೇಲೆ ನೀರು ಸುರಿದುಕೊಂಡು ಸೋಪು ಹಚ್ಚುತ್ತಿದ್ದಾಗ ಕಮೂ ಕೇಳಿದ್ದು ಮತ್ತೆ ನೆನಪಿಗೆ ಬಂತು.

"ಹೋಗ್ಲಿ ಈಗ ಇದಕ್ಕೇನು ಹೆಸರಿಡ್ತೀ?"

"ಓದುಗರಿಗೆ ಸೂಚ್ನೆ ಕೊಡ್ತಾ ಇದೀನಲ್ಲ. ಇಂಥ ಸಮಸ್ಯೆಗಳಿಗೆಲ್ಲ ಏನುತ್ತರ ಅಂತ. ಅಪ್ರೇ ಸೂಚಿಸ್ಲಿ "ಪರಿಹಾರ!" ಅಂತ ಇಟ್ಬಿಟ್ರೆ ಆಯ್ತು."

ಮತ್ತೆ ನೀರು ಹಾಕಿಕೊಂಡಾಗ ಮೈಗೆ ಹಚ್ಚಿದ್ದ ಸೋಪೆಲ್ಲ ನೀರಾಗಿ ಇಳಿಯುತ್ತಿದ್ದುದನ್ನು ನೋಡುತ್ತ ಪುನಃ ನೀರಿಗೆ ಕೈ ಹಾಕಿದೆ.

# ಹಬ್ಬ ಮತ್ತು ಬಲಿ

— ಬಿ. ಲಲಿತಾ ನಾಯಕ

ಊರ ಮುಂದಿನ ಅಮ್ಮನ ಗುಡಿಯಿಂದ ಎಡಬಿಡದೆ ತಮಟೆಯ ಸಪ್ಪಳ ಕೇಳಿಬರುತ್ತಿತ್ತು. ಇಡೀ ಹಳ್ಳಿಯೇ ಆ ಸದ್ದಿನಿಂದ ಸ್ಫೂರ್ತಿ ಪಡೆದು ಹಬ್ಬದ ಸಿದ್ಧತೆಯಲ್ಲಿ ತೊಡಗಿದಂತಿತ್ತು. ಬಡವ_ಬಲ್ಲಿದರೆಂಬ ಭೇಧ ಭಾವ ಅದೊಂದು ದಿನದ ಮಟ್ಟಿಗೆ ಸಂಪೂರ್ಣವಾಗಿ ತೊಲಗಿ 'ಗರೀಬಿ ಹಟಾವ್' ಎಂಬ ಘೋಷಣೆ ನಿಜದರ್ಥವನ್ನು ಪಡೆದುಕೊಂಡು 'ಗರೀಬರೇ ಇಲ್ಲದ 'ಭಾಗ್ಯವಂತರ ಹಳ್ಳಿ', ಆದಾಗಿತ್ತು !

ಪ್ರತಿಯೊಂದು ಮನೆಯ ಮುಂದೂ ಚೌಕಾಕಾರವಾಗಿ ಸಗಣಿಯಿಂದ ಮಾರಗಲ ಅಂಗಳ ಸಾರಿಸಿ, ರಂಗೋಲಿ ಹಾಕಿ, ಮಣೆಇಟ್ಟು, ಅದರ ಮೇಲೆ ಹಿಡಿಯಷ್ಟು ಅಕ್ಕಿಕಾಳು ಸುರಿದು ಮಾರಮ್ಮನ ಕಳಶವನ್ನು ಪ್ರತಿಷ್ಠಾಪಿಸ ಲಾಗಿತ್ತು. ಬೇವಿನಸೊಪ್ಪು, ಕೆಂಪುಕಣಗಿಲೆ, ಕೆಂಪಾಸವಾಳ, ಚೆಂಡು ಮಲ್ಲಿಗೆ ಇತ್ಯಾದಿ ಹೂವುಗಳನ್ನು ಮುಡಿದು, ಅರಿಶಿನ - ಕುಂಕುಮ, ಧೂಪ ದೀಪಗಳಿಂದ ಅಲಂಕೃತಳಾದ 'ಅಮ್ಮ'ನ ಮುಂದೆ ತಮ್ಮ. ತಮ್ಮ ಶಕ್ತ್ಯಾನುಸಾರವಾಗಿ ಆಡು. ಮೇಕೆ ಕುರಿ-ಕೋಳಿಗಳನ್ನು ಬಲಿಗೊಟ್ಟು ಅಮ್ಮನ ಹರಕೆ' ಮುಟ್ಟಿಸಿದ ತೃಪ್ತಿಯಿಂದ ಕೃತಕೃತ್ಯರಾಗುತ್ತಿದ್ದರು- ಅಲ್ಲಿಯ ಜನ,

ಸರಿಕರಂತೆ ಸಣ್ಣುವಿನ ಕುಟುಂಬವೂ ಈ ವರ್ಷ ಹಬ್ಬದ ಸಂಭ್ರಮ ದಲ್ಲಿ ಪಾಲ್ಗೊಳ್ಳಲು ಶಕ್ತವಾಗಿತ್ತು. ಅವನಿತ್ತ ಆಮಂತ್ರಣವನ್ನು ಮನ್ನಿಸಿ ಬಂದಿದ್ದ ನೆಂಟರಿಷ್ಟರಿಂದ ಆವನ ಸಣ್ಣ ಸೋಗೆಮನೆ ಒಡಲು ಬಿರಿಯುವಂತೆ ತುಂಬಿಕೊಂಡು ಗಿಜಿಗುಡುತ್ತಿತ್ತು.

ಮನೆಯೊಡತಿ ಕೆಂಚಿ ಜರಿಕಡ್ಡಿಯಂಚಿರುವ ಹೊಸ ಸೀರೆಯುಟ್ಟು ಸರಭರ ಸದ್ದು ಮಾಡುತ್ತ ಮನೆ ತುಂಬ ಓಡಾಡುತ್ತಿದ್ದಳು. ಸಣ್ಣಪ್ಪ ಕೋಳಿ ತತ್ತಿಯಂತೆ ಬೆಳ್ಳಗೆ ಹೊಳೆಯುತ್ತಿದ್ದ ಪಂಚೆಯುಟ್ಟು, ಅದೇ ದಿನ ದರ್ಜಿ ನರಸೋಜಿಯ ಬಳಿ ಹೆಚ್ಚಿನ ಕೂಲಿ ಕೊಟ್ಟು ಅರ್ಜೆಂಟಾಗಿ ಹೊಲಿಸಿ ತಂದ್ದ ಮುಂಗೈ ಮುಚ್ಚುವ ಉದ್ದ ತೋಳಿನ ಅಂಗಿ ತೊಟ್ಟು, ಹೆಗಲ ಮೇಲೆ ಹೊಸ ವಲ್ಲಿ ಹಾಕಿ ಕೊಂಡು, ಸೋಗೆಗರಿಯ ಸಂದಿಯಲ್ಲಿ ಕಳೆದ ವರ್ಷ ಸಿಕ್ಕಿಸಿದ್ದ ಚೂರಿಯನ್ನು ಹುಡುಕಾಡತೊಡಗಿದ್ದ.

ಅವನ ಆರು ಮಂದಿ ಮಕ್ಕಳ ಪೈಕಿ ಮೂವರು ಗಂಡು ಹುಡುಗರಿಗೂ ಕಡೂರು ಸಂತೆಯಿಂದ ಒಂದೇ ಅಳತೆಯ ಕೆಂಪು-ಕಪ್ಪು ಗೀರಿನ ಅಂಗಿ-ಚಡ್ಡಿಗಳನ್ನು ಕೊಂಡು ತಂದಿದ್ದು, ಹುಡುಗರು ಹಿಗ್ಗಿನಿಂದ ಅವುಗಳನ್ನು ತೊಟ್ಟುಕೊಂಡಿದ್ದರು. ಮೊದಲ ಹುಡುಗನ ಅಂಗಿ ತುಸು ಮಂಡಿ ಕಾಣುವಂತಿದ್ದು ಕುಳಿತಾಗ-ಬಗ್ಗಿದಾಗ ಅಕಸ್ಮಾತ್ತಾಗಿ ಒಮ್ಮೊಮ್ಮೆ ಅವನ ಚಡ್ಡಿಯ ದರ್ಶನವಾಗುತ್ತಿತ್ತು. ಆದರೆ ಅವನಿಗಿಂತ ಸಣ್ಣವನದ್ದು ಮಂಡಿಯಿಂದ ಗೇಣುದ್ದ ಕೆಳಗಾಗಿ ಚಡ್ಡಿ ಹಾಕದ್ದರೂ ನಡೆದೀತು ಎನ್ನುವಂತಾಗಿತ್ತು.

ಓರಗೆಯ ಹುಡುಗರೆಲ್ಲಾ ಅಯ್ಯಯ್ಯ! ಇವ್ನಂಗಿ ನೋಡ್ರುಲೇ ಪಟುದ್ದ ಐತಿ! ಒಳಗ್ ಚಡ್ಡಿನೇ ಹಾಕ್ಕೊಂಡಿಲ್ಲ ಕಣ್ರುಲೇ!" ಎಂದು ನಗೆ ಮಾಡಿದಾಗ "ಏಯ್, ಇಲ್ನೋಡ್ರುಲೆ-ಹೊಸ ಚಡ್ಡಿ ಹಾಕ್ಕೊಂಡಿರೋದು.." ಎಂದು ಹುಡುಗ ತನ್ನ ಅಂಗಿಯನ್ನು ಪೂರಾ ಮೇಲೆತ್ತಿ ತೋರಿಸಿ ಖಾತ್ರಿ ಪಡಿಸಬೇಕಿತ್ತು.

ಮೂರನೆಯವನದ್ದಂತೂ ಹಿಮ್ಮಡಿಯನ್ನೇ ಮುಟ್ಟುತ್ತಿತ್ತು. ಪಾಪ ಹುಡುಗನಿಗೆ ಅದರಿಂದ ಓಡಾಡುವುದಕ್ಕೂ ತೊಂದರೆಯಾಗುತ್ತಿತ್ತಾದರೂ 'ಹೊಸ ಅಂಗಿ' ಎಂಬ ಮಮಕಾರದಿಂದ ಹಿಂಸೆ ಸಹಿಸಿಕೊಂಡಿತ್ತು.

ಹೆಣ್ಣು ಹುಡುಗಿಯರದ್ದಾದರೂ ಅದೇ ಗತಿ. ಹಿರಿಯ ಹುಡುಗಿ

ಪುಟ್ಟಿ ಓಡಾಡುವಾಗ ಗಂಜಿಮಯವಾದ ಆ ಚೀಟಿನ ಲಂಗದ ಅಂಚು ನೆಲ ಗುಡಿಸುವುದನ್ನು ಕಂಡು "ಈಟೊಂದುದ್ದ ಯಾಕಮ್ಮಾ ಹೊಲಿಸ್ಕ್ಯಂಡೆ" ಎಂದು ಕಂಡವರೆಲ್ಲ ಕೇಳುತ್ತಿದ್ದರು, "ನೀರಿಗ್ಹಾಕಿದ ಮ್ಯಾಲೆ ಗಿಡ್ಡಾಗ್ತೀ ತಂತ ದರ್ಜಿ ಹೇಳವನಂತೆ ಸಮಪ್ಪಗೆ" ಎಂದು ಪುಟ್ಟಿ ಹೇಳಿದಾಗ "ಮ್ಯಾಲೆತ್ತಿ ಸಿಗಸ್ಕ, ಅಂಚೆಲ ಕರ್ರಗಾಗತ್ಯೆತಿ" ಎಂದು ಸಲಹೆ ಮಾಡು ತ್ತಿದ್ದರು. ಆದರೆ ಹೊಸ ಲಂಗವನ್ನು ಹಬ್ಬ ಮುಗಿಯುವವರೆಗಾದರೂ ಸ್ವೇಚ್ಛೆಯಾಗಿ ಹಾರಾಡಲು ಬಿಡಬೇಕೆಂದು ಬಯಸಿದ್ದ ಪುಟ್ಟಿ ಅದನ್ನು ಮೇಲೆತ್ತಿ ಬಿಗಿಯಲು ಇಷ್ಟಪಡಲಿಲ್ಲ.

ಲಂಗದಲ್ಲಿ ಮುಳುಗಿ ಹೋಗಿದ್ದ ಇನ್ನೊಂದು ಹುಡುಗಿ ಕಾಲು ತೊಡ ಕಾಗಿ, ಹೆಜ್ಜೆಗೊಮ್ಮೆ ಎಡವಿಬಿದ್ದು ಯಾರಾದರೂ ನೋಡಿದರೆ ಬೋರಾಡಿ ಅತ್ತು, ಯಾರೂ ನೋಡಲಿಲ್ಲವೆಂದು ನಂಬಿಕೆಯಾದರೆ ಮೇಲೆದ್ದು ಲಂಗ ಕೊಡವಿಕೊಂಡು, ಗಳಿಗೆ ಗಳಿಗೆಗೂ ಅದರ ಬಣ್ಣ ಬದಲಾಗುತ್ತಿರುವುದನ್ನು ಕಂಡು ಸೋಜಿಗಪಡುತ್ತಿದ್ದಳು.

ತಾಯಿಯ ಸೊಂಟದಲ್ಲೊ ಅಥವ ನೆಂಟರಿಷ್ಟರ ಪೈಕಿ ಯಾರದೇ ಸೊಂಟದಲ್ಲೋ ಅಂಟಿಕೊಂಡಿರುತ್ತಿದ್ದ ಕೊನೆಯ ಹುಡುಗಿಯಂತೂ ತನ್ನ ಅಸ್ತಿತ್ವವನ್ನೇ ಕಳೆದುಕೊಂಡು ಲಂಗಮಯವಾಗಿ ಹೋಗಿತ್ತು.

ತಿಂಗಳಾದರೂ ಎಣ್ಣೆ-ನೀರು ಕಾಣದ ಅವುಗಳ ತಲೆ ಈ ದಿನ ಬಡ್ಡಿ ಸಮೇತವಾಗಿ ಕೊರತೆ ತೀರಿಸಿಕೊಂಡಿದ್ದು, ಅಧಿಕವಾದ ಹರಳೆಣ್ಣೆ ಪಚ ಗರಿಯುತ್ತ ಅವುಗಳ ಹಣೆ, ಕೆನ್ನೆ, ಕಿವಿಗುಂಟ ಧಾರವಾಹಿಯಾಗಿ ಇಳಿಯತೊಡಗಿತ್ತು.

ಪ್ರತಿ ದಿನವೂ ತುಣುಕು ರೊಟ್ಟಿಗಾಗಿ ಬಾಯಿ ಬಾಯಿ ಬಿಡಬೇಕಾ ಗಿದ್ದ ಅವುಗಳಿಗೆ ಇಂದು ಅಜೀರ್ಣವಾಗುವಷ್ಟು ತಿನಿಸು, ಹಬ್ಬಕ್ಕೆ ಬಂದಿದ್ದ ನೆಂಟರಿಷ್ಟರು ತಂದಿದ್ದ ಕಳ್ಳೇಪುರಿ, ಚಕ್ಕುಲಿ, ಪಕೋಡ,

ಬತ್ತಾಸು ಮುಂತಾದುವೆಲ್ಲ ಜೇಬನ್ನು ತುಂಬಿದ್ದುವಲ್ಲದೆ ಮಸಾಲೆ ಅರೆಯುತ್ತಿದ್ದ ಚೆಗವ್ವನಿಂದ ಅಂಗೈ ಅಗಲದ ತೆಂಗಿನಕಾಯಿ ಚೂರು ದಕ್ಕಿತ್ತು.

“ಅಮ್ಮಿಗ್ ಮರೆ ಹೊಯ್ತಾರ್ ನೋಡ್ಕೋಗ್ರಿ ನೀವೂ ಕೈ: ಮುಕ್ಕೋ: ನಡೀರಿ” ಎಂದು ಸಣ್ಣುವಿನ ಅಕ್ಕ-ಮಾದೇವಕ್ಕ ಮಕ್ಕಳ ಹಿಂಡನ್ನು ಹೊರಗಟ್ಟಿದಾಗ ಅವು ಕುತೂಹಲದಿಂದ ಹಟ್ಟಿಗೆ ಓಡಿ ಬಂದವು. ಕಳಶದಲ್ಲಿ ಪೂಜಿಸಿದ್ದ ಅಮ್ಮನ ಎದುರಿಗೆ ಸಣ್ಣುವಿನ ಸಂಬಂಧಿ-ಕರ್ರಿಂಗ ಟಗರಿನ ಹಿಂಗಾಲುಗಳನ್ನು ಹಿಡಿದುಕೊಂಡು ನಿಲ್ಲಿಸಿಕೊಂಡಿದ್ದ. ಕೆಂಚಿಯ ತಮ್ಮ-ಗೋಣಿಯಿಂದ ಮಚ್ಚು ಹಿಡಿದು ಅದರ ವಧೆಗಾಗಿ ಸಿದ್ಧನಾಗಿದ್ದ. ಕೆಂಪ, ಬಸಪ್ಪ. ಜುಟ್ಟಿಮ್ಮ ಮುಂತಾದವರೆಲ್ಲ ಪ್ರೇಕ್ಷಕರಾಗಿದ್ದರು.

ಸಣ್ಣು ಅಮ್ಮನಿಗೆ ಮಂಗಳಾರತಿ ಮಾಡಿ ತೀರ್ಥವನ್ನು ಟಗರಿನ ಮೈ ಮೇಲೆ ಪ್ರೋಕ್ಷಿಸಿ ಹೂವು - ಕುಂಕುಮ ಏರಿಸಿದ. ಮೈ ಮೇಲೆ ತಣ್ಣನೆಯ ನೀರು ಬಿದ್ದೊಡನೆ ಟಗರು ಒಮ್ಮೆ ಬಲವಾಗಿ ಮೈ ಕೊಡವಿತು. ಅದನ್ನೇ ಕಾಯುತ್ತಿದ್ದ ಬಸಪ್ಪ “ಹೂಂ. ಅಮ್ಮ ಅಪ್ಣೆ ಕೊಟ್ಲು : ಹಾಕೋ ಗೋಣಿಯಿಂದ” ಎಂದು ಸಲಹೆ ಮಾಡಿದಾಗ, ಅವನು ದೇಹದ ಶಕ್ತಿಯನ್ನೆಲ್ಲ ಕೈಗಳಲ್ಲಿ ಕೇಂದ್ರೀಕರಿಸಿ ಬಲವಾಗಿ ಮಚ್ಚು ಬೀಸಿದ. ಬಲಿಪಶುವಿನ ರುಂಡ ಕಚಕ್ಕನೆ ಕತ್ತರಿಸಿ ನೆಲಕ್ಕೆದ್ದೊಡನೆ ಚಿಲ್ಲನೆ ಚಿಮ್ಮಿದ ರಕ್ತವನ್ನು ತಾಂಬಾಣದಲ್ಲಿ ಶೇಖರಿಸಲಾಯಿತು. ಕೆಲವು ನಿಮಿಷಗಳ ಕಾಲ ವಿಲಿ ವಿಲಿ ಒದ್ದಾಡಿದ ಮುಂಡ ಕೊನೆಗೊಮ್ಮೆ ಸ್ತಬ್ಧವಾಯಿತು.

ಅಮ್ಮನ ಮುಂದಿರಿಸಿದ್ದ ರುಂಡದಿಂದ ನಿಧಾನವಾಗಿ ಹನಿಯುತ್ತಿದ್ದ ರಕ್ತ ನೆಲದ ಮೇಲೆ ಮಡುಗಟ್ಟಿತ್ತು. ಅದರೊಟ್ಟಿಗೆ ಚೆಲ್ಲಾಡಿದ ಕುಂಕುಮ ಕೆಂಪು ಹೂಗಳ ನಡುವೆ ಭೀಕರವಾಗಿ ವಿರಾಜಿಸುತ್ತಿದ್ದ ‘ಅಮ್ಮ’ ನನ್ನು ಮಕ್ಕಳೆಲ್ಲ ಭೀತಿ ತುಂಬಿದ ಕಂಗಳಿಂದ ನೋಡುತ್ತ ಹಿರಿಯರ ಆಣತಿಯಂತೆ ಕೈ ಜೋಡಿಸಿದವು.

“ನಮ್ಮವ್ವೇ ...ತಾಯಿ...ವರ್ಸಾ ವರ್ಸಾ ಹಿಂಗೇ ಹಬ್ಬ ಮಾಡಿ ನಿನ

ಪರ್ಕೆ ಪುಟ್ಕೊ ಅಂಥ ಯೋಕ್ತೆ ಕೊಡವ್ವ ! ನಮ್ಮ ಬಡತಾನ ಬಯಲು ಮಾಡವ್ವ !" ಎಂದು ಬೇಡಿಕೊಳ್ಳುತ್ತ ಸಣ್ಣ-ಕೆಂಚಿ ಅಮ್ಮನ ಮುಂದೆ ಅಡ್ಡ ಉದ್ದ ಬಿದ್ದರು.

ಮುಂದಿನ ಕೆಲಸ ಮಿಂಚಿನ ವೇಗದಲ್ಲಿ ಜರುಗಿತು. ಗಂಡಸರ ಪಳಗಿದ ಕೈಗಳು ಚೂರಿ ಹಿಡಿದು ಚಕಚಕನೆ ಮಾಂಸವನ್ನು ಕೊಯ್ದು ರಾಶಿ ಹಾಕಿದವು. ಒಳಗಡೆ ಹೆಂಗಸರೂ ಅಷ್ಟೇ ಚುರುಕಿನಿಂದ ಮೆಣಸಿನಕಾಯಿ ಹುರಿಯುವುದು-ಕುಟ್ಟುವುದು, ಮಸಾಲೆ ಅರೆಯುವುದು ಇತ್ಯಾದಿ ಅಡುಗೆ ತಯಾರಿ ನಡೆಸಿದ್ದರು.

ಅಡುಗೆ ಮುಗಿದೊಡನೆ 'ಗುಡಿಯ ಅಮ್ಮ'ನಿಗೂ ನೈವೇದ್ಯ ತೋರಿಸಿಕೊಂಡು ಬಂದದ್ದಾಯಿತು. ಪದ್ಧತಿಯಂತೆ ಗಂಡಸರು ಮೊದಲ ಪಂಕ್ತಿಗೆ ಊಟಕ್ಕೆ ಕುಳಿತಾಗ ಅವರೊಡನೆ ಮಕ್ಕಳೂ ಸೇರಿಕೊಂಡವು. ಒಂದೊಂದು ಗಂಗಳದಲ್ಲಿ ಇಬ್ಬರು -ಮೂವರಂತೆ ಒಟ್ಟೊಟ್ಟಿಗೆ ಊಟ ಸಾಗಿತು.

ಆಗಲೆ ಸಾಕಷ್ಟು ಸರಾಯಿ ಕುಡಿದು ಮತ್ತನಾಗಿದ್ದ ಸಣ್ಣ - ತಾನು ಉಣ್ಣುವುದಕ್ಕಿಂತಲೂ ಹೆಚ್ಚಾಗಿ ಜೊತೆಯಲ್ಲಿ ಊಟಕ್ಕೆ ಕುಳಿತವರನ್ನು ತೊದಲು ನುಡಿಯಿಂದ ಉಪಚರಿಸತೊಡಗಿದ್ದ - ಉಣ್ರೆ. ನೀಡಿಸ್ಕಂಡು ಹೊಟ್ಟೆ ತುಂಬ ಉಣ್ರೆ. ನೀವೇನು ನನ್ನಮನಿಗೆ ಹಗಲೆಲ್ಲಾ ಬರೋದಿಲ್ಲ. ವರ್ಷಕ್ಕೊಂದಪ ಕರದ್ರೆ ಬರೋರು...ಇಲ್ದಿದ್ರೆ ಯಾವಳು ಇಲ್ಲ....ಏನೋ ಈ ವರ್ಷ ಅಮ್ಮನದಯ ನನ್ನಮ್ಯಾಲಿತ್ತು....ಸಾವ್ಕಾರ್ರು ದೊಡ್ಡ ಮನಸ್ ಮಾಡಿದ್ರು ಅದಕ್ಕೇ ನಾನು ನಾಲ್ವರಂಗೆ ಆ ಮಾತಾಯಿ ಹರ್ಕೆ ತೀರ್ಸಿ ಪಾವ್ನ ಆಗಿವ್ನಿ !...."

"ನಿಜಕಣಪ್ಪ. ಆ ನಮುವ್ವನ ದಯ ನಿನಮ್ಯಾಲ್ ನಿಲ್ದೆಹೋಗಿದ್ರೆ ಇಟೆಲ್ಲಾ ಸಂಭ್ರಮ ಮಾಡಾಕ್ ನಿನ್ನ ಕೈಯಿಂದಾಗೋದಾ ?" ಎಂದು ಬಸಪ್ಪ ದನಿ ಗೂಡಿಸಿದಾಗ "ಹಾಂ, ಹುಂಗ್ಹೇಳು ನಮುವ್ನೆ. ತಾಯಿ ದಯ-

ಇಲ್ದಿದ್ರೆ ನನ್ನಂಥ ನರಮನ್ಸನ್ ಕೈಯಾಗ್ ಏನಾದಾತು !" ಎಂದು ಸಣ್ಣ ಸೀಸೆಯಿಂದ ಉದ್ದನೆಯ ಅಲ್ಯೂಮಿನಿಯಂ ಲೋಟಕ್ಕೆ ಮದ್ಯವನ್ನು ಬಗ್ಗಿಸಿ "ಯಜ್ಜ. ಕ್ವಾ ಇದ್ನ ಕುಡಿ" ಎಂದು ಬಸಜ್ಜನ ಮುಂದೆ ಹಿಡಿದ.

"ನೀನು ಮೊದ್ಲುತಗ" ಎಂದು ಬಸಜ್ಜ ಔಪಚಾರಿಕವಾಗಿ ನುಡಿದಾಗ "ಅಯ್ಯೋ ಅಯ್ಯೋ ! ಎಂತ ಮಾತಾಡಿದ್ಯೋ ನಮಪ್ಪ! ಬೆಟ್ಟದಂತ ಹಿರೇಮನ್ಸ-ನೀನೆದ್ರಿಗ್ ಕುಂತ್ಕಂಡಿರ್‍ಬ್ಯಾಗ ನಾನ್ ಮೊದ್ಲು ತಗಳವಾ ? ಈಗಾ ಯಜ್ಜಾ. ನಾವೆಲ್ಲಾರೂ ನಿನ ಮಕ್ಳು. ನೀನೆಂಜಲ್ಮಾಡಿ ಬಿಟ್ಟಿದ್ನ ನಾವ್ ತಗಾಳೋರು!" ಎನ್ನುತ್ತ ಸಣ್ಣ ಲೋಟ ನೀಡಿದ. ಬಸಜ್ಜ ಕಣ್ಣು ಮುಚ್ಚಿ ಗಳಗಳನೆ ಅರ್ಧದಷ್ಟು ಕುಡಿದು. ಲೋಟವನ್ನು ಹಿಂದಿರುಗಿಸಿ. ಮುಖ ಕಿವುಚುತ್ತ ಗಂಗಳದಿಂದ ಮಾಂಸದ ಚೂರನ್ನೆತ್ತಿ ನೆಂಜಿಕೊಂಡ.

ಬಸಜ್ಜನ 'ಎಂಜಲು' ಸೇವಿಸಿದ ನಂತರ ಸಣ್ಣ ಎಲ್ಲರಿಗೂ ಮತ್ತೊಂದು ಸುತ್ತ ಕುಡಿಯಲು ಹಾಕಿ "ಏ ಕೆಂಚಿ, ಇನ್ನೊಂದೆಲ್ಡ್ ಸೌಟು ಬಾಡ್ ತಂದ್ಹಾಕಮ್ಮಿ ಇಲ್ಲಿ" ಎಂದು ಹೆಂಡತಿಗೆ ಆಜ್ಞಾಪಿಸಿದ. ಕೆಂಚಿ ಬೆಳಗಿನಿಂದ ಒಂದೇ ಸಮನೆ ಒಲೆಯ ಮುಂದೆ ಕುದಿದು. ಬೆವರಿನಿಂದ ತೋಯ್ದು ತೊಪ್ಪಡಿಯಾಗಿದ್ದರೂ ಬೇಸರಿಸದೆ ಅತ್ಯುತ್ಸಾಹದಿಂದ ಕೈ ಬಟ್ಟಲ ತುಂಬ ಬಾಡನ್ನು ತಂದು ಎಲ್ಲರ ಗಂಗಳಕ್ಕೆ ಬಡಿಸತೊಡಗಿದಳು. ಆಗಲೇ ಹೊಟ್ಟೆ ಬಿರಿ ಉಂಡಿದ್ದ ಕೆಲವರು "ಯಕ್ಕ ಯಕ್ಕ. ಬ್ಯಾಡ್ಕಣಕ್ಕ-ಸಿನ್ಮಾಲಿಗ್ ಬಿದ್ದೇನು ನೀಡಬ್ಯಾಡ ಕಣಕ್ಕ" ಎಂದು ಗಂಗಳಕ್ಕೆ ಅಡ್ಡಗೈ ಇಕ್ಕಿದಾಗ "ಪಂಕ್ತಿಯಾಗ್ ಪರಪಂಚ ಮಾಡಿದಂಗಾಗತೈತೆ. ನೀಡಿಸ್ಕಳ್ರಪ್ಪ ಸುಮ್ನೆ....ನೀವೇನು ಉಣಬಾರದಪ್ಪು" ಎಂದು ಸಣ್ಣ ಒತ್ತಾಯ ಮಾಡೇ ಮಾಡಿದ. ಹೆಂಗಸರು ಊಟಕ್ಕೆ ಕುಳಿತಾಗಲೂ ಅವನು ಅವರ ಹತ್ತಿರವೇ ಕುಳಿತು ಉಪಚರಿಸಿದ.

ಮರುದಿನ ಊರಮ್ಮನ ಉತ್ಸವ. ಸಿಂಗರಿಸಿದ ರಥದಲ್ಲಿ ಅಮ್ಮನ ಮೂರ್ತಿಯನ್ನಿರಿಸಿ ಬೀದಿಯಲ್ಲಿ ಮೆರವಣಿಗೆ ಹೊರಡಿಸಲಾಗಿತ್ತು. ತಮಟೆ,

ಒಲಗ. ಡೋಲು ಮುಂತಾದ ವಾದ್ಯಗಳ ಹಿನ್ನೆಲೆಯಲ್ಲಿ ಕೀಲುಕುದುರೆ ನರ್ತನ ನಡೆದಿತ್ತು. ಜೊತೆಗೆ ಮುಖವಾಡಧಾರಿ ಚೋಮದೇವರ ಕುಣಿತ. ಹಿರಿಕಿರಿಯರೆಲ್ಲ ರೆಪ್ಪೆಗೆ ರೆಪ್ಪೆ ಹಚ್ಚದಂತೆ ರಾತ್ರಿಯೆಲ್ಲಾ 'ಉಚ್ಚಯ್ಯ'ದ ವೈಭವವನ್ನು ನೋಡಿ ತಣಿದರು. ಓಣಿಗೆರಡರಂತೆ ತರೆದಿದ್ದ ಅಂಗಡಿಗಳಿಂದ ಹಿರಿಯರು ಎಲಡಿಕೆ, ತಂಬಾಕು ಬೀಡಿ, ಸಿಗರೇಟುಗಳನ್ನು ಕೊಂಡು ತಲಬು ತೀರಿಸಿಕೊಂಡರೆ, ಸಿಹಿತಿಂಡಿ ವಾದ್ಯಗಳನ್ನು ಮಕ್ಕಳು ಮನಸಾರೆ ಮೆದ್ದವು. ಹಳ್ಳಿಯ ಉತ್ಸಾಹಿ ತರುಣರು ಅಭಿನಯಿಸಿದ 'ಶ್ರೀ ಕೃಷ್ಣಪಾರಿಜಾತ' ನಾಟಕ ಹಬ್ಬಕ್ಕೆ ವಿಶೇಷ ಮೆರುಗನ್ನು ತಂದುಕೊಟ್ಟಿತು.

ಹಬ್ಬದ ಮರುದಿನ ಉಳಿದಿದ್ದ ತಂಗಳು-ಪಂಗಳು ತಿನಿಸನ್ನು ಮುಗಿಸಿ ಸಣ್ಣುವಿನ ನೆಂಟರಿಷ್ಟರು ತಂತಮ್ಮ ಊರುಗಳಿಗೆ ಹಿಂದಿರುಗಿದರು. ಮಾದೇವಕ್ಕ ಹೋಗುವಾಗ ಸಣ್ಣುವಿನ ಮಕ್ಕಳ ಕೈಗೆಲ್ಲಾ ತಲಾ ಐದೈದು ಪೈಸೆ ಇಕ್ಕಿ "ಮುಂದ್ಲ ಹುಣ್ಣಿವಿಗೆ ನಮ್ಮೂರಾಗ್ ಮಾದೆಪ್ಪನ ಜಾತ್ರೆ ನಡೀತೈತೆ. ಮನೆಗೊಂದೊಂದ್ ಮರೆ ಹೊಯ್ತೀವಿ, ಆಗ ಓಸು ಜನ ಬರ್ರಿ" ಎಂದು ತಾಕೀತು ಮಾಡಿ ಹೋದಳು.

o o o o

ಸಣ್ಣ ತಂಗಳುಂಡು ಚಾಪೆಯ ಮೇಲೆ ಅಡ್ಡಾಗಿದ್ದ. ರಾತ್ರಿಯೆಲ್ಲಾ ನಿದ್ದೆಗೆಟ್ಟಿದ್ದರಿಂದ ಕಣ್ಣೆಳೆದುಕೊಂಡು ಬರುತ್ತಿದ್ದವು. ಒಲೆ ಮುಂದ್ ಒಂದ್ಚೂರೂ ಕಟ್ಗಿ ಕುಡೇನುದ್ರೆ ಇಲ್ಲ ಮನಿಕ್ಕಂಬಿಟ್ರೆಲ್ಲ... ನಾಳೆ ಗಂಜಿ ಕಾಸಾಕೇನ್ಮಾಡ್ಲೀ ? ಎದ್ದೇಳು. ನಾನೊಬ್ಬೇ ಹೋಗಾನೇನು ಗುಡ್ಡಕ್ಕೆ" ಕೆಂಚಿ ಬಾಯಿ ಮಾಡಿದಾಗ ಸಣ್ಣು ಥಕ್ಕನೆ ಕಣ್ಣರಳಿಸಿ ಅಚ್ಚರಿಯಿಂದ ಕೇಳಿದ. "ಏನಂದೆ ? ಪತ್ರಿಪ್ಪತ್ ಹೊರೆ ಕೂಡ್ಹಾಕಿದ್ದ ಕಟ್ಗೆ ಅಗ್ಲೆ ಓಸು ಉರ್ದೋದ್ವಾ ?"

"ಬಂದಿದ್ದ ದಂಡಿಗೆಲ್ಲಾ ಬೇಸ್ಹಾಕ್ಲಿಲ್ವಾ-ನಾಕಾನ್ಹಾಗ್ಗಿನ? ಇನ್ನೆಲ್ಲಿಂದು

ಕ್ಕಾವು? ಬರೇ ಕಟ್ಗೆ ಆಷ್ಟೇ ಅಲ್ಲ. ಗಡ್ಗೆ ತಳ್ದಾಗ್ ಒಂದ್ಕಾಳಕ್ಕಿ, ಒಂದ್ಕಾಳ್ರಾಗಿ ನೋಡ್ದೇನಂದ್ರೆ ಉಳ್ದಿಲ್ಲ... ಎಲ್ಲಾ ತೊಳದ ಮುತ್ತು..." ಕೆಂಚಿ ತುಸು ಖಾರವಾಗಿಯೆ ನುಡಿದಾಗ "ಹೋಗ್ಲಿ ಬಿಡು. ಅಮ್ಮನ ಸೇವೆ. ಮಾಡಿ ಉಣ್ಣಾಕಕ್ಕೆ ಹಿಂಗೆಲ್ಲ ಜರದಾಡಬಾರ್ದು. ಮಾಡಿದ್ದ ಪುಣ್ಯ ಮೈಗೆ ಹತ್ತದಿಲ್ಲ ಬಗಿನಾಗ್ ಇಬ್ರು ಹೋಗಿ ಎಲ್ಡೊರೆ ಕಟ್ಕೊಂಬರಾನಂತೆ. ಈಗೆ ತುಸು ಅಡ್ಡಾಗಿ ದಣುವಾರಿಸ್ಕೊ ಬಾ" ಎಂದು ಅವನು ಸಮಾಧಾನ ಹೇಳುತ್ತಿರುವಂತೆಯೇ, ಸಾಹುಕಾರರ ಮನೆಯಾಳು ಹಿರ್ನಾಗ ಬಂದೂ "ಸಾವ್ಕಾರ್ರು ಕರೀತಾವ್ರೆ ಬಾರೋ ಸಣ್ಣು" ಎಂದು ಕೂಗಿದ.

'ಸಾವ್ಕಾರ್ರು' ಎಂಬ ಶಬ್ದ ಕಿವಿಗೆ ಬಿದ್ದೊಡನೆ ಸಣ್ಣು ಚಾಪೆಯಿಂದ ಚಕ್ಕನೆ ಎದ್ದು ಕುಳಿತ. ಕೆಂಚಿಯೂ ಭೀತಿಯಿಂದ ಗಂಡನ ಮುಖ ನೋಡಿದಳು. ಹಬ್ಬದ ಗುಂಗಿನಲ್ಲಿ ಮೈಮರೆತಿದ್ದ ಅವರಿಗೆ, ಆದರೆ ಹಿನ್ನೆಲೆಯಲ್ಲಿ ನಡೆಸಿದ್ದ ವ್ಯವಹಾರ ಥಕ್ಕನೆ ನೆನಪಾಯಿತು...

೦ ೦ ೦ ೦

ಊರವರೆಲ್ಲ ಹಬ್ಬದ ತಯಾರಿ ನಡೆಸಿಕೊಳ್ಳತೊಡಗಿದರೂ ಸಣ್ಣು ಯಾವ ಸಿದ್ಧತೆಯೂ ಇಲ್ಲದೆ ಕೈಚೆಲ್ಲಿ ಕುಳಿತುಬಿಟ್ಟಿದ್ದ. ಕಳೆದ ವರ್ಷವೂ ಅವನಿಗೆ ಹೀಗೇ ಆಗಿತ್ತು. ಊಳ್ಳವರೆಲ್ಲ ದೊಡ್ಡ ದೊಡ್ಡ ಬಲಿಯನ್ನು ಅರ್ಪಿಸಿ ಅಮ್ಮನ 'ಕೃಪಾಕಟಾಕ್ಷ'ಕ್ಕೆ ಪಾತ್ರರಾಗಿದ್ದರು. ಸಣ್ಣು ಹಾಗು ಅವನಂತಹ ಬಡ ಕುಟುಂಬಗಳು ಮಾತ್ರ ಕೇವಲ ಒಂದೊಂದು ಕೋಳಿ ಯಿಂದಲೇ ಅಮ್ಮನನ್ನು ತೃಪ್ತಿಪಡಿಸಿ, ತಾವು ಮಾತ್ರ ಅಸಂತೃಪ್ತರಾಗಿ ಉಳಿದಿದ್ದರು.

ಆದರೆ ಈ ವರ್ಷ ಅಂಥ ಜುಜುಬಿ ಕೆಲ್ಸ ಮಾಡಬಾರ್ದು. ಮನೆ ಮುಂದಿಗೆಲ್ಲ ಹೊಸಬಟ್ಟೆ ಹೊಲ್ಸಿ! ಅಕ್ಕಿ, ರಾಗಿ, ಉಪ್ಪು ಮೆಣ್ಸು ಎಲ್ಲಾನ್ನೂ ಧಾರಾಳವಾಗಿ ತಂದು ಹಾಕಿ, ಒಳ್ಳೆ ಮಂಜು ಬೂತಾಳ ಮರಿ

ತಂದು ಅಪ್ಪನಿಗೆ ಒಪ್ಪಿಸಿ ಬಳಗವನ್ನೆಲ್ಲ ಕರೆದು ಉಣ್ಣಿಸಿ ತಾವೂ ತಿಂದ್ದುಂಡು ಹಬ್ಬ ಆಚರಿಸಬೇಕು ಎಂದು ನಿರ್ಧರಿಸಿದ ಸಣ್ಣು.

ಅಂದುಕೊಂಡಷ್ಟು ಸುಲಭವಾಗಲಿಲ್ಲ ಕೆಲಸ. ಗಂಡ ಹೆಂಡತಿ ಎಷ್ಟೇ ರಟ್ಟೆ ಮುರಿದು ಮುರಿದು ದುಡಿದರೂ ಹೊತ್ತು ಹೊತ್ತಿಗೆ ಎಂಟು ಜನಗಳ ತುತ್ತಿನ ಚೀಲ ತುಂಬಿಸಿಕೊಳ್ಳುವುದೇ ಕಠಿಣವಾಗಿತ್ತು. ಇನ್ನು ಹಬ್ಬ ಮಾಡುವಬಗೆ ಹೇಗೆ? ಸಣ್ಣು ಯೋಚಿಸಿ ಯೋಚಿಸಿ ಹಣ್ಣಾದ, ಕೊನೆಗ ಕಂಡುಕೊಂಡಿದ್ದು ಒಂದೇ ದಾರಿ ಊರ ಸಾಹುಕಾರರಾದ ಮಲ್ಲೇಶಪ್ಪನವರಲ್ಲಿ ಕೈಗಡ ಕೇಳುವುದು.

ಮೊದಲ ದಿನ ಅವನು ಸಾಹುಕಾರರನ್ನು ಕಾಣಲು ಹೋದಾಗ ಅವರು ಊರ್ನಾಗಿಲ್ಲ. ನಾಳೆ ಬರ್ತಾರೆ' ಎಂಬ ಉತ್ತರ ಬಂದಿತ್ತು-ಅವರ ಕಿರಿಯ ಹೆಂಡತಿಯಿಂದ. ಮರುದಿನ ಹೋದಾಗ'ಈಗ ಮನಿಕ್ಯಂಡವ್ರೆ ಸಂಜಿ ಕಡೆ ಬಾ' ಎನ್ನಿಸಿಕೊಂಡು ಮರಳಿ ಬಂದುದಾಗಿತ್ತು. ಸಂಜೆ ಹೋದಾಗ' ಕಾಪಿ ಕುಡಿತಾವ್ರೆ. ಬರೋಮಟ ಹಟ್ಟಿಯಾಗ್ ಕುಂತ್ಗ' ಎಂದಾಗ ಒಂದೆ ರಡು ತಾಸು ಆಕಾಶವನ್ನು ದಿಟ್ಟಿಸುತ್ತ ಹಟ್ಟಿಯಲ್ಲಿ ಕುಳಿತುಕೊಂಡ.

ಸಾಹುಕಾರರು ಹೊರ ಜಗಲಿಗೆ ಬಂದು ದರ್ಶನ ನೀಡಿದಾಗ "ಅಡ್ಡ ಬಿದ್ದೆ ಧಣಿ"" ಎಂದು ದೀರ್ಘದಂಡ ಹಾಕಿದ. ಅವರು ಒರಗು ದಿಂಬಿಗೆ ಆತು ಕುಳಿತುಕೊಳ್ಳುತ್ತ "ಏನ್ಲಾ ಬಂದೆ?" ಎಂದು ಮಾಮೂಲು ಪ್ರಶ್ನೆ ಹಾಕಿ ದಾಗ "ಹಬ್ಬ' ಬಂದೈತಲ್ಲ ಧಣಿ...ಅದ್ಕೇ ಒಂದೆಲ್ನೂರ ರೂಪಾಯಿ ಕೈಗಡ ಕೇಳಾಸಂತ ಬಂದೆ..." ಆರಡಿ ದೇಹವನ್ನು ಮೂರಡಿಗೆ ಕುಗ್ಗಿಸಿ ತಲೆ ಕೆರೆದುಕೊಳ್ಳುತ್ತ ನಿವೇದಿಸಿಕೊಂಡ ಸಣ್ಣು

ಸಾಹುಕಾರರು 'ಹೂಂ!ಹೂಂ!' ಎಂದು ಹುಬ್ಬು ಕುಣಿಸಿ "ಇನ್ನೂರು ರೂಪಾಯಿ ಕೈಗಡ! ಹಿಂದಕ್ಕೆ ಯಾವಾಗ ಕೊಡ್ತೋನು?" ಎಂದು ಕೇಳಿದರು.

"ಮುಂದ್ಲೆ ಸುಗ್ಗಿ ಹೊತ್ತಿಗೆ ಕೊಟಿಡ್ತೀನ್ ಧಣಿ" ಸಣ್ಣು ದೃಢವಾಗಿ ಹೇಳಿದ.

"ಎಲ್ಲಿಂದ್ ತೀರಸ್ತೀಯೋ? ಅಷ್ಟು ಹೊತ್ತಿಗೆ ಬರೆ ಬಡ್ಡಿನಾರ ತೀರ್ಸಾಕಾಗತ್ತೋ ಇಲ್ವೋ ನಿನ್ನಿಂದ. ಅಡವ್ಹಾಗ್ ಹೊಲ ಇಲ್ಲ. ಊರ್ನಾಗ್ ಮನೆ ಇಲ್ಲ. ಇನ್ನೂರ್ರುಪಾಯ್ಗೆ ಸಾಲಕೊಟ್ಟು ಮೂಡ್ನಾಮ ಹಾಕ್ಕೋ ಅಂತೀಯಾ?" ಸಾಹುಕಾರರು ತಮ್ಮ ಅಭಿಪ್ರಾಯವನ್ನು ಯಾವ ಮುಲಾಜೂ ಇಲ್ಲದೆ ತಮ್ಮದೇ ಧಾಟಿಯಲ್ಲಿ ಅವನ ಮುಂದಿಟ್ಟಾಗ ಸಣ್ಣು ಆಲೋಚನಾಮಗ್ನನಾದ...

ದಿಟ. ತನಗಿರೊ ಆಸ್ತಿ ಅಂದ್ರೆ–ಹೆಂಡ್ತಿ-ಆರು ಮಕ್ಳು...ಅವೂ ಎಲ್ಲಾ ಸಣ್ಣ ಪುಟ್ಟವು. ಒಂದಾರಾ ಕೈಕೆಳಗ ಬಂದಿಲ್ಲ...ಹುಲಿ ತಿಂದಾ ತೆಂದ್ರೆ ಬಂದ್ ಹೈನಿಲ್ಲ. ಇಲಿ ತಿಂದಾತಂದ್ರೆ ಹಿಡಿ ಕಾಳ್ಕಡ್ಡಿ ಇಲ್ಲ ತನ್ನ ಗುಡ್ಲಾಗೆ... "ನೀ ಪಂಬೋದ್ ದಟ ಧಣಿ. ಆದ್ರುವೆ ನನ್ನ ಕೈಕಾಲು ಗಟ್ಟಿ ಮುಟ್ಟಾಗವೆ-ನಿಮ್ಮ ಪುಣ್ಯದಿಂಡ...ಕೂಲಿ ನಾಲಿ ಮಾಡಿ ಗಳಿಸಿ ನಿಮ್ಮ ಸಾಲ ತೀರಿಸಿಬಿಡ್ತೀನಿ. ಬಡತನ ಮ್ಯಾಲ್‌ರವಷ್ಟು ದಯ ತೋರ್ರಿ ಧಣಿ! ಹ್ವಾದ ಸರ್ತಿನ, ಹಿಂಗೇ ದುಡ್ಡಿನ ಮುಗ್ಗಟ್ಟಾಗಿ ಹಬ್ಬಾನೇ ಮಾಡ್ಲಿಲ್ಲ. ಈ ಸರ್ತಿನೂ, ಹಂಗೇ ಅಂದ್ರೆ ಅಮ್ಮ ಶ್ಯಾಪ ಮಾಡ್ತ್ವಂ ತಾಳೆ...." ಸಣ್ಣು ದೀನನಾಗಿ ಬೇಡಿಕೊಂಡ.

"ಸಾಧ್ಯ ಇಲ್ವೋ. ಹೆಂಗಾರ ಮಾಡ್ಕೊಹೋಗು...ನೀನು ಕೂಲಿ ನಾಲಿ ಮಾಡಿ ಗಳಿಸೋದು ನಿನ್ನ ಹೆಂಡ್ತಿ–ಮಕ್ಳಿಗ್ ತಿನ್ನಾಕ್ ಸಾಲ್ದು, ಇನ್ನು ನನ್ನ ಸಾಲ ಎತ್ಲಾಗಿಂದ ತೀರಸ್ತೀಯ?"ಸಾಹುಕಾರ್ರು ಕಡ್ಡಿ ತುಂಡಾ ಗುವಂತೆ ಹೇಳಿ ಬೇರೆ ವ್ಯವಹಾರದ ಕಡೆ ಗಮನ ಕೊಡಲುದ್ಯುಕ್ತರಾದಾಗ ಸಣ್ಣು ಹತಾಶನಾದ. "ಒಬ್ಬರ ಗಂಟು ಮುಳುಗಿಸೊ ಅಂಥ ಬಡ್ಡಿ ಮಗ ನಲ್ಲ ಧಣಿ ನಾನು! ನನ ಮಾತಿನಮ್ಯಾಲ್ ನಿಮಗಷ್ಟು ನಂಬಿಕೆ ಇಲ್ದ ಮ್ಯಾಲೆ ಮತ್ತೇನ್ಮಾಡಾಕಾಗ್ತದೆ ಬಿಡಿ ಹೋಗ್ತೀನಿ " ಎನ್ನುತ್ತ ಹೊರಟು ನಿಂತ.

ಸಾಹುಕಾರರು ಮನದಲ್ಲೇ ಏನನ್ನೋ ನಿರ್ಧರಿಸಿದವರಂತೆ- "ಅಲ್ಲಿದ್ರೆ ಹಿಂಗ್ ಮಾಡೋ ಸಣ್ಣು" ಎಂದಾಗ, ಮುಳುಗುತ್ತಿರುವವನ ಕೈಗೆ ಮರದ ತುಂಡು ಸಿಕ್ಕಿದಂತಾಗಿ "ಏನ್ ಧಣಿ!" ಎಂದು ಗೆಲುವಿನಿಂದ ಕೇಳಿದ.

"ನೋಡು ಇನ್ನೂರು ರೂಪ್ಯಾ ಅಲ್ಲದಿದ್ರೆ ಇನ್ನು ಐವತ್ತು ಹೆಚ್ಚಿಗೆ ತಗಂಡ್ಹೋಗಿ ಹಬ್ಬ ಮಾಡು ಯಾಕೆಂದ್ರೆ ಈಗಿನ ಕಾಲ್ದಾಗ್ ನೂರ್ ನೂರ್ ರೂಪ್ಯಾ ಅಂದ್ರೆ ಹತ್ತು ರೂಪ್ಯಾಗ್ ಸಮ. ಆಗ್ತೈತೆ. ಸುಮಾರಾದೊಂದು ಮರಿ ತಗೋಬೇಕೆಂದ್ರೂ ನೂರು ರೂಪ್ಯಾ ಮ್ಯಾಲೇ ಬೇಕಾಗ್ತೈತೆ. ಇನ್ನು ಅರಿವೆ-ಅಚ್ಚಡಿಕಾಳು-ಕಡ್ಡಿಗೆಲ್ಲ ಮತ್ತ್ಯಾರ್ ತಾವ ಕೇಳ್ಕ್ಹೋಗ್ತೀಯಾ?"

ಸಾಹುಕಾರ್ರೇ ಈ ಮಾತುಗಳನ್ನಾಡುತ್ತಿದ್ದಾರೋ ಅಥವ ಊರಮ್ಮನೇನಾದರೂ ಇವರ ಮೈಮೇಲೆ ಬಂದು ಈ ರೀತಿ ನುಡಿಸುತ್ತಿದ್ದಾಳೋ ಎಂಬ ಅನುಮಾನ ಉಂಟಾಗಿ ಸಣ್ಣು ಮೂಕನಾಗಿ ಅವರನ್ನೇ ನೋಡ ತೊಡಗಿದ.

"ಯಾಕೋ ಬಾಯಿ ಬಿಗ್ಕೊಂಬಿಟ್ಟೈತಲ್ಲ.. ನಾನ್ಹೇಳೋದ್ ದಿಟವೋ ಸುಳ್ಳೋ?" ಅವರು ಎಚ್ಚರಿಸಿದಾಗ ಸಣ್ಣು ಕೃತಜ್ಞತಾ ಭಾವದಿಂದ ಕರಗುತ್ತ "ದಿಟ ಧಣಿ" ಎಂದಷ್ಟೇ ಉಸುರಿದ.

"ನೋಡೋ ಸಣ್ಣು, ನೀನು ಕೂಲಿನಾಲಿ ಮಾಡಿ ತೀರಿಸ್ತೀನಿ ಅನ್ನೋ ಮಾತೆಲ್ಲ ಸುಳ್ಳು. ಅದು ನಿನ್ನ ಕೈಯಿಂದಾಗೋದಿಲ್ಲ. ಈಗ ಇನ್ನೂರೈವತ್ತು ರೂಪಾಯಿ ಕೊಡ್ತೀನಿ ತಗೊಂಡ್ಹೋಗು. ಒಂದ್ವರ್ಷ ನನ್ಮನೆಯಾಗಿದ್ದು ಬ್ಯಾಸಾಯ ಗೇದು ತೀರಿಸ್ಬಿಡು...ದಿನಕ್ಕೆಲ್ಡು ದಪ ಉಣ್ಣಾಕ್ ಇಕ್ಕ್ತೀನಿ...ಉಟ್ಕೊಳಾಕೆ ಹಳೆ ಪಳೆ ಬಟ್ಟೆ ಕೊಡಿಸ್ತೀನಿ....ಏನಂತೀಯಾ?"

ಅವರು ಧಾರಾಳತನ ತೋರಿದ್ದರ ಅರ್ಥ ಈಗಾಯಿತು ಸಣ್ಣುವಿಗೆ ಅವನ ಹಣೆಯ ಮೇಲೆ ಚಿಂತೆಯ ಗೆರೆಗಳು ಮೂಡಿದವು. ಇದುವರೆಗೂ ಯಾರ ಹಂಗಿಗೂ ಒಳಗಾಗದೆ ಸ್ವತಂತ್ರವಾಗಿ ದುಡಿದುಂಡು ಹೆಂಡತಿ ಮಕ್ಕ

ಜೊತೆ ಬದುಕು ಸಾಗಿಸಿದ್ದವನಿಗೆ ಈಗ ಪರರ ಮನೆಯಲ್ಲಿ ಜೀತದಾಳಾಗಿ ಉಳಿಯಲು ಮನಸ್ಸು ಹಿಂಜರಿಯಿತು. ಆದರೂ ಇದಕ್ಕೊಪ್ಪದಿದ್ದರೆ ಸಾಲ ಸಿಗುವಂತಿಲ್ಲ: ಸಾಲ ದೊರಕದೆ ಹಬ್ಬ ಮಾಡುವಂತಿಲ್ಲ...ಸಣ್ಣ ಇದಕ್ಕೂ ಹೆಚ್ಚಿನ ವಿಚಾರ ಮಾಡುವ ಗೋಜಿಗೆ ಹೋಗದೆ—" ವರ್ಸಾ ಕಾಲಿ ಮಡಿದ್ರೆ ಬರೆ ಎರಡು ನೂರೈವತ್ತು ರೂಪ್ಯಾನೇ ಏನ್ ಧಣಿ? ಇನ್ನೊಂದ್ ಐವತ್ತು ಮಾಡ್ಕೊಳಿ!" ಎಂದು ವಿನಂತಿಸಿಕೊಂಡ.

ಮನುಷ್ಯ ಪರಿಸ್ಥಿತಿಯ ಕೈಗೊಂಬೆಯಾದಾಗ ಹೇಗೆ ವಿವೇಚನಾಶಕ್ತಿ ಕಳೆದುಕೊಳ್ಳುತ್ತಾನೆ ಎಂಬುದನ್ನು ಸಾಹುಕಾರರು ಅನುಭವದಿಂದ ಅರಿತವ ರಾಗಿದ್ದರು. ಆದರೂ ಬೇಟೆ ಇಷ್ಟು ಸುಲಭದಲ್ಲಿ ದಕ್ಕೀತೆಂದು ಅವರು ನಿರೀಕ್ಷಿಸಿರಲಿಲ್ಲ. ದಿನಕ್ಕೆ ಒಂದೇ ರೂಪಾಯಿ ಲೆಕ್ಕದಲ್ಲಿ ಕೂಲಿ ಕೊಟ್ಟರೂ ತಿಂಗಳಿಗೆ ಮೂವತ್ತು: ವರ್ಷಕ್ಕೆ ಮುನ್ನೂರು ಅರವತ್ತೈದು... ಅಂತಹುದರಲ್ಲಿ ಮೇಲಿನ ಅರವತ್ತೈದು ಲಾಭವಾಗಿ ಉಳಿದು, ಜೊತೆಗೆ ಇಂತಹ ಗಟ್ಟಿ ಮುಟ್ಟಾದ ಆಳು ಸಿಗುತ್ತಿರುವಾಗ ಬೇಡವೆನ್ನುವುದುಂಟೇ...

ಬಹಳ ಹೊತ್ತು ಆಲೋಚಿಸುವಂತೆ ನಟಿಸಿ "ಹೂಂ, ನೀನಿಷ್ಟು ಜುಲ್ಮಿ ಮಾಡಿ ಕೇಳ್ತಿರ್ವಾಗ ನಾನು ಆಗೋದೇ ಇಲ್ಲ ಅನ್ನೋದ್ಯಾವ ಧರ್ಮ? ನಂದೇ ಐವತ್ತು ರೂಪಾಯಿ ಲುಕ್ಷಾನಾದ್ರೂ ಚಿಂತಿಲ್ಲ. ಬಡವ— ನೀನೇ ಬದುಕ್ಕೊ ಹೋಗ್! ಮುನ್ನೂರುರುಪ್ಯಾ ಕೊಟ್ಟಿಡ್ತೀನಿ; ಮತ್ತೇ ನಪ್ಪಾ?..." ಎಂದು ಕೇಳಿದರು.

ಸಣ್ಣ ಮತ್ತೇನೂ ಹೇಳುವ ಸ್ಥಿತಿಯಲ್ಲಿರಲಿಲ್ಲ. ತನ್ನ ವ್ಯಕ್ತಿತ್ವ ವನ್ನು ಕೇವಲ ಮೂರುನೂರು ರೂಪಾಯಿಗಳಿಗೆ ಆಗಲೆ ಮಾರಿಕೊಂಡಾ ಗಿತ್ತು. ನಿಧಾನಿಸಿದರೆ ಸಣ್ಣ ಮತ್ತೆ ಮನಸ್ಸು ಬದಲಾಹಿಸಬಹುದೆಂದು ಸಂದೇಹಿಸಿದ ಸಾಹುಕಾರರು ಆ ಕ್ಷಣವೇ ಅವನ ಕೈಗೆ ಹಣವನ್ನಿತ್ತು ಒಪ್ಪಂದದ ಪತ್ರ ಬರೆಯಿಸಿ ಎಡಗೈ ಹೆಬ್ಬೆಟ್ಟಿನ ರುಜು ಒತ್ತಿಸಿಕೊಂಡರು.

ಕೈಗಡ ತರುತ್ತೇನೆಂದು ಹೇಳಿಹೋದ ಗಂಡ ಜೀತದಾಳಿನ ಪಟ್ಟ

ಕಟ್ಟಿಸಿಕೊಂಡು ಬಂದುದನ್ನು ಕೇಳಿ ಕೆಂಚಿ ಹೌಹಾರಿದಳು. ಅಂಬಲಿನೋ ಗಂಜಿನೋ ಕುಡ್ಕಂಡು ನಮ್ಮನಿಯಾಗ್ ನಾವ್ ತಣ್ಣಗಿದ್ವಲ್ಲ...!ಒಡ್ಲೇ ಹೋಗಿ ವರ್ಷದ ವನವಾಸ ಹೊತ್ಕೊಂಬಂದುಬಿಟ್ಯಲ್ಲ!..." ಎಂದು ಕಣ್ಣೀರಿಟ್ಟಳು.

ಸಣ್ಣುವಿಗೂ ತಾನು ದುಡುಕಿ ಬಲೆಗೆ ಬಿದ್ದೆನೇನೋ ಎನ್ನಿಸಿತಾದರೂ ಹೆಂಡತಿಯ ಮುಂದೆ ಒಪ್ಪಿಕೊಳ್ಳಲು ಅವನು ಸಿದ್ಧನಿರಲಿಲ್ಲ. "ಬ್ಯಾರೆ ದಾರಿನೇ ಇಲ್ಲ ಕೆಂಚಿ. ಸರಿಕರೆಲ್ಲ ಕ್ಯಾಣನಂಥ ಮರಿ ತಂದು ಅಮ್ಮನಿಗ್ ಒಪ್ಪಿಸ್ತಿರೋವಾಗ ನಾವ್ ಸುಮ್ನೆ ಕುಂತ್ರೆ ಆಕಿಗ್ ಸಿಟ್ ಬರೋದಿಲ್ವಾ?" ಎಂದು ಭೀತಿ ವ್ಯಕ್ತಪಡಿಸಿ ತನ್ನ ಕಾರ್ಯವನ್ನು ಸಮರ್ಥಿಸಿಕೊಂಡಾಗ "ಸೈ ಬಿಡು..." ಎಂದು ಕೆಂಚಿ ಮನದ ಚಿಂತೆಯನ್ನು ದೂರ ತಳ್ಳಿ ಹಬ್ಬದ ಗಡಿಬಿಡಿಯಲ್ಲಿ ಮೈಮರೆತಳು...

* * * *

"ಬಾರಪ್ಪ, ಹೆಂಗಿರೋನ್ನಂಗೇ ಕರ್ಕಂಬಾ ಅಂತ ಅಲ್ಲ್ರವಾಡಪ್ರ ಸ್ವಾಮೋರು" ಎಂದು ಹಿರ್ಯಾಗ ಮತ್ತೊಮ್ಮೆ ಕರೆದಾಗ ಸಣ್ಣು ದೈನ್ಯದಿಂದ ಹೆಂಡತಿ ಮಕ್ಕಳತ್ತ ನೋಡಿದ. "ಕರೀತಾವ್ರಂತೆ ಹೋಗು. ಒಲ್ಲೇ ನಂದ್ರೆ ನಡೆದೀತಾ? ನಮ್ಮ ಬೆನ್ನಿಗ್ ಸಿವ ಅವ್ನೆ!" ಒತ್ತರಿಸಿ ಬಂದ ದುಃಖ ವನ್ನು ತಡೆದುಕೊಳ್ಳಲೆತ್ನಿಸುತ್ತ ಹೇಳಿದಳು ಕೆಂಚಿ.

ಸಣ್ಣು ಹೆಂಡತಿಗೆ ಏನನ್ನೋ ಹೇಳಬೇಕೆಂದವನು ಗಂಟಲು ಬಿಗಿ ದಂತಾಗಿ ಮಾತಾಡಲಾಗದೆ ಮೌನವಾಗಿ ಹೊರಬಂದು ಹಿರ್ಯಾಗನನ್ನು ಹಿಂಬಾಲಿಸಿದ.



# ಸದ್ಗೃಹಸ್ಥೆ

—ರತ್ನ ಅಶ್ವಥ್ (ಸಾಯಿಸುತೆ)

ಮೊದಲೆ ಸುಸ್ತಾಗಿದ್ದೆ. ಲಾಸ್ಟ್ ಅವರ್ ಲೆಕ್ಚರ್ ಕ್ಲಾಸ್ ಬೇರೆ, ಮಿದುಳಿನಲ್ಲಿ ಸಿಡಿತ ಷುರುವಾಯಿತು. ವಿದ್ಯಾರ್ಥಿಗಳ ಮುಖದ ಮೇಲೆ ಅನಾಸಕ್ತಿ ಕಂಡಾಗ ಇದ್ದ ಉತ್ಸಾಹವು ಕುಸಿಯಿತು. ಕಾಲೇಜಿಗೆ ಬರೋ ವಿದ್ಯಾರ್ಥಿಗಳಿಗೆ ಪಾಠ ಕೇಳೋಕ್ಕಿಂತ ಮಜಾ ಮಾಡುವುದರಲ್ಲಿಯೆ ಆಸಕ್ತಿ. ಮನಸ್ಸಿನಲ್ಲಿ ಬೇಸರ ಇಣುಕಿತು. ಶಂಭು ಹಾಗೆ ರಾಜಕೀಯಕ್ಕೆ ಇಳಿದು ಹಾಯಾಗಿ ಗತ್ತಿನಿಂದ ಓಡಾಡಿಕೊಂಡಿದ್ದರೆ ಚೆನ್ನಿತ್ತು. ಹತ್ತು ಸಲವಲ್ಲ ನೂರು ಸಲ ಹೇಳಿಕೊಂಡೆ.

ತಕ್ಷಣ ಎದುರು ಮನೆಯ ಸದ್ಗೃಹಸ್ಥೆಯು ನೆನಪಾಯಿತು. ಸದಾ ಮೈ ತುಂಬ ಸೆರಗನ್ನ ಹೊದ್ದು ತುಳಸಿ ಪೂಜೆ ಮಾಡುತ್ತಿದ್ದ ಹೆಣ್ಣನ್ನ ಮೆಚ್ಚೆತ್ತಿ ನೋಡಿದ್ದೆ. ಆ ಮನೆಗೆ ಬಂದಾಗ ನೂಲಿನ ಸೀರೆಯುಡು ತ್ತಿದ್ದ ಹೆಣ್ಣು ಈಗ ನೀರಿಗೆ ಹಾಕಿದ ರೇಶಿಮೆ ಸೀರೆಯನ್ನುಡುತ್ತಿದ್ದಳು. ಅವಳ ಹಣೆಯಲ್ಲಿದ್ದ ದೊಡ್ಡ ಕುಂಕುಮದ ಬೊಟ್ಟು ಕಿರಿದಾದುದ್ದೇ ಇಲ್ಲ. ಇಪ್ಪತ್ತೈದರ ಒಳಗಿನ ಹೆಣ್ಣಿಗೆ ಹೆಚ್ಚೆನಿಸುವಂಥ ಗಾಂಭೀರ್ಯ ಆ ತುಟಿಗ ಳಿಗೆ ಮಾತಾನಾಡುವುದು ಗೊತ್ತಿಲ್ಲವೆನ್ನುವಂತೆ ಬಿಗಿದು ಕೂರುತ್ತಿದ್ದವು.

ಅಮ್ಮ ಬೆಳಿಗ್ಗೆ ಕಾಲೇಜಿಗೆ ಹೊರಟಾಗ ಸ್ವಲ್ಪ ಅಸಹನೆಯಿಂದಲೇ ಹೇಳಿದ್ದಳು "ನೋಡಿದ್ಯಾ. ಎದ್ರುಮನೆಯವ್ರು ಹೊಸ್ದಾಗಿ ಸೈಟು ಕೊಂಡ್ರಂತೆ. ಯಾವ್ದೋ ಖಾಸಗಿ ಕಂಪನಿಯಲ್ಲಿ ಗುಮಾಸ್ತನಂತೆ. ಎಷ್ಟು ಸಂಬಳ ಬಂದೀತು! ಅಪ್ಪ, ಮಗ ಇಬ್ರೂ ದುಡೀತೀರಾ ಅದ್ರೂ ಈ

ಪಾಡ್ಗೆ ಮನೆಯಲ್ಲಿರೊ ! ಹಣೆಬರಹ ತಪ್ಪಲಿಲ್ಲ" ಅಮ್ಮನ ಉವಾಚಕ್ಕೆ ಕೊನೆಯಿಲ್ಲವೆಂದು ತುಟಿ ಕೊಂಕಿಸಿ ನಕ್ಕಿದ್ದೆ.

ಒಲ್ಲದ ಪ್ಯಾಂಪ್ಲೆಟನ್ನು ವಿದ್ಯಾರ್ಥಿಗಳ ತಲೆಗೆ ತುರುಕಲು ಹೋಗಿ ಸೊರಗಿದ್ದೆ. ಒದರಿ ಒದರಿ ಕಡ್ಡಿಯಾಗೋ ಹಣೆ ಬರಹ ನನ್ನದು. ಗಂಟೆ ಬಾರಿಸಿದ್ದ ಕೂಡಲೇ ಕಾದಿದ್ದವನಂತೆ ಪುಸ್ತಕ ಮುಚ್ಚಿ ಹೊರಗೆ ಬಂದೆ. ಕಾರಿಡಾರ್‌ನಲ್ಲಿ ಹರಟುತ್ತಿದ್ದ ವಿದ್ಯಾರ್ಥಿಗಳನ್ನು ನೋಡಿದರೂ ನೋಡದವನಂತೆ ನಡೆದೆ. ಅಧ್ಯಾಪಕರು ತಮ್ಮ ಘನತೆ ಕಾಪಾಡಿಕೊಳ್ಳುವ ರೀತಿಯಿದು. ಡಿಪಾರ್ಟ್‌ಮೆಂಟಿನ ರೂಮಿಗೆ ನುಗ್ಗಿದೆ. ಸೂರ್ಯನ ಪ್ರಖರ ಕಮ್ಮಿಯಾಗಿ ಸಂಜೆಯಾಗಿದ್ದರೂ 'ಸೆಕೆ, ಸೆಕೆ,' ಎಂದು ಮೈ ಅಳಚಿಕೊಳ್ಳ ತೊಡಗಿತು. ಟೈ ಸಡಲಿಸಿ, ಷರಟಿನ ಮೇಲಿನ ಗುಂಡಿ ಬಿಚ್ಚಿ ಎದೆಯನ್ನು ಫ್ಯಾನ್ ಗಾಳಿಗೆ ಒಡ್ಡಿದೆ. ದೊಡ್ಡ ಧ್ವನಿಯಲ್ಲಿ ವಿಮರ್ಶಿಸುತ್ತಿದ್ದ ಬೇರೆ ಅಧ್ಯಾಪಕರ ಘೋರೆನಿಸುವಂಥ ಮಾತುಗಳನ್ನು ಕೇಳಿಸಿಕೊಳ್ಳಲು ಇಷ್ಟವಾಗಲಿಲ್ಲ.

ಎದ್ದು ನಿಂತೆ. ಬಾಟನಿ ಲೆಕ್ಚರರ್ ವಿಶ್ವಾಸದಿಂದ ಕೈ ಹಿಡಿದಳು. ಹುಬ್ಬೆತ್ತಿ ಮುಖವನ್ನ ಅವಲೋಕಿಸುತ್ತ ಕೇಳಿದರು. "ಮೈಯಲ್ಲಿ ಹುಷಾರಿಲ್ವೆ ? ತುಂಬ ಟಾಯರ್ಡ್ ಆದ ಹಾಗೆ ಕಾಣ್ತೀರಾ! "ಹಣೆಯುಜ್ಜಿ ನಸುನಕ್ಕೆ ಓಹ್ ! ನಥಿಂಗ್, ಈಗಾಗ್ಲೇ ಬೋರು! ಇವ್ರಿಗೆ ಪಾಠ ಹೇಳಿ ನಮ್ಮ ಮೈಯಲ್ಲಿ ಮೂಳೆ ಕಾಣಬೇಕಷ್ಟೆ! ಉತ್ಸಾಹವೇ ಬತ್ತಿ ಹೋಗಿದೆ" ಎಂದಾಗ ಅವರು ಘೊಳ್ಳೆಂದು ನಕ್ಕರು. ಅಲ್ಲಿ ನಿಲ್ಲುವ ಮನಸ್ಸಾಗದೆ ಬಾಗಿನತ್ತ ನಡೆದೆ.

ಈಪ್ರೊಫೆಶನ್‌ಗೆ ಎಷ್ಟೊಂದು ಉತ್ಸಾಹದಿಂದ ಬಂದಿದ್ದೆ! ಆರಂಭದಲ್ಲಿಯೇ ಉತ್ಸಾಹ ತಗ್ಗಿ ಹೋಗಿದೆಯಲ್ಲ ಎಂದು ಚಿಂತಿತನಾದೆ. ಮನೆಯ ಬಳಿಗೆ ಬಂದಾಗ ಮಾಮೂಲಿಯಂತೆ ನೋಟ ಎದುರು ಮನೆಯತ್ತ ಹಾರಿತು. ಆ ಸದ್ಗೃಹಸ್ಥೆ ಬದನೆಕಾಯಿ ಮಾರುವವಳ ಬಳಿ ಮಾತನಾಡುತ್ತಿದ್ದಳು. ಮಾನ ಸ್ವರ ಕೇಳಲು ಕುತೂಹಲಿಸಿತು. ತುಟಿಗಳು ಅಲುಗಾಡಿದ್ದು ಕಾಣಿಸಿತೆ

ನಿನಹಃ ಧ್ವನಿ ಕೇಳಿಲಿಲ್ಲ. ಈಕೆಯನ್ನು ಹೊಗಳುವಾಗ ಅಮ್ಮನಿಗೆ ಕನಿಷ್ಠ ನಾಲ್ಕು ಬಾಯಿಗಳಾದರೂ ಬೇಕಾಗಿತ್ತು.

"ವಿಶೂ, ಹೆಣ್ಣು ಅಂದ್ರೆ ಎದರು ಮನೆಯವರಿದ್ದ ಹಾಗೆ ಇರ್ಬೇಕೂ –ಮನೆಯಲ್ಲಿ ಕೂಡ ಸೆರಗು ಹೊದ್ದೆ ಓಡಾಡ್ತಾಳೆ. ಇಲ್ಲಿ ಬಂದಾಗ ಕೈಯಲ್ಲಿ ಆರಾರು ಗಾಜಿನ ಬಳೆಯಿತ್ತು. ಈಗ ಎರಡೆರಡು ಬಂಗಾರದ ಬಳೆ ಹಾಕ್ಕೊಂಡಿದ್ದಾಳೆ" ನನಗೆ ತಮಾಷೆಯೆನಿಸಿತು. ಅಮ್ಮನನ್ನು ಛೇಡಿಸುವಂತೆ ಕೇಳಿದೆ "ಸೆರಗೊದ್ದು ಓಡಾಡಿದ ಮಾತ್ರಕ್ಕೆ ಗಾಜಿನ ಬಳೆ ಬಂಗಾರದ್ದು ಆಗೋಕ್ಕೆ ಸಾಧ್ಯನಾ? ಏನೋ ಒಳಗುಟ್ಟಿದೆ..." ಅಮ್ಮ ಕಣ್ಣು ಕೆಂಪಗೆ ಮಾಡಿಕೊಂಡು ಒಳಗೆದ್ದು ಹೋಗಿದ್ದರು. ತೀರಾ ಸರಳ ಸ್ವಭಾವದ ಅಮ್ಮನ ಮುಗ್ಧತೆಯ ಬಗ್ಗೆ ನಕ್ಕೆ.

ಎದುರು ಮನೆಯಾಕೆಯ ಒದನೆಕಾಯಿ ವ್ಯಾಪಾರ-ಮುಗಿಯುವವರೆಗೂ ಕಾಂಪಾಂಡಿನಲ್ಲಿಯೆ ಅಡ್ಡಾಡಿದೆ. ನನ್ನ ಬಗ್ಗೆ ಅವರಿವರು ತಪ್ಪು ತಿಳಿಯುವರೆನ್ನುವ ಭಯವಿರಲಿಲ್ಲ. ನೂರಾರು ವಿಧ್ಯಾರ್ಥಿಗಳಿಗೆ ಪಾಠ ಕಲಿಸುವನೆನ್ನುವ ಗತ್ತು ಮುಖದ ಮೇಲಿತ್ತು. ಅದರೂ ನೀವುಗಳು ತಪ್ಪು ತಿಳಿಯುವುದು ಬೇಡ- ಯಾವ ಕೆಟ್ಟ ಭಾವನೆಯಿಂದಲೂ ಅತ್ತ ನೋಡುತ್ತಿರಲಿಲ್ಲ. ಹೆಣ್ಣುಗಳನ್ನು ಕಾಣದ ಗಂಡು ನಾನಲ್ಲ. ಮತ್ತೆ ನೀವು ಆ ಹೆಣ್ಣಿನಲ್ಲಿ ನಿನಗೆಂಥ ಆಸಕ್ತಿಯೆಂದು ಪ್ರಶ್ನಿಸಿದರೆ ಮಾತ್ರ ಉತ್ತರ ನನ್ನ ಬಳಿ ಇಲ್ಲ. ಆಸಕ್ತಿಗಿಂತ ಆ ಹೆಣ್ಣು ಕುತುಹಲ ಹುಟ್ಟಿ ಹಾಕಿದ್ದಳು ಏಕೆ. ಏನು, ಎತ್ತ?-ಒಂದು ಗೊತ್ತಿಲ್ಲ.

ಬಾಗಿಲು ಚಿಲಕ ಸದ್ದಾದಾಗ, ಹಿಂದಕ್ಕೆ ತಿರುಗಿದೆ. ಅಮ್ಮ ಬಿಚ್ಚು ಗೂದಲನ್ನು ಗಂಟು ಹಾಕಿಕೊಳ್ಳುತ್ತ ಹೊರಗೆ ಬಂದಳು. ಬೇಸರದ ಮುಖ ಮಾಡಿದಳು. "ಎಷ್ಟೊತ್ತು ಆಯ್ತು. ಬಂದು? ಒಳಗಿನ ಕೆಲ್ಸದಲ್ಲಿ ಮುಳುಗಿ ಬಿಟ್ರೆ ಕಾಲಿಂಗ್ ಬೆಲ್ ಸದ್ದು ಆಗೋದು ಕೂಡ ಕೇಳೋಲ್ಲ! ಮೆಲು ನಗೆ ನಗುತ್ತ ಅಮ್ಮನನ್ನ ಸವರಿಕೊಂಡೆ ಒಳಗೆ ಹೋದೆ. ಬೆವರು ಅಂಟಿದ್ದ ಮುಜುಗರವೆನಿಸಿದ ಬಟ್ಟೆಗಳನ್ನ ಕಳಚಿ ಪತ್ನಿಯ ಲುಂಗಿ ಯುಟ್ಟು ಛೇರ್ ಮೇಲೆ ಆಡ್ಡಾದೆ;

ಬೆರಳಿನಿಂದಲೆ ಮುಂಗೂದಲನ್ನು ಸರಿಮಾಡಿಕೊಳ್ಳುತ್ತ ಬಂದ ಅಮ್ಮ ಬಾಯಿ ತೆರೆಯುವ ಮೊದಲೆ ಹೇಳಿದೆ. ಆ ಸದ್ಗೃಹಸ್ಥೆಯ ವಿಷ್ಯ ಆಮೇಲೆ ಹೇಳ್ಬಹುದ್ದು. ಸದ್ಯಕ್ಕೆ ನಂಗೇನಾದ್ರೂ ಕೊಡು "ಅಮ್ಮ" ಕೋಪದ ಮುಖ ಮಾಡಿದಾಗ ಮುಖ ಮೇಲೆತ್ತಿ ನಕ್ಕೆ. ಅಮ್ಮನಿಗೆ ಹಾಗೆ ಹೇಳಿ ಕಳಿಸಿದರೂ ವಿಷಯ ತಿಳಿಯಲು ಆಸಕ್ತಿ ಇತ್ತು. ನಾನು, ಅಪ್ಪ ಇಲ್ಲದ ಸಮಯಗಳಲ್ಲಿ ಆಕೆ ಆಗಾಗ ಬಂದು ಹೋಗುತ್ತಿದ್ದಳು, ಅಮ್ಮ ಕೂಡ ಹೋಗಿ ಬರುತ್ತಿದ್ದುದುಂಟು. ಜೈಮಿನಿ ಭಾರತ ಭಕ್ತಿಭಾವದಿಂದ ಓದಿ ಹೇಳುತ್ತಿದ್ದಳಂತೆ. ಅಂದೆಲ್ಲ ಅಮ್ಮನಿಗೆ ಆಕೆಯದೇ ಧ್ಯಾನ." ಇಂಥ ಹೆಣ್ಣುಗಳು ಇರೋದ್ರಿಂದ್ಲೆ ಈಗ್ಲೂ ಹಗಲು-ರಾತ್ರಿಗಳಾಗೋದು! ಸುಟ್ಟು ಸುಡುಗಾಡು ನಾಲ್ಕು ಅಕ್ಷರ ಕಲ್ತು ಮೆರೆಯೋ ಹೆಣ್ಣುಗಳು ಕಮಲಳಿಂದ ಬುದ್ಧಿ ಕಲೀಬೇಕು!" ಎಂದು ಕೂಗಾಡಿದಾಗಲೆ ಆ ಎದುರು ಮನೆಯ ಸದ್ಗೃಹಸ್ಥೆಯ ಹೆಸರು ತಿಳಿದಿದ್ದು. ಆದರೂ ನಾನು ಮಾತ್ರ ಸದ್ಗೃಹಸ್ಥೆಯೆಂದೆ ಸಂಭೋಧಿಸುತ್ತಿದ್ದುದು.

ಕಾಫೀ ಹಿಡಿದು ಬಂದ ಅಮ್ಮನ ಮುಖದ ಮೇಲಿನ ಕೋಪ ತಗ್ಗಿರಲಿಲ್ಲ. ಸಿಡಿಯಬಾರದೆಂದು ಲೋಟಕ್ಕೆ ತಲೆ ತಗ್ಗಿಸಿ ಕೈ ಚಾಚಿದೆ. ಕೈಗೆ ಸಿಕ್ಕಿದ ಪತ್ರಿಕೆಯನ್ನು ಎಳೆದುಕೊಂಡು ಪುಟಗಳನ್ನು ಮೊಗಚುತ್ತ ಕಾಫೀ ಗುಟುಕರಿಸತೊಡಗಿದೆ. ವ್ಯಂಗ ಚಿತ್ರವಿದ್ದ ಪುಟ ಬಂದಾಗ ಕೈಯನ್ನ ಸುಮ್ಮನಾಗಿಸಿ ನೋಟವನ್ನು ನೆಟ್ಟೆ. ತಲೆ ಕೆಡಿಸಿಕೊಳ್ಳದೇ ಅರ್ಥವಾಗದ ವ್ಯಂಗ ಚಿತ್ರಗಳ ಬಗ್ಗೆ ಅಮ್ಮನಿಗೆ ಕೋಪ. ಕೆಲವೊಮ್ಮೆ ಸಂಪಾದಕರ ಬಗ್ಗೆನೂ ಸಿಡುಕಿ ತನ್ನ ಅಸಹನೆ ಪ್ರಕಟಿಸುತ್ತಿದ್ದಳು. 'ಓ! ಅಮ್ಮ ನಿಂಗ್ಯಾಕೆ ಬುದ್ಧಿಯಿಲ್ಲಾ! ಸ್ವಲ್ಪ ತಲೆಗೆ ಕೆಲ್ಸ ಕೊಡು-ಎಂಥ ಖುಷಿ ಸಿಕ್ಕುತ್ತೆಂತ!' ಎಂದ ಭುಜ ಕುಣಿಸಿದಾಗ ಮುಖ ಗಂಟಾಕಿದ್ದಳು. ಆವಳ ಕೋಪಕ್ಕೆ ಮತ್ತೊಂದ ಕಾರಣವು ಇತ್ತು. ನಾಲ್ಕು ಗೆರೆಯಲ್ಲಿ ಎದುರು ಮನೆಯ ಹೆಣ್ಣನ್ನು ಚಿತ್ರಿಸಿ 'ಸದ್ಗೃಹಸ್ಥೆ ಎಂದು ಹೆಸರಿಟ್ಟು ಅವಳ ಮುಂದಿಡಿದು ನಕ್ಕಿದ್ದೆ, ಸಮಾಜದ ಅಂಕು-ಡೊಂಕು, ವ್ಯಕ್ತಿಗಳ ಓರೆಕೋರೆಗಳಿಗೆ, ನಗೆ-ಟೀಕೆ-

ಉತ್ಪ್ರೇಕ್ಷೆಗಳಿಗೆ ರಾವುಗನ್ನಡಿ ಹಿಡಿಯುವ ವ್ಯಂಗ ಚಿತ್ರಗಳು ನನಗೆ ಹೆಚ್ಚು ಖುಷಿ ಕೊಡುತ್ತಿತ್ತು.

"ಈ ಬೀಗದ ಕೈ ನಮ್ಮಾಕೆಗೆ ಕೊಡ್ತೀರಾ ?" ಸ್ತೋತ್ರ ಸ್ವರ ಕೇಳಿಸಿದಾಗ ಹೊರಗೆದ್ದು ಬಂದೆ. ಪೊದೆ ಗಡ್ಡ, ಮೀಸೆಯ ಜೋಲು ಮುಖದ ಗಂಡೆಂಬ ಪ್ರಾಣಿ ನಿಂತಿದ್ದು ಕಂಡು ತುಸು ಅಸಹನೆಯುಂಟಾಯಿತು. ಕಣ್ಣು ಸನ್ನೆಯಿಂದಲೆ ವಿಚಾರಿಸಿದೆ. ಆ ವ್ಯಕ್ತಿ ಮತ್ತೆ ಹಳೇ ರಾಗ ಹಾಡಿದ, "ನಮ್ಮಾಕೆ ದೇವಸ್ಥಾನಕ್ಕೆ ಹೋಗಿದ್ದಾಳೆ. ಈ ಬೀಗದ ಕೈನ ಕೊಟ್ಬಿಡಿ" ನನಗೆ ಸಹಾನುಭೂತಿಯಿಂದ ಅಳಬೇಕೆನಿಸಿತು. ಮಾತಾಡದೆ ಕೈ ಚಾಚಿದೆ ಅವರಲ್ಲಿಟ್ಟು ನಕ್ಕ "ನೀನು ನಗಬೇಡ್ವೋ ಮಗ್ನೇ" ಮುಷ್ಟಿ ಬಿಗಿಯುವಂತಾಯಿತು. ಕೆಲವು ವ್ಯಕ್ತಿಗಳನ್ನ ನೋಡಿದ ಕೂಡಲೆ ಕೋಪ, ಬೇಸರ ಜಿಗುಪ್ಸೆಗಳು ಹುಟ್ಟಿಕೊಳ್ಳುತ್ತೆ. ಎಷ್ಟು ವಿಶ್ಲೇಷಿಸಿದರೂ ಸ್ಪಷ್ಟ ಕಾರಣ ಸಿಗದು. ಅವಳ ಎಣ್ಣೆ ಸುರಿಯೋ ಮುಖ ನೋಡಿ ಕುಡಿದ ಕಾಫೀ ಬಾಯಿಗೆ ಬಂತು. ಉಗುಳಲು ಬಚ್ಚಲಿಗೆ ಹೋದೆ.

ಬೀಗದ ಕೈ ಒಂದೆಡೆ ಇಟ್ಟು ಸುಮ್ಮನೇ ಕೂತೆ. ಅಷ್ಟೊಂದು ಕುತೂಹಲ ಕೆರಳಿಸಿರುವ ಸದ್ಗೃಹಸ್ಥೆಯ ಪಕ್ಕದಲ್ಲಿ ಈ ನರಪೇತಲವನ್ನು ನಿಲ್ಲಿಸಿ ನೋಡಿದೆ. ಹರಳೆಣ್ಣೆ ಕುಡಿದಂತೆ ಹೊಟ್ಟೆ ತೊಳೆಸಲು ಶುರುವಾಯಿತು ಕೈ ಹೊಟ್ಟೆಯ ಮೇಲಾಡಿತು. ಸ್ವಲ್ಪ ಹೊಟ್ಟೆಯಲ್ಲಿ ಸಂಕಟ ಮಲಕ್ಕೋತೀನಿ." ಕೋಣೆಗೆ ಹಿಂದಿನಿಂದಲೆ ಅಮ್ಮ ಬಂದಳು. ಒಬ್ಬನೆ ಕುಮಾರ ಕಂಠೀರವನ ಮೇಲೆ ಅಪಾರವಾದ ಕಾಳಜಿ. ಏನಾದರೂ ಹೆಚ್ಚು ಕಡಿಮೆಯಾದರೆ ಈ ವಂಶದ ಗತಿಯೇನು ?-ತಲೆ ಬುಡದಲ್ಲಿ ಕುಸಿದು ಅತ್ತಂತಾಯಿತು.

ಕೈ ಹೊಟ್ಟೆಯ ಮೇಲಾಡಿದಾಗ ನಸುನಕ್ಕೆ" ಇದು ನಿಜ್ವಾದ ಹೊಟ್ಟೆ ಸಂಕಟನಾ? ಇಲ್ಲಾ ತೋರಿಕೆಯದಾ?" ಅಮ್ಮ ಮುಖ ಗಂಟಿಕ್ಕಿ ಎದ್ದು ಹೋದರು. ಆಕೆಯ ಪ್ರಪಂಚ ತೀರಾ ಸಣ್ಣದು. ಪರಿಧಿ ಬಿಟ್ಟು ಯೋಚಿಸಲಾರಳು.

ಕಾಲುಂಗರಗಳ ಸದ್ದು ಕೇಳಿಸಿದಾಗ ಬಾಗಿಲ ಬಳಿಗೆ ನೆಗೆದಿದ್ದೆ. ಎದುರು ಮನೆಯಾಕೆಯ ಕೈಯಲ್ಲಿ ಬಟ್ಟಲಿತ್ತು. ಪೂಜೆ ಮಾಡಿಸಿ ಕೊಂಡು ಬಂದಿದ್ದರಿಂದ ಪ್ರಸಾದವಿತ್ತು. ಸೂಕ್ಷ್ಮವಾಗಿ ಆಕೆಯನ್ನ ಅವಲೋಕಿಸಿದೆ. ಕೆನ್ನೆಗೆ ತೊಡೆದ ಹರಿಶಿನ, ಹಣೆಯಲ್ಲಿ ವಿರಾಜಿಸುತ್ತಿದ್ದ ಅಗಲದ ದುಂಡು ಕುಂಕುಮದ ಬೊಟ್ಟಿನ ಕೆಳಗಿನ ಸಣ್ಣ ಕುಂಕುಮದ ಬೊಟ್ಟು–ಅಪ್ಪಟ ಹದಿನಾರಣೆ ಸದ್ಗೃಹಸ್ಥೆಯೆಂದು ಸಾರಿತು.

ಹೊರಗೆ ಬಂದ ಅಮ್ಮನ ಮುಖ ಮೊರದಗಲವಾಗಿದ್ದು ಕಂಡಿತು. "ಅವ್ರು ಹೋಗೋದ್ರಲ್ಲೇ ಬರ್ಬೆಕೂಂತ ಹೊರಟೆ ..." ಸಂಕೋಚದಿಂದ ಆ ಹೆಣ್ಣು ಬಾಯಿ ಬಿಟ್ಟಂತಿತ್ತು." ಆಯ್ತು ದಡು, ನಿನ್ನಂಥ ಹೆಣ್ಣನ್ನ ಪಡ್ಯೋಕೆ ಸಾವಿರ ಜನ್ಮದ ಪುಣ್ಯವಿರಬೇಕು. ಒಂದು ತೊಟ್ಟು ಕಾಫೀ ಕುಡ್ದು ಹೋಗಿವಂತೆ ಕೂತ್ಕೊ" ಅಮ್ಮ ಎರಡು ಬಾಯಲ್ಲಿ ಹೇಳಿದಾಗ ಗಹ ಗಹಿಸಿ ನಗಬೇಕೆನಿಸಿತು. ತಲೆ ಕೆರೆದುಕೊಂಡೆ. ಇಂಥಹ ಕುತೂಹಲ ಹುಟ್ಟಲು ಈ ಹೆಣ್ಣಿನಲ್ಲಿ ಏನು ಕಂಡೆ? ಈ ಪ್ರಶ್ನೆಗೆ ಉತ್ತರಿಸದೇ ಮಿದುಳು ಮೊಂಡು ಬಿತ್ತು. "ನಾನು ಕಾಫೀ ಕುಡ್ಯೋಲ್ಲ-ತಣ್ಣಗೆ ಒಂದ್ಲೋಟ ಮಜ್ಜಿಗೆ ಇದ್ರೆ ಕೊಡಿ" ಆ ಹೆಣ್ಣು ಕಂಠ ಮೃದುವಾಗಿ ಹೇಳಿದಾಗ ಸೊಟ್ಟಗೆ ಮುಖ ಮಾಡಿ ನಕ್ಕೆ. ನಾನು ಬಾಗಿಲು ಸರಿಸಿ ಹೊರಗೆ ಹೋದಾಗ ಸೆರ ಗನ್ನು ಎಳೆದು ಹೊದ್ದಳು. ತುಟಿ ಕಚ್ಚಿ ಹೊರಗೆ ಬಂದೆ.

"ಅಯ್ಯಯ್ಯೋ ಕಾಫೀ ಕುಡ್ಯೋಲ್ವಾ! ಈಗ ಮುದಿ ಹೆಂಗ್ಸರೆಲ್ಲ ಕುಡೀತಾರೆ. ಈ ಚಿಕ್ಕ ವಯಸ್ಸಿಗೆ ಎಂಥ ನಿಯಮ, ನಿಷ್ಟೆ-ನಿನ್ನಂಥ ಹೆಣ್ಣುಮಕ್ಕು ಇರೋದ್ರಿಂದ್ಲೇ ಮಳೆ ಬೆಳೆಗಳು ಆಗ್ತಾ ಇರೋದು!"

ಅಮ್ಮನ ಮಾತಿಗೆ ನನ್ನ ಬುದ್ಧಿ ಚುರುಕಾಯಿತು. ಬರಗಾಲದ ಪ್ರದೇಶವೆಂದು ಘೋಷಿಸಿ ಸರ್ಕಾರ ಕೆಲವು ಜಿಲ್ಲೆಗಳ ಕ್ಷಾಮ ಪರಿಹಾರಕ್ಕೆ ಹೆಣಗಾಡುತ್ತಿತ್ತು. ಈ ಹೆಣ್ಣನ್ನ ಅಂತಹ ಪ್ರದೇಶಗಳಿಗೆ ಯಾಕೆ ಕರೆ ದೊಯ್ಯಬಾರದು ನಮ್ಮ ವಿಜ್ಞಾನಿಗಳು ಇಂತಹ ವಿಷಯಗಳತ್ತ ಯಾಕೆ

ಗಮನ ಹರಿಸಬಾರದು ? ನನ್ನಲ್ಲಿ ಎದ್ದ ಈ ವಿಚಾರಧಾರೆ ಪರಿಹಾಸ್ಯಕ್ಕೆ ಡಿಕ್ಕಿ ಹೊಡೆದು ಡೂಗು ದೂರಾಯಿತು.

"ವಿಶು ಬೀಗದ ಕೈ ಎಲ್ಲಿಟ್ಟಿದ್ದೀಯಾ?" ಅಮ್ಮ ಕೂಗಿಕೊಂಡಾಗ ಹತ್ತಿರದಿಂದ ಆ ಹೆಣ್ಣನ್ನ ನೋಡಬೇಕೆಂದುಕೊಂಡು ಒಳಗೆ ಹೋದೆ ಸಾಕಷ್ಟು ಹೊತ್ತು ಸತಾಯಿಸಬೇಕೆನಿಸಿತು. ಅಂತಹ ಕೃತ್ರಿಮ ನಾಟಕದ ಅಗತ್ಯತೆ ಕಾಣಲಿಲ್ಲ. ಬೀಗದ ಕೈ ಹುಡುಕಿ ಅಮ್ಮ ಬೇಸತ್ತರು. ಅಮ್ಮ ತನ್ನ ವಯಸ್ಸನ್ನೇ ಮರೆತು ಕಣ್ಣಿನಲ್ಲಿಯೇ ಗದರಿದಳು.

ಎದ್ದು ನಿಂತ ಆ ಸದ್ಗೃಹಸ್ಥೆ ಒಮ್ಮೆ ಬುಟ್ಟಿಯಲ್ಲಿ ಹುಡುಕಾಡಿದಳು "ಇನ್ನೊಂದು ಬೀಗದ ಕೈ ಇದೆ. ಸಿಕ್ಕಾಗ ಕೊಡಿ" ಮೆಲ್ಲಗೆ ಹೇಳಿದಾಗ ವಿಷಯ ಸಾಮಾನ್ಯವಾಗಿದ್ದರೂ ಮಿದುಳಿನಲ್ಲಿ ಬೇಹುಗಾರಿಕೆ ಜಾಲ ಹುಟ್ಟಿಕೊಂಡಿತು. ಇನ್ನೊಂದು ಬೀಗದಕೈ ಒಯ್ದಿರೋದ ತಿಳಿದುಕೂಡ ಆ ಗಂಡು ಪ್ರಾಣಿ ಬೀಗದ ಕೈ ಕೊಟ್ಟಿದ್ದೇಕೆ ? ಬುಟ್ಟಿಯಲ್ಲಿ ಬೀಗದ ಕೈ ಇಟ್ಕೊಂಡು ಇಲ್ಲಿಗೆ ಬಂದಿದ್ದೇಕೈ ಆ ಗಂಡನೆನ್ನುವ ಪ್ರಾಣಿ ಹೊರಡೋಕೆ ಐದು ನಿಮಿಷ ಮೊದಲು ದೇವಸ್ಥಾನಕ್ಕೆ ಹೋದುದೇಕೆ ? ಅದಕ್ಕೆ ಮೊದಲು ಹೋಗಿ ಬರಬಹುದ್ದಿತಲ್ಲ! ಇಲ್ಲ ಆಮೇಲಾದರೂ ಹೋಗಬಹುದಿತ್ತು ! ಎಳೆ ಎಳೆಯನ್ನು ಮನಬಿಡಿಸದೊಡಗಿತು. ವಿವೇಕ ಎಚ್ಚೆತ್ತು ಶಬಾಷ್‌ಗಿರಿ ಕೊಟ್ಟಿತು "ನಿನ್ದೂ ಪತ್ತೇದಾರಿ ತಲೆ ಕಣೋ ! ಹ್ಯಾಮ್ಲೇಟ್, ರೋಮಿಯೋ ಜೂಲಿಯಟ್ ಆ ಹುಡುಗರ ತಲೆಗೆ ತುರುಕೋ ಬದಲು ಪತ್ತೇದಾರನಾಗು !" ಎದೆ ಸೆಟೆದು ನಿಂತೆ.

ಗರಿಗರಿಯಾಗಿ ಮಿಂಚುವ ಸೂಟು, ಕೈಯಲ್ಲಿ ಸಿಗಾರ್ ಪೆಟ್ಟಿಗೆ, ಬಾಯಲ್ಲಿ ಉರಿಯುವ ಸಿಗಾರ್, ಮಿಂಚುವ ಕಣ್ಣುಗಳು, ಚುರುಕು ನೋಟ ನೀಳಕಾಯದ ಆಕರ್ಷಕ ವ್ಯಕ್ತಿತ್ವದ ಎರಡು ಕೈಗಳನ್ನು ಹಿಂದಕ್ಕೆ ಕಟ್ಟಿಕೊಂಡು ಶಥಪಥ ಹಾಕುತ್ತಿರುವ ಸರ್, ಆರ್ಥರ್ ಕಾನನ್ ಡೈಲ್‌ನ ಪತ್ತೇದಾರಿ ಕಾದಂಬರಿಗಳ ನಾಯಕ ಶರ್ಲಾಕ್ಸ್ ಹೋಮ್ ತಲೆಯಲ್ಲಿ

ಮಿನುಗಿದ. ಸಣ್ಣನಗೆ ನಕ್ಕೆ, ಈಚೆಗೆ ನನ್ನ ಆಲೋಚನಾ ದಿಕ್ಕುಗಳೇ ಬದಲಾಯಿಸಿದೆ. ಸಣ್ಣಗೆ ಗೊಣಗಿಕೊಂಡೆ ಆ ಕ್ಷಣದಲ್ಲಿ.

ಅಮ್ಮನ ಹುಡುಗಾಟ, ಗೊಣಗಾಟ ನಿಂತಿರಲಿಲ್ಲ." ಪರ್ವಾಗಿಲ್ಲಿ ಸಿಕ್ಕುತ್ತೆ ಬಿಡಿ. ಇನ್ನ ಪೂರ್ತಿ ಅಡ್ಗೇ ಆಗಿಲ್ಲ. ಬೇಗ ಮಾಡಿದ್ರೆ ಅವ್ರು ಬರೋ ಹೊತ್ಗೆ ಆರಿ ಹೋಗುತ್ತೆ" ಸಣ್ಣಗೆ ಹೇಳಿದಾಗ, ಹಳೆಯ ಜಾಡಿನ ಒಂದು ವರ್ಗದ ಪ್ರತಿನಿಧಿಯಂತೆ ಕಂಡಳು. ನನ್ನ ಮುದಿನೆ ಮ್ಮೆಯನ್ನ ಹಿಡಿ ಮಾಡಿಕೊಂಡು ಹೋದಾಗ ಮುಡಿಯಲ್ಲಿದ್ದ ದುಂಡು ಮಲ್ಲಿಗೆಯ ಪರಿಮಳ ಗಾಳಿಯಲ್ಲಿ ತೇಲಿ ಬಂತು.

ಹೊರಗೆ ಬಂದು ನಿಂತ ಅಮ್ಮ ಸರಿದು ಹೋದವಳತ್ತಲೇ ನೋಡಿ ಉದ್ಗರಿಸಿದಳು" ಇಂಥ ಹೆಣ್ಣು ಈ ಮನೆಗೆ ಸೊಸೆಯಾಗಿ ಬಂದ್ರೆ ನೂರೆಂಟು ದೇವರಿಗೆ ಪೂಜೆ ಮಾಡಿಸ್ತೀನಿ" ಜೋರಾಗಿ ನಕ್ಕೆ. ಆಮೇಲೆ ಸಣ್ಣಗೆ ನುಡಿದೆ "ಅಂತೂ ನಿನ್ನ ಪ್ರಕಾರ ನೂರೆಂಟು ದೇವರು ಇರೋದು ಸುಳ್ಳಲ್ಲ!" ಇಂಥವಕ್ಕೆ ಉತ್ತರಿಸುವುದಿಲ್ಲ. ಸಿಟ್ಟು ಮಾಡಿಕೊಂಡು ಹೋಗುತ್ತಾಳೆ. ಇದು ನನಗೆ ಗೊತ್ತಿದ ಸಂಗತಿಯೆ. ಆದ್ದರಿಂದಲೇ ಉತ್ತರದ ನಿರೀಕ್ಷೆಯಲ್ಲಿ ಪ್ರಶ್ನೆಗಳನ್ನು ಹಾಕುವುದಿಲ್ಲ.

ರಾತ್ರಿ ಊಟ ಮುಗಿಸಿ ಹೊರಗೆ ಬಂದು ನಿಂತೆ. ಮೋಡಗಳು ಆವರಿಸಿಕೊಂಡಿದ್ದರಿಂದ ಆಕಾಶ ಮಂಕಾಗಿತ್ತು. ನೋಟ ಆಟೋವನ್ನು ಅನುಸರಿಸಿ ನಿಂತಿತು. ಬೀಗದ ಕೈಕೊಟ್ಟು ಹೋಗಿದ್ದ ಆ ವ್ಯಕ್ತಿ ಇಳಿದು ಬ್ಯಾಸ್ಕೆಟ್, ಕ್ಯಾರಿಯರನ್ನು ಇಳಿಸಿಕೊಂಡ. ಬಗ್ಗಿ ಆಟೋದವನ ಬಳಿ ಏನೋ ಗೊಣಗಿದ. ನನ್ನ ಮುಖ ಗುಂಟಾಯಿತು. ಬಾಯಲ್ಲಿದ್ದ ಕಹಿ ಎಂಜಲನ್ನು ಚರಂಡಿಗೆ ಉಗಿದೆ. ಇಂದೇ ಆ ಪುಣ್ಯಾತ್ಮನನ್ನ ಸರಿಯಾಗಿ ನೋಡುವ ಅವಕಾಶ ಸಿಕ್ಕಿದ್ದು,

ಹೊರಗೆ ಬಂದ ಅಮ್ಮ ಬೀಗದಕೈಯನ್ನು ನನ್ನ ಕೈಯಲ್ಲಿರಿಸಿದಳು,

"ಇದ್ನ ಕೊಟ್ಬಿಡು, ಎಲ್ಲೋ ಇಟ್ಬು ಮತ್ತೆ ಹುಡುಕೋದು ಬೇಡ, ಆತ ಬಂದಿದ್ದಾನೆ "ಒತ್ತಿ ಹೇಳಿದರು. ಪ್ರಥಮ ಭಾರಿಗೆ ಆ ಮನೆಗೆ ಹೋಗುವ ಅವಕಾಶ ಒದಗಿ ಬಂದಿತ್ತು. ಖುಷಿಯಿಂದಲ್ಲದಿದ್ದರೂ ಮುಜು ಗರದಿಂದ ಹೆಜ್ಜೆ ಹಾಕಲಿಲ್ಲ.

ಬಾಗಿಲಿನಲ್ಲಿ ಹೋಗಿ ನಿಂತವನಿಗೆ ಅರೆತೆರೆದ ಕಿಟಕಿಯಲ್ಲಿ ಕಂಡಿದ್ದು ಸ್ಟೀಲ್‌ನ ದೊಡ್ಡ ಕ್ಯಾರಿಯರ್ ಹಣ್ಣು ತುಂಬಿದ ಬ್ಯಾಸ್ಕೆಟ್‌ನ ಮೇಲೆ ದುಂಡು ಮಲ್ಲಿಗೆಯ ದಂಡೆಗಳು. ಕದ್ದು ನೋಡುವ ತಪ್ಪನ್ನು ನನ್ನ ಸಂಸ್ಕಾರ ಖಂಡಿಸಿತು. ಬೆರಳಿನಿಂದ ಬಾಗಿಲನ್ನ ತಟ್ಟಿದೆ. ಬಾಗಿಲು ತೆರೆದ ಆ ಮಹಾಶಯನ ಕಣ್ಣುಗಳಲ್ಲಿ ವಿವಿಧ ಭಾವಗಳು ಸರಸರನೆ ಓಡಿ ಯಾಡಿದವು. ಆ ಮೇಲೆ ಪಾಚಿಗಟ್ಟಿದ ಹಲ್ಲುಗಳನ್ನು ಬಿಟ್ಟ, ಕಪಾಳಕ್ಕೆ ಹೊಡೆಯಬೇಕೆನಿಸಿತು. ಬೀಗದ ಕೈ ಕೆಳಗೆಸೆದು ದುರ್ದಾನ ತೆಗೆದುಕೊಂಡ ವನಂತೆ ದಾಪುಗಾಲು ಹಾಕುತ್ತ ಮನೆಗೆ ನಡೆದೆ.

ಹಾಸಿಗೆ ಸೇರಿದೆ. ಅಪ್ಪ, ಅಮ್ಮನ ಮಾತುಗಳಿಗೆ ಕಿವಿ ತೆರೆದಿಟ್ಟೆ.

"ಎದ್ರೂ ಮನೆ ಕಮಲನ ನೋಡಿದ್ರೆ ಕೈಯೆತ್ತಿ ಮುಗಿಬೇಕೂನ್ಸುತ್ತೆ, ಎಂಥ ಅಚ್ಚುಕಟ್ಟು. ಕಟ್ಟಿಕೊಂಡ ಗಂಡನ ಬಗ್ಗೆ ಒಂದು ದಿನವಾದ್ರೂ ಎರಡು ಮಾತಿಲ್ಲ. "ಹೊಗಳಿದ್ದೆ ಹೊಗಳಿದ್ದು, ಅಪ್ಪ ಹ್ಞೂಗುಟ್ಟುತ್ತ ಊಟ ಮಾಡುತ್ತಿದ್ದರು. ಅಮ್ಮನ ಮಾತುಗಳನ್ನು ಕೇಳಿ ಕೇಳಿ ಅವರಿಗೆ ಅಭ್ಯಾಸವಾಗಿರಬಹುದು. ಕಿವಿಯನ್ನು ಹೆಂಡತಿಯ ವಶಕ್ಕೆ ಕೊಟ್ಟು ತುಟಿ ಬಿಗಿದುಕೊಡುತ್ತಿದ್ದರು ತೀರಾ ಬೇಸತ್ತಾಗ ಒಂದೆರಡು ಹಿತ ವಚನಗಳನ್ನು ಹೇಳುತ್ತಿದ್ದರು. "ಇಂಥ ಹೆಣ್ಣು ನಮ್ಮನೆಗೆ ಸೊಸೆಯಾಗಿ ಬಂದ್ರೆ ಎಷ್ಟು ಚೆನ್ನಾಗಿರುತ್ತೆ "ಈಗ ಅಪ್ಪನ ತಾಳ್ಮೆ ತಪ್ಪಿರಬೇಕು. ಸ್ವಲ್ಪ ಕಟುವಾಗಿಯೆ ಹೇಳಿದರು "ನಿಂಗ್ಯಾಕೆ ಬುದ್ದಿಯಿಲ್ಲ! ನೀನು ಕೂಡ ಇಷ್ಟು ವರ್ಷ ಅಚ್ಚುಕಟ್ಟಾಗಿಯೇ ಸಂಸಾರ ಮಾಡಿದ್ಯಲ್ಲ! ಇರೋ ಒಬ್ಬ ಮಗನಿಗೆ ವಿದ್ಯಾಭ್ಯಾಸ ಕೊಡ್ಸಿ ನಾಲ್ಕು ಕಾಸು ಕೂಡಿಸೋಕೆ ನಮ್ಕೈಯಲ್ಲಾಗಲಿಲ್ಲ.

ಸದಾ ಪುರಾಣ ಪುಣ್ಯಕತೆ ಓದೋದರ ಜೊತೆ ಹೊರಗಿನ ಪ್ರಪಂಚದ ಕಡೆಗೂ ಗಮನವಹಿಸು."

ನನಗೆ ಬುದ್ಧಿ ಬಂದಾಗಿನಿಂದ ಅಮ್ಮನಲ್ಲಿ ಸ್ವಲ್ಪ ಕೂಡ ಬದಲಾವಣೆ ಕಂಡಿಲ್ಲ, ವಿವೇಚನಾಶಕ್ತಿ ಬೆಳೆಸಿಕೊಳ್ಳದೆಯೇ ಮೂಢವಾಗಿ ಎಲ್ಲವನ್ನು ನಂಬಿ ಬಿಡುತ್ತಿದ್ದಳು. ಎಷ್ಟೋ ಸಲ ಮುಜುಗರವಾದದ್ದುಂಟು,

ಇಡೀ ರಾತ್ರಿ ನನ್ನ ಕನಸ್ಸಿನಲ್ಲಿ ಕ್ಯಾರಿಯರ್, ಹಣ್ಣಿನ ಬುಟ್ಟಿಯ ಮೇಲಿದ್ದ ಮಲ್ಲಿಗೆಯ ದಂಡೆಗಳು ಉರುಳಾಡಿದವು. ಬೆಳಿಗ್ಗೆ ಬೇಸರ ದಿಂದಲೇ ಎದ್ದು ಕೂತೆ. ನನಗೇಕೆ ಬೇರೆಯವರ ವಿಷಯದಲ್ಲಿ ಆಸಕ್ತಿ? ಕೊಡವಿ ಕೊಂಡು ಮೇಲಕ್ಕೆದ್ದೆ. ಮೈ ಸ್ವಲ್ಪ ಹಗುರವೆನಿಸಿತು. ಸ್ನಾನ ಮಾಡುವ ಮುನ್ನ ಹತ್ತು ನಿಮಿಷ ಕಾಂಪೌಂಡಿನಲ್ಲಿ ಅಡ್ಡಾಡಿ ಬರುವುದು ನನ್ನ ದಿನನಿತ್ಯದ ಅಭ್ಯಾಸ. ಎದುರು ಮನೆಯತ್ತ ನೋಡಬಾರದೆಂಬ ನಿರ್ಧಾರ ಹೊತ್ತು ಹೋದೆ. ಕೈ ಅಡ್ಡ ಹಿಡಿದರೂ ನೋಟ ಡಿಕ್ಕಿ ಹೊಡೆದು ಅತ್ತ ಧಾವಿಸಿ ದಾಗ ಗಡಬಡಿಸಿ ನಿಂತೆ. ನೋಟದ ಮೇಲಿನ ಹಿಡಿತವನ್ನು ಸ್ವಲ್ಪ ಸ್ವಲ್ಪ ವಾಗಿ ಕಳೆದುಕೊಳ್ಳುತ್ತಿರುವ ಅನುಭವವಾಯಿತು, ಇದು ಆತಂಕಕಾರಿ ಯೆನಿಸಿತು.

ಎದುರುಮನೆಯಾಕೆ ಹೊರಗೆ ಬಂದಳು. ಕೈಯಲ್ಲಿ ತಟ್ಟೆಯಿತ್ತು ತಟ್ಟೆಯ ಬೆಳ್ಳಿಯ ಬಟ್ಟಲುಗಳು ಕಣ್ಣುಗಳನ್ನು ಕುಕ್ಕಿದವು. ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ಮೆಲ್ಲಗೆ ಇತ್ತ ನಡೆದು ಬಂದಳು, ಮಡಿ ಮಾಡಿ ಉಟ್ಟ ರೇಶಿಮೆಯ ಸೀರೆ ಸುಕ್ಕ ಸುಕ್ಕಾಗಿತ್ತು. ಶಬ್ದವಾಗದಂತೆ ಗೇಟು ತೆಗೆದು ನನ್ನನ್ನು ನೋಡಿದರೂ ನೋಡದಂತೆ ಹಾದು ಹೋದಳು, ಕೋಸಂಬರಿಗೆ ಬಿದ್ದ ಇಂಗಿನ ಪರಿಮಳ ತೇಲಿ ಬಂತು. ನನ್ನ ವಿವೇಕನೂ ತಬ್ಬಿಬ್ಬಾಯಿತು. ಕುತೂಹಲ, ಆಸಕ್ತಿ ಕರಗಿ ಅದರ ಸ್ಥಾನವನ್ನು ಗೌರವ ಆಕ್ರಮಿಸಿದಂತೆ ಕಂಡಿತು. ಆದರೂ ಒಂದಾದರೊಮ್ಮೆ ತಪ್ಪಿಸಿಕೊಂಡು ಓಡಾಡುವ ಕಣ್ಣಿನ ಆಳಕ್ಕೆ ಇಣುಕಿ ನೋಡಬೇಕೆನಿಸಿತು.

ನಾನು ಸ್ನಾನ ಮುಗಿಸಿ ಬಂದಾಗ ಅಪ್ಪ ಕೋಸಂಬರಿ ಬಾಯಾಡಿಸುತ್ತಿದ್ದರು. ತುಂಬ ರುಚಿಯಾಗಿರಬೇಕೆನಿಸಿತು ಅವರು ತಿನ್ನುವ ರೀತಿ ನೋಡಿ. ನನ್ನಲ್ಲಿ ಭಾವನೆಗಳು ಕಲಸು ಮೇಲೋಗರವಾಗಿತ್ತು.

ಕಾಲೇಜಿಗೆ ಹೊರಟಾಗ ಆ ಕೆಟ್ಟ ಮುಖದ ಆಸಾಮಿ ಎದುರಾದ. ಆ ಅಸಹ್ಯ ನಗೆ ನೋಡಲಾರದೆ ಮುಖವನ್ನು ಪಕ್ಕಕ್ಕೆ ತಿರುಗಿಸಿಕೊಂಡೆ.

ಇಡೀ ದಿನ ಕಾಲೇಜು ಬೋರೆನಿಸಿತು. ಹುಚ್ಚುಚ್ಚು ವಿಚಾರಗಳು. ಸಲ್ಲದ ಆಲೋಚನೆಗಳು. ಕೆಟ್ಟ ಕುತೂಹಲ, ಅರ್ಥವಿಲ್ಲದ ಆಸಕ್ತಿ-ತಾನಾಗಿ ಮೇಲೆ ಎಳೆದುಕೊಳ್ಳುವ ಬಂಡೆಯೆನಿಸಿತು. ಪಶ್ಚಾತ್ತಾಪವೂ ಆಯಿತು. ಸಂಜೆ ನೇರವಾಗಿ ಮನೆಯ ಹಾದಿ ಹಿಡಿಯದೇ ಗೆಳೆಯ ರವೀಂದ್ರನ ಕೋಣೆಯತ್ತ ನಡೆದೆ. ನಮ್ಮಲ್ಲಿ ಆತ್ಮೀಯತೆ ಇದ್ದರೂ ಮನಸ್ಸಲ್ಲಿದ್ದುದ್ದನ್ನು ಒದರಲಾರದಷ್ಟು ಸಂಕೋಚ ಮನೆಮಾಡಿತ್ತು.

ಮೊದಲು ಬೆನ್ನ ಮೇಲೆ ಗುದ್ದಿಯೆ ಅವನು ಮಾತನಾಡಿಸಿದ್ದು.

"ಅಂತೂ ನಿನ್ನ ವಿದ್ಯಾರ್ಥಿಗಳ ನಡುವೆ ನನ್ನ ಜ್ಞಾಪಕ ಬಂತಲ್ಲ!" ಪೆಚ್ಚಾಗಿ ನಕ್ಕಾಗ ಅವನು ಹುಬ್ಬೇರಿಸಿದ. ಆದರೂ ತೀರಾ ಗಂಭೀರತೆ ಕಳೆದುಕೊಳ್ಳದ ಮಾತುಗಳಲ್ಲಿ ತಮಾಷೆ ಮಾಡಲಾರ. ಒಂದು ಗಂಟೆಗೆ ಮೀರಿ ಹರಟಿದ್ದೀವಿ. ಕೆಲವು ಪುಸ್ತಕಗಳ ಬಗ್ಗೆ ಗಹನವಾಗಿ ಚರ್ಚೆ ಮಾಡಿದ್ದೆವು. ಆಮೇಲೆ ಅವನೆದ್ದ "ಈ ಮಾತುಗಳಲ್ಲಿ ನಾಲಿಗೆ ಒಣಗಿ ಹೋಯಿತು, "ಕಾಫೀನಾದ್ರೂ ಕುಡ್ಕೊಂಣ." ಎಂದು ಎಬ್ಬಿಸಿಕೊಂಡು ಹೊರಟ ಸುಮ್ಮನೆ ಅವನ ಜೊತೆ ನಡೆದೆ. ಅಲ್ಲಲ್ಲಿ ಸುತ್ತಾಡಿ ಮತ್ತೊಮ್ಮೆ ಕಾಫೀ ಕುಡಿದು ಹೋಟಲಿನಿಂದ ಹೊರಗೆ ಬಂದು ವಾಚ್ ಕಡೆ ನೋಡಿದೆ ಒಂಬತ್ತು ತೋರಿಸುತ್ತಿತ್ತು.

ನಮ್ಮ ಮುಂದೆಯೆ ಹಾದು ಹೋದ ಕಾರು ಅಷ್ಟು ವೇಗದಲ್ಲಿ

ನಿಂತಿತು. ಮಲ್ಲಿಗೆ ದಂಡೆ ಮುಡಿದ ಚಲುವೆ ಇಳಿದಳು. ನನ್ನ ಕಣ್ಣಿ ಮೆಗಳು ನಿಶ್ಚಲವಾಗಿ ನಿಂತವು. ಅವಳ ಗಂಡನೆನಿಸಿಕೊಂಡ ಆಸಾಮಿ ಇಳಿದಾಗ ಅಚ್ಚರಿಗೊಂಡೆ, ಅದನ್ನು ಗುರ್ತಿಸಿದಂತೆ ರವಿ ನುಡಿದ.

"ಇಂಥ ಹೆಣ್ಣುಗಳ ರೇಟ್ ಜಾಸ್ತಿ, ಚೆಲ್ಲು ಚೆಲ್ಲಾದ ಹೆಣ್ಣುಗಳಲ್ಲಿ ಆಕರ್ಷಣೆ ಕಳೆದುಕೊಂಡ ಕೆಲವು ಜನ ಇಂಥಹ ಗರತಿಗಳನ್ನ ಬಯ ಸ್ತಾರೆ.

ಏಕದು ನನ್ನಲ್ಲಿನ ಕುತೂಹಲ, ಆಸಕ್ತಿಗಳು ಒಣಗಲಾರಂಭಿಸಿದವು. ನಿಧಾನವಾಗಿ ಹೇಳಿದೆ" ನೀನೂ ಯಾರನ್ನ ನೋಡಿ ಹೇಳ್ತೀಯಾ? ಆಕೆ, ಅವ್ಳ ಗಂಡ ನಮ್ಮನೆ ಎದುರಿನಲ್ಲಿಯೆ ವಾಸಿಸ್ತಾರೆ. ಎಂಥ ಗುಣ! ಒಬ್ಬ ಸದ್ಗೃಹಸ್ಥೆಯ ಬಗ್ಗೆ ಹೀಗೆಲ್ಲ ಮಾತಾಡ್ತಿರ್ದ್ದ!" ಅವನ ಗಟ್ಟಿ ನಗು ನನ್ನ ಕಿವಿಗೆ ಅಪ್ಪಳಿಸಿದಂತಾಯಿತು." ಖಂಡಿತ ಸುಳ್ಳಲ್ಲ ಬೇಕಾದ್ರೆ ಆ ಬಕ ರಾನ ಕೇಳೋಣ, ಸದ್ಗೃಹಸ್ಥೆಯಂತೆ...ಆ ಮಲ್ಲಿಗೆಯ ದಂಡೆ, ಕೋಸಂಬರಿ ತಟ್ಟೆ, ಪ್ರಸಾದದ ಬುಟ್ಟಿ ನನ್ನೆದುರಿನಲ್ಲಿ ಬಿದ್ದು ಹೊರಳಾಡಿದಂತಾಯಿತು.

ಅದು ನಡೆದು ಇಂದಿಗೆ ಎರಡು ತಿಂಗಳಾಗಿರಬಹುದು, ಅಪ್ಪಿ ತಪ್ಪಿಯೂ ಆ ಸದ್ಗೃಹಸ್ಥೆಯ ಮನೆಯ ಕಡೆ ನೋಟಹರಿಸಿಲ್ಲ. ಆಸಕ್ತಿ, ಕುತೂಹಲ ಕರಗಿ ನಿರ್ಲಿಪ್ತತೆ ಆವರಿಸಿದೆ. ಅಮ್ಮನಿಗೂ ಅವಳನ್ನು ಹೊಗಳಿ ಹೊಗಳಿ ಬೇಸರ ಬಂದಿರಬಹುದು. ಈ ನಡುವೆ ಅವಳ ಮಾತನ್ನೇ ಎತ್ತುವುದನ್ನು ಬಿಟ್ಟಿದ್ದಾರೆ, ಯಾರಿಂದಲೋ ಮನೆ ಕಟ್ಟುವ ಸುದ್ದಿ ತಿಳಿ ದಾಗ ಮುಖವನ್ನು ಬೇರಡೆ ತಿರುಗಿಸಿದೆ. ಸಮಾಜವನ್ನು ವಂಚಿಸುವ ಕಲೆಗಳಲ್ಲಿ ಇದೊಂದು—ಎಂದು ಮಾತ್ರ ತಿಳಿದೆ.



# ಹೀಗೂ ಒಮ್ಮೊಮ್ಮೆ

—ಆಶಾಲತಾ ಯಾದವಾಡ

ಬಸ್ಸು ವೇಗವಾಗಿ ಓಡುತ್ತಿತ್ತು ಓಡುತ್ತಿತ್ತು. ಎನ್ನುವುದಕ್ಕಿಂತ ಹಾರುತ್ತ ಓಡುತ್ತಿತ್ತು ಎನ್ನುವದು ಬಹು ಸೂಕ್ತವಾದುದು. ಬಸ್ಸಿನಲ್ಲೆಲ್ಲ ಗುಸು ಗುಸು ಪ್ರಾರಂಭವಾಯಿತು. ಜೀವದಾಸೆಯಲ್ಲಿ ಒಬ್ಬರು ಇನ್ನೊಬ್ಬರ ಮುಖ, ಅಸಹಾಯಕತೆಯಲ್ಲಿ ನೋಡಹತ್ತಿದರು. ತಮ್ಮ ತಮ್ಮ ಮಕ್ಕಳನ್ನು ಗಟ್ಟಿಯಲ್ಲಿ ಹಿಡಿದು ಕುಳಿತರು.

ಹಿಂದಿನ ಸೀಟಿನಲ್ಲಿ ಕುಳಿತಿದ್ದ ಓರ್ವರು ಎದ್ದು ನಿಂತು ಗಟ್ಟಿಯಲ್ಲಿ ಹೇಳಿದರು-ಡ್ರಾಯವ್ಹರ ಸಾಹೇಬರೇ, ಸ್ವಲ್ಪ ಮೆಲ್ಲಗೆ ಗಾಡಿ ಬಿಡಿರಪ್ಪ ನಮ್ಮನ್ನೆಲ್ಲ ಏನು ಸೀದಾ ಸ್ವರ್ಗಕ್ಕೇ ಕಳಿಸುವ ಆಲೋಚನೆ ಏನು, ಎಂದಾಗ ಇನ್ನೊಬ್ಬರು ಎನ್ಶೂರ್ ಮಾಡಿಸಿದಿರೋ ಇಲ್ಲೋ ಎಂದು ನಗೆಯಾಡಿದರು. ಇವರ ಮಾತು ಕೇಳಿಸಿಕೊಂಡ ಡ್ರಾಯವ್ಹರ್ ಸಾಹೇಬರು ಹಿಂದೆ ತಿರುಗಿ ನೋಡಿ. ತಮಾಷೆಯ ನಗುಸೂಸಿ, ವೇಗದ ಮಿತಿಯನ್ನು ಕಡಿಮೆ ಮಾಡಿದರು. ಎರಡನೇ ಸೀಟಿನಲ್ಲಿದ್ದ ಒಬ್ಬಳು ಹಿಂದಿನ ಸೀಟಿನಲ್ಲಿ ಆಸೀನರಾಗಿದ್ದ ರಾಮರಾಯರನ್ನು ನೋಡಿದವಳೇ ಮುಗುಳು ನಗೆ ಚೆಲ್ಲಿದಳು.

ಅವಳು ತುಂಬು ಯವ್ವನೆ. ಹಳ್ಳಿಯವಳಂತೆ ತೋರಿದರೂ ಮುಖದಲ್ಲಿ ಕಳೆ ಇದೆ. ತಿದ್ದಿ ತೀಡಿದ ನೀಳ ಕೇಶರಾಶಿ ಅವಳ ರೂಪವನ್ನು ಇನ್ನೂ ಹೆಚ್ಚಿಸಿದೆ. ಅವಳುಟ್ಟ ತಿಳಿ ಗುಲಾಬಿ ಬಣ್ಣದ ಸೀರೆ-ರವಿಕೆ ಚೆನ್ನಾಗಿ ಒಪ್ಪಿದೆ. ಮುಡಿದ ಮಲ್ಲಿಗೆ ಹೂ ಪರಿಮಳ ಗಾಳಿಗೆ ಬಸ್ಸಿನ ಎಲ್ಲೆಡೆಗೂ

ಮಂದಸ್ಮಿತವಾಗಿ ಹರಡಿದೆ. ಅವಳ ಆ ಕಪ್ಪು ಕಣ್ಣುಗಳು ಏನನ್ನೋ ಅರಸುವಂತೆ ಚಂಚಲವಾಗಿದ್ದವು.

ರಾಯರಿಗೆ ಅವಳನ್ನು ಎಲ್ಲೋ ನೋಡಿದ ನೆನಪು ಸುಳಿದು ಗೊಂದಲಕ್ಕೀಡಾದರು. ಹಾಗೆಂದು ಅವಳನ್ನೇ ಹೆಚ್ಚು ಹೊತ್ತು ದೃಷ್ಟಿಸುವಂತಿರಲಿಲ್ಲ. ಪಕ್ಕದಲ್ಲಿ ಕುಳಿತ ಪತ್ನಿ ಸೀತಾ ನೋಡಿದರೆ ಏನು ತಿಳಿದುಕೊಳ್ಳಲಿಕ್ಕಿಲ್ಲ, ಪಕ್ಕಕ್ಕೆ ನೋಡಿದರು ಹೆಂಡತಿ ಬಸ್ಸಿನ ಕಿಟಕಿಯಿಂದ ಹೊರನೋಡುತ್ತಿದ್ದಳು. ತೊಡೆಯ ಮೇಲೆ ಮಗು ಕೂತಿದೆ. ರಾಯರಿಗೆ ಥಕ್ಕನೆ ನೆನಪಾಯಿತು-ಮಾಲೂರು ಶಾಲೆಯ ಇನ್‌ಸ್ಪೆಕ್ಷನ್. ಸರಿ, ಒಂದೊಂದಾಗಿ ವಿಚಾರಮಯ ನೆನಪಿನ ಸುರುಳಿ ಬಿಚ್ಚಿಕೊಳ್ಳುವ ಮುನ್ನವೇ ಬಸ್ಸು ಬಂದು ಸ್ಟಾಪಿಗೆ ನಿಂತಾಗ ಅವಳು ಇಳಿದು ಹೊರಡಲು ಮೇಲೆದ್ದಳು. ರಾಯರ ಪಕ್ಕಕ್ಕೇ ಸರಿದು ಹೋಗುವಾಗ ಅವರ ಭುಜಕ್ಕೆ ಪ್ರೈತಾಗಿಸಿ ಸೀರೆ ಸೆರಗನ್ನು ಅವರ ಮುಖಕ್ಕೆ ತಾಗಿದಹಾಗೆ ಮಾಡಿ ಹೊದ್ದ ಸೆರಗನ್ನು ಸರಿಪಡಿಸುತ್ತ ಮತ್ತೊಮ್ಮೆ ನಗುಸೂಸಿ ನೋಡಿಯೂ ನೋಡದವಳಂತೆ ನಟಿಸಿ ಕೆಳಗಿಳಿದು ಹೋದಳು.

ರಾಮರಾಯರಿಗೆ ನವಿರೆದ್ದ ಹಾಗೆ ಆಗಿ ಬೆವರು ಕಾಣಿಸಿಕೊಂಡಿತು. ಥೂ...ಏನು ಸೆಕೆ ಇದು ಎಂದು ಕರ್ಚೀಫ್‌ನಿಂದ ಮುಖ ಒರೆಸಿಕೊಂಡರು. ಕಣ್ಮುಂದೆ, ಮನದಲ್ಲಿ ಮೂಡಿದ ನೆನಪಿನ ಕಾಣಿಕೆಗಳು ಒಂದೊಂದಾಗಿ ಹರಡಿಕೊಂಡವು.

೦ ೦ ೦ ೦

ರಾಮರಾಯರಿಗೆ ಹೊಸೂರು ತಾಲ್ಲೂಕಿಗೆ ವರ್ಗವಾಗಿ ಬಂದಿದ್ದರಷ್ಟೇ ತಾಲ್ಲೂಕಿಗೆ ಸೇರಿದ ಹಳ್ಳಿಗಳ ಪರಿಚಯವಾಗಬೇಕು. ಶಾಲೆಗಳ ಗೊತ್ತು ಗುರಿ ತಿಳಿಯಬೇಕು. ಅಷ್ಟರಲ್ಲೇ ಮೇಲಿನವರಿಂದ ಗರಮ್ ಆದ ಕಾಗದ ಬಂದಾಗಿತ್ತು. ಶಾಲೆಗಳಿಗೆ ಭೇಟಿ ಕೊಟ್ಟು ರಿಪೋರ್ಟ ಮಾಡಿಕೊಳ್ಳ ಬೇಕಾದ್ದು ರಾಯರು ತಮ್ಮಷ್ಟಕ್ಕೆ ತಾವೇ ಗೊಣಗಿಕೊಂಡರು. ಈ

ತಾಲೂಕಿಗೆ ನಾನು ಹೊಸಬ. ಯಾವ ಯಾವ ಶಾಲೆಗಳ ಸ್ಥಿತಿ ಹೇಗೆ? ಶಿಕ್ಷಕರು, ಊರಿನವರು, ಪಂಚಾಯತಿಯವರು ಎಂದು ಎಲ್ಲರನ್ನೂ ತಿಳಿಯುವದು ಬೇಡವೇ? ಹೋಗಲಿ ಈ ಹಾಳು ಹಳ್ಳಿಗಳನ್ನೆಲ್ಲ ಅಲೆಯ ಬೇಕಾದರೆ ಊರಿನ ಹಾದಿಯನ್ನಾದರೂ ತಿಳಿದುಕೊಳ್ಳುವದು ಬೇಡವೇ? ಈ ಅಧಿಕಾರಿಗಳಿಗೆಲ್ಲ ಏನು ಅವಸರ ಅಂದರೆ ಅವಸರ, ಅವರಿಗೇನು ತಿಳಿಯುತ್ತದೆ ಈ ನಮ್ಮ ಕಷ್ಟ. ನಮಗೆ ನಮ್ಮ ಕೆಲಸದ ಅರಿವು ಇಲ್ಲವೇ? ಇವರಿಗೆ ಇಷ್ಟೂ ತಿಳಿಯಬೇಡವೇ? ಹೆದರಿಸಿ ಕೆಲಸ ತೆಗೆದುಕೊಳ್ಳುವದ ಕ್ಕಿಂತಲೂ ಪ್ರೀತಿಯಿಂದ ಎರಡು ಮಾತನಾಡಿ ಕೆಲಸ ಮಾಡಿಸಿದರೆ ಅವರಿಗೂ ಹಿತ. ನಮಗೂ ಹಿತ...ರಾಯರು ಏನೇನೋ ಗೊಣಗಿಕೊಂಡರು. ಆದರೇನು ಬಡವನ ಸಿಟ್ಟು ದವಡೆಗೆ ಮೂಲ ಅಲ್ಲವೇ?

ಅಂತು ರಾಯರು ಬೇಗ ಎದ್ದು ಪ್ರಾತಃರ್ವಿಧಿಗಳನ್ನೆಲ್ಲ ಮುಗಿಸಿ ಮತ್ತೂರಿನ ಬಸ್ಸು ಹಿಡಿದು ಬಂದರು. ಮತ್ತೂರಿಗೆ ಬಂದಾಗಲೇ ಹನ್ನೊಂದು ಘಂಟೆ ಆಗಿಹೋಗಿತ್ತು. ಬಸ್ಸು ಇವರನ್ನು ಇಳಿಸಿದ್ದೇ ಧೂಳಿ ಬ್ಬಿಸಿ ಹೊರಟುಹೋಯಿತು. ರಾಯರು ಮೂಗಿಗೆ ಅಡ್ಡಲಾಗಿ ಕರಚೀಫ್ ಹಿಡಿದು ಆಚೆ ಈಚೆಗೆ ನೋಡಿದರು. ದನಕಾಯುವ ಹುಡುಗನೊಬ್ಬ ಬರುತ್ತಿದ್ದ. ಪ್ಯಾಂಟು ಹಾಕಿದ ಇವರನ್ನೇ ನೋಡುತ್ತ-ನಮ್ಮ ರಾಜ ಕುಮಾರ್ನಾಂಗ ಕಾಣ್ತೀರಲ್ಲಣ್ಣ, ಯಾರು ನೀವು?—ಎಂದಾಗ ರಾಯರು ತಮ್ಮ ಚೆಲುವಿಕೆಗೆ ತಾವೇ ಮಾರುಹೋಗಿ, ತಮ್ಮ ಬಿಳಿ ಕಾಲನ್ನು ಸರಿ ಮಾಡುತ್ತ ನಕ್ಕು,-ಅದಿರಲಿ ಇಲ್ಲಿ ಮಾಲೂರಿಗೆ ಹೋಗುವ ರಸ್ತೆ ಯಾವು ದಪ್ಪ ಎಂದು ಕೇಳಿದರು.

ದನಗಾಹಿ ಹೆಗಲ ಮೇಲೆ ಅಡ್ಡಲಾಗಿಟ್ಟ ಕೋಲನ್ನು ತೆಗೆದು ಹೀಗೇ ಇದೇ ರಸ್ತೆಯಲ್ಲಿ ಸ್ವಲ್ಪ ನಡೆದು ಎಡಕ್ಕೆ ತಿರುಗಿದರೆ ನಮ್ಮ ಊರಿನ ಗೌಡರ ಹೊಲಾ ಬರ್ತೈತೆ. ಹಾಂಗ ಮುಂದಕ್ಕೆ ಸಾಗಿ ಬಲಕ್ಕೆ ತಿರುಗಿ ನಾಲ್ಕು ಮೈಲಿ ನಡೆದ್ರ ಮಾಲೂರೇ ಸಿಕ್ಕೊದು. ಊರಾಗ ಹೊಕ್ಕೊ ಮೊದಲ ಊರಿನ ದುರ್ಗಿ ಗುಡಿ ಕಳಸಾ ಕಾಣ್ತೈತೆ, ಅಂದಹಾಂಗ ತಾವು ಅಲ್ಲಿ ಯಾರ ಮನೀಗಿ ಹೊರಟೀರಿ ಸಾವುಕಾರ—ಎಂದು ಮರುಪ್ರಶ್ನಿಸಿದ,

ಯಾರ ಮನೆಗೂ ಅಲ್ಲಪ್ಪಾ. ಅಲ್ಲಿಯ ಶಾಲೆಗೆ ಹೋಗಬೇಕಿತ್ತು... ಅನ್ನುವಷ್ಟರಲ್ಲೇ ಆ ಹುಡುಗ-ಓ. ಹೋ ತಿಳೀತು. ತಿಳೀತು ನೀವು ಸಾಹೇಬರು...ಎಂದು ಅರಳಿದ ಕಣ್ಣುಗಳಿಂದ ನೋಡುತ್ತಿದ್ದಂತೆ ರಾಯರು ತಿರುಗಿ ಮುಂದೆ ನಡೆದರು.

ರಸ್ತೆಯ ತಗ್ಗು ದಿನ್ನೆಗಳನ್ನು ತುಳಿಯುತ್ತ ಧೂಳಿನಲ್ಲಿ ನಡೆದರು. ಛೇ...ನಾನೊಬ್ಬನೇ ಬರಬಾರದಾಗಿತ್ತು. ಯಾರನ್ನಾದರೂ ಕರೆದು ತಂದಿದ್ದರೆ ಚೆನ್ನಾಗಿರುತ್ತಿತ್ತು ಎನ್ನಿಸಿತು. ಆದರೇನು ಮಾಡುವುದು ಬಂದಾಗಿತ್ತು ನಡದೇ ತೀರಬೇಕು. ನೇಸರ ನೆತ್ತಿಗೇರಿದ್ದ ಸುಡು ಬಿಸಿಲಿನಿಂದ ನಾಲಿಗೆ ಒಣಗುತ್ತಿತ್ತು, ಹೊಟ್ಟೆಹಸಿವೆಗೆ ತಾಳಹಾಕುತ್ತಿತ್ತು ಸುತ್ತಲೂ ಕಣ್ಣಾಡಿಸಿದರು. ನೀರಿಲ್ಲ. ನೆರಳಿಲ್ಲ, ಥಕ್ಕನೇ ಅಧಿಕಾರಿಗಳ ದರ್ಪದ ಮಾತು ನೆನಪಿಗೆ ಬಂದಿತು- "ಕೆಲಸ ಸರಿಯಾಗಿ ಮಾಡೂದಿಲ್ಲ. ನಿಮ್ಮನೆಲ್ಲ ನೀರಿಲ್ಲದ ಊರಿಗೆ ವರ್ಗಮಾಡಬೇಕು ಅಂದಾಗಲೇ ಬುದ್ಧಿ ಬರೋದು" ಎಂದ ಮಾತು ಎಷ್ಟು ಕಟುಸತ್ಯ ಎನಿಸಿತು. ರಾಯರು ಅಧಿಕಾರಿಗಳನ್ನು, ಹಳ್ಳಿಯ ರಸ್ತೆಗಳನ್ನು ಶಪಿಸುತ್ತ ನಡೆದರು. ಹಾಕಿದ ಪ್ಯಾಂಟು ಧೂಳುಮಯ. ಮೇಲೆ ಬೆವರಿನಿಂದ ಒದ್ದೆ ಮುದ್ದೆಯಾದ ಶರಟು. ಏದುಸಿರು ಬಿಡುತ್ತ ಹೆಜ್ಜೆ ಹಾಕತೊಡಗಿದರು. ಅನತಿ ದೂರದಲ್ಲಿಯೇ ಊರಿನ ದುರ್ಗಿಯ ಗುಡಿಯ ಎತ್ತರದ ಕಳಸ ಬಿಸಿಲಿನಲ್ಲಿ ಮಿಂಚುತ್ತಿದುದನ್ನು ಕಂಡು ಅಬ್ಬಾ ! ಅಂತೂ ಒಮ್ಮೆ ಬಂದನಲ್ಲಾ, ಎನ್ನುವ ಮಟ್ಟಿಗೆ ನಿಡಿದಾದ ಉಸಿರು ಬಿಟ್ಟರು,

ಗುಡಿಯ ಕಟ್ಟೆಯಮೇಲೆ ಎಲೆ ಆಡಿಕೆ ಹಾಕುತ್ತ ನಾಲ್ಕಾರು ಜನ ಕುಳಿತು ಹರಟುತ್ತಿದ್ದರು. ರಾಜಕೀಯ ವಿಷಯದ ಚರ್ಚೆ ಬಿರುಸಾಗಿತ್ತು. ರಾಯರು ಕೇಳಲೋ ಬೇಡವೋ ಎಂಬಂತೆ ಅನುಮಾನಿಸುತ್ತ-ಈ ಊರಿನ ಶಾಲೆಗೆ ರಸ್ತೆ ಯಾವುದಪ್ಪಾ ಎಂದು ಹಿರಿಯರೊಬ್ಬರನ್ನು ಪ್ರಶ್ನಿಸಿದರು ಬಾಯಲ್ಲಿಯ ಎಲೆ-ಅಡಿಕೆ ಪಕ್ಕದಲ್ಲೇ ಥೂ ಎಂದು ಉಗಿದವನೇ ಓ ! ಸಾಹೇಬರೂ ಅಂತ ಕಾಣಿಸ್ತೈತಿ. ಆಗೋ ಅಲ್ಲಿ ಎತ್ತರದಲ್ಲಿ ಹಂಚಿನ

ಮಾಳಿಗೆ ಮನೆ ಕಾಣಿಸ್ತೈತಿನೋಡ್ರಿ ಅದೇ ಶಾಲೆ. ನಮ್ಮೂರಾಗ ಎಲ್ಲಾ ಮಣ್ಣಿನ ಮಾಳಿಗೆ ಮನಿಗಳು. ಅದೊಂದೇ ಹಂಚು ಹೊದಿಸಿದ್ದು ಶಾಲೆ– ಎಂದ ಅಜ್ಜ.

ರಾಯರು ಮುಂದೆ ನಡೆದರು. ಶಾಲೆ ಹೆಡ್ ಮಾಸ್ತರರು ಶಾಲೆ ಯಲ್ಲಿಯೇ ಇದ್ದುದರಿಂದ ಅವರನ್ನು ಹುಡುಕುವ ಶ್ರಮ ಬೀಳಲಿಲ್ಲ. ಪ್ಯಾಂಟು ಹಾಕಿ ಕೈಲಿ ಬ್ಯಾಗು ಹಿಡಿದು ನೇರ ಶಾಲೆಗೇ ಬಂದಿದ್ದರಿಂದ ಸೂಕ್ಷ್ಮ ಮತಿಗಳಾದ ಹೆಡ್‌ಮಾಸ್ತರರು ಕಿಟಕಿಯಿಂದ ನೋಡಿದವರೇ ಧಾವಿಸಿ ಹೊರ ಬಂದರು. ಸಾಹೇಬರನ್ನು ಎದುರ್ಗೊಂಡವರೇ 'ನಮಸ್ಕಾರ ಸಾಹೇ ಬರೇ.' ತಾವು ಬರ್‍ತೀವಿ ಅಂತಾ ಮೊದಲೇ ತಿಳಿಸಿದ್ದರೆ ನಾವು ಯಾರಾ ದರೂ ರಸ್ತೆಯ ಹತ್ತಿರ ಬಂದು ನಿಲ್ಲುತ್ತಿದ್ದೆವು. ಎಂಥಾ ಕೆಲಸವಾಗಿ ಹೋಯ್ತು. ಬರ್‍ರಿ ಬರ್‍ರಿ–ಎಂದು ಉಪಚರಿಸಿ ಕರೆದೊಯ್ದರು.

ಸಾಹೇಬರು ಮುಖ ತೊಳೆದು ಕೂಡ್ರೂವಲ್ಲಿ ಹೆ.ಮಾ.ರರ ಮನೆ ಯಿಂದ ಮಜ್ಜಿಗೆ ತಂಬಿಗೆ ಬಂದಿತು. ಅದನ್ನು ನೋಡಿದ ಸಾಹೇಬರು 'ಬರೀ ನೀರು ಸಾಕಿತ್ತು ಬಹಳ ಬಾಯಾರಿಕೆ ಆಗಿದೆ ಎಂದವರೇ ಮಜ್ಜಿಗೆ ಯನ್ನು ಕುಡಿದು ಮುಗಿಸಿದರು. ಸ್ವಲ್ಪ ಸುಧಾರಿಸಿಕೊಂಡು ಬೆವರು ಒರೆ ಸಿಕೊಳ್ಳುತ್ತ–ಎಂಥಾ ಹಳ್ಳಿಗಳಪ್ಪಾ, ಸರಕಾರದವರು ಯಾವಾಗಲೂ ಇಷ್ಟು ಭಾವಿ ತೋಡಿಸಿದೆವು, ಅಷ್ಟು ರಸ್ತೆ ಮಾಡಿಸಿದೆವು. ಅಂತಾ ರೇಡಿ ಯೋದಾಗ, ಪೇಪರಿನಾಗ ಹೇಳ್ತಾನೇ ಇರ್‍ತಾರ. ಆದರೆ...ಈ ಹಳ್ಳಿಗಳನ್ನ ನೋಡಿದರ ನಮ್ಮ ಭಾರತ ಇನ್ನೂ ಯಾವ ಸ್ಥಿತೀಲೇ ಇದೆ ಅಂತಾ ತಿಳೀ ತೈತಿ. ಊರಿಗೆ ಬಂದೂ ಬಸ್ಸಿಲ್ಲಾ ಇಂಥಲ್ಲಿ ನಮ್ಮನ್ನೂ ಹಾಕ್ತಾರೆ ವರಿದ್ರು ದೋರು–ಎನ್ನುವಷ್ಟರಲ್ಲಿ ಇನ್ನೂ ನಾಲ್ಕು ಜನ ಅಧ್ಯಾಪಕರು ಬಂದು ನಮಸ್ಕಾರ ಮಾಡಿದರು.

ಸಾಹೇಬರು ಪ್ರತಿನಮಸ್ಕಾರ ಮಾಡಿದವರೇ ಏಕದಂ ಗರಂ ಆದರು 'ಏನು ನೀವೆಲ್ಲಾ. ಶಾಲೆಗೆ ಸರಿಯಾಗಿ ಬರುವುದಿಲ್ಲ. ಸರಿಯಾಗಿ ಕೆಲಸ

ಮಾಡುವುದಿಲ್ಲ. ನಿಮ್ಮ ಹೊಲ- ಮನೆ ಕೆಲಸದಲ್ಲಿ ಹೆಚ್ಚು ಆಸಕ್ತಿ ತೋರಿಸ್ತೀರ. ಊರಿನ ಜನ ಹಾಗೂ ಪಂಚಾಯಿತಿಯವರ ಒಟ್ಟಿಗೆ ಜಗಳ ಕಾಯ್ತೀರಂತೆ... ನಿಮ್ಮನ್ನೆಲ್ಲ ಬೇರೆ ಊರಿಗೆ ವರ್ಗಮಾಡಬೇಕು ಅಂತ ಪಂಚಾಯಿತಿಯವರು ದೂರು ಕೊಟ್ಟಿದ್ದಾರೆ...ಏನಂತೀರಿ-ಒಂದೇ ಉಸುರಿಗೆ ಹೇಳುವುದನ್ನೆಲ್ಲ ಹೇಳಿಬಿಟ್ಟರು.

ಹತ್ತಿರದಲ್ಲಿಯೇ ನಿಂತಿದ್ದ ಹೆ. ಮಾ.ರರಿಗೆ ಇವರು ಬಂದ ಉದ್ದೇಶ ತಿಳಿದುಹೋಯಿತು ಹಸಿದಾಗ ಹಾವನ್ನು ತಡುವಬಾರದೆಂಬಂತೆ ಸಹನೆಯಿಂದಲೇ ಹೇಳಿದರು -ಅದಿರಲಿ ಸಾಹೇಬರೇ ಎಲ್ಲ ಮತ್ತೆ ಮಾತ ಡುವಾ. ಬನ್ನಿ ನಮ್ಮ ಮಕ್ಕಳು ಮಾಡಿದ ಕೈತೋಟ ತೋರಿಸು ತ್ತೇನೆಂದು ಕರೆದುಕೊಂಡು ಹೊರನಡೆದರು. ತೋಟದಲ್ಲಿ ಮಾಡಿದ ಹೂಣಸಿನ ಮಡಿಗಳು, ಬದನೆಗಿಡಗಳು ಟೊಮೆಟೋ ಮುಂತಾದ ತರಕಾರಿ ಗಳನ್ನು ತೋರಿಸುತ್ತ. ಅವುಗಳನ್ನು ಬೆಳಸಬೇಕಾದಾಗ ತಾವೆಲ್ಲ ಪಟ್ಟ ಶ್ರಮವನ್ನು ವಿವರಿಸುತ್ತ ತಮ್ಮ ಮನೆ ಜಗುಲಿ ಏರಿದರು. ಸಾಹೇಬರು ಅವರನ್ನೇ ಹಿಂಬಾಲಿಸಿದರು.

ಹೆ.ಮಾ. ಶ್ಯಾಮಣ್ಣನವರ ಬಗ್ಗೆ ಹೇಳುವುದಾದರೆ-ಅವರೊಬ್ಬ ಬಹಳೇ ವಜನದಾರ ಮನುಷ್ಯ. ಈ ಶಾಲೆಯ ಚಾಕರಿ ಮಾಡಿಯೇ ಹೊಟ್ಟೆತುಂಬಿಕೊಳ್ಳುವಂಥ ಸ್ಥಿತಿ ಏನೂ ಅವರದಲ್ಲ. ಹಿರಿಯರು ಮಾಡಿಟ್ಟ ಹತ್ತು ಎಕರೆ ಜಮೀನಿದೆ. ಒಳ್ಳೆ ಎರೆ ಭೂಮಿ ಒಂದು ಹತ್ತೀ ಪೀಕಿನಲ್ಲಿಯೇ ಬೇಕಾದಷ್ಟು ಹಣ ತೆಗೆಯುತ್ತಾರೆ. ಇನ್ನು ಶ್ರೀಮಂತ ಬೆಳೆ ಶೇಂಗಾ, ಜೋಳ, ಗೋಧಿ, ಬೆಳೆದವರಂತೂ ಅವ ರನ್ನು ಹಿಡಿದವರೇ ಇಲ್ಲ. ಮನೆಯಲ್ಲಿ ಎರಡು ಎಮ್ಮೆ, ಆಕಳು ಇವೆ. ನೋಡಿಕೊಳ್ಳಲು ಆಳುಗಳಿವೆ. ಮನೆಯಲ್ಲಿ ಹೆಂಡತಿ ಹಾಗೂ ನಾಲ್ಕು ಮಕ್ಕಳು ಎರಡು ಹೆಣ್ಣು - ಎರಡು ಗಂಡು. ಹೀಗಾಗಿ ಸಂಸಾರ ವೇನೂ ಭಾರವಾಗಿರಲಿಲ್ಲ. ಹಿರಿಯರಿಂದ ಆಸ್ತಿ ಬಂದ ಹಾಗೆಯೇ ಮಾಸ್ತರ ಕೆಲಸಾನೂ ಬಳುವಳಿಯಾಗಿ ಬಂದಿತ್ತು. ಹಾಗಾಗಿ ಊರಿನ

ಒಡೆಯರೆಲ್ಲ ಇವರಿಗೆ ಗೊತ್ತು. ಇವರವೂ ಊರಿನವರಿಗೆ ಗೊತ್ತು. ಒಟ್ಟಿನಲ್ಲಿ ಅದೇ ಊರಿನವರಲ್ಲಿ ಒಬ್ಬರಾಗಿ ಹೆ. ಮಾ. ರರು ಬದುಕಿ ಬಾಳುತ್ತಿದ್ದರು.

ಮನೆ ಹಳೆಯ ಕಾಲದ್ದಾದರೂ ವಿಶಾಲವಾಗಿತ್ತು. ದೊಡ್ಡ ದೊಡ್ಡ ಕಿಟಕಿಗಳಿದ್ದುದರಿಂದ ಗಾಳಿ–ಬೆಳಕಿಗೆ ತೊಂದರೆ ಇರಲಿಲ್ಲ. ಮನೆ ಸುತ್ತಲೂ ಬಾಳೆ, ಮಾವು, ಹುಣಸೆ ಮರಗಳಿದ್ದುದರಿಂದ ದಟ್ಟವಾಗಿ ನೆರಳು ಹರಡಿ ಇನ್ನೂ ತಂಪೆನಿಸುತ್ತಿತ್ತು. ನಡುಮನೆಯ ಬಾಗಿಲಿಗೆ ಇಳಿಬಿಟ್ಟಿದ್ದ ಯಾಲಕ್ಕಿ ಕಾಯಿಯ ತೋರಣ ಪರಿಮಳ ಬೀರುತ್ತಿತ್ತು, ಎದುರಿಗೇ ಗೋಡೆಯ ಮೇಲೆ ಮನೆ ಒಡೆಯರ ದೊಡ್ಡ ಫೋಟೋ ಅಲಂಕೃತವಾವಾಗಿತ್ತು. ಅದಕ್ಕೆ ಗಂಧದ ಮಾಲೆ ನೇತಾಡುತ್ತಿತ್ತು ಕಣ್ಣಿನಲ್ಲಿಯೇ ಮನೆ ಅಂತಸ್ತನ್ನು ಅಳೆಯುತ್ತಿರುವಲ್ಲಿ ಸಾಹೇಬರ ಎದುರಿಗೆ ಥಣ್ಣನ್ನ ನೀರಿನಲ್ಲಿ ಮಾಡಿದ ಪಾನಕ ಬಂದಿತು. ಅದಕ್ಕೆ ಹಾಕಿದ ಏಲಕ್ಕಿ ಕಾಳು ಮೆಣಸಿನ ಪರಿಮಳ ಸಾಹೇರ ಮೂಗಿಗೆ ಬಡಿಯಿತು.

'ಸಾಹೇಬರು-ಇದೆಲ್ಲ ಯಾಕೆ? ಮೊದಲು ನಮ್ಮ ಬಂದ ಕೆಲಸವಾಗಲಿ'...ವಾಕ್ಯ ಪೂರ್ತಿಯಾಗುವದರಲ್ಲಿಯೇ ಹೆ.ಮಾ. ರರು–'ಆಯಿತು ಮೊದಲು ಸ್ವಲ್ಪ ಬಾಯಾರಿಕೆ ತಕೊಳ್ಳಿ ಎಂದು ಬಾಳೆ ಹಣ್ಣಿನ ತಟ್ಟೆ ಮುಂದಿಟ್ಟರು.'

'ರಸಬಾಳೆಹಣ್ಣು-ಪಾನಕ ರಾಯರ ಹೊಟ್ಟೆಯನ್ನು ತಂಪುಗೊಳಿಸಿತು'. ಕಾಲ ಮೇಲೆ ಕಾಲು ಹಾಕಿ ಕುಳಿತು ಸಾಹೇಬಕಿಯ ಗತ್ತಿನಿಂದ - ಏನು, ಈ ಸಲದ ಇಲೆಕ್ಷನ್ನಿನ ರಂಗು ಹೇಗಿದೆ ನಿಮ್ಮೂರಲ್ಲಿ ?-ಎಂದರು.

'ಆ ಇಲೆಕ್ಷನ್ನಿನ ವಿಷಯ ನಮಗ್ಯಾಕೆ ಬಿಡ್ರಿ. ಊರವರು ಇದ್ದಾರೆ. ಪಂಚಾಯಿತಿ ಜನ ಇದ್ದಾರೆ. ನಾವೇನು ಯಾವ ಪಾರ್ಟಿ ಉಸಾಬರಿಗೂ ಹೋಗುವವರಲ್ಲ. ನಾವು ಆಯಿತು-ನಮ್ಮ ಕೆಲಸವಾಯ್ತು-ಹೆ.ಮಾ.ರರು

ಅಲ್ಲಿಗೇ ಆ ವಿಷಯ ಮೊಟಕುಗೊಳಿಸಿ-ಅಂದಹಾಗೆ ಆ ಮೊದಲಿನ ಸಾಹೇಬರಿಗೆ ಬಹಳ ದೂರ ವರ್ಗಮಾಡಿದರಂತಲ್ಲಾ. ಛೇ...ಛೇ ಬಹಳ ಅನ್ಯಾಯವಾಗಿಹೋಯ್ತು. ನಮ್ಮಂಥ ಶಿಕ್ಷಕರನ್ನು ಕಂಡರೆ ಅವರಿಗೆ ಬಹಳ ಪ್ರೀತಿ-ಬಹಳ ಕರುಣೆ. ಅವರು ಇದ್ದಷ್ಟು ಕಾಲಾನೂ ನಮ್ಮ ಶಾಲೆಗೆ ಕೆಟ್ಟ ರಿಮಾರ್ಕ ಬರದೇ ಇಲ್ಲ.

'ಅಂದರೆ...ನಾನು ಕೆಟ್ಟವನು ಅಂತಾ ಏನು ನಿಮ್ಮ ಮಾತಿನ ಅರ್ಥ— ಸಿಗರೇಟಿನ ಹೊಗೆ ಬಿಡುತ್ತ ಸಾಹೇಬರು ಪ್ರಶ್ನಿಸಿದರು.

"ಛೇ...ಛೇ ನಾನೆಲ್ಲಿ ಹಾಗೆ ಹೇಳಿದೆ? ಪಾಪ, ಈ ತಾಲೂಕಿಗೆ ನೀವಿನ್ನೂ ಹೊಸಬರು. ಸಣ್ಣ ವಯಸ್ಸಿದೆ ಬೇಕಾದಷ್ಟು ಸರ್ವೀಸು ಇದೆ.... ಮುಖಸ್ತುತಿ ಮಾಡುತ್ತಿದ್ದಂತೆ ಒಳಗಿನಿಂದ ಕರೆ ಬಂದಿತು. ಹೆ.ಮಾ.ರರು ಒಳಗೆ ಹೋಗಿ ಸರಕ್ಕನೇ ಬಂದವರೇ—ಬನ್ನಿ ಬನ್ನಿ ಮೊದಲು ಊಟವಾಗಲಿ. ಈಗಲೇ ತುಂಬಾ ತಡವಾಯಿತು ಎಂದು ಸಾಹೇಬರೊಂದಿಗೆ ಒಳನಡೆದರು.

ಅಚ್ಚುಕಟ್ಟಾದ ಎಲೆ ಮೇಲೆ ತುಂಬ ಬಗೆಯ ಪದಾರ್ಥಗಳು ಬಡಿಸಲ್ಪಟ್ಟಿದ್ದವು. ಬೇಡ ಬೇಡ ಎಂದರೂ ಹೆ.ಮಾ.ರರು ಒತ್ತಾಯದಲ್ಲಿ ಲಾಡು, ಪಾಯಸ ಹಾಕಿದರು. ಚಿತ್ರಾನ್ನ, ಮೊಸರನ್ನ, ಸಾಹೇಬರ ಹೊಟ್ಟೆಯನ್ನು ತೃಪ್ತಿಗೊಳಿಸಿದವು. 'ಊಟಾ ತುಂಭಾ ಹೆವಿ ಆಯಿತು'- ಎನ್ನುತ್ತ ಹೊಟ್ಟೆ ಮೇಲೆ ಕೈ ಆಡಿಸುತ್ತ ಆಕಳಿಸಿದರು.

'ತಾಂಬೂಲ ಹಾಕಿ ಆ ಪಕ್ಕದ ಕೋಣೇಲಿ ಸ್ವಲ್ಪ ವಿಶ್ರಾಂತಿ ತಗೊಳ್ಳಿರಿ. ನೀಲಾ, ಇವರಿಗೆ ಹಾಸಿಗೆ ಮಾಡಿಕೊಡು. ಹಾಗೇ ಚೆನ್ನಾಗಿಯೇ ನೋಡಿಕೋ ಎಂದು ಹೆ.ಮಾ.ರರು ನೀಲಾನಿಗೆ ಅರ್ಥಪೂರ್ಣವಾಗಿ ಹೇಳಿ ಶಾಲೆ ಕಡೆ ನಡೆದರು.

'ಮಲಗುವ ಕೋಣೆ ನೀಟಾಗಿತ್ತು. ಮಂಚಕ್ಕೆ ಕಟ್ಟಿದ ಸೊಳ್ಳೆಪರದೆ

ಶುಭ್ರವಾಗಿತ್ತು. ಮೆತ್ತನ್ನ ಹಾಸಿಗೆ-ದಿಂಬು. ಹೊದಿಯಲು ಮೃದುವಾದ ಶಾಲು. ಅದರ ಪಕ್ಕದಲ್ಲಿ ಒಂದು ಚಿಕ್ಕ ಟೀಪಾಯ್. ಅದರ ಮೇಲಿಟ್ಟ ಕಾದಂಬರಿಗಳು, ಪತ್ರಿಕೆಗಳು ಅಚ್ಚುಕಟ್ಟಿದ್ದವು. ಎದುರು ಗೋಡೆಯ ಕನ್ನಡಿ ಕಪಾಟಿನಲ್ಲಿ ಪುಸ್ತಕಗಳು ಸಾಲಾಗಿ ಕಾಣುತ್ತಿದ್ದವು. ಅದರ ಮೇಲ್ಬದಿಗೆ ಹೆ.ಮಾ.ರರ ಮದುವೆ ಫೋಟೋ ವಿಜೃಂಭಿಸುತ್ತಿತ್ತು. ಸಾಹೇಬರು ಹತ್ತಿರ ಹೋಗಿ ನೋಡಿದರು. ಹೆ.ಮಾ.ರರು ಬಹಳ ಜಾಣರು. ಚೆಲುವೆ ಹೆಂಡತಿಯ ಕೈ ಹಿಡಿದಿದ್ದಾರೆ ಎಂದುಕೊಳ್ಳುವಷ್ಟರಲ್ಲಿ ನೀಲೂ ಕಾಸಿ ಆರಿಸಿದ ಹಾಲಿನ ಲೋಟ ಹಣ್ಣಿನ ತಟ್ಟೆ ಹಿಡಿದು ಒಳಬಂದಳು.

ಸಾಹೇಬರು ಉಪಚಾರಕ್ಕಾಗಿ-ಊಟಾನೇ ಭಾರವಾಗಿದೆ, ಇನ್ನು ಈ ಹಣ್ಣು ಹಾಲಿಗೆ ಸ್ಥಳವೆಲ್ಲಿ? ಯಾಕೆ ಇದೆಲ್ಲ ಎನ್ನುತ್ತಿದ್ದ ಹಾಗೇ-ಹಣ್ಣು-ಹಾಲು ಒಲ್ಲೆ ಎನ್ನಬಾರದು ಸ್ವಾಮೀ-ಎಂದು ಕಿಲಕಿಲನೆ ನಕ್ಕು ಮಂಚದ ಒಂದು ತುದಿಗೆ ಕುಳಿತೇ ಬಿಟ್ಟಳು—ನೀಲಾ. ನಗುವಿನೊಂದಿಗೆ ಅವಳ ಗುಂಡಗಿನ ಬಿಳಿ ಕೈಗಳಿಗೆ ತೊಡಿಸಿದ ಕೆಂಪಿನ ಬಳೆಗಳ ನಾದ ಮೇಳೈಸಿತು.

ಸಾಹೇಬರು ಮೇಲೆದ್ದಾಗ ಸಂಜೆ ಆಗುತ್ತ ಬಂದಿತ್ತು. ಘಾಬರಿಯಾದರು. ಮಲಗಿದ ಹಾಸಿಗೆ ಅಸ್ತವ್ಯಸ್ತಗೊಂಡಿತ್ತು. ಹೂವಿನ ಎಸಳುಗಳು ಅಲ್ಲಲ್ಲಿ ಬಾಡಿ ಬಿದ್ದಿದ್ದವು ದಿಂಬಿಗೆ ಕುಂಕುಮ ಅಂಟಿಕೊಂಡಿತ್ತು. ತಾವು ತೊಟ್ಟ ಬಟ್ಟೆ ಆಚೆ ಈಚೆ ಆದದ್ದನ್ನು ನೋಡಿ ಸರಿಪಡಿಸಿಕೊಂಡರು. ಮೈಭಾರ ಇಳಿದು ಹಾಯೆನ್ನಿಸಿತ್ತು. ಬಾಗಿಲು ತೆಗೆದು ಹೊರಬರುವದಕ್ಕೂ ಹೆ.ಮಾ.ರರು ಕೈಯಲ್ಲಿ ನಾಲ್ಕು ದಫ್ತರು ಹಿಡಿದು ಜಗುಲಿ ಏರುವದಕ್ಕೂ ಸರಿಯಾಯಿತು.

ಸಾಹೇಬರಿಗೆ ನಿದ್ದೆ ಸರಿಯಾಗಿ ಬಂದಿತಾ-ಈ ಹಳ್ಳೀಲಿ ಸೊಳ್ಳೆಗಳು ಜಾಸ್ತೀರಿ. ಎನ್ನುತ್ತ ಮಾಸ್ತರರು ಮುಗುಳು ನಗೆ ನಕ್ಕರು.

'ಸಾಹೇಬರೂ ಏನೂ ಕಡಿಮೆಯವರಲ್ಲ. ದೇಶಾವರಿ ನಗೆಬೀರುತ್ತ—

ಬಹಳ ರಸಿಕರಪ್ಪ ನೀವು. ಮಾಸ್ತರೆ ಆದರೂ ಈ ಹಳ್ಳೀಲಿ ಬಹಳ ಅನು
ಕೂಲತೇನೇ ಮಾಡಿಕೊಂಡಿದೀರಿ. ಅಲ್ಲದೆ ನಿಮ್ಮ ಸೂಕ್ಷ್ಮ ಬುದ್ಧಿಯನ್ನು
ಬಹಳ ಮೆಚ್ಚಬೇಕು. ಯಾರ್‍ಯಾರಿಗೆ ಹೇಗೆ ಮರ್ಯಾದೆ ಮಾಡಬೇಕು
ಎನ್ನೋವರಲ್ಲಿ ಬಹಳಾ ಪಳಗಿದೀರಿ ಅಂತ ಗೊತ್ತಾಗ್ತದೆ-ಎಂದರು.

ನೀವು ಪೇಟೆಯುವರು. ಒಳ್ಳೇ ಮಾಲು ಮಜಾ ಈ ಹಳ್ಳೀಲಿ ಏನು
ಸಿಗ್ತದೆ ಬಿಡ್ರಿ-ಎನ್ನುತ್ತ ಕುಳಿತರು. ಸಾಹೇಬರ ಎದುರಿಗೆ ದಫ್ತರ ಪುಟ
ತೆರೆದು ಹಿಡಿದರು. ಸಾಹೇಬರು ತಮ್ಮ ರಾಜುವಾತು ಹಾಕಿದರು. ಬಂದ
ಕೆಲಸವಾಯಿತು. ಸರಕಾರದ ಸಂಬಳದ ಋಣ ತೀರಿಸಿದರು. ಒಂದು
ಸರಕಾರಿ ಶಾಲೆಯ ಸುದರ್ಶನ ಮುಗಿಸಿದರು. ತಾವು ತೊಟ್ಟ ಪ್ಯಾಂಟಿನ
ಅಂಚಿನ ಧೂಳು ಝಾಡಿಸುತ್ತ ಇನ್ನೊಂದು ಅತಿ ಮುಖ್ಯವಾದ ವಿಷಯ
ತಿಳಿಸಿದರು.—

ಹೆ.ಮಾಸ್ತರರೇ ನಿಮ್ಮಿಂದ ಇನ್ನೊಂದು ಕೆಲಸಾ ಆಗಬೇಕಿತ್ತಲ್ಲಾ.
ಅದೇನು ಮಹಾ ದೊಡ್ಡ ವಿಷಯ ಅಲ್ಲಾ ಬಿಡ್ರಿ....ಎನ್ನುತ್ತಿದ್ದಂತೇ
ಹೆ.ಮಾ.ರರು ನಾವು ಇಲ್ಲಾ ಎಂತವೆಯಾ ಹೇಳಿ. ಏನಿದ್ದರೂ ಮಾಡೋಣ-
ಎಂದರು ಅತಿ ವಿನಯದಿಂದ.

'ಅದು ಸರಿ. ನನಗೆ ನಿಮ್ಮ ಮೇಲೆ ವಿಶ್ವಾಸವಿದೆ. ಒಂದೇ ದಿನದಲ್ಲಿ
ನನ್ನನ್ನು ಎಷ್ಟೊಂದು ಹಚ್ಚಿಕೊಂಡು ಬಿಟ್ಟೀದೀರಿ. ಚೆನ್ನಾಗಿ ಸ್ಕೂಲು
ನಡೆಸಿಕೊಂಡು ಹೋಗ್ತಿದ್ದೀರಿ. ನಿಮ್ಮ ಬಗ್ಗೆ D.D.P.I. ರವರಿಗೂ
ಬಹಳ ಒಳ್ಳೇ ಅಭಿಪ್ರಾಯನೂ ಇದೆ. ನಿಮಗೇನೂ ಭಯವಿಲ್ಲ. ಅಂದ
ಹಾಗೆ ನನ್ನ ಮಿಸೆಸ್ ಹೆಸರೀಲಿ ವಿಮಾ ಏಜನ್ಸೀನೂ ಮಾಡ್ತಿದ್ದೀನಿ.
ನಿಮ್ಮ ಹಾಗೂ ಉಳಿದ ಶಿಕ್ಷಕರ ಹೆಸರಿಗೆ ಹತ್ತು ಸಾವಿರದ್ದು ಪಾಲಿಸಿ-ಕಳಿಸಿ
ಕೊಡ್ತೀನಿ, ಹಾಗೇ ನಿಮ್ಮೆಲ್ಲ ಶಿಕ್ಷಕರಿಗೂ ತಿಳಿಸಿಬಿಡಿ-ಎಂದರು.

ಹೆ.ಮಾ.ರರು ತುಟಿ ಪಿಟಕ್ಕೆನ್ನದೆ ಮೌನವಾಗಿದ್ದರು. ಒಳಗಿನಿಂದ

ಬಿಸಿಬಿಸಿ ಬೋಂಡಾ-ಚಹಾ ಬಂದವು. ಸಾಹೇಬರು ನಿಸ್ಸಂಕೋಚದಿಂದ-ಹೀರೇಕಾಯಿ ಬೋಂಡಾ ಬಹಳಾ ಚೆನ್ನಾಗಿವೇರಿ ಎನ್ನುತ್ತ ತಟ್ಟೆ ಖಾಲಿ ಮಾಡಿ ಮೇಲೆದ್ದರು. ಇನ್ನು ಹೊರಡುವಾ. ಏಳರ ಬಸ್ಸಿಗೆ ತಡವಾಗುತ್ತದೆ ಎಂದಾಗ ಹೆ.ಮಾ.ರರು ಊರಿನ ಜಮೀನುದಾರರ ಸ್ಕೂಟರ್ ಎರವಲು ಪಡೆದು ಸಾಹೇಬರನ್ನು ಬಿಡಲು ಹೊರಟರು.

ಸಾಹೇಬರು ಹೊರಡುವಾಗ ಒಮ್ಮೆ ತಿರುಗಿನೋಡಿದರು. ಬಾಗಿಲ ಬಳಿ ಅರೆಬರೆ ಕಾಣುವ ರೀತಿಯಲ್ಲಿ ನಿಂತ ನೀಲೂ ಸಾಹೇಬರಿಗೆ ಮತ್ತೊಮ್ಮೆ ತಪ್ಪದೇ ಬನ್ನಿರಿ. ಕಾಯುತ್ತಿರುತ್ತೇನೆ ಎನ್ನುವ ನೋಟ ಬೀರಿ ನಕ್ಕಳು. ಸಾಹೇಬರೂ ಮರುನಗೆಯಲ್ಲಿ ಆಶ್ವಾಸನೆ ಕೊಟ್ಟು ಸ್ಕೂಟರ್ ಏರಿದರು.

ಬಸ್ಸು ನಿಲ್ಲುವ ತಿರುವಿಗೆ ಬಂದಾಗ ಇನ್ನುಳಿದ ಶಿಕ್ಷಕರೂ ಹಾಜರಿದ್ದರು. ಒಬ್ಬರ ಕೈಲಿ ಬಾಳೆಗೊನೆ ಇದ್ದರೆ ಇನ್ನೊಬ್ಬರ ಕೈ ಚೀಲವಲ್ಲಿ ಬೆಣ್ಣೆ-ತರಕಾರಿ ಇತ್ತು. ಮತ್ತೊಬ್ಬರು ಧಾನ್ಯ ತುಂಬಿದ ಕೈಚೀಲ ಹಿಡಿದು ಇವರನ್ನೇ ಕಾಯುತ್ತಿದ್ದರು. ಅರ್ಧ ಘಂಟೆ ತಡವಾಗಿ ಬಂದ ಸರಕಾರಿ ಬಸ್ಸು ಧೂಳೆಬ್ಬಿಸಿ ನಿಂತಿತು. ಸಾಹೇಬರನ್ನು ಮುಂದಿನ ಸೀಟಿನಲ್ಲಿ ಕೂಡಿಸಿ ಹಣ ಹಾಕಿದ ಬಿಳಿ ಕವರನ್ನು ಅವರ ಕೈಲಿ ಇಟ್ಟು ಸರಂಜಾಮು ಗಳನ್ನು ಜಾಗ್ರತೆಯಾಗಿ ಅವರ ಹತ್ತಿರ ಇಟ್ಟು ಎಲ್ಲರೂ ನಮಸ್ಕರಿಸಿ ಸಾಹೇಬರನ್ನು ಬೀಳ್ಕೊಟ್ಟರು.

* * * *

ರಾಮರಾಯರು ಹೆಂಡತಿ ಸೀತಾಳನ್ನು ತವರು ಮನೆಗೆ ಬಿಡಲು ವಿಜಾಪುರಕ್ಕೆ ಹೊರಟಿದ್ದರು. ಕಿಟಕಿಯ ಗಾಜುಗಳಿಂದ ಹೊರಗೆ ನೋಡಿದಾಗ ಕಣ್ಣೆದುರಿಗೆ ಕಾಣುವ ಭೂಮಿಯ ಹಸಿರು ಒಡಲು ವಿಶಾಲವಾಗಿ ಹಬ್ಬಿತ್ತು, ಬೆಳೆದು ನಿಂತ ಪೈರಿನ ಜೋಳದ ತೆನೆಗಳು ಗಾಳಿಗೆ ತೂಗುಯ್ಯಾಲೆ ಆಡುತ್ತಿದ್ದವು. ಅಲ್ಲಲ್ಲಿ ಬೆಳೆದು ನಿಂತ ಸೂರ್ಯಪಾನ ಹೂಗಳು ಮನವನ್ನು ಮುದಗೊಳ್ಳುತ್ತಿದ್ದವು. ನೋವನ್ನು ಮರೆಸಿ ನಲಿವನ್ನು

ಚೆಲ್ಲುವ ಆ ನೋಟ ಅವಿಸ್ಮರಣೀಯ. ಹಾಗೆಯೇ ಜೀವನದ ಹಲವಾರು ಸಿಹಿ-ಕಹಿಗಳೆಲ್ಲ ಬಾಳಪುಟದಲ್ಲಿ ಸ್ಥಿರ ಹಾಗೂ ಅವಿಸ್ಮರಣೀಯ. ನೆನಪುಗಳ ಸೆರಪಣಿಯಲ್ಲಿ ಇದೂ ಒಂದು ನೆನಪು-ಮಾತ್ರ.

'ರಾಯರ ತೊಡೆಯ ಮೇಲೆ ಕುಳಿತಿದ್ದ ಮಗು ಹಣ್ಣು ಬೇಕ ಹಂದು ಹಟಮಾಡಿ ಅತ್ತಾಗಲೇ ರಾಯರು ನೆನಪಿನ ಸರಪಣಿಯಿಂದ ಕಳಚಿ ವಾಸ್ತವ ಲೋಕಕ್ಕೆ ಬಂದದ್ದು.'

# ಬಯಕೆಯ ಸೀರೆ

—ನೀಲಗಂಗಾ ಚರಂತಿ ಮಠ

ಸೋಮಿಯು ಲಗ್ನವಾಗಿ ಎರಡು ಯುಗಾದಿ ಕಳೆದರೂ ತವರ ಕಾಣದ ಜೀವ ತಾಪೂರಿ ಜಾಪೂರಿಯಾಗಿತ್ತು. ಹೆತ್ತ ತಾಯಿಯ ನೆನೆದು ಸುತ್ತ ನೆರೆ ಹೊರೆನಸೆಮು ದಿನಕೊಮ್ಮೆ ಅತ್ತು ಶಿವನ ಬೈದು ಸುಮ್ಮನಾಗುವಳು. ಗಂಡನ ಮನೆಗೆ ಹೊರಟಾಗಲೇ ಅವಳು ತವರವರ ಮುಖ ಕಂಡದ್ದು ಅಂದು ಬಳ ಗಾದ ಮಂದಿಯು ಬಣ್ಣದ ಸೀರೆಯ ಮೇಲೆ ಕಣ್ಣೀರು ಉದುರಿದ್ದವು.ಅಣ್ಣಾ, ಸಣ್ಣ ತಮ್ಮಾಗಿವು ಸರಿಪಾಲು ತಕ್ಕೊಂಡು ಇರತಿದ್ದೆವ್ವಾ ಅಂದಿದ್ದ. ತಾಯಿಯ ಜೀ ವ ತಳಮಳಗೊಂಡಿತ್ತು. ಕೊನೆಗೊಮ್ಮೆ ಅವಳಪ್ಪ ಗಟ್ಟಿ ಮನಸ್ಸು ಮಾಡಿ ಹೊತ್ತಾಗತದ ನಡಿಯವ್ವಾ ಅಂದಾಗ, ಮುಂದಕ್ಕೆ ನಡೆದ ಸೋಮಿ ಹಿಂದೆ ತಿರುಗಿ ನೀರ ತುಂಬಿದ ಕಣ್ಣನಲ್ಲಿ ಮಸಕಾಗಿ ತವರವರ ಕಂಡಿದ್ದಳು. ತಾಯಿಯ ಮುಂದೆ ಗಂಡನ ಮನೆಯ ಬಾಳುವೆ ಹೇಳಬೇಕೆಂಬ ಅವಳ ಆಶೆ ಆಶೆಯಾಗಿ ಉಳಿದಿತ್ತು.

ಸೋಮಿಯು ತಂದೆ ಕೆಂಚ ತೀರ ಬಡವ. ಇದ್ದುದರಲ್ಲಿಯೇ ಮೂರು ಹೆಣ್ಣು ಮಕ್ಕಳ ಮದುವೆ ಮಾಡಿಕೊಟ್ಟಿದ್ದ. ಇಬ್ಬರು ಗಂಡು ಮಕ್ಕಳು; ಒಬ್ಬನು ದಿನಗೂಲಿಗೆ ಹೋಗುತ್ತಿದ್ದ; ಇನ್ನೊಬ್ಬನು ಜೀತ ದಾಳು. ಹಿರಿಯರಿಂದ ಬಂದ ಆಸ್ತಿ ಆರು ಎಕರೆ ಭೂಮಿ. ಅದರಲ್ಲಿ ನಾಲ್ಕು ಅಣ್ಣತಮ್ಮಂದಿರಿಗೆ ಪಾಲಾಗಿ ಕೆಂಚನಿಗೆ ಒಂದೂವರೆ ಎಕರೆ ಭೂಮಿ ಬಂದಿತ್ತು. ಅದರಲ್ಲಿ ಕೆಂಚನ ಹೆಂಡತಿ ಸಿದ್ದವ್ವ ಮತ್ತು ಕೆಂಚ ದುಡಿಯು ತ್ತಿದ್ದರು. ಅಲ್ಲದೆ ಸಿದ್ದವ್ವ ಬೇರೆಯವರ ಹೊಲಗಳಿಗೆ ಕಳೆತೆಗೆಯಲು, ತೆನೆ ಮುರಿಯಲು, ಶೇಂಗಾ ಕೀಳಲು ಹತ್ತಿ ಬಿಡಿಸಲು ಹೋಗುತ್ತಿದ್ದಳು. ನಸುಕಿನಲ್ಲಿಯೇ ಎದ್ದು ಒಂದು ಬುಟ್ಟಿ ರೊಟ್ಟಿ ಬಡೆದಿಟ್ಟು ಅದಕ್ಕೆ

ಬಳ್ಳೊಳ್ಳಿ ಚಟ್ನಿ, ಪುಂಡಿ ಪಲ್ಲೆ, ಹುಳ್ಳಿಕಾಳು ಇವುಗಳಲ್ಲಿ ಯಾವುದಾದರೂ ಒಂದನ್ನು ಮಾಡಿಟ್ಟರೆ ಅವಳ ಮನೆಯ ಕೆಲಸ ಮುಗಿಯಿತು. ಹಬ್ಬ ಹರಿ ದಿನಗಳಲ್ಲಿಯೇ ಇವಳ ಮನೆ, ಮೈ ನೀರು ಕಾಣುವದು. ಇವರ ಮನೆಯ ದೇವರು ಹಬ್ಬದ ದಿನವೇ ದೀಪಕಾಣುವನು. ದಿನಾಲೂ ದೇವರಿಗೆ ದೀಪ ಹಚ್ಚಲು ಇವಳೆಲ್ಲಿಂದ ಎಣ್ಣೆ ತಂದಾಳು? ಕೆಂಚ ವರುಷಕ್ಕೆ ಒಂದು ಜೋಡು ಧೋತರ, ಸಿದ್ದವ್ವ ಒಂದು ಜತೆ ಸೀರೆ ಉದ್ದರಿತೆಂದರೆ ಮುಂದಿನ ವರುಷ ದವರೆಗೆ ಎಂಟಾಣೆ ರೂಪಾಯಿಯಂತೆ ಆಗ ಈಗ ಕೊಟ್ಟು ಮುಟ್ಟಿಸುತ್ತಿ ದ್ದರು. ಹಾಗೂ ಹೀಗೂ ದುಡ್ಡು ಕಾಸು ಕೂಡಿಸಿ ಸಾಲ ತೆಗೆದು ಮಕ್ಕಳ ಲಗ್ನ ಮಾಡಿದ್ದರು. ಲಗ್ನದ ಸಾಲ ಇನ್ನೂ ತೀರದಾಗಲೇ ಹೆಣ್ಣುಮಕ್ಕಳ ಕುಬಸ, ಬಾಣಂತನ ಅಂತ ಅಷ್ಟು ಇಷ್ಟು ಖರ್ಚಾಗಿತ್ತು. ಸಿದ್ದವ್ವ ತನ್ನ ಕಿವಿಯಲ್ಲಿಯ ಬುಗುಡಿ ಬೆಂಡೋಲೆ ಮಾರಿ ಬಹಳ ದಿವಸಗಳಾಗಿದ್ದವು. ಈಗ ಅವಳಿಗೆ ಇರುವ ಆಭರಣ ಕೇವಲ ಗಾಜಿನ ಬಳೆ, ಒಂದು ಮುತ್ತಿನ ಮೂಗುತಿ, ಕರಿಮಣಿಸರ ಕರಿಮಣಿಸರದಲ್ಲಿ ಮಾಂಗಲ್ಯಗಳೇ ಇರಲಿಲ್ಲ. ಗಂಡಹೆಂಡರ ಜಗಳದಲ್ಲಿ ಹಿಂದೆ ಕರಿಮಣಿಸರ ಹರಿದು ಬಿದ್ದಾಗ ಮಾಂಗಲ್ಯ ಗಳು ಕಳೆದು ಹೋಗಿದ್ದವು. ಆದರೆ ಜನಾರೂಢಿಗೆ ಅವಳು ಬರೀ ಕರಿ ಮಣಿಗಳನ್ನು ಪೋಣಿಸಿ ಹಾಕಿಕೊಂಡಿದ್ದಳು.

ಚಿಕ್ಕಮಗಳು ಸೋಮಿಯ ಮೇಲೆ ಸಿದ್ದವ್ವನಿಗೆ ಬಲು ಪ್ರೀತಿ. ಎರಡು ವರುಷಗಳಿಂದ ಮಗಳ ಮುಖವನ್ನು ನೋಡದೆ ಅವಳ ಜೀವ ಹಾತೊರೆಯುತ್ತಿತ್ತು. ಅದಕ್ಕಾಗಿ ಅವಳು ತನ್ನ ಬಡತನವನ್ನು ಶಪಿಸಿಕೊಂಡಳು.

ಎಲ್ಲ ಮಕ್ಕಳಲ್ಲಿ ಸೋಮಿ ಬಲು ಚೆಲುವಿ. ಮುಗ್ಧ ಹುಡುಗಿ, ಅವಳಿಗೆ 'ಸೋಮವ್ವ' ಎಂದು ಹೆಸರಿಟ್ಟರೂ ಮನೆಯ ಮಂದಿ. ಓಣಿಯ ಮಂದಿ ಆಕೆಗೆ ಸೋಮಿ...ಸೋಮಿ...ಎಂದು ಕರೆಯುತ್ತಿದ್ದರು. ಪುಟ್ಟ ಸೋಮಿ ಮಾತಿನ ಮಲ್ಲಿ. ಓಣಿಯ ಜನರೆಲ್ಲರ ಜೊತೆಯೂ ಅವಳು ಮಾತನಾಡುತ್ತಿದ್ದಳು. ಒಂದು ಕ್ಷಣ ಅವಳ ಬಾಯಿ ಸುಮ್ಮನಿರುತ್ತಿದ್ದಿಲ್ಲ. ಈಕೆ ಯಾವಾಗಲೂ ತಾಯಿಯ ಹಿಂದಿನಿಂದ ಅಡ್ಡಾಡುತ್ತಿದ್ದುದರಿಂದ ಸಣ್ಣ

ತನದಲ್ಲಿಯೇ ಹಸಿರಿನ ಸಿರಿಗೆ ಮನಸೋತಳು. ಬೆಳೆದಂತೆಲ್ಲ ಭೂತಾಯಿ ಯೊಡನೆಯೇ ನಂಟು ಬೆಳೆಯಿತು. ಹೊಲದಲ್ಲಿ ಇರುವದೆಂದರೆ ಸೋಮಿಗೆ ಬಲೂ ಆನಂದ. ಭೂಮಿಯ ಸಿರಿಯನ್ನು ಕಂಡು ಸಂತಸಪಡುವಳು. ಕಾದ ನೆಲದ ಮೇಲೆ ನೀರಿನ ಹನಿ ಉದುರಿದಾಗ ಬರುವ ತಂಪಿನ ಆಸೆಗಾಗಿ ಬೊಗಸೆ ತುಂಬ ಮಣ್ಣನ್ನು ಕೈಯಲ್ಲಿ ಎತ್ತಿಕೊಂಡು ಮೂಸುವಳು. ಈ ಸೌಗಂಧದ ಮುಂದೆ ಅವಳಿಗೆ ಯಾವ ಹೂವಿನ ಸೌಗಂಧ ಸರಿಸಾಟಿಯಿಲ್ಲ. ಭಾದ್ರಪದದ ಪಯಿರನ್ನೂ ನೋಡಿದಾಗಲಂತೂ ಅವಳಿಗೆ ಸಂಭ್ರಮವೇ ಸಂಭ್ರಮ, ಭೂತಾಯಿಯುಟ್ಟ ಹಸಿರು ಸೀರೆ ಕಂಡು ಅವಳ ಹೊಟ್ಟೆ ತುಂಬು ವದು. ಹಸಿರಿನ ಸೊಬಗನ್ನು ಮೆಚ್ಚಿದ ಸೋಮಿಗೆ ಹಸಿರು ಬಣ್ಣವೆಂದರೆ ಬಲುಪ್ರೀತಿ. ಸೋಮಿ ಕಲಿತ ವಿದ್ಯೆಸೋಬಾನದ ಹಾಡುಗಳು, ಬೀಸುವಕಲ್ಲಿನ ಹಾಡುಗಳು,ಜೋಗಳದ ಪದ, ಒಗಟು, ಒಡಪು, ಊರಲ್ಲಿ ಯಾರೂ ಮೈನ ರತರೂ ಒಳ್ಳು ಕಲ್ಲುಪೂಜೆ ಇದ್ದರೂ, ಕುಬಸ ಇದ್ದರೂ ಸೋಮಿ ಹಾಡದೆ ಮಂಗಲ ಕಾರ್ಯಗಳು ನಡೆಯುತ್ತಲೇ ಇರಲಿಲ್ಲ. ಹೆಣ್ಣು ಮಕ್ಕಳಿಗೆ ಮಂಗಲ ಕಾರ್ಯಗಳಲ್ಲಿ ಉಡಿಸುವ ಹಸಿರು ಸೀರೆಯ ಮೇಲೆ ಸೋಮಿಗೆ ಆಸೆ. ಸೋಮಿ ಯ ಗೆಳತಿ ಬಂಗಾರಿಯ ಅಪ್ಪ ಪೊಮ್ಮಗಳಿಗೆ ಹಸಿರು ಪಟ್ಟುವಟ್ಟೆ ತಂದಾಗ ಅವಳ ಸೀರೆಯನ್ನು ಕಂಡು, ಚಿಕ್ಕ ವಯಸ್ಸಿನಲ್ಲಿಯೇ ತಾನೂ ಒಂದು ಹಸಿರು ಸೀರೆ ಉಡಬೇಕೆಂದು ಆಸೆಪಟ್ಟಿದ್ದಳು. ಎಷ್ಟೋ ಸಲ ಅವಳು ತನಗೆ ಹಸಿರು ಸೀರೆ ಕೊಡಿಸೆಂದು ತಾಯಿಗೆ ಬೇಡಿದ್ದಳು. ಕಾಡಿದ್ದಳು. ಸೋಮಿ ಮೈನರೆದಾಗ ಅಪ್ಪ ಹಸಿರು ಸೀರೆ ತಂದಾನೆಂದು ಕನಸು ಕಟ್ಟಿದಳು. ಆದರೆ ಬಡತಾಯಿ ಮೂರುವರೆ ರೂಪಾಯಿಯ ಹಸಿರು ಖಣದ ಮೇಲೆಯೇ ಕಾರ್ಯ ಮುಗಿಸಿಬಿಟ್ಟರು.

ಲಗ್ನದಲ್ಲಿ ಗಂಡನಮನೆಯವರು ಜಾಂಬಳಿ ಬಣ್ಣದ ಒಂದು ಸೀರೆ, ಅರಿಷಿಣ ಪತ್ತಲು ಒಂದು; ಹೀಗೆ ಎರಡು ಸೀರೆಯ ಮೇಲೆ ಲಗ್ನ ಮುಗಿಸಿದರು.

ಕೆಂಚ ಹೆಣ್ಣುಮಗಳನ್ನು ಪಡೆದ ತಂದೆಯಲ್ಲವೇ? ಬೀಗರು ಕೇಳಿದ್ದ

ನ್ನೆಲ್ಲ ಕೊಟ್ಟಿದ್ದ. ಆದರೆ ಕೊನೆಗೆ ವರನ ತಾಯಿ "ತಾಯಿ ಸೀರೆ ಚಲೋ ಇಲ್ಲ" ಎಂದು ಜಗಳ ತೆಗೆದೇ ಬಿಟ್ಟಳು. ಬಡ ಕೆಂಚ ಬೇರೆ ಸೀರೆ ಎಲ್ಲಿಂದ ತಂದಾನು? ಕಿರಿಮಗಳು ಸೋಮಿಯನ್ನು ಅಂದು ಅಲ್ಲಿ ಬಿಟ್ಟು ಹೋದ. ಆ ಒಂದು ಕ್ಷುಲ್ಲಕ ಕಾರಣಕ್ಕಾಗಿ ಸೋಮಿಗೆ ತವರಿನವರ ಮುಖ ದೂರಾಯಿತು, ಅತ್ತಿಯ ಕಳುಏಲೆ ಅವಳು ಪೇಟೆಗೆ ಹೋಗಿ ಠೋಕ ವ್ಯಾಪಾರಕ್ಕಾಗಿ ಬರುವ ತಮ್ಮೂರ ಶೆಟ್ಟರ ಸಂಕಣ್ಣನನ್ನು ಭೆಟ್ಟಿಯಾಗಿ ತನ್ನ ತವರಿನ ವಿಷಯ ಕೇಳಿದ್ದಳು.

ಸೋಮಿ ಗಂಡ 'ಸೇತ್ಯಾ' ಅವ್ವ ಅಪ್ಪ ಹಾಕಿದ ಗೆರೆಯನ್ನು ದಾಟುವವನಲ್ಲ. ಸೇತ್ಯಾ ಮಳ್ಳ ಇದ್ದ ಅಂತ ಮನಿ ಮಂದೆಲ್ಲಾ ಅವನ ವವಲ್ಯ ಟಬರತೋರಿಸ್ತಿದ್ದರು. ಮೈ ಮುರಿದು ದುಡಿಯೋದು ಮತ್ತು ಕರಡಿ ಮಜಲಿನಲ್ಲಿ ಸಂಜಿ ತಾಳ ಬಾರಿಸುವದು: ಎರಡನ್ನೂ ಬಿಟ್ಟರೆ ಬೇರೆ ಕಡೆಗೆ ಅವನು ಮನಸ್ಸು ಹಾಕುತಿದ್ದಿಲ್ಲ.

ಸೋಮಿ ಅತ್ತಿ ಪಾರವ್ವ, ಸೋಮಿ ಅತ್ತಿ ಮಾವಂದಿರಿಗೆ ಮೈದುನರಿಗೆ ಅಂಜಿ ಸಾಯುತ್ತಿದ್ದಳು. ಗಂಡನ ಮುಖ ಎಂಟೆಂಟು ದಿನ ಕಾಣುತ್ತಿರಲಿಲ್ಲ. ಮಳ್ಳ ಸೇತ್ಯಾ ಕತ್ತಿಯೆಂಗ ದುಡಿದು ಮನ್ಯಾನ ದೊಡ್ಡವನ ಸಣ್ಣಾವರ ಕಡಿಂದ ಬೈಗುಳತ್ತಿನ್ನುತ್ತಿದ್ದ. ಇದೆನ್ನು ನೋಡಿ ಸೋಮಿಗೆ ಕೆಟ್ಟ ಅನಸ್ತಿತ್ತು. ದಿನಾನು ಸೇತ್ಯಾನ ತಮ್ಮಂದಿರು ಇಲ್ಲಾ, ಅವ್ವ ಹೊಲತ್ಕ ಬುತ್ತಿ ಒಯ್ದು ಕೊಡುತ್ತಿದ್ದರು. ಆದರ ಒಂದು ದಿನ ಹೊತ್ತೇರಿದರೂ ಅವನ ತಮ್ಮಂದಿರು ಮನೆ ಕಡೆ ಹಾಯಲಿಲ್ಲ. ಮುಳ್ಳ ಚುಚ್ಚಿ ಪಾರವ್ವನ ಕಾಲ ಸ್ವಲ್ಪ ನೋವಾಗಿತ್ತು, ಆದಕ ಪಾರವ್ವ "ಸೋಮಿ ಸೇತ್ಯಾಗ ರೊಟ್ಟಿ ಕೊಟ್ಟ ಬಾ!" ಅಂದಳು. ಸೋಮಿಗಾದ ಆನಂದ ಅಷ್ಟಿಷ್ಟಲ್ಲ. ಅಕಿ ತಲೆ ಹಾಕಿ ಅತ್ತಿ ಮಾತಿಗೆ ಒಪ್ಪಿಗೆ ಕೊಟ್ಟು, ಎಂಟು ರೊಟ್ಟಿ ಬಳ್ಳೊಳ್ಳಿ ಹಿಂಡಿ ಪುಂಡಿಪಲ್ಲೆ ಎರಡು ಉಳ್ಳಿಗಡ್ಡಿ ಕಲೆಸಿದ ನುಚ್ಚು ಕಟಕೊಂಡು ಬುತ್ತಿ ಗಂಟು ತಲೆಯ ಮೇಲೆ ಇಟಕೊಂಡು ಕುಡಿಯಲು ಗಿಣು ತತ್ರಾಣಿ ನೀರ ತುಗೊಂಡು ಹೊಲದ ಕಡೆಗೆ ಹೊರಟಳು. ಸೋಮಿ

ಹೊಲಾ ನೋಡಿ ಒಂದ ವರಸವಾಗಿತ್ತು. ಹೋದ್ಧ ಸೀಗಿ ಹುಣ್ಣಿವಿಗೆ ಆಕಿ ಚರಗಾ ಚಲ್ಲಾಕ ಹೊಲಕ್ಕೆ ಹೋದಾಕಿ ತಿರುಗಿ ಹೊಲದ ಮಾರಿ ನೋಡಿದ್ದಿಲ್ಲ. "ಇದ್ದ ಎರಡ ಎಕರೆದಾಗ ಎಲ್ಲಾರೂ ದುಡದ ಏನ ಮಾಡ್ತೀರಿ" ಅಂದು ಸೋಮಿ ಅತ್ತಿ ಬೇರೆಯವರ ಹೊಲಕ್ಕ ಆಕಿನ್ನ ದುಡ್ಯಾಕ ಕಳಸ್ತಿದ್ದಳು.

ಸೇತ್ಯಾ ಹಸದ ಹೊಲದಾಗ ಕುಂತಿದ್ದ, ಸೋಮಿ ಜೋಳದತೆನೆ ನೋಡುತ್ತಾ ಬೆಳೆದ ಎಳ್ಳಿನ ಹೊಲದಾಗ್ಯಾದು ಗಂಡನ ಗುಡಸಲಕ ಕಾಲಿಟ್ಟಾಗ ಆಕಿ ಕಾಲಾಗಿನ ಪಿಲ್ಲೆಯ ಸಪ್ಪಳಾ ಕೇಳಿ ಬೆಚ್ಚಿ ಬಿದ್ದ. ಒಮ್ಮೆಲೇ ಸೋಮಿನ್ನ ಕಂಡು ಅಚ್ಚರಿಪಟ್ಟು "ನಮ್ಮ ಅವ್ವ ಎಂತಾ ಚಲೋ ಅದಾಳ ನೋಡು. ಒಂದರೆ ದಿವಸ ನಿನ್ನ ಹೊಲಕ್ಕ ಕಳಸಿತಾಳಂತ ನನಗ ಖಾತ್ರಿ ಗೊತ್ತಿತ್ತು. ತಾ ತಾ ಲಗು ರೊಟ್ಟಿ ಹಸು ಬಾಳ ಆಗೇತಿ" ಅಂದ ಕೈ ತೊಳದಾ, ಸೋಮಿ ಗಂಡನ ಮಾರಿ ನೋಡುತ್ತಾ ನಾಕರೊಟ್ಟಿ ಪಲ್ಲೆ ನುಚ್ಚು ಹಚ್ಚಿಕೊಟ್ಟಳು. ರೊಟ್ಟಿತಿನ್ನುತ್ತ ಸೇತ್ಯಾ "ನೀ ಬಾಳ ಚಲೋ ಅಡಗಿ ಮಾಡ್ತಿ. ಆವರ ಅವ್ವ ಹಂಗ್ಯಾಕ ಅಂತಾಳೋ" ಎಂದು ಸೋಮಿ ಬಾಯಿಗೆ ಒಂದು ತುತ್ತು ಹಾಕಿದ. ಸೋಮಿಗೆ ಅಮೃತ ಉಂಡಾಂಗಾತು, ಸೋಮಿ ನಕ್ಕಳು. ಗಂಡನ ಮೆಚ್ಚುಗೆಯ ಮಾತು ಕೇಳಿ ಅವಳಿಗೆ ಹೊಟ್ಟೆ ತುಂಬಿತ್ತು. ಸೇತ್ಯಾ ಸೋಮಿಯನ್ನು ನೋಡುತ್ತ "ಲಗ್ನ ಆಗಿ ಒಂದು ವರಸಾತು. ನಿನ್ನನ್ನ ಒಂದ ಸಲ ಚಲೋತಾಂಗ ನೋಡಲಿಲ್ಲ. ಸೋಮಿ ನೀನು...ಬಾಳ ಚೆಲುವಿ..." ಎಂದು ಅಪ್ಪಿಕೊಂಡ. ಸೋಮಿ ಗಂಡನ ಅಪ್ಪುಗೆಯಲ್ಲಿ ಸ್ವರ್ಗ ಸುಖವನ್ನು ಆಚೆಗೆ ತಳ್ಳಿದ ಸುಖವನ್ನು ಅನುಭವಿಸಿ "ಬೆಳೆದ ಹೊಲದಾಗ ಕುಂತ ನಿನ್ನ ಸಂಗಾತಿ ಮಾತಾಡಬೇಕು ಅಂತ ಬಾಳ ದಿವಸದಿಂದ ಆಸೆ ಇತ್ತು. ಅದು ಇಂದ ಕೂಡಿ ಬಂತು" ಎಂದು ಹೇಳಿದಳು. ಇಬ್ಬರೂ ಬೆಳೆದ ಜೋಳದಹೋಲದಲ್ಲಿಅಡ್ಯಾಡಿಹೊಲದ ಬದುವಿನಲ್ಲಿರುವ ಬಸವಣ್ಣನ ಗುಡಿಯ ಮೇಲಿರುವ ಬೇವಿನ ಗಿಡದ ನೆಳಲಲ್ಲಿ ಕುಳಿತಾಗ ಸೇತ್ಯಾ ಸುಮ್ಮ ಸುಮ್ಮಕ ಕೈ ಬಡಿಯ್ಯಾಕತ್ತಿದ, ಆಗ ಸೋಮಿ "ನೀನ ಎಕರಡಿ ಮಜಲು ತಾಳ ತಾಳ ಚಂದ ಬಾರಸ್ತಿಯಲ್ಲಾ,ಆದನ್ನ ನನಗೂ ಕೇಳ

ಬೇಕ ಅನಸ್ತೈತಿ. ಆದರ...ಅತ್ತಿ...." ಸೇತ್ಯಾಗ ಈ ಮಾತ ಕೇಳಿ ಆನಂದ ಆತು. ತನ್ನ ಕರಡಿಮಜಲು ಕೇಳುವಕ್ಕಿಂತ ಮೊದಲ ಹೊಗಳಿಕೆ ಕೇಳಿ "ನೀನೂ ಹಾಡಾ ಚಂದ ಹಾಡತಿ" ಅಂತ ಅಂದಾಗ ಸೋಮಿಯ ಮಾರಿ ನಾಚಿಕೆಯಿಂದ ಕೆಂಪಾತು, ಸೇತ್ಯಾ "ಒಂದಿಲ್ಲ ಒಂದು ದಿವಸ ನಾ ಬಾರಿಸುವ.ಕರಡಿಮಜಲು ನೀ ಕೇಳಿ ಕೇಳ್ತಿ ಬಿಡು." ಎಂದು ಸಮಾಧಾನ ಹೇಳಿದನು, ಸೋಮಿ "ಇಳಿಹೊತ್ತು ಆಗಾತ ಬಂತು ಎಮ್ಮಿಗೆ ಒಂದು ಹೊರಿ ಹುಲ್ಲು ಮಾಡಬೇಕು" ಎಂದು ಎದ್ದಳು. ಸೇತ್ಯಾ "ನಾ ಮಾಡಿ ಕೊಡ್ತೀನಿ ಬಿಡು" ಎಂದು ಕೈಯಲ್ಲಿ ಕುಡಗೋಲ ಹಿಡಿದು ಕೈಗೂಡಿದ. ತಾಸನ್ಯಾಗ ಒಂದು ದೊಡ್ಡ ಹೊರಿ ಹುಲ್ಲ ಮಾಡಿದರು. ಸೇತ್ಯಾ ಸೋಮಿಗೆ ಹುಲ್ಲ ಪೇಂಡಿ ಹೊರಿಸಿದನು.

ಮನೆ ಮುಟ್ಟುದಕ್ಕ ತಡಾ ಅತ್ತಿ ಬೈಗುಳ ಸುರು ಆದವು. "ಇಷ್ಟ ಹೊತ್ತ್ಯಾಕ? ಊರ ಮುಂದಿನ ಹೊಲಾ ಬುತ್ತಿಕೊಟ್ಟೆ ಒಂದ ಪೆಂಡಿ ಹುಲ್ಲ ಮಾಡಿಕೊಂಡ ಬರಾತ ಹೊತ್ತ್ಯಕ್ಕ ಮುಳಗಿತು. ಅದಕ್ಕ ನಿನ್ನ ಕೈಯಾಗ ಬುತ್ತಿ ಕೊಟ್ಟೆ ಕಳಿಸುದಿಲ್ಲ. ಮನ್ಯಾನ ಕೆಲಸ ಹತ್ತೈತೂಂತ ತಡಾಮಾಡಿದೇನು?" ಎಂದು ಉಸಿರು ಬಿಡದ ಹಾಗೆ ಬೈಯಹತ್ತಿದಳು.

ಸೋಮಿ ಹುಲ್ಲಿನ ಹೊರೆ ಒಗೆದು ಒತ್ತಿ ಬಂದ ಅಳುವನ್ನು ನುಂಗುತ್ತ ಒಳಗೆ ಹೋದಳು. ಎಷ್ಟು ತಡೆದರೂ ಒತ್ತಿ ಬರುತ್ತಿರುವ ಕಣ್ಣೀರನ್ನು ಸೆರಗಿನಿಂದ ಒರೆಸಿಕೊಂಡು ಬೇರೆಯವರಿಗೆ ತೋರಗೊಡದ ಹಾಗೆ ಒಳಗೊಳಗೆ ಅಳುತ್ತ ಅಡಿಗೆ ಪ್ರಾರಂಭಿಸಿದಳು. ಮೈದುನ ಬಂದು "ಅಡಿಗೆ ಇಷ್ಟ ಹೊತ್ತ ಆಗಾತ ಎಲ್ಲಿ ತಿರಗಾಕ ಹೋಗಿದ್ದಿ" ಎಂದನು. ಮಾವ "ರೋಗಿಗಳಿಗೆ ಅಡಿಗಿ ಮಾಡಿದ್ಹಾಂಗ ಖಾರಾ ಉಪ್ಪ ಇಲ್ಲದಕ್ಕ ಅಡಿಗಿ ಮಾಡ್ತಾಳ" ಅಂದ. ಅತ್ತಿ "ಅವರಪ್ಪ ಇಂತಾದಕ್ಕ ಕಲಸ್ಯಾಗಳ" ಅಂದಳು. ಸೋಮಿಯ ತವರಿನವರನ್ನು ಬೈದಾಗಲೇ ಅವರೆಲ್ಲರಿಗೆ ಹೊಟ್ಟೆ ತುಂಬುತ್ತಿತ್ತು. ಇದೇ ರೀತಿ ಎಲ್ಲರಿಗೂ ಸೋಮಿ ಮನೆಯಲ್ಲಿ ಬೇಡದವಳಾಗಿದ್ದಳು ದೊಂದು ಸಲ ಅವಳು "ಲಗ್ನ ಆಗುವ ಮೊದಲೇ ಸುಖವಾಗಿದ್ದೆ"

ಎಂದು ಅಂದುಕೊಳ್ಳುತ್ತಿದ್ದಳು. ತನ್ನ ಸುಖ ದುಃಖ ತಾಯಿಗೆ ಹೇಳಬೇಕೆಂದರೂ ಅವಳನ್ನು ಕಾಣದ ಜೀವ ಜಡಮನ ಹೋತ್ತು ಕಣ್ಣೀರು ಸುರಿಸುತ್ತಿತ್ತು. ಅಳುವೇ ಆವಳ ಸಂಗಾತಿಯಾಗಿತ್ತು.

ಲಗ್ನ ಆಗಿ ಎರಡ ವರಸ ಆದರೂ ಗಂಡನ ಮನೆಯವರು ಒಂದ ಸೀರಿ ಕೊಡಿಸಿರಲಿಲ್ಲ, ಲಗ್ನದಾಗಿನ ಆರಿಷಿಣ ಪತ್ತಲ ಹರದು ದಿಂಡ್ಹಾಕಿದ್ದಳು. ಅದರ ಜೊತೆ ಅವ್ವ ಕೊಟ್ಟ ಒಂದ ಸೀರಿ ಪಡಕಿ ಆಗಿತ್ತು.

ಚೆಂದಾನ ಚೆಲುವಿ ಸೋಮಿಯ ಮಾರಿ ಬಾಡಿ ಬಿಟ್ಟಿತ್ತು. ಸೋಮಿಯ್ಯ ಈಗ ಒಂದು ದಿನವೂ ಬಾಯಿ ಬಿಟ್ಟು ಹಾಡಿರಲಿಲ್ಲ. ಯಾರ ಮನೆಯಲ್ಲಿ ಕಾರ್ಯ ಇದ್ದರೂ ಅತ್ತಿಯೇ ಆರತಿ ಮಾಡಲು ಹೋಗುವಳು. ಅಂತಹ ಪ್ರಸಂಗದಲ್ಲಿ ಸೋಮಿ ತಾನು ಹಾಡುತ್ತಿದ್ದ ಹಾಡುಗಳನ್ನು ನೆನೆದು ಕಣ್ಣೀರು ಹಾಕುತ್ತಿದ್ದಳು.

ಮದುವೆಯಾದ ಎರಡು ವರುಷದ ನಂತರ ಸೋಮಿ ಬಸಿರಾದಳು. ಸೋಮಿಗೆ ಎಲ್ಲಿಲ್ಲದ ಸಂತಸ. ಒಂದು ದಿನ ಗಂಡನಿಗೆ ಈ ಸುದ್ದಿ ಹೇಳಿದಳು. ಸೇತ್ಯಾಗೂ ಆನಂದ ಆಗಿತ್ತು. ಪಾರವ್ವಳಿಗೆ ಇದು ತಿಳಿಯಲು ಬಹಳ ದಿನಗಳು ಹಿಡಿಯಲಿಲ್ಲ. ಸೋಮಿ ಕದ್ದು ಒಂದು ದಿನ ಬಸ್‌ಸ್ಟ್ಯಾಂಡಗೆ ಹೋದಾಗ ಅವಳ ತವರೂರಿನ ನೇಕಾರ ಸಂಕ್ರವ್ವ ಭೆಟ್ಟಿ ಆದಳು.

ಸೋಮಿ "ಸಂಕ್ರವ್ವಕ್ಕಾ.." ಎಂದು ಕರೆದಳು.

ಸಂಕ್ರವ್ವ "ನಿಮ್ಮಪ್ಪಗ ಆರಾಮ ಇಲ್ಲ. ಒಂದುವಾರ ಆತು ಮೈ ಕಾಯಾಕ್ಕತ್ತೇತಿ" ಅಂದಳು. ಸೋಮಿಗೆ ಜೀವವೇ ಹೋದಂತಾತು ಕಣ್ಣೀರು ತಂದು "ಡಾಕ್ಟರರಿಗೆ ತೋರಿಸ್ಯಾರಿಲ್ಲೋ ಸಂಕ್ರವ್ವಕಾ"

"ತೋರಸ್ಯಾರವಾ ನಿನ್ನ ಸಲುವಾಗಿ ಅಕಿ ಹೊಟಿಬ್ಯಾನಿ ಹಚಕೊಂಡಾಳ ಅರಾಮ ಅದಿ ಇಲ್ಲೋ ಸೋಮಿ"

"ಆರಾಮ ಅದೀನಿ"

"ಏನ ಕೆಲಸಿತ್ತು"?

"ಸಂಕ್ರವ್ವಕ್ಕಾ ನಾ ಆರಾಮ ಅದೀನಿ. ಅತ್ತಿ, ಮಗಳಕ್ಕಿಂತ ಹೆಚ್ಚ ನೋಡಕೋತಾಳ. ಮಾವ ಮೈದನರು ಎಲ್ಲಾರೂ ಚಲೋ ಅದಾರ ನನ್ನಾಂವ ನನ್ನ ಮ್ಯಾಲ ಬಾಳ ಪ್ರೀತಿ ಅದಾನಂತ ಹೇಳು ಮತ್ತ....ಮತ್ತ ......

"ಏನು ಸೋಮಿ"

ನಾಚುತ್ತ ಸೋಮಿ, "ಎರಡತಿಂಗಳಾಗೇತಿ ಅಂತ ಅವ್ವಗ ಹೇಳು"

"ಹೇಳ್ತಿನಿ ಬಿಡು"

ಯಾರರೆ ನೋಡಿಗಿಡ್ಯಾರೆಂದು ಸೋಮಿ ಮನದಲ್ಲಿ ಅಂಜಿ "ಸಂಕ ವಕ್ಕಾ ನಾ ಹೋಗ್ತೀನಿ" ಎಂದು ಮನೆ ಹಾದಿ ಹಿಡಿದಳು. ತಾಯಿಯನ್ನು ನೋಡಲು ಅವಳ ಜೀವ ಹಂಬಲಿಸುತ್ತಿತ್ತು.

ಸೋಮಿಯ ಜೀವ ತಡೆಯಲಿಲ್ಲ. ಅತ್ತಿಯ ಕಳುವಿಲೆ ತನ್ನ ಅವ್ವನ್ನ ನೋಡಾಕ ಸೇತ್ಯಾನನ್ನು ಕಳಸಿದಳು. ಮಳ್ಳ ಸೇತ್ಯಾ ಊರಿಗ್ಹೋಗಿ ಬಂದು ತನ್ನ ಅವ್ವನ ಮುಂದನ್ಽ ಸೋಮಿಗೆ "ಅತ್ತಿ ಆರಾಮ ಅದಾಳ, ನಿನಗ ಹಸರ ಸೀರಿ ತರತಾಳಂತ" ಎಂದು ಹೇಳಿದಾ.

ಪಾರವ್ವಾ ಸೇತ್ಯಾ ಊರಿಗ್ಹೋದದ್ದ ತಿಳಿದು ಊರಿದು ಎದೆ ಬಡಿದು ಕೊಂಡಳು. ನೆಲ ಬಡಿದು "ನನ್ನದು ಈ ಮನ್ಯಾಗ ಏನೂ ನಡಿಯುವದಿಲ್ಲ ಈ ರಾಕ್ಷಸಿ ತನ್ನ ಕಾರಭಾರ ನಡಸ್ತಾಳ. ಸೇತ್ಯಾ ಊರಿಗ್ಹೋಕಾಕ ರೊಕ್ಕ ಇಲ್ಲಿಂದ ಬಂತು? ಲಗ್ನ ಆದಾಗಿನಿಂದ ನಾವು ಯಾರೂ ನಿನ್ನ ತವರಮನಿ

ಕಟ್ಟಿಕಲ್ಲ ಹತ್ತಿದ್ದಿಲ್ಲ. ಹಿರ್‍ಯಾರಿಗೆ ಈಕಿ ಮಾನಾ ಕೊಡುದಿಲ್ಲ. ಈಕಿ ಸರ್ವನಾಶಾಗಾ........"ಎಂದು ಜೋರಾಡಿ ಅಳಹತ್ತಿದಳು.

ಸೇತ್ಯಾ "ಯವ್ವಾ ಯತ್ತಿ ಚಲೋ ಆದಾಳ. ಹೋದಗಳಿಗೆ ಚಾ ಕಾಸಿ ಕೊಟ್ಟಳು. ಶ್ಯಾಂವಿಗಿ ಮಾಡಿ ಮಿದು ಸಕ್ಕರಿ ತುಪ್ಪಾ ನೀಡಿದಳು. ಯವ್ವಾ ನೀ ಒಂದರೆ ದಿವಸ ನನಗೆ ಹಂಗ ನೀಡಿ ಏನು? ನನ್ನ ಈ ಮನ್ಯಾಗ ಯಾರೂ ಸೇರುವದಿಲ್ಲ" ಎಂದು ತುಟಿ ಮುಂದೆ ಮಾಡಿ ಪೆದ್ದ ಪೆದ್ದವಾಗಿ ನುಡಿದನು.

ಪಾರವ್ವ ಕೈ ಮೇಲೆ ಮಾಡಿ "ಸೇತ್ಯಾ ನಿನಗ ಅವರು ಮಾಟಾಮಾಡಿ ಸ್ಯಾರಲೇ ಮೊದಲ ಇಕಿಸ್ಯ ಮಾಡಿಸ್ಯಾಳ. ಒಂದು ದಿನ ನನ್ಮಗಾ ನನ್ನ ಮುಂದ ನಿಂತ ಮಾತಾಡತಿದ್ದಿಲ್ಲ. ಈ ಗಯ್ಯಾಳಿ......."ಎಂದು ಕೈಬಟ್ಟ ಮುಃರಕೋತ ರಾಗವಾಗಿ ಹಾಡಿ ಅತ್ತಳು.

ಸೇತ್ಯಾ ಹೊಲದ ಕಡಗೆ ಹೋದ, ಅವನು ಹೋದ ಮೇಲೆ ಸೋಮಿ ಅತ್ತೆಯಿಂದ ಮತ್ತಷ್ಟು ಅನ್ನಿಃಕೊಂಡಳು, ಅತ್ತಳು, ಆದರೆ ಅವ್ವ ಹಸಿರು ಸೀರೆ ತರವಳೆನ್ನುವದ. ದುಃಖದ ಕಾರ್ಮೋಡದಲ್ಲಿ ಒಂದು ಸುಖದ ಮಿಂಚು ಹೊಳೆದು ಮಾಯವಾದಂತಾಯಿತು.

ಭೂತಾಯಿಗೆ ಬೆಳೆ ಬಂದ ಸಿರಿಯ ಸೊಬಗಿನಂತೆ ಸೋಮಿಯ ಮೈ ತುಂಬಿಕೊಂಡಿತು, ಬಣ್ಣ ಬದಲಾಯಿತು. ಮಾಸಿದ ಹರಕು ಸೀರೆಯಲ್ಲಿ ಸೋಮಿ ಚಂದ ಕಾಣುತ್ತಿದ್ದಳು. ಭೂತಾಯಿಯ ಹಾಗೆ ತಾನೂ ಇನ್ನು ಹಸಿರುಡುವೆ ಎನ್ನುವದನ್ನು ನೆನಿಸಿಕೊಂಡಾಗ ಅವಳ ಸಂತಸಕ್ಕೆ ಪಾರವೇ ಇರಲಿಲ್ಲ.

ಐದು ತಿಂಗಳು ತುಂಬತ್ತಲೂ ಸೋಮಿಯ ತವರಿನಿಂದ ಸೀರೆ ಮಾಡಲು ಬರುವೆವೆಂದು ಬರೆದ ಕಾಗದ ಬಂತು. ಈಗ ಪಾರವ್ವಗ

ಮತ್ತಷ್ಟು ಅಹಂಕಾರ. ಲಗ್ನದ ಒಳ್ಳೆಯ ಸೀರೆ ಹಾಗೆ ಬಾಕಿ ಉಳಿದಿದೆ. ಅದನ್ನು ತಂದರೆ ಸೀರೆ ಮಾಡಲು ಬರಬೇಕು ಇಲ್ಲವಾದರೆ ಇಲ್ಲ ಎಂದು ಕಾಗದ ಬರೆಯಿಸಿದಳು. ಕೆಂಚ ಅದಕ್ಕೆ ಒಪ್ಪದಿದ್ದರೂ ಸಿದ್ದವ್ವ "ಹಿಂಗs ಜಗಳಾಡಕೋತ ಕುಂತರ ನಮ್ಮ ಮಗಳ ಮಾರಿ ಯಾವಾಗ ನೋಡುದು? ನನ್ನ ಸೋಮಿಗೆ ಹಸರ ಸೀರಿ ಮ್ಯಾಲ ಬಾಳ ಆಸೆ. ಹೆಣ್ಣ ಹಡದವರು ಸೋಲಾಕsಬೇಕು. ನಾ ಇದ್ದ ಪಡಕಿ ಮ್ಯಾಲ ಕಾಲ ಹಾಕ್ತಿನಿ. ಬೀಗಿತ್ತಿಗೆ ಒಂದ ಚಲೋ ಸೀರಿ ತುಗೊ" ಎಂದು ಹೇಳಿದಳು. ಕೆಂಚ ಒಪ್ಪಿ ಮಗಳಿಗೆ ಪಸಿರು ಸೀರೆ ಹಸಿರು ಖಣ ಬೀಗತ್ತಿಗೆ ಒಂದು ಚಲೋ ಸೀರೆ ತಂದ. ತಮ್ಮ ಕೈಲಾದಷ್ಟು ಹಿಟ್ಟಕ್ಕಿ, ಬುತ್ತಿರೊಟ್ಟಿ, ಹಸಿರು ಬಳೆ. ದಂಡಿ ಎಲೆ ಅಡಿಕೆ ಎಲ್ಲ ಸಜ್ಜು ಮಾಡಿಕೊಂಡು ಗಂಡ ಹೆಂಡತಿ ಇಬ್ಬರು ಕುಬುಸಕ್ಕೆ ಹೋದರು.

ಬೀಗರು ಬರುವದೇ ತಡ ಎಲ್ಲ ಸಾಮಾನು ನೋಡಿ ಪಾರವ್ವ "ಇಷ್ಟ ಹಿಟ್ಟಕ್ಕಿ ಯಾರ ಮೂಗಿಗೆ ಪರಸಾಕ ತಂದೀರಿ" ಎಂದು ಹೀಯಾಳಿಸಿ ಮೂಗು ಮುರಿದಳು. ತನ್ನ ಸೀರಿ ಒಳ್ಳೆಯದೆಂದು ತಿಳಿದು ಬೇರೆ ಜಗಳ ತೆಗೆದಳು.

ಕೆಂಚ ಮಗಳನ್ನು ಒಬ್ಬಕ್ಕಿನ್ನ ಕುಂದರಿಸಿ ಕುಬಸಾ ಮಾಡ್ತೀನಿ ಅಂತ ಅಂತಿದ್ದ. ಆದರ ಪಾರವ್ವ "ನನ್ನ ಮಗನ ಕುಂದರಿಸಿ ಆಯಾರಿ ಮಾಡಿರಿ. ಇಬ್ಬರೂ ಕುಂತರ ಚಂದ. ಅವನ ಶಡಗರಾ ಎಂದ ಕಾಣಬೇಕು" ಎಂದಳು.

ಈ ಮಾತು ಕೇಳಿ ಕೆಂಚನ ಎದೆ ಒಡೆಯಿತು. ಈಗಿನ ಸಾಲ ಸಾಕಷ್ಟು ಆಗಿತ್ತು. ಮತ್ತ ಅಳ್ಯಾಗ ಆಹೇರಿ ಎಲ್ಲಿಂದ ತರಲಿ? ಅಂತ ತಲಿಗೆ ಕೈ ಹಚ್ಚಿಕೊಂಡ ಕುಂತಾ. ಸಿದ್ದವ್ವ "ಧೋತರ ಟಾವೆಲ ತಂದಬಿಡ ಈ ಸರದಿ ನಾ ಮಗಳ ಬಿಟ್ಟು ಹೋಗಾಕಲ್ಲ" ಅಂತ ಅಳಾಕ್ಹತ್ತಿದಳು, ಕೆಂಚ ಇನಸ್ನೂ ತಂದ.

ಮಧ್ಯಾಹ್ನ ಎಲ್ಲರ ಊಟ ಮುಗಿಯಿತು. ಇಂದಂತೂ ಸೋಮಿಗೆ ಹೋಗೇ ಹಿಗ್ಗು. ಇಂದು ಅತ್ತೆ ಬಂಗಾರದ ಬಳೆ ಇಡಸಬಹುದೆಂದು ತಿಳಿದಿದ್ದಳು. ಲಗ್ನದ ದಿವಸ ತೊಡಿಸಿ ಮಾರನೆಯ ದಿವಸ ತೆಗೆದುಕೊಂಡ ಅತ್ತೆ ಕೈಗೆ ಬಂಗಾರದ ಬಳೆ ಮುಟ್ಟಿಸಿರಲಿಲ್ಲ. ತಾನೇ ಹಾಕಿಕೊಂಡು ಕೈ ತಿರುವಿ ಮಾತನಾಡಕೋಂತ ಅಡ್ಡಾಡುತ್ತಿದ್ದಳು. ಆದರೆ ಇಂದೂ ಸೋಮಿಯ ಕೈಗೆ ಬಂಗಾರದ ಬಳೆ ಬರಲಿಲ್ಲ. ಆರತಿ ಮಾಡಲು ಇಬ್ಬರನ್ನೂ ಕುಳ್ಳಿರಿಸುವಾಗ ಪಾರವ್ವ ತನ್ನ ಮಗನಿಗ "ಟರ್ಲಿನ್ ಶರ್ಟ ಬೇಡು. ಕೊಟ್ಟರ ಕುಂದರು ಇಲ್ಲದಿದ್ದರ ಕುಂದರುದಿಲ್ಲ ಅಂತ ಹೇಳು" ಅಂತ ಕಲಿಸಿದ್ದಳು. ಸೇತ್ಯಾ ಅವ್ವನ ಮಾತ ಕೇಳಿ ಒಂದ ಕಡೆ ಕುಳಿತುಕೊಂಡ, ಕೂಡಿದ ಮಂದ್ಯಾಗ ಕೆಂಚ ಪಾರವ್ವಗ ಕೈ ಮುಗದ ಕೇಳಿಕೊಂಡ. ಸಿದ್ದವ್ವ ಕಾಲ ಬಿದ್ದ ಕೇಳಿಕೊಂಡಳು. ಆದರ ಪಾರವ್ವ ಜಪ್ಪ ಅನ್ನಲಿಲ್ಲ. ಮಗನ ಮ್ಯಾಗ ಹಾಕಿಬಿಟ್ಟಳು. ಸೇತ್ಯಾ ಏಳಲಿಲ್ಲ. ರಾತ್ರಿ ಒಂಭತ್ತಾದರೂ ಸೇತ್ಯಾ ಏಳಲಿಲ್ಲ. ಬಂದ ಮಂದಿ ಹೊರಟು ಹೋದರು. ಕೆಂಚ ನೆರೆದ ಹಿರ್‍ಯಾರಿಗೆ ತನ್ನ ಪರಿಸ್ಥಿತಿ ಹೇಳಿದ. ಅವರೂ ಪಾರವ್ವಗ ಹೇಳಿದರು, ಯಾರ ಮಾತನ್ನೂ ಅವಳು ಕೇಳಲಿಲ್ಲ.

ನಿರುಪಾಯರಾಗಿ ಕೆಂಚ ಸಿದ್ದವ್ವ ತಂದ ಎಲ್ಲಾ ಸಾಮಾನು ಕಟಕೊಂಡ ತಿರುಗಿ ಹೊಂಟರು.

ಸೋಮಿ ಅತ್ತಿಯ ಮಾರಿ ಅವ್ವನ ಮಾರಿ ಒಮ್ಮೆ ನೋಡುತ್ತಿದ್ದಳು, ಮುಂಜಾನೆಯಿಂದ ಅವಳ ಮನದಲ್ಲಿ "ಆರುಂಬು ತಿಂಗಳಿಗೆ ಹಸಿರು ಸೀರೆ ಹಸಿರು ಕುಪ್ಪುಸ ಮಲ್ಲಿಗೆ ದಂಡಿ ಬಗಿಸ್ಯಾಳ......" ಎನ್ನುವ ಸಾಲು ನೆನಪಾಗಹತ್ತಿತ್ತು. ಸೋಮಿಯ ಹಸಿರು ಸೀರೆ ಬಾಗಿಲಿಗೆ ಬಂದು ಮರಳಿ ನಡೆದಿತ್ತು. ಸೋಮಿ ಬಹು ದಿನಗಳಿಂದ ಬಯಸಿದ ಭಾಗ್ಯ ಇಂದು ದೊರಕತೈತಿ ಅಂತ ತಿಳಿದಿದ್ದಳು. ಆದರ......ಈ ಒಂದು ಗಳಿಗೆಯಲ್ಲಿ ಅವಳ ಸಂತೋಷಕ್ಕೆ ತಣ್ಣೀರೆರಚಿದಂತಾಗಿತ್ತು, ತವರಿಗೆ ಹೋದ ಮೇಲೆ ತಾಯಿಯ ಮುಂದೆ ಏನೆಲ್ಲ ಹೇಳಬೇಕು ಎಂದು ಸೋಮಿ ಗ್ಯಾನಿಸಿದ್ದಳು.

ಊರ ಜನಾ ತನಗ ಕುಬಸಾ ಮಾಡ್ತಾರ......ಭೂಮಿ ತಾಯಿ ನಮ್ಮವ್ವ ಹಸರುಟ್ಟಾಂಗ ನಾನು ಹಸರುಡ್ತೀನಿ ಅನ್ನು ಆಸೆ ಆಗಿತ್ತು. ಆದರೆ....

ಕೆಂಚ ಸಿದ್ದವ್ವ ಮಗಳ ಮುಖ ನೋಡುತ್ತ ಹೊಸ್ತಿಲು ದಾಟಿದರು. ಹಸಿರುಸೀರೆ ಮಗಳಿಗೆ ಕೊಡಬೇಕೆಂತಲೇ ಅವರು ಸಾಲ ಮಾಡಿದ್ದರು. ಇಂದು ಸೋಮಿಗೆ ಅತ್ತೆಯ ಬಗೆಗೆ ಸಿಟ್ಟು ಬಂದಿತು. ಮಳ್ಳ ಗಂಡನ ಮಾರಿ ಒಮ್ಮೆ ನೋಡಿದಳು. "ಅಪ್ಪ ಅವ್ವಾ ದೂರ ಹೋದರೇನೋ" ಎಂದು ತೊಲ ಬಾಗಿಲಿಗೆ ಹೋಗಿ ನೋಡಿದಳು. ಸ್ವಲ್ಪ ದೂರ ಅವರು ಹೋಗಿದ್ದರು.

ಈಗ ಪಾರವ್ವ ಬೈಗುಳ ಪ್ರಾರಂಭ ಮಾಡಿದಳು. ಸೋಮಿ ಒಳಗೆ ಒಂದು ಕಂಬದ್ದತ್ತಿರ ಕುಸಿದು ಕುಂತಳು.

ಸೋಮಿ ಮನಸ್ಸಿನಲ್ಲಿಯೇ ಕೊರಗಿ ಕೊರಗಿ ಸೊರಗಿದಳು. ಆಕೆಗೆ ಹೆಚ್ಚಿಗೆ ಕೆಲಸ ಮಾಡಲು ಆಗುತ್ತಿದ್ದಿಲ್ಲ. ಆದರ ಅತ್ತಿ ಕಾಟಕ್ಕ ಅಷ್ಟು ಮಾಡಲೇಬೇಕಾಗಿತ್ತು.

ಅಂದ ದೀಪಾವಳಿ ಪಾಡ್ಡೆ. ಸೇತ್ಯಾ ರಾತ್ರಿ ಕರಡಿಮಜಲು ಬಾರಸಾಕ ಕಲ್ಲಪ್ಪನ ಗುಡಿಗೆ ಹೋಗಿದ್ದಾ. ಇದನ್ನು ತಿಳಿದ ಸೋಮಿ ಅತ್ತಿ ಮಾವ ಮೈದುನ ಯಾರನ್ನು ಕೇಳದೆ ಒಬ್ಬಾಕೀನss ಸೇತ್ಯಾನ ಕರಡಿಮಜಲು ಬಾರಸುದನ್ನ ಕೇಳಾಕ ಹೋದಳು. ಸೋಮಿ ಅಲ್ಲಿ ಬಂದಿದ್ದ ಕಂಡ ಸೇತ್ಯಾ ಬಳೆ ಹುರುಪಲೇ ತಾಳಬಾರಸಿದ. ಅವನ ಕುಣಿತ ಕೈಚಳಕ ತಾಳದಿಂದ ಹೊರಹೊಮ್ಮುವ ನಾದಾ ಕೇಳಿ ಸೋಮಿ ಸೇತ್ಯಾನ ಬಗ್ಗೆ ಅಭಿಮಾನ ತಾಳಿದಳು. ತನ್ನ ಗಂಡ ಎಂಥಾ ಕಲಾಕಾರ ಅನ್ನುದನ್ನ ತಿಳಿದುಕೊಂಡಳು. ಎಲ್ಲಾರ ಸೇತ್ಯಾ ಮಳ್ಳ ಕಣ್ಣಾಗ ಆದರ ಅವನು ಎಂಥಾ ಕಲಾಕಾರ. ನನ್ನ ಗಂಡ ಮಳ್ಳ ಅಲ್ಲಾ......ಮಳ್ಳ ಅಲ್ಲಾ......ಅಂದಳು. ನಿನ್ನೆ ರಾತ್ರಿ ತಾನು ಕೇಳಿದ ಮಾತು ಸೋಮಿಗೆ ನೆನಪಾಯಿತು—"ನೀನು ನಮ್ಮವ್ವಾ ಅಪ್ಪಾ ಬಂದಾಗ ಟರ್ಲಿನ್ ಶರ್ಟ ಯಾಕ ಕೇಳಿದಿ?" "ಅಪ್ಪ ಕೇಳ ಅಂದಿದ್ದಳು;

ಕೇಳಿದ್ನಿ?" "ಕಪಟ ಇಲ್ಲ ವಂಚನೆ ಇಲ್ಲ. ನನ್ನ ತವರ ಮನಿಗ್ಹೋಗಿ ಅಪ್ಪನ ನೋಡಿ ಬಂದಾಗೂ ಹಿಂಗs ಉತ್ತರಾಕೊಟ್ಟಿದ್ದ. ನನ್ನ ನಲಿಬ ಬಾಳಚಲೋ ಬಾಳ ಚಲೋ......" ಎಂದುಕೊಂಡು ಸೋಮಿ ದಡಾ ದಡಾ ಮನಿಗೆ ಬಂದಳು. ಸೇತ್ಯಾ ಕರಡಿಮಜಲು ಮುಗಿಸಿ ಪಾರಿ ಜಾತ ನೋಡಾಕ ಕುಂತ.

ಸೋಮಿ ಮನಿಗೆ ಬಂದಕೂಡಲೇ ಪಾರವ್ವ ಸಿಕ್ಕ್ಯಾಂಗೆ ಬೈದಳು. ಸೋಮಿಗೆ ತನ್ನ ಗಂಡ ತಾಳಾ ಬಾರಸೂದ ಕೇಳಿ.ಆನಂದ ಆಗಿತ್ತು.

ಸೋಮಿ ಒಳಗಿನ ಕೋಲಿಗ್ಹೋಗಿ ಮಲಗಿದಳು. ಸೇತ್ಯಾ ನಸಕ್ಲೆ ಬರುದ್ರ್ಯಾಗ ಆಕಿ ಏನೇನೋ ಬಡಬಡಸಾಕ ಹತ್ತಿದ್ದಳು. ಸೇತ್ಯಾ ಘಾಬರಿ ಯಾದ, ಅವ್ವನ್ನ ಕರದಾ. ಓಟಓಟ ಅನ್ನಕೋತ ಪಾರವ್ವ ಬಂದಳು. ಸೋಮಿ ನಿಸ್ತೇಜ ಆಗಿ ಬಿದ್ದಿದ್ದಳು. ಆಕಿ ಕಣ್ಣ ಮುಂದ ಭೂಮಿ ತಾಯಿ ಹಚ್ಚನ್ನ ಹಸರಸೀರಿ ಉಟ್ಟ ನಿಂತ್ಹಾಂಗ ಆಗಿತ್ತು. ಆ ಭೂಮಿ ಉಡ್ಯಾಗ ತಾ ಸಣ್ಣಾಕಿ ಇದ್ದಾಗಿನಿಂದ ಇದ್ದದಿನಾ ನೆನಪಾದು ಆಕಿಯಂಗ ಹಸರಸೀರಿ ಉಡಬೇಕಂತ ಬಯಸಿ ನಕ್ಕಳು. ಈಗ ಎಂದೂ ಕಾಡದ ಸೋಮೀ ಬಾಯಿಂದ ಸ್ವರಾ ಹೊಮ್ಮಿತು. ಆರಂಬು ತಿಂಗಳಿಗೆ ಹಸಿರು ಸೀರೆ ಹಸಿರು ಕುಪ್ಪುಸ......ಮಲ್ಲಿಗೆ ದಂಡಿ ಬಗಿ......"ಎಂದಳು. ಆದರ ಒಮ್ಮೆಲೇ ಹಸರುತೊಟ್ಟ ಭೂಮಿದೇವಿ ಮಾಯವಾಗಿ ಬಿಸಲಿನ ತಾಪಕ್ಕೆ ಭೂಮಿ ಬಿರಕ ಬಿಟ್ಟಂಗ್ಹಾತು. ಬರಗಾಲ...ಹಸರ ಎಲ್ಲಿ... ಹ... ...ಸ......ರು" ಎಂದು ಬಾಯಿ ಮುಚ್ಚಿದಳು. ಗಂಡ ಕರಡಿ ಮಜಲಿನ ಸಂಗತಿ ತಾಳ ಬಾರಸಾಕ ಹತ್ತಿದ್ಹಾಂಗ ಆಗಿತ್ತು. ತೀವ್ರಗತಿ ಯಿಂದ ಬಾರಿಸಿ ಕುಣ್ಯಾಕ್ಹತ್ತಾಂಗಿತ್ತು. ಸೋಮಿ ಮಳ್ಳ ಗಂಡನ ಕಡೆ ನೋಡಕೋತ ಪ್ರಾಣಾಬಿಟ್ಟಳು.

ಪಾರವ್ವ ಜೋರಾಗಿ ಅಳಲು ಸುರು ಮಾಡಿದಳು. ಮಂದಿ ಕೂಡಿ ದರು. ಪಾರವ್ವ ಸೋಮಿ ತವರೂರಿಗೆ ಹೇಳಿ ಕಳಿಸಿದಳು. "ನನ್ನ

ಸೊಸಿ ರೂಪದಾಗ ಗುಣದಾಗ ಯದರಾಗೂ ತಗ್ಯಾಂಗಿದ್ದಿಲ್ಲ. ಅಂಜಿ ಬಾಳಿ ಮಾಡಿದಳು...ನಾ ಹ್ಯಾಂಗ ಮಾಡಲ್ಯರೇ ಯವ್ವಾ. ಸೋಮವ್ವ ಏಃ ನನ್ನ ಬಿಟ್ಟ ಎಲ್ಲಿ ಹೋದಿ. ನಿನ್ನ ಬದಲಿ ನಾ ಹೋಗಬೇಕಾಗಿತ್ತು ನಿನ್ನಂತ ಸೊಸಿ ಸಿಗಾಕ ನಾ ಪಡದ ಬಂದಿದ್ನಿ...ಸಾವ ನನಗ ಬರಬಾರ ದಾಗಿತ್ತs ಆ ಶಿವಾ ಬಾಳ ಖೊಟ್ಟಿ...ನನ್ನ ಸೊಸಿ ಬಂಗಾರದಂತಾಕಿ... ಎಂದು ಹಾಡ್ಯಾಡಿ ಅಳಾಕ್ಹತ್ತಿದ್ದಳು. ಗಂಡಗ ತೇರ ಕಟ್ಟಿಸು. ಭಜ ನ್ಯಾವರನ್ನ ಕರಸು. ಚಂದಾಗಿ ಮಣ್ಣಕೊಡು. ಮದ್ದತರಸು... ತೇರಿಗೆ ಹೂ ಬಾಳ ಬೇಕು. ಹೂವಿನ ತೇರ ಕಟ್ಟಿಸು...." ಅಂದಳು.

ಸೋಮಿಯ ಅವ್ವ ಸಿದ್ದವ್ವ ಅಪ್ಪ ಕೆಂಚ ಬಂದರು. ಪಾರವ್ವ ದೊಡ್ಡದನಿ ತೆಗೆದು ಅಳುತ್ತ "ಮುತ್ತೈದಿ ಸಾವು ಯಾರಿಗೆ ಬಂದೀತು. ಹಸರಸೀರಿ ಉಡಸು ಹಸರ ಕುಬಸಾ ಹಸರಬಳಿ ತೊಡಸು, ಮಲ್ಲಿಗಿ ದಂಡಿ ಮುಡಸಿ ಚಂದಾಗಿ ಮಣ್ಣ ಕೊಡಯುವ್ವಾss......ಅಂದಳು. ಸೀತ್ಯಾ ಮಾರಿಗೆ ಧೋತರಾ ಹಾಕಿಕೊಂಡ ಅಳಕೋತ ಕುಂತಿದ್ದ,

❦

# ಜಾತಿ

—ಈಚನೂರು ಶಾಂತ

'ಫೈನಲ್ ಇಯರ್‌ಗೆ ಬಂದಿದ್ದೀ ಅಂದ್ರೆ ಮೆಜಾರಿಟಿ ಅಂತ-ಯಾಕೆ ಗಾಬರಿಯಾಗ್ತೀ...? ಬಹುಷಃ ಘಟವಾಣಿ ನಿಮ್ಮಮ್ಮ, ಆ ಭೀಮಾಕಾರದ ಅಣ್ಣನಿಗೆ ಹೆದರ್ತಾ ಇರಬಹುದು ಅಲ್ವಾ...? **Be bold I say** ಏನೆಲ್ಲಾ ಬಂದರೂ ಡೇರ್ ಎಂಡ್ ಡೆವಿಲ್ ಆಗಿರು ನಿನ್ನ ನಿರ್ಧಾರ ಮಾತ್ರ ಫರ್ಮ್ ಆಗಿರಬೇಕು. ನನ್ನೆದುರಿಗಿದ್ದಾಗ ಮನ ಚಂಚಲವಾಗ ಬಹುದು. ರೂಮಿನಲ್ಲಿ ಒಬ್ಬಳೇ ಕೂತು ಡೀಪ್ ಆಗಿ ಥಿಂಕ್ ಮಾಡು, ಒಪ್ಪಿಗೆಯಾದರೆ ಮನೆಯಲ್ಲಿ ಹೇಳು, ಎಷ್ಟೇ ಗಡಿಬಿಡಿಯಾದರೂ ಅಳುಕ ಬಾರದು. ನಿನ್ನೆ ನನ್ನ ಕ್ಲಾಸ್‌ಗೆ ಬಂದಿದ್ದೆಯಲ್ಲಾ ? ಎಂತೆಂತಾ ಋಷಿಗಳೇ ಜಾತಿ ಮೆಟ್ಟಿ ನಿಂತಿದ್ದರು. ವೇದದ ಕಾಲಕ್ಕೆ ಮುಂಚೆ ಈ ಜಾತಿಯ ಗೋಜಲು ಇರಲೇ ಇಲ್ಲ ಗೊತ್ತುಂಟಾ? ಒಟ್ಟಿನಲ್ಲಿ ಶ್ಯಾಂ,..ಬೇಗ ಬಂದ್ಬಿಡು ಇವತ್ತೇ ಊರಿಗೆ ಹೋದರೂ ನಾಳೆ ಹನ್ನೆರಡಕ್ಕೆ ಇಲ್ಲಿರಬಹುದು ಶ್ಯಾಂ... ನಿಂಗಾಗಿ ವೇಟ್ ಮಾಡ್ತಾ ಇರ್ತೀನಿ. ಎಜುಕೇಟೆಡ್ ಆಗಿರೋ, ಬದುಕಿನ ಆಗುಹೋಗುಗಳ ಅರಿವಿರೋ ನಿನ್ನ ನಿರ್ಧಾರದ ಮೇಲೇ ದೇಶದ ಜಾತೀಯತೆಯ ಅಳಿವು ಉಳಿವು ನಿಂತಿದೆ. ನಿನ್ನ ಎಲ್ಲರ ಪ್ರತಿನಿಧಿಯಾಗಿ ಕಳಿಸ್ತಾ ಇದ್ದೀನಿ ಶ್ಯಾಂ...ಶ್ಯಾಂ...

ಸಧೃಡ ದೇಹದ, ಆರಡಿ ಎತ್ತರದ ಪದೇ ಪದೇ ಶೇಕ್ಸ್ ಪಿಯರ್‌ನ ಓಥೆಲೋ ನೆನಪಿಗೆ ತರುವ ಆ ಮಾಸ್ತರ್ ಅತ್ತುಕೊಂಡಿದ್ದರು. ದೀನರಾಗಿದ್ದರು, ಹೆಚ್ಚು ಕಡಿಮೆ ಬೇಡಿಕೊಂಡರೆಂದೇ ಹೇಳಬೇಕು. ಪುಣ್ಯಕ್ಕೆ ಕಣ್ಣೀರು ಬರಲಿಲ್ಲ. ಅದು ನನ್ನಲ್ಲಿ ಚಿಮ್ಮಿ ಬಂತು. ನಿಂತರೆ ಎಲ್ಲರ

ಎದುರಿಗೆ ಪ್ರಶ್ನೆಯಾಗಬಹುದೆಂದು ಬಸ್ ಏರಿ ಕಂಡಕ್ಟರ್ ತೋರಿಸಿದ ಮುಂದಿನ ಸೀಟಿನಲ್ಲಿ ಒಂಟಿಯಾಗಿ ಕುಳಿತು ಕರವಸ್ತ್ರ ಕಣ್ಣಿನ ಬಳಿಗೆ ತೆಗೆದು ಕೊಂಡು ಹೋಗುತ್ತಿದ್ದಾಗ ನನ್ನ ಬರುವಿಕೆಗೇ ಕಾಯುತ್ತಿದ್ದಂತೆ ಬಸ್ ಹೊರಟೇಬಿಟ್ಟಿತು. ಮಾಸ್ತರ್‌ಗೆ ಇನ್ನೊಮ್ಮೆ ಕೈ ಬೀಸುವ ಎಂದು ಬಾಗಿ ದರೆ, ಅಲೆಯಲೆಯಾಗಿ ಮೇಲೇರುತ್ತಿದ್ದ ಧೂಳಿನಲ್ಲಿ ಅವರು ಕರಗುತ್ತಿದ್ದರು,

ಪ್ರಶ್ನೆ ಉತ್ತರ ಎರಡನ್ನೂ ಸಿದ್ಧಗೊಳಿಸಿ ಮನದಲ್ಲೇ ಎಲ್ಲವನ್ನೂ ನಿರ್ಧರಿಸಿ ಮನೆ ತಲುಪಿದಾಗ ಅಮ್ಮ ತುಳಸೀ ಕಟ್ಟೆಗೆ ಪ್ರದಕ್ಷಿಣೆ ಹಾಕು ತ್ತಿದ್ದಳು. 'ಅಣ್ಣಾವ್ರಿಗೆ ಹೇಳಿ ಕುದುರೆಗ ಸ್ವಲ್ಪ ಹುಲ್ಲು ಕೊಡಿಸಿ ಅಮ್ಮಾವ್ರೆ...ಜಟಕಾ ಸಾಬಿ ಕೈ ಹೊಸೆಯುತ್ತಾ ಗಿಂಜಿದ. ಅಪ್ಪಯ್ಯ ಪೂಜೆ ಮಾಡುತ್ತಿದ್ದಿರಬೇಕು. ಕಂಚಿನ ಕಂಠದಿಂದ ಮಂತ್ರೋಚ್ಚಾರ ನಿರರ್ಗಳವಾಗಿ ಹರಿದುಬರುತ್ತಿತ್ತು. ಮಧ್ಯದಲ್ಲಿ ಘಂಟಾನಾದ. ತುಳಸೀ ಕಟ್ಟೆಗೆ ಹಚ್ಚಿದ ಕುಂಕುಮವನ್ನು ಹಣೆಗೆ ಮಾಂಗಲ್ಯಕ್ಕೆ ಸೋಕಿಸಿದ ಅಮ್ಮ, ಅದನ್ನು ಕಣ್ಣಿಗೊತ್ತಿಕೊಂಡು ಏನೇನೋ ಪಿಟ ಪಿಟ ಮಾಡಿದಳು. ಕತ್ತೆತ್ತಿ ಏರುತ್ತಿದ್ದ ಸೂರ್ಯನನ್ನು ನೋಡಿ ಕೈ ಜೋಡಿಸಿ ನಿಂತಾಗ ಶಬ್ದ ಮಾಡ ದಂತೆ ಬಾಗಿಲ ಬಳಿ ಬಂದೆ. ಸಾಬು ಸೂಟ್‌ಕೇಸನ್ನು ಒಳಗಿಟ್ಟಾಗ, ಹೊರ ಬಂದ ಅಣ್ಣನ ಕಂಗಳಲ್ಲಿ ಅಚ್ಚರಿ. ಸ್ನಾನ ಮಾಡುವ ಸಿದ್ಧತೆಯಲ್ಲಿದ್ದಿರ ಬೇಕು. ಬರೀ ನಿಕ್ಕರ್‌ನಲ್ಲೇ ಉದ್ದ ನಿಂತಿದ್ದ ರೋಮ ತುಂಬಿದ ಎದೆ. ಕಂಕುಗಳಲ್ಲಿ ಕೈಯಾಡಿಸುತ್ತಾ 'ಆರೇ ಹುಡುಗೀ, ನಿಂಗೆ ನೂರು ವರ್ಷ ಆಯಸ್ಸು. ಈಗ ನಿನ್ನೇ ಜ್ಞಾಪಿಸಿಕೊಳ್ತಾ ಇದ್ದೆ. ನಿನ್ನ ಕನಸಿನಲ್ಲಿ ರಾತ್ರಿ ನಾನು ಬಂದಿರಬೇಕು ಅಲ್ಲಾ? ಇವತ್ತು ನಾಗರ ಪಂಚಮಿ, ಬೆನ್ನು ತೊಳೆಯೋಕೆ ನೀನು ಇಲ್ಲವಲ್ಲಾಂತ ಅಮ್ಮನವರಾತ–ಬಾ...ಬಾ...,ನಾನು ಬೇಗ ಸ್ನಾನಮಾಡಿ ಬರ್‍ತೀನಿ....' ಎಂದವನೇ ದೊಡ್ಡ ಮನೆಯತ್ತ ನಡೆದ. ಹುಲ್ಲು ತೆಗೆದುಕೊಂಡ ಸಾಬಿಯ ಕೈಗೆ ತೆಂಗಿನಕಾಯಿಯೊಂದನ್ನೂ ಕೊಟ್ಟ ಅಣ್ಣ. ಅವನ ಸಲಾಮನ್ನು ಹಾರ್ದಿಕವಾಗಿ ಸ್ವೀಕರಿಸಿದ. ಅಣ್ಣನ ಈ ಗಾಂಭೀರ್ಯ ಹಾಗೂ ಗೌರವ ವ್ಯಕ್ತಿತ್ವಕ್ಕೇ ಹಳ್ಳಿಯವರೆಲ್ಲಾ ಬೆದರುವುದು

ರೈತರು ನಿಷ್ಠೆಯಿಂದ ಕೆಲಸ ಮಾಡುವುದು. ಅಪ್ಪಯ್ಯ ತನ್ನೆಲ್ಲಾ ಜವಾಬ್ದಾರಿಯನ್ನು ಇವನಿಗೇ ವಹಿಸಿರುವುದು, ಇವನ ಮಾತಿಗೆ ಪ್ರತಿ ಹೇಳಲಾರದೆ ಅಮ್ಮ ದೂರದ ಊರಿನ ಹಾಸ್ಟಲ್‌ನಲ್ಲಿ ನನ್ನನ್ನು ಬಿಟ್ಟಿರುವುದು... ಎಂದೆಲ್ಲಾ ಗೊತ್ತಿರುವುದಕ್ಕೇ ಅವನನ್ನು ಕಂಡರೆ ಭಯ. ತುಂಬಾ ಪ್ರೀತಿಸುತ್ತಾನೆ. ಕೆಲವೊಮ್ಮೆ ಮುನಿಯುತ್ತಾನೆ. ಆದರೆ ತನ್ನೆಲ್ಲಾ ಬೇಕುಗಳೂ ತುಟಿಯಿಂದ ಜಾರುವ ಮುನ್ನ ನಡೆಸಿಕೊಡುತ್ತಾನೆ.

ಆದರೆ ಈಗಿನ ಬೇಡಿಕೆ ವಿಭಿನ್ನ ರೀತಿಯದು. ಮನೆತನದ ಗೌರವಕ್ಕೆ ಧಕ್ಕೆ ತರುವ ವಿಷಯ. ಹೇಳಲಾದರೂ ಧೈರ್ಯ ಬೇಕು. ಹಿಂದೆಲ್ಲಾ ಅಣ್ಣನೊಂದಿಗೆ ಘಂಟೆಗಟ್ಟಲೆ ಹರಟಿದ್ದುಂಟು, ಏರಿಯ ಮೇಲೆ ವಾಕಿಂಗ್ ಹೋಗಿ ಬಾಳೆಯ ತೋಟಕ್ಕೆ ಪ್ರದಕ್ಷಿಣೆ ಹಾಕಿ ಮಲ್ಲ ಕೊಚ್ಚಿಕೊಟ್ಟ ಎಳನೀರು ಕುಡಿದು ಹುಣಿಸೇಕಾಯಿ ಕೀಳಲು ಮರಕ್ಕೆ ಹತ್ತಾರು ಬಾರಿ ಜಿಗಿದಿದ್ದುಂಟು. ಸೈಕಲ್ ಕಲಿಯಲೆಂದು ಅವನಿಗೆ ದೊಂಬಾಲು ಬಿದ್ದು, ಲಂಗ ಸುರುಳಿಯಾಗಿ ಚಕ್ರಕ್ಕೆ ಸುತ್ತಿ, ಕಾಲು ತರಚಿ ರಕ್ತ ಒಸರಿದಾಗ ಅನಾಮತ್ತಾಗಿ ಎತ್ತಿ ಭಾವಿಯ ಬಳಿಗೆ ಕರೆದೊಯ್ದು. ಟವಲನ್ನು ನೀರಿನಲ್ಲಿ ನೆನಸಿ ಗಾಯಕ್ಕೆ ಒತ್ತಿದ್ದುಂಟು, ನನಗೆ ಡಿಗ್ರಿ ಪದವಿ ಹಚ್ಚಲಿಕ್ಕಾಗಿ ಅಮ್ಮನೊಂದಿಗೆ ನಾಲ್ಕಾರು ದಿನ ಮನಸ್ತಾಪ ಕಟ್ಟಿಕೊಂಡಿದ್ದುಂಟು. ಆದರೂ ಈ ವಿಷಯ ಹೇಳುವಾಗ ಸೋ ಸೋ ಎನ್ನುವಂತಾಗಿದೆ.

ಹೊಸತಿನಲ್ಲಿ ಹೆಜ್ಜೆ ತಡೆಯುತ್ತದೆ. ಬಾಗಿಲೆದುರಿಗೆ ಅಮ್ಮ ಹೆಡೆ ಬಿಚ್ಚಿದ ಎರಡು ನಾಗರಗಳನ್ನು ರಂಗೋಲಿಯಲ್ಲಿ ಚಿತ್ರಿಸಿದ್ದಳು. ಅದರ ಮೇಲೆ ಹಾಲ ಹೊಳೆ ಹರಿಸಿ, ಅರಿಸಿನ ಕುಂಕುಮ ಜೊತೆಗೆ ಕಾರೇಕಾಯಿ, ಹುಣಿಸೇ ಹೀಚು ಅಕ್ಕಿ ಹಿಟ್ಟು ಮುಂತಾದವುಗಳಿಂದ ಪೂಜೆ ಮಾಡಿದ್ದನ್ನೇ ಎವೆ ಪಿಳುಕಿಸದೆ ನೋಡುತ್ತಾ ನಿಂತಾಗ ಅನೂಚಾನವಾಗಿ ಅಂಟಿ ಬಂದ ನಂಬಿಕೆ ಹಾಗೂ ವಾಸ್ತವಿಕತೆ ಬಿಗಿಯುತ್ತಿರುವಂತಾಗಿ ಗದಗುಟ್ಟಿ ನಡುಗಿದೆ.

"ಯಾಕೆ ಅಲ್ಲೇ ನಿಂತೆ ಶಾಪೂ ? ಅವ್ಮದು ಆದ್ಮೇಲೆ ನೀನೂ

ಸ್ನಾನಮಾಡಿ ದೇವರಿಗೆ ಎರಡು ಹೂ ಹಾಕು. ಬಸ್ಸಿನ ಪ್ರಯಾಣ, ಹತ್ತಾರು ಜಾತಿಯವರು ಹತ್ತಿರ್ತಾರೆ. ನಾಗಪ್ಪನ ಪೂಜೆ ಅಂದ್ಮೇಲೆ ತುಂಬಾ ಮಡಿಯಿಂದಲೇ ಪೂಜಿಸ್ಬೇಕು...ಎಂದ ಅಮ್ಮ ಸೆರಗಿನ ತುದಿ ನನಗೆ ಸೋಕದಂತೆ ಮೈಮುರಿದು ಒಳಹೋದಾಗ ಒಳಗು ಹಿಂಜರಿಯು ತ್ತಲೆ ಕಾಫಿಯ ಲೋಟವನ್ನು ಕೈಗಿಡಲು ಬಂದಾಗ 'ನಿಂದು ಮಡಿ ಲೋಟ ಕೆಳಗಿಡಮ್ಮ...' ಎಂಬ ಮಾತು ನನ್ನ ಅರಿವಿಗೆ ಬರುವ ಮುನ್ನವೇ ಹೊರ ಜಾರಿದಾಗ ಥತ್ತೆರಿ ಅನ್ನಿಸುತ್ತದೆ. ಭೀತಿ...ಆತಂಕ...ಕಳವಳ ನನ್ನಲ್ಲಿನ ಸಾಮಾನ್ಯ ಸ್ಥಿತಿಯನ್ನು ಏರುಪೇರಾಗಿಸಿದೆ. ಎಂದುಕೊಳ್ಳು ವಾಗ ಬಸ್‌ಸ್ಟ್ಯಾಂಡ್‌ಗೆ ಬರುತ್ತಿದ್ದಾಗ ನನ್ನಲ್ಲಿ ಧೈರ್ಯ ತುಂಬಲು ಮಾಸ್ತರ್ ಬಲಗೈ ಅದುಮಿದ್ದುದು ನೆನಪಾಗುತ್ತದೆ. ಹಾಗಿದ್ದರೆ, ಆ ಸನ್ನಿವೇಶ ಸ್ಮೃತಿಯಲ್ಲಿ ಸಪ್ತವಾಗಿದ್ದು ಅಮ್ಮನ ಮಡಿವಂತಿಕೆಯ ಮುಂದೆ ಸೋಲೊಪ್ಪಿತೇ? ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ.

ಅಮ್ಮ ಕೊಟ್ಟ ಸ್ಟ್ರಾಂಗ್ ಕಾಫಿಯನ್ನು ಅರೆಗಣ್ಣು ಮಾಡಿ ಕುಡಿಯುವಾ ಗಿನ ತನ್ಮಯತೆ ಈಗ ಇಲ್ಲ. ಅಪ್ಪಯ್ಯ ದೇವರಿಗೆ ಅಭಿಷೇಕ ಮಾಡುತ್ತಿ ದ್ದಾರೆ. ಸಾಲಿಗ್ರಾಮವನ್ನು ಕೈಗೆ ತೆಗೆದುಕೊಳ್ಳುವಾಗಲಂತೂ ನೋಡ ಲಾಗದೆ ಮುಖ ಮುಚ್ಚಿಕೊಂಡೆ. ಮಾಸ್ತರ್ ಘೋಷಿಸಿದ ವಾಕ್ಯಗಳೆಲ್ಲವೂ ಇವರು ಮಾಡುತ್ತಿರುವ ಪೂಜೆ ಪುನಸ್ಕಾರದಲ್ಲಿ ಕರಗಲಾರಂಭಿಸಿತ್ತು. ನಾಡಿದ್ದು ಬರುವುದಾಗಿ ಅವರಿಗೆ ಮಾತುಕೊಟ್ಟಾಗಿದೆ. ಹೋಗದಿದ್ದರೆ ಏನೆಂದುಕೊಳ್ಳಲಿಕ್ಕಿಲ್ಲ. ಅಷ್ಟರಲ್ಲೇ ಎಲ್ಲವನ್ನೂ ಹೇಳಿಬಿಡಬೇಕು. ಅಪ್ಪಯ್ಯ ದಿಗ್ಭ್ರಮೆಯಿಂದ ಮಂಕಾಗಿ ಗೋಡೆಗೆ ಅಂಟಬಹುದು. ಅಮ್ಮ ರೂಮಿನ ಬಾಗಿಲಲ್ಲಿ ಕುಳಿತು ಶೂರ್ಪನಖಿಯಂತಾಡಬಹುದು. ನನ್ನನ್ನು ಓದಲು ಕಳಿಸಿದ್ದಕ್ಕಾಗಿ, ಏಗಿಲಾಗಿ ಹಾಸ್ಟೆಲ್‌ನಲ್ಲಿ ಬಿಟ್ಟಿದ್ದಕ್ಕಾಗಿ ಅಣ್ಣ ನನ್ನು ದೂಷಿಸಬಹುದು. ಕೋಪದಿಂದ ಹುಚ್ಚಾದ ಅವನು ಮಂಚದ ಕೆಳ ಗಿನ ಎಕ್ಕಡ ಎಳೆದುಕೊಂಡರೂ ಆಶ್ಚರ್ಯವಿಲ್ಲ.

ಅಣ್ಣನ ಬೆನ್ನನ್ನು ತೊಳೆಯುತ್ತಿದ್ದುದನ್ನು ಆತ್ಮೀಯ ನೋಟದಿಂದ

ವೀಕ್ಷಿಸುತ್ತಿದ್ದ ಅಪ್ಪಯ್ಯ, ಅಮ್ಮ ಇಬ್ಬರೂ ಹೊರಗೆ ಹೋದಾಗ ಮಣೆಯ ಮೇಲೆ ಕುಕ್ಕರಗಾಲಿನಲ್ಲಿ ಕುಳಿತಿದ್ದ ಅಣ್ಣ ನನ್ನ ಜಡೆಯನ್ನು ಜಗ್ಗಿದ. ಅವನ ಮುಂದೆ ಕುಸಿದೆ. 'ನಿಂಗೆ ಪ್ರಪಂಚಜ್ಞಾನ ಹೆಚ್ಚಾಗ್ಲಿ ನಾಲ್ಕು ಜನರ ಮಧ್ಯದಲ್ಲಿ ತಲೆಯೆತ್ತಿ ನಿಲ್ಲುವಷ್ಟು ವಿದ್ಯೆಯ ಅರಿವಿರಲಿ ಅಂತ ಅಮ್ಮನ್ನ ಪ್ರತಿಭಟಿಸಿದೆ. ನೀನು ನನ್ನ ತಂಗಿ ಮಾತ್ರ ಅಲ್ಲ ಈ ಮನೆಯ ಗೌರವದ ಪ್ರತೀಕ. ನಿನ್ನ ಕಣ್ಣಿಂದ ಬೀಳುವ ಹನಿ ನೀರು ನಮ್ಮನ್ನೆಲ್ಲಾ ದಿಕ್ಕೆಡಿಸುತ್ತೆ ಶಾಮಾ ನಿನ್ನ ಹೂವಿನ ಹಾಗೆ ನೋಡ್ಕೋತೀನಿ. ಒಳ್ಳೆಯ ಮನೆತನದ ಹುಡುಗನಿಗೆ ನಿನ್ನ ಒಪ್ಪಿಸಿದರೆ ನಮ್ಮ ಜವಾಬ್ದಾರಿ ಹರಿಯುತ್ತೆ ಅಪ್ಪಯ್ಯ ಅಮ್ಮನಿಗೆ ಯಾವಾಗಲೂ ನಿಂದೇ ಯೋಚನೆ. ಹೋಗ್ಲಿ. ಬೆನ್ನು ತೊಳೆದೆಯಲ್ಲಾ, ಏನು ಉಡುಗೊರೆಕೊಡ್ತೀಯ ...?

ಅಣ್ಣ ಮುಂಗುರುಳು ಬದಿಗೆ ಸರಿಸಿ ಬಾಗಿ ಹಣೆಯ ಮೇಲೆ ಹೂ ಮುತ್ತಿಟ್ಟ. ಬೇರೆ ಸಂದರ್ಭದಲ್ಲಿ ಹೀಗೆಲ್ಲಾ ಹೇಳಿದರೆ ಮುತ್ತುಕೊಟ್ಟಿದ್ದರೆ ನಾಚಿ ರಂಗೇರಿ ಬೆನ್ನಿಗೊಂದು ಗುದ್ದಿ ತಮಾಷೆ ಮಾಡುತ್ತಿದ್ದೆ. ಈಗ ನಾಲಿಗೆ ಮುಷ್ಕರ ಹೂಡಿತು. ಅಣ್ಣನತ್ತ ನೋಡಲಾರದೆ ಅತ್ತೇ ಬಿಟ್ಟೆ. ನನ್ನ ವರ್ತನೆ ಅಚ್ಚರಿ ತಂದಿರಬೇಕು. ಕಣ್ಣು ಕಿರಿದುಗೊಳಿಸಿ ಪರೀಕ್ಷಿಕ ನೋಟ ಬೀರಿದ.

ಯಾಕೋ ಏನೋ ಈ ಮನೆಯ ನೀರಿನ ಋಣ ತೀರಿತೆಂಬಂತೆ ಭಾಸವಾಗಿ ನನ್ನವರ ಪ್ರತಿಯೊಂದು ನಡೆನುಡಿಗಳೂ ವಿಶೇಷ ಕಲ್ಪಿಸಲಾರಂಭಿಸಿದೆ ಅಪ್ಪಯ್ಯನ ವಾತ್ಸಲ್ಯಪೂರಿತನೋಟ, ಅಮ್ಮನ ಕಳಕಳಿಯ ನುಡಿ ಜೀವವನ್ನು ಹಿಂಡತೊಡಗಿತು. ಇಲ್ಲಿಯವರೆಗೂ ಗುರುತಿಸಲಾಗದಿದ್ದ ಈ ಎಲ್ಲಾ ಬಾವನೆಗಳೂ ನನ್ನ ಆಶಕ್ತತೆಯನ್ನು ಹಿಂಡತೊಡಗಿದವು. ಈ ಮನೆ. ಇಲ್ಲಿಯ ಸುಂದರ ಸಾತ್ವಿಕ ವಾತಾವರಣ, ಬಿಳಿಲು ಬಿಟ್ಟ ಆಚಾರ ವಿಚಾರಗಳು. ಮಕ್ಕಳ ಒಳಿತಿಗಾಗಿ ಜೀವವನ್ನೇ ಮುಡಿಪಿಟ್ಟು ಹಿರಿಯರು, ರಕ್ತ ಹಂಚಿ ಹುಟ್ಟಿದ್ದಕ್ಕಾಗಿ ಮಿಗಿಲಾಗಿ, ವಾತ್ಸಲ್ಯದ ಭಾವನೆಯಿಂದಾಗಿ ನನ್ನ ಮೇಲೆ ತನ್ನ ಪ್ರಭುತ್ವ ಸಾಧಿಸಿರುವ ಅಣ್ಣ...ವುಹ್ಞೂ, ಬಹುಷಃ ಇವು

ಯಾವುದನ್ನೂ ದಾಟಿ ಹೊರಬರಲಾರೆ. ಹೆಜ್ಜೆ ಕೂಡ ಎತ್ತಿಡಲಾರೆ. ಎಂಬ ಭಾವನೆ ಪತ್ತಾರು ಸ್ವರಗಳಲ್ಲಿ ಎದ್ದು ನಿಂತು ಬೆಳೆಯಲಾರಂಭಿಸಿದಾಗ ಮಾತಿಗೆ ಮುಂಚೆ ಟೇಬಲ್‌ಗೆ ಮುಖವೊತ್ತಿ ನಗುವ ಮಾಸ್ತರ್ ಎದುರಾಗುತ್ತಾರೆ.

ನನ್ನ ಅವರ ಮಧ್ಯೆ ಬೆಸುಗೆ ಹಚ್ಚಿದ ಆ ಸಂದರ್ಭಬಾರದಿದ್ದರೇ ಒಳಿತಾಗುತ್ತಿತ್ತು. ಈ ವರ್ತುಲವನ್ನು, ಮಿಗಿಲಾಗಿ ಲಕ್ಷ್ಮಣರೇಖೆಯನ್ನು ದಾಟಲಾರೆನೇನೋ? ಜೂಲಿ ಓದಲು ಹೋಗುತ್ತಾಳೆಂದು ನಾನೂ ಕೆಂಬೂತವಾಗಿ ಪುಕ್ಕ ಕೆದರಲು ಹವಣಿಸಿದ್ದು ಅಕ್ಷಮ್ಯ. ನೋವು. ಬಿಕ್ಕಳಿಕೆಯಲ್ಲಿ ಹೊರಹೊಮ್ಮಿದಾಗ ಅಣ್ಣ ಕರಗಿದ್ದ. ಆಶ್ವಾಸನೆ ಕೊಟ್ಟಿದ್ದ. ಅಮ್ಮನೊಂದಿಗೆ ವಾದಿಸಿ ಹಾಸ್ಟಲ್‌ನಲ್ಲೂ ಬಿಟ್ಟು ಬಂದಿದ್ದ. ಇಲ್ಲಿಯವರೆಗೂ ಎಲ್ಲವೂ ಸುಗಮವಾಗಿದ್ದು ಕೊನೆಯ ವರ್ಷದಲ್ಲಿದ್ದಾಗ ಟ್ರಾನ್ಸ್‌ಫರ್ ಆಗಿ ಬಂದ. ಅವರು ನಮ್ಮ ಕಾಲೇಜಿಗೆ ಬರಬಾರದಿತ್ತು. ಬಂದಿದ್ದರೂ ಸೋಷಿಯಾಲಜಿ ಲೆಕ್ಚರರ್ ಆಗಬಾರದಿತ್ತು. ಆಗಿದ್ದರೂ ನಾನು ಅವರ ವಿದ್ಯಾರ್ಥಿನಿಯಾಗಿ ಅಂದಿನ ಡಿಬೇಟ್‌ನಲ್ಲಿ ಭಾಗವಹಿಸಿದ್ದು ಶುದ್ಧ ಮೂರ್ಖತನ. ಅವರೊಂದಿಗೆ ವಾದಿಸಿ, ಪೆಚ್ಚು ಮುಖ ಹಾಕುವಂತೆ ಮಾಡಿ, ಆಗ ನಕ್ಕು ಅವಹೇಳನಾಗುವಂತೆ ವರ್ತಿಸಿದ್ದು ನನ್ನ ಹುಂಬತನ.

ಪ್ರಥಮ ಬಹುಮಾನವೆಂದು ಬೆಳ್ಳಿಯ ಕಪ್ ಗಿಟ್ಟಿಸಿ ಹೊರಬಂದಾಗ ಕಂಗ್ರಾಜ್ಯುಲೇಶನ್ಸ್ ಸುರಿಮಳೆ. ಅರ್ದ .ಅಹಂನಿಂದ ಹುಸಿ ಮಗುಳಿನೊಂದಿಗೆ ಬರುತ್ತಿದ್ದಾಗ-ಅವರು ಎದುರಾಗಿದ್ದರು. ಎಂದಿನಂತೆ ವಿಶ್ ಮಾಡಲಿಲ್ಲ. ನೋಟ ಹೊರಳಿಸಲು ಯತ್ನಿಸಿದೆ. ಕಾರಣ ಅವರು ಹಾಸ್ಟಲ್‌ನ ಹರಟೆಯ ವಸ್ತು. ಎತ್ತರ ನಿಲುವು. ಹರವಾದ ಎದೆ, ನೇರ ನಡೆ, ಕಪ್ಪು ಬಣ್ಣ, ಮಿಗಿಲಾಗಿ ದಪ್ಪ ತುಟಿಯು ಆ ವ್ಯಕ್ತಿ ಒಥೆಲೋ ಆಗಿದ್ದರು. ಕ್ಲಾಸ್ ರೂಂಗೆ ಬಂದ ಕ್ಷಣ ನನ್ನನ್ನೇ ಪ್ರಶ್ನಿಸಿ, ನೇರ ನೋಟ ಬೀರಿದ ವೃಷ್ಟಿಸುತ್ತಾ ಗೆಳತಿಯರಿಂದ ಡೆಸ್ಡಿಮೋನ ಎಂದು ಕರೆಸಿಕೊಳ್ಳುವಂತೆ ಮಾಡಿದ್ದರು. ಅನಿವಾರ್ಯವಾಗಿ ದೃಷ್ಟಿ ತಪ್ಪಿಸಬೇಕಾದ ಪರಿಸ್ಥಿತಿ

ತಂದೊಡ್ಡಿದ್ದರು. ಆದರೂ ಅವರೇ ನೇರ ಹತ್ತಿರ ಬಂದಿದ್ದರು. ಸ್ಟಾಫ್ ರೂಂಗೆ ಕರೆದರು. ಹೋದೆ. 'ಜಾತೀಯತೆಯ ಬಗ್ಗೆ ನಿಮ್ಮ ವಾದಸರಣಿ ಟಚಿಂಗ್ ಆಗಿತ್ತು. ನಿಜ ಹೇಳಬೇಕೂಂದ್ರೆ ಆ ಭಾವನೆ ನಮ್ಮ ದೇಶದಲ್ಲಿ ಬುಡ ಸಮೇತ ಕಿತ್ತುಹೋಗೋದೆ ಇಲ್ವೇನೋ ಅನಿಸುತ್ತೆ. ಈಗ ಸರ್ಕಾರ ಸಾಕಷ್ಟು ಅನುಕೂಲ ಅವಕಾಶ ಮಾಡಿಕೊಟ್ಟಿರಬಹುದು. ಆದರೆ ಅವರ ಉಪಯೋಗವನ್ನು ಎಷ್ಟು ಜನ ಪಡ್ಕೋತಾ ಇದ್ದಾರೆ ಅನ್ನೋದು ಮುಖ್ಯ' ಒಟ್ಟಿನಲ್ಲಿ ನಿಮ್ಮ ವಾದ ಸೊಗಸಾಗಿತ್ತು. ತುಳಿಸಿಕೊಂಡವರು, ನೊಂದವರು ಮಾತ್ರ ಆ ಧಾಟಿಯಲ್ಲಿ ಮಾತನಾಡೋಕೆ ಸಾಧ್ಯ, ಅವರಲ್ಲಿನ ಆಂದೋಳನ ತುಂಬಾ ಚೆನ್ನಾಗಿ ಅರ್ಥಮಾಡಿಕೊಂಡಿದ್ದೀರಿ. ಕಂಗ್ರಾಟ್ಸ್ ಮಿಸ್ ಶಾಮಾ...'

ಮರುನುಡಿಗೂ ಆಸ್ಪದ ಕೊಡದೆ ಹೊರಟುಹೋಗಿದ್ದರು. ಅವರ ತುಟಿಯ ಮಧ್ಯೆ ಹೊಗೆಯಾಡುತ್ತಿದ್ದ ಸಿಗಾರನ್ನು ಹೊರಗೆಳೆದು, 'ಬಾಯಗಲಿಸಿ ಸ್ಪಷ್ಟ ಮಾತನಾಡಿ' ಎಂದು ಹೇಳುವ ಮನಸ್ಸಾದರೂ ಸುಮ್ಮನೇ ನಿಂತಿದ್ದೆ. ಮಾತಿನ ಕೊನೆಗೆ ಬಂದಾಗ ಅವರ ಕಂಗಳಲ್ಲಿ ನೀರಾಡಿತೇನೋ ಎಂಬ ಸಂಶಯ. ಹೀಗೇ ನಡೆಯುತ್ತಿದ್ದ ಮಾತುಕತೆ ಕ್ರಮೇಣ ಆತ್ಮೀಯತೆಗೆ ಅದು ಇನ್ನೊಂದಕ್ಕೆ ಹಾದಿ ಮಾಡಿಕೊಡುತ್ತದೆ ಎಂಬ ಅರಿವಿದ್ದರೂ, ಮನೆಯ ಪರಿಸ್ಥಿತಿಯ ಸ್ಪಷ್ಟ ಚಿತ್ರಣದ ಅರಿವಿದ್ದರೂ ಮಾನಾಡುವ ಆಸೆ ಚಿಗುರುತ್ತಿತ್ತು. ಕೆಲವೊಮ್ಮೆ ಅವಿದಿತ ಭಾವನೆಗಳಿಂದ ಮನ ಭಾರವಾಗುತ್ತಿದ್ದಾಗ ಅವರ ತುಂಬು ನಗೆ...ನೇರ ನೋಟ ಸಾಂತ್ವನ ತರುತ್ತಿತ್ತು.

ಮನ ಮಾಸ್ತರ್ ಸುತ್ತಮುತ್ತಲೇ. ಮದುವೆಯಾಗುವುದು ನಿಜವೆಂದಾದರೆ ಅವರನ್ನೇ ಆದರೆ ತಪ್ಪೇನು? ಹಿರಿಯರು ಪ್ರತಿಭಟಿಸುತ್ತಾರೆ. ಜಾತೀಯತೆಯ ದಿಗ್ಬಂಧನ ಹಾಕುತ್ತಾರೆ ಎಂಬುದನ್ನು ಬಿಟ್ಟರೆ ಯೋಗ್ಯವರನಲ್ಲಿರಬೇಕಾದ ಎಲ್ಲಾ ಗುಣಗಳೂ ಅವರಲ್ಲಿವೆ. ಮನಮುಟ್ಟಿ ಆರಾಧಿಸುತ್ತಾರೆ. ಪ್ರೀತಿಸುತ್ತಾರೆ. ಎದುರಿಗೆ ನಿಂತು ಮಾತನಾಡುವಾಗಲೆಲ್ಲಾ ನೋಟ ದೇಹದ ಬಿಡಿಭಾಗಗಳನ್ನು ಅಳೆದಿಲ್ಲ, ಹತ್ತಿರ ಕುಳಿತರೂ ಕೈ

ದೇಹದತ್ತ ಬಂದಿಲ್ಲ. ತೀರಾ ಸಂಯಮದ ವ್ಯಕ್ತಿ. ಬಸ್ಸಿನಲ್ಲಿ ಹೋಗು ವಾಗ ಅಥವ ಸ್ವಲ್ಪ ಅವಕಾಶ ಸಿಕ್ಕಿದರೂ ಕೈ ಮೈ ಸೋಂಕಿಸಲು ಬಯಸುವ ನಮ್ಮ ಯುವ ಜನಾಂಗವೆಲ್ಲಿ? ಅವರನ್ನು ನೋಡಿದರೆ ಹಾಗಲ್ಲ. ತುಳಿಸಿ ಕೊಂಡ. ಊರಿನಿಂದ ಹೊರಗೆ ಇಟ್ಟಿರುವ ವಿಗಿಲಾಗಿ ಅಸ್ಪೃಶ್ಯತೆಯು ಲೇಬಲ್ ಅಡಿಯಲ್ಲಿ ಮುಂದುವರಿದ ಈ ಶತಮಾನದಲ್ಲೂ ನರಳುತ್ತಿರುವ ಆ ಜನಾಂಗದತ್ತ ಕನಿಕರ ತೋರಿಸಬೇಕು. ಆ ಶಬ್ದ ಎತ್ತಿದಾಗ ಅವರು ಸಿಡಿದು ನಿಲ್ಲುತ್ತಾರೆ. 'ದೇವರು ಇಲ್ಲಾಂತ ನಾನು ವಾದಿಸಬಹುದು. ಆದ್ರೆ ನಮ್ಮೆಲ್ಲರನ್ನು ಸೃಷ್ಟಿಸಿರುವ ಶಕ್ತಿ ಒಂದೇ. ಉಪಯೋಗಿಸೋ ಗಾಳಿ, ಬೆಳಕು. ನೀರು ಎಲ್ಲಾ ಒಂದೇ ಮತ್ತೆ ದೇಹದ ಅಂಗಾಂಗ ಗಳ ರಚನೆಯೂ ಕೂಡ.' ತುಂಬಾ ಹಿಂದೆ, ವಾನರ ರೂಪದಿಂದ ಮಾನವ ಪರಿವರ್ತನೆ ಹೊಂದಿದಾಗ ಜಾತೀಯತೆಯ ಗೊಂದಲ ಎಲ್ಲಿತ್ತು ಶಾಮಾ? ಮಾಡುವ ಕೆಲಸಕ್ಕೆ ಹೊಂದಿ ಜಾತಿ ವಿಂಗಡಿಸಿದರು. ಗುರುತಿಸೋಕೆ ಒಂದು ಜಾತಿ. ಅದನ್ನೆಲ್ಲಾ ಮಾಡಿಕೊಂಡವರೂ ನಮ್ಮ ಜನವೇ. ಬ್ರಾಹ್ಮಣ ಪುರುಷನ ಮುಖದಿಂದ. ಶೂದ್ರ ಕಾಲಿನಿಂದ ಹುಟ್ಟಿದ ಎನ್ನ ಬಹುದು. ಹಾಗೇ ಅಂತ ಇಟ್ಕೋ ದೇಹಕ್ಕೆ ಯಾವ ಅಂಗ ಇಲ್ಲದಿದ್ದರೆ ಆಗುತ್ತೆ ? ನಂಗೆ ನಿನ್ನ ಕನಿಕರ ಬೇಡ ಶಾಮಾ, ಪ್ರೀತಿ ಮಾತ್ರ ಬೇಕು ನೋಡು...'

ಕನಿಕರ ಬೇಡ ಎಂದ ಮಾಸ್ತರ್ ಜಾತಿಯ ಬಗ್ಗೆ ಚರ್ಚೆ ಬಂದ ಕ್ಷಣ ಹಾಗೇಕೆ ಮುಖ ಹಿಡುತ್ತಾರೆ ಎಂಬುದೇ ತಿಳಿದಿಲ್ಲ. ಓದಿರಬಹುದು, ಕಾಲೇಜಿನಲ್ಲಿ ಲೆಕ್ಚರರ್ ಆಗಿರಬಹುದು. ಉದ್ಯೋಗದಲ್ಲಿ ಒಳ್ಳೆಯ ಸ್ಥಾನ ದೊರೆತಿದ್ದರೂ ಸಮಾಜದಲ್ಲಿ ಸಿಕ್ಕಿರಲಿಕ್ಕಿಲ್ಲ. ಹಳ್ಳಿಯಲ್ಲಿ ಊರ ಹೊರಗೆ ಗುಡಿಸಲಿನಲ್ಲಿ ವಾಸಿಸುವುದು ತಪ್ಪಲಾರದು. ಹಾಗೆಂದು ಸರ್ಕಾರದ ನೆರವಿ ನಲ್ಲಿ ಬ್ರಾಹ್ಮಣರ ಕೇರಿಯಲ್ಲಿ ವಾಸಿಸಲಾರಂಭಿಸಿದರೆ ಬೇರೇನು ಮಾಡಲಾಗ ದಿದ್ದರೂ ಬ್ರಾಹ್ಮಣರೇ ದೂರ ಸರಿಯುತ್ತಾರೆ. ಅವರು ಬಾಗಿಲು ಮುಚ್ಚಿ ದರು ಎಂದಾದರೆ ಅಲ್ಲಿ ಮತ್ತೆ ಗುಡಿಸಲುಗಳೇಳುತ್ತವೆ. ಅಂದರೆ ಊರ ಹೊರಗೇ ಎಂದಾಗುತ್ತದೆ, ಹೌದು...ವ್ಯಕ್ತಿಯ ಸಂವೇದನೆಗಳಿಗೆ ಕಲ್ಲು

ಜಡಿಯುವ ಭಾವನೆ ಕ್ರೂರ, ಅಮಾನುಷ. ಮಾಸ್ತರ್‌ದು ಕಪ್ಪು ಬಣ್ಣ ಇರಬಹುದು, ದಪ್ಪ ತುಟಿಯಾಗಿರಬಹುದು. ಉಪನ್ಯಾಸ ಕೊಡುವಾಗ ಮಧ್ಯದಲ್ಲಿ' ಶಕಾರ ಹೊರಡಬಹುದು, ಏನಾಯಿತೀಗ? ಅದನ್ನು ತಿದ್ದಲೇನೂ ಕಷ್ಟವಾಗುವುದಿಲ್ಲ ಜಾತಿ ಹೊಂದಿತೆಂದಾದರೆ ಮುಂದಿನ ಪೀಳಿಗೆಯಲ್ಲಿ ತೀವ್ರ ಬದಲಾವಣೆಯಾಗುತ್ತದೆ. ರೂಪು, ನಡೆ–ನುಡಿ ಎಲ್ಲದರಲ್ಲೂ ಆಗ ಮೇಲು ಕೀಳಿನ ಪ್ರಶ್ನೆಯೇ ಬರಲಾರದು. ಬ್ರಾಹ್ಮಣ ಹಿಂದಿನಿಂದ ವೇಧಾಧ್ಯಯನ ಮಾಡುತ್ತಾ ಬಂದಿದ್ದಾನೆ. ನಾಲಗೆ ಹೊರಳದಿದ್ದರೂ ಗುರುಗಳು ತಿದ್ದುತ್ತಿದ್ದರು. ಬಾಯಿಂದ ಬಾಯಿಗೆ ಹರಿದು ಕ್ರಮೇಣ ತಪ್ಪುಗಳು ಕಡಿಮೆಯಾಗಿರಬಹುದು. ಇವರಿಗೂ ಕಲಿಸಿದ್ದರೆ ಆಗುತ್ತಿರಲಿಲ್ಲವೇ? ಕುಲವನ್ನು ನಾಲಗೆ ಹೇಳುತ್ತದೆ ಎಂದುಬಿಡುತ್ತಾರೆ, ಸುಲಭವಾಗಿ. ಅದೇ ವಾತಾವರಣ. ಸನ್ನಿವೇಶದಲ್ಲಿ ಬೆಳೆದು ಬಂದಿರುವಾಗ ಥಿಢೀರನೆ ಬದಲಾಗುವುದೂ ಸಾಧ್ಯವಾಗುವುದಿಲ್ಲ. ಸತತ ಅಭ್ಯಾಸದಿಂದ ಎಲ್ಲವೂ ಸರಿಹೊಂದಬಹುದು.

ಹತ್ತಾರು ಉದಾಹರಣೆಗಳೊಂದಿಗೆ ತನ್ನದೇ ನಿಲುವಿಗೆ ಬರಲು ಸತತ ಪ್ರಯತ್ನ ಮಾಡಿ ಗೆದ್ದಿರುವ ಮನ ಈಗಲೂ ಗೊದ್ದದ ಗೂಡು. ನಮ್ಮ ಮದುವೆಯಿಂದ ಜಾತಿ ಅಳಿಯುವಂತಾದರೆ ಮಾಸ್ತರ್ ಶ್ರೇಷ್ಠ ಮಟ್ಟಕ್ಕೇ ಸೇರುತ್ತಾರೆ. ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ್ದು ಚಂಡಾಲ ಕೆಲಸ ಮಾಡುವ ಮಂದಿ ನಮ್ಮಲ್ಲಿ ಎಷ್ಟು ಜನ ಇಲ್ಲ...? ಜಾತೀಯ ಮುಸುಕಿನಲ್ಲಿ ಎಲ್ಲಾ ಮರೆಯಾಗುತ್ತದೆ. ತುಂಬಾ ಹಿಂದೆ, ಆಚಾರ ವಿಚಾರವನ್ನು ಸ್ವಲ್ಪ ಮೆಟ್ಟಿ–ನಿಂತದ್ದೇ ಆದರೆ ಅವರನ್ನು ಬಹಿಷ್ಕರಿಸುತ್ತಿದ್ದರು. ಈಗ ಕಾಲ ಬದಲಾಗಿದೆ. ಅಲ್ಲಲ್ಲಿ ಅಂತರ್ಜಾತೀಯ ವಿವಾಹಗಳಾಗುತ್ತಾ ಬಂದಿದೆ. ಅದನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಸಬೇಕು. ಮಾಸ್ತರ್ ಅನ್ನುವಂತೆ ನಮ್ಮಂತಹ ಹರಿಹರೆಯದವರು ಇಂತಹದಕ್ಕೆ ಬುನಾದಿ ಹಾಕಿಕೊಡಬೇಕು. ನಾಲ್ಕು ದಿನ ಕೂಗುತ್ತಾರೆ. ಬೊಬ್ಬೆ ಹಾಕುತ್ತಾರೆ. ಅಪ್ಪಯ್ಯ–ಅಮ್ಮ ಹೊಸಿಲಾಚೆಗಿಡುತ್ತಾರೆ, ಮಾಸ್ತರ್‌ರ ನಿಡಿದಾದ

ತೊಗಲು ಈ ದೇಹಕ್ಕೆ, ಮಿಗಿಲಾಗಿ ಮನಸ್ಸಿಗೆ ರಕ್ಷಣೆ ಹಾಗೂ ಬಯಸಿದ ವಸ್ತು ಕೊಡಲಾರದೇ?

ಅಳೆದು ಸುರಿಯುವುದರಲ್ಲೇ ಒಂದು ದಿನ ಜಾರಿಹೋಯಿತು. ಗಂಟೆ ಸರಿದಂತೆಲ್ಲಾ ಕಾರ್ಮೋಡ ಹೆಪ್ಪುಗಟ್ಟಿದಂತೆ ನನ್ನ ಪೆದ್ದುತನ ಮಿಗಿಲಾಗಿ ಆತಂಕ ಸೂಚಿಸಿರುವ ನೋಟ ಅಣ್ಣನನ್ನು ಸಂಶಯದಲ್ಲಿ ಕೆಡವಿರಬೇಕು. ಗುಟ್ಟು ಹೊರತರಲು ಯತ್ನಿಸಿದಂತೆಲ್ಲಾ ತಪ್ಪಿಸಿಕೊಳ್ಳುವ ವ್ಯರ್ಥ ಸಾಹಸ. ವಿಷಯ ತಿಳಿಸುವ ಮುನ್ನ ನಿರ್ಧಾರ ಬದಲಾದೀತೆಂಬ ಅವ್ಯಕ್ತ ಭಯ. ಹಾಗೆಂದು ತಳ್ಳುತ್ತಾ ಹೋದರೆ ಅನಿಶ್ಚಿತತೆಯಿಂದ ಕಂಗೆಡುವಂತಾಗುತ್ತದೆ. ಅಲ್ಲದೆ ಅಣ್ಣ ನಾಳೆ ಜಮೀನಿನ ವಿಷಯ ಚರ್ಚಿಸಲು ಕೋಡೀಹಳ್ಳಿಗೆ ಬೇರೆ ಹೋಗುತ್ತಾನಂತೆ, ಅದಕ್ಕೆ ಮುನ್ನ ಅಂದರೆ ಈಗಲೇ ಎಲ್ಲವನ್ನೂ ಹೇಳಿ ಬಿಡಬೇಕು. ಏನು ಮಾಡಿದರೂ ಅಳಬಾರದು. ಧ್ವನಿಯಲ್ಲಿ ಕಂಪನ ತರಬಾರದು. ಆರು ತಿಂಗಳಿನಿಂದ ಸತತವಾಗಿ ಕೆತ್ತಿ ರೂಪಿಸಿದ ಶಿಲ್ಪವನ್ನು ಅನಾಮತ್ತಾಗಿ ಅವರ ಮುಂದೆ ನಿಲ್ಲಿಸಬೇಕು.

ತೋಟಕ್ಕೆ ಸಸಿ ಹಾಕಿಸುವ ಬಗ್ಗೆ ಚರ್ಚಿಸುತ್ತಾ ಮೂವರೂ ವರಾಂಡದಲ್ಲಿ ಕುಳಿತಿದ್ದರು. ರೂಮಿನ ಬಾಗಿಲಲ್ಲಿ ನಿಂತು ಈಗ ಇಲ್ಲಿಗೆ ಬಂದುದರ ಕಾರಣವನ್ನು ತಡೆತಡೆದು ಸ್ಪಷ್ಟವಾಗಿ ಹೇಳಿದೆ. ಊಹಿಸಿದಂತೆ ಅಪ್ಪಯ್ಯ ಬೆಪ್ಪಾದರೆ ಅಮ್ಮ ಭೋರಾಡಿ ಅಳಲಾರಂಭಿಸಿದಳು, ತನ್ನ ಶಬ್ದ ಭಂಡಾರದಲ್ಲಿ ಅಡಗಿದ್ದ ಅವಾಚ್ಯ ಶಬ್ದಗಳನ್ನೆಲ್ಲಾ ಹೊರಗೆಳೆದು ಪ್ರಯೋಗಿಸಲಾರಂಭಿಸಿದಳು. ನನ್ನ ಗಮನವೆಲ್ಲಾ ಅಣ್ಣನ ಪ್ರತಿಕ್ರಿಯೆಯತ್ತ. ಕ್ಷಣ ತಬ್ಬಿಬ್ಬಾದವನಂತೆ ಕುಳಿತಿದ್ದವನು ತಲೆ ಕೊಡವಿಕೊಂಡು ಹಣೆಯ ಮೇಲೆ ಬೆರಳೂರಿ ಕಣ್ಣು ಬಿಗಿದು ಗೋಡೆಗೊರಗಿ ನಿಟ್ಟುಸಿರೆಳೆಸಿದ–'ತಮಾಷೆ ಮಾಡ್ತಿದ್ದೀಯಾ ಶಾಮಾ...? ಬೇಡಮ್ಮ...ಈ ಆಘಾತ ಸಹಿಸೋಕೆ ನನ್ನಿಂದ ಆಗೋಲ್ಲ ಮರಿ...' ಎಂದ. 'ಆಘಾತ ಎಂತದು ಅಣ್ಣ, ಧೈರ್ಯಗಟ್ಟಿ. ನೀನೂ ಓದಿದವನು. ಜಾತಿ-ಮತ ಎಲ್ಲಾ ನಂಬ್ತೀಯ ಅಂದ್ರೆ ಆಶ್ಚರ್ಯವಾಗುತ್ತೆ. ಎಲ್ಲರೂ ಮನುಷ್ಯರೇ ಆಗಿರುವಾಗ .......?

ಹೆಚ್ಚಿನ ಮಾತಿಗೆ ಅವಕಾಶ ಕೊಡದಂತೆ ಅಣ್ಣ ಚಟ್ಟನೆ ಮೇಲೆದ್ದ ಮುಖ-ಕಿವಿರಂಗೇರಿತ್ತು. ಹತ್ತಿರ ಬಂದವನೇ ತುಟಿಕಚ್ಚಿ ಕೆನ್ನೆಗೆ ಬೀಸಿ ಹೊಡೆದು 'ನಮ್ಮ ವಂಶದಲ್ಲಿ ಈ ದರಿದ್ರ ಹುಟ್ಟದೇ ಇದ್ದಿದ್ದರೇ ಚೆನ್ನಾಗಿತ್ತು' ಎಂದು ಬಿರಬಿರನೆ ಹೊರನಡೆದ. ಕಿವಿಯಲ್ಲಿ ಝುಯ್‌ಗುಡಲಾರಂಭಿಸಿ ಮನೆಯಲ್ಲಾ ಗಿರಗಿರನೆ ಸುತ್ತಿ ಛಾವಣಿ ಕೆಳಗಿಳಿಯುತ್ತಿರುವಂತಾಗಿ, ಓಡಿಬಂದ ಅಪ್ಪಯ್ಯನ ತೋಳೊಳಗೆ ದೊಪ್ಪನೆ ಕುಸಿದೆ.

ಕಣ್ಣು ತೆರೆದಾಗ ಬಿಸಿಲು ಬೆಚ್ಚಗಾಗಲಾರಂಭಿಸಿತ್ತು. ಮುಖ ಮೀಲೆ ಬಂದಿದ್ದ ಕಂಬಳಿಯನ್ನು ಸರಿಸಿ, ಎದ್ದು ಕುಳಿತು ಮಂಡಿಯ ಮೇಲೆ ಗಲ್ಲ ವೂರಿದೆ. ರಾತ್ರಿ ಊಟ ಮಾಡದೆ ಮಲಗಿದ್ದುದರ ಪರಿಣಾಮ ಈಗ ಹೊಟ್ಟೆಯಲ್ಲಿ ಸಂಕಟವಾಗಲಾರಂಭಿಸಿತ್ತು. ಬಹುಶಃ ಅಪ್ಪಯ್ಯನೇ ಕಂಬಳಿ ಹೊದೆಸಿರಬೇಕು. ಒಬ್ಬಳೇ ರೂಮಿನಲ್ಲಿರಲು ಹೆದರುತ್ತಾಳೆ ಎಂದು ಗೊತ್ತಿದ್ದರೂ ಅಮ್ಮ ರಾತ್ರಿ ಲೈಟ್ ಹಾಕಿರಲಿಲ್ಲ. ಮಾಮೂಲಾಗಿ ಈ ವೇಳೆಗೆ ಕೇಳಬೇಕಾಗಿರುತ್ತಿದ್ದ ಅಪ್ಪಯ್ಯನ ಘಂಟಾನಾದ, ಪೂಜೆಯ ಮಂತ್ರಎಲ್ಲವೂ ಸ್ತಬ್ಧ ಏನೇ ಆಗಲಿ ಒಂಭತ್ತು ಘಂಟೆಯ ಹೊತ್ತಿಗೆ ಹೊರಟುಬಿಡಬೇಕು. ಮಾಸ್ತರ್‌ಗೆ ಮಾತುಕೊಟ್ಟಂತೆ ಹನ್ನೆರಡಕ್ಕೇ ಅಲ್ಲಿರಬಹುದು-'ನಮ್ಮವರು ನ್ಯಾರೋ ಮೈಂಡೆಡ್‌ಫೆಲೋಸ್. ಓಲ್ಡ್ ಹಾಗ್ಸ್, ಒಪ್ಪಲಿಲ್ಲ. ನಾನೇ ಬಂದ್ಬಿಟ್ಟೆ ಇನ್ನು ಮುಂದೆ ನಾವಿಬ್ಬರೂ ಒಂದೇ ದೋಣಿಯಲ್ಲಿ ಸಾಗುವ ಯಾತ್ರಿಕರು! ಎಂದು ನಾಟಕೀಯವಾಗಿ ಹೇಳಿ ಖುಷಿಪಡಿಸಬೇಕು. ನಾಲ್ಕು ದಿನ ಕಾಲೇಜಿನಲ್ಲಿ ಗುಲ್ಲೇಳುತ್ತದೆ. ಹೇಗಿದ್ದರೂ ಸರ್ಕಾರಿ ಕಾಲೇಜು, ಕೆಲಸಕ್ಕಂತೂ ತೊಂದರೆ ಬರುವುದಿಲ್ಲ. ಓದುವುದು ಬಿಟ್ಟು ನಾನು ಮನೆಯಲ್ಲಿದ್ದರಾಯಿತು. ಹೌದು. ಪುಟ್ಟ ಮನೆ ಅಲ್ಲಿ ನಾನು ಮತ್ತು ಮಾಸ್ತರ್, ಮಾಸ್ತರ್ ಮತ್ತು ನಾನು. 'ಹಮ್ ತುಮ್ ಏಕ್ ಕಮರೇಮೆ ಬಂದ್ ಹೋ! ಎಂಬಂತೆ ಇದನ್ನು ಹೇಳಿದಾಗ ಮಾಸ್ತರ್ ಮೊಗ ಬೆಚ್ಚಗಾಗುವುದಿರಲಿ ಹಾಗೆ ಹೇಳಲು ನನ್ನ ತುಟಿಯಾದರು ಅಲುಗಬೇಕಲ್ಲ?

ಹೊರಗೆ ನಿಶ್ಶಬ್ದ ಯಾವಾಗಲೂ ಸಡಗರದಿಂದ ಇರುತ್ತಿದ್ದುದು ಇಂದು ಸೂತಕದ ಮನೆಯಂತಾಗಿದೆ. ಅಂದರೆ ತಾನು ಅವರ ಪಾಲಿಗೆ ಸತ್ತಂತಿರಬೇಕು. ಅಣ್ಣ, ನನ್ನನ್ನು ಮನಸಾರ ಪ್ರೀತಿಸುತ್ತಿದ್ದ ಅಣ್ಣ ಹುಟ್ಟದಿದ್ದರೇ ಲೇಸಿತ್ತು ಎಂದು ಹಿಟ್ಟ ಅವನ ದೃಷ್ಟಿಯಲ್ಲೇ ನೋಡುವುದಾದರೆ ಅದು ನಿಜ. ಅವನು ಬಾಳಿ ಬದುಕಬೇಕಾದುದು ಈ ಹಳ್ಳಿಯಲ್ಲಿ. ಹಳ್ಳಿ ಎಂದ ಮೇಲೆ ಎಷ್ಟಾದರೂ ಕಟ್ಟುನಿಟ್ಟು, ಸಂಪ್ರದಾಯ ಉಳಿದೇ ಇರುತ್ತದೆ. ಇರುವ ನಾಲ್ಕು ಬ್ರಾಹ್ಮಣರ ಮನೆಯಲ್ಲಿ ವೈದೀಕ ಮಾಡಿಸಲು ಯಾರೂ ಬರುವುದಿಲ್ಲ ಎಂದಾದರೆ ಅದು ಬಹಿಷ್ಕಾರ ಹಾಕಿದ್ದಕ್ಕಿಂತ ಕಡೆ. ಶ್ರಾದ್ಧದ ದಿನ, ಅದು ಮುಗಿಯುವವರೆಗೂ ತುಟಿಗೆ ನೀರು ಕೂಡ ಸೋಕಿಸದ ಅಪ್ಪಯ್ಯ ಈ ಅಘಾತ ತಡೆಯುವುದೆಂತು? ಮಗಳು ಜಾತಿಗೆಟ್ಟಿದ್ದಾಳೆ ಎಂದು ತಿಳಿದರೆ ಅಂತಹ ಮನೆಗೆ ಯಾರು ತಾನೇ ಹೆಣ್ಣು ಕೊಡುತ್ತಾರೆ? ನನಗಾಗಿ, ನನ್ನ ಒಳಿತಿಗಾಗೇ ಈ ಮನೆ ಎಂದು ಯೋಚಿಸುವ ಅಣ್ಣ ಕೊನೆಯವರೆಗೂ ಬ್ರಹ್ಮಚಾರಿಯಾಗೆಯೇ ಉಳಿಯಬೇಕಾಗುತ್ತದೆ. ಶ್ರಾದ್ಧತರ್ಪಣ ಕ್ರಿಯಾದಿಗಳಿಲ್ಲದೆ ಹಿರಿಯರು ಪರಿತಪಿಸಿ ಶಪಿಸುವುದಿಲ್ಲವೇ? ಶ್ರಾದ್ಧ, ಸ್ವರ್ಗ, ನರಕ ಎಲ್ಲಾ ಈಗಿನವರ ಕಣ್ಣಿನಲ್ಲಿ ಮೌಢ್ಯ ಎನಿಸೀತು. ಆದೇ ಅಪ್ಪಯ್ಯನಿಗೆ? ನಾನು ಮಾಡಿದ ತಪ್ಪಿಗಾಗಿ ಸಂಸಾರವೇ ನಾಶವಾದೀತು.

ರಗ್ಗನ್ನು ಕಿವಿಯ ಬಳಿಗೆ ಒತ್ತಿ ಸಣ್ಣಗೆ ಕಂಪಿಸಿದೆ. ಘಂಟೆ ಏಳಾದರೂ ಇತ್ತ ಯಾರದೂ ಸುಳಿವಿಲ್ಲ ಅಮ್ಮ-ಅಪ್ಪಯ್ಯ ಹೋಗಲಿ ಅಣ್ಣ ಕೂಡ, ಎಷ್ಟೋ ದಿನ ಬೆಳಿಗ್ಗೆ ನಾನು ತಡವಾಗಿ ಎದ್ದಾಗ ಕಾಫಿಯನ್ನು ಅವನೇ ತಂದುಕೊಟ್ಟು, ನಟ್‌ಮೇಲೆ ಮಾಡಿದ್ದುಂಟು. ಆದರೆ ಇಂದು ನನ್ನಿಂದ ವಿಮುಖವಾಗಿದ್ದಾನೆ. ಮದುವೆಯ ಪ್ರಸ್ತಾಪ ಅವನ ಮನಸ್ಸನ್ನು ಕೆಡಿಸಿರಬೇಕು. ಹಾಗೆಂದ ಮಾತ್ರಕ್ಕೆ ಪ್ರೀತಿ-ಪ್ರೇಮ-ವಾತ್ಸಲ್ಯ ಇಷ್ಟು ಬೇಗ ಮುರುಟಿ ಹೋಗುತ್ತದೆಯೇ? ಅದು ಅಷ್ಟೊಂದು ಕ್ಷಣಿಕವೇ? ಇಲ್ಲಿಯವರೆಗಿನ ಭಾವನೆಯೆಲ್ಲಾ ತೋರಿಕೆಯದೇ?

ತುಟಿಕಚ್ಚಿ ಬಿಕ್ಕಳಿಸುತ್ತೇನೆ. ಒಳಗಿನಿಂದ ಒತ್ತಿಕೊಂಡು ಬರು ತ್ತಿದೆ. ಮೌನ ಕುಕ್ಕಿ ಕುಕ್ಕಿ ತಿನ್ನುತ್ತಿದೆ. ಎದುರಿಗೆ ನಿಂತು ಬೈದಿದ್ದರೆ ಹೊಡೆದಿದ್ದರೆ ಸಹಿಸಬಹುದಿತ್ತು. ಆದರೆ ನರ ನರಗಳನ್ನು ಬಿಗಿಯುವ ಮೌನ ಅಸಹನೀಯ. ಅಣ್ಣ ಹೊಡೆದಾಗ ತಲೆಸುತ್ತಿ ಬಂದುದೊಂದೇ ನೆನಪು. ಎಚ್ಚರವಾದದ್ದು ಈಗ ರಾತ್ರಿಯೆಲ್ಲಾ ಮೂವರು ರಮಾಲೋ ಚನೆ ನಡಸಿ ನಿರ್ಧಾರಕ್ಕೆ ಬಂದಿರಬೇಕು. ಬೇಕೆಂದಿದ್ದರೆ ರೂಮಿನಲ್ಲೇ ನನ್ನನ್ನು ಬಂದಿಯಾಗಿ ಮಾಡಬಹುದಿತ್ತು. ದೈಹಿಕವಾಗಿ ಅಥವ ಮಾನ ಕವಾಗಿ ಹಿಂಸಿಸಿ ಮನಸ್ಸು ಪರಿವರ್ತಿಸಲು ಶ್ರಮಿಸಬಹುದಿತ್ತು. ಮಾಸ್ತರ್ ಆರು ತಿಂಗಳಿನಿಂದ ಸತತ ಕೆತ್ತಿಕೊರೆದಿದ್ದ ಶಿಲ್ಪ ಅಣ್ಣನ ಒಂದು ಮಾತಿನಿಂದ ತಕ್ಕರಿಸಿಹೋಗಿತ್ತು. ಆದರೂ ಮದುವೆಯ ಬಗ್ಗೆ ಅಣ್ಣ ಚಕಾರವೆತ್ತಲಿಲ್ಲ. ಅಣ್ಣನ ಸ್ಥಿರತೆಗೂ ಮಾಸ್ತರ್‌ರ ಡೋಲಾಯಮಾನ ಮನಸ್ಥಿತಿಗೂ ಏನಾದರೂ ಸಂಬಂಧವಿದ್ದೀತೇ?

ಅಲ್ಲಿ ಕಾಯುತ್ತಾ ಶತಪಥ ಸುತ್ತುತ್ತಿರಬಹುದಾದ ಮಾಸ್ತರ್‌ರ ನೆನಪು ಮೇಲೇಳಬೇಕು. ಕೂಡಲು ಹಿಂದೆ ಮಾಡಿ ಹಿಂತಿರುಗಿ ನೋಡದೆ ಹೆಜ್ಜೆಹಾಕಬೇಕು. ಎಂಬ ನಿರ್ಧಾರ ಅಚಲವಾಗುತ್ತ ನಡೆದಂತೆ ನರಸತ್ತಂ ತಹ ಕುಸಿತ ಇಲ್ಲಿಯವರೆಗೂ ಕಲ್ಪಿಸಲಾಗದಿದ್ದ, ಯೋಚಿಸಿ ಕೂಡ ಇರ ದಿದ್ದ ಹತ್ತಾರು ಬಂಧನಗಳು ಕುಣಿಕೆಯಾಗಿ ಮನವನ್ನು ಬಂಧಿಸಲು ಯತ್ನಿ ಸುತ್ತದೆ. ಎಳೆಯುತ್ತಾ ಹೋದಂತೆಲ್ಲಾ ಬಿಚ್ಚಿಕೊಳ್ಳುವ ಈ ಸುಸಂ ಸ್ಕೃತ ವಾತಾವರಣ ಬೆಚ್ಚಗಾಗಿಸುತ್ತದೆ. ಅಪ್ಪಯ್ಯನ ಯಾತನಾಭರಿತ ಸ್ಥಿತಪ್ರಜ್ಞಮುಖ ಎದುರಾಗುತ್ತದೆ, ಅಣ್ಣ ಹೊಡೆಯಲು ಕೈ ಎತ್ತಿದ್ದ ತಕ್ಷಣ 'ರಾಮ ರಾಮಾ' ಎನ್ನುತ್ತಾ ಧಾವಿಸಿದ ಅಪ್ಪಯ್ಯ ನನ್ನನ್ನೂ ತೋಳಿಗೇ ಹಾಕಿಕೊಂಡಿದ್ದರು. ಅಣ್ಣ ತಕ್ಷಣ ಹೊರಟುಹೊದ. ಅಮ್ಮ ಆಗಲೇ ನನ್ನನ್ನು ಮೈಲಿಗೆ ಮಾಡಿ ದೂರ ಇಟ್ಟಿರಬೇಕು. ಅಪ್ಪಯ್ಯ ಇಲ್ಲಿಗೆ ತಂದು ಮಲಗಿಸಿ ನೆಟ್ ಇಳಸಿದ್ದಾರೆ.

ಕಾಲಿನಿಂದ ರಗ್ಗನ್ನು ಕೆಳಗೆ ನೂಕುವಾಗ ಹನಿ ಕಣ್ಣೀರೂ ಕೆಳಗೆ

ಇಳಿಯುವುದಿಲ್ಲ, ಬತ್ತಿ ಹೋಗಿರಬೇಕು. ಬಲಗೈಯನ್ನು ಹಾಸಿಗೆಯ ಮೇಲೂರಿ ಭುಜವನ್ನು ಪಕ್ಕಕ್ಕೆ ವಾಲಿಸಿ ನೆಟಕಿ ತೆಗೆಯಬೇಕು. ಎಂದು ಕೊಳ್ಳುವಾಗ ಅಣ್ಣನ ಆಕೃತಿ ನನ್ನ ಸಮೀಪದಲ್ಲೇ. ಎಷ್ಟು ಹೊತ್ತಿನಿಂದ ಹೀಗೆ ನಿಂತಿದ್ದಾನೋ? ನನ್ನ ಗಮನ ತನ್ನೆಡೆಗೆ ಸೆಳೆದು, ನೆಲದ ಮೇಲೆ ಮಂಡಿಯೂರಿ ಕುಳಿತವನೇ ನನ್ನ ಕೆನ್ನೆಯ ಮೇಲೆ ಕೈಯಾಡಿಸಿ 'ಸಾರಿ ಶಾಮಿ ...ಉದ್ವೇಗದಲ್ಲಿ ಹೊಡೆದುಬಿಟ್ಟೆ. ಕೆನ್ನೆಯ ಮೇಲೆ ಬೆರಳೂರಿದೆ. ನನ್ನ ನಂಬಿಕೆಗೆ ನೀನು ನಟನೆಯ ಕೊಡಲಿಪೆಟ್ಟು ಕೊಡಬಹುದೇ ಶಾಮಾ...? ಅಮ್ಮ ಹೇಳಿದಳು, ತಮಾಷೆಗೆ ನೀನು ಹಾಗೆಲ್ಲಾ ಹೇಳಿದ್ದಂತೆ ರಾತ್ರಿಯೆಲ್ಲಾ ಏನೇನೋ ಕನವರಿಸ್ತಾ ಇದ್ದಿಯಂತೆ ನಂಗೆ. ಎಷ್ಟು ಆಶ್ಚರ್ಯ ಆಯ್ತು-ಗೊತ್ತಾ? ಇಂತಹ ವಾತಾವರಣದಲ್ಲಿ ಬೆಳೆದು ಬಂದಿರೋ ಹುಡುಗಿಗೆ ಈ ಹೊಲಸು ಯೋಚನೆ ಯಾಕೆ ಬಂತೂಂತ ಹೋಗ್ಲಿ ಬಾ, ಕಾಫಿ ಕುಡಿ ಯುವ. ಇವತ್ತು ಕಾಲೇಜಿಗೆ ಹೋಗೋದು ಬೇಡ ನಾಳೆ ಕಳಿಸ್ತೀನಿ. ಹೊಡೆದದ್ದಕ್ಕೆ ಪೆನಾಲ್ಟೀಂತ ಬಾರ್ ಕ್ಯಾಡ್ ಬರೀಸ್, ಹ್ಯಾ" ಅರೇ, ಅಳೋದ್ಯಾಕೆ ಹುಡುಗೀ, ನಿನ್ನ ರಾತ್ರಿಯೆಲ್ಲಾ ನಿನ್ನ ಬಗ್ಗೆಯೇ ಯೋಚಿಸ್ತಾ ತೋಟದ ಮನೆಯಲ್ಲಿ ಜಾಗರಣೆ ಮಾಡ್ತಾ ಗದಗುಟ್ಟಿ ನಡುಗಿದೆ. ಊಟ ಇಲ್ಲದೆ ಕರುಳು ಅರಚ್ತಾ ಇದೆ. ಏಳು ಮತ್ತೆ..."

ತೀರಾ ತೀರಾ ಸುಸ್ತಾದೆ. ನನ್ನ ಸುಪ್ತಪ್ರಜ್ಞೆ ಏನೆಲ್ಲಾ ಬಡಬಡಿಸಿರಬಹುದು. ಆದರೆ ನಾನು ಇಲ್ಲಿಯವರೆಗೆ ಹೇಳಿದುದೆಲ್ಲಾ ನಟನೆಯಲ್ಲಾ ಎಂದು ಸ್ಪಷ್ಟಪಡಿಸಬೇಕು ಎಂದು ಮೊಗ ಮೇಲೆ ಮಾಡಿದಾಗ ನನ್ನ ಬಾಯಮೇಲೆ ತನ್ನ ಬೆರಳೊತ್ತಿದ ಅಣ್ಣ 'ಮಂಜು ಮುಸುಕಿದ ಹಾದಿಯೆಂದರೆ ತಪ್ಪು ಹೆಜ್ಜೆಇಡಬಹುದು ಆದರೆ ನಡೆದು ಬಂದ ಹಾದಿ ಬದಲಿಸೋಕೆ ಕಷ್ಟವಾಗುತ್ತೆ. ಬಾ...ಸ್ಪೆಷಲ್ ಡೋಸ್ ಕೊಡಿಸ್ತೀನಿ... ಕೈ ಜಗ್ಗಿದಾಗ ಹೊರಬಂದರೆ ಬಾಗಿಲಿಗೆ ಕಿವಿಕೊಟ್ಟಿದ್ದ ಅಪ್ಪಯ್ಯ-ಅಮ್ಮ ಕಾಣಿಸುತ್ತಾರೆ, ನನ್ನ ಪ್ರತಿಕ್ರಿಯೆಗಾಗಿ ರಾತ್ರಿಯೆಲ್ಲಾ ತಹತಹಿಸಿದ ಜೀವಗಳನ್ನು ಕಂಡಾಗ ಅಣ್ಣನ ಮಾತು ಸೂಕ್ಷ್ಮವಾಗುತ್ತದೆ. ಬಚ್ಚಲ ಮನೆಯ ಕಿಟಕಿಯಲ್ಲಿ ದೃಷ್ಟಿ ಹಾಯಿಸಿದರೆ ಆದಿ ಅಂತ್ಯವಿಲ್ಲದ ನೀಲಿನ

ಭಾಸು ಅಲ್ಲಿ ಮತ್ತೆ ಮತ್ತೆ ತೇಲಿಬರುವ ಪೊಸ್ತರ್‌ರ ಮೊಗ. ನೋವು, ತಿರಸ್ಕಾರ, ಆತಂಕ, ಅಸಹಾಯಕತೆ ತುಂಬಿ ಗೋಡೆಯ ದೊಡ್ಡ ಗಡಿಯಾರ ಒಂಬತ್ತು ಘಂಟೆ ಸೂಚಿಸಿದಾಗ ಎದೆಯಲ್ಲಿ ಥಕ್‌ಥಕ್ ಪೇರುಸಿತೆಳಿದು ಕಣ್ಣು ಬಿಗಿದರೆ ಹನಿಗಳು ಕೆನ್ನೆಯ ಮೇಲೆ ಜಾರಿದವು. ಬದಿಯಲ್ಲಿದ್ದ ಅಣ್ಣ ತನ್ನ ಒರಟು ಬೆರಳುಗಳಿಂದ ಕಣ್ಣೀರು ತೊಡೆಯಲಾರಂಭಿಸಿದ.

# ನಿರ್ಧಾರ

—ಪದ್ಮಾ ಗುರುರಾಜ್

ಮನೆಯೆಲ್ಲಾ ಬರಿದೋ ಬರಿದು. ಏನು ಮಾಡಲೂ ತೋರದು. ಸುತ್ತಲೂ ಹೆಪ್ಪುಗಟ್ಟಿದ ಕತ್ತಲೆ, ನಿಶ್ಶಬ್ದ, ನೀರವತೆ ಧೋ ಎಂದು ಬಾಯ್ದೆರೆದು ತನ್ನನ್ನು ನುಂಗಲು ಬರುತ್ತಿದೆ ಎನಿಸಿ ಕಣ್ಣು ಮುಚ್ಚಿದಳು ಸೌಮಿತ್ರೆ. ಎಷ್ಟು ಸಾರಿ ಮಗ್ಗಲು ಹೊರಳಿಸಿದರೂ ನಿದ್ರೆ ಬಾರದು. ಏಕೆ ಈ ತುಯ್ದಾಟ, ತಳಮಳ? ಇಂತಹ ಒಂದು ದಿನವನ್ನು ತಾನೆಷ್ಟೋ ದಿವಸಗಳಿಂದ ಮನಃಪೂರ್ವಕವಾಗಿ ಎದುರುನೋಡುತ್ತ ಇರಲಿಲ್ಲವೆ? ಆ ದಿನವೇ ಎದುರಾದಾಗ ಇಂತಹ ಅಸ್ವಸ್ಥತೆ, ಮುಜುಗರ ಏಕೆ?

ಇನ್ನು ತನ್ನ ನಿರ್ಧಾರವನ್ನು ಕಾರ್ಯಗತಗೊಳಿಸಲು ಯಾವ ಆತಂಕವೂ ಇರದು...ತನ್ನ...ಮನದ, ಮನೆಯ, ಏಕೈಕ ಬೆಳಕಿನ ಕುಡಿಯಾದ ರೂಪಳನ್ನಂತೂ ದಡ ಸೇರಿಸಿದ್ದು ಆಯಿತು. ಬುದ್ಧಿ ತಿಳಿದಾಗಿನಿಂದಲೂ ತಂದೆಯ ಮುಖವನ್ನೇ ಕಾಣದೆ ತನಗೇ ಅಂಟಿಕೊಂಡು ಬೆಳೆದವಳ ಅಗಲಿಕೆ ಈ ನೋವು ತಂದಿರುವುದು ಸಹಜವೇ. ಆಗಿನಿಂದಲೂ ಸುಪ್ತವಾದ ತನ್ನ ಸುಖ, ಸಂತೋಷ, ಬಯಕೆ, ಆಕಾಂಕ್ಷೆಗಳೆಲ್ಲವನ್ನೂ ಮಗಳ ಬಾಳನ್ನು ಹಸನುಗೊಳಿಸಲು, ತಾನು ಒತ್ತೆಯಿಟ್ಟಿದ್ದಾಗಿತ್ತು. ಈಗ ಅನುರೂಪನಾದ ಪತಿಯನ್ನು ಪಡೆದು ಸುಖ ಸಂಸಾರ ನಡೆಸಲು ವಿದೇಶಕ್ಕೆ ಹೊರಟ ಮಗಳನ್ನು ಇದೇ ಸಂಜೆ ಬೀಳ್ಕೊಟ್ಟು ಬಂದ ದುಃಖ, ಭವಿಷ್ಯದ ಚಿಂತೆ, ಹೆಮ್ಮೆ, ಸಾರ್ಥಕತೆ—ಎಲ್ಲವೂ ಸೇರಿದ ವಿಚಿತ್ರ ಭಾವನೆಯೊಂದು ಸುಮಿತ್ರೆಯ ತಾಯಿ ಜೀವವನ್ನು ಹಿಡಿದಲುಗಿಸುತ್ತಿತ್ತು; ಇನು ಹಳೆಯ ಬಂಧನ, ಸಂಕೋಲೆಗಳನ್ನು ತಾನು ಕಳಚಿಕೊಳ್ಳಲೇ ಬೇಕು

ಆಗ...ಆಗಲೇ. ನನಗೆ ಪುನರ್ಜನ್ಮ. ಹಾಗೆಂದುಕೊಳ್ಳುತ್ತಲೇ ಕಳೆದ ಇಪ್ಪತ್ತು ವರ್ಷಗಳಷ್ಟು ದೀರ್ಘ ಅವಧಿಯಲ್ಲಿ ಸರಿದುಹೋದ ಘಟನೆಗಳು ಜೀವ ತಳೆದು, ಸುಮಿತ್ರೆಯ ಒಳಗಣ್ಣುಗಳೆದುರಿಗೆ ಸದ್ದಿಲ್ಲದೆ ಸುಳಿದು ಹೋದುವು.

ಆಗಿನ್ನೂ ಸುಮಿತ್ರೆಯ ಬಾಳಿನಲ್ಲಿ ವಸಂತ ಇಣುಕಿನೋಡುತ್ತಿದ್ದ ದಿವಸಗಳು. ಡಿಗ್ರಿ ಪರೀಕ್ಷೆ ಮುಗಿದು ಆದೇ ತಾನೆ ಬ್ಯಾಂಕೊಂದರಲ್ಲಿ ಕೆಲಸ ದೊರಕಿದ್ದು ಆಕೆ ಗರಿಗೆದರಿದ ಹಕ್ಕಿಯಾಗಿದ್ದಳು. ಆಕರ್ಷಕ ರೂಪು, ತಕ್ಕ ಮಟ್ಟಿನ ವಿದ್ಯೆ, ತಿಂಗಳಿಗೊಮ್ಮೆ ಕೈತುಂಬುವ ಸಂಬಳದ ಉದ್ಯೋಗ ಗಳಿಂದಾಗಿ ಸುಮಿತ್ರೆಯ ಮದುವೆ ಏನೇನೂ ಸಮಸ್ಯೆಯಾಗದೆ ನಡೆದು ಹೋಯಿತು. ಕೈ ಹಿಡಿದ ಪತಿ ರಾಘವನೊಂದಿಗೆ ಮುಚ್ಚಟೆಯಾಗಿ ಸುಖೀ ದಾಂಪತ್ಯ ಜೀವನ ನಡೆಸುವ ಸಹಜವಾದ ಕನಸು, ಹಂಬಲ ಹೊತ್ತ ಸುಮಿತ್ರೆಗೆ ಬಹುಬೇಗ ಭ್ರಮನಿರಸನವಾಗಿತ್ತು. ಕಾರಣ ರಾಘವ ಮೆಚ್ಚಿ ಕೈಹಿಡಿದದ್ದು ಸುಮಿತ್ರೆಯನ್ನಲ್ಲ ಆಕೆಯ ಉದ್ಯೋಗವನ್ನು. ಅವನ ಮನೆಯವರೂ ಸಹ ಆದರಿಸಿದ್ದು, ಸೊಸೆಯ ಸಂಬಳವನ್ನಷ್ಟೆ. ರಾಘ ವನ ಹಿಂದೆ ಸಾಲು ಸಾಲಾಗಿ ನಿಂತಿದ್ದವು ಸೇರು, ಪಾವು, ಚಟಾಕು, ಹೆಣ್ಣು ಗಂಡು ಮಕ್ಕಳು.

ನೆಮ್ಮದಿಯರಿಯದ ಸಂಸಾರ, ಬಗೆ ಹರಿಯದ ಸಾಲಗಳು, ಸಾಂಸಾ ರಿಕ ಗೊಂದಲಗಳು ಸುಮಿತ್ರೆಯ ಇಡೀ ಸಂಬಳದ ಹಣವನ್ನು ನುಂಗಲು ಸದಾ ಬಾಯ್ತೆರೆದು ಕಾದಿರುತ್ತಿದ್ದವು. ದುಡಿಯುವ ಸೊಸೆ ಎಂಬ ಯಾವ ಆದರ, ಅಭಿಮಾನಗಳೂ ಮನೆಯವರಿಗಿಲ್ಲ. ಮನೆಯ ಒಳಗೆ, ಹೊರಗೆ ಮೈತುಂಬಾ ದುಡಿತ, ಮನದ ತುಂಬಾ ಕಿರಿಕಿರಿ, ಮುಜುಗರ. ಸಾಲದ್ದಕ್ಕೆ ತನ್ನದೆಂಬ ವ್ಯಕ್ತಿತ್ವವೇ ಇಲ್ಲದೆ ತಾಯಿ ಹೇಳಿದ್ದಕ್ಕೆಲ್ಲಾ ಗೋಣು ಹಾಕುವ ರಾಘವನ ಸಣ್ಣತನ, ಕೀಳರಿಮೆ, ಹೀನ ಮನೋಭಾವ, ಸುಮಿತ್ರೆಯ ತಲೆ ಚಿಟ್ಟು ಹಿಡಿಸಿತ್ತು.

ಆ ಕಗ್ಗತ್ತಲಲ್ಲೂ ನಕ್ಷತ್ರವೊಂದು ಮಿಂಚಿತು. ಒಡಲ ತುಂಬಾ ಹೊಸ

ಜೀವವೊಂದು ಮಿಸುಕಾಡುತ್ತಲೇ ಸುಮಿತ್ರೆಯ ಹೆಣ್ತನ, ತಾಯ್ತನದ ಹೊಣೆಗಾರಿಕೆ ಜಾಗೃತವಾಗಿತ್ತು. ಆಲಸಿ, ಬೇಜವಾಬ್ದಾರಿ, ದುರ್ಬಲ ವ್ಯಕ್ತಿತ್ವದ ರಾಘವನಂತಹ ಗಂಡನಿಂದ ಏನನ್ನೂ ನಿರೀಕ್ಷಿಸಲಾರದೆ ತನ್ನ ಭಾವಿ ಕಂದನ ಭವಿಷ್ಯಕ್ಕಾಗಿ, ತನ್ನ ಕನಸಿನ ಪುಟ್ಟ ಮುಚ್ಚಟೆಯ ಸಂಸಾರಕ್ಕಾಗಿ ಸೊಂಟ ಕಟ್ಟಿ ಕೈಬಿಗಿಹಿಡಿದಳು. ತನ್ನ ಸಂಪಾದನೆಯ ಪೂರಾ ಹಣವನ್ನು ಅತ್ತೆಯ ಕೈಗೆ ಹಾಕದೆ ಒಂದೆರಡು ನೂರು ಬ್ಯಾಂಕಿನಲ್ಲಿ ಭದ್ರಪಡಿಸಿ ಮತ್ತೊಂದು ನೂರನ್ನು ತಾಯಿಯ ಕೈಲಿಟ್ಟು ಉಳಿದುದನ್ನು ಅತ್ತೆಯ ಮುಂದಿಟ್ಟಾಗ, ಆ ಮನೆಯೆಂಬ ಸಂತೆಯಲ್ಲಿ ಬಿರುಗಾಳಿ ಎದ್ದಿತು. ಹಿರಿಯರ ಜೊತೆಗೆ ಅವರ ಚೇಲನಾಗಿ ರಾಘವನೂ ಸೇರಿ ಬಾಯಿಗೆ ಬಂದಂತೆ ಅವಳನ್ನು ಹೀಯಾಳಿಸಿದ್ದ. ಒಂದೊಂದು ದಿನವೂ ಅವಳ ಪಾಲಿಗೆ ಆ ಮನೆಯನ್ನು ನರಕಸದೃಶವಾಗಿಸುತ್ತಾ ಹೋಗಿತ್ತು. ಟೀಕೆ, ಅವಹೇಳನ, ವ್ಯಂಗ್ಯ ಬಯ್ಗುಳಗಳಿಂದ ಸುಮಿತ್ರೆಯ ಎದೆ ಕಲ್ಲಾಯಿತು.

'ಗಂಜೀಯ ಕುಡಿದರೂ ಗಂಡನ ಮನೆ ಲೇಸು' ಎಂಬ ಸಂಸ್ಕೃತಿಯ ಪಾಠವನ್ನು ಹಿರಿಯರಿಂದ ಅರೆದು ಕುಡಿದವಳಾದರೂ ಸುಮಿತ್ರೆಯ ಸಹನೆ. ಸೈರಣೆಗಳ ಸತ್ವಪರೀಕ್ಷೆಯೇ ಅಲ್ಲಿ ನಡೆದುಹೋಗಿತ್ತು. ಬರುಬರುತ್ತಾ ಅದೇ ರೊಚ್ಚಿನಲ್ಲಿ ತಾಯಿಯ ಕೈಗೊಂಬೆಯಾದ ರಾಘವ ಹೆಂಡತಿಯ ಶೀಲವನ್ನೇ ಶಂಕಿಸಿ ಹಗುರವಾಗಿ ಮಾತನಾಡಲಾರಂಭಿಸಿದಾಗ, ಸುಮಿತ್ರೆಯ ಸ್ವಾಭಿಮಾನ ಕೆರಳಿ ಹೆಡೆಯೆತ್ತಿತ್ತು. ಬಾಣಂತನಕ್ಕೆಂದು ತೌರುಮನೆಗೆ ಬಂದವಳು ಛಲದಿಂದ ಅಲ್ಲೇ ನಿಂತಳು. ಹಾಲುಗಲ್ಲದ ಹಸುಳೆ, ಅದೂ ಹೆಣ್ಣುಕೂಸು, ಅದರ ಭವಿಷ್ಯದ ಚಿಂತೆಯೂ ಅವಳ ನಿರ್ಧಾರವನ್ನು ಬದಲಿಸಲಿಲ್ಲ.

ಕರೆದೊಯ್ಯಲು ಬಂದ ಗಂಡನಿಗೆ ಚೆನ್ನಾಗಿ ಛೀಮಾರಿ ಹಾಕಿ ಕಳುಹಿಸಿದಳು. ಹೆತ್ತವರು ಸಾಕಷ್ಟು ಹಿತವಚನ ನುಡಿದರು, 'ಹೋಗಮ್ಮಾ ಸುಮ್ಮಿ, ಹಟ ಮಾಡಬೇಡ. ಎಷ್ಟಾದರೂ ಅದೇ ನಿನ್ನ ಮನೆ. ನಮ್ಮದೇನು ಶಾಶ್ವತ? ಮಗುವಿಗೋಸ್ಕರವಾದರೂ ನೀನು ಹೋಗೋ

ಹೊಂದ್ಕೊಂಡುಹೋಗು" ಎಂದೆಲ್ಲಾ ಉಪದೇಶ ಮಾಡಿದರು. ಆದರೆ ಸಾಗರದ ಅಲೆಗಳ ನಡುವೆ ನಿಶ್ಚಲವಾಗಿ ನಿಂತ ಬಂಡೆಯಂತೆ ಅವಳ ನಿರ್ಧಾರವು ಅಚಲ.

ಮಗು ರೂಪಾಗೆ ಮೂರು ವರ್ಷಗಳಾಗುತ್ತಲೇ, ಕೋರ್ಟಿನ ಮೆಟ್ಟಿಲು ತುಳಿದು ಗಂಡನೆನಿಸಿಕೊಂಡ ಕ್ಷುದ್ರಪ್ರಾಣಿಯಿಂದ ವಿಚ್ಛೇದನ ಪಡೆದುದಾಯಿತು. ಆ ವೇಳೆಗೆ ಅಣ್ಣನ ಮದುವೆಯಾಗಿ, ಅತ್ತಿಗೆ ಮನೆಗೆ ಬಂದುದರಿಂದ, ಅಣ್ಣ–ಅತ್ತಿಗೆಯರ ಎದುರು ಹೀನವಾಗಿ ಬದುಕುವ ಇಷ್ಟವಾಗದೆ ಮಗಳೊಂದಿಗೆ ಬೇರೊಂದು ಮನೆ ಮಾಡಿದಳು. ತನ್ನದೇ ಮನೆಯಲ್ಲಿ ಕಾಲೂರಿ ನಿಂತಾಗ ಸುಮಿತ್ರೆಗೆ ಇದ್ದಷ್ಟರಲ್ಲಿ ಹಾಯೆನಿಸಿತು. ಹಿಂದೆಯೇ ಮೂಕವೇದನೆ. ತನ್ನ ಕನಸಿನ ಪುಟ್ಟ ಮನೆ, ಆದರ್ಶ ಸಂಸಾರಕ್ಕೆ ಈಗಿನದನ್ನು ಹೋಲಿಸಿದಾಗ ತನ್ನ ಒಂಟಿ ಬಾಳ ಬವಣೆಗಾಗಿ ತೀರದ ಜುಗುಪ್ಸೆ.

ದಿನಗಳೆದಂತೆ ಪರಿಸ್ಥಿತಿಗೆ ಸುಮಿತ್ರೆ ಹೊಂದಿಕೊಂಡಳು. ತಂದೆಯ ಮುಖವನ್ನೇ ಕಾಣದ ಮುದ್ದು ರೂಪಾಳ ತಾಯಿ ತಂದೆ ಎರಡೂ ಆಗಿ ಬಾಳ ದೋಣಿಯ ಚುಕ್ಕಾಣಿ ಹಿಡಿದು ನಡೆಸಲಾರಂಭಿಸಿದಳು. ತಾಯಿಯ ಕಣ್ಮಣಿಯಾಗಿ ಸೊಂಪಾಗಿ ಬೆಳೆದ ಮಗಳನ್ನು ಶಾಲೆಗೆ ಕಳುಹಿಸಿ ಸುಮಿತ್ರೆ ಬ್ಯಾಂಕಿನ ದಾರಿ ಹಿಡಿಯುತ್ತಿದ್ದಳು. ಹೃದಯದಲ್ಲಿ ಹೆಪ್ಪುಗಟ್ಟಿದ ದುಃಖದ ಛಾಯೆಯ ಮೇಲೆ ತೆರೆ ಎಳೆದು ಬ್ಯಾಂಕಿನ ಕೆಲಸದಲ್ಲಿ ಮುಳುಗಿ ಹೋಗುತ್ತಿದ್ದಳು. ಅಷ್ಟು ಹೊತ್ತು ಅವಳು ಪರಮ ಸುಖಿ ಮನೆಗೆ ಬಂದಳೆಂದರೆ ಚಿಂಗುಲಾಬಿಯಂತೆ ನಗುವ ರೂಪಾಳ ಆಟ–ಪಾಠಗಳಲ್ಲಿ ತನ್ಮಯಳಾಗಿ ತನ್ನನ್ನೇ ಮರೆಯುತ್ತಿದ್ದಳು.

ದಕ್ಷತೆ, ಪ್ರಾಮಾಣಿಕತೆ, ಸೌಜನ್ಯಪೂರ್ಣ ನಡೆ–ನುಡಿಗಳಿಂದಾಗಿ ಬೇಗ ಬೇಗ ಪ್ರೊಮೋಷನ್ ಪಡೆದ ಸುಮಿತ್ರೆ ಈಗ ಬ್ಯಾಂಕಿನಲ್ಲಿ ಆಫೀಸರ್. ತಾನು ಬಾಡಿಗೆಗೆ ವಾಸವಾಗಿದ್ದ ಔಟ್ ಹೌಸ್ ಸೇರಿದಂತೆ ಮುಂದಿನ

ದೊಡ್ಡ ಮನೆ ಖರೀದಿಗೆ ಬಂದಾಗ ಸುಮಿತ್ರ ಬ್ಯಾಂಕಿನಲ್ಲಿ ಸಾಲ ತೆಗೆದು ಎರಡೂ ಮನೆಗಳನ್ನು ಕೊಂಡಳು. ಮುಂದಿನ ಮನೆಗೆ ತನ್ನ ವಾಸ ಸ್ಥಳ ವನ್ನು ಬದಲಾಯಿಸಿದ ನಂತರ, ಹಿಂದಿನ ಮನೆ ಬಾಡಿಗೆಗೆ. ಬಂದು ತಳ ವೂರಿ ನಿಂತವರು ಸರ್ಕಾರಿ ಕಾಲೇಜಿನಲ್ಲಿ ಉಪನ್ಯಾಸಕ ಸೋಮನಾಥ, ಅಕ್ಕ ಭಾರತೀಭಾಯಿ. ದಿಕ್ಕಿಲ್ಲದ ವಿಧವೆ ಅಕ್ಕನಿಗಾಗಿ. ಅವಿವಾಹಿತ ತಂಗಿಯರಿ ಗಾಗಿ ತನಗೆ ತಾನೇ ಬ್ರಹ್ಮಚರ್ಯದ ವಿಧಿಯನ್ನು ತನ್ನ ಮೇಲೆ ಹೇರಿಕೊಂಡ ದೃಢಮನಸ್ಕ ಸೋಮನಾಥ. ವಯಸ್ಸಿಗೆ ಮೀರಿದ ಗಾಂಭೀರ್ಯ. ಅಕಾಲ ವೈರಾಗ್ಯದ ಗೆರೆಗಳನ್ನು ಮೂಡಿಸಿದ ವಿಶಾಲವಾದ ಹಣೆ, ಎಣ್ಣೆ ಗೆಂಪು ಬಣ್ಣ. ಸುಮಿತ್ರೆಯಲ್ಲಿ ಸದಭಿಪ್ರಾಯವನ್ನು ಮೂಡಿಸಿದವನು. ಇಬ್ಬರು ತಂಗಿಯರಿಗೆ ಮದುವೆ ಮಾಡಿ ಮುಗಿಸಿದ ನಂತರವೂ ಕಂಕಣ ತೊಡಲು ಮನಸ್ಸು ಮಾಡದ ತಮ್ಮನ ಬಗ್ಗೆ ಭಾರತೀಬಾಯಿಗೆ ಇನ್ನಿಲ್ಲದ ಕಾಳಜಿ, ಸುಮಿತ್ರೆ ಅಪರೂಪಕ್ಕೆ ಒಮ್ಮೆ ಬಿಡುವಾಗಿ ಕುಳಿತರೆ ಸಾಕು, ಎರಡೂ ಮನೆಗಳ ನಡುವೆ ಇದ್ದ ಮುಚ್ಚಿದ ಬಾಗಿಲನ್ನು ತೆರೆದು, ತಮ್ಮ ಕಳವಳವನ್ನು ಸುಮಿತ್ರೆಯೊಂದಿಗೆ ತೋಡಿಕೊಳ್ಳುವರಾಕೆ, "ನೀವಾದರೂ ಸ್ವಲ್ಪ ಕೇಳಿನೋಡಿ ಸುಮಿತ್ರಮ್ಮ, ಎಷ್ಟು ದಿನಾಂತ ಹೀಗೆ ಸನ್ಯಾಸಿ ಆಗಿರು ತ್ತಾನೋ... ಅಂತ.

ಪದೇಪದೇ ಆಕೆ ಅದನ್ನೇ ಹೇಳುತ್ತಿದ್ದಾಗ ಸುಮ್ಮನಿರಲಾರದೆ ಸಂಕೋಚದಿಂದ ವಿಷಯವನ್ನೊಮ್ಮೆ ಸೋಮನಾಥನೊಂದಿಗೆ ಪ್ರಸ್ತಾಪಿಸಿ ದಾಗ ಈ ವಯಸ್ಸಿನಲ್ಲಿ ಇನ್ನೆಂಥ ಮದುವೆ' ಎಂದು ಹಗುರವಾಗಿ ತೇಲಿಸಿ ನುಡಿದ ಸೋಮನಾಥ. ಮತ್ತೊಮ್ಮೆ 'ಮನಸ್ಸಿಗೆ ಒಪ್ಪುವ ಹೆಣ್ಣು ಸಿಕ್ಕಿದರೆ ತಾನೇ ಮದುವೆಯ ಮಾತು'-ಎಂದು ತೀಕ್ಷ್ಣವಾಗಿ ಅವಳ ಕಣ್ಣುಗಳಲ್ಲೇ ದೃಷ್ಟಿ ನೆಟ್ಟು ಹೇಳಿದ.

ಸುಮಿತ್ರೆಯ ಹೆಣ್ಣು ಜೀವ ಆ ಒಂದು ಘಳಿಗೆಯಲ್ಲಿ ತಲ್ಲಣಿಸಿ ಹೋಗಿತ್ತು. ತಾನೇನು ತನ್ನ ವಯಸ್ಸೇನು. ಇಷ್ಟು ದಿನವೂ ಜಡವಾಗಿ ಕಂಬದಂತಿದ್ದ ತನ್ನಲ್ಲಿ ಈಗೇಕೆ ಈ ಮನೋವಿಕಾರ—ಅದೂ ಮದುವೆಗೆ ಬೆಳೆದ ಮಗಳನ್ನು ಮುಂದಿಟ್ಟುಕೊಂಡು

ಅನಂತರದ ದಿವಸಗಳಲ್ಲಿ ಖಾಲಿ ಬಿಳಿ ಹಾಳೆಯಾಗಿದ್ದ ಅವಳ ಮನೋ ಭೂಮಿಕೆಯ ಮೇಲೆ ಅಸ್ಪಷ್ಟ ಚಿತ್ರವೊಂದು ಮೈತಳೆದು ದಿನದಿನವೂ ಸ್ಪಷ್ಟ ಆಕಾರ ತಳಯಿತು. ಆ ಚಿತ್ರ ಸೋಮನಾಥನದೇ ಎಂದು ಖಚಿತವಾದಾಗ ಸುಮಿತ್ರೆ ತನಗರಿವಿಲ್ಲದಯೇ ಇಬ್ಬರ ನಡುವೆ ಪಾರದರ್ಶಕ ಗೋಡೆ ಯೊಂದನ್ನು ಕಟ್ಟಿಕೊಂಡಳು. ಆ ಗೋಡೆಯನ್ನು ಕೆಡವಿ ಈ ಒಂಟಿತನ. ಶೂನ್ಯತೆಗಳಿಗೆ ಬೆದರಿ. ತಾನೀಗ ಸೋಮನಾಥನೊಡನೆ ಒಂದು ಹೆಜ್ಜೆ ಮುಂದಿಟ್ಟರೆ ಆಗುವುದಾದರೂ ಏನು? ಸುಮಿತ್ರೆ ಎಂದೂ ಸಂಪ್ರದಾಯಕ್ಕೆ ಶರಣುಹೋದದ್ದಿಲ್ಲ. ಭಾವುಕತೆಗೆ ಬಲಿಯಾದದ್ದಿಲ್ಲ, ಸಂಕುಚಿತ ಭಾವನೆ ಗಳಿಗಂತೂ ಎಡೆಕೊಟ್ಟದ್ದಿಲ್ಲ...ಯಾರು ಯಾರಿಗೊ ಬೆದರಿ ಹಿಂದೆ ಸರಿಯು ವವಳು ತಾನಲ್ಲ.

ಆದರೂ...ಆದರೂ...ತನ್ನ ಈ ಒಂದು ದಿಟ್ಟ ಹೆಜ್ಜೆ ತನ್ನ ಕಣ್ಣಿ ಗೊಂಬೆಯಾದ ರೂಪಾಳ ಬಾಳಿಗೆ ಮುಳ್ಳಾಗಬಾರದಲ್ಲವೆ? ಮುಚ್ಚಿದ ಬಾಗಿಲ ಹಿಂದೆ ಆರ್ತನಾಗಿ ನಿಂತು ಕದತಟ್ಟುತ್ತಿದ್ದ ಅವನಿಗೆ ಅವಳದು ಅದೇ ಉತ್ತರ. "ರೂಪಾಳ ಜವಾಬ್ದಾರಿ ಕಳೆಯುವವರೆಗೂ ನಾನು ಯಾವ ನಿರ್ಧಾರವನ್ನೂ ಮಾಡಲಾರೆ."

ಈ ನಡುವೆ ತಿಮ್ಮನ್ನು ಗೃಹಸ್ಥನಾಗಬೇಕೆಂಬ ಹಂಬಲ ಈಡೇರದೆಯೇ ಭಾರತೀಬಾಯಿ ಕರುಳುಬೇನೆಗೆ ಬಲಿಯಾಗಿ ಹೋದರು.

ತಾಯಿಯಿಂದ ಚೆಲುವು, ಗಾಂಭೀರ್ಯ, ಸದ್ಗುಣಗಳೆಲ್ಲವನ್ನೂ ಬಳುವಳಿಯಾಗಿ ಪಡೆದಿದ್ದ ರೂಪಾಳ ಡಿಗ್ರಿ ಪರೀಕ್ಷೆ ಮುಗಿಯುತ್ತಿದ್ದಂತೆ ಸುಮಿತ್ರೆ ಲವಲವಿಕೆಯಿಂದ ಮಗಳ ಮದುವೆ ತಯಾರಿ ನಡೆಸಿದಳು. ಬ್ಯಾಂಕಿನಲ್ಲಿ ಅವಳ ಮೇಲಧಿಕಾರಿ ರಂಗನಾಥರ ಮಗ ಚಂದ್ರನಾಥ ಎಂ.ಬಿ. ಬಿ. ಎಸ್. ಮುಗಿಸಿ ಸರ್ಜರಿಯಲ್ಲಿ ಹೆಚ್ಚಿನ ಶಿಕ್ಷಣ ಪಡೆಯಲು ಅಮೆರಿಕಾಗೆ ಹೊರಟು ನಿಂತಿದ್ದವನು. ಮದುವೆ ಮಾಡಿ ಸೊಸೆಯ ಸಮೇ ತವೇ ಮಗನನ್ನು ಕಳುಹಿಸುವ ಹಂಬಲ ಅವನ ತಾಯಿಗೆ. ಹಾಗಾಗಿ

ರಂಗನಾಥನ್ ತಾವಾಗಿಯೇ ಮುಂದೆ ಬಂದು ಸುಮಿತ್ರೆಯ ಜೀವದ ಜೀವ ವಾದ ರೂಪಾಳನ್ನು ಮನೆ ತುಂಬಿಸಿಕೊಂಡರು.

*        *        *        *

ತನ್ನ ದೇಹದ ಒಂದು ಅಂಗವೋ ಎಂಬಂತೆ ತನಗೇ ಅಂಟಿಕೊಂಡು ಬೆಳೆದ ಮಗಳನ್ನು ವಿಮಾನ ಹತ್ತಿಸಿ ಮೂಕವೇದನೆಯನ್ನು ಅನುಭವಿಸುತ್ತಾ ಇಡೀ ರಾತ್ರಿ ಹಾಸಿಗೆಯ ತುಂಬಾ ಹೊರಳಾಡಿದಳು ಸುಮಿತ್ರೆ. ಏನೇನೋ ಯೋಚನೆಗಳು, ಹಳೆಯ ನೆನಪುಗಳ ಕಾಟ, ಭಾವನೆಗಳ ಕುಣಿತ. ಬೆಳ ಗೊಂದಾದರೆ ಸಾಕಲ್ಲ...ಎಂದು ಸುಮಿತ್ರೆ ಪರಿತಪಿಸಿದಳು. ಬೆಳಗು ಹರಿಯು ತ್ತಿರುವಂತೆಯೇ ಕೊನೆಯ ನಿರ್ಧಾರ ಹೃದಯದಲ್ಲಿ ರೂಪುಗೊಂಡಿತ್ತು. ಅನಂತರವೇ ತುಸು ನಿದ್ರೆಯ ಜೊಂಪು.

ಮತ್ತೆ ಎಚ್ಚರವಾದಾಗ ಮಧ್ಯದ ಬಾಗಿಲನ್ನು ಮೃದುವಾಗಿ ಬಡಿ ಯುವ ಶಬ್ದ ಕೇಳಿ ಬೆಚ್ಚಿ ಸುಮಿತ್ರ ಎದ್ದು ಕುಳಿತಳು. ನಿಧಾನವಾಗಿ ಎದ್ದು ಬಂದು ಬಾಗಿಲ ಚಿಲಕ ತೆಗೆದಳು.

ಬಾಗಿಲನ್ನು ಸ್ವಲ್ಪವೇ ದೂಡಿಕೊಂಡು ಎರಡೂ ಕೈಲೂ ಕಾಫಿ ಕಪ್ ಹಿಡಿದ ಸೋಮನಾಥ್ ಒಳಬರುತ್ತಾ, 'ಏನು, ಮಗಳನ್ನು ಕಳಿಸಿಕೊಟ್ಟ ಚಿಂತೆಯಲ್ಲಿ ರಾತ್ರಿ ಜಾಗರಣೆ ಮಾಡಿದ ಹಾಗಿದೆಯಲ್ಲಾ? ತಗೊಳ್ಳಿ ಕಾಫಿ. ಏನೋ ಇಬ್ಬರಿಗೂ ಮಾಡಿಬಿಟ್ಟೆ' ಎಂದ. ಸುಮಿತ್ರೆಯ ಕೆಂಪಡರಿದ ಕಣ್ಣುಗಳನ್ನೇ ನೋಡುತ್ತಾ.

'ಛೇ, ಹಾಗೇನಿಲ್ಲ. ಆ ನೋವನ್ನು ಮರೆಸಲು ನೀವಿದ್ದೀರಲ್ಲಾ....' ಎನ್ನುತ್ತಾ ಸುಮಿತ್ರ ಅವನು ತುಸುವೇ ತಳ್ಳಿಕೊಂಡು ಬಂದಿದ್ದ ಬಾಗಿಲನ್ನು ಪೂರ್ತಿಯಾಗಿ ತೆರೆದು ಅವನ ಕೈಯ ಕಾಫಿ ಕಪ್ಪನ್ನು ಹರ್ಷದಿಂದ ತೆಗೆದು ಕೊಂಡಳು.



# ಮನದಲ್ಲೊಂದು ಮಹಾಯುದ್ಧ

—ವಿಶಾಲಾಕ್ಷಿ ದಕ್ಷಿಣಾಮೂರ್ತಿ

ಅರುಂಧತಿಯ ಮನಸ್ಸಿನಲ್ಲಿ ಅಶಾಂತಿ ನೆಲಸಿತ್ತು. ಪುಟ್ಟದೊಂದು ಯುದ್ಧರಂಗವಾದ ಹಾಗಿತ್ತು. ಅದರ ತುಂಬ ನುಗ್ಗಿ ಹೊಯ್ದಾಡುತ್ತಿರುವ ವ್ಯಕ್ತಿಗಳೆಲ್ಲ ತನ್ನವರೇ. ತನ್ನ ಸಮೀಪದವರು, ಬಂಧುಗಳು ಕೂಡ.

ಅವಳ ಮನಸ್ಸಿನೆದುರು ಸಂಕ್ಷಿಪ್ತ ವರದಿಯ ಚಿತ್ರ ಒಂದೊಂದಾಗಿ ಪದರ ಬಿಚ್ಚಿಕೊಂಡಿತು. ಜೀವ ವಿಮೆಯ ಕಂಪನಿಯ ಆಫೀಸಿನಲ್ಲಿ ಕುರ್ಚಿಗೊರಗಿ ಕುಳಿತಿದ್ದ ತಾನು ಅಂದು ಅದೆಷ್ಟು ಹಿಗ್ಗಿನಿಂದಿದ್ದೆ. ಒಂಟಿಯಾಗಿ ಹಕ್ಕಿಯಂತೆ ಸ್ವತಂತ್ರವಾಗಿ ಹಾಯೊಗಿದ್ದೆ. ಮನೆಗೆ ಹೋದರೆ ಅಮ್ಮ 'ಇಷ್ಟೊತ್ತು ಏಕಾಯ್ತು?' ಎಂದು ಕೇಳಿದರೆ ಸಿಡುಕಿನಿಂದ ಉತ್ತರಿಸಿದರೂ 'ಮಗಳಿಗೆ ಆಫೀಸಿನಲ್ಲಿ ಕೆಲಸದ ಒತ್ತಡವಿರಬೇಕು, ಪಾಪ! ಬೇಜಾರಾಗಿದೆ' ಎಂದು ಕೊಂಡು ತಾಳ್ಮೆಯಿಂದ ಸಂತೈಸುತ್ತಿದ್ದಳು. ಆದರೆ ಈಗ ಅದೇ ಅತ್ತೆಯ ಮನೆಯಲ್ಲಿ ಅಂಥ ಮೊಂಡು ಉತ್ತರ ಕೊಡಲಾಗುವುದೆ? ಕೊಟ್ಟರೂ ತನ್ನ ಬೆಲೆ ಅವರ ಕಣ್ಣಲ್ಲಿ ಎಷ್ಟು ತಗ್ಗಬಹುದು? ತಪ್ಪಿತಪ್ಪಿ ಕೂಡ ಅಂಥ ಸಿಟ್ಟು ಸೆಡವಿನ ಉತ್ತರ ಕೊಡಕೂಡದು. ಬಹಳ ತಾಳ್ಮೆಯಿಂದ ನಡೆದುಕೊಳ್ಳಬೇಕು. ತನಗೆ ಎಷ್ಟೇ ಬೇಸರವಿದ್ದರೂ ನಗುನಗುತ್ತಾ ಮನೆಗೆಲಸಗಳನ್ನು ನಿರ್ವಹಿಸಬೇಕು, ಆಫೀಸಿನ ಕೆಲಸ ಮುಗಿಸಿ ದಣಿದು ಮನೆಗೆ ಬರುವ ಗಂಡ ಪ್ರಸಾದನನ್ನು ನಗುಮೊಗದಿಂದ ಸ್ವಾಗತಿಸಬೇಕು. ತಾನು ಕೂಡ ಪ್ರಸಾದನಷ್ಟೇ ವೇತನ ತರುತ್ತಿದ್ದರೂ ಅತ್ತೆ, ಮಾವನ ಕಣ್ಣಿನಲ್ಲಿ ಮಗನ ಉದ್ಯೋಗವೇ ದೊಡ್ಡದು. ಅದನಿಗಾದ ಬಳಲಿಕೆ- ದಣಿವೇ ಹೆಚ್ಚು. ಹೇಗಿದೆ ಸಮತಾವಾದ? ಈ ಮನೆಗೆ ಬಂದು ನೋಡಿ ಕಲಿಯಬೇಕು. ಸಮತಾವಾದದ ವೈಖರಿಯನ್ನು !

ಸಂಪ್ರದಾಯ ಶರಣತೆಗೆ ಪಕ್ಕಾದ ಜನ ಇವರು. ಗಂಡನ ಶ್ರೇಯೋಭಿವೃದ್ಧಿಗಾಗಿ ಸದಾ ಶ್ರಮಿಸಬೇಕೆಂದು ಸೊಸೆಗೆ ಉಪದೇಶಾಮೃತ. ಬೆಳಗಿನ ಚಳಿಯಲ್ಲಿ ಎದ್ದು ಮನೆಗೆಲಸಗಳ ಹೊರೆ ಹೊರುವವಳು. ತಾನು ..ಅದೇ ಪ್ರಸಾದ ಕತ್ತಿನವರೆಗೂ ರಗ್ಗುಹೊದೆದು ಬಿಸಿಲೇರುವವರೆಗೂ ಮಲಗುವ ಭೂಪ. ಮಗ ಏನು ಮಾಡಿದರೂ ಸರಿಯೆ. ಚಳಿ ಜ್ವರ ಬಂದು ತಾನು ಬೆಳಗಿನ ಎಂಟು ಗಂಟೆಗೆ ತಡವಾಗಿ ಎದ್ದ ದಿನ ಮನೆಯಲ್ಲಿ ಮಾರಾಮಾರಿ ನಡೆದಿತ್ತು. ಹೆಣ್ಣು ಹೊತ್ತಿಗೆ ಮುಂಚೆ ಏಳುವ ಬಗ್ಗೆ ಅತ್ತೆಯಿ ಪುಟ್ಟ ಭಾಷಣದ ಕೊರೆತ ಬೇರೆ. ಇಷ್ಟಾದರೂ ತಾನು ಜ್ವರವೆಂದು ಬಾಯಿಬಿಟ್ಟು ಯಾರೊಂದಿಗೂ ಹೇಳಲೇ ಇಲ್ಲ. ಮಾತಿನ ಹಗರಣ ಪ್ರಸಾದನ ಕಿವಿಗೆ ಬಿದ್ದಾಗ ಅವನು ತನ್ನ ಪಕ್ಷ ಊಹಿಸಿ ಮಾತಾಡುವ ಧೈರ್ಯ ಮಾಡಿದ್ದ. 'ಯಾಕಮ್ಮಾ ಸುಮ್ಮನೆ ಹಾಗೆ ಗೊಣಗ್ತಾ ಇದೀಯ? ಪಾಪ, ಅವಳಿಗೆ ಜ್ವರ ಬಂದಿರೋದು ಕಾಣೊಲ್ವೆ?' ಎಂದಾಗ, 'ಹಾಗಂತ ಒಂದು ಮಾತು ಅವಳು ನನ್ನ ಮುಂದೆ ಹೇಳಿದ್ದಿದ್ರೆ, ಅವಳನ್ನ ನಾನೇ ಡಾಕ್ಟರ ಹತ್ತಿರ ಕರ್ಕೊಂಡ್ಹೋಗ್ತಾ ಯಿದ್ದೆನಲ್ಲಪ್ಪ, ತನಗೆ ಏನಾಗಿದೇಂತ ನನ್ನ ಮುಂದೆ ಹೇಳ್ಕೊಳ್ಳೋಕೂ ಇಷ್ಟವಿಲ್ಲ ಅನ್ನು ಅವಳಿಗೆ–' ಅಲ್ಲಿಗೂ ಅವರ ಆಕ್ಷೇಪಣೆಯ ಧನಿ, ಹೌದು ತಾನೇಕೆ ಹಾಗೆ ಮಾಡಲಿಲ್ಲ? ಹಾಗೆ ಹೇಳಿಕೊಳ್ಳಲು ಎಂಥದೋ ಅಹಂ ಭಾವ ಅಡ್ಡಿ ಬಂದ ಹಾಗಿತ್ತು. ತನ್ನ ಸ್ವಭಾವ ಇತ್ತೀಚೆಗೆ ಏಕೋ ಬದಲಾಯಿಸ್ತಾ ಇದ್ದಹಾಗಿದೆ. ಅದಕ್ಕೆ ಕಾರಣ ಬಹುಶಃ ತಾನು ಮದ್ದಿನಿಂದ ಬೆಳೆದ ಸೊಕ್ಕಿರ ಬಹುದೋ ಏನೊ.

ಕ್ಲಾಸಿನ ಎಲ್ಲ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗಿಂತಲೂ ಸದಾ ಒಂದು ಪಟ್ಟು ಹೆಚ್ಚು ಅಂಕಗಳನ್ನೇ ಗಳಿಸುತ್ತಾ ಬಂದು ಕಾಲೇಜಿನ ಮೆಟ್ಟಲೇರಿದ್ದೆ. ಮನೆಯಲ್ಲಿ ಮುದ್ದಿನ ಮಗಳಾದರೆ ಕ್ಲಾಸಿನಲ್ಲಿ ನಮ್ರಯ ವಿದ್ಯಾರ್ಥಿನಿ, ಹಾಗೆಂದು ಅಧ್ಯಾಪಕರು. ಪ್ರಾಧ್ಯಾಪಕರಿಂದ ಹೊಗಳಿಸಿಕೊಂಡಿದ್ದೆ. ಜೊತೆಗಾತಿಯರಿಂದಲೂ ಮತ್ಸರ ರಹಿತ ಮೆಚ್ಚುಗೆಯ ಸುಡಿ ಅದೊಂದು ಬಗೆಯ ಪ್ರೋತ್ಸಾಹವೇ ಆಯಿತು. ತನ್ನ ವ್ಯಾಸಂಗಕ್ಕೆ ಹೋದರೆ

ಕಾಲೇಜು. ಬಂದರೆ ಮನೆ ಮನೆಯಲ್ಲೂ ಅಷ್ಟೆ. ಒಡಹುಟ್ಟಿದವರಿಂ ದಲೂ ದೂರವೇ ಉಳಿದಿರುವ ಮನೋಭಾವ. ಕಾರಣ, ಹೆಚ್ಚಾಗಿ ಅವರೊಡನೆ ಲಲ್ಲೆಗೆ ಮಾತಿಗಿಳಿದರೆ ತನ್ನ ವ್ಯಾಸಂಗಕ್ಕೆಲ್ಲಿ ತೊಂದರೆಯಾ ದೀತೋ ಎನ್ನುವ ಒಂದು ರೀತಿಯ ಭಯ. ವ್ಯಾಸಂಗದಲ್ಲಿ ಮನಸು ಇಷ್ಟೊಂದು ಆಳವಾಗಿ ಮುಳುಗಲು ಕಾರಣ ಅಮ್ಮನ ತನ್ನ ಮನಸ್ಸಿನ ಆಶಾಗೋಪುರ ತನ್ನೆದುರು ತೆರೆದು ನಿಂತಿದ್ದುದೇ ಇರಬೇಕು.

'ಅರುಂಧತಿ ನಿಂಗಿಂತ ಮೊದಲೇ ಹುಟ್ಟಿದವನು, ಬಾಬು-ಅವನು ಡಾಕ್ಟರಾಗ್ತಾನೆ. ಇಂಜಿನಿಯರ್ ಆಗ್ತಾನೆ. ಅಪ್ರತಿಮ ಪಾಂಡಿತ್ಯ ಗಳಿಸ್ತಾನೆ. ಸ್ವದೇಶದಲ್ಲಿನ ಓದು ಮುಗಿಸಿ ವಿದೇಶಕ್ಕೂ ಓದಲು ಹೋಗ್ತಾನೆ ಅಂತ ಏನೇನೋ ಆಸೆ ಕಟ್ಟಿ ಕೊಂಡಿದ್ದೆ ಕಣೆ, ನನ್ನ ಆಸೆ ಯೆಲ್ಲ ನೀರಲ್ಲಿ ಹೋಮ ಮಾಡಿದ ಹಾಗಾಯ್ತು. ಎಸ್.ಎಸ್.ಎಲ್.ಸಿ. ಯಲ್ಲೇ ಫೇಲಾಗಿಬಿಟ್ಟ, ಇನ್ನು ಇವನ ಭವಿಷ್ಯದ ಪ್ರಗತಿ ಕಂಡಹಾಗೇ ಇದೆಯಲ್ಲ. ಗೋಪಿ ಇನ್ನೂ ಚಿಕ್ಕವನು, ಅವನೂ ಅಷ್ಟೆ. ಪ್ರತಿ ವರ್ಷವೂ ಪರೀಕ್ಷೆಗಳಲ್ಲಿ ಅತಿ ಸಾಧಾರಣ ಮಟ್ಟದಲ್ಲಿ ಅವನು ಪಾಸಾಯ್ತು ಎಂದರೆ ನನ್ನ ಎದೆ ಉಸ್ಸೆಂದು ನಿಟ್ಟುಸಿರಿಡುತ್ತದೆ. ಇನ್ನು ಪ್ರಥಮ ದರ್ಜೆ. ರ್‍ಯಾಂಕು ಇವೆಲ್ಲ ಉಂಡು ಮಲಗಿದಾಗ ನಂಗೆ ಕನಸಿನಲ್ಲಿ ಬೀಳ ಬೇಕಷ್ಟೆ. ಇವರ ಭವಿಷ್ಯದ ಬಗ್ಗೆ ನಂಗೆ ಚಿಂತೆಯಿಲ್ಲ. ಯಾಕೆ ಗೊತ್ತಾ? ಗಂಡೋ ತುಂಡೋ ಅಂತ. ಕೂಲಿಯಾದರೂ ಮಾಡಿ ಹೊಟ್ಟೆಹೊರೆದು ಕೊಳ್ತಾರೆ. ಆದರೆ ನೀನು ಹೆಣ್ಣು ಮಗು. ಹೆಣ್ಣು! ಹೆಣ್ಣು! ಎಂದು ನೀನು ಹುಟ್ಟಿದಾಗಲೇ ಆಡಿಕೊಂಡು ನಕ್ಕಜನಕ್ಕೆ ಸರಿಯಾದ ಉತ್ತರ ಕೊಡ ಬೇಕು ಅಂತ ನನ್ನ ಆಸೆ, ಲೋಕದಲ್ಲಿ ಹೆಣ್ಣಿಗೊಂದು ಹಿರಿಮೆಯಿದೆ. ಅವಳು ಕೂಡ ಸಮಾಜದಲ್ಲಿ ತಲೆಯೆತ್ತಿನಿಲ್ಲಬಲ್ಲಳು, ಅಷ್ಟೇ ಅಲ್ಲ ತನ್ನನ್ನು ಹೆತ್ತು ಹೊತ್ತವರನ್ನುವಂಶವನ್ನು ಕೂಡ ಕೀರ್ತಿಶಿಖರಕ್ಕೆ ಮುಟ್ಟಿಸ ಬಲ್ಲಳು ಹೀಗೆ ಏನೇನೋ ನೂರೆಂಟು ಆಸೆಗಳು, ನನ್ನ ಆಸೆಗಳಿಗೆ ಸರಿ ಯಾದ ಒಂದು ಆಕಾರವನ್ನು ಕೊಡುವ ಶಕ್ತಿ, ಪ್ರತಿಭೆ ಎರಡೂ ನಿನ್ನಲ್ಲಿದೆ. ಅಂದುಕೊಂಡಿದೀನಿ. ನನ್ನ ನಂಬಿಕೆ ತಪ್ಪಲ್ಲ ಅನ್ನಿಸ್ತೀಯಾ?—ನೊಂದ ತಾಯಿಯೇ ಕಣ್ಣಲ್ಲಿ ಆಸೆಯ ಮಿಣುಕು ದೀಪವೊಂದು ಸಣ್ಣಗೆ ಹೊಯ್ದಾ

ಡುತ್ತಿದ್ದ ಆ ದೃಶ್ಯ ತನ್ನ ಹೃದಯಕ್ಕೆ ಮನಸ್ಸಿಗೆ ಎಂಥದೋ ಬೇಡಿಕೆಯಂ ತ್ತಿತ್ತು. ಅಮ್ಮ ಎಂದೂ ಯಾವುದಕ್ಕೂ ಆಸೆಪಟ್ಟವಳಲ್ಲ. ಯಾರನ್ನೂ ಇದುಬೇಕು. ಅದು ಬೇಕು ಎಂದು ಕೇಳಿದವಳಲ್ಲ. ತನ್ನ ಹೆತ್ತ ವರನ್ನಷ್ಟೇ ಅಲ್ಲ ಅಪ್ಪನನ್ನು ಕೂಡ ಕೇಳಿದ ನೆನಪಿಲ್ಲ. ಅವಳ ಸೀರೆ ಹಳೆಯದಾಗಿ ಅಲ್ಲಲ್ಲಿ ಹರಿದದ್ದು ಕಂಡಾಗ ಅಪ್ಪ ಬೆಚ್ಚಿ ಬಿದ್ದು 'ಲಕ್ಷ್ಮೀ ಸೀರೆ ಹರಿದಿದೆ. ಹೊಸ ಸೀರೆ ತಂದು ಕೊಡಿ ಅಂತ ಕೇಳಬಾರ ದಾಗಿತ್ತೇನೆ?' ಎಂದು ಕೋಪ ಮತ್ತು. ಕನಿಕರದಿಂದ ನುಡಿದಾಗ 'ಹಾಗೆ ನಾನೇಕೆ ಬಾಯಿಬಿಟ್ಟು ಕೇಳಬೇಕು? ನೀವೇ ತಂದು ಕೊಡ್ತೀರಲ್ಲ!' ಎಂದು ಸಂಕೋಚದಿಂದ ಮುಗುಳು ನಗೆ ಬೀರುತ್ತಿದ್ದಳು. 'ನನಗಿರುವ ಇಷ್ಟೊಂದು ಕೆಲಸಗಳ ಒತ್ತಡದಲ್ಲಿ ಹೆಂಡತಿಯ ಸೀರೆ ಹಳೆಯದಾಗಿದೆ. ಹರಿದಿದೆ ಅದನ್ನೂ ನಾನೇ ನೋಡಿಕೋಬೇಕೊನ್ನು?" ಎಂದಾಗ, 'ಏನೋ ನಂಗೆ ಅದೊಂದೂ ತೋಚೋಲ್ಲರಿ' ಇಂದಷ್ಟೇ ಹೇಳಿ ಮಾತು ಮುಗಿಸುತ್ತಿ ದ್ದಳು ಅಮ್ಮ.

ವರ್ಷದ ಮೊದಲಲ್ಲಿ ಮಕ್ಕಳ ಯೂನಿಫಾರಂ ತರುವಾಗ ಅಮ್ಮನಿಗೆ ಸೀರೆ ರವಿಕೆಗಳನ್ನು ತರುವದೂ ಅಪ್ಪನ ಮುಖ್ಯ ನೆನಪು. ಅದನ್ನು ನೆನೆಪಿಸುತ್ತಿದ್ದವಳು ತಾನೇ. ವಯಸ್ಸಿಗೆ ಬರುವ ಮೊದಲೇ ತಾಯಿ ಯನ್ನು ಕಳೆದುಕೊಂಡಿದ್ದ ಅಪ್ಪನಿಗೆ ಹೆಂಗಸರ ಸೀರೆ ರವಿಕೆಗಳ ಆಯ್ಕೆಯಾ ದರೂ ಹೇಗೆ ತಿಳಿಯಬೇಕು? ಕೊನೆಗೆ ತನ್ನನ್ನು ಜೊತೆಗೆ ಅಂಗಡಿಗೆ ಕರೆದುಕೊಂಡು ಹೋಗುತ್ತಿದ್ದರು. 'ಅರುಂಧತಿ, ನಿಮ್ಮ ಅಮ್ಮನಿಗೆ ಯಾವ ಸೀರೆ ಚೆನ್ನನೀನೇ ಆರಿಸು? ಆದಾಗ'ತಾನು ಆರಿಸುತ್ತಿದ್ದುದು ಗೆಳತಿ ಗೌರಿಯ ತಾಯಿಯ ಸೀರೆಯಂಥಾದ್ದೋ ಅಥವಾ ಉಷಾಳ ತಾಯಿ ಶಾಲಿನಿ ಉಡುತ್ತಿದ್ದ ನವೀನರೀತಿಯ ಸೀರೆಯೋ ಇರುತ್ತಿತ್ತು. ಅಂತೂ ಯಾವ ಸೀರೆ ತಂದುಕೊಟ್ಟರೂ ಅಮ್ಮ ಅದನ್ನು ಸಂತೋಷದಿಂದ ಉಡುತ್ತಿದ್ದಳು. ತನ್ನ ಗಂಡ ಮಗಳು ಪ್ರೀತಿಯಿಂದ ತನಗಾಗಿ ತಂದ ಸೀರೆ ಅದು ಎನ್ನುವ ಒಂದೇ ವಿಶ್ವಾಸ, ಅಭಿಮಾನ ಅವಳದು. ಇಂಥ ನಿರ್ಲಿಪ್ತ ಜೀವಿ ತಾಯಿಗೂ ಒಂದು ಕೋರಿಕೆಯಿದೆ. ಅದು ಅಂತಿಂಥದ್ದಲ್ಲ. ಬೆಟ್ಟದಂಥ ಕೋರಿಕೇ ಮಗಳು ದೊಡ್ಡ ಓದು ಓದಿ ಒಳ್ಳೆಯ ಉದ್ಯೋಗದಲ್ಲಿರಬೇಕು.

ಅವಳು ಕೈತುಂಬ ಸಂಬಳ ತರುವಂತಾಗಬೇಕು. ಅಮ್ಮನ ಆಸೆ ಅದು ಅಂದ ಮೇಲೆ ತಾನು ನಿರಾಸೆ ಮಾಡಲಾಗುವುದೆ? ಪ್ರತ್ಯಕ್ಷದೇವರೆಲ್ಲೋ ತನಗೆ ತಿಳಿಯದು. ತನ್ನ ತಂದೆ ತಾಯಿಗಳೇ ಆ ದೇವರು ಅನ್ನಿಸಿತು ತನಗೆ. ಆಕೆಯ ಆಸೆಯ ಫಲವೋ ಇಲ್ಲ ಆಶೀರ್ವಾದದ ಫಲವೋ ತಾನಂತೂ ಪ್ರತಿವರ್ಷವೂ ಪ್ರಥಮ ದರ್ಜೆಯಲ್ಲೇ ಉತ್ತೀರ್ಣಳಾಗಿ ಕೊನೆಯ ವರ್ಷದ ಪರೀಕ್ಷೆಯಲ್ಲಿ ಚಿನ್ನದ ಪದಕವನ್ನೂ ತಂದಾಗಿತ್ತು. ಆದರೆ ಆ ಪದಕವನ್ನು ತಾನು ಕೈಲಿ ಹಿಡಿದಾಗ ಅನ್ನಿಸಿದ್ದು ಅದು ತನಗಾಗಿ ಯಲ್ಲ. ತನ್ನ ಪ್ರಗತಿಯ, ಪ್ರತಿಭೆಯ ವಿಚಾರದಲ್ಲಿ ಸದಾ ಹಾರೈಸು ತ್ತಿದ್ದ ತನ್ನ ತಂದೆ ತಾಯಿಗಳಿಗಾಗಿ ಅಂದ ಮೇಲೆ ಅದು ಅವರದೇ, ಪದವಿದಾನ ಸಮಾರಂಭ ಮುಗಿದ ಮೇಲೆ ಮನೆಗೆ ಓಡಿ ಬಂದು ಆ ಪದಕ ಗಳನ್ನು ಹಾಕಿದ್ದು ತಂದೆ, ತಾಯಿಯ ಕೊರಳಿಗೆ. ಅಮ್ಮ ಅಪ್ಪನ ಕಣ್ಣಲ್ಲಿ ಸಂತೋಷದ ಬಿಂದುಗಳಂತೆ ಹನಿಗಳುರುಳಿದ್ದುವು.

'ತಾಯಿ ಸರಸ್ವತಿ ನಮಗೆ ಒಲಿದಿತ್ತ ಪ್ರಸಾದವೇ ಅರುಂಧತಿ ಅನ್ನಿ ಸುತ್ತೆ ಅಲ್ಲವೆ?' ಅಮ್ಮ ಹಾಗೆ ಹೇಳಿದಾಗ ಅಪ್ಪ ಸಮ್ಮತಿಯಿಂದ ತಲೆಯಾ ಡಿಸಿದ್ದರು. ಅಮ್ಮ ಅಪ್ಪ ಭಾವಜೀವಿಗಳು ಅದರಿಂದಲೇ ತಾನು ಕೂಡ ಭಾವಜೀವಿಯಾಗಿದ್ದೇನೇನೋ,

ಅವರ ಆಸೆ ನೆರವೇರಿದಂತೆ ಎರಡೇ ತಿಂಗಳಲ್ಲಿ ಈ ಉದ್ಯೋಗ ಸಿಕ್ಕಿತು. 'ಒಳ್ಳೆಯ ಉದ್ಯೋಗ', ಹಾಗೆಂದು ಅಪ್ಪ ಹೇಳಿದ್ದರು. ಅಂತೂ ಜೀವವಿಮಾ ಕಂಪೆನಿಯ ಆಫೀಸಿನಲ್ಲಿ ಹಿರಿಯ ಮಟ್ಟದ ಅಧಿಕಾರಿ ತಾನು.

ಕೈತುಂಬ ಸಂಬಳ! ಮೊದಲ ತಿಂಗಳ ಹಣ ತಂದು ಅಮ್ಮನ ಕೈಲಿ ಟ್ಟಾಗ ಅಮ್ಮ ಆರಿಸಿ ತೆಗೆದು ಕೊಂಡದ್ದು ಒಂದೇ ಒಂದು ಪುಟ್ಟ ನೋಟನ್ನು. 'ಇದರಿಂದ ಹೂ ಕೊಂಡು ತಂದು ದೇವರಿಗೆ ಪೂಜೆ ಮಾಡೋಣ ಅರುಂಧತಿ' ಎಂದರು. ಮಿಕ್ಕ ಹಣ ತನ್ನ ಕೈಲೇ ಉಳಿ

ಯಿತು. ತಮ್ಮನನ್ನು ಕಟ್ಟಿಗೊಂಡು ಅಂಗಡಿಗೆ ಹೋಗಿ ತನಗೆ ಬೇಕಾದ ವಸ್ತುಗಳನ್ನು ಖರೀದಿಸಿದ್ದು, ಮನೆಯವರಿಗೆಲ್ಲ ಸಣ್ಣ ಪುಟ್ಟ ಉಡುಗೊರೆ ಗಳನ್ನು ಕೊಂಡು ತಂದಿದ್ದು, ಅಪ್ಪ ಎರಡೆರಡು ಚಿನ್ನದ ಬಳೆಗಳನ್ನು ಮಾಡಿಸಿಕೊಟ್ಟಾಗ ತನ್ನ ಮುಖ ಹಿಗ್ಗಿನಿಂದ ಅರಳಿದ್ದುದು, ಎಂತಹ ನೆನಪುಗಳು!

ಮನೆಯ ವಾತಾವರಣ ತುಂಬ ಹಿತವಾಗಿದೆ. ಅಪ್ಪ ಎಂದೂ ತನ್ನ ಸಂಪಾದನೆ ಕೇಳಿದವರಲ್ಲ. ಅವರೇ ಕೈತುಂಬ ಸಂಪಾದಿಸುವಾಗ ತನ್ನನ್ನೇಕೆ ಕೇಳುತ್ತಾರೆ? ಕೈತುಂಬ ಹಣವಿರುವಾಗ ತನಗೆ ಆಸೆಗಳು ಪೂರೈಸಿವೆ, ತಾನೀಗ ದಿನವೂ ಉಡುವುದು ಒಳ್ಳೆಯ ಬೆಲೆ ಬಾಳುವ ಸೀರೆಗಳನ್ನು. ಸದಾ ಅಲಂಕರಿಸಿಕೊಳ್ಳುವ ಪ್ರವೃತ್ತಿ ಹೆಚ್ಚುತ್ತಿದೆ, ನೆಮ್ಮದಿಯ ಕುಟುಂಬ ತಮ್ಮದು ಎಂದು ಅಪ್ಪ, ಅಮ್ಮನೊಂದಿಗೆ ಹೇಳಿಕೊಂಡದ್ದು ತನ್ನ ಕಿವಿಗೆ ಎಷ್ಟೋ ಸಲ ಬಿದ್ದಿದೆ. ವನಿತ್ತುಗದ ಕೊಂಬೆಗಿರುವ ಮೂರು ಎಲೆಗಳಂತೆ ಮುದ್ದಾದ ಮೂರು ಮಕ್ಕಳು. ಅಮ್ಮ ಹಿಗ್ಗಿ ನಲಿದಾಗ ಅವಳ ಕಣ್ಣು ಗಳು ಹೊಳೆದಿದ್ದುವು.

ಇಂತಹ ಸುಖ ಸಂತೋಷಗಳ ನಡುವೆ ನನ್ನೆದೆಯಲ್ಲಿ ಆಸೆಯ ಬಯಕೆ ಯೊಂದು ಸುಪ್ತವಾಗಿ ಹೊತ್ತಿಕೊಂಡಿತು. ತನ್ನ ಗೆಳತಿಯರಿಗೆಲ್ಲ ಮದುವೆ ಯಾಗಿದೆ. ಅವರ ಸುಖ ಜೀವನ ಸಾಗಿದೆ. ಹಾಗೇ ತನಗೂ ಕೂಡ ಬಾಳಿ ಗೊಂದು ಜೋಡಿಸಿಕ್ಕರೆ...! ಆದರೆ ಸ್ವತಂತ್ರ ಪ್ರವೃತ್ತಿಯ ತನಗೆ ಅಂಥ ಬಂಧನದ ಕಟ್ಟು ಪಾಡಿನ ಬದುಕು ಹೇಗೆ ಒಗ್ಗುವುದೋ? ಸಂಶಯದ ಸುಳಿಯಲ್ಲಿ ಮನಸ್ಸು ಸುತ್ತುತ್ತಿತ್ತು,

'ಹೆಣ್ಣಿಗೊಂದು ಗಂಡು ದಿಕ್ಕು ಬೇಕಲ್ಲ,' ಅಮ್ಮನ ಪೇಚಾಟ ಸಣ್ಣಗೆ ಆರಂಭವಾದದ್ದು ಇತ್ತೀಚೆಗೆ ಜೋರೇ ಆಗುತ್ತ ಬಂದಿತ್ತು. 'ಅರುಂಧತಿ ಗೊಂದು ಮದುವೆ ಮಾಡಿ ಅವಳು ಸುಖವಾಗಿರೋದನ್ನ ಕಣ್ತುಂಬ ನೋಡೋ ಆಸೆ ನಂಗೆ' ಎಂದು ಅಮ್ಮನೆಂದಾಗ, 'ಈಗ ಅವಳ ಸುಖಕ್ಕೆ

ಏನು ಕಡಿಮೆಯಾಗಿದೆ?' ಅಪ್ಪನ ಎತ್ತರದ ದನಿ. ಅಮ್ಮ ಆಗ ಮಾತ್ರ ತನ್ನ ದನಿ ಅಡಗಿಸಿಯೇ ಬಿಡುತ್ತಿದ್ದಳು. ಆದರೆ ಆ ಸಮಯದಲ್ಲಿ ಮಾತ್ರ, ಪುನಃ ಆರಂಭ.

"ಅರುಂಧತೀಗೆ ಒಂದು ಒಳ್ಳೆ ಗಂಡು ನೋಡ್ರಿ. ಅವಳ ಮದುವೆಯಾದರೆ ನಮ್ಮ ತಲೆ ಮೇಲಿನ ಹೊರೆ ಎಷ್ಟೋ ಹಗುರವಾಗುತ್ತೆ' ಎಂದಾಗ 'ಈಗ ಆವಳೇನು ನಮ್ಮ ತಲೆ ಮೇಲೆ ಕೂತಿಲ್ಲವಲ್ಲ, ನಮಗೆ ಹೊರೆಯಾಗಲಿಕ್ಕೆ' ಅಪ್ಪ ಛೇಡಿಸಿ ನಕ್ಕರೂ ಆ ಮಾತು ಅವರ ತಲೆಯಾಳಕ್ಕೂ ಇಳಿದ ಹಾಗಿತ್ತು.

ಅರುಂಧತಿ ಮೃದು ಮನಸ್ಸಿನವಳು. ಒಂಥರಾ ಹಠದ ಸ್ವಭಾವದವಳು ಕೂಡ. ಅವಳ ಸ್ವಭಾವವನ್ನು ಅರ್ಥಮಾಡಿಕೊಳ್ಳೊ ಅಂಥ ಗಂಡು ಸಿಕ್ಕಬೇಕಲ್ಲ? ಅವರ ಬಾಯಿಂದ ಪೇಚಾಟದ ದನಿ ಮೆಲ್ಲಗೆ ಹೊರಟಿತ್ತು.

ಬೆಳಗಾಗೆದ್ದರೆ ಸ್ನಾನ, ಅಲಂಕಾರ, ಊಟ, ಆಫೀಸು. ಸಂಜೆ ಮನೆಗೆ. ಮತ್ತೆ ಬೆಳಗೆದ್ದರೆ ಆಫೀಸು—ಇದು ತನ್ನ ದಿನನಿತ್ಯದ ಪರಿಪಾಠ. 'ಈ ಜೀವನಕ್ಕೆ ಹೊಂದಿಕೊಂಡಿರುವ ತನಗೆ ಗಂಡು ಜೋಡಿಯ ಆಗತ್ಯವೇ ಕಾಣಿಸ್ತಿಲ್ಲ,' ಮನದಲ್ಲಿಯೇ ಅಂದು ಕೊಂಡಿದ್ದೆ.

ಇತ್ತೀಚೆಗೆ ವರ್ತಮಾನ ಪತ್ರಿಕೆಗಳನ್ನು ಓದುವುದರಲ್ಲಿ ಹೆಚ್ಚು ಆಸಕ್ತಿ ಮೊದಲ ಪುಟದಿಂದ ಹಿಡಿದು ಕೊನೆಯ ಪುಟದ ಕೊನೆಯವರೆಗೂ ಓದುವಿಕೆ ಹೆಣ್ಣಿನ ಬಗ್ಗೆ ಈಚೆಗೆ ದಿನಕ್ಕೊಂದು ಹೊಸ ಸುದ್ದಿ! ಎಷ್ಟೋ ಹೆಣ್ಣು ಮಕ್ಕಳು ವರದಕ್ಷಿಣೆಯ ಪಿಡುಗಿಗೆ ಬಲಿಯಾಗಿ ಆತ್ಮಹತ್ಯೆ ಮಾಡಿಕೊಂಡ ಪ್ರಕರಣಗಳೂ ಉಂಟು. ಅಂಥ ಸುದ್ದಿಗಳನ್ನು ಓದಿದಾಗಲೆಲ್ಲ ತನಗನ್ನಿಸುವುದು ಬರೀ ಹೆಣ್ಣುಗಳಷ್ಟೇ ಚಿತ್ರಹಿಂಸೆ ಕಿರುಕುಳ

ಗಂಡುಗಳು ಮಾತ್ರ ಸಾಧ್ಯವಾದಷ್ಟು ಹಾಯಾಗಿಯೇ ಇದ್ದಾರೆ. ಹೆಣ್ಣು ಮದುವೆಯಾಗಿ ಬಳುವಳಿಯ ಸಮೇತ ಗಂಡನ ಮನೆಗೆ ಹೋಗಬೇಕು ಸೊಸೆ ತಂದ ಬಳುವಳಿ ಸಾಲದು ಅಂತ ವರನ ಮನೆಯವರಿಗೆ ಅನ್ನಿಸಿದರೆ ಅಸಮಾಧಾನ, ಕಿರುಕುಳ, ಜಗಳ ಪ್ರಾರಂಭ, ಕೊನೆಗೆ ಹೆಣ್ಣಿನ ಆತ್ಮಾರ್ಪಣೆ...ಇದೊಂದು ವಿಷವರ್ತುಲವಿದ್ದ ಹಾಗೆ. ಈ ನಾಟಕಕ್ಕೆ ಮದುವೆಯೆನ್ನುವ ಹೆಸರು. ಮದುವೆ ಏಕಾಗಬೇಕು? ಪ್ರಕೃತಿಕ್ರಿಯೆಯನ್ನು ದಮಿಸಲು ಸಾಧ್ಯವಿಲ್ಲವೆಂದೆ? ಅಥವಾ ಪ್ರಪಂಚದಲ್ಲಿ ಹೆಣ್ಣಿನ ರಕ್ಷಣೆಗೆ ಒಂದು ಗಂಡಿನ ಅವಶ್ಯಕತೆಯಿದ್ದೇ ಇರಬೇಕೆಂಬ ಸಮಾಜದ ನೀತಿಗೆ ಹೆದರಿಯೋ? ಅಥವಾ ಸಂಯಮ ವಿಲ್ಲದ ಬ್ರಹ್ಮಚರ್ಯದ ಪರಿಸಮಾಪ್ತಿಗೆಂದೋ? ಅಂತೂ ಹೆಣ್ಣು, ಗಂಡು ಮದುವೆಯಾಗಲೇಬೇಕು. ಮದುವೆಯಾದ ದಿನದಿಂದಲೇ ಹೆಣ್ಣಿನ ಸ್ವಾತಂತ್ರ್ಯ ಮುಕ್ತಾಯ. ಅವಳ ಮೇಲೆ ಸದಾ ಅವಳ ಗಂಡನ ಮತ್ತು ಗಂಡನ ಮನೆಯವರೆಲ್ಲರ ದಬ್ಬಾಳಿಕೆ ಆರಂಭ. ಎಲ್ಲ ಹುಚ್ಚರ ಪ್ರಪಂಚದ ಹಾಗೆ ಕಾಣಿಸ.ತ್ತವೆ. ಆದರೆ ಯಾರಿಗೆ ಹೇಳುವುದು? ಆದರೆ ಎಲ್ಲರೂ ಒಂದು ವಿಧದಲ್ಲಿ ಈ ಹುಚ್ಚಿನಲ್ಲಿ ಮುಳುಗಿರುವವರೇ. ಇಲ್ಲದಿದ್ದರೆ ಇಷ್ಟೊಂದು ಕುಟುಂಬ ಯೋಜನೆಯ ಪ್ರಚಾರ ಏಕೆ ಬೇಕಿತ್ತು? ಅಂಥ ಕಡೆಗಳಲ್ಲೆಲ್ಲ ಸಂಯಮವನ್ನು ಕಲಿಸುವ, ಬ್ರಹ್ಮಚರ್ಯೆಯನ್ನು ಭೋಧಿಸುವ ಒಂದೊಂದು ಆಧ್ಯಾತ್ಮಿಕ ಕೇಂದ್ರಗಳನ್ನು ತೆರೆದು ನೀತಿ ಸಂಹಿತೆಯನ್ನು ಅವರಿಗೆ ಭೋಧಿಸಿದ್ದರೆ ಆಗುತ್ತಿರಲಿಲ್ಲವೇ?

ಹೆಣ್ಣು ಗಂಡನ ಮನೆಯನ್ನು ಪ್ರವೇಶಿಸಿದ ತಕ್ಷಣದಿಂದಲೇ ಇವಳ ಮೇಲೆ ಅವನ ಮನೆಯವರ ಹಕ್ಕು ಎಷ್ಟೆಷ್ಟು ಹೆಚ್ಚಾಗುತ್ತದೋ ಹಾಗೇ ಹುಟ್ಟಿ ಬೆಳೆಸಿದ ತಾಯ್ತಂದೆಯರ ಹಕ್ಕು ಅವಳ ಮೇಲೆ ಅಷ್ಟಷ್ಟು ಸಡಿಲವಾಗುತ್ತದೆ. ಇದು ಇಷ್ಟು ಮಾತ್ರ ನಿಜ? ಯೋಚಿಸಿದರೆ ಚಿಂತನೆಯನ್ನು ಕೆರಳಿಸುತ್ತದೆ. ಗಾಡಿಯ ನೊಗಕ್ಕೆ ಹೆಗಲು ಕೊಡುವ ಮೊದಲು ಎತ್ತು ಹಿಂದೆ ಮುಂದೆ ನೋಡಿದಂತೆ, ಅನಂತರ ಯಜಮಾನನ ಪ್ರೀತಿಗೋ ಅಥವಾ ಚಾಟಿ ಏಟಿನ ಒತ್ತಡಕ್ಕೋ ಬಾಗಿ ಹೆಗಲುಕೊಟ್ಟಂತೆ, ಎಷ್ಟೇ ಭಾರವಿದ್ದರೂ ದೂರದ ದಾರಿಯನ್ನು ಭಾರ ಹೊತ್ತು ನಿರ್ಗಮಿಸುವಂತೆ

ಹೆಣ್ಣು ಗಂಡುಗಳು ಕೂಡ ಒಮ್ಮೊಮ್ಮೆ ಮನೆಯವರ ಒತ್ತಾಯಕ್ಕೋ ಅಥವಾ ಸಮಾಜದ ಭೀತಿಗೋ ಹೆದರಿ ಉದ್ದದ ಬಾಳನ್ನು ಸಾಗಿಸುತ್ತಾರೆ. ಒಲಿದು, ಪ್ರೀತಿಸಿ, ಮದುವೆಯಾದುದರ ಅರ್ಥ ತಿಳಿದವರೆಷ್ಟು ಮಂದಿ? ಚಿಂತೆ ನೆಲೆಯಿಲ್ಲದೆ ಸಾಗಿತ್ತು.

ಮದುವೆಯೆಂದರೆ ಹೆದರಿ ದೂರವೇ ಉಳಿಯಲು ನಿರ್ಧರಿಸಿದ್ದ ತಾನು ಅಂತರಂಗದಲ್ಲಿ ಆಸೆಯತುಣುಕನ್ನು ಬೆಳೆಸಿಕೊಂಡಿದ್ದು ಆಕಸ್ಮಿಕ ಅಂದರೂ ತಪ್ಪಿಲ್ಲ. ಮನೆಗೆ ಹೇರಳವಾಗಿ ಬರುತ್ತಿದ್ದ ಮದುವೆಯ ಕರೆಯೋಲೆಗಳನ್ನು ಕಂಡಾಗಲೆಲ್ಲ ತಲೆಯಲ್ಲಿ ಆಸೆಯ ಮಿಂಚೊಂದು ಮಿಂಚು ವುದು. ಅಮ್ಮ ಕೂಡ 'ಅರುಂಧತಿಯ ಮದುವೆಯ ಲಗ್ನ ಪತ್ರಿಕೆ ಅಚ್ಚು ಹಾಕಿಸಿ ಬಂಧು ಮಿತ್ರರಿಗೆಲ್ಲ ಹೀಗೆ ಹಂಚಬೇಕು' ಎಂದು ಬಾಯಿಬಿಟ್ಟೇ ಹೇಳುವಳು. ಮದುವೆಯ ಮನೆಗೆ ಹೋಗಿ, ಸಿಹಿಯೂಟ ಉಂಡು, ತಾಂಬೂಲಮೆಲ್ಲುತ್ತ ಬರುವ ಅಮ್ಮನ ಎದೆಯಲ್ಲಿ ಮಗಳ ಮದುವೆಯ ಆತುರ ತೀಕ್ಷ್ಣವಾಗುವುದಂತೆ, 'ನನ್ನ ಗೆಳತಿ ಮಗಳ ಮದುವೆ ಮಾಡಿದ ಳಲ್ಲ. ವರ ಚೆನ್ನಾಗಿದ್ದಾನೆ. ಅಲ್ಲವೇನ್ರಿ?' ಎಂದು ಅಪ್ಪನನ್ನು ಕೇಳಿ ದರೆ, 'ಅವನೆಂಥಾ ಚೆನ್ನವೆ? ನಮ್ಮ ಅಳಿಯ ಇನ್ನೂ ಚೆನ್ನಾಗಿರ್ತಾನೆ ನಿನ್ನ ಮಗಳು ದೊಡ್ಡ ಓದು ಓದಿದಾಳೆ. ಕೈತುಂಬ ಸಂಪಾದಿಸ್ತಾಳೆ, ನೋಡೋಕೆ ನಿನ್ನ ಹಾಗೇ ತುಂಬ ಚೆಲುವೆ' ಅಂದಾಗ ಅಮ್ಮನ ಮುಖ ಲಜ್ಜೆಯಿಂದ ಕೆಂಪೇರುತ್ತಿತ್ತಲ್ಲ. ಅಂಥ ಸಮಯಗಳಲ್ಲೆಲ್ಲ ಅವಳು ಕಣ್ಣು ಮುಚ್ಚಿ ಕ್ಷಣಹೊತ್ತು ನಗುತ್ತಿದ್ದಳಲ್ಲ. ಅವಳ ಮೂಗಿನಲ್ಲಿನ ವಜ್ರದ ಬೇಸರಿ 'ಪಳಾಕ್' ಎಂದು ಹೊಳೆಯುತ್ತಿತ್ತು. ಬಹುಶಃ ಅದು ಅವಳ ಮನಸ್ಸಿನಲ್ಲಿ ಹೊಳೆದ ಆಸೆಯಂತಿದ್ದರೂ ಇರಬಹುದು.

ಅಂದು ಅಮ್ಮ 'ಅರುಂಧತಿ,ನಿಮ್ಮ ತಂದೆ ನಿಂಗೆ ವರವನ್ನು ವಿಚಾರಿಸಿ ದ್ದಾರೆ. ನೀನು ನೋಡಿ ಒಪ್ಪಿ, ಹೂಂ, ಎಂದರೆ ಮುಂದಿನ ಮಾತು..."

'ಊಹೂಂ, ನಾನು ಮದುವೆಯಾಗೋಲ್ಲಮ್ಮ' ಎಂದಾಗ ಅಮ್ಮ ಬೆಚ್ಚಿ 'ಯಾಕೆ ಅಂಥಾ ಕಠಿಣ ನಿರ್ಧಾರ?' ಅಂದಿದ್ದರು.

'ಮದುವೆಯಾದ್ರೆ ನಿಮ್ಮನ್ನೆಲ್ಲ ಬಿಟ್ಟು ದೂರ ಹೋಗಬೇಕಾಗುತ್ತೆ, ಮನೆಯನ್ನು ಮನೆಯವರನ್ನು ಬಿಟ್ಟು ದೂರ ಇರೋದೊಂದ್ರೆ ನನ್ನ ಮನಸ್ಸಿಗೆ ಬಹಳ ನೋವಿನ ವಿಚಾರ. ನನ್ನ ಹೃದಯಕ್ಕೆ,ಮನಸ್ಸಿಗೆ ಘಾಸಿತರೋ ವಿಚಾರಕೂಡ, ಅದಕ್ಕೇ ನಾನು...' 'ಅಯ್ಯೋ ಹುಚ್ಚು ಹುಡುಗಿ! ನಿನ್ನ ಎಲ್ಲಾ ಷರತ್ತುಗಳಿಗೂ ಒಪ್ಪಿಗೆ ಕೊಡೋ ಹುಡುಗ ಸಿಕ್ಕರೆ ಆಗ'? 'ಆಗ ನೋಡೋಣ' ಎಂದು ಮಾತು ಮುಗಿಸಿದ್ದೆ.

ಅದೇ ವಾರದಲ್ಲೇ ಪ್ರಸಾದ್ ಬಂದ ಅವನೊಂದಿಗೆ ಅಪ್ಪ, ಅಮ್ಮ ಕೂಡ ಏನಾರು ವರಗಳು ಬಂದು ಹೋಗಿದ್ದರಲ್ಲ ಅದಕ್ಕೆ ಮುಂಚೆ ಅವರಲ್ಲಿ ಯಾರೂ ಒಪ್ಪಿಗೆಯಾಗಿರಲಿಲ್ಲ, ಆದರೆ ಪ್ರಸಾದ್. ಪ್ರಸಾದ್ ನೋಡಲು ಸುಂದರ ಯುವಕ, ಹಾಗೇ ಮಾತಿನಲ್ಲಿ ತುಂಬ ನಯ, ಅಪ್ಪ, ಅಮ್ಮನ ಮುದ್ದಿನ ಮಗ ಅವರ ಮಧ್ಯೆಯೇ ಕೂತಿದ್ದ. ಅವನ ಕಳ್ಳ ನೋಟ ತನ್ನತ್ತ ಹರಿದಾಗ ತಾನು ನಾಚಿದ್ದೆ. ಆಫೀಸಿನಲ್ಲಿ ಎಲ್ಲರ ಮೇಲೂ ಗತ್ತು ಚಲಾಯಿಸುವ ದಕ್ಷ ಅಧಿಕಾರಿಣಿ ತಾನು ಎಂಬುದನ್ನು ನೆನಪಾಗಿಸಿಕೊಂಡು ನೆಟ್ಟಗೆ ಕುಳಿತೆನಲ್ಲ. ನಾಚಿಕೆಯಿಂದ ದೂರವಾಗಿ ದರ್ಪ ಭಾವವನ್ನು ಮುಖದಲ್ಲಿ ತುಂಬಿಕೊಂಡೆ. ಅವರುಗಳಿಗೆ ಕಾಫಿ ಕೊಟ್ಟವಳು ಅಮ್ಮನೇ ಕೆಲವರ ಮನೆಗಳಲ್ಲಿ ಹುಡುಗಿಯೇ ಕಾಫಿ ಹಂಚುವ ಪದ್ಧತಿಯಂತೆ. ಆದರೆ ತಾನು ಹಾಗೆ ಮಾಡಲಿಲ್ಲ. ತನ್ನ ಮನಸ್ಸಿಗೆ ಅದು ತೀರಾ ಕೃತಕವೆನ್ನಿಸಿತಲ್ಲ, ಬಾಬುವೇ ಎಲ್ಲರಿಗೂ ಕಾಫಿ ಕೊಟ್ಟ.

"ಹಾಡೇನಾದ್ರೂ ಬರುತ್ತೇನಮ್ಮ?" ಪ್ರಸಾದನ ತಾಯಿಯ ಪ್ರಶ್ನೆ.

'ಸ್ನಾನದ ಸಂಗೀತ ಬಿಟ್ಟರೆ ಬೇರೆ ಹಾಡು ಬರೋಲ್ಲ. ಎಲ್ಲ ತುಂಡು ತುಂಡು ಹಾಡುಗಳು' ಅಪ್ಪ ಹೇಳಿದ್ದರು.

'ಈ ರೇಡಿಯೋಗಳ ಅವಾಂತರದಲ್ಲಿ ನಮ್ಮ ಸೊಸೆಯೇ ಕೂತು

ಹಾಡಲಿ ಅನ್ನೋ ಹಠ ನಮಗೇನಿಲ್ಲ.' ಅವನ ತಂದೆ ಸಮಾಧಾನ ಕೊಟ್ಟಿದ್ದರು.

'ಆಫೀಸಿಗೆ ಹೋಗಿ ಕೆಲಸ ಮಾಡ್ತಾಳೆ. ದಕ್ಷ ಅಧಿಕಾರಿಣಿ ಅನ್ನಿಸಿ ಕೊಂಡಿದಾಳೆ, ನಮ್ಮ ಮುದ್ದಿನ ಮಗಳು. ಅನ್ನದೊಂದಿಗೆ ಪ್ರೀತಿಯನ್ನೂ ಕಲೆಸಿ ಮುದ್ದಿಸಿ ತಿನ್ನಿಸಿದ್ದಾಳೆ ಅವರ ಅಮ್ಮ ಅಂದ್ರೂ ತಪ್ಪಿಲ್ಲ,' ಹಾಗೆ ಹೇಳಿ ಅಪ್ಪ ನಕ್ಕರು.

'ಮುಂದೆ ನಾವು ಕೂಡ ಹಾಗೇ ನೋಡ್ಕೋತೇವೆ, ಅಲ್ಲವೇನಪ್ಪ?' ಅವನು ತಟ್ಟನೆ ಹಾಗೆ ಹೇಳಿದ್ದು ಸಣ್ಣಗೆ ಹಲ್ಲು ಕಡಿಯುವಷ್ಟು ಕೋಪ ಬಂದಿತ್ತು.

'ಇವನು ತನ್ನನ್ನೇನು ನೋಡಿಕೊಳ್ಳೋದು? ಹಾಗೆ ಹೇಳೋ ಅಧಿ ಕಾರ ಇವನಿಗೆ ಯಾರುಕೊಟ್ಟರು?' ಅವನ ದುಡುಕು ಸ್ವಭಾವದ ಬಗ್ಗೆ ಆಶ್ಚರ್ಯವಾಯ್ತು. ಹಾಗೇ ತನ್ನ ಮನಸ್ಸಿನ ಸುಪ್ತ ಆಸೆ ಆಲೋಚನೆ ಗಳಿಗೆ ಧಕ್ಕೆಯುಂಟಾದರೆ ಎನ್ನುವ ಭಯ ಬಂತು.

'ನಿಮಗೆ ನನ್ನ ಮಗಳು ಇಷ್ಟ...' ಎಂದು ಅಪ್ಪ ಮಾತು ನಿಲ್ಲಿಸಿ ದಾಗ, 'ತುಂಬ ಇಷ್ಟವಾದರು' ಎಂದ ಪ್ರಸಾದ್.

'ನಿಮ್ಮ ಇಷ್ಟ ಏಕಮುಖವಾಯ್ತು. ಹಾಗೇ ನನ್ನ ಮಗಳ ಅನಿಸಿಕೆ ಏನು ಅನ್ನೋದನ್ನ....' 'ನಾನೇ ಕೇಳ್ತೀನಿ ದಯವಿಟ್ಟು ಅವರ ಜೊತೆ ನಾಲ್ಕು ಮಾತಾಡೋಕೆ ಅವಕಾಶ ಕೊಡಿಸಿ,' ಅವನದು ಬೇಡಿಕೆಯ ದನಿ. ಅವನ ದನಿಗೆ ತಾನು ಮೆಲ್ಲಗೆ ಮಾರುಹೋದಹಾಗಿತ್ತು. ಅವರೂ ಹಿಡಿದ ಪಟ್ಟು ಸಡಿಲಿಸ ಬಾರದೆನ್ನುವ ಧೃಡನಿರ್ಧಾರ ತನ್ನದು.

ಅವನು ಅದು ಹೇಗೋ ತನ್ನೊಂದಿಗೆ ಏಕಾಂತವಾಗಿ ಮಾತಾಡುವ

ಅವಕಾಶ ಕಲ್ಪಿಸಿಕೊಂಡ. ಅದು ತೀರ ತೆರೆದ ಮನಸ್ಸಿನ ಸಂಭಾಷಣೆ.

'ನನ್ನ ನೀವು ಒಪ್ಪಿದ್ದೀರೀಂತ ಆ ನಿಮ್ಮ ಕಣ್ಣುಗಳೇ ಹೇಳ್ತಾ ಇವೆ. ನನ್ನ ಊಹೆ ನಿರ್ಧಾರ ಸರಿತಾನೆ?' ಇಲ್ಲ, ಎಂದು ಹೇಳುವ ಸ್ಥಿತಿಯಲ್ಲಿ ಆಗ ತಾನಿರಲಿಲ್ಲವಲ್ಲ. ಮೌನವಾದೆ.

'ಮೌನ ಸಮ್ಮತಿಯ ಲಕ್ಷಣ ಅಂತಾರೆ. ನಿಮ್ಮದೂ ಅದೇ ಅಭಿಪ್ರಾಯ ಅಂತ ನಾನು ಭಾವಿಸ್ತೀನಿ', ಎರಡು ಮೂರು ಪ್ರಶ್ನೆಗಳನ್ನು ಹಾಕಿ ಉತ್ತರಿಸಿದವನೂ ಅವನೇ.

ಈಗ ನಾನು ಸುಮ್ಮನಿರಬಾರದು. ತನ್ನ ಸ್ಪಷ್ಟ ಅಭಿಪ್ರಾಯ ಅನಿಸಿಕೆಯನ್ನು ಹೇಳಲು ಇದೇ ಸರಿಯಾದ ಸಮಯ ಅನ್ನಿಸಿ ಮಾತು ತೆಗೆದೆ.

'ನನ್ನ ಉದ್ಯೋಗ, ವೇತನ ಎಲ್ಲ ನಿಮಗೆ ಗೊತ್ತಿರಬಹುದು. ನಾನು ಮದುವೆಯಾಗುವುದು ಯಾವ ಕಾರಣಕ್ಕಾಗಿ ಎನ್ನುವ ಪ್ರಶ್ನೆ ಒಮ್ಮೊಮ್ಮೆ ನನ್ನ ತಲೆಯನ್ನು ಕೊರೆಯುತ್ತದೆ. ಈಗಲೂ ನಾನು ಹೇಳುತ್ತೇನೆ. ದೈನ್ಯದ ಬದುಕು ನನಗಿಷ್ಟವಿಲ್ಲ. ಸ್ವಾತಂತ್ರ್ಯ ಸಮಾನತೆಗಳನ್ನು ಬಯಸುತ್ತದೆ, ನನ್ನ ಮನಸ್ಸು. ನನ್ನ ಎಲ್ಲ ಆಸೆಗಳಿಗೂ ಮುಳ್ಳಾಗದಂಥವನಾದರೆ ಮಾತ್ರ ನನ್ನ ಬಾಳಿನ ಜೋಡಿಯಾಗಲು ಸಾಧ್ಯವಾಗುವ ಪ್ರಶ್ನೆ,'

'ನನ್ನದೂ ಅದೇ ಅಭಿಪ್ರಾಯ. ನನ್ನ ಉದ್ಯೋಗ ವೇತನ ಎಲ್ಲ ಸ್ಪಷ್ಟವಾಗಿ ಮೊದಲೇ ಹೇಳಿಬಿಟ್ಟಿದ್ದೀನಿ, ನನಗೂ ಕೂಡ ಸ್ವತಂತ್ರ ಮನೋಭಾವ, ಹೆಣ್ಣುಗಂಡುಗಳ ಸಮಾನತೆ ಇವುಗಳ ವಿಚಾರದಲ್ಲಿ ತುಂಬ ಆಸಕ್ತಿಯಿದೆ, ಗೌರವವಿದೆ. ನನ್ನ ಹಿಡಿದವಳನ್ನು ಅಧಿಕಾರ ಚಲಾಯಿಸಿ ಆಳುವ ಅಭಿಪ್ರಾಯ ನನ್ನದಲ್ಲ. ಪ್ರೀತಿಯಿಂದ ಮನಸ್ಸನ್ನು ಗೆದ್ದು ಬಾಳಿಸಿಕೊಳ್ಳುವ ಅಭಿಪ್ರಾಯವಿದೆ, ಆಸೆಯಿದೆ. ನನ್ನ ಈ ಆಸೆಗೆ, ದೃಷ್ಟಿ

ಕೋನಕ್ಕೆ ತಕ್ಕಂಥ ಸರಿಯಾದ ಜೋಡಿ ಸಿಕ್ಕರೆ ಮಾತ್ರ ನನ್ನ ಮದುವೆ. ಈಗ ನಂಗೆ ಅನ್ನಿಸ್ತಾ ಇದೆ......'

'ಏನೆಂತ?' ಎನ್ನುವಂತೆ ಅವನ ಕಡೆ ನೋಡಿದರೆ,

'ನೀವೇ ಸರಿಯಾದ ಜೋಡಿ ಅಂತ! ಏಕೆಂದರೆ ನಮ್ಮಿಬ್ಬರ ವಿಚಾರಗಳೂ ಒಂದೇ ಜಾಡಿನಲ್ಲಿವೆ!'

'ನಾನು ನನ್ನ ತಂದೆ ತಾಯಿಗಳನ್ನು ತುಂಬ ಪ್ರೀತಿಸ್ತಿದ್ದೀನಿ, ಹಾಗೇ ನನ್ನ ಒಡ ಹುಟ್ಟಿದವರನ್ನು ಕೂಡ?.

'ನಾನೂ ಅಷ್ಟೆ. ನನ್ನ ಕುಟುಂಬ ವರ್ಗದವರನ್ನು ತುಂಬ ಪ್ರೀತಿಸ್ತೀನಿ, ಗೌರವಿಸ್ತೀನಿ. ಇನ್ನು ಮುಂದೆ ನಿಮ್ಮ ಕುಟುಂಬ ವರ್ಗದವರೂ ನನ್ನ ಕುಟುಂಬವರ್ಗದವರಿದ್ದ ಹಾಗೇ. ಆಗ ಆಶ್ಚರ್ಯವಾಯಿತು—'ಒಂದು ಗಂಡಿನ ಬಾಯಿಂದ ಈ ಮಾತೇ!'

ಹೆಣ್ಣು ಹೇಳುವುದು ಲೋಕದಲ್ಲಿ ಸಹಜ. ಆದರೆ ಗಂಡಿನ ಮಾತೂ ಇದೇ ರೀತಿಯದಾದರೆ! ತನ್ನ ಜೀವನದಲ್ಲಿ ಭಿನ್ನಾಭಿಪ್ರಾಯಗಳಿಗೆ ಎಡೆಯೇ ಇರುವುದಿಲ್ಲ" ಪರಸ್ಪರ ಭಿನ್ನಾಭಿಪ್ರಾಯಗಳಿಗೆ ಎಲ್ಲಿ ಎಡೆಯಿಲ್ಲವೋ ಅಲ್ಲಿ ದ್ವೇಷದ ಸುಳಿವಿಲ್ಲ. ಪ್ರೀತಿ ತಾನೇ ತಾನಾಗಿ ತುಂಬಿಹೋಗಿರುತ್ತದೆ.

ಅದೆಂತಹ ಸುಖದ ಚಿತ್ರಣ! ಕೋಣೆಯಿಂದ ಹೊರಬಂದಾಗ ಸಂತೃಪ್ತ ಭಾವದಿಂದ ನಲ್ದಿದ್ದೆ. ಎಲ್ಲರಿಗೂ ಹಿಗ್ಗಾಗಿತ್ತು. ತಂದೆ ಅದ್ದೂರಿಯಾಗಿ ಮದುವೆ ಮಾಡಿದ್ದರು.

ನಮ್ಮ ಜೋಡಿಯನ್ನು ಎಲ್ಲರೂ ಹೊಗಳುವವರೆ. ಮದುವೆ ಮಂಟಪದಿಂದ ನೇರ ಗಂಡನ ಮನೆಯ ಹೊಸ್ತಿಲು ಮೆಟ್ಟಿದ ತಾನು ಹಿಗ್ಗಿನ

ಅರಮನೆಯನ್ನು ಹೊಕ್ಕು ಆನಂದಿಸಿದ್ದೆ. ತುಂಬು ಕುಟುಂಬದಲ್ಲಿ ಬೆಳೆದ ತಾನು ಇದೀಗ ಹೆಜ್ಜೆಯಿಟ್ಟಿದ್ದು ದೊಡ್ಡ ಕುಟುಂಬಕ್ಕೆ.

ಪ್ರಸಾದ್ ತನ್ನ ಗಂಡ. ತನ್ನನ್ನು ತುಂಬು ಪ್ರೀತಿಸುತ್ತಾರೆ. ತಾನು ಆಫೀಸಿಗೆ ಹೋಗುವ ಮೊದಲಿನ ಮಾರ್ಗ ಬದಲಾವಣೆಯಾಗಿತ್ತಲ್ಲ. ತನ್ನ ಕಣ್ಣ ಮುಂದೇ ತನ್ನ ತವರಿನದಾರಿಯ ಬಸ್ಸು ನಿಂತಿದ್ದರೂ ತಾನು ಅದನ್ನೇರದೆ ಗಂಡನ ಮನೆಯ ದಾರಿಯಲ್ಲೆ ಸಾಗುವ ಬಸ್ಸಿಗಾಗಿ ಕಾದು ನಿಲ್ಲುವ ಆಸೆ. ಮೈಸೋತು ಬಳಲಿ ಮನೆಗೆ ಬಿದ್ದರೆ ಸಾಕೆನ್ನುವಷ್ಟು ದಣಿವಿದ್ದರೂ ತಾನು ಕಾದು ನಿಲ್ಲುವುದು ಬೇರೊಂದು ಸಂಖ್ಯೆಯ ಬಸ್ಸನ್ನು, ತನ್ನ ದಾರಿಯುತ್ತ ನಿಂತು ಆದರಿಸುತ್ತಿದ್ದ ತಾಯಿಯ ಚಿತ್ರ ಕಡಿಮೆಯಾಗುತ್ತ ಬಂತಲ್ಲ.

ದಣಿದು ಮನೆಗೆ ಬಂದರೆ ಇಲ್ಲಿ ಅಂತಹ ಸ್ವಾಗತವಿಲ್ಲ. ಹಾಗೆ ತಾನು ನಿರೀಕ್ಷಿಸಲೂ ಆಗದು. ದೊಡ್ಡ ಕುಟುಂಬದ ಪರಿಸರದಲ್ಲಿ ಎಲ್ಲರಲ್ಲಿ ತಾನೊಬ್ಬಳಾಗಿ ಬಾಳದಿದ್ದರಾಗುತ್ತದೆಯೇ, ಆಫೀಸಿನಿಂದ ಮನೆಗೆ ಹೋಗುವುದು ಸ್ವಲ್ಪ ಹೊತ್ತು ತಡವಾದರೂ ಸಮಜಾಯಿಷಿ ಹೇಳಲು ತಾನು ಯೋಚಿಸಬೇಕು. ತನಗೆ ಅನ್ನಕ್ಕಿಂತ ಅಗತ್ಯ ಬೇಕಾದ್ದು ಅಕ್ಕರೆಯ ನುಡಿ. ಅದರ ಅಭಾವವನ್ನರಿತಾಗ ಎದೆ ತಲ್ಲಣಿಸುತ್ತದೆ.

ಇದೀಗ ತವರಿಗೆ ಹೋದರೆ ಹೊಸ ಹಿಗ್ಗಿನಿಂದ ಕುಣಿದಾಡುವಷ್ಟು ಆನಂದ. ತನ್ನ ತಾಯಿ ತಂದೆ, ಒಡಹುಟ್ಟಿದವರು ಇವರೆಲ್ಲರನ್ನು ಬಿಟ್ಟು ಇಲ್ಲಿಂದ ಹೊರಗಲೇಬಾರದು ಎನ್ನುವಷ್ಟು ಮನಸ್ಸು ಹುಚ್ಚು ಕುದುರೆಯಂತೆ ಕುಣಿಯುವುದು. ಬೆನ್ನ ಹಿಂದಿದ್ದ ಪ್ರಸಾದ್ ವೇಳೆಗೆ ನೆನಪಾಗಿಸಿ ಮನೆಗೆ ಕರೆದೊಯ್ಯುವನು. ಗಂಡನ ಪ್ರೀತಿಯ ಸೆರೆಯಲ್ಲಿ ಬಂದಿಯಾದ ತನಗೆ ತವರನ್ನು ಮರೆಯುವುದು ಒಂದು ಪ್ರಯತ್ನ ಮಾತ್ರ. ತನ್ನಂತಹ ಹೆಣ್ಣುಗಳೆಲ್ಲರಿಗೂ ಇದು ಒದಗುವ ಅವಸ್ಥೆಯೇ ಎನ್ನಿಸಿ ತುಟಿಯಂಚಿನಲ್ಲಿ ನಗೆ ಚಿಮ್ಮುವುದಿಲ್ಲ.

ವಾರಕೊಮ್ಮೆ ತವರಿಗೆ ಬೇಟಿ. ಆಗೆಲ್ಲ ಮನೆಯ ಒಂದಂಗುಲ ನೆಲವನ್ನೂ ಬಿಡದೆ ತುಳಿದು ಕುಣಿದಾಡುವಷ್ಟು ಆಸೆ. ಮನೆಯ ಮುಂದಿನ ನಾಯಿಯೊಂದಿಗೇ ಅದೆಷ್ಟು ಹೊತ್ತು ಚೆಲ್ಲಾಟ. ಗಂಡನ ಮನೆಯ ಬಿಗುವಿನ ವಾತಾವರಣದಿಂದ ತವರಿನ ಸ್ವತಂತ್ರವಾತಾವರಣದಲ್ಲಿ ಹಾಯಾಗಿ ಸ್ವತಂತ್ರವಾಗಿ ಉಸಿರಾಡಿದ ಅನುಭವ.

ಅತ್ತೆಯ ಮನೆಯಲ್ಲಿ ಗೆಳತಿಯರೊಂದಿಗೆ ನಕ್ಕುನಲಿಯು ಹರಟೆ ಹೊಡೆಯುತ್ತ ಕುಳಿತಿದ್ದಾಗ ಮನೆಯವರ ನಗೆಪಾಟಲಿಗೆ ಗುರಿಯಾದ ನೆನಪು ಮೈ ಉರಿಸುವಂಥಾದ್ದು. ಆದೇ ತವರಿನಲ್ಲಿ ಹಾಗೆ ಆಡಿದರೂ ಅಮ್ಮನಿಗೆ ಇಷ್ಟ.

'ಪ್ರಸಾದ್, ನನ್ನ ತವರಿನಲ್ಲಿ ಎಂಟು ದಿನ ಇರೋಣಪಾ ? ಎಂದದ್ದಕ್ಕೆ ಮನಸ್ಸು ದಣಿಸಿಕೊಂಡವರಂತೆ ನಾಲ್ಕು ದಿನಗಳ ಮಟ್ಟಿಗಿದ್ದು ಅಂದು ರಾತ್ರಿಯೇ ಮನೆಗೆ ಹೊರಟಿದ್ದನಲ್ಲ. ಮುಳ್ಳಿನ ಮೇಲೆ ತಪಸ್ಸಿಗೆ ಕೂತಂಥ ಅವನ ಮುಖ ಭಾವವನ್ನು ಕಂಡಾಗ ತನಗೆ ಕ್ರೋಪ ಬಂದಿತ್ತು, ಹಿಂದೆಯೇ ಕನಿಕರವಾಗಿತ್ತು. ಆವನನ್ನು ಚುಡಾಯಿಸಲು ಕೇಳಿದ್ದೆ.'

'ಅಲ್ರೀ, ನಾಲ್ಕೇ ದಿನಕ್ಕೇ ನಿಮಗೆ ನಮ್ಮ ಮನೆ ಬೇಜಾರಾದ್ರೆ ನಾನ್ಹೇಗೆ ನಿಮ್ಮ ಮನೇಲಿ ಬಂದಿರಬೇಕು ಹೇಳ್ರಿ ? ! ಎಂದಿದ್ದಕ್ಕೆ.

"ಮದುವೆಯಾದ ಹೆಣ್ಣುಗಳೆಲ್ಲ ತವರನ್ನು ಮರೆತು ಗಂಡನ ಮನೇಲಿರಲೇ ಬೇಕಲ್ಲ. ಅದು ಇಂದು ನಿನ್ನೆಯದಲ್ಲ ಸನಾತನ ಸಂಪ್ರದಾಯ ಎಂದು ನಕ್ಕಿದ್ದನಲ್ಲ ! ಅವನ ನಗೆಯುಂದ ತನ್ನ ಮುಖಕ್ಕೆ ಬಿಸಿ ಬೆಂಕಿಯ ಕಾವು ಒಮ್ಮೆಲೇ ಬಡಿದಷ್ಟು ಹಿಂಸೆಯಾಗಿತ್ತು.

'ಇವನು ಮಾತ್ರ ತನ್ನ ತವರಿಗೆ ಬರಲು ಸಾಧ್ಯವಿಲ್ಲ, ಇವನ್ನ ಮನೆಗೆ ತಾನು ಏಕೆ ಬರಬೇಕು ?. ಒಳಗಿನ ಹಮ್ಮಿನ ದನಿಯೊಂದು ಪ್ರಶ್ನಿಸಿತ್ತು.

ಇವನು ಮೊಂಡಾದಾರೆ ತಾನು ಜಗಮೊಂಡಿಯಾಗಬೇಕು. ಸ್ವಾತಂತ್ರ

ಸಮಾನತೆ ಏನೆಲ್ಲ ಉದ್ದುದ್ದ ಭಾಷಣಗಳನ್ನು ಬಿಗಿದ ಭೂಪ ಇವನು! ಅದೂ ತನ್ನ ಮದುವೆಗೆ ಮುಂಚೆ ಈಗ ಅದೆಲ್ಲ ಎಲ್ಲಿ ಹೋಯ್ತು ? ಪ್ರಶ್ನೆ ಕೇಳಿದರೆ ಜಗಳಕ್ಕೇ ನಿಲ್ಲುವಷ್ಟು ಬಿಗುವಾಗುತ್ತಾನೆ.

ಏನಾದರೂ ಕಟ್ಟಿಕೊಂಡ ಗಂಡತಾನೆ ? ತನ್ನ ಆಸೆ ಆಕಾಂಕ್ಷೆಗಳೇನಿದ್ದರೂ ಪೂರೈಸಬೇಕಲ್ಲ ಹೌದು, ಅಂದ ಹಾಗೆ ತನ್ನ ಆಸೆ ಆಕಾಂಕ್ಷೆಗಳಾದರೂ ಏನು ? ತನಗೊಂದು ಸುಂದರವಾದ ಪುಟ್ಟಮನೆ. ಮನೆಯಲ್ಲಿ ಹೆಚ್ಚು ಜನಗಳ ಜಂಜಾಟವಿರಬಾರದು. ಅವನು ತಾನು ಏಕಾಂತವಾಗಿ ಹಾಯಾಗಿ ನಗುತ್ತಾ ನಲಿಯುತ್ತಾ ಕಾಲ ಕಳೆಯಬೇಕು. ತಮ್ಮ ಪ್ರೇಮ ಮಂದಿರದಲ್ಲಿ ಹಾಯಾಗಿ ವಿಹರಿಸುವ ಬಯಕೆ. ದಿನ ದಿನಕ್ಕೂ ಮನಸ್ಸಿನ ಆಸೆ ಹೆಚ್ಚಾಗುತ್ತ ಬಂದು ಅಂತರ್ಯದ ಬಯಕೆಯನ್ನು ಅವನೆದುರು ಬಯಲು ಮಾಡಿದಾಗ ಅಂತಹ ಬಯಕೆಯನ್ನು ಕೇಳಿ ಅವನು ನಕ್ಕುಬಿಟ್ಟಿದ್ದ.

'ಹುಚ್ಚು ಹುಡುಗಿ ! ಹಾಲಿನಂಥಾ ಸಂಸಾರ, ನಂದಗೋಕುಲದಂಥಾ ಸಂಸಾರ ! ಇಂಥ ಸಂಸಾರದಲ್ಲಿ ಒಡಕು ಹುಟ್ಟಿಸುವ ಆಸೆ ನಿನ್ನ ತಲೇಗೇಕೆ ಬಂತು ? ನಮ್ಮ ತುಂಬು ಕುಟುಂಬವನ್ನು ಒಡೆಯುವ ಸಾಹಸವನ್ನು ಕನಸಿನಲ್ಲೂ ಮಾಡಬೇಡ. ಎಂದಾಗ, 'ಇದು ನನ್ನ ಆಸೆ' ಎಂದು ದನಿ ಎತ್ತರಿಸಿ ಒಂದು ಸಲ ಹೇಳಿದ್ದೆ. ಆದರೆ ಒಳ ಮನಸ್ಸು ಹತ್ತು ಬಾರಿ ಚೀರಿತ್ತು.

ಮನೆಯ ಒಡಕು ಅಭಿಪ್ರಾಯಗಳನ್ನು ತವರಿನಲ್ಲಿ ಹೇಳಿದಾಗ ಅಮ್ಮ ಕಂಗಾಲಾಗಿದ್ದಳು. ಕಣ್ಣೀರು ಸುರಿಸಿದಳು. ತಂದೆ ಕೋಪದಿಂದ ಕೂಗಾಡಿದರು. ಮಗಳ ಮನಸ್ಸನ್ನು ನೋಯಿಸಿದವನ ಬಗ್ಗೆ ತಾಯಿ ತಂದೆಯರ ಮನಸ್ಸು ಕುದಿಯಿತು. ಅವರು ತಮ್ಮ ಅವಸರದ ಪ್ರಯತ್ನದಿಂದ ಈ ಮದುವೆ ನಡೆಯಿತೇನೋ ಎಂದು ಮದ್ಮುಲ ಮರುಗಿದರು. ಸಮಯ ಬಂದರೆ ಬೀಗರ ಮೇಲೆ ವಾಗ್ಬಾಣ ಸುರಿಸಲು ಹೆತ್ತ ಒಡಲು ಸಿದ್ಧವಾಗಿ ಕಾಯುತ್ತ ಕೂತಿತು.

ನಮ್ಮಿಬ್ಬರ ಜಗಳ ಪಿಸುಮಾತಿನಿಂದ ಗಟ್ಟಿಯಾಗಿಯೇ ಏರಿ ತಂದೆ

ತಾಯಿಗಳ ಕಿವಿಗೆ ಬಿದ್ದಾಗ ಮಾವನವರು ಕೋಪದ ಕಾವಿನಲ್ಲಿ ಹೇಳಿದರು.

'ಈ ಮನೇಲಿರೋಕೆ ಇಷ್ಟವಿಲ್ಲ ಅಂದ್ಮೇಲೆ ಆ ಹುಡುಗೀನ್ಯಾಕೆ ಹಿಂಸೆ ಮಾಡ್ತೀಯೋ ? ಬೇರೆ ಮನೆ ಮಾಡಿ ಕರ್ಕೊಂಡ್ಹೋಗು !

'ಅಪ್ಪ......'

'ಹೆಂಡತೀನ ಸಾಕಲಾರದ ಷಂಡ ನನ್ನ ಮಗ ಅನ್ನೋ ಅಪಕೀರ್ತಿ ನುಗ್ಯಾಕೆ ತರ್ತೀಯಾ ?' ಅಬ್ಬರಿಸಿದ್ದರು.

'ಸಮಯ ಬಂದ್ರೆ ಅವಳನ್ನು ಬೇಕಾದ್ರೂ ಬಿಡ್ತೀನಿ. ಹೆತ್ತವರಂ ನಿಮ್ಮನ್ನು ಬಿಟ್ಟು ನಾನಿರೋಲ್ಲ ಅಪ್ಪ.'

ತನ್ನ ಆತ್ಮಾಭಿಮಾನ ಕೆರಳಿತ್ತಲ್ಲ.

ತಟ್ಟನೆ ನುಗ್ಗಿ ಬಂದು ಪ್ರಸಾದಾನ ಹೇಡಿ ಮುಖಕ್ಕೆ ಬಡಿದು ರಾಚಿ ದಂತೆ ಹೇಳಿದ್ದೆನಲ್ಲ.

'ನಾನೂ ಅಷ್ಟೇರಿ ! ಸಮಯ ಬಿದ್ರೆ ನಿಮನ್ನ ಬೇಕಾದ್ರೂ ಬಿಟ್ಟೇನು. ನಮ್ಮ ಹೆತ್ತವರನ್ನು ನಾನು ಬಿಟ್ಟಿರೋಲ್ಲ.'.

'ಏನು ಮಾತು ತಾಯಿ ಇದು ! ನಿಮ್ಮ ಮಾತುಗಳು ಇಂಥ ಮಟ್ಟ ಮುಟ್ಟಬಾರದು. ಶಿವ, ಶಿವಾ !,' ಅತ್ತೆ ನೋವಿನಿಂದ ನರಳಿದವರಂತೆ ಕಿವಿ ಮುಚ್ಚಿಕೊಂಡಿದ್ದರಲ್ಲ. ಇವತ್ತು ತಾನು ಊಟವೂ ಮಾಡದೆ ಆಫೀಸಿಗೆ ಬಂದಿದ್ದರ ನೆನಪಾಯಿತು. ಈಗ ತಾನು ಮನೆಗೆ ಹೋದರೆ ಎಂತಹ ಪರಿಸ್ಥಿತಿ ಕಾದಿದೆಯೋ ! ಮನಸ್ಸು ಪುಟ್ಟದೊಂದು ಯುದ್ಧವನ್ನೆದುರಿಸಲು ಸಿದ್ಧವಾಗುತ್ತಿತ್ತು.

ಮನೆಯಲ್ಲಿ ಹೆಜ್ಜೆಯಿಡುತ್ತಿರುವಂತೆಯೇ ರೇಡಿಯೋದಿಂದ ಮೆಲ್ಲಗೆ ಸುಪ್ರಸಿದ್ಧ ಗಾಯಕಿಯೊಬ್ಬರ ಹಾಡಿನ ಅಲೆ ಕೇಳಿ ಬರುತ್ತಿತ್ತು.

'ಮೈತ್ರೀಂ ಭಜತಾಂ, ಯುದ್ಧಂ ತ್ಯಜತಾಂ....' 'ವಿಶ್ವಕ್ಕೇ ಶಾಂತಿ ಮಂತ್ರವನ್ನು ಸಾರುತ್ತಿತ್ತು ಆವಾಣಿ ಆದರೆ, ತನ್ನ ಮತ್ತು ಪ್ರಸಾದನ ಮನಸ್ಸಿಗೆ ?

# ಕತೆಯಾದವರು

—ವಿಜಯಶ್ರೀ ಸಬರದ

ಒಂದು ಸುಂದರವಾದ ಕತೆ ಬರೆಯಬೇಕೆಂಬ, ಬೆಳಗಿನ ಸಮಯದಲ್ಲಿ ಪೆನ್ನು-ಕಾಗದ ಹಿಡಿದು ಕೂಡುತ್ತೇನೆ. ಕತೆಯಲ್ಲಿನ ನಾಯಕ-ನಾಯಕಿಯರ ಬಗೆಗೆ ಮೆಲುಕು ಹಾಕುತ್ತಾ, ನಾಯಕಿಯ ಸೌಂದರ್ಯಕ್ಕೆ ಮನಸೋತ ನಾಯಕನ ಸಂಭಾಷಣೆ ಹೇಗಿರಬೇಕೆಂದು ಕಲ್ಪಿಸುತ್ತಿರುವಾಗಲೇ, ಮುಂಜಾವಿನ, ಹಕ್ಕಿಗಳ ಧ್ವನಿ ಪ್ರಕೃತಿಯ ಅಗಾಧ ಸೌಂದರ್ಯ ಒಮ್ಮೆಲೇ ಆಕರ್ಷಿಸುತ್ತವೆ. ಸರಿ, ಕತೆ ಬರೆಯಬೇಕೆಂದು ಪೆನ್ನು ಹಿಡಿಯುವಷ್ಟರಲ್ಲಿ ಕರೆಗಂಟೆಯ ಶಬ್ದವಾಗುತ್ತದೆ. 'ಛೆ! ಮುಂಜಾನೆದ್ದು ಬರೀಬೇಕಂದ್ರ ಇದೇನಿದು' ಎನ್ನುತ್ತಾ ಬಾಗಿಲು ತೆರೆಯುತ್ತೇನೆ. ಕಸ-ಮುಸುರೆ ಮಾಡುವ ಕೆಲಸದ ಯಮುನಕ್ಕ ಬಾಗಿಲಲ್ಲಿ ನಿಂತಿದ್ದಾಳೆ. ಆಕೆಯ ಗಂಭೀರವಾದ ಮುಖ, ಮುಖದ ತುಂಬೆಲ್ಲ ಎದ್ದು ಕಾಣುವ ಚಿಂತೆಯ ಗೆರೆಗಳು ನನ್ನ ಕತೆಯ ಕಲ್ಪನೆಗೆ ತಣ್ಣೀರೆರಚುತ್ತವೆ.

ಯಮುನಕ್ಕ ಪಾತ್ರೆಗಳಲ್ಲಿನ ಎಲ್ಲಾ ಮುಸುರಿ ಬಳಿದು, ಒಂದು ಕಾಗದದಲ್ಲಿ ಹಾಕಿ ಕಟ್ಟಿಟ್ಟು ಪಾತ್ರೆ ತೊಳೆಯಲು ಪ್ರಾರಂಭಿಸುತ್ತಾಳೆ. ಆಕೆ ಪಾತ್ರೆ ತೊಳೆದು ಮುಗಿಸುವಷ್ಟರಲ್ಲಿ, ನನ್ನ ಕಥಾವಸ್ತುವನ್ನು ಆಯ್ಕೆ ಮಾಡಬೇಕೆಂದು ಆಲೋಚಿಸುವಷ್ಟರಲ್ಲಿ. ಯುಮುನಕ್ಕನ ಅಳುವ ಧ್ವನಿ; ಮತ್ತೆ ಪೆನ್ನು ಒಗೆಯುತ್ತೇನೆ, ವಿಚಾರಿಸುತ್ತೇನೆ, ಯುಮುನಕ್ಕ ಕಣ್ಣ ತುಂಬಾ ನೀರು ತಂದುಕೊಂಡು ತನ್ನ ಗೋಳಿನ ಕತೆಯನ್ನೆಲ್ಲಾ ಹೇಳುತ್ತಾಳೆ. ನಾನು ಬರೆಯಬೇಕೆಂದಿದ್ದ ಕತೆಯ ಆಲೋಚನೆಗಳು ಅಲ್ಲಿಗೇ ನಿಲ್ಲುತ್ತವೆ.

ಯಮುನಕ್ಕನದೊಂದು ದೊಡ್ಡ ಕತೆ. ಎಂಟು ಜನ ಮಕ್ಕಳು, ಕಿತ್ತು ತಿನ್ನುವ ಬಡತನ. ಹಿರಿಯ ಮಗಳನ್ನು ಸಂತಪೂರಕ್ಕೆ ಮದುವೆ ಮಾಡಿಕೊಟ್ಟಿದ್ದಾಳೆ. ಎರಡನೆಯ ಮಗಳು ಹಣಕ್ಕಾಗಿ ಬದುಕು ಮಾರಿ ಕೊಂಡಿದ್ದಾಳೆ. ಉಳಿದವರು-ನಾಲ್ಕು ಹುಡುಗರು, ಎರಡು ಹುಡುಗಿ ಯರು ಇನ್ನೂ ಸಣ್ಣವರು. ಗಂಡ ಭಯಂಕರ ಕುಡುಕ. ಮನೆಯವರ ನ್ನೆಲ್ಲಾ ಹೆದರಿಸಿ-ಬೆದರಿಸಿ ನಿತ್ಯ ಕುಡಿಯುತ್ತಾನೆ. ಗಂಡನ ಮನೆಯಲ್ಲಿರ ಬೇಕಾದ ಎರಡನೇ ಮಗಳು ಹನುಮಿ ಪರಿಸ್ಥಿತಿಯ ಒತ್ತಡಕ್ಕೆ ಬಿದ್ದು ಇಂದು ಸೂಳೆಯಾಗಿದ್ದಾಳೆ.

ಇದಕ್ಕೆ ಗಂಡ ಕರಿಯನೇ ಕಾರಣನೆಂದು ಯಮುನಕ್ಕ ಅತ್ತತ್ತು ಹೇಳುತ್ತಾಳೆ, ಕರಿಯ ದಿನಾಲೂ ಕುಡಿಯುತ್ತಾನೆ, ಅವನು ದುಡಿದದು ಅವನ ಕುಡಿತಕ್ಕೇ ಸಾಲುವುದಿಲ್ಲವಂತೆ, ಹೆಂಡತಿಯನ್ನು ಹೊಡೆದು-ಬಡಿದು ಹಣ ಕಿತ್ತುಕೊಂಡು ಹೋಗುವ ಕೆಲಸ ದಿನವೂ ನಡೆಯುತ್ತದಂತೆ.

'ಗುಡ ನೋಡಿದ್ರ ಕುಡುಕ, ಮಕ್ಕಳಿನ್ನಾ ಸಣ್ಣಾವು, ನಾನು ಹೆಂಗ ಬದುಕಲಿ ಅವ್ವಾರ'-ಎಂದು ತುಂಬಿದ ಕಂಠದಿಂದ ಯಮುನಕ್ಕನ ಕತೆ ಹೊರಡುತ್ತದೆ.

'ಹಿಂಗ್ಯಾಕ ಮಾಡ್ತಾನ ನಿನಗಂಡ, ಅವಗಸ್ವಲ್ಪ  
ಬುದ್ಧಿ ಹೇಳಿಸಿ ನೋಡು'—ಎನ್ನುತ್ತಿರುವಾಗಲೆ  
'ಅವಾ ಕೇಳುವಾಂಗಿದ್ರ ನಮ್ಮ ಬಾಳೇವು ಹಿಂಗ್ಯಾಕ  
ಆಗತಿತ್ರಿ ಅವ್ವಾರ! ನನ ಮಗಳು ಹನುಮಿದು ಗಂಡನ  
ಮನ್ಯಾಗ ಚಂದಾಗಿ ಬಾಳೆಮಾಡೊ ವಯಸ್ಸು, ಇಂದು  
ದುಡ್ಡಿನ ಆಸ್ಯಾಕ ಸೂಳಿ ಆಗ್ಯಾಳ. ಕುಡುಕ-ಗಂಡ  
ಮಗಳು-ಸೂಳಿ...' ಕಣ್ಣೀರು ಹರಿಯುತ್ತಲೇ

ಯಮುನಕ್ಕನ ಕತೆ ಮುಂದೆ ಸಾಗುತ್ತದೆ. ಕರಿಯನ ಮೇಲೆ ಭಯಂಕರ ಸಿಟ್ಟು ಬರುತ್ತದೆ. ಕರಿಯನಂತವರು ಮಾಡುವ ಅನ್ಯಾಯ ಕಂಡು, ಕೇಳಿ

ಮ್ಮೆಯಲ್ಲಿ ಬೆಂಕಿಯಿಟ್ಟಂತಾಗುತ್ತದೆ. ಈ ಜಗವೇ ಹೊತ್ತಿ ಉರಿಯುವಂತೆ ಭಾಸವಾಗುತ್ತದೆ.

ಈ ಸಮಾಜದಲ್ಲಿ ಪುರುಷನಾದವ ಏನು ಮಾಡಿದರೂ ನಡೆಯುತ್ತದೆ. ಅದೇ ಸ್ತ್ರೀಯ ಬದುಕು ? ಮತ್ತೆ ನೂರೆಂಟು ಪ್ರಶ್ನೆಗಳು, ತಾಕಲಾಟಗಳು ಗುದುಮುರಿಗಿ ಕಟ್ಟಿ ಸುಸ್ತು ಮಾಡುತ್ತವೆ. ಮತ್ತೆ–ಮತ್ತೆ ಹಲವಾರು ವಿಚಾರಗಳು ಘುಮಿಕಿ–ಬರುತ್ತವೆ.

ಕಾಲೇಜಿನಲ್ಲಿ ವಿದ್ಯಾರ್ಥಿನಿಯರು ಕೇಳಿದ ಹಲವಾರು ಪ್ರಶ್ನೆಗಳು ಒಮ್ಮೆಲೇ ನೆನಪಾಗುತ್ತವೆ. ಹೆಣ್ಣನ್ನು ಗುಲಾಮಳನ್ನಾಗಿ ಕಾಣುವ ಪ್ರವೃತ್ತಿ ಇನ್ನೂ ಇದೆಯಲ್ಲವೆಂದು ವ್ಯಥೆಯಾಗುತ್ತದೆ. 'ಮಾತೃದೇವೋಭವ' ಎಂದು ಹೇಳಿದ ಮನು ಮತ್ತೊಂದು ಕಡೆ 'ಸ್ತ್ರೀ ಸ್ವಾತಂತ್ರ್ಯಕ್ಕೆ ಅನರ್ಹಳು' ಎಂಬುದನ್ನೂ ಹೇಳಿ ತನ್ನ ಎಡಬಿಡಂಗಿತನವನ್ನು ತೋರಿಸಿದ್ದಾನೆ. ಸ್ತ್ರೀಯನ್ನು ದೇವತೆಯನ್ನಾಗಿ ಬಂಧಿಸಿ, ಆಕೆಗೆ ಸ್ವಾತಂತ್ರ್ಯ ಕೊಡಬೇಡಿರೆನ್ನುವ ಮನುವಿನ ಖದೀಮತನವನ್ನು ಸ್ತ್ರೀಯರಾದ ನಾವಿಂದು ಅರ್ಥಮಾಡಿಕೊಳ್ಳಬೇಕಾಗಿದೆ–ಕ್ಲಾಸಿನಲ್ಲಿ ಸ್ತ್ರೀ ಬಗೆಗೆ ನಾನು ವಿವರಿಸಿದ ಉಪನ್ಯಾಸದ ಧಾರೆ, ವಿಚಾರಗಳ ಸರಪಣಿ ಸುರುಳಿ ಬಿಚ್ಚುತ್ತದೆ.

ಮತ್ತೆ ಯಮುನಕ್ಕನ ಕಣ್ಣಲ್ಲಿ ನೀರು; ಒಮ್ಮೊಮ್ಮೆ ದೊಡ್ಡದಾಗಿ ಅಳುತ್ತಾಳೆ. ಇಂದು ಅವಳ ಸಣ್ಣ ಮಗನಿಗೆ ಭಯಂಕರವಾದ ಜ್ವರವಂತೆ, ಉಳಿಯುವ ಭರವಸೆ ಇಲ್ಲವೆಂಬಂತೆ ಗೋಗರೆಯುತ್ತಾಳೆ. ವೈದ್ಯರಲ್ಲಿ ಹೋಗಲು ಹಣವಿಲ್ಲ. ಇಷ್ಟೆಲ್ಲವನ್ನೂ ಸಹಿಸಿ ಕೆಂಡ ನುಂಗಿ ಬಾಳುತ್ತಿರುವ ಯಮುನಕ್ಕ ಪಾತ್ರೆ ತಿಕ್ಕಿ ತೊಳೆಯುತ್ತಿರುವದನ್ನು ಕಂಡಾಗ, ಆಕೆ ತನ್ನ ಹೃದಯವನ್ನೇ ತಿಕ್ಕಿ ತೊಳೆದ ಅನುಭವವಾಗುತ್ತದೆ. ಈ ನಮ್ಮ ಮಹಿಳಾ ವಿಮೋಚನೆ ಸಂಘ, ಮಹಿಳಾ ಮಂಡಳ, ಒಟ್ಟಾಗಿ ಸ್ತ್ರೀ ಸಮೂಹ ಯಮುನಕ್ಕನ ಬದುಕಿನಲ್ಲಿ ಶೂನ್ಯವಾಗುತ್ತವೆ. ಮತ್ತೆ ವಿಚಾರಗಳ ತಾಕಲಾಟ. ಯಮುನಕ್ಕ-ಬದುಕು-ವಿಮೋಚನೆ-ಸಂಘಟನೆ...ಮತ್ತೆ ಮೌನ.

ಇಲ್ಲಾ, ಯಮುನಕ್ಕ ಹೀಗಾಗಬಾರದು. ಇಂತ ಸಾವಿರಾರು ಯಮುನಕ್ಕಳ ಬದುಕು ಅರಳಬೇಕು. ಅದೆಂದೂ ಬಾಡಬಾರದು...ಹೌದು, ಬದುಕು ಪಲ್ಲವಿಸಬೇಕು...ನಾನು ಬರೆಯಬೇಕೆಂದಿರುವ ಸುಂದರ ಕತೆಯು ಕಲ್ಪನೆಗೆ ಪೊದಲು ಬೆಂಕಿಯಿಕ್ಕಬೇಕು...ಮತ್ತೆ ಮತ್ತೆ ನೂರಾರು ವಿಚಾರಗಳು ತಲೆತಿನ್ನುತ್ತಿವೆ.

'ನೋಡ್ರಿ ಅವ್ವಾರ ನಿನ್ನೆ ರಾತ್ರಿ ಕುಡದು ಬಂದು ನನ್ನ ಗಂಡ ಸೊಂಟಕ್ಕ ಒದ್ದಾನ, ಸರಿಯಾಗಿ ನಡಿಲಾಕ ಬರುವಲ್ದು' ಬದುಕಿನ ಸೊಂಟ ಕಳೆದುಕೊಂಡ ಯಮುನಕ್ಕನ ನೋವಿನ ಧ್ವನಿ.

'ಸಮಾಧಾನ ತಂದುಕೋ ಯಮುನಕ್ಕ, ಇವನ್ನೆಲ್ಲಾ ಧೈರ್ಯದಿಂದ ಎದುರಿಸಬೇಕಾಗುತ್ತೆ' ಧೈರ್ಯವಿಲ್ಲದ ನಾನು ಧೈರ್ಯಗಾರ್ತಿ ಯಮುನಕ್ಕ ಸಿಗೆ ಸಮಾಧಾನ ಹೇಳುತ್ತೇನೆ, ಧೈರ್ಯ ತುಂಬುತ್ತೇನೆ. ಬದುಕೇ ಹೀಗೆ, ಬರಿ ಮಾತುಗಳ ಮಂಟಪ, ಉಪದೇಶದ ಧಾರಾಳತನ.

ಯಮುನಕ್ಕನ ಮುಂದೆ ನನ್ನ ಉಪನ್ಯಾಸ ನಡದೇ ಇರುತ್ತದೆ. ಅಷ್ಟರಲ್ಲಿ ರಿಕ್ಷಾವಾಲಾ ಸಮದ್ ಬರುತ್ತಾನೆ. ಬೇಗ–ಬೇಗ ರೆಡಿಯಾಗು ತ್ತೇನೆ. ಬಿ. ಎ. ಅಂತಿಮ ವರ್ಷದ ವಿದ್ಯಾರ್ಥಿನಿಯರಿಗೆ ಮೊದಲನೇ ಪಿರೇಡ್ ಇದೆ. ಅವರಿಗೆ ಕರ್ನಾಟಕ ಸಂಸ್ಕೃತಿಯ ಬಗೆಗೆ ಇಂದು ಪಾಠ ಮಾಡಬೇಕು. ಇಲ್ಲಿನ ಸಂಸ್ಕೃತಿ ಹೆಣ್ಣಿಗೆ ಎಂತಹ ಗೌರವ ಕೊಟ್ಟಿದೆಯೆಂಬು ದನ್ನು ಬಣ್ಣಿಸಬೇಕು. ಮನಸ್ಸಿನ ತುಂಬಾ ಇಂದು ಯಮುನಕ್ಕ ತುಂಬಿ ದ್ದಾಳೆ. ಆಕೆಯ ಕಣ್ಣೀರು ನನ್ನಲ್ಲಿ ಹೋರಾಟದ ಬೆಂಕಿ ಹಚ್ಚಿದೆ. ರಿಕ್ಷಾ ವಾಲಾ ಮತ್ತೆ ಕರೆಗಂಟೆ ಬಾರಿಸುತ್ತಾನೆ. ಕತೆ ಬರೆಯುವ ನನ್ನ ಮೂಡೆಲ್ಲಾ ಹಾಳಾಗಿ. ಮನದಾಳದಲಿ ಮೌನ ಕುದಿ-ಕುದಿದು ಯಮುನಕ್ಕಳ ಕತೆ-ಗಟ್ಟಿ ಯಾಗುತ್ತದೆ. ರಿಕ್ಷಾದಲ್ಲಿ ಕೂಡ್ರುತ್ತೇನೆ ; ರಿಕ್ಷಾ ಓಡುತ್ತದೆ, ಚಕ್ರಗಳು ತಿರುಗುತ್ತವೆ.

ಕಾಲೇಜಿನಲ್ಲಿ ದಿನಾಲೂ ಪಿರೇಡ್‌ಗಳು ಸರಿಯಾಗಿಯೇ ನಡೆಯುತ್ತವೆ.

ನಮ್ಮ ಸಂಸ್ಕೃತಿ ಭವ್ಯವಾದದ್ದು, ದಿವ್ಯವಾದುದು ಎಂದು ಸಂಸ್ಕೃತಿಯ ಮಾತು ಬಂದಾಗಲೆಲ್ಲಾ ನಮ್ಮ ಹಿರಿಯ ಪ್ರಾಧ್ಯಾಪಕರು ಕೊರೆಯುತ್ತಲೇ ಇರುತ್ತಾರೆ. ಈ ಮುಗ್ಧ ವಿದ್ಯಾರ್ಥಿನಿಯರಿಗೆ ಏನೆಲ್ಲಾ ಕೊರೆದು ವಾಸ್ತವ ಬದುಕಿನಿಂದ ಅವರನ್ನು ದೂರ ಸರಿಸುತ್ತೇವೇನೋ ಎಂದೆನ್ನಿಸುತ್ತದೆ. ನಾವು ಕಾಲೇಜಿನಲ್ಲಿ ಮಾಡುವ ಪಾಠಕ್ಕೂ ವಾಸ್ತವ ಬದುಕಿಗೂ ಸಂಬಂಧ ಕಲ್ಪಿಸಲು ಹೋದರೆ ಹುಚ್ಚಿಯಾಗುತ್ತೇನೆ. ಇದೆಲ್ಲಾ ಸತ್ಯವೆಂದು ನಂಬಿದ ಸಹಸ್ರಾರು ವಿದ್ಯಾರ್ಥಿನಿಯರ ಬಣ್ಣದ ಕನಸುಗಳು ಒಂದು ದಿನ ಒಡೆದಾಗ ಎಷ್ಟು ನೋವಾಗಲಿಕ್ಕಿಲ್ಲ. ಮತ್ತೆ ಯಮುನಕ್ಕ ತಲೆ ತಿನ್ನುತ್ತಾಳೆ. ಬೇಸರ-ಸಿಟ್ಟು...ಇಂದು ನನಗೆ ಕೊನೇ ಪಿರೇಡ್ ಇಲ್ಲಾ, ಗ್ರಂಥಾಲಯದಲ್ಲಾದರೂ ಕೂತು ದಿನಪತ್ರಿಕೆ ಓದಿದರಾಯಿತೆಂದು ಹೊರಡುತ್ತೇನೆ. ರಸ್ತೆಯಲ್ಲಿ ಕಾಲೇಜ ಜವಾನ ನರಸಪ್ಪ ಭೇಟಿಯಾಗುತ್ತಾನೆ. ನಮಸ್ಕರಿಸುತ್ತಲೆ-

'ಅವ್ವಾರ ತ್ವಾಡೆ ಕೆಲಸಿತ್ತು' ಎನ್ನುತ್ತಾನೆ.

'ಏನದು ನರಸಪ್ಪ ?'

'ಹತ್ತು ರೂಪಾಯಿ ಬೇಕಾಗಿತ್ತ ಅವ್ವಾರ'

ನರಸಪ್ಪ ದೀನಧ್ವನಿ. ಬಾಡಿದ ಮುಖ ನೋಡಿ ಕರುಳು ಚುರ್ರೆನ್ನುತ್ತದೆ. ಪರ್ಸು ತೆಗೆದು ಹತ್ತು ರೂಪಾಯಿ ನೋಟು ಕೊಟ್ಟಾಗ, ನರಸಪ್ಪ ಸಂತೋಷದಿಂದ ತೆರಳುತ್ತಾನೆ.

ಈ ನರಸಪ್ಪನದೂ ಒಂದು ಗೋಳಿನ ಕತೆ. ಇದ್ದೊಬ್ಬ ಮಗನನ್ನು ಕಳೆದುಕೊಂಡು ದಿನಾಲೂ ಹಲುಬುತ್ತಾನೆ. ಹೆಂಡತಿ ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದಾಳಂತೆ. ಬಹಳ ತೊಂದರೆಗೀಡಾದ್ದಾನೆ; ತುಂಬಾ ಪ್ರಾಮಾಣಿಕ ಮನುಷ್ಯ. ಅವನ ಮಗ ನಗರಸಭಾಧ್ಯಕ್ಷರ ಲಾರಿಯ ಅಪಘಾತದಲ್ಲಿ ಸತ್ತು ಇದೇ ನವ್ಹೆಂಬರ್‌ಕ್ಕೆ ಒಂದು ವರ್ಷವಾಯಿತು. ನಗರ ಸಭಾಧ್ಯಕ್ಷರು ಊರಿನಲ್ಲಿಯೇ ಗಣ್ಯ ವ್ಯಕ್ತಿ, ಶ್ರೀಮಂತರು. ನರಸಪ್ಪನಿ

ಗೊಂದಿಷ್ಟು ದುಡ್ಡು ಕೊಟ್ಟು ಆ ಕೇಸನ್ನು ಅಲ್ಲಿಗೇ ಮುಗಿಸಿಬಿಟ್ಟಿದ್ದರು. ಇದು ಎಲ್ಲರಿಗೂ ಸಾಮಾನ್ಯವಾಗಿ ಗೊತ್ತಿದ್ದ ವಿಷಯ. ಶ್ರೀಮಂತರು ತಮ್ಮ ದುಡ್ಡಿನ ಬಲದಿಂದ ಏನನ್ನಾದರೂ ಮಾಡಬಲ್ಲರು, ಯಾರನ್ನಾದರೂ ಕೊಂಡುಕೊಳ್ಳಬಲ್ಲರು ಎಂಬುದಕ್ಕೆ ನರಸಪ್ಪ ಜೀವಂತ ಸಾಕ್ಷಿಯಾಗಿದ್ದಾನೆ.

'ನಾವೆಲ್ಲಾ ಭಾರತೀಯರು ಒಂದು. ಇಲ್ಲಿ ಶ್ರೀಮಂತ-ಬಡವನೆಂಬ ಭೇದವೇ ಇಲ್ಲ. ಎಲ್ಲರೂ ಸರಿಸಮಾನರಾಗಿದ್ದಾರೆ.' ಮೊನ್ನೆ ನಮ್ಮ ಕಾಲೇಜಿನಲ್ಲಿ ಭಾಷಣ ಹೊಡೆದ ಮಂತ್ರಿಯು ಕಿವಿಹಿಡಿದು ಕೇಳಬೇಕೆನಿಸಿತು. ಬರೀ ಸುಳ್ಳು-ಅರೆಸುಳ್ಳು ಭಾಷಣಗಳಿಂದ ನಮಗೇನು ಆಗಬೇಕಾಗಿದೆ ? ಇನ್ನೊಂದೆರಡು ಹಿಂದಿನ ಘಟನೆಗಳ ನೆನಪಾಗುತ್ತವೆ. ಈ ಭಾಷಣಕ್ಕಿನ್ನು ಬೆಂಕಿ ಹಾಕಬೇಕು. ವಾಸ್ತವತೆಯನ್ನು ಜನ ಸಮೂಹಕ್ಕೆ ತಿಳಿಸಿ ಹೇಳಬೇಕು...ಮತ್ತೆ ಹಲವಾರು ವಿಚಾರಗಳು, ಅಷ್ಟರಲ್ಲಿ ಪ್ರೊ. ನಳಿನಿ ಎದುರಿಗೆ ಬರುತ್ತಾಳೆ.

'ಹಲೋ ಮೇಡಂ,'

'ಹಲೋ,'

'ಹೇಗಿದ್ದೀರಿ ?'

'ಚೆನ್ನಾಗಿದ್ದೀವಿ, ನೀವು ?'

ಯೋಗಕ್ಷೇಮದ ಮಾತುಕತೆಗಳು ನಡೆಯುತ್ತವೆ. ಪ್ರೊ. ನಳಿನಿ ಯಾವ ಸಂಸ್ಕೃತಿ-ಪರಂಪರೆಯನ್ನು ಒಪ್ಪದೆ ತನ್ನ ಮನ ಬಂದತೆ ಬಾಳುವಾಕೆ, ಮದುವೆಯಾಗಿ ಒಂದು ವರ್ಷದಲ್ಲೇ ಗಂಡನಿಗೆ ಗುಡ್‌ಬಾಯ್ ಹೇಳಿದವಳು, ಈಗ ಹಾಯಾಗಿದ್ದಾಳೆ. ತವರುಮನೆಯವರು ಸಾಕಷ್ಟು ಶ್ರೀಮಂತರು ಹೀಗಾಗಿ ನೋಡಲಿಕ್ಕೆ ಅವಳಿಗೆ ಯಾವ ತೊಂದರೆಯೂ ಇಲ್ಲವೆಂದೆನಿಸು ತ್ತದೆ. ಹೋದವರ್ಷವೇ ನಳಿನಿಯ ಮದುವೆಯಿತ್ತು.. ನಾವೆಲ್ಲಾ ಹೋಗಿದ್ದೆವು. ನಳಿನಿಯ ಗಂಡನಾದವ ಸ್ಫುರದ್ರೂಪಿ-ದೊಡ್ಡ ಬ್ಯಾಂಕೊಂ ದರಲ್ಲಿ ಮ್ಯಾನೇಜರ್. ನಳಿನಿ ಭಾಳ ಲಕ್ಕಿ ಎಂದೆಲ್ಲಾ ನಾವು ಹೇಳಿದ್ದೆವು.

ವರ್ಷ ತುಂಬುವದರೊಳಗಾಗಿ ಗಂಡನಿಗೆ ಡೈವೋರ್ಸ್ ಕೊಟ್ಟಿದ್ದಳೀಕೆ. ಹಠದ ಸ್ವಭಾವದ ನಳಿನಿ ಮೊದಲಿನಿಂದಲೂ ದುಃಖವನ್ನು ಕಂಡರಿಯುವ ವಳು. ಗಂಡ ಗುಲಾಮನಾಗಿರಬೇಕೆಂಬುದೇ ಅವಳ ಒಟ್ಟಭಿಪ್ರಾಯ. ನಮ್ಮ ಇಂಡಿಯಾದ ಸಂಸ್ಕೃತಿಯಲ್ಲಿ ಅದ್ಹೇಗೆ ಸಾಧ್ಯ? ಹಾಗಾಗಿ ಪ್ರೊ-ನಳಿನಿ ಈಗ ಒಬ್ಬಂಟಿ. ಬಂಗ್ಲೆ ಇದೆ, ಶ್ರೀಮಂತಿಕೆ ಇದೆ, ಮೊನ್ನೆ ಕಾರ್ ಕೊಡಾ ತರುವದಾಗಿ ಹೇಳಿದ್ದಾಳೆ, ಇಷ್ಟೆಲ್ಲಾ ಇದ್ದರೂ ಅವಳ ಮುಖದಲ್ಲಿ ಒಂದು ತರಹದ ಚಿಂತೆ ಇದೆ, ಒಳಗುದಿಯಿದೆ. ಸುಪ್ತವಾಗಿದ್ದ ನೋವು ಹೊರ ಹೊಮ್ಮಲು ಹಾತೊರೆಯುವಂತೆ ಕಾಣಿಸುತ್ತದೆ. ನಳಿನಿಯಂತವರನ್ನು ಕಂಡಾಗ, ವ್ಯಥೆಯೆನಿಸುತ್ತದಿ. ಈ ಬದುಕೇ ಅಪೂರ್ಣವೆನಿಸುತ್ತದೆ. ಕೆಲವರು ಹಣದಿಂದ. ಮತ್ತೆ ಕೆಲವರು ಉದ್ಯೋಗದಿಂದ, ಇನ್ನುಳಿದವರು ಬದುಕಿನಿಂದ ವಂಚಿತರಾಗಿದ್ದಾರೆ. ನಳಿನಿಯಲ್ಲಿಯ ಶ್ರೀಮಂತಿಕೆ ಯಮುನಕ್ಕ ಳಿಗಿಲ್ಲ. ಯಮುನಕ್ಕಳಿಗಿರುವ ಗಂಡ-ಮಕ್ಕಳು ನಳಿನಿಗಿಲ್ಲ. ಒಬ್ಬೊಬ್ಬರು ಒಂದೊಂದರಿಂದ ಅಪೂರ್ಣರು. ಪೂರ್ಣತೆಗಾಗಿ ಸಾಧನೆ ಅವಶ್ಯವೆನಿ ಸುತ್ತದೆ. ಮತ್ತೆ ನೂರೆಂಟು ಹೋರಾಟದ ಭಾವನೆಗಳು ಗರಿಗೆದರುತ್ತವೆ.

...

ಗ್ರಂಥಾಲಯದಲ್ಲಿದ್ದ ದಿನಪತ್ರಿಕೆ ಕೈಗೆತ್ತಿಗೊಳ್ಳುತ್ತೇನೆ. ಮೊದಲಿ ದ್ದಪಕ್ಷಬಿಟ್ಟು ಆಳುವ ಪಕ್ಷ ಸೇರಿದ ರಾಜಕಾರಣಿಗಳ ಹೆಸರುಗಳು ದಪ್ಪಕ್ಷರ ದಲ್ಲಿ, ಮುಖಪುಟದಲ್ಲಿ ಎದ್ದು ಕಾಣುತ್ತವೆ. ಮತ್ತೊಂದು ಕಡೆ ಬ್ಯಾಂಕ್ ದರೋಡೆಯ ಸುದ್ದಿ, ಕೆಳಗೆ ಕಣ್ಣಾಡಿಸಿದಾಗ ಬರಗಾಲದಿಂದ ಸತ್ತ ಜನರ ಚಿತ್ರಣ. ಎಡಬದಿಗೆ ಮತ್ತೊಂದು ದೊಡ್ಡ ಸುದ್ದಿ. ಸಮಾಜದ ಶಾಂತಿ ಸ್ಥಾಪಿಸಲು ಪೋಲಿಸರಿಂದ ಗೋಳಿಬಾರು. ನಾಲ್ಕು ಜನ ಸತ್ತಿದ್ದು, ಇಪ್ಪತ್ತು ಜನರಿಗೆ ತೀವ್ರ ನೋವಾಗಿದೆ. ಅದರಲ್ಲಿ ಐದು ಜನರ ಸ್ಥಿತಿ ಚಿಂತಾಜನಕವಾಗಿದ. ಮಡಿದವರ ಕುಟುಂಬಕ್ಕೆ ಸಹಾಯಧನ ಕೊಡುವ ದಾಗಿ ಮಂತ್ರಿಯೊಬ್ಬರ ಪ್ರಕಟನೆ. ಮೂರನೇ ಪುಟದಲ್ಲಿ 'ಸೋಡ ಚೀಟಿ' ಗಂಡ ಹೆಂಡತಿಗೆ ಡೈವೋರ್ಸ್ ಕೊಟ್ಟಿದ್ದು—ಛೀ! ತಲೆ ಚಿಟ್ಟೆನಿಸುತ್ತದೆ. ಪತ್ರಿಕೆ ಮಡಿಚಿಟ್ಟು ತೆರಳುತ್ತೇನೆ. ಕಾಲೇಜ ಜವಾನ ನರಸಪ್ಪ ಬೆಲ್

ಬಾರಿಸುತ್ತಾನೆ. ಕಾಲೇಜ ಮುಗಿಯುತ್ತದೆ. ಹುಡುಗಿಯರೆಲ್ಲಾ ಹೋಗು ತ್ತಾರೆ. ಸಮದ್ ರಿಕ್ಷಾದ ಜತೆ ಹಾಜರಾಗುತ್ತಾನೆ. ಮತ್ತೆ ರಿಕ್ಷಾದಲ್ಲಿ ಕೂಡ್ರುತ್ತೇನೆ. ಸಮದ್‌ನ ಚಿಂತಕ್ರಾಂತ ಮುಖ ಅವನ ಒಳನೋವನ್ನು ಹೊರ ಚೆಲ್ಲುತ್ತದೆ.

ಸಮದನ್ ತಂಗಿ ಮಮತಾಜ್ ಹಿಂದೂ ಹುಡುಗನೊಬ್ಬನ ಜತೆ ಓಡಿಹೋಗಿದ್ದಾಳಂತೆ. ಇದು ಸಮದ್‌ನ ದುಃಖಃಕ್ಕೆ ಮೂಲ ಕಾರಣ. ಮಮತಾಜ್ ಆ ಹುಡುಗನನ್ನು ತುಂಬಾ ಪ್ರೀತಿಸುತ್ತಿದ್ದಳಂತೆ. ಮದುವೆ ಯಾಗಲು ಅವರಿಬ್ಬರೂ ಸಿದ್ಧರಿದ್ದರು. ಸಮದ್ ಈ ಮದುವೆಗೆ ಒಪ್ಪಿಗೆ ನೀಡದ್ದರಿಂದ ಈಗ ಮಮತಾಜ್ ನಾಪತ್ತೆ. ಕಾಲೇಜಿಗೆಂದು ಹೋದವಳು ಮತ್ತೆ ಮನೆಗೆ ಹಿಂದಿರುಗಿಲ್ಲ. ಇದ್ದೊಬ್ಬ ತಂಗಿ ಹೀಗಾದಳಲ್ಲಾ ಎಂಬ ಚಿಂತೆ-ಸಮದ್‌ನನ್ನು ನಿತ್ಯವೂ ಕಾಡುತ್ತದೆ. ಹೀಗಾಗಿ ಯಾವಾಗಲೂ ಅವನದು ಗಂಭೀರಮುಖ ಸಮದ್‌ರಂತಹವರನ್ನು ಹಲವಾರು ಚಿಂತೆಗಳು ಕೊರೆಯುತ್ತಿರುತ್ತಿವೆ.

'ನೀ ಮದುವಿಗೆ ಒಪ್ಪಿಗೆ ಕೊಟ್ಟಿದ್ರ ಹೀಂಗಾಗ್ತಿರಲಿಲ್ಲ. ನೋಡು ಸಮದ್' ಆಸೆಗೆರೆಗಳು ಬತ್ತಿಹೋದ ಸಮದ್‌ನನ್ನು ಕೇಳುತ್ತೇನೆ.

'ಐಸಾ-ಕೈಸೆಹೋತೆ ಅಮ್ಮಾ ನಮ್ದು ಅವರದು ಬೇರೆ-ಬೇರೆ ಜಾತಿ ಅಲ್ಲಿವಾ?,'

ಜಾತಿಗೆರೆಯುಳಿಯುತ್ತಾನೆ ಸಮದ್. ಜಾತಿ ಬಗೆಗೆ ತುಂಬಾ ಅಭಿಮಾನ. ಪ್ರಾಣಬಿಟ್ಟೇನು, ಜಾತಿ-ಗೆಡಲಾರೆಯೆಂಬ ಮೌಢ್ಯತೆ-ಇವನದು. 'ನಮ್ಮದು ಜಾತ್ಯಾತೀತ ರಾಷ್ಟ್ರ. ನಮ್ಮಲ್ಲಿ ಮೇಲು-ಕೀಳು ಮಾಡಬಾರದು'...ಹೀಗೆ ಹಲವಾರು ರೀತಿಯಿಂದ ಜಾತಿಯ ಮೇಲೆ ಉಪನ್ಯಾಸ ಮಾಡುವ ನಾನು ಸಮದ್‌ನಂತ ಒಬ್ಬ ವ್ಯಕ್ತಿಯನ್ನು ಬದಲಾವಣೆಮಾಡಲು ಆಗಲಿಲ್ಲವಲ್ಲ. ಭಾಷಣಕ್ಕೂ-ವಾಸ್ತವತೆಗೂ ಎಷ್ಟು ವ್ಯತ್ಯಾಸವಿದೆಯಲ್ಲಾ-ಎಂದು ಲೆಕ್ಕ ಹಾಕುತ್ತೇನೆ. ಸ್ವಲ್ಪೂ ಬದಲಾವಣೆ ತಾರದ ನಮ್ಮ ಭಾಷಣ-ಉಪನ್ಯಾಸ-

ಸಂಘಟನೆ ಏಕೆ ? ಎಂದು ಮತ್ತೆ ಪ್ರಶ್ನೆಗೇಳುತ್ತವೆ. ಎದುರಿನ ರಸ್ತೆ ದಿಬ್ಬ ದಿಂದ ಕೂಡಿದೆ. ಆಯ್ತು, ರಿಕ್ಷಾನಿಲ್ಲಬೇಕಾಗುತ್ತದೆ, ಕೆಳಗಿಳಿಯಬೇಕು ಎನ್ನುವಷ್ಟರಲ್ಲಿ ರಿಕ್ಷಾ ಮೆಲ್ಲ-ಮೆಲ್ಲನೆ ಮುನ್ನಡೆಯುತ್ತದೆ. ಸಮದ್ ಪ್ರಯಾಸಪಟ್ಟು, ಬಿಟ್ಟುಬಿಡದೆ ಪೆಡಲ್ ತುಳಿಯುತ್ತಾನೆ, ಮತ್ತೆ-ಮತ್ತೆ ತುಳಿಯುತ್ತಾನೆ, ನಿರಂತರವಾಗಿ ಪೆಡಲ್ ತುಳಿಯುತ್ತಾನೆ-ಆಗ ರಿಕ್ಷಾ ನಿಲ್ಲು ವದಿಲ್ಲ, ಎಂತಹ ದಿಬ್ಬವನ್ನಾದರೂ ದಾಟುತ್ತದೆ. ಸಮದ್‌ನ ನಿರಂತರ ಪ್ರಯತ್ನ, ಮತ್ತೆ ನನ್ನಲ್ಲಿ ಹೋರಾಟದ ನಂಬುಗೆ ಹುಟ್ಟಿಸುತ್ತದೆ.

ಸಮದ್ ತುಂಬಾ ಒಳ್ಳೆಯ ಮನುಷ್ಯ. ಆದರೆ ಪೌಷ್ಠ್ಯದಿಂದ ಹೊರ ಬರಲಾರ ಮೂರು-ನಾಲ್ಕು ಮಕ್ಕಳು. ಸೈಕಲ್‌ರಿಕ್ಷಾವೊಂದೇ ಅವನ ಜೀವನಾಧಾರ, ಬಿಸಲೆನ್ನದೆ, ಚಳಿ-ಮಳೆಯದ್ನದೆ ರಿಕ್ಷಾ ನಡೆಸುತ್ತಾನೆ. ಸಂಸಾರ ಸಾಗಿಸುತ್ತಾನೆ. ತಂಗಿಯ ಚಿಂತೆಯಲ್ಲಿ ದಿನ-ದಿನವೂ ಸವೆಯುತ್ತಾನೆ.

ಮಧ್ಯಾಹ್ನದ ಒಂದು ಗಂಟೆಯ ಸಮಯ ಭಯಂಕರ ಬಿಸಿಲು. ಸಮದ್‌ನ ಏದುಸಿರು, ಬೆವರಾಗಿ ಹರಿಯುತ್ತದೆ. ಮೂರು ಗಾಲಿಗಳು ಒಂದೇ ಸಮನೆ ತಿರುಗುತ್ತಾ ಮುಂದೆ ನಡೆದಿವೆ. ಇಂತಹ ಬೆಂಕಿ ಬಿಸಿಲಿನ ಧಗೆಯಲ್ಲಿ ನನ್ನ ಕತೆಯ ಆಶಯ ಬತ್ತಿ ಹೋಗಿದೆ. ಪ್ರಕೃತಿ ಸೌಂದರ್ಯ ಕುರಿತು ಬಣ್ಣಿಸುವ ಹುಚ್ಚು ಕನಸು ಹರಿದು ಹೋಗಿದೆ. ನಾಯಕ-ನಾಯಕಿ -ಖಳನಾಯಕರು ನನ್ನ ಮನದಿಂದ ದೂರ ಸರಿದಿದ್ದಾರೆ. ಈ ಬದುಕಿನಲ್ಲಿ ಎಲ್ಲರೂ ಒಮ್ಮೊಮ್ಮೆ ನಾಯಕರಾಗಿ, ಮತ್ತೊಮ್ಮೆ ಖಳನಾಯಕರಾಗಿ, ಇನ್ನೊಮ್ಮೆ ಬರೀ ಹುಚ್ಚರಾಗಿ ಕಾಣಿಸುತ್ತಾರೆ. ಮತ್ತೆ ಎದುರುಗಡೆ ದಿಬ್ಬ. ಸಮದ್‌ನ ಎದುಸಿರು, ಹಸಿರನ್ನೇ ಒಣಗಿಸಿದ ಭಯಂಕರ ಜಳ, ಮೂರು ಗಾಲಿಗಳೂ ತಿರುಗುತ್ತಾ-ತಿರುಗುತ್ತಾ ಗಂಟಾದಂತೆ, ಯಮನಕ್ಕ, ನರಸಪ್ಪ, ನಳಿನಿ, ಸಮದ್ ಎಲ್ಲರೂ ಚಕ್ರದೊಳಗಿರುವ ತಂತಿಯ ಸುತ್ತ ಸುತ್ತುತ್ತಾರೆ. ನನ್ನ ವಿಚಾರ ಸರಪಣಿ ಅದರ ಸುತ್ತ ತಿರುಗುತ್ತದೆ. ಅಷ್ಟರಲ್ಲಿ ಮನೆ ಸಮೀಪಿಸುತ್ತದೆ.

0✱0

# ದರೋಡೆಕಾರರು

— ಇಂದಿರಾಣಿ

ರಾತ್ರಿ ಒಂಬತ್ತರ ಸಮಯ ದಟ್ಟವಾದ ಕಾಡು ಅಂಕುಡೊಂಕಿನ ಕಲ್ಲುಮಣ್ಣಿನ ರಸ್ತೆ ಕಗ್ಗತ್ತಲೆಯ ಸೆರಗಿನಲ್ಲಿ ಕಾಣುವಂತಿರಲಿಲ್ಲ.

ಬೆಂಗಳೂರಿನಿಂದ ಶ್ರೀಶೈಲಕ್ಕೆ ಹೋಗುವ ಬಸ್ಸೊಂದು ತನ್ನ ಲೈಟಿನ ಬೆಳಕನ್ನು ರಸ್ತೆಯಲ್ಲಿ ಹರಿಸುತ್ತ ವೇಗವಾಗಿ ಓಡುತ್ತಿತ್ತು.

ನೂರಾರು ಮೈಲಿಗಳ ದೀರ್ಘಪ್ರಯಾಣದ ಬಳಲಿಕೆಯಿಂದ ಪ್ರಯಾಣಿಕರು ಆಯಾಸಪಡುತ್ತ ಎಷ್ಟು ಬೇಗ ಈ ಪ್ರಯಾಣ ಮುಗಿಯುವುದೋ ಎಂದು ಆತಂಕಪಡುತ್ತಿದ್ದರು. ಮೇಲಾಗಿ ಎರಡು ಕಡೆಯ ಅರಣ್ಯದ ಗಾಢತೆ, ನಿಶ್ಶಬ್ಧತೆ, ನಿರ್ಜನತೆ ಕತ್ತಲು ಎಲ್ಲವೂ ಅವರ ಆತಂಕವನ್ನು ಇಮ್ಮಡಿಸುವಂತಿತ್ತು. ಹೀಗಾಗಿ ಡ್ರೈವರ್ ಆ ಕಲ್ಲು ಮಣ್ಣಿನ ರಸ್ತೆಯಲ್ಲಿಯೇ ಆದಷ್ಟು ವೇಗವಾಗಿ ಓಡಿಸುತ್ತಿದ್ದರೂ ಪ್ರಯಾಣಿಕರಲ್ಲಿ ಅಸಮಾಧಾನ-ಗೊಣಗಾಟ ಕಡಿಮೆಯಾದಂತಿರಲಿಲ್ಲ.

ಎಲ್ಲಾ ಪ್ರಯಾಣಿಕರ ಮುಖಗಳೂ ಒಂದಲ್ಲ ಒಂದು ರೀತಿಯಲ್ಲಿ ಬೇಸರದ ಛಾಯೆಹೊತ್ತು ಬಳಲಿಕೆಯನ್ನು ತೋರಿಸುತ್ತಿದ್ದರೆ ಅವರೆಲ್ಲರ ಮಧ್ಯ ಒಬ್ಬಳಾಗಿದ್ದ ಲಕ್ಷ್ಮಿಯ ಮುಖದಲ್ಲಿನ ಮಂದಹಾಸ ಮಾತ್ರಮರೆಯಾಗಿರಲಿಲ್ಲ, ಪ್ರಯಾಣದ ಬಳಲಿಕೆಯೋ...ಬೇಸರವೋ ಅವಳನ್ನು ಆವರಿಸಿದಂತೆ ಕಾಣುತ್ತಿರಲಿಲ್ಲ.

ಮಧ್ಯಾಹ್ನ ಸುಮಾರು ಮೂರು ಘಂಟೆಯಷ್ಟರಲ್ಲಿ ತಮ್ಮನ ಜೊತೆ ಬಸ್ಸಲ್ಲಿ ಕೂತು ರಾತ್ರಿ ಒಂಬತ್ತು ಸಮೀಪಿಸಿದ್ದರೂ ಆಗಷ್ಟೆ ಬಸ್ಸಲ್ಲಿ ಕುಳಿತ ಪ್ರಯಾಣಿಕಳಂತೆ 'ಫ್ರೆಷ್' ಆಗಿ ಕಾಣಿಸುತ್ತಿದ್ದಳು.

ಬಸ್ಸು ಎಲ್ಲಿ ನಿಂತರೂ ಅಕ್ಕ-ತಮ್ಮ ಇಬ್ಬರೂ ಲಗು ಬಗೆಯಿಂದ ಬಸ್ಸಿನಿಂದ ಇಳಿಯುವುದು, ಬಸ್ಸಿನ ಸಮೀಪ ಅಡ್ಡಾಡುತ್ತಾ, ಬಸ್ಸು ಹೊರೆಡುವಾಗ ಹತ್ತುವುದು ಮಾಡುತ್ತಿದ್ದರು.

ಬಹಳಷ್ಟು ಪ್ರಯಾಣಿಕರು ಅವಳ ಊರಿನವರೇ ಆಗಿದ್ದರಾಗಿ ಲಕ್ಷ್ಮಿಯ ಓಡಾಟ, ಉತ್ಸಾಹವನ್ನು ಗಮನಿಸುತ್ತಾ ಅವಳ ಖುಷಿಗೆ ಆಶ್ಚರ್ಯದ ಜೊತೆ ಜೊತೆಗೆ ಅಸೂಯೆಯನ್ನು ಅನುಭವಿಸುತ್ತಿದ್ದರೆ, ಗೊಣಗುತ್ತಿದ್ದರೆ-ಲಕ್ಷ್ಮಿ ಅದ್ಯಾವುದನ್ನು ತನ್ನ ಗಣನೆಗೆ ತಾರದೆ ತನ್ನಷ್ಟಕ್ಕೆ ತಾನು ಖುಷಿಯಿಂದ ಇದ್ದಳು.

ಅವಳ ಖುಷಿಗೆ ಕಾರಣವೂ ಇತ್ತು. ಹದಿನೈದು ದಿವಸಗಳ ಹಿಂದಷ್ಟೆ ಅವಳ ಮದುವೆಯಾಗಿದ್ದಿತು. ಇನ್ನು ಅರಿಶಿನ ಮೈನ ಹುಡುಗಿ ಅವಳು. ಗಂಡನ ಮನೆಯಿಂದ ತಂದೆಯ ಮನೆಗೆ ಹೋಗುತ್ತಿದ್ದಾಳೆ. ಮದುವೆ ನಡೆದ ಎಂಟು ದಿವಸಗಳ ನಂತರಣಿ ಷೇಕ ಮಾಡಿ ಮನೆ ತುಂಬಿಸಿಕೊಟ್ಟು ಗಂಡನ ಮನೆಯಲ್ಲೆ ಬಿಟ್ಟು ಬಂದಿದ್ದರು ತಂದೆ-ತಾಯಿ, ಬಳಗದವರು.

ನಾಳೆಯಿಂದ ಆಷಾಡ ಪ್ರಾರಂಭವಾಗುತ್ತದಾಗಿ ಅತ್ತೆಯ ಮನೆಯಲ್ಲಿ ಅವಳು ಇರುವಂತಿಲ್ಲ ಅದಕ್ಕಾಗಿ ಅವಳನ್ನುಕರೆದೊಯ್ಯಲು ತಮ್ಮ ಬಂದಿದ್ದ.

ಗಂಡನ ಮನೆಯಲ್ಲಿ ಅವಳು ಇದ್ದಿದ್ದು ಎಂಟೇ ದಿನಗಳು. ಆದರೆ ಆ ಎಂಟು ದಿನಗಳ ಅನುಭವದ ಪಾತ್ರವೇನೂ ಕಡಿಮೆಯದಲ್ಲ ಅವಳ ಪಾಲಿಗೆ, ಗಂಡನ ಮನೆಯಿಂದ ನೂತನ ಅನುಭವ, ಸಿಹಿಯಾದ, ಸುಂದರವಾದ ದಿನಗಳ ನೆನಪಿನ ಬುತ್ತಿಯೊಡನೆ ತಂದೆಯ ಮನೆಗೆ ಹೋಗುತ್ತಿರುವ

ಪದಿನೆಂಟರ ಹರೆಯದ ಹುಡುಗಿ ಅವಳು. ಬದುಕಿನಲ್ಲಿ ತುಂಬ ಉತ್ಸಾಹ, ಆಶೆಯುಳ್ಳವಳು. ಹರೆಯದವರಿಗೆ ಜಗತ್ತೆ ಸುಂದರವೆನಿಸುವ ಕಾಲವದು, ಮನಸ್ಸಿಗೊಪ್ಪಿದ ಪತಿಯ ಪ್ರೀತಿ–ಅನುರಾಗ–ಪ್ರಣಯದ ಉತ್ಕಂಟತೆಯ ಜೊತೆ ಜೊತೆಗೇ ಅತ್ತೆಯ ವಾತ್ಸಲ್ಯ ನಾದಿನಿ–ಮೈದುನರ ಆತ್ಮೀಯತೆ ಎಲ್ಲವೂ ಹೊಸದು. ಹೀಗಾಗಿ ಅತಿ ಸುಂದರ–ಅತಿ ಮಧುರ.

ತಂದೆಯ ಮನೆಯಲ್ಲಿ ಮುದ್ದಿನಿಂದ ಬೆಳೆದ ಹುಡುಗಿ, ಇಬ್ಬರು ಗಂಡು–ಇಬ್ಬರು ಹೆಣ್ಣು ಮಕ್ಕಳಲ್ಲಿ ಕಿರಿಯವಳೆಂಬ ಕೋಡು ಬೇರೆ. ಚಂದ ವಾದ ಉಡಿಗೆ-ತೊಡಿಗೆ ತೊಟ್ಟು ಲಕ್ಷಣವಾಗಿ ಕಾಣುವ ನಾಜೂಕಾಗಿ ಮಾತ ನಾಡುವ ದಿಟ್ಟ ಹುಡುಗಿ ಇವಳು. ಮನೆಯವರಿಗೆಲ್ಲ ಪ್ರಿಯವಾದವಳು.

ತಂದೆಗೆ ಅತಿ ಶ್ರೀಮಂತಿಕೆಯ ವೈಭವವಿಲ್ಲದಿದ್ದರೂ ತಿಂದುಂಡು ನೆಮ್ಮದಿಯಿಂದಿರಲು ಸಾಕಷ್ಟು ಆದಾಯ ಬರುವ ಗದ್ದೆ-ಜೊತೆಗೆ ಜವಳಿ ಅಂಗಡಿಯೊಂದಿದೆ. ಬಡತನವಿರುವುದು ಎಂದರೆ ವಿದ್ಯೆಯೊಂದೆ.

ಶ್ರೀಶೈಲದಂತಹ ಊರಿನಲ್ಲಿ ಬದುಕಲು ಬೇಕಾದದ್ದು ವಿದ್ಯೆಯಲ್ಲ, ದುಡಿಮೆ ಎನ್ನುವುದು ಲಕ್ಷ್ಮಿಯ ತಂದೆಯ ಅಭಿಪ್ರಾಯ. ಅವರ ವಂಶಾ ವಳಿಯಲ್ಲಿ ಯಾರೂ ಎಸ್ಸೆಸ್ಸಲ್ಸಿಯನ್ನು ಮುಗಿಸಿದವರಿಲ್ಲ. ವಿದ್ಯೆಯ ಮಹತ್ವವೋ-ಕೊರತೆಯೋ ಅವರನ್ನು ಎಂದೂ ಭಾದಿಸಿದುದಿಲ್ಲ, ಇದ ರಿಂದಾಗಿ ಶಾಲೆಯ ಮೆಟ್ಟಿಲನ್ನು ತುಳಿಯುವ ವಯಸ್ಸಿನಲ್ಲಿ ಅಂಗಡಿಯ ಮೆಟ್ಟಿಲನ್ನು ತುಳಿದಿದ್ದರು ಗಂಡು ಮಕ್ಕಳಾದ ಸೋಮು-ಭೀಮು.

ಹೆಣ್ಣು ಮಕ್ಕಳು ಗೌರಿ. ಲಕ್ಷ್ಮಿಯರಿಗಾದರೂ ಹಸು - ಕರುಗಳ ಜೊತೆ ಚಿನ್ನಾಟವಾಡುತ್ತಾ, ಹೊಲಗದ್ದೆ ಅಂಗಡಿಗಳಲ್ಲಿ ತಿರುಗುತ್ತಾ ಕಾಲ ಕಳೆಯುವುದೇ ಹಿತವೆನಿಸಿತ್ತು.

ಗೌರಿಗೆ ಮದುವೆಯಾಗಿ ಲಕ್ಷ್ಮಿಗೂ ವರನನ್ನು ಹುಡುಕುತ್ತಿರುವಾಗ ಶ್ರೀಶೈಲದಲ್ಲಿ ವಯಸ್ಕರ ಶಿಕ್ಷಣ ಸಮಿತಿಯು ಆರಂಭವಾಗಿತ್ತು. ಸಮಿತಿಯ

ಸದಸ್ಯರು ಮನೆಮನೆಗೂ ಒಂದು ಅಕ್ಷರಜ್ಞಾನದ ಮಹತ್ವವನ್ನು ವಿವರಿಸಿ ತೊಡಗಿದಾಗ, ಊರಿನ ಪ್ರೌಢರೂ, ಮುದುಕರೂ ಶಾಲೆಗೆ ಹೋಗ ಲಾರಂಭಿಸಿದಾಗ ಲಕ್ಷ್ಮಿಗೂ ಅಕ್ಷರ ಕಲಿಯಬೇಕೆಂಬ ಹುಮಸ್ಸು ಹುಟ್ಟಿತ್ತು.

ತಾನೇ ಕಲಿಯುವ ಉತ್ಸಾಹ ತೋರಿಸಿದಾಗ, ತಂದೆಯೂ ಸಮ್ಮತಿಸಿ ದಾಗ ಅಷ್ಟೋ ಇಷ್ಟೋ ಓದಲು, ಬರೆಯಲು ಕಲಿಯುತ್ತಿದ್ದ ಹಾಗೇ ಮದುವೆ ನಿಶ್ಚಯವಾಗಿತ್ತು. ಅಲ್ಲಿಗೆ ಲಕ್ಷ್ಮಿಯು ವಿದ್ಯೆಗೆ ಮಂಗಳ ಹಾಡಿದಳು.

೦ ೦ ೦ ೦

ಬೆಂಗಳೂರು ಸಮೀಪದ ಕೆಂಗೇರಿಯಲ್ಲಿನ ಪ್ರೈಮರಿ ಶಾಲೆಯೊಂದ ರಲ್ಲಿ ಲಕ್ಷ್ಮಿಯ ಗಂಡ ಸುಬ್ಬರಾಯ ಉಪಾಧ್ಯಾಯನಾಗಿದ್ದ. ನೋಡಲು ಲಕ್ಷಣವಾಗಿ, ಒಳ್ಳೆಯ ಅಂಗಸೌಷ್ಟದ ಹೊಂದಿದ್ದ ಆತನನ್ನು ಲಕ್ಷ್ಮಿ ಮನಸಾರೆ ಮೆಚ್ಚಿದಂತೇ. ಎಣ್ಣೆಗೆಂಪು ಬಣ್ಣವಾದರೂ ಕಣ್ಣು-ಮೂ- ತುಟಿಗಳಿಂದ ಬಹಳ ಲಕ್ಷಣವಾಗಿದ್ದ ಲಕ್ಷ್ಮಿಯನ್ನು ಸುಬ್ಬರಾಯನೂ ಮೆಚ್ಚಿದ್ದ

ಎಂಟು ದಿವಸಗಳ ಅವಳ ಸಾಮೀಪ್ಯದಲ್ಲಿ ಸ್ವರ್ಗಸುಖವನ್ನು ಅನುಭವಿಸಿದ್ದವನು ಹೆಂಡತಿಯನ್ನು ಅಗಲಲಾರದೆ ಆಗಲಿದ್ದ. ಒಂದು ತಿಂಗಳ ಆಷಾಡದಲ್ಲಿ ಅವಳನ್ನು ನೋಡಲಾರದೆ ಬದುಕಿರುವೆನೆ ಎನ್ನುತ್ತಾ ಅತ್ತೆಯ ಮನೆಗೆ ಬಾರದೆಯೇ ಮತ್ತೆಲ್ಲಿಯಾದರೂ ಹೊರಗಡೆ ಭೇಟಿ ಯಾಗುವ ಅಲ್ಲಿಂದ ಎಲ್ಲಿಯಾದರೂ 'ಹನಿ-ಮೂನ್' ಹೋಗುವ ಯೋಚನೆ ಹೂಡಿದ್ದ. ನಾಳೆಯಲ್ಲ ನಾಳಿದ್ದು ಬರುವವನಿದ್ದ.

ಇಷ್ಟೆಲ್ಲ ಆನಂದದ ಸಂಗತಿಗಳನ್ನು ಮನಸ್ಸಿನ ತುಂಬಾ ತುಂಬಿಕೊಂಡಿದ್ದ ಲಕ್ಷ್ಮಿಯ ಚೇತನ ಉತ್ಸಾಹದಿಂದ ಪುಟಿಯುತ್ತಿತ್ತು. ಆನಂದ ಅವಳ ನರನರಗಳಲ್ಲೂ ಮತ್ತಿನಿಂದ ತುಳುಕುತ್ತಿತ್ತು.

ಪ್ರಮಾಣದ ಅವಧಿ ಅವಳ ನೆನಪಿನ ಬುತ್ತಿಯನ್ನು ಕರಗಿಸಲು, ಮುಂದಿನ ಭವಿಷ್ಯದ ಕನಸನ್ನು ಹೆಣೆಯಲು ಏನೇನೊ ಸಾಲದಾಗಿರುವಾಗ

ಅಲ್ಲಿ ಬೇಸರಕ್ಕೂ-ಮುಜಗರಕ್ಕು ಸ್ಥಳ ಎಲ್ಲಿ ಬರಬೇಕು ? ಎಂದೇ ಮಧ್ಯಾಹ್ನದ ಉರಿಬಿಸಿಲಿನ ಪ್ರಯಾಣದಲ್ಲಿಯೂ ಒಂದು ಬಗೆಯ ಮುದಕಂಡ ಲಕ್ಷ್ಮಿಗೆ ಸಾಯಂಕಾಲದ ಸೊಬಗು ಅಪೂರ್ವ ಸುಖವನ್ನಿತ್ತಂತೇ ರಾತ್ರಿಯ ತಂಪು ಹಿತವಾಗಿ... ಹಾಯಾಗಿತ್ತು.

ತನ್ನದೇ ಕನಸಿನಲ್ಲಿ ಮುಳುಗೇಳುತ್ತಾ, ನಡುನಡುವೆ ತಮ್ಮನೊಡನೆ ತನ್ನ ಖುಷಿಯನ್ನು ಇಬ್ಭಾಗಗೊಳಿಸುತ್ತಾ, ಸುತ್ತಲಿನವರ ಬವಣೆಯಲ್ಲಿ ಪರದಾಟದಲ್ಲಿ ಮೋಜಿನ ಸವಿಯನ್ನನುಭವಿಸುತ್ತಾ, ಲಕ್ಷ್ಮಿ ಎಷ್ಟು ದೂರವಾದರೂ ಪ್ರಯಾಣ ಮಾಡುವಳು.

ಆದರೆ ಬಸ್ಸು ಗಕ್ಕನೆ ನಿಂತಿತು. ಇನ್ನು ಕೊಂಚ ದೂರದಲ್ಲಿ ತಮ್ಮ ಊರು ತಲುಪುವುದಿರುವಾಗ ಮತ್ತೆ ಯಾಕೆ ನಿಂತಿತೋ ಎನ್ನುವ ಬೇಸರದಿಂದ ಜನಗಳು ಗೊಣಗುತ್ತಾ ಕುಳಿತರೆ, ಕೆಲವರು ಜೋರಾಗಿಯೇ ಡ್ರೈವರನ್ನು ಬೈಯುತ್ತಾ ಮೇಲೆದ್ದರು,

ಮರುಕ್ಷಣದಲ್ಲಿಯೇ ಕೂಗಾಟ ಚೀರಾಟ ಪ್ರಾರಂಭವಾಯಿತು. ಲಕ್ಷ್ಮಿ ಏನೆಂದು ನೋಡುವುದರಲ್ಲಿ ಮುಖಕ್ಕೆ ಕಪ್ಪು ಬಟ್ಟೆಯ ಮುಖವಾಡ ಹಾಕಿದ್ದ ನಾಲ್ಕಾರು ಮಂದಿ ಕೈಯಲ್ಲಿ ಬಂದೂಕು ಹಿಡಿದು ಬಸ್ಸನ್ನು ಸುತ್ತುವರಿದಿದ್ದರು.

ಭಯದಿಂದ ಜನಗಳು ಹಾಹಾಕಾರವೆಬ್ಬಿಸುತ್ತಿದ್ದರೆ. ಹೆಂಗಸರು ಅಳುವುದಕ್ಕೆ ಶುರು ಮಾಡಿದ್ದರೆ, ನಾಲ್ಕು ಜನ ಶಸ್ತ್ರಧಾರಿಗಳು ಬಸ್ಸಿನ ಒಳಗೆ ಬಂದಿದ್ದರು.

"ಕೋಯಿ ಬಿ ನಾ ಹಿಲನೆಕಾ...ನಬೀತೋ ಬಹುತ್ ಬುರಾ ಹೋತ್ ಹೈ. ಅಪ್‌ಕೆ ಸಾತ್ ಕ್ಯಾಕ್ಯಾ ಹೈ ಸಬಿ ಇದರ್ ದೇನಾ... ನಹೀತೋ ಹಮ್ ಗೋಲಿ ಮಾರ್ ದೇಗಾ...ಸಮಜ್..." ಎಂದು ಒಬ್ಬ ಗರ್ಜಿಸಿದ.

ಅವರುಗಳ ಭಾಷೆ ಅರ್ಥವಾಗದಿದ್ದರೂ ಅವರ ಸಂಜ್ಞೆ, ಮುಖಭಾವ ದಿಂದ ಏನು ಹೇಳಿದರೆಂದೂ ಅವರ ಉದ್ದೇಶವೇನೆಂದೂ ಅರಿತ ಪ್ರಯಾಣಿ ಕರು ನಡುಗುವ ಕೈಗಳಿಂದ ತಮ್ಮಲ್ಲಿದ್ದುದನ್ನು ಕೊಡಲು ಮುಂದಾದರು. ಇಬ್ಬರು ಬಿಟ್ಟು ಉಳಿದ ನಾಲ್ವರಲ್ಲಿ ಒಬ್ಬ ಬಾಗಿಲಲ್ಲಿಯೇ ನಿಂತು ಉಳಿದ ಮೂವರು ಬಸ್ಸಿನೊಳಗೆ ನುಗ್ಗಿ ಪ್ರಯಾಣಿಕರಿಂದ ಎಲ್ಲವನ್ನು ಸಂಗ್ರಹಿಸ ತೊಡಗಿದರು.

ಲಕ್ಷ್ಮಿಯೂ ಗಡಗಡ ನಡುಗುತ್ತಾ ತನ್ನ ಕಿವಿಯಲ್ಲಿನ ಓಲೆಯ ತಿರುಪನ್ನು ತೆಗೆಯುತ್ತಿದ್ದಳು. ಅವಳು ಬಾಗಿಲಿನ ಸಮೀಪದಲ್ಲಿಯೇ ಕುಳಿತ್ತಿದ್ದಳಾದ್ದರಿಂದ ಅವಳ ಸಮೀಪದಲ್ಲಿಯೇ ನಿಂತಿದ್ದ ದರೋಡೆಗಾರ ಅವಳೆಡೆ ತಿರುಗಿ ಹೊಂಕರಿಸಿದ್ದ. ಅಷ್ಟರಲ್ಲಿ ಹೆಂಗಸೊಬ್ಬಳು ಜೋರಾಗಿ ಅಳಲುಪಕ್ರಮಿಸಿದಳು. ಲಕ್ಷ್ಮಿಯ ಪಕ್ಕ ಇದ್ದ ದರೋಡೆಕಾರ ಅಳುವ ಹೆಂಗಸಿನತ್ತ ಎರಡು ಹೆಜ್ಜೆ ಹಾಕಿದ.

ಲಕ್ಷ್ಮಿಯ ಮಿದುಳು ಚುರುಕಾಯಿತು. ಮಿಂಚಿನವೇಗದಲ್ಲಿ ತಮ್ಮನನ್ನು ಎಳೆಯುತ್ತಾ ಬಸ್ಸಿನಿಂದ ದುಮುಕಿದಳು. ಬಸ್ಸಿನ ಮುಂಭಾಗ ದಲ್ಲಿ ಇಬ್ಬರು ದರೋಡೆಕಾರರು ನಿಂತಿದ್ದರೂ ಲಕ್ಷ್ಮಿ ಅವರಿಗೆ ಕಾಣಿಸು ವಂತಿರಲಿಲ್ಲ, ತಕ್ಷಣ ಗಿಡಗಳ ಮರೆಗೆ ನುಸುಳಿ ನಿಂತಳು. ತಮ್ಮನಿಗಾಗಿ ನೋಡಿದರೆ ಬಾಗಿಲಲ್ಲಿ ದರೋಡೆಕಾರ ಯಥಾಸ್ಥಾನದಲ್ಲಿ, ತಮ್ಮ ಯಥಾ ಸ್ಥಾನದಲ್ಲಿ ಇದ್ದಾರೆ. ಒಂದು ಘಳಿಗೆ ತಮ್ಮನಿಗಾಗಿ ಮಿಡುಕಿದಳು ಮರು ಘಳಿಗೆ ಅಲ್ಲಿಂದ ಓಡಲಾರಂಭಿಸಿದಳು.

೦ ೦ ೦

ಗಳಿಗೆಗಳಿಗೆಗೂ ತನ್ನನ್ನು ದರೋಡೆಕಾರನು ಹಿಂಬಾಲಿಸುವನೇನೋ ಎಂಬ ಭಯದಿಂದ ತಿರುಗಿ ನೋಡುವುದು ಓಡುವುದು ಹೀಗೆ ಸುಮಾರು ಹೊತ್ತು ಓಡಿದ ಲಕ್ಷ್ಮಿಗೆ ಆಯಾಸದಿಂದ ಭೀತಿಯಿಂದ...ಉದ್ವೇಗದಿಂದ ಗಂಟಲು ಒಣಗಿಹೋಗಿ ಮೇಲುಸಿರು ಬರುತ್ತಿತ್ತು, ಮರವೊಂದನ್ನು

ತಬ್ಬಿ ಕೆಲವು ಕ್ಷಣಗಳು ನಿಂತಳು. ಚಂದ್ರನ ಮಬ್ಬು ಬೆಳಕು ಆಗಷ್ಟೆ ಮಂದವಾಗಿ ಹರಡುತ್ತಿತ್ತು.

ಬಾಗಿಲಲ್ಲಿ ನಿಂತಿದ್ದ ದರೋಡಕಾರ ತನ್ನನ್ನು ನೋಡಿದ್ದನೆಂಬ ಅರಿವು ಅವಳಿಗಿತ್ತಾಗಿ ಬಸ್ಸಿನಲ್ಲಿ ತನ್ನನ್ನು ಕಾಣದೆ ಅರಸಿ ಬರಬಹುದೆಂಬ ಭಯ ಅವಳ ಹೃದಯವನ್ನು ಮೀಟುತ್ತಿತ್ತು. ಎಲ್ಲಿ ಕಣ್ಣು ಹಾಯಿಸಿದರೂ ಗಾಢವಾದ ಅರಣ್ಯವನ್ನು ಬಿಟ್ಟರೆ ಮತ್ತೇನೂ ಕಾಣದು. ಎಲ್ಲಿಯೋ ಬಹು ದೂರದಲ್ಲಿ ಬೆಳಕಿನ ಕಿಂಡಿಯೊಂದನ್ನು ಕಂಡಂತಾಗಿ ಲಕ್ಷ್ಮಿಗೆ ಉಸಿರು ಬಿಡುವಂತಾಯಿತು.

ಏನಿದ್ದರೂ ತಾನು ದರೋಡೆಕಾರರ ಕೈಗೆ ಸಿಗಬಾರದೆಂದಿದ್ದರೆ ಆದಷ್ಟು ಬಸ್ಸಿನಿಂದ ದೂರ ಹೋಗಬೇಕು. ಎಲ್ಲಿಯಾದರೂ ಒಂದು ಆಶ್ರಯ, ಬೇಕು ಎಂದುಕೊಂಡವಳು ಬಸ್ಸಿನಿಂದ ಸಾಕಷ್ಟು ದೂರ ಬಂದಿದ್ದೇನೆ ಎನಿಸಿದರೂ ಬೆಳಕು ಕಂಡ ಕಡೆ ಹೆಜ್ಜೆ ಹಾಕಿದಳು. ಅಲ್ಲಿಗೆ ಕಾಡು ಮುಗಿದು ಕಾಲುದಾರಿ ಗೋಚರಿಸುತ್ತಿತ್ತು.

ಎಷ್ಟು ಹೊತ್ತು ನಡೆದಳೋ-ಕೊಂಚ ನಿಂತು ಉಸಿರು ತೆಗೆದುಕೊಳ್ಳುವುದು ಮತ್ತೆ ನಡೆಯುವುದು. ಕಾಲಿನ ಚರ್ಮ ಕಿತ್ತು ಬಂದು ರಕ್ತ ಒಸರುತ್ತಿತ್ತು. ಬಸ್ಸಿನಿಂದ ಇಳಿಯುವ ಗಾಬರಿಯಲ್ಲಿ ಒಂದೇ ಚಪ್ಪಲಿಯಲ್ಲಿ ಇಳಿಯುವಂತಾಗಿ ಅದನ್ನೂ ಎಸೆಯುವುದಾಗಿತ್ತು.

ಇನ್ನು ನಡೆಯಲು ಆಗುವುದೇ ಇಲ್ಲ ಎನ್ನುವಂತಾಗ ಬೆಳಕಿನ ಸಮೀಪ ಬಂದಾಗಿತ್ತು. ಯಾವುದೋ ಕಟ್ಟಡದಲ್ಲಿನ ಬೆಳಕು ಅದಾಗಿತ್ತು.

ಲಕ್ಷ್ಮಿ ಕುಂಟುತ್ತ - ಅಳುಕುತ್ತಾ - ನಿಧಾನದಲ್ಲಿ ಕಟ್ಟಡದ ಹತ್ತಿರ ಬಂದಳು.

ಕಟ್ಟಡದ ಮುಂಬಾಗದಲ್ಲಿ ದೊಡ್ಡದೊಂದು ಬೋರ್ಡ್ ತಗಲಿಸಿತ್ತು.

ಬೋರ್ಡಿಗೆ ಬೆಳಕು ಬೀರುವ ಹಾಗೆ ಬಲ್ಬೊಂದು ಉರಿಯುತ್ತಿತ್ತು. ಬೋರ್ಡ ಮೇಲೆ ಬರೆದಿದ್ದ ಅಕ್ಷರಗಳನ್ನು ಒಂದೊಂದಾಗಿ ಕೂಡಿಸಿಕೊಂಡು ಓದಿದಳು ಲಕ್ಷ್ಮಿ. 'ಪೋಲೀಸ್ ಸ್ಟೇಷನ್' ಎಂದಿತ್ತು.

ಲಕ್ಷ್ಮಿಗೆ ಜೀವ ಬಂದಿತು. ಅಬ್ಬ. ಇಷ್ಟು ಕಷ್ಟಪಟ್ಟು ಸರಿಯಾದ ಸ್ಥಳಕ್ಕೆ ಬಂದಂತಾಯಿತು ಎನ್ನುವ ಸಮಾಧಾನ ಅವಳ ಮನಸ್ಸನ್ನು ತುಂಬಿತು.

o o o

ಅಕ್ಷರ ಕಲಿಯುವ ಸಮಯದಲ್ಲಿ ಮಾಸ್ತರರು ಪೋಲಿಸರೆಂದರೆ ಪ್ರಜೆಗಳನ್ನು ದೌರ್ಜನ್ಯದಿಂದ ಅನ್ಯಾಯದಿಂದ ದುಷ್ಟರಿಂದ ರಕ್ಷಿಸುವ ಪ್ರಜಾ ಪಿತರು. ಪ್ರಜಾರಕ್ಷಕರು. ಪ್ರಜೆಗಳಿಗೆ ನ್ಯಾಯ ದೊರಕಿಸಿಕೊಡುವ ನ್ಯಾಯ ದೇವತೆಗಳು ಎಂದಲ್ಲ ಹೇಳಿದುದು ಲಕ್ಷ್ಮಿಯ ನೆನಪಿಗೆ ಬಂದಂತೆ ಇದುವರವಿ ಗಿನ ಅವಳ ಆಯಾಸ, ಭೀತಿ ನೋವು ಎಲ್ಲವೂ ಮಾಯವಾದಂತಾಯಿತು. ಮನಸ್ಸಿಗೆ ಒಂದು ಬಗೆಯ ಧೈರ್ಯ–ಆಶ್ವಾಸನೆ ದೊರೆತಂತಾಯಿತು. ಮನಸ್ಸಿನಿಂದ ಸೀದಾ ಸ್ಟೇಷನ್ನಿನ ಒಳನಡೆದಳು.

ಬಾಗಿಲಲ್ಲಿ ಕುಳಿತು ತೂಕಡಿಸುತ್ತಿದ್ದ ಪೇದೆಗೆ ಖುಷಿಯಿಂದ ಒಂದು ಸಲ್ಯೂಟ್ ಹೊಡೆದು ಒಳ ಭಾಗಕ್ಕೆ ಬಾದಳು. ಎದುರಿಗೆ ಟೇಬಲಿನ ಹಿಂದೆ ಖಾಕಿ ಸಮವಸ್ತ್ರ ಧರಿಸಿದ್ದ ಮಧ್ಯವಯಸ್ಸಿನ ಮನುಷ್ಯ ಕುರ್ಚಿಯ ತೋಳಿಗೆ ಒರಗಿ ಸಣ್ಣಗೆ ಗೊರಕೆ ಹೊಡೆಯುತ್ತಿದ್ದ.

ಲಕ್ಷ್ಮಿ ಅನುಮಾನಿಸುತ್ತಲೇ ಅವನ ಪಕ್ಕ ಬಂದು ನಿಂತು ಸಣ್ಣಗೆ ಕೆಮ್ಮಿ ದಳು. ಆದರೆ ಅದು ಅವನಿಗೆ ಮುಟ್ಟದಂತೆ ಕಾಣಲಿಲ್ಲ. ಅವನ ಗೊರಕೆ ನಿರಂತರವಾಗಿ ನಿರಾತಂಕವಾಗಿ ನಡದೇ ಇತ್ತಾಗಿ...ಉಪಾಯವಿಲ್ಲದೆ ಅವ ನನ್ನು ಮುಟ್ಟಿ ಎಬ್ಬಿಸುವ ಪ್ರಯತ್ನ ಮಾಡಿದಳು ಲಕ್ಷ್ಮಿ. ಭುಜಕ್ಕೆ ಕೈ ಹಾಕಿ ಅಲುಗಾಡಿಸಿದ ತಕ್ಷಣ, "ಕೌನ್ ಹೈ. ಮಾದರ್ ಚೋತ್..." ಎಂದು ಗುಡುಗುತ್ತಾ ಎದ್ದು ನಿಂತ ಅವನನ್ನು ನೋಡಿ ಬೆದರಿ ಎರಡು ಹೆಜ್ಜೆ ಹಿಂದೆ ಸರಿದು ನಿಂತಳು ಲಕ್ಷ್ಮಿ.

ಅರ್ಧ ನಿದ್ದೆಯಲ್ಲಿ ಎಬ್ಬಿಸಿದುದಕ್ಕಾಗಿಯೋ ಏನೋ ಅವನ ಕಣ್ಣು ಗಳು ಕೆಂಡದ ಉಂಡೆಗಳಂತೆ ಇದ್ದು ಅವಳನ್ನೆ ದುರದುರ ನೋಡಿದಾಗ ಲಕ್ಷ್ಮಿಗೆ ಸ್ವಲ್ಪ ಭಯವೆನಿಸಿತು.

"ಕ್ಯಾ ಬಾತ್ ಹೈ......" ಎಂದು ಮತ್ತೊಮ್ಮೆ ಗುಡುಗಿದ ಆತ, "ದ...ದರೋಡೆಕಾ...ರ್ರು ..ಬಸ್ಸಲ್ಲಿ..." ಎಂದಳು ಲಕ್ಷ್ಮಿ ಧೈರ್ಯ ತಂದು ಕೊಳ್ಳುತ್ತಾ.

"ತೊ ಇದರ್ ಕ್ಯಾಕರ್‌ರಹಾಹೈ..." ಎಂದನಾತ. ಲಕ್ಷ್ಮಿಗೆ ಅವನ ಭಾಷೆ ತಿಳಿಯದೆ ಮಂಕಾಗಿ ನಿಂತಳು.

ಅವನಿಗೇನನ್ನಿಸಿತೋ ಮುಖದ ಗಂಟನ್ನು ಸಡಿಲಗೊಳಿಸಿ-ಧ್ವನಿಯು ಲ್ಲಿನ ಗಡಸನ್ನು ಕಡಿಮೆ ಮಾಡಿಕೊಂಡು ಕೇಳಿದ.

"ನೀನು ಹೇಗೆ ಇಲ್ಲಿಗೆ ಬಂದೆ"

"ಅಲ್ಲಿಂದ ತಪ್ಪಿಸ್ಕೊಂಡು ಓಡ್ಬಂದೆ."

"ಎಲ್ಲಿಂದ..."

"ಅದೇ ಬಸ್ಸಿಂದ"

"ಬಸ್ಸು ಎಲ್ಲಿದೆ..."

"ರೋಡಲ್ಲಿ..."

ಅವನು ಥಂಡಾ ಆಗಿದ್ದು ನೋಡಿ ಲಕ್ಷ್ಮಿಗೆ ಕೊಂಚ ಧೈರ್ಯ ಬಂದಿತ್ತು.

""ಯಾವ ರೋಡಲ್ಲಿ...ನೀನೆಲ್ಲಿ ಹೋಗ್ತಾ ಇದ್ದೆ."

ಬೆಂಗಳೂರಿಂದ ಶ್ರೀ ಶೈಲಾಕ್ಕೆ ಹೋಗೋ ಬಸ್ಸು ಅದು, ಮಧ್ಯಾಹ್ನ ನಾವೆಲ್ಲ ಅದರಲ್ಲಿ ಹೊರಟಿದ್ದು."

"ಅವರು ದರೋಡೆಕಾರ್ರು ಅಂತ ನಿನಗೆ ಹೇಗೆ ಗೊತ್ತಾಯ್ತು"

"ಮುಖಕ್ಕೆ ಕಪ್ಪುಮುಖವಾಡ ಹಾಕಿದ್ರು....ಕೈಯಲ್ಲಿ ಬಂದೂಕು ಇಟ್ಕೊಂಡಿದ್ರು."

"ಎಲ್ಲಾರ ಕೈನಲ್ಲಿ ಬಂದೂಕು ಇತ್ತಾ."

"ಹೂ...ಜೊತೆಗೆ ಸೊಂಟದಲ್ಲಿ ಬಾಕುನು ಇತ್ತು...."

"ಓಹೋ—ಅದಿರ್ಲಿ...ಅಷ್ಟು ಜನದಲ್ಲಿ ನೀನೊಬ್ಬಳು ಹೇಗೆ ತಪ್ಪಿಸ್ಕೊಂಡೆ..."

"ಹಾಗೆ....ನಾನು ಬಾಗಿಲ ಹತ್ರ ಕೂತಿದ್ದೆ ನನ್ನ ಹತ್ರ ನಿಂತಿದ್ದವನು ಯಾರೋ ಅಳೋದ್ ಕೇಳಿ ಎರಡು ಹೆಜ್ಜೆ ಮುಂದೆ ಹೋದ. ನಾನು ಮೆಲ್ಲಗೆ ಈಚೆ ನುಸುಳ್ಕೊಂಡೆ...."

ಲಕ್ಷ್ಮಿ ನಸುನಗುತ್ತಾ ಹೇಳಿದಳು.

"ಊಹು...ಬಹಳ ಚಾಲೂಕಾಗಿದ್ದಿ, ಇಲ್ಲೇ ಇರು....ನಾನು ಹೋಗಿ ಇನ್‌ಸ್ಪೆಟ್ರನ್ನ ಕರ್ಕೊಂಬರ್ತಿನಿ. ಅಲ್ಲಿ ತನಕ ಅಲ್ಲಿ ಕೂತ್ಕಂಡಿರು" ಎನ್ನುತ್ತಾ ಆತ ಬೇಂಚೊಂದರ ಕಡೆ ಕೈ ತೋರಿಸಿದ.

ಲಕ್ಷ್ಮಿ ಹೆದರಿಕೆಯ ಧ್ವನಿಯೊದೆ ಮತ್ತೆ...ಮತ್ತೆ...ಆ ದರೋಡೆ ಕಾರ್ರು ಇಲ್ಲಿಗೂ ಬಂದ್ರೆ..."ಎಂದಳು.

"ಹ ಹ ಹ....ಇಲ್ಲಿಗಾ...ನಾವು ಯಾರು ಅನ್ಕೊಂಡಿದ್ದೀಯಾ.... ಇರು ಇಲ್ಲೇ...ಈಗ ಬರ್ತೀನಿ .." ಎನ್ನುತ್ತಾ ಮೇಲೆದ್ದನಾತ. ಅಷ್ಟರಲ್ಲಿ ಮತ್ತಿಬ್ಬರು ಪೋಲೀಸರು ಹೊರಗಿನಿಂದ ಒಳ ಬಂದಾಗ ಅವರೊಡನೆ ಏನೋ ಹಿಂದಿಯಲ್ಲಿ ಹೇಳಿ ಹೊರಗೆ ಹೋದನು.
ಲಕ್ಷ್ಮಿಯನ್ನು ನೋಡಿ ಅವರಿಬ್ಬರೂ ತಮ್ಮ ತಮ್ಮಲ್ಲೇ ಏನೋ ಮಾತನಾಡಿಕೊಳ್ಳುತ್ತಾ ಅಲ್ಲಿಯೇ ಕುಳಿತರು.

ಲಕ್ಷ್ಮಿಗೆ ಕೊಂಚ ದಿಗಿಲೆನಿಸಿದರೂ ಮೇಸ್ತ್ರು ಹೇಳಿದ್ದ ಮಾತುಗಳು ನೆನಪಿಗೆ ಬಂದಂತೆ ಧೈರ್ಯ ಬಂದಿತಾಗಿ ನಿರಾಳ ಮನಸ್ಸಿನಿಂದ ಆತ ತೋರಿಸಿದ ಬೆಂಚಿನ ಮೇಲೆ ಕುಳಿತಳು.

ತಾನು ಓದು-ಬರಹ ಕಲಿಯದಿದ್ದರೆ ಎಂತಹ ಅನ್ಯಾಯವಾಗುತ್ತಿತ್ತು. ಆಗ ತನಗೆ ಇಲ್ಲಿ ಪೋಲಿಸ್‌ಸ್ಟೇಷನ್ ಇರುವುದಾದರೂ ತಿಳಿಯುತ್ತಿತ್ತೇ.

ಇಲ್ಲಿ ನಿರಾಳವಾಗಿ-ನೆಮ್ಮದಿಯಿಂದ ಇರಲಾಗುತ್ತಿತ್ತೆ ಎಂದುಕೊಂಡ ಲಕ್ಷ್ಮಿಗೆ ತನ್ನ ಬುದ್ಧಿವಂತಿಕೆಗೆ, ಅಕ್ಷರ ಜ್ಞಾನಕ್ಕೆ ತನ್ನ ಬೆನ್ನನ್ನು ತಾನೇ ತಟ್ಟಿಕೊಳ್ಳಬೇಕೆನ್ನುವಷ್ಟು ಹೆಮ್ಮೆಯೂ ಜಂಬವೂ ಉಂಟಾಯಿತು. ಎರಡು ಮಂಡಿಗಳನ್ನು ಮೇಲೆತ್ತಿ ಅದರ ಮೇಲೆ ತಲೆಯಿಟ್ಟಳು ಲಕ್ಷ್ಮಿ.

೦ ೦ ೦ ೦

"ಏಯ್ ಹುಡುಗಿ...ತೂಕಡಿಸ್ತಿದ್ದೀಯಾ"

ಯೋಚನೆಯ ಬಲೆಯನ್ನು ನೆಯುತ್ತಾ ಅರೆಗಣ್ಣು ಮುಚ್ಚಿದ ಲಕ್ಷ್ಮಿಗೆ ನಿಜಕ್ಕೂ ನಿದ್ದೆ ಬಂದಿತ್ತು, ತನ್ನ ಹತ್ತಿರದಲ್ಲಿ ಕೇಳಿಸಿದ ಗಡಸು ಧ್ವನಿಗೆ ಬೆಚ್ಚಿ ಕಣ್ತೆರೆದಿದ್ದಳು,

"ಏಯ್...ಇನಿಸ್ಪೆಕ್ಟರ್ ಬಂದವ್ರೆ ಎದ್ದು ನಿಂತ್ಕೊ.

ಅಜಾನುಬಾಹು ವ್ಯಕ್ತಿಯೊಬ್ಬ ಖಾಕಿ ಉಡುಪಿನಲ್ಲಿ ಅವಳನ್ನೆ ಆಪಾದ ಮಸ್ತಕ ನೋಡುತ್ತ ನಿಂತಿದ್ದ.

ಲಕ್ಷ್ಮಿ ಗಡಬಡಿಸಿ ಎದ್ದುನಿಂತಳು,

"ಏನು ಹೆಸರು ನಿಂದು"

ಕೇಳಿದಾತನನ್ನು ನೋಡಿದಳು ಲಕ್ಷ್ಮಿ. ಅಗಲವಾದ ಉರುಟಾದ ಮುಖ. ದೊಡ್ಡ ದೊಡ್ಡ ಕಣ್ಣುಗಳು, ಉದ್ದನೆಯ ಮೂಗು. ಮೂಗಿನ ಕೆಳಗಿನ ಹೊರವಾದ ಮೀಸೆ. ಸದೃಡವಾದ ಶರೀರ, ಎತ್ತರದ ನಿಲುವು, ಗರಿ ಮುರಿಯಾದ ಖಾಕಿಬಟ್ಟೆ.

ಆತನನ್ನು ನೋಡಿದಂತೆ ಲಕ್ಷ್ಮಿಗೆ ಒಂದು ಬಗೆಯ ಧೈರ್ಯ ಸಮಾಧಾನವೆನಿಸಿದಂತೆ ಅವಳು ತನ್ನೆರಡೂ ಕೈಗಳನ್ನು ಜೋಡಿಸಿದಳು,

"ಲಕ್ಷ್ಮಿಂತ ಸಾರ್...ನಾನು...ನಾನು...ಊರ್ಗೆ..."

ಆ ಧೀರ ಗಂಭೀರಿ ವ್ಯಕ್ತಿಯೆದುರು ತಾನು ಒಂದು ಗುಬ್ಬಚ್ಚಿಯ ಪರಿ ಯಂತೆನಿಸಿ ಮಾತು ತಡವರಿಸಿತು,

"ಹ....ಹ...ಅಗಲಿ ..ನೀನು ಒಬ್ಬಳೇ ಹೊರಟಿದ್ದಾ.

"ಇಲ್ಲ ಸಾರ್...ನನ್ನ ತಮ್ಮನ್ನೂ ನನ್ನ ಜೊತೆಗಿದ್ದ ಸಾರ್...ನಾನು ಏಳೆದ್ರೂ ನನ್ನ ಜೊತೆ ತಪ್ಪಿಸ್ಕೊಳ್ಳೂಕ್ಕಾಗ್ಲಿಲ್ಲ ಸಾರ್ ಅವನ್ಗೆ..."

"ಎಷ್ಟು ವಯಸ್ಸು ಅವನದು..."

"ಹದಿಮೂರೋ...ಹದಿನಾಲ್ಕೋ ಇರಬಹುದು. ಸಾರ್..."

"ಸರಿ....ಹೇಗೋ ತಪ್ಪಿಸಿ ಊರಿಗೆ ಹೋಗ್ತಾನೆ ಬಿಡು..."

"ಮತ್ತೆ...ನಾನು..."

"ನೀನು...ಉ...ನೀನೂ ಈ ಕತ್ಲಲ್ಲಿ ಎಲ್ಲಿ ಹೋಗುತ್ತಿ ಬೆಳಗಾಗಲಿ....ಕಳಿಸುವೆ...ಎ...104...ಇವಳನ್ನು ಆ ರೂಮಿಗೆ ಕರೆಕೊಂಡು ಹೋಗು..."

"ಸಾರ್ ಈಗ...." ಲಕ್ಷ್ಮಿ ಏನೋ ಹೇಳಲು ಹೊರಟಾಗ ಆ ಇನ್‌ಸ್ಪೆಕ್ಟರ್ ಆವಳಿಗೆ ಬೆನ್ನು ಹಾಕಿ.

"104....ಎಂದ ಗಡಸಾಗಿ.

"ಏಸ್ ಸಾರ್..." ಎನ್ನುತ್ತ ಲಕ್ಷ್ಮಿಯ ಬಳಿ ಬಂದ ಪೇದೆಯನ್ನು ಹಿಂಬಾಲಿಸಿ ಲಕ್ಷ್ಮಿ ಬಲಬದಿಯಲ್ಲಿ ಇದ್ದ ಕೋಣೆಗೆ ನಡೆದಳು.

ಸಾಕಷ್ಟು ವಿಸ್ತಾರವಾಗಿದ್ದ ಆ ರೂಮಿನಲ್ಲಿ ಒಂದೆರಡು ಮರದ ಕುರ್ಚಿಗಳು....ಒಂದು ಆರಾಮಾಸನ...ಮೂಲೆಯಲ್ಲಿನ ಟೀಪಾಯ್‌ಮೇಲೆ ಒಂದು ಗಾಜಿನಹೂಜಿ ಒಂದೆರಡು ಗಾಜಿನ ಲೋಟಗಳು. ಗೋಡೆಯ ಮೊಳಗೆ ನೇತಾಡುತ್ತಿದ್ದ ಒಂದೆರಡು ಖಾಕಿ ಬಟ್ಟೆಗಳು. ಎಲ್ಲವನ್ನು ಒಂದು ಸುತ್ತು ನೋಡುತ್ತಿದ್ದ ಲಕ್ಷ್ಮಿಯ ಮುಂದೆ ಕೊಳೆಯಾಗಿದ್ದ ಬೇಡ್‌ಶೀಟ್ ಒಂದನ್ನು ಎಸೆಯುತ್ತಾ ಆ ಪೇದೆ ಹೇಳಿದ.

"ತೆಗೋ...ಇದನ್ನ ಹಾಸ್ಕಂಡು ಮಲಕ್ಕೋ..."

ಲಕ್ಷ್ಮಿಗೆ ಅವನು ಅಷ್ಟು ಹೇಳುವುದೇ ಸಾಕಾಗಿತ್ತು. ಇಲ್ಲಿ ಸ್ವಲ್ಪ ಹೊತ್ತು ಮಲಗಿದರೆ ತನ್ನ ಆಯಾಸ...ಆತಂಕ...ನೋವು ಮರೆಯಾಗಬಹುದು. ಮತ್ತೆ...ಬೆಳಗಾಗುತ್ತಿದ್ದ ಹಾಗೇ ಊರು ಸೇರಬಹುದು ಎಂದು ಯೋಚಿಸುತ್ತಾ.

"ಸ್ವಲ್ಪ ನೀರು ಬೇಕಲ್ಲ ಕುಡಿಯೋಕ್ಕೆ..." ಎಂದಳು.

"ಅಲ್ನೋಡು...ನಿನ್ನೆದುರ್ಗೆ ಕಾಣ್ತಾ ಇಲ್ವ..." ಎನ್ನುತ್ತ ಆತ ಎದುರಿನ ಹೂಜಿಯ ಕಡೆ ಕೈ ತೋರಿಸಿದ,

ಹೂಜಿಯಿಂದ ಲೋಟಕ್ಕೆ ನೀರು ಬಗ್ಗಿಸಿ ಕುಡಿಯುತ್ತಿದ್ದವಳನ್ನೆ ನೋಡುತ್ತಿದ್ದ ಅವನು "ಊ ಕುಡ್ದು ಮಲಕ್ಕೋ...ನಿದ್ದೆ ಮಾಡು" ಎಂದು ಅದೊಂದು ಬಗೆಯಾಗಿ ನಗುತ್ತಾ ರೂಮಿನಿಂದ ಹೊರಗೆ ಹೋದಾಗ ಲಕ್ಷ್ಮಿ ನಿರಾಳವಾಗಿ ಉಸಿರು ಬಿಡುತ್ತಾ, ಅವನು ಕೊಟ್ಟಿದ್ದ ಚಾದರವನ್ನು ಒಂದು ಪಕ್ಕ ಹಾಸಿಕೊಂಡು ಮಲಗಿದಳು.

ಲಕ್ಷ್ಮಿಯ ಮುಚ್ಚಿದ ಕಣ್ಣು ಮುಂದೆಯೂ ಸುಬ್ಬರಾಯನದೇ ಮೂರ್ತಿ. ನಿನ್ನೇನು ...ಒಂದು ದಿನ ಕಳೆದರೆ ಮರುದಿನ ಬರುತ್ತಾನೆ. ಎಲ್ಲಿಯೋ ಕರೆದೊಯ್ಯುತ್ತೇನೆಂದಿದ್ದ. ಎಲ್ಲಿಗೆ ಕರೆದೊಯ್ಯುವನೋ.... ಒಳ್ಳೆಯ ಮಜ ತನಗೆ...ಅರೆ ನಾಳಿದ್ದು ಬರುತ್ತೇನೆಂದಲ್ಲವೇ ಹೇಳಿದ್ದು... ಆಗಲೆ ಬಂದುಬಿಟ್ಟಿನಾ....ಛೆ....ಛೆ....ಏನಿದು ಹೀಗೆ ಇಷ್ಟು ಒರಟಾಗಿ ತನ್ನನ್ನು ತಬ್ಬಿಕೊಂಡಿದ್ದಾನೆ...ಥೂ....ಮುಖವೆಲ್ಲ....ಥೂ ಏನು ಹೀಗೆ ಚುಚ್ಚುವುದು...ಅಯ್ಯೋ....ಬಿಡಿನನ್ನ...ಬಿಡ್ರಿ...

ಲಕ್ಷ್ಮಿ ತಟ್ಟನೆ ಕಣ್ತೆರೆದಳು. ಗಾಢ ನಿದ್ದೆಯಿಂದ ಪಕ್ಕನೆ ಎಚ್ಚರ ವಾದಾಗಿನ ಒಂದು ಬಗೆಯ ಮಂಕಿನಿಂದ ಅವಳ ಮಿದುಳು ಸ್ತಬ್ಧವಾದ ಹಾಗೆ—ಇದೇನು ಇವರ ಮುಖ ಹೀಗಾಗಿದೆ...ಮೀಸೆ ಬೇರೆ ಮುಖದಲ್ಲಿ... ಅಯ್ಯಯ್ಯೋ ಇದು ಸುಬ್ಬರಾಯನ ಮುಖವಲ್ಲ...ಮತ್ತೆ...ಮತ್ತೆ... ಅದೇ....ಅದೇ....ಆ ಇನ್‌ಸ್ಪೆಕ್ಟರಾ....ಅಯ್ಯೋ ಇವನೇಕೆ ಹೀಗೆ ತನ್ನನ್ನು ಅಯ್ಯೋ....ಅಮ್ಮಾ....ಮತ್ತೆ...ಮತ್ತೆ ಮಾಸ್ತರು ಹೇಳಿದ್ದೆಲ್ಲ....

ಲಕ್ಷ್ಮಿ ತನ್ನ ಮುಖವನ್ನು ಉಜ್ಜುತ್ತಿದ್ದ ಇನ್‌ಸ್ಪೆಕ್ಟರ್‌ನ ಮುಖವನ್ನು ಹಿಂದೆ ದೂಡುತ್ತಾ ಚೀರಲು ಬಾಯ್ದೆರೆದಂತೆ ಆ ಇನ್‌ಸ್ಪೆಕ್ಟರನ ಮೀಸೆಯ ಕೆಳಗಿನ ಒರಟು ತುಟಿಗಳು ಅವಳ ಬಾಯನ್ನು ಬಲವಾಗಿ ಮುಚ್ಚಿದುವು.

ಅವಳ ಮೈ...ಮನಸ್ಸು ಛಿದ್ರ ಛಿದ್ರವಾದಂತೆ....ಅವಳ ನರಳಾಟ ಹೊರಳಾಟಕ್ಕೆ ಕೊನೆಗೊಮ್ಮೆ ಮುಕ್ತಿ ಸಿಕ್ಕಿದಂತಾದಾಗ ಒಂದೆರಡು ನಿಮಿಷ ಗಳು ಹೆಣದಂತೆ ಬಿದ್ದಲ್ಲಿಯೇ ಬಿದ್ದಿದ್ದ ಲಕ್ಷ್ಮಿ ಅಳುತ್ತಾ...ನರಳುತ್ತಾ ಎದ್ದು ಕುಳಿತುಕೊಳ್ಳಲು ಹವಣಿಸಿದಾಗ ಅವಳೆದುರು ನಾಲ್ವರು ಧಡಯರು ಹಲ್ಲು ಕಿಸಿಯುತ್ತಾ ನಿಂತಿದ್ದರು.

೦ ೦ ೦ ೦

ಬೀದಿ ಬೀದಿಗಳಲ್ಲಿ ಗುಂಪು ಗುಂಪಾಗಿ ನಿಂತ ಗಂಡಸರು—ಮನೆ ಮನೆ ಯಲ್ಲು ಗುಂಪುಗೂಡಿದ್ದ ಹೆಂಗಸರು...ಎಲ್ಲರ ಬಾಯಲ್ಲೂ ಬಸ್ಸಿನಲ್ಲಿ ನಡೆದ ದರೋಡೆಯ...ದರೋಡೆಕಾರರ ಮಾತೇ. ಎಲ್ಲೆಲ್ಲೂ ಕಳವಳದ...ನಿರಾ ಸೆಯ...ಸಂಕಟದ ಧ್ವನಿಯೇ. ಆ ಗುಂಪಿನಲ್ಲಿಯೇ ಒಬ್ಬರಾಗಿ ನಿಂತಿದ್ದ ಲಕ್ಷ್ಮಿಯ ತಂದೆಯ ಧ್ವನಿ ಕೇಳಿಬರದಿದ್ದರೂ....ಅವರ ಕಣ್ಣುಗಳು ಕಾತುರ ದಿಂದ....ಕಳವಳದಿಂದ ರಸ್ತೆಯ ಬರುವಿಕೆಗಾಗಿ ಕಾಯುತ್ತಿದ್ದುವು.

ಮಗನಿಂದ ಲಕ್ಷ್ಮಿ ಬಸ್ಸಿನಿಂದ...ದರೋಡೆಕಾರರಿಂದ ತಪ್ಪಿಸಿಕೊಂಡ ಳೆಂಬ ವರ್ತಮಾನ ತಿಳಿದು ಸಮಾಧಾನವಾಗಿದ್ದರೂ ಅವಳು ಕಣ್ಣಿಗೆ ಬೀಳುವ ವರೆಗೂ ಅವರಿಗೆ ಜೀವ ನಿಲ್ಲದು. ತಾಯಿ ಮನೆಯಲ್ಲಿ ಕುಳಿತು ಅಳುತ್ತಿದ್ದರೆ.. ಇವರು ರಸ್ತೆಯಲ್ಲಿ ನಿಂತು ಲಕ್ಷ್ಮಿಯ ಬರುವಿಕೆಗಾಗಿ ಕಾಯುತ್ತಿದ್ದಾರೆ.

ಕೊನೆಗೊಮ್ಮೆ ಲಕ್ಷ್ಮಿ ಬರುವುದು ಕಾಣಿಸಿತು. ತಲೆ ತಗ್ಗಿಸಿಕೊಂಡು.. ತೂರಾಡುವ ಹೆಜ್ಜೆ ಹಾಕುತ್ತಾ ಬರುತ್ತಿರುವ ಲಕ್ಷ್ಮಿಯತ್ತ ಜನರ ಗಮನ ಹರಿದಂತೇ...ಅವಳ ಕೈ....ಕತ್ತು...ಕಿವಿಗಳಲ್ಲಿನ ಆಭರಣದ ಹೊಳಪು ನೋಡಿದಂತೇ ಜನಗಳು ಲಕ್ಷ್ಮಿಯ ಧೈರ್ಯಕ್ಕೆ-ಜಾಣತನಕ್ಕೆ, ಅವಳ ಪುಣ್ಯಕ್ಕೆ ಹೊಗಳುತ್ತಾ ಅವಳನ್ನು ಸುತ್ತುವರಿದವರು ತಂದೆಯನ್ನು ಕಂಡೊ ಡನೆ ಅವರಿಗೆ ತೆಕ್ಕೆಬಿದ್ದು ಜೋರಾಗಿ ಅಳಲಾರಂಭಿಸಿದವಳನ್ನು ನೋಡಿ ವಿಸ್ಮಯದಿಂದ ನಿಂತುಬಿಟ್ಟರು.

ಊರಿಗೆಲ್ಲ ಗಟ್ಟಿಮನಸ್ಸಿನ ಧೈರ್ಯವಂತ ಹುಡುಗಿ. ಜಾಣೆ. ಚಾಲೂಕಿ ಎಂದು ಹೆಸರು ಪಡೆದಿದ್ದವಳು. ಈಗ ಅದೇ ಧೈರ್ಯದಿಂದ ಜಾಣತನದಿಂದ ಆ ಕ್ರೂರ ದರೋಡೆಕಾರರಿಂದ ತಪ್ಪಿಸಿಕೊಂಡು ತನ್ನನ್ನು-ತನ್ನ ಬೆಲೆಯುಳ್ಳ ಆಭರಣಗಳನ್ನು ರಕ್ಷಿಸಿಕೊಂಡು ಬಂದಿದ್ದಾಳೆ. ಹೀಗಿರುವಾಗ ಯಾಕೀ ಅಳು? ಯಾಕೆ ಹೀಗಾಗಿದ್ದಾಳೆ? ಏನಾಯಿತು ಈ ಹುಡುಗಿಗೆ?

ಇದಕ್ಕೆಲ್ಲ ಯಾರು ಉತ್ತರಿಸಬೇಕು? ಎಲ್ಲರ ಪ್ರಶ್ನೆಗಳಿಗೂ ಲಕ್ಷ್ಮಿಯ ಅಳುವೊಂದೇ ಉತ್ತರ. ಎಷ್ಟು ಬಗೆಯಲ್ಲಿ...ಹೇಗೆ ಹೇಗೆ...ಸಮಾಧಾನ ಪಡಿಸಿದರೂ ಅವಳ ದುಃಖ ಶಮನವಾಗದು. ತಂದೆ ಅವಳನ್ನು ತಬ್ಬಿಕೊಂಡಂತೆಯೇ ಮನೆಗೆ ಕರೆದೊಯ್ದರು.

ಮಗಳನ್ನು ಕಾಣುತ್ತಿದ್ದಂತೆಯೇ ಧಾವಿಸಿ ಬಂದ ತಾಯಿಯನ್ನು ಲಕ್ಷಿಸದೆ ಸೀದಾ ಬಚ್ಚಲು ಮನೆಗೆ ನಡೆದು ಒಳಗಿನಿಂದ ಅಗುಳಿ ಹಾಕಿಕೊಂಡಳು ಲಕ್ಷ್ಮಿ.

ಗಾಭರಿಯಿಂದ, ಕಳವಳದಿಂದ ಮುಚ್ಚಿದ ಬಾಗಿಲನ್ನ ಮಂಕಾಗಿ ನೋಡುತ್ತಾ, ನಿಂತ ತಂದೆ–ತಾಯಿಯರನ್ನು ಊರಿನ ಜನಗೂ ಕೂಡಿಕೊಂಡರು. ಎಲ್ಲರೂ ಗಲಾಟೆ ಮಾಡುತ್ತಾ, ಬಾಗಿಲು ತೆಗೆಯುವಂತೆ ಲಕ್ಷ್ಮಿಯನ್ನು ಪರಿಪರಿಯಾಗೆ ಕೇಳಿಕೊಂಡರೂ ಬಾಗಿಲು ತೆಗೆಯುವ ಸೂಚನೆ ಕಾಣದಾಯಿತು. ಕೊನೆಗೆ ಬಾಗಿಲು ಒಡೆಯುವುದಂಬ ಯೋಚನೆ ಮಾಡುವ ಹೊತ್ತಿಗೆ ಒಳಗಿನಿಂದ ಚೀರಾಟ ಕೇಳಿಬಂದಿತು.

ಒಡೆದ ಬಾಗಿಲಿನ ಜೊತೆಗೇ ಲಕ್ಷ್ಮಿಯ ಬೆಂದ ಶರೀರವೂ ದೊಪ್ಪನೆ ನೆಲದ ಮೇಲೆ ಬಿದ್ದಿತು.

ಮುಂದಿನ ಕ್ಷಣಗಳಲ್ಲಿ ಪ್ರಥಮ ಚಿಕಿತ್ಸೆ. ಆಸ್ಪತ್ರೆಯ ತುರ್ತು ಚಿಕಿತ್ಸೆ...ಹೀಗೆ ಎಲ್ಲ ಕ್ರಿಯೆಗಳು ನಡೆದರೂ ಲಕ್ಷ್ಮಿಯ ಹೃದಯ ಕ್ರಿಯೆ ನಡೆಯದಾಯಿತು.

—: :—

# ಪ್ರತಿಭೆಯ ಕಥೆ

— ಸ. ಉಷಾ

ನನಗೆ ಕಥೆ ಹೇಳಲು ಬರುವುದಿಲ್ಲ. ಆದರೂ ಈ ಕಥೆ ಹೇಳದೆ ಇರಲು ಆಗುವುದಿಲ್ಲ. ಇದು ನನ್ನ ಗೆಳತಿ ಪ್ರತಿಭಾಳ ಕಥೆ. ಸ್ವಲ್ಪ ಸ್ವಲ್ಪ ನನ್ನ ಕಥೆಯೂ ಹೌದು. ಪ್ರತಿಭಾ ನನ್ನ ಗೆಳತಿ ಅಂದರೆ ಸ್ವಲ್ಪ ತಪ್ಪಾಗುತ್ತೆ. ಪ್ರತಿಭಾ ನನ್ನ ಪ್ರತಿಸ್ಪರ್ಧಿ, ನಮ್ಮ ಸಂಬಂಧ ಶುರುವಾಗಿದ್ದೇ ಸ್ಪರ್ಧೆ ಅಸೂಯೆಗಳಿಂದ.

ನಾನು ಹುಟ್ಟಿದ್ದು ಸಂಪ್ರದಾಯಸ್ಥ ಬ್ರಾಹ್ಮಣರ ಮನೆಯಲ್ಲಿ. ನಮ್ಮಪ್ಪ, ಅಜ್ಜ, ಅಜ್ಜನ ಅಪ್ಪ ಎಲ್ಲರೂ ಮೇಷ್ಟ್ರೇ ಆಗಿದ್ದರು. ಹೈಸ್ಕೂಲಿಗೆ ಬರುವಷ್ಟು ಹೊತ್ತಿಗೆ ನನಗೆ ಮೂರು ಹೊತ್ತೂ ಅಪ್ಪ ಅಜ್ಜಂದಿರ ಮೇಷ್ಟ್ರಗಿರಿಯಲ್ಲಿ ಪಳಗಿ ನಮ್ಮ ಮೇಷ್ಟ್ರುಗಳೇನಾದರೂ ತಪ್ಪಿದರೆ ತಿದ್ದುವಷ್ಟು ತಿಳುವಳಿಕೆ ಬರದಿದ್ದರೂ ತಿದ್ದದೇ ಇರುವಷ್ಟು ಜಾಣತನವೂ ಬಂದಿತ್ತು. ಟುಡಿಬೇ, ಏಕಪಾತ್ರಾಭಿನಯ, ಕಂಠಪಾಠಸ್ಪರ್ಧೆಗಳಲ್ಲಿ ನಾನು ಮೇಡಂಗಳ ಕಣ್ಮಣಿಯಾಗಿ ಬಿಟ್ಟಿದ್ದೆ. ಪ್ರತಿಭಾ ನಮ್ಮ ಶಾಲೆಗೆ ಬಂದದ್ದು ನಾನು ಹೈಸ್ಕೂಲ್ ಎರಡನೇ ವರ್ಷದಲ್ಲಿದ್ದಾಗ, ಶಾಲೆಗೆ ಬಂದ ಕೆಲವೇ ದಿನಗಳಲ್ಲಿ ಯಾವುದೋ ಸಮಾರಂಭದಲ್ಲಿ ಹಾವಾಡಿಗನ ನೃತ್ಯ, ಕೊರವಂಜಿ ನೃತ್ಯ ಮಾಡಿಮೆರೆದ ಕನ್ನಡ ಮೀಡಿಯಂ ಬಿ ಸೆಕ್ಷನ್ನಿನ ಪ್ರತಿಭಾರಾಣಿ ನಮ್ಮ ಇಂಗ್ಲಿಷ್ ಮೀಡಿಯಂ 'ಎ' ಸೆಕ್ಷನ್ನಿನವರ ಜಂಭಕ್ಕೆ ಒಂದು ಸವಾಲಾದಳು. 'ಬಿ' ಸೆಕ್ಷನ್ನಿನಲ್ಲಿದ್ದ ಹುಡುಗಿಯರಿಗೊಂದು ಪುಕ್ಕ ಹುಟ್ಟಿದ ಹಾಗಾಗಿತ್ತು.

ಇವಳು ಯಾರು ಎಲ್ಲಿಂದ ಬಂದಳು ಎಂದು ನಾವುಗಳು ಹುಬ್ಬೆತ್ತುತ್ತಿದ್ದ ಹಾಗೆ ಅವಳ ಅವಳಮ್ಮನ ಸುದ್ದಿಗಳು ಶಾಲೆಯಲ್ಲಿ ಊಟಕ್ಕೆ ಬಿಟ್ಟ ಹೊತ್ತಿನಲ್ಲಿ ತೇಲಿದುವು. ಅವರಪ್ಪ ಮಂಡ್ಯದಲ್ಲಿ ಅಂಗಡಿ ಇಟ್ಟಿದ್ದರಂತೆ. ವ್ಯಾಪಾರ ಲಾಸಾಗಿ ಎಲ್ಲಿಗೋ ಹೇಳದೆ ಕೇಳದೆ ಹೊರಟು ಹೋದರಂತೆ. ಅವರಮ್ಮ ಸಾಲಾಗಾರರ ಕಾಟ ತಡೆಯಲಾರದೆ ಮನೆ ಅಂಗಡಿ ಮಾರಿ ಮೈಸೂರಿಗೆ ಬಂದಿದ್ದಾರೆ. ನಮ್ಮ ಮನೆಯ ಮುಂದಿನ ಸಾಲಿನಲ್ಲಿರುವ ಮನೆಯೊಂದನ್ನು ಉಳಿದ ದುಡ್ಡಿನಲ್ಲಿ ಭೋಗ್ಯಕ್ಕೆ ಹಾಕಿಕೊಂಡು ಮಗಳನ್ನು ಓದಿಸಿಕೊಂಡು ಇದ್ದಾರೆ. ಇವಳು ಮಂಡ್ಯದಲ್ಲಿ ಡ್ಯಾನ್ಸು ಕಲಿತಳು. ಈಗ ಇವರ ಮನೆ ಎದುರಗಿರುವ ಬಸ್ ಮಾಲೀಕರ ಮಗಳಿಗೆ ಡ್ಯಾನ್ಸು ಹೇಳಿಕೊಡುವಾಗ ಜೊತೆಗಿದ್ದು ಕಲಿಯುತ್ತಾಳೆ. ಪಾಪ ಬಡಹುಡುಗಿ ಎಂದೋ ವಯಸ್ಸಿಗೆ ಬಂದ ತಮ್ಮ ಮಗಳು ನೃತ್ಯ ಕಲಿಯುವಾಗ ಜೊತೆಗೊಬ್ಬಳು ಹೆಣ್ಣು ಮಗಳು ಇರಲಿ ಎಂದೋ ಅವರ ಮನೆಯವರು ಸುಮ್ಮನಿದ್ದಾರೆ. ಮೇಷ್ಟ್ರರೂ ಫೀಸು ಕೇಳಲ್ಲ. ಪ್ರತಿಭೆಳ ಅಮ್ಮ ತುಂಬ ಲಕ್ಷಣವಾಗಿದ್ದಾರೆ, ಇತ್ಯಾದಿ. ಇತ್ಯಾದಿ.

ವರ್ಷದ ಕೊನೆಯಲ್ಲಿ ಶಾಲೆಯ ವಾರ್ಷಿಕೋತ್ಸವ ನಡೆದಾಗ ಪ್ರತಿಭಾಳ ಕೊರವಂಜಿ ನೃತ್ಯಕ್ಕೆ ಮೊದಲ ಬಹುಮಾನ, ನನ್ನ ಏಕ ಪಾತ್ರಾಭಿನಯಕ್ಕೆ ಎರಡನೆಯ ಸ್ಥಾನ ಸಿಕ್ಕಾಗ ನನಗೆ ಸ್ಟೇಜಿನ ಮೇಲೆ ಹೋಗಬೇಕೆನ್ನಿಸಲಿಲ್ಲ. ಅವಮಾನದಿಂದ ಅಳು ಬರುವಹಾಗಾಗಿತ್ತು. ಪ್ರತಿಭಾಳ ಬಣ್ಣ ಸ್ವಲ್ಪ ಕಪ್ಪು, ಹಾ, ಪೂರ್ತಿ ಕಪ್ಪಲ್ಲ. ನನ್ನ ಬಿಳಿಗೆಂಪಿಗೆ ಹೋಲಿಸಿದರೆ ಅವಳ ಎಣ್ಣೆಗೆಂಪು ಬಣ್ಣ ಕಪ್ಪೆನಿಸುತ್ತಿತ್ತಷ್ಟೆ, ಒಂಥರಾ ಲಂಗ ದಾವಣಿಗಳು ತುಂಬಿ ಹೊರಚೆಲ್ಲುವ ಥಾಗಿದ್ದ ಹುಡುಗಿ, ಹಳೆ ಅಗ್ರಹಾರದಿಂದ ಚಾಪಡಿ ಬೀದಿಯವರಗೆ ಯಾರೋ ಬಳಸಿ ಬೇಸರವಾಗಿ ಕೊಟ್ಟಿದ್ದಿರಬಹುದಾದ ಗುಲಾಬಿ ಬಣ್ಣದ ಜಾರ್ಜೆಟ್ ಸೀರೆಯನ್ನು ಹರಿದು ಹೊಲಿದು ಕೆಂಪು ಹೂವಿನ ಕಸೂತಿ ಮಾಡಿದ ದಾವಣಿಯ ಸರಗು ಹಾರಿಸುತ್ತಾ ಮೈಸೂರಿನ ಮಹಾರಾಣಿಯ ಹಾಗೆ ಅವಳು ಬಂದರೆ ಅರಳಿಕಟ್ಟೆಯ ಮೇಲೆ ಕೂತಿದ್ದ ಪುಂಡು ಪೋಕರಿಗಳಲ್ಲಿ ಕೆಲವರು "ರುಕ್ ಜಾವೋ ಜಾನೇವಾಲೀ ರುಕ್ ಜಾ".

ಎಂತಲೋ "ಬಿಂಕದ ಸಿಂಗಾರಿ" ಎಂತಲೋ ಗುಸುಗುತ್ತಾ ಸಿಳ್ಳು ಹೊಡೆಯುತ್ತಾ ಬೆನ್ನು ಹತ್ತುತ್ತಿದ್ದರು. ಆಶ್ಚರ್ಯ ಎಂದರೆ ಅವರನ್ನು ನೋಡಿಯೇ ನಮಗೆಲ್ಲ ಕಾಲು ಬೆವರಿ ಬೆಜ್ಜೆ ಕಿತ್ತಿಡಲೂ ಆಗದ ಹಾಗೆ ಆಗುವಾಗ ಈ ಬಿಂಕದ ಸಿಂಗಾರಿ ಐದು ರೂಪಾಯಿ ನೋಟು ತೋರಿಸಿ "ಬರ್‍ತೀಯಾ" ಎಂದು ಕೇಳಿದ ಒಬ್ಬನಿಗೆ ರಪ್ಪನೆ ಕೆನ್ನೆಗೆ ಬಾರಿಸಿ ಅಲ್ಲೇ ಇದ್ದ ಡ್ರಿಲ್ ಮೇಷ್ಟರ ಸುಫರ್ದಿಗೆ ಒಪ್ಪಿಸಿ ಹಾರಾಡುತ್ತಿದ್ದ ಸೆರಗನ್ನು ಸೊಂಟಕ್ಕೆ ಸಿಕ್ಕಿಸಿ ಏನೂ ಆಗದೆ ಹಾಗೆ ಸ್ಕೂಲಿಗೆ ಬಂದಿದ್ದಳು. ಅದೇನೇ ಆಗಲಿ, ಇವಳು ಒಂದೊಂದಾಗಿ ನನ್ನ ರೆಕ್ಕೆ ಪುಕ್ಕ ತರಿದರೆ ಸುಮ್ಮದಿರುವುದು ಹೇಗೆ ? ಒಂದು ದಿನ ಮೆತ್ತಗೆ ಮನೆಯಲ್ಲಿ ಕಾಟ ಶುರು ಮಾಡಿದೆ. ನಾನೂ ಡ್ಯಾನ್ಸು ಕಲಿಯುತ್ತೇನೆ ಅಂತ, ಅಮ್ಮ ಅಪ್ಪನ ಕಡೆ, ಅಜ್ಜಿ ತಾತನ ಕಡೆ ಕೈ ತೋರಿಸಿ ಜಾರಿ ಕೊಂಡರು. ಒಂದು ದಿನ ತಾತ ಊಟ ಮುಗಿಸಿ ಎಲಡಿಕೆ ಹಾಕುತ್ತಿದ್ದಾಗ ಮೆತ್ತಗೆ ಪೀಠಿಕೆ ಹಾಕಿದೆ,

'ತಾತ' ಎಂದೆ—'ಹೂಂ ಎಂದರು.

"...ಮತ್ತೆ ನಮ್ಮ ಕ್ಲಾಸಲ್ಲಿ ಪ್ರತಿಭಾ ಅಂತ ಒಬ್ಬಳಿದ್ದಾಳೆ"

'ಹೂಂ'

"ಅವಳು ತುಂಬ ಚೆನ್ನಾಗಿ ಡ್ಯಾನ್ಸ್ ಮಾಡ್ತಾಳೆ"

"..............."

"ಅವಳಿಗೆ ಈ ಸಾರಿ ಫಸ್ಟ್ ಪ್ರೈಜ್ ಬಂದಿದೆ."

'ಹೂಂ'

"ನಾನೂ ಡ್ಯಾನ್ಸ್ ಕಲೀತೀನಿ ತಾತ"

ಮುಂದಿನದನ್ನು ಹೇಳಲು ಪದಗಳೇ ಇಲ್ಲ. ತಾತ ಒಂದು ಸಾರಿ ಹುಬ್ಬೆತ್ತಿ ಹುಲಿಯ ಹಾಗೆ ಹೂಂಕರಿಸಿ ಬಿಟ್ಟರು. ಮುಗಿಯಿತು.

ಹಳೆಯ ಸಾಮಾನು ತುಂಬಿದ ನಮ್ಮ ಮನೆಯ ಕತ್ತಲೆಯ ಅಟ್ಟ ಹತ್ತಿ ಕುಳಿತು ಒಂದಿಷ್ಟು ಅತ್ತೆ, ಎರಡನೆಯ ಸ್ಥಾನವೇ ನನಗೆ ಗ್ಯಾರಂಟಿ ಅಂತ ಖಾತ್ರಿ ಆಯ್ತು.

ನಮ್ಮ ಗೃಹವಿಜ್ಞಾನದ ಮೇಡಂ ಅತ್ಮತ್ತುನ್ನೀಸಾಗೆ ಹೊಸ ಹೊಸ ಡ್ಯಾನ್ಸು ನಾಟಕ ಮಾಡಿಸೋದು ಅಂದ್ರೆ ತುಂಬ ಖುಷಿ, ನಾವು ಎಸ್ಸೆಲ್ಸಿಗೆ ಬಂದಾಗ ಅವರು ಎಲ್ಲ ಸೆಕ್ಷನ್ನುಗಳಿಂದಲೂ ಕೆಲವರನ್ನು ಆರಿಸಿಕೊಂಡು ರಾಧಾಕೃಷ್ಣ ನೃತ್ಯರೂಪಕ, ಹಳ್ಳಿ ಡ್ಯಾನ್ಸು ಏನೇನೋ ಮಾಡಿಸಿದರು. ನಾನು ಮುನಿಸಿಕೊಂಡ ರಾಧೆ, ಪ್ರತಿಭಾ ನನ್ನನ್ನು ಒಲಿಸಿಕೊಳ್ಳಲು ಕುಣಿಯುವ ಕೃಷ್ಣ ಆಗಿ ಬಹುಮಾನ ಹೊಡೆದಾಗ ಪ್ರತಿಭಾ ಎನಿಮಿ ಆಗಿದ್ದವಳು ಫ್ರೆಂಡ್ ಆದಳು. ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಬಂದಿದ್ದ ಡಿ.ಡಿ. ಸಾಹೇಬರು ಪ್ರತಿಭಾಳನ್ನು ಹೊರಗಳಿದ್ದೇ ಹೊಗಳಿದ್ದು. ಅವಳ ಹೆಸರು ಅನ್ವರ್ಥನಾಮವಂತೆ, ಅವಳಿಗೆ ಉಜ್ವಲ ಭವಿಷ್ಯ ಏದೆಯಂತೆ, ಅವಳು ತನ್ನ ಅಭಿರುಚಿಗೆ ತಕ್ಕ ಕ್ಷೇತ್ರವನ್ನು ಆಯ್ದುಕೊಂಡು ಯಶಸ್ವಿಯಾಗಲೆಂದು ಅವರು ಹಾರೈಸುತ್ತಾರಂತೆ, ಇತ್ಯಾದಿ, ಇತ್ಯಾದಿ,

ಎಸ್ಸೆಲ್ಸಿ ರಿಸಲ್ಟು ಬಂದಾಗ ನಾನು ಫಸ್ಟ್‌ಕ್ಲಾಸ್ ಪ್ರತಿಭಾ ಸೆಕೆಂಡ್ ಕ್ಲಾಸ್ ಪಾಸಾಗಿದ್ದೆವು. ಇಬ್ಬರೂ ಒಂದೇ ಕಾಲೇಜಿಗೆ ಸೇರಿ ಒಟ್ಟಿಗೇ ಕಾಲೇಜಿಗೆ ಹೋಗುತ್ತಿದ್ದೆವು. ಅಷ್ಟು ಹೊತ್ತಿಗೆ ನನಗೆ ಲಂಗ ಜಂಪರಿನಿಂದ ದಾವಣಿಗೆ ಪ್ರಮೋಷನ್ ಸಿಕ್ಕಿದ್ದರಿಂದ ತಾತನ ಕಟ್ಟಪ್ಪಣೆ ಮೇರೆಗೆ ಪಠ್ಯೇತರ ಚಟುವಟಿಕೆಗಳೆಲ್ಲಾ ಬಂದ್ ಆಗಿದ್ದವು. ಒಂದು ದಿನ ಸಂಜೆ ಆರೂವರೆಯುವರೆಗೆ ಬ್ಯಾಡ್‌ಮಿಂಟನ್ ಆಡಿ ದೀಪ ಹಚ್ಚುವ ಹೊತ್ತಿಗೆ ಮನೆಗೆ ಬಂದು ತಣ್ಣನೆಯ ನೀರಲ್ಲಿ ಬೆವರು ಧೂಳು ಮಣ್ಣು ತೊಳೆದು ಒಳಗೆ ಬರುತ್ತಿದ್ದಾಗ ಮನೆಯೊಳಗೆ ಬಿಮ್ಮಗೆ ಬಿಗಿದುಕೂತ ಅಜ್ಜಿ ಅಮ್ಮಂದಿರ ನಿಷ್ಠುರ ಮೌನ ಕಪಾಳಕ್ಕೆ ಹೊಡೆದ್ದಿತ್ತು. ಬಟ್ಟೆ ಬದಲಾಯಿಸಿ ಒಳಗೆ ಹೋಗುತ್ತಿದ್ದಂತೆ ತಾತ ಕರೆದರು, ಸುಮ್ಮನೇ ಹತ್ತಿರ ಹೋಗಿ ನಿಂತ,

"ಮಗೂ ಎಷ್ಟೊತ್ತಿಗಮ್ಮಾ ಮನೆಗೆ ಬರೋದು"

ಪ್ರಶಾಂತ ಮುಖ, ವಿಭೂತಿ ಕುಂಕುಮ, ಆಗತಾನೇ ಸಂಧ್ಯಾವಂದನೆ ಮಾಡ್ತಿದ್ದಾರೆ, ಕೈಮಣಿಯ ಮೇಲೆ ರಾಮಾಯಣ, ಮಿಕಿ ಮಿಕಿ ನೋಡಿದ.

"ಇದೇ ಕೊನೆ ಇನ್ನು ಮೇಲೆ ಕಣ್ ಬೆಳಕಿದ್ದಾಗಲೇ ಮನೆ ಸೇರಿಕೋಬೇಕು" ಎಂದರು.

ಹುಳು ನುಂಗಿದ ಹಾಗಾಯಿತು. ಪಿಟಿ ಪಿಟಿ ಬೈದುಕೊಂಡು ಸುಮ್ಮನಾದೆ. ಪ್ರತಿಭಾ ಮಾತ್ರ ಮೊದಲಿಗಿಂತ ಹೆಚ್ಚಾಗಿ ಸ್ಟೇಜಿನ ಮೇಲೆ ಮೆರೆಯುತ್ತಿದ್ದಳು. ನನಗೆ "ಡ್ಯಾನ್ಸ್ ಪ್ರತಿಭಳ ಜೊತೆಗಿರುವ ಕುಡುಮಿ" ಎಂಬ ಬಿರುದನ್ನು ನಮ್ಮ ಕಾಲೇಜು ಹುಡುಗರು ಉದಾರವಾಗಿ ದಯಪಾಲಿಸಿದ್ದರು. ಪ್ರತಿಭಾಳ ಮೇಷ್ಟರು ಯಾವುದೋ ಸಿನಿಮಾಕ್ಕೆ ಈಗ ನೃತ್ಯ ನಿರ್ದೇಸಕರಾಗಿದ್ದರು. ಅವಳಿಗೂ ಆ ಸಿನಿಮಾದಲ್ಲಿ ಒಂದು ಪಾರ್ಟು ಸಿಕ್ಕಿತ್ತು. ಷೂಟಿಂಗು, ಸ್ಕ್ರೀನಿಂಗು ಅಂತ ಒಂದು ದಿನ ಕಾಲೇಜಿಗೆ ಬಂದರೆ ಒಂಬತ್ತು ದಿನ ಚಿಕ್ಕರ್ ಹೊಡೆಯುತ್ತಿದ್ದಳು. ಒಂದು ದಿನ ಬಾಟನಿ ಲೆಕ್ಚರರ್ ಪ್ರಾಕ್ಟಿಕಲ್ ಕ್ಲಾಸಿನಲ್ಲಿ "ಎಲ್ರೀ ನಿಮ್ಮ ಫ್ರೆಂಡು ಸಿನಿಮಾಸ್ಟಾರು...ಬರ್ತಾ ಇಲ್ಲ" ಎಂದರು. ನನಗೆ ಕಣ್ಣಲ್ಲಿ ನೀರು ಬರುವ ಹಾಗಾಯಿತು. ಆಮೇಲೆ ಅವಳಿಗೆಂದರೆ ನನಗ್ಯಾಕೆ ಬೇಜಾರು ಅಂದುಕೊಂಡೆ. ಈ ಹಾಳಾದವಳ ಜೊತೆ ಕಾಲೇಜಿಗೆ ಹೋಗೋದೂ ಕಷ್ಟವೇ, ನಮ್ಮ ಪಾಡಿಗೆ ನಾವು ಹೋಗುತ್ತಿದ್ದರೆ "ಎಲ್ಲಮ್ಮ ಎರಡುದಿನ ಕಾಣಲಿಲ್ಲ."

"ಇಲ್ಲಕಣಮ್ಮ ನಂದಿಗೆ ಹೋಗಿದ್ದೆ, ಷೂಟಿಂಗ್‌ಗೆ" ಎಂದು ಕಿಚಾಯಿಸುತ್ತಾ ಬೆನ್ನು ಹತ್ತುವ ಹುಡುಗರು. ಬೇಸಿಗೆ ರಜ ಬರುವ ವೇಳೆಗೆ ಅವಳ ಸಿನಿಮ ಬಿಡುಗಡೆಯಾಯಿತು. ಅದರಲ್ಲಿ ಅವಳ ಪ್ರತಿಭೆ ನೋಡಿ ಮೆಚ್ಚಿ, ಹೊಸ ಚಿತ್ರವೊಂದಕ್ಕೆ ನಾಯಕಿಯಾಗಿ ಯಾರೋ ಕಾಂಟ್ರಾಕ್ಟ್ ಮಾಡಿಕೊಂಡರಂತೆ. ಅಷ್ಟು ಹೊತ್ತಿಗೆ ಕನ್ನಡ ಎಂ. ಎ. ಓದುತ್ತಿದ್ದ ನಮ್ಮತ್ತೆ ಮಗನ ಸಹವಾಸದಿಂದ ನನಗೆ ಕಥೆ ಪುಸ್ತಕದ ರುಚಿ ಹತ್ತಿ ಕನ್ನಡ

ಮೇಜರ್ ತೊಗೊಂಡು ಬಿ. ಎ. ಗೆ ಸೇರಿದೆ. ನಾನು ಫೈನಲ್ ಬಿ. ಎ. ಗೆ ಬರುವ ಹೊತ್ತಿಗೆ ಅವನು ಒಂದು ಪ್ರೈವೇಟ್ ಕಾಲೇಜಲ್ಲಿ ಲೆಕ್ಚರರ್ ಆಗಿ ಸೇರಿದ್ದ. ಪ್ರತಿಭಾ ಮದರಾಸಿಗೆ ಹೋದವಳು ಎರಡು ವರ್ಷ ಅಲ್ಲೇ ಇದ್ದ ಳಂತೆ. ಮತ್ತೆ ಬಂದು ಅವರಮ್ಮ ಭೋಗ್ಯಕ್ಕೆ ಹಾಕಿಕೊಂಡಿದ್ದ ಮನೆ ಖರೀದಿ ಮಾಡಿ 'ಪ್ರತಿಭಾ ನಿವಾಸ' ಅಂತ ಬೋರ್ಡು ಹಾಕಿಸಿ ಅವರಮ್ಮನ್ನ ಅಲ್ಲಿ ಪ್ರತಿಷ್ಠಿಸಿ, ಮತ್ತೆ ಮದರಾಸಿಗೆ ಹಾರಿಹೋಗಿದ್ದಳು. ತಿಂಗಳಿಗೊಂದು ಸಾರಿ ಬರುತ್ತಿದ್ದಳಂತೆ. ಆವಳಿಗೆ ನಮ್ಮ ಮನೆಗೆ ಬರಲು ಪುರಸೊತ್ತಿರಲಿಲ್ಲ. ನನಗೆ ಅವರ ಮನೆಗೆ ಹೋಗಲು ಅನುಮತಿ ಇರಲಿಲ್ಲ, ಅವರಮ್ಮ ಈಗ ಅವಳಿಗಿಂತ ದೊಡ್ಡ ಸಿನಿಮಾಸ್ಟಾರ್ ಆಗಿದ್ದಾರೆಂದು ನಮ್ಮ ಮನೆಗೆಲಸದ ನಿಂಗಮ್ಮ ಹೇಳುತ್ತಿದ್ದಳು.

ನಾನು ಬಿ. ಎ. ಮುಗಿಸಿದಮೇಲೆ ಅಪ್ಪ ಅಮ್ಮ ಮದುವೆ ಬಗ್ಗೆ ಅತ್ತೆ ಮಾವನ ಮನೆಯಲ್ಲಿ ವಿಚಾರಿಸಿದರಂತೆ, ಅವನು ಇನ್ನೂ ಎರಡು ವರ್ಷ ಮದುವೆ ಬೇಡ, ಅವಳು ಬೇಕಾದರೆ ಮುಂದೆ ಓದಲಿ ಎಂದನಂತೆ. ಅಷ್ಟು ಹೊತ್ತಿಗೆ ತಾತನಿಗೆ ರಿಟೈರ್ ಆಗಿತ್ತು. ಅವರು "ಏನೋ ಅವರವರ ಇಷ್ಟ, ಕಾಲಕ್ಕೆ ತಕ್ಕಂಗಿರಬೇಕಲ್ಲ" ಎಂದರು. ನಾನು ಪೊರೆ ಕಳಚಿಕೊಂಡ ಹಾವಾದೆ. ಎಂ. ಎ. ಗೆ ಹೋದೆ, ಸೆಮಿನಾರ್ ಮಾಡಿದೆ, ಕವನ ಬರೆದೆ, ಕವನ ಬರೆಯುವ ಹುಡುಗಿ ಅಂತ ಬ್ರ್ಯಾಂಡ್ ಆದೆ. ಮುಟ್ಟಾದಾಗ ಹೊರ ಗೆ ಕೂರಲ್ಲ ಅಂತ ಹಟ ಮಾಡಿದೆ. ಕೆಲಸದ ನಿಂಗಮ್ಮನಿಗೆ ಅಲ್ಯುಮಿನಿಯಂ ಲೋಟ ಬಿಡಿಸಿ ಗಾಜಿನ ಲೋಟದಲ್ಲಿ ಕಾಫಿ ಕೊಟ್ಟೆ. ಪರೀಕ್ಷೆ ಮುಗಿದ ಮೇಲೆ ವಧು ಪರೀಕ್ಷೆಗೆ ಕೂತು ಕೊಳ್ಳದೆ ಮದುವೆ ಆದೆ, ನಮ್ಮಿಬ್ಬರ ಹೆಸರಿ ನಲ್ಲಿ ಒಂದು ಸರಳ ಲಗ್ನಪತ್ರಿಕೆ. ಸ್ನೇಹಿತರಿಗೆಲ್ಲ ಕಳಿಸುವಾಗ ಕೆಲಸದ ನಿಂಗವ್ವನ ಹತ್ತಿರ ಗುಟ್ಟಾಗಿ ಒಂದು ಲಗ್ನಪತ್ರಿಕೆ ಕೊಟ್ಟು ಪ್ರತಿಭಾಳ ಮನೆ ಗೆ ಕಳಿಸಿದೆ. ಹೋದವಳು ಪೆಚ್ಚುಮೋರೆ ಮಾಡಿಕೊಂಡು ಬಂದಳು.

"ಏನೇ" ಅಂದೆ

"ಅವ್ವಾ ಆಯಮ್ಮಂಗೆ ಮೈಯಿಳಿದತಂತೆ, ಆಸ್ಪತ್ರೇಗಾಕವ್ರೆ, ಮನೇನ

ಎಲ್ಡ್ ಪ್ರೋಸರ್ಸಲ್ ಮಾಡಿ ಬಾಡ್ಗೆ ಕೊಟ್ಟವ್ರೆ ಎಂದಳು. "ಅವಳ ವ್ಯವ್ಸೆ ಯಾವಾಗಾಯ್ತೋ? .. ಯಜಮಾನ್ರು ಏನ್ಕೆಲ್ಸ ಮಾಡ್ತಾರಂತೆ"

"ಹೋಗ್ರವ್ವಾ ನೀವೊಂದು, ಆ ಸುಡುಗಾಡು ಸಿನಿಮದಾಗೆ ಯಾರ್ಯಾರು ಏನೇಸು ಹೇಳ್ತಾರೋ ಹಂಗೆಲ್ಲ ಕುಣೀಬೇಕಲ್ಲ ಹೊಟ್ಟೆಪಾಡ್ಗೆ" ಎಂದಳು,

ಮೈಯಲ್ಲಿ ಜುಂ ಅಂತು. ಆಸ್ಪತ್ರೇಗ್ಹೋಗಿ ಅವಳನ್ನೋಡಬೇಕು ಅನ್ನಿಸಿದರೂ ಮದುವೆ ಹೆಣ್ಣು ಅಲ್ಲೆಲ್ಲ ಹೋಗ್ತೀನೀಂತ ಹೇಳಿ ಬೈಸ್ಕೊಳ್ಳೊದ್ಯಾಕೇಂತ ಸುಮ್ಮನಾದೆ.

ಮದುವೆ ಆಗಿ ಮನೆ ತುಂಬಿಸಿಕೊಳ್ಳುವ ಹೊತ್ತಿಗೆ ರಿಸಲ್ಟ್ ಬಂತು. ಫಸ್ಟ್‌ಕ್ಲಾಸ್, ಒಂದು ಪೇಪರಿನಲ್ಲಿ ಫಸ್ಟ್‌ಪ್ಲೇಸು, ಬಂಗಾರದ ಪದಕ. ಆಹಾ ಇನ್ನೇನು ಬೇಕು, ಪಂಜರದ ಗಿಳಿ ಹಣ್ಣು ಮೆಣಸಿನಕಾಯಿ ಮುತ್ತಿಡುವ ಬಿಳೀಕ್ಕೈ ಹೀಗೆ ಹೇಳಿದ್ದರೆ ಕವನ ಬರೆಯುತ್ತ ಹೋಗಬಹುದು. "ಇವರ" ಕಾಲೇಜಿನಲ್ಲೇ ಕೆಲಸ ಸಿಕ್ಕಿತು. ತುಂಟ ಹುಡುಗನ ಸೊಂಟಾ, ಸುತ್ತಿ, ವೆಸ್ಟಾ ರಾಜಕುಮಾರಿಯಾಗಿ ಸೆರಗು ಹಾರಿಸುತ್ತ ಆಲೆದ ಕನಸು ನನಸಾಗಿ, ಬೆಚ್ಚನೆಯ ಮನೆ ವೆಚ್ಚಕ್ಕೆ ಹೊನ್ನು, ಭಾರತೀಯ ಸಂಪ್ರದಾಯ ಸಂಸ್ಕೃತಿಯ ಟೇಪ್ರರೆಕಾರ್ಡರಿಗೆ ಕರೆಂಟು ಬಿಡುತ್ತ ಎರಡು ವರ್ಷ ಕಳೆದ ಮೇಲೆ ಡೆಲಿವರಿಗೆ ಅಮ್ಮನ ಮನೆಗೆ ಬರಬೇಕಾಯಿತು, ಅಮ್ಮನ ಉಪಚಾರ. ನಿಪ್ಪಟ್ಟು, ಚಕ್ಕುಲಿ. ಅರಳುಂಡೆ, ಮಲ್ಲಿಗೆ ಬಳ್ಳಿಯ ಚಪ್ಪರದಡಿಯಲ್ಲಿ ಕಥೆಪುಸ್ತಕ, ವಾಲ್ಯುಯೇಷನ್ನಿನ ದುಡ್ಡಿನಲ್ಲಿ ಕೆಂಪಿನಸೆಟ್ಟು, ಅತ್ತೆ ಮನೆಯವರು ಮಾಡಿಸಿ ಹಾಕಿದ ಮುತ್ತಿನ ಸೆಟ್ಟು, ಗಿಣಿಹಸಿರು ಸೀರೆಗೆ ಗುಲಾಬಿ ಬಾರ್ಡರು. ಈ ಎಲ್ಲ ಸಂಭ್ರಮದಲ್ಲಿ ಪ್ರತಿಭಾ ಮರೆತೇ ಹೋದಳು. ದಿನ ತುಂಬಲು ಹದಿನೈದು ದಿನ ಇರುವಾಗಲೇ ನೋವು ಶುರುವಾಗಿ ಅರ್ಧ ರಾತ್ರಿಯಲ್ಲೇ ಅಪ್ಪ ಟ್ಯಾಕ್ಸಿ ತಂದರು. ಆಸ್ಪತ್ರೆಗೆ ಹೋದ ಸ್ವಲ್ಪ ಹೊತ್ತಿನಲ್ಲೇ ಹೆರಿಗೆ ಆಯಿತಂತೆ. ನನಗೆ ಎಲ್ಲಾ ಗೊತ್ತಾಗುತ್ತಿದ್ದರೂ ಮಾತನಾಡಲು ಆಗುತ್ತಿರಲಿಲ್ಲ. ಸ್ಪೆಷಲ್‌ವಾರ್ಡಿನಲ್ಲಿ ಜಾಗ ಸಿಗದಿದ್ದುದಕ್ಕೆ ಜನರಲ್

ವಾರ್ಡಿನಲ್ಲಿ ಒಂದು ರಾತ್ರಿ ಕಳೆಯಬೇಕಾಯಿತು. ನನಗೆ ಯಾವುದೂ ಅರಿವಿಲ್ಲ ಒಳ್ಳೆಯ ನಿದ್ದೆ. ಕೆಂಪಗೆ ಬೆಚ್ಚಗೆ ಮೆತ್ತಗಿದ್ದ ಹೆಣ್ಣು ಮಗುವನ್ನು ಒಮ್ಮೆ ಕಣ್ಣು ಬಿಟ್ಟು ನೋಡಿ ಮಗ್ಗುಲಿಗೆ ಹಾಕಿಕೊಂಡು ಸುಮ್ಮನೆ ನಿದ್ದೆ ಹೊಡೆದಿದ್ದೆ. ಬೆಳಿಗ್ಗೆ ಏಳು ಗಂಟೆಗೆ ಅಮ್ಮ ಕಳಿಸಿದ ಸೊಗಸಾದ ಪರ್ ಕೊಲೇಟೆಡ್ ಕಾಫಿ ಕುಡಿದು ಮತ್ತೆ ನಿದ್ದೆ. ಹತ್ತು ಗಂಟೆ ವೇಳಗೆ ಸ್ಪೆಷಲ್ ವಾರ್ಡಿಗೆ ಹಾಕಿದರು. ಮಧ್ಯಾಹ್ನದ ಮೇಲೆ ನನಗೆ ಎಚ್ಚರ ನನ್ನ ಆಯಾ ಕೆಲಸ ವಹಿಸಿಕೊಂಡಿದ್ದ ಅಮ್ಮ ಹೊರಗೆ ಯಾರ ಜೊತೆಯೋ ನಮ್ಮ ಮನೆ ಮಠ ಮದುವೆ ಮಕ್ಕಳ ಪ್ರವರ ಹೇಳುತ್ತಿದ್ದಳು. ಆಕೆ ಎಲ್ಲ ಕೇಳಿ ಕೊನೆಗೆ "ಪುಣ್ಯವಂತರಮ್ಮ ನೀವು ಮುಖ್ಯ ಎಲ್ಲಕ್ಕೂ ಪಡಕೊಂಡು ಬಂದಿರಬೇಕು. ನನ್ನ ಹಣೇಬರಹ ನೋಡಿ, ನಾನಿನ್ನೂ ಏನೇನು ನೋಡಬೇಕೋ" ಎನ್ನುತ್ತ ಒಳಗೆ ಬಂದರು. ಮಗು ನೋಡಿದರು.

ಏನಮ್ಮ ಚೆನ್ನಾಗಿದೀಯ? ನನ್ನ ಮಗಳೂ ಇಲ್ಲೇ ಜನರಲ್ ವಾರ್ಡಿನಲ್ಲಿದ್ದು ನಿನ್ನ ತಂದ್ ಹಾಕಿದಾಗ ನೋಡಿದ್ದೆ, ಈಗ ಎಚ್ಚರವಾಗಿದ್ದೀ ಯೇನೋ ನೋಡೋಣಾಂತ ಬಂದೆ"

ಎಂದು ಒಂದು ಬ್ರೆಡ್ಡಿನ ಪ್ಯಾಕನ್ನು ಲಾಕರಿನ ಮೇಲಿಟ್ಟು ಸ್ವಲ್ಪ ಹೊತ್ತು ಕುಳಿತರು. ನನಗೆ ಅವರು ಯಾರು ಅಂತಲೇ ತಿಳಿಯಲಿಲ್ಲ. ಎಲ್ಲೋ ನೋಡಿದ ನೆನಪು, ಐಬು ಕಾಣದ ಹಾಗೆ ನಕ್ಕು "ಚೆನ್ನಾಗಿದೀನಿ" ಅಂದು ಸ್ವಲ್ಪ ಹೊತ್ತು ಸುಮ್ಮನಿದ್ದು ಕಣ್ಣು ಮುಚ್ಚಿಕೊಂಡೆ, ಆಕೆ "ಬರ್ತೀನಮ್ಮ ನಿಮ್ಮ ಮಗಳಿಗೆ ಒಳ್ಳೇ ನಿದ್ದೆ" ಎನ್ನುತ್ತ ಎದ್ದು ಹೋದರು ಸ್ವಲ್ಪ ಹೊತ್ತಿನ ಮೇಲೆ "ಯಾರಮ್ಮ ಅವರು" ಎಂದೆ.

"ಅಯ್ಯೋ ಖರ್ಮ, ಆಕೆ ಗೊತ್ತಿಲ್ವೇನೇ ನಿನ್ನ ಜೊತೇಲಿ ಓತ್ತಿದ್ಲಲ್ಲ ಪ್ರತಿಭಾರಾಣಿ ಅವರಮ್ಮ ಅವಳೂ ಇಲ್ಲೇ ಇದಾಳಂತೆ ಜನರಲ್‌ವಾರ್ಡಲ್ಲಿ ಸಧ್ಯ ನಮಗೆ ಇಲ್ಲಿ ಸಿಕ್ತಲ್ಲ. ಪಕ್ಕದ ಬೆಡ್ಡೇ ಅವಳದ್ದು ಖರ್ಮ ಗಬ್ಬುನಾತ, ರಾಮಚಂದ್ರ ಪರಮಾತ್ಮ...." ಎಂದು ಓಡುತ್ತಿದ್ದ ಅಮ್ಮನ ರೈಲಿಗೆ ಬ್ರೇಕ್ ಹಾಕುವ ಪ್ರಯತ್ನ ಮಾಡಿದೆ,, "ಏನಾಗಿದೆಯಂತೆ ಪ್ರತಿಭಾಗೆ"

"ಇನ್ನೇನಾಗುತ್ತೆ, ಮೂರುಸಾಕ್ ತಿಂಗ್ಳಾಗಿತ್ತಂತೆ, ಯಾರೋ ಮಿಡ್ ವೈಫ್ ಹತ್ತಿರ ಏನೋ ಮಾಡಿಸಿಕೋಡಿದ್ದಾಳೆ. ಅದು ವಿಪರೀತಕ್ಕಿಟ್ಟು ಕೊಂಡಿದೆ, ತೀರ ಕೈ ಮೀರಿದ ಮೇಲೆ ಇಲ್ಲಿಗೆ ತಂದಿದ್ದಾರೆ. ಡಾಕ್ಟರು ಬದುಕೋಹಾಗಿಲ್ಲ ಯಾಕೆ ಕರಕೊಂಬಂದ್ರಿ ತೊಗೊಂಡ್ಹೋಗಿ ಅಂದ್ರಂತೆ, ದುಡ್ಡಿಲ್ಲ ಕಾಸಿಲ್ಲ. ಆಕೆ ದಮ್ಮಯ್ಯ ದತ್ತಯ್ಯ....ಅಂದು ಜನರಲ್‌ವಾರ್ಡಿಗೆ ಸೇರಿಸಿದ್ದಾರೆ. ಅವಳ ಪುರಾಣ ಕಟ್ಕೊಂಡ್ ನೀನೇನ್ ಮಾಡ್ತೀ ನೆಮ್ಮದಿ ಯಾಗಿ ಮಲಕ್ಕೋ."

ಬಾಗಿಲ ಪರದೆ ಸದ್ದಾಗಿ ಕತ್ತು ಹೊರಳಿಸಿದರೆ "ಇವರು" ಬಂದಿದ್ದಾರೆ ಬಿಳಿಡ್ರೆಸ್ ಮೇಲೆ ತೋಳಿಲ್ಲದ ಕೆಂಪು ಸ್ವೆಟರು ಕಂಡು ಕಣ್ಣಲ್ಲಿ ಪ್ರೀತಿ ಚಿಮ್ಮುತ್ತಿದೆ. ಕಣ್ಣು ನೋಡಿದರೆ ಸಾಕು ಕರಗಿ ಹೋಗಬೇಕು. ಗಂಜಿ ಹಾಲು ತಂದಿದ್ದಾರೆ. ಅಜ್ಜಿ ಮಾಡಿ ಕಳಿಸಿರಬೇಕು. ಸುಡುವ ಗಂಜಿ ಯಾಲಕ್ಕಿ ಘಮ ಘಮ ಅಮ್ಮ ಬಟ್ಟಲಿಗೆ ಬಗ್ಗಿಸಿ ಹತ್ತಿರ ತರುತ್ತಾಳೆ. ಮೆಲ್ಲಗೆ ಆಸರೆ ಕೊಟ್ಟು ಕೂರಿಸಿಕೊಳ್ಳುತ್ತಾರೆ. ಅಮ್ಮ ಗಂಜಿ ಕುಡಿಸು ತ್ತಾಳೆ. ಪ್ರತಿಭಾ ಈಗಾಗಲೇ ಎಷ್ಟುಸಾರಿ ಆಸ್ಪತ್ರೆಯಲ್ಲಿ ಬಿದ್ದು ಒದ್ದಾಡಿ ದ್ದಾಳೋ ಅವಳನ್ನು ಯಾರು ಹೀಗೆ ಕೂರಿಸಿಕೊಂಡು ಗಂಜಿ ಕುಡಿಸುತ್ತಾರೆ. ಅವಳು ಯಾರ ಕಣ್ಣಲ್ಲೂ ಕರಗಲಿಲ್ಲವೇನೋ. ಗಂಜಿ ಕುಡಿದು ಮಲಗಿದರೆ ಎಲ್ಲಿಂದಲೋ ಎತ್ತೆತ್ತಿ ಬಿಸಾಕಿದ ಹಾಗೆ, ಕಾಂಪೋಸಿನ ಮತ್ತು ತಿಳಿಯಾ ಗುತ್ತ ಕಾಡುವ ಪ್ರತಿಭಾ ಕೆಳ ಹೊಟ್ಟೆಯಲ್ಲಿ ತಿರುಚಿಕೊಳ್ಳುವ ನೋವು ಕರೆಂಟು ಕೊಟ್ಟಹಾಗೆ, ಹಳೆ ಅಗ್ರಹಾರ ಚಾವಡಿ ಬೀದಿ ನಂ. 501. ಪ್ರತಿಭಾ ನಿವಾಸ, ನಾನೂ ಡ್ಯಾನ್ಸ್ ಕಲೀತೀನಿ ತಾತ, ಡ್ಯಾನ್ಸು ಕಲಿತ ಬಸ್ ಮಾಲೀಕರ ಮಗಳು ಇಂಜಿನಿಯರ್ ಗಂಡನ ಜೊತೆ ಫಾರಿನ್ನಿಗೆ ಹೋದಳು, ಅವಳಿಗೆ ಚೀಲಿಯಾದವಳು ಪ್ರತಿಭಾ. ಅತ್ತೆ ಮಗನ ನೆರಳಿನಲ್ಲಿ ನಾನು, ಎಷ್ಟುಜನ ಕ್ಲಾಸ್‌ಮೇಟ್ಸು, ಕಲೀಗ್ಸು, ದೂರದ ಊರುಗಳಿಂದ ಕಾಗದ ಬರೆ ಯುವ ಪೆನ್ ಫ್ರೆಂಡ್ಸ್, ಯಾರೂ ಲಕ್ಷ್ಮಣರೇಖೆಗಳನ್ನು ಮೀರಲಿಲ್ಲ, ಬಿಸಿ ಬಿಸಿಯಾಗಿ ಬುಳುಂಕನೆ ಕಾಲಸಂದಿಯಿಂದ ಏನೋ ಹರಿದಂತೆ, ಎಲ್ಲಾದರೂ ಭಾಷಣಕ್ಕೆ ಹೋದರೆ ಪ್ರತಿಭೆಯ ಕಥೆ ಹೇಳಬೇಕು. ನಿಮ್ಮ ಪ್ರತಿಭೆ

ಬೆಳಸಿಕೊಳ್ಳಿ ಎಂದು ಯಾರಿಗೂ ಹೇಳಬಾರದು

"ಯಾಕೆ ಹಾಗೆ ಒದ್ದಾಡ್ತೀಯ ಕಾಲು ಜಾಡಿಸಬೇಡ ಸುಮ್ಮನೆ ಮಗ್ಗುಲಾಗಿ ಮಲಕ್ಕೋ"...ಅಮ್ಮ ಗದರಿಸುತ್ತಾಳೇನೋ.

ನರ್ಸ್ ಬಂದು ಎರಡೂ ಕಡೆಯ ಪರದೆ ಮುಚ್ಚಿ ವಾಶ್‌ಕೊಟ್ಟು ಬೆಚ್ಚಗೆ ಮಾಡಿ ಒಂದು ಇಂಜೆಕ್ಷನ್ ಚುಚ್ಚಿ ಟೆಂಪರೇಚರ್ ನೋಡಿ, ಪಾಪನ ಕೆನ್ನೆ ತಟ್ಟಿ ಒಂದು ಮುಗುಳುನಗೆ ಎಸೆದು ಗುಲಾಬಿ ಜಾರ್ಜೆಟ್ ದಾವಣಿ, ಗುಂಗುರು ಗೂದಲು ತುಂಬು ಬಾದಾಮಿ ಮುಖ, ಈಗ ನರಳುವ ಕೊಳೆ ಯುವ ಸೆಪ್ಟಿಕ್ ಕೇಸ್–ಬದುಕೊಲ್ಲ ಅಂದರಂತೆ. ಬಾಗಿಲಿನ ಕಡೆ ನೋಡಿದರೆ ಸ್ಪೆಷಲ್ ವಾರ್ಡಿನ ನೀಲಿ ಪರೆದೆ,ಜ ನರಲ್ ವಾರ್ಡಂತೆ ಗಬ್ಬುನಾತ ಅಂದಳು ಅಮ್ಮ. "ಅಮ್ಮಾ...ಸೊಂಟ ಚಳುಕ್ ಅನ್ನುತ್ತೆ...ಅಮ್ಮಾ ಪ್ರತಿಭಾ" "ಏನು ಮಗು...ಏನು ಬೇಕು" ಅಮ್ಮ ರಗ್ಗು ಸರಿಮಾಡುತ್ತಾಳೆ. "ಹೊರ ಳಾಡಬೇಡಮ್ಮ...." "ಅಮ್ಮ ಪರದೆ ತೆಗಿ..." "ಬೇಡಮ್ಮ ಸೀತಗಾಳಿ... ಥಂಡಿ ಆಗುತ್ತೆ" ನಿಮ್ಮ ಫ್ರೆಂಡ್ ಸಿನಿಮಾಸ್ಟಾರ್ ಎಲ್ರೀ, ಆ ಸುಡುಗಾಡು ಸಿನಿಮದಾಗ ಯಾರ್‍ಯಾರ್ ಏನೇನು ಹೇಳ್ತಾರೋ ಎಲ್ಲ ಕೇಳ್ಬೇಕಲ್ಲ...ಹೊಟ್ಟೆ ಪಾಡಿಗೆ ಕನ್ನಡ ಮೀಡಿಯಂ 'ಬಿ' ಸೆಕ್ಷನ್ ಪ್ರತಿಭಾರಾಣಿ...ಹಾವಾಡಿಗರ ನೃತ್ಯ...ಪ್ರಥಮ ಬಹುಮಾನ...ಬೇಡಮ್ಮ ಬೇಡ...ನೀರು ನೆರಳಿಲ್ಲದೆ ನನ್ನ ಒಣಗಿಸಬೇಡ...ಈಗ ತಾನೆ ಹೆಡೆಯಾಡಿಸುತ್ತಿದ್ದೇನೆ ಯಾರನ್ನಾದರೂ ಕಚ್ಚಿ ವಿಷವಿಳಿಸಿಕೊಳ್ಳುತ್ತೇನೆ.

ಹಾವಡಿಗನಿಗೆ ಹಾವು ಕಚ್ಚಿದರೆ...

"ಹಸಿವಿಗನ್ನವನಿಕ್ಕಿ ವಿಷವ ನಿಳುಹ ಬಲ್ಲಡೆ......"

ಹಾವಾಡಿಗನ ಹೆಂಡತಿ ಅಳುತ್ತಾ ಔಷಧಿ ಸೊಪ್ಪು ಕೀಳುತ್ತಾಳೆ, ಯಾರಾದರೂ ಬದುಕಿಸಿಕೊಳ್ಳಿ ಬಡವಿ. ನನ್ನ ಗಂಡ ಸಾಯುತ್ತಾನೆ.... 'ಕ್ರೌಂಚ ಮಿಥುನ' ನೃತ್ಯ ರೂಪಕ...ಗಡ್ಡದ ಮುದುಕ ಶಾಪ ಕೊಟ್ಟಿದ್ದಾನೆ .... "ಮಾನಿಷಾದ ಪ್ರತಿಷ್ಠಾತ್ವಮಗಮ ಶಾಶ್ವತೀ ಸ್ಸಮಾ"

"ಬಾಡಿ ತೊಗೊಂಡು ಹೋಗಿ...ನಾವು ಮೊದಲೇ ಹೇಳಿದಿವಿ ಅಡ್ಮಿಟ್ ಮಾಡಿಕೊಳ್ಳಲ್ಲ ಅಂತ, ಸೆಪ್ಟಿಕ್ ಆಗಿ ಕೊಳೆಯಾಕತ್ತಿದೆ... ಮೊದಲೇ ಬಂದಿದ್ದರೆ ಏನಾದರೂ ಮಾಡಬಹುದಿತ್ತು.

ಅಮ್ಮ ಮೆಲ್ಲಗೆ ಎದ್ದು ಬಾಗಿಲಿಗೆ ಹೋಗುತ್ತಾಳೆ ಅಮ್ಮನ ಬೆನ್ನ ಹಿಂದೆ ಹೋಗುವ ತವಕ ಮಗ್ಗುಲಲ್ಲಿ ಪಾಪು ಮೊಲೆ ಕುಡಿಯುತ್ತಿದೆ... ಸ್ಪೆಷಲ್ ವಾರ್ಡಿನ ಪರದೆಗಳು ಕಣ್ಣಿಗೂ ಅಡ್ಡ ಆಗಿವೆ. ಎಲ್ಲ ಮುಗಿದು ಹೋಗಿರಬೇಕು. ಗೋಡೆಗೆ ಅಂಟಿಸಿದ ಪೋಸ್ಟರಿನಲ್ಲಿ ಸೀರೆಯಿಂದ ಬಿಕಿನಿ ವರೆಗೆ ವೈಯಾರವಾಗಿ ನಿಂತ ಪ್ರತಿಭಾ...ಪ್ರತಿಭಳ ಅಮ್ಮ ಬಾಯಿಗೆ ಸೆರಗು ತುಂಬಿ ಅಳುತ್ತಿರಬೇಕು. ರುಕ್ಕು ಜಾವೋ ಜಾನೇವಾಲೀ ರುಕ್ ಜಾ ಸ್ಟ್ರೇಚರ್ ತರುತ್ತೇವೆ ದುಡ್ಡು ಕೊಡಿ...ಧಾ ಗಿ ನಕ ನಕ ದಿನ....ಧಾಗಿನಕ ನಕ ಧಿನ ಥಾಥೈಯಾ ಬಂ...ದಳೆ ರಾ... ಧೆ....ಯಮ್ಮ...ನೆಯ ತಡಿಗೆ...

ಘನ ಶ್ಯಾಮ ಸಂಂದರಾ...ಶ್ಯಾಮ ಸುಂದರೀ ನ ವ ನವೋನ್ಮೇಷ ಶಾಲಿನೀ ಪ್ರತಿಭಾ....ಮತಾ ತಾ ತಾ ತಾ ವಿರಹಿಣಿ ರಾಧೆ ಆಕ್ರಂದಿಸು ತ್ತಾಳೆ....ಸಾ....ವಿರಹೇ ತವ ದೀನಾ....ರಾಧಾ......



# ತಾ. ಬೋ. ಪ್ರೆ. ಮಾದೇವಣ್ಣ

—ಟಿ. ಗಿರಿಜ

ಊರು ಅಂದ್ರೆ ಬರೀ ಊರಲ್ಲ. ದೊಡ್ಡದಲ್ಲ. ಸಣ್ಣ ತಾಲ್ಲೂಕು ಸ್ಥಳ. ದೊಡ್ಡದಿರಲಿ, ಸಣ್ಣದಿರಲಿ, ತಾಲ್ಲೂಕು ಅಂದ ಮೇಲೆ ಏನಿದ್ದೀತೂ—ಏನು ಇರಾಕಿಲ್ಲ ? ಮೇಜು, ಕುರ್ಚಿ ಕಿಟಕಿ, ಬಾಗಿಲು, ಎಲ್ಲೆಂದರಲ್ಲಿ ಅಲ್ಲಿ ಕೈಚಾಚಿ ಕಾಸು ಕೀಳ್ತಕ್ಕಂತ ತಾಲ್ಲೂಕು ಕಛೇರಿ ಇತ್ತು. ತಲೆಗೆಲ್ಲ ಒಂದೇ ಮಂತ್ರ ಅನ್ನೋ ಅಂತ ಔಷಧಿ ಕೊಟ್ಟು ಕೈ ತೊಳ್ಕೊಂಡು ಜೇಬು ಭರ್ತಿಮಾಡಿಕೊಳ್ಳೋಂತ ಜನದ ಆಸ್ಪತ್ರೆ ಇತ್ತು. ಜೊತೆಗೆ ದನದ್ದು ಇತ್ತು. ಜನದ್ದೋ—ದನದ್ದೋ...ಅಂತು ಆಸ್ಪತ್ರೆ ಇದ್ದು...ಪಾಠಕ್ಕೆ ಬಂದ್ರೆ ಪಾಸು . ಇಲ್ಲದಿದ್ರೆ .. ? ಅಂದು....ತಮ್ಮ ಹೊಲಗದ್ದೆಗಳ ಕಡೆಗೆ ಹೋಗುವ ಮೇಷ್ಟ್ರು ಇದ್ರು... ದನದ ದೊಡ್ಡಿಯಂತಹ ಶಾಲೆಗೆ ಸಣ್ಣ ಮಕ್ಕಳು ಭರ್ತಾಇದ್ವು...ಮಳೆ ಬಂದ್ರೆ ಸಾಲಿ ಒಳಗೆ ನೀರು ಸುರೀತ್ತಿತ್ತು... ಬಿಸಿಲು ಬಂದ್ರೆ ಎಳೆ ಮಕ್ಕಳು ಚೆನ್ನಾಗಿ ಒಣಗ್ತಾನೂ ಇದ್ವು....ಯಾಕಂದ್ರೆ ಇದು ಕನ್ನಡ ಸಾಲಿ ಆಗಿತ್ತು. ಇಪ್ಪತ್ತು ನಾಲ್ಕು ಘಂಟೆಯೂ ಸೋರಿ ಹೋಗುವ ಸರ್ಕಾರಿ ಕೆಂಪು ಬಸ್ಸುಗಳೂ ಬರ್ತಿದ್ದವು. ದನ ತುಂಬಿದಂಗೆ ಜನ ತುಂಬಿಕೊಂಡು ಬರೋ ಖಾಸಗಿ ಬಸ್ಸು ಬರ್ತಿದ್ದವು....ಎಲ್ಲೆಂದರಲ್ಲಿ ಕೋರ್ಸ್ಕಂಡು, ತೆರಕಂಡು ನಿಂತಿರೋ ಸಿನಿಮಾ ಹೆಂಗಸರ ಫೋಟೋ ಹಾಕಿಕೊಂಡಿರುವ 'ಏರ್ ಕಟ್ಟಿಂಗು ಸೆಲೂನು'ಗಳೂ ಇದ್ದವು. ಇಷ್ಟೆಲ್ಲ ಇದ್ದ ಮೇಲೆ ಸ್ಟ್ರೇಕೂ ನಡೀತಿದ್ದವು ಅನ್ನಾಕೆ ಸಾಕ್ಷಿ ಅಂದ್ರೆ-ಈರಯ್ಯನ ತಿಂಡಿ ಅಂಗಡಿಗೆ ಹೋಗಿ ಕೇಳಿದ್ರೆ ತಿಳೀತತೇ....ದುಡ್ಡು ದುಗ್ಗಾಣಿ ಕೊಡದೆ ವಡೆ ಮೆಣಸಿನಕಾಯಿ ತಿಂದು ಉಳಿದಿರೋ ತಿಂಡಿನೆಲ್ಲ ಲೂಟಿ ಮಾಡಿ, ಪಾಪ ಅವನ್ನ ದಿವಾಳಿ ಎಬ್ಬಿಸಿದ್ದು, ಗೋಕಾಕ್ ವರದಿ ಜಾರಿಗೆ ತರೋಕೆ

ಹೋರಾಡಿದ ಕೆಲಸಗೇಡಿಗಳು, ಇದನ್ನೇ ಒಂದು ಉದ್ಯೋಗ ಮಾಡಿಕೊಂಡು ಊರು ತುಂಬಾ ಕುಣಿದಾಡಿದ್ದನ್ನು ಕಂಡು ಕಟ್ಟಾ ಕನ್ನಡ ಪ್ರೇಮಿಗಳು ಒಬ್ಬರು-ಇದೆಂತಹ ನಾಚಿಕೆಗೇಡು....ನಮ್ಮ ಕರ್ನಾಟಕದಲ್ಲಿ ಏನು ಕೆಂಪ್ರ ಮೂತಿಯವರಿದ್ದಾರೆಯೇ ? ನಾವು ಈ ರೀತಿ ಕನ್ನಡ ಜಾರಿ ಕೊಡಿ ಅಂತ ಕೇಳಲಿಕ್ಕೆ? ಇದು ಸಹಜವಾಗಿಯೇ ಕರ್ನಾಟಕದಲ್ಲಿ ಹುಟ್ಟಿದ ಪ್ರತಿಯೊಬ್ಬನ ಕರ್ತವ್ಯ ಕನ್ನಡವನ್ನು ಬಳಕೆಗೆ ತರುವುದು. ನಮ್ಮದನ್ನ ನಾವು ಅಳವಡಿಸಿ ಕೊಳ್ಳಲಿಕ್ಕೆ ಈ ರೀತಿ ಬೇಡಿಕೇ ಬೇಕೆ ? ಇದನ್ನ ಯಾರೂ ಕೊಡಬೇಕಾಗಿಲ್ಲ. ಕನ್ನಡ ಜಾರಿ ಕೊಡಿ ಅಂತ ಯಾರೂ ಬೇಡಿಕೋ ಬೇಕಾಗಿಲ್ಲ. ಕನ್ನಡ ನಮ್ಮ ಭಾಷೆ....ಕನ್ನಡ ನಮ್ಮ ಉಸಿರು....ಕನ್ನಡದ ನೆಲ - ಕನ್ನಡದ ಜಲ....ಹೊಳೆ ನೀರಿಗೆ ದೊಣ್ಣೆನಾಯ್ಕನ ಅಪ್ಪಣೆಯೇ ?–ಕನ್ನಡನ ಕೇಳೋ ರಿಗೂ ಕನ್ನಡನ ಹಾಗೆ ಕೊಡ್ತೀವಿ ಹೀಗೆ ಕೊಡ್ತೀವಿ–ಅಂತ ಅಮವಾಸೆ ದಾನದ ಜನರಿಗೂ ಛೀಮಾರಿ ಹಾಕಿದ್ರು....

ಇಷ್ಟೆಲ್ಲ ಇರಬೇಕಾದ ಊರಿಗೆ-ತಾಲ್ಲೂಕ್ ಬೋರ್ಡು, ಬೋರ್ಡ್ ಮೆಂಬರುಗಳು, ಮೆಂಬರುಗಳಿಗೊಬ್ಬ ಪ್ರೆಸಿಡೆಂಟ್....

ಆ ಪ್ರೆಸಿಡೆಂಟೇ ಮಾದೇವಣ್ಣ....!

ಮಾದೇವಣ್ಣ ಊರಿಗೆಲ್ಲ ಒಂದು ಥರಾ ಪಾಳೇಗಾರ ಇದ್ದಾಂಗೆ !

ನಮ್ಮ ಮಾದೇವಣ್ಣ ಇದ್ರೆ ಸೈಬಿಡಪ್ಪಾ... ಇಲ್ಲದಿದ್ರೆ ಯಾತರದ್ದು ? ಅಂತ ಮಾದೇವಣ್ಣನ ಬಗ್ಗೆ ಹಗಲೂ ಮೂರೂ ಹೊತ್ತು ಜನ ನೆನಸಿದ್ದೇ ನೆನಸ್ತಿದ್ರು....ಒಳ್ಳೇದಕ್ಕೂ. ನೆನಸ್ತಿದ್ರು....ಕೆಟ್ಟದ್ದಕ್ಕೂ ನೆನಸ್ತಿದ್ರು..... "ಮಾದೇವಣ್ಣ ಅಂದ್ರೆ ಒಂದೇ ನಾಣ್ಯದ ಎರಡು ಮುಖ. ಥತ್ತೇರಿಕೆ.... ಅಂತ ತೂರಾಮುಚ್ಚೆ ಆಡಾಕೆ ಕುಂತ್ರೆ-ಸತ್ತ್ರಕೂ ಸೈ....ಹೊತ್ತ್ರಕೂ ಸೈ...! ಊರ್ನಾಗೆ ಏನಾನ್ನ ಆಗಲಿ, ಅಲ್ಲಿ ಮಾದೇವಣ್ಣ ಇರಾಕೆ ಬೇಕು....ಅವ್ನ ಇಚಾರ್ದಾಗೆ ಅಸಡ್ಡೆ ಮಾಡಾಕೆ. ಅವನೇನೂ ಬರೀ ಮಾದೇವಣ್ಣ ಅಲ್ಲಲ್ಲ...?

ತಾಲ್ಲೂಕು ಬೋರ್ಡ್ ಪ್ರೆಸಿಡೆಂಟ್ ! ತಾಲ್ಲೂಕಿನ ಧಣಿ ಇದ್ದಂಗೆ ! ಒಳ್ಳೆ ತಲಿಗಾರ ! ಇಲ್ಲದಿದ್ರೆ ಸುಮ್ನೆ ಹುಡುಗಾಟನ ?" ಅಂಬ್ತಿದ್ದ ಪರಮ.

ಮಾದೇವಣ್ಣ ಎಲ್ಲಿ ಇರ್ತಾನೋ ಅಲ್ಲಿ ಈ ಚೆಂಚಾ ಪರಮ ಇರಾಕೆ ಬೇಕು ! ಊರಾಗೆ ಯಾರ ಮನ್ಯಾಗೆ ಬ್ಯಾಳೆಕಾಳು ಬೆಂದಿವೆ ? ಯಾರ ಮನ್ಯಾಗೆ ಉಂಡವ್ರೆ...ಯಾರ ಮನ್ಯಾಗೆ ಉಪಾಸ ಐಯ್ದಾರೆ....?—ಎಲ್ಲ ಸುದ್ದಿನೂ ಗೊತ್ತಿರ್‍ತಿತ್ತು ಪರಮನಿಗೆ.

ಮಾದೇವಣ್ಣ ಹಗಲೆಲ್ಲ ಊರು ಉಗಾದಿ ಮಾಡಿ, ರಾತ್ರಿ ಉಂಡು ಅಟ್ಟಮಾಳಿಗ್ಯಾಗ ಹಂಗ ಅಡ್ಡಾದ-ಅಂದ್ರೆ ಪರಮ ಸುರುಮಾಡ್ತಿದ್ದ ಸುದ್ದಿ ಹೇಳಾಕೆ. ಊರಿನ ಸಂದಿಗೊಂದಿ ಸುದ್ದಿ ಬೇಕಂದ್ರ, ಊರಿನ ಸಣ್ಣ ಪತ್ರಿಕೆ ಓದೋದೇ ಬೇಡ....ಪರಮನ್ನ ಹಿಡಿದ್ರೆಸಾಕು....ಇವತ್ತು ಹಾಗೆ.

—ಮಾದೇವಣ್ಣಾ.. ಈರ್‍ಗಾಸಿ ಈರಭದ್ರಣ್ಣ ಇಲ್ಲೇ....? ಅವನ ಹೆಂಡ್ತಿ ಗಂಡು ಮಗನ್ನ ಹಡೆದವಳೆ....

"ಬಸಿರಿದ್ಲು....ಹಡಿದ್ಲು....ಅದ್ಯಾವ ಸುದ್ದಿಲೆ ಸೂಳೆಮಗನೆ ?" ಅಂತಾನೆ ಬೀಡಿ ಹಚ್ಚಂತ ಮಾದೇವಣ್ಣ. ಬೀಡಿ ಸೇದಾದು ಒಂದು ಕಲೆನೆ ! ಬಿಳಿ ಖಾದಿ ಪಂಚೆ ಉಟ್ಗಂಡು, ಖಾದಿ ಜುಬ್ಬಾ ಹಾಕ್ಕೊಂಡು....ಮ್ಯಾಲ ವ್ಯಾಸ್ಲೀಣಿ ಬಣ್ಣದ ವಸ್ತ್ರ ಹಾಕಿಕೊಂಡು, ಎರಡು ತುದಿ ಕತ್ತಿ ಅಷ್ಟು ಚೂಪಾಗಿರಬೇಕು....ಅಂತ ಗಾಂಧಿ ಟೋಪಿ ಇಟ್ಗಂಡು ತಾಲ್ಲೂಕು ಕಛೇರಿ ಹತ್ರ, ಬಸ್‌ಸ್ಟ್ಯಾಂಡಿನಾಗೆ, ಮುನ್ಸಿಪಲ್ ಆಫೀಸ್ ಹತ್ರ, ಅವರಿವರ ಜೊತೆ ಇದ್ದಾಗ, ಸಿಗರೆಟೇ ಆಗಬೇಕು....ಆದ್ರೆ ಮನೇಲಿ ಇದ್ದಾಗ ಹಳ್ಳಿ ಕಡೆ ಹೊರಟಾಗ ಬೀಡೀನೆ ಸೇದೋದು. ಯಾರನ್ನ ಕೇಳಿದ್ರೆ ಬೀಡಿನ ಕೊಡ್ತಾನೆ....ಯಾರನ್ನ ಕೊಟ್ರೆ ಸಿಗರೇಟು ತಗಂಬ್ತಾನೆ ಮಾದೇವಣ್ಣ. ಇಂತ ಮಾದೇವಣ್ಣಗೆ ಪರಮ ಈರ್‍ಗಾಸಿ ಈರಭದ್ರಣ್ಣನ ಹೆಂಡ್ತಿ ಗಂಡು ಮಗನ್ನ ಹಡೆದ ಸುದ್ದಿ ಹೇಳದ್ರೆ ಯಾವ ದೊಡ್ಡ ಸುದ್ದಿ?

'ಅ ಯ್...ಅಂಗಲ್ಲ ಮಾದೇವಣ್ಣ....ನೀಕೇಳಿಲ್ಲೇನು? ಈರಭದ್ರಣ್ಣ ಹುಸುಗೂಸಿನ್ನ ಹಸಿಮೈ ಬಾಣಂತೇನೂ ಹೊರಗೆ ಹಾಕವ್ನೆ! ಪಾಪ ಆವಮ್ಮ ಅವರ್ಮನಿತಾವಿನ ಹನುಮಂತರ್ರಾಯನ ಗಂಡ್ಯಾಗೆ ಆವಮ್ಮ ಕೂಸು ಕಟ್ಗಂಡು ಮುದುರಿಕೊಂಡ್ಯೆತೆ ?" "ಯಾಕೆ ಹಂಗೆ ಮಾಡಿದ ಆ ಈರಭದ್ರಣ್ಣ?" ಅಂತ ಮಾದೇವಣ್ಣ ಎದ್ದು ಕುಂತ್ಗಂಡ, ಅದೇಕಣ್ ಮಾದೇವಣ್ಣ...ಕೂಸು ಈರಭದ್ರಣ್ಣನಂಗೆ ಕರ್‍ರಗೆ ಹುಟ್ಟದೆ ಬೆಳ್ಳಗೆ ಹುಟ್ಟೈತಂತೆ...! ಕೂಸಿನ ಮೂಗು ಉದ್ದ ಐಯ್ತಂತೆ! ಇವನ ಮೂಗಿನಂಗೆ ಮಂಡ ಮೂಗು ಇಲ್ವಂತೆ! ಹಿಂಗಂತ ಈರ್ಬದ್ರಣ್ಣ ಗದ್ದಲ ಎಬ್ಬಿಸವ್ನೆ....! ನೀ ಬ್ಯಾರೇರ್ನ ಕರಕೊಂಡು ಹಡೆದಿರಬೇಕು ಅಂತ ತರ್‍ಲೆ ಮಾಡಿ ಹೊರಗೆ ಹಾಕಿ ಕುಂತುಬಿಟ್ಟವ್ನೆ! ಅಕ್ಕ ಪಕ್ಕದ ಮಂದಿಯಲ್ಲ–' ಏ....ಈರ್ಬದ್ರಣ್ಣಾ....ಇದು ಅಲ್ಲ ತಗೀ ಯಾರಾರ ನಕ್ಕಾರು....ನಿನ್ನ ಮಾತ ಕೇಳಿ... 'ಅಂತ ಗ್ಯಾನ ಮತಿ ಹೇಳಿದ್ರೂವೇಸು ಮುಷ್ಣಿ ತಿರವಿಕೊಂಡು ಕುಂತವ್ನೆ.......!

ಈ ಸುದ್ದಿ ಕೇಳಿದ ಕೂಡ್ಲೆ ಮಾದೇವಣ್ಣ ಅಂಗಿ ಹಾಕ್ಕಂಡೇ ಬಿಟ್ಟ. ಹೊಂಟೇ ಬಿಟ್ಟ! ಯಜಮಾನ ಹಿಂದಿನ ಸಾಕಿದ ನಾಯಿಯಂತಹ ನಾಯ ಮಗ ಪರಮನೂ, ಈರಭದ್ರಣ್ಣನ ಮನೆಗೆ ಬಂದೆಬಿಟ್ಟ. "ಗುಡಿಯಾಗೆ ಥಂಡಿ ಗಾಳಿ.. ಬಾಣ್ತಿಗೇನಾರ ಸೀತ ಗೀತ ಆದೀತು...." ಆದೀತು ಅಂತ ಅವರು ಇವರು ಬಯ್ಯಾಕ ಹತ್ತಿದ್ರು ಈರಭದ್ರಣ್ಣನಿಗೆ!....ಮಾದೇವಣ್ಣ ಬಂದಿದ್ನ ನೋಡಿ "ಬಾರಪ್ಪಾ ಮಾದೇವಣ್ಣಾ .." ಅಂತ ಕಂಬ್ಳಿ ಹಾಸಿದ್ರು. –ಏನಪ್ಪಾ....ಈರ್ಬದ್ರಣ್ಣಾ...ಏನೋ ದೊಡ್ಡ ಸುದ್ದಿ ಕೇಳಿದ್ನೆಲ್ಲ....? ಪಾಡಲ್ಲ ಬಿಡು... ಹೋಗು ಹೆಂಡ್ತಿನೂ ಮಗನ್ನೂ ಕರ್ಕಂಡು ಬಂದು ಬಾಣ್ತೇನ ಪೈನಾಗಿ ನೋಡ್ಕೊ.. ಇಲ್ಲದಿದ್ರೆ ಮಂದಿ ಮುಷ್ಣಿಯ್ಯಾಲೆ ಕೈ ಇಟ್ಕಂಡು ನಕ್ಕ್ಕರು...! ಬುದ್ಧಿ ಗ್ಯಾನ ಎತ್ಲಾಗೆ ಇಟ್ಟಿದಿ ? ಕೂಸು ಹೆಂಗೆ ಹುಟ್ಟಿದ್ರೇನು? ಯಾರಿಗೆ ಹುಟ್ಟಿದ್ರೇನು ? ಒಟ್ಟನಾಗೆ ನಿಂದು ಅಂತಾರೋ-ಇಲ್ಲೋ ? ಹೋಗು ಹೋಗು....ಮನೆತನಕ್ಕ ದೀಪ ಹಚ್ಚಾಕ ಗಂಡು ಮಗ ಹುಟ್ಟಿದ ಅಂತ ಊರ್ಗೆಲ್ಲ ಹುಗ್ಗಿ ಹೋಳ್ಗಿ ಊಟ ಹಾಕ್ಸಾದು ಬಿಟ್ಟು.... ಯಾತರದ್ದೋ ? ಅಲವಂಗತನ ಸುರುವು ಮಾಡಿಕೊಂಡು ಕುಂತ್ಗಂಡಿದೀಯಲ್ಲ....?" ಅಂದಾಗ ಈರ್ಗ್ಯಾಸಿ ಈರಭದ್ರಣ್ಣ ಇನ್ನೂ ಬಿಗಿಯಾಗಿ ಕೂತ!

'ಇಲ್ಲಪ್ಪಾ....ಆ ಕೂಸು ನನಗೆ ಹುಟ್ಟಿಂದಗೆ ಕಾಣಿಸ್ತಾ ಇಲ್ಲ .. ನಾ ಆಕೀನ್ನ ಕರ್ಕೊಂಡು ಬರಲ್ಲ ನೋಡಪ್ಪಾ.

"ಬೆಳಗಿನ್ನ ಸುಟ್ಟು ಇದನ್ನ ಹೇಳ್ತಿಯಲ್ಲೋ ಈರಭದ್ರಣ್ಣ....? ಅಂದ್ರು ಮಂದಿ. ಮಾದೇವಣ್ಣ ಒಂದು ಸಾರಿ ಗದರು ಹಾಕಿದ—

"ಅಲ್ಲೋ ಈರಭದ್ರಣ್ಣಾ....ಊರು ಹೋಗು....ಕಾಡು ಬಾ ಅನ್ನೋ ಸುಡುಗಾಡು ಹೊತ್ತಿನಾಗ ಆ ಸಣ್ಣ ಹುಡ್ಗಿನ್ನ ಮೂರನೆ ಮದುವಿ ಆದಿ. ನಿನ್ನ ಈ ಮದ್ವಿ ನೋಡಿ ಊರಾಗಿನ ಜನ ಎಲ್ಲ ಮರಮರಾಂತ ಮರುಗಿದ್ರು! ಎಷ್ಟು ಕಷ್ಟ ಪಟ್ಟು ನಿನ್ನ ಮನೆತನದ ದೀಪ ಉರೀಲಿ ಅಂತ ಆ ಹುಡುಗಿ ಗಂಡ ಕೂಸಿನ್ನ ಹಡೆದುಕೋಟ್ರೆ, ಈಗ ಊರು ಹೊಲಗೇರಿ ಮಾಡಿಕೊಂಡು ಕುಂತ್ಗಂಡಿದೀ ಕುಂತ್ಗ! ನೋಡ್ರೆಪ್ಪಾ ಕೇಳ್ರಿ. ಆ ಕೂಸು ನನಗೇ ಹುಟ್ಟೈತಿ. ನಾ ಈರಭದ್ರಣ್ಣನ ಹೆಂಡ್ತಿನ ಕರ್ಕೊಂಡು ಹೋಗ್ತೀನಿ....ಈರಭದ್ರಣ್ಣಾ....ಮುಂದೆ ನೀನು ಈ ಊರಾಗೆ ಅದೆಂಗೆ ಜೀವನ ಮಾಡ್ತಿಯೋ ಮಾಡು, ನಾನು ನೋಡ್ತೀನಿ..."ಅಂತ ಎದ್ದೇ ಬಿಟ್ಟ ಮಾದೇವಣ್ಣ....ಅಲ್ಲೇ ಕುಂತಿದ್ದ ಬಸಕ್ಕನಿಗೆ ಹೇಳಿದ.

'ಬಸಕ್ಕಾ ಕೂಸು ಬಾಣಂತೀನ ನಮ್ಮ ಮನೇಗೆ ಕರಕೊಂಡು ನಡಿಯವ್ವಾ....ಗಾಡಿಗೀಡಿ ಕಟ್ಟಿಸಬೇಕೇನೋ ನೋಡು....ಲೇ....ಪರಮಾ.... ಅಲ್ಲಿ ಯಾರ್ದನ ಎತ್ತು ಗಾಡಿ ಇದ್ರೆ ಕಟ್ಟಲೇ " ಎಂದಾಗ, ನಿಜಕ್ಕೂ ಈಗ ಈರಭದ್ರಣ್ಣನಿಗೆ ಏನು ಮಾಡಬೇಕು ಅಂತ ತಿಳಿದಂಗೆ ಆಗಿ,— "ಬ್ಯಾಡಪ್ಪಾ...ಮಾದೇವಣ್ಣಾ ಆಕೀನ್ನ ಕರ್ಕಂಡು ಬರ್ತೀನಿ...." ಅಂತೆ ಎದ್ದು ನಿಂತಾಗ—

'ನಡೀ ಹಾಗಾದ್ರೆ..:' ಅಂತ ಗುಡಿಗೆ ಬಂದಾಗ—ಪಾಪ ಮೂಲೆಯಲ್ಲಿ ಕಂಬಳಿ ಹೊತ್ಗಂಡು ಮಲಗಿದ್ದಳು ಈರಭದ್ರಣ್ಣನ ಚಿಕ್ಕ ವಯಸ್ಸಿನ ಮೂರನೇ ಹೆಂಡತಿ....ಹೋದವರ್ಷ ಮಾದೇವಣ್ಣನೇ ಮುಂದೆ ನಿಂತು ಹನುಮಂತರಾಯನ ಗುಡಿಗೆ ಲೈಟು ಹಾಕಿಸಿದ್ದ, ಅದೇ ಬೆಳಕಿನಲ್ಲಿ ನೋಡಿದ.

"ಎಲ್ಲೆವ್ವಾ....ತಾಯಿ ಕೂಸು ತೋರಿಸು" ಅಂದ ಮಾದೇವಣ್ಣ.... ಆಕೆ ಕೂಸು ತೋರಿಸಿದಾಗ—ಮಾದೇವಣ್ಣ ನೋಡಿಯೇ ನೋಡಿದ ಕೂಸನ್ನು!

-ಎಲ್ಲಾ ತನ್ನದೇ ಬಣ್ಣ, ತನ್ನದೇ ಮೂಗು...ತನ್ನದೆ ಪ್ರತಿರೂಪ' ಮುದುಕನ ಹುಡುಗಿಗೆ ಕೈ ಹಚ್ಚಿದ್ದಕ್ಕೂ ಚಿಂತೆಯಿಲ್ಲ...ಒಳ್ಳೆ ಮುತ್ತಿನಂತಹ ಹುಡುಗನೇ ಹುಟ್ಟಿದ್ದಾನೆ—! ಎಂದು ಕೊಂಡ ಮಾದೇವಣ್ಣ.

"ಚಿಂತೆಯಿಲ್ಲ ಬಿಡು...ಈರಭದ್ರಣ್ಣಾ....ಬಾಳೆ ಪಾಡು ಆದಾನೆ ನಿನ್ಮಗ! ಅಂತೆ ಹನುಮಂತರಾಯನ ಗುಡಿಯ ಚಾವಣಿಯೇ ಹಾಗಿಹೋಗು ವಂತೆ ನಕ್ಕ ಮಾದೇವಣ್ಣ. ಮಾದೇವಣ್ಣನ ಅಲೆ ಅಲ್ಲೆಯಾದ ನಗೆಯಲ್ಲಿ "ಎಲ್ಲಾ ನಿಮ್ಮ ಕೃಪೆ" ಎನ್ನುವಂತೆ ಹಸಿಮೈನ ಬಾಣಂತಿ ಕೂಸನ್ನೊಮ್ಮೆ, ಮಾದೇವಣ್ಣನನ್ನೊಮ್ಮೆ ತೃಪ್ತಿಯಿಂದ ನೋಡಿದಳು.

'ನಡಿಯೇ ಮನಿಗೆ ಹೋಗಾನ' ಅಂದ ಈರ್ಭದ್ರಣ್ಣ ಪೆಕರನಂತೆ

'ಅಂತೂ ನಮ್ಮ ಮಾದೇವಣ್ಣ ಅಂದ್ರೆ, ಮಾದೇವಣ್ಣ ನೋಡಪ್ಪ ... ಆ ಹುಡ್ಗಿನ್ನ ಬಾಳೇಕ ಹಚ್ಚಿದ...ಅಂತ ಹೊಗುಳುತ್ತಾ ನಡೆದರು ಮಂದಿ,

ಮಂದಿಯನ್ನೆಲ್ಲ ಕಳಿಸಿ ಬರುವಾಗ ಮಾದಿಗರ ಹಟ್ಟಿಯ ತುಕ್ರ ಸಣ್ಣೀರ "ಅಡ್ಡಬಿದ್ದೆವು 'ದ್ಯಾವ್ರೂ" ಅಂತ ಹಿಂದಿಂದೆ ಬಂದ್ರು.

'ಏನ್ರಲೆ ಕುಡಿದು ಊರತುಂಬ ಗದ್ದಲ ಮಾಡ್ತಿರಂತೆ?'

"ಇಲ್ಲ ದ್ಯಾವ್ರು...ಆಟಕ್ಕೂ ಈಗಿನ ಕಾಲದಾಗೆ ಯಾರು ಕುಡಿಯಂಗಿಲ್ಲ ಹೇಳ್ರಿ ಬುದ್ದೀ. ಅದಿರಲಿ ದ್ಯಾವ್ರು...ಇನ್ನೊಂದು ಕೆಲಸ ಮಾಡಿಕೊಡ ಬೇಕಲ್ಲ ತಾವು...?" ಏನು ಮಾಡಿ ಕೊಡಬೇಕ್ರಲೆ...ಸ್ಕೂಲು, ನೀರು. ದೀಪ ಎಲ್ಲಿ ಕೋಡ್ತಿದ್ದೀನಿ...ನಿಮ್ಮ ಮಕ್ಕಳು ಮರಿಗೆಲ್ಲ ಬಟ್ಟೆಬರೆ ಕೊಡ್ಸಿದ್ದೀನಿ- ಮನೆ ಬೇಕು ಅಂದಿ...ಮನೀನೂ ಆತು,-ಅಂತ ಮಾದೇವಣ್ಣ ಎಲ್ಲ ತನ್ನ ಕೈಯಿಂದ ಕೊಟ್ಟವನ ಹಾಗೆ ಹೇಳಿದ.

"ಎಲ್ಲ ಮಾಡಿಕೊಟ್ಟಿದ್ದೀರಿ ದೇವ್ರು ಆದ್ರೆ ನಮ ಕಟ್ಟಿಸಿ ಕೊಟ್ಟ" ಶೋ ಜನತಾಮನೆ....ಇನ್ನೂ ಒಂದು ವರ್ಷ ಆಗಿಲ್ಲ...ದ್ಯಾವ್ರು ಸೂರಿಗೆ ಸೂರೇ ಬೀಳ್ತಾವ್ರು...ಗೋಡೆಗೆ ಗೋಡೆನೆ ಕುಸಿತೈತೆ ! ಬಾಗಿಲು ಇಕ್ಕಿದ್ರೆ ಬಾಗಿಲೇ ಮುರ್ಕೊಂಡು ಬೀಳ್ತೈತೆ....

"ಹುಂ ..ಕೆಪಕೇನೊ ಕಿತ್ಗಂಡು ಬರ್ತಾವೆ....ಮುಂದೇನು ಗಾದಿ ಕೇಳಿ ಲ್ಲೆನ್ರುಲೆ? ವುಣ್ಯಕ್ಕೆ ಎಮ್ಮೆ ಕೋಟ್ರೆ ಹಿತ್ತಲಿಗೆ ಹೋಗಿ ಎಷ್ಟು ಹಲ್ಲಿಂದು ಅಂತ ಎಣಿಸಿನೋಡಿದ್ರಂತೆ...! ಈಗ ಏನು ಆಗಬೇಕು ಹೇಳ್ರಿ,?

"ಏನಿಲ್ಲ ದ್ಯಾವ್ರು...ಸರಕಾರದೋರಿಗೆ ಹೆ ಳಿ ನಮಗೆ ಕೊಟ್ಟಿರೋ ಜನತಾ ಮನೀನ ಒಂದಿಷ್ಟು ಬಂದೋಬಸ್ತು ಆಗಿ ಕಟ್ಟಿಸಿಕೊಡ್ರಿ.... ದ್ಯಾವ್ರು....!

ಮಾದೇವಣ್ಣ ಬಂದು ಕ್ಷಣ ನಿಂತು ಸಿಗರೇಟು ಪೂರಾ ಊದಿದ ಮೇಲೆ ಹೇಳಿದ ..ನಾ ಹೇಳಿದಂಗೆ ಕೇಳ್ತಿರೇನ್ರುಲೆ? ಯಾರಿಗೂ ಗೊತ್ತಾಗ ಬಾರದು. ಗುಟ್ಟಾಗಿ ನಡೀಬೇಕು, ನಿಮ್ಮ ನಿಮ್ಮ ಮನೀ ಸಾಮಾನು ಸಂದಟ್ಟು ಎಲ್ಲಾನು ಎಲ್ಲನ ಅಚ್ಚು ಕಟ್ಟಾಗಿ ಅಡಮಡಕಳ್ಳಿ .. ಗಡ್ಡಿ ಪಡಗಿ ಬಿಟ್ಟು ಹಳೀವು ಬಿಟ್ಟು ಹಟ್ಟಿಗೆಲ್ಲ ಬೆಂಕಿ ಹಾಕೆ ಮನಿಸುದ್ರಿ ...ಮುಂದಿನದು ನನಗೆ ಇರ್ಲಿ.... "ಅಂತ ಹೇಳಿದಾಗ ತುಕ್ರ ಸಣ್ಣೀರ ಕೈಮುಗಿದು ಹೋದ್ರು.

ಮುಂದೆ ಎಂಟು ದಿನ ಅನ್ನೋದ್ರಾಗೆ ಇದ್ದಕಿದ್ದ ಹಾಗೆ ಬೆಳಗಿನ ಜಾವದಲ್ಲಿ ಮಾದಿಗರ ಹಟ್ಟಗೆ ಬೆಂಕಿ ಬಿದ್ದು, ಹಟ್ಟಿ ಮಂದಿ ಬಂದು ಮಾದೇವಣ್ಣನ ಎಬ್ಬಸಿದ್ರು. ಪಾಪ . ಕಚ್ಚಿ ಬಚ್ಚಂಗೆ ಓಡಾಡಿ ಊರಾಗಿನ ಮಂದಿಯೆಲ್ಲ ಕರ್ಕಂಡು ಬಂದು ಬೆಂಕಿ ಆರ್ಸಿದ ಮಾದೇವಣ್ಣ, ಆಮ್ಯಾಲ ನಾಕು ಮಂದಿ ನಾಕು ಮಂದಿ ಕರೆಕೊಂಡು ಹೋಗಿ ಕೆಳಗಿನೋರ್ನ, ಮೇಲಿ ನೋರ್ನ ಕಂಡು ಕೈ ಮುಗಿದು ಅವ್ರುನ್ನು ಕರ್ಕೊಂಡು ಬಂದು ಮಹಜರ್ ನಡೆಸಿ-ಮನೆ ಸುಟ್ಕಂಡ ಮಾದಿಗರ ಹಟ್ಟಿಯೋರ್ಗೆ ಹೊಸ ಮನಿ ಕಟ್ಟ

ಕೊಳ್ಳೋಕೆ ಅದ್ಕೆ-ಇದ್ಕೆ ಅಂತ ಸಾವಿರಾರು ರೂಪಾಯಿ ಪರಿಹಾರ ಮಂಜೂರು ಮಾಡಿಸಿದ-ಆ ಕೊಡ್ಲೆ...ಆ ಸ್ಥಳದಲ್ಲೇ ..!ಒಂದು ವಾರ ಅನ್ನೋದ್ರಾಗೆ ಹಟ್ಟ್ಯಾಗ ಹೊಸದಾಗಿ ಮನಿ ಕಟ್ಟಾಕೆ ಸುರುವು ಅದುವು.... ಅದ್ರಾಗ ಸಣ್ಣೀರೆ ತುಕ್ರ ಒಳಗಿಂದೊಳಗ ಸಣ್ಣೀರ ತುಕ್ರ ಎಲ್ಲರಿಂದ ವಸೂಲಿ ತಂದು ಮಾದೇವಣ್ಣನ ಮುಂದಿಟ್ಟು ಕೈಮುಗಿದು ಹೇಳಿದ್ರು....'ಒಪ್ಪಿಸ್ಕೋ ಬೇಕು ದ್ಯಾವ್ರು'....

'ಆತು ಹೋಗ್ರಲೇ .. ಹೊಸೆ ಮನಿ ಆದ್ವಲ್ಲ....' ಅಂದ ಮಾದೇ ವಣ್ಣ ಕೈ ಜೋಬಿನಾಗೆ ತೂರಿಸಿಕೊಳ್ತ.

ಆಮ್ಯಾಲ ಇನ್ನೊ ಒಂದು ಕೆಲಸ ಮಾಡಿದ. ಹಟ್ಟಿಯೋರು ಅಲ್ಲಿ ಇಲ್ಲಿ ಅಂತ ಅಂಗಡಿ ಮನಿಯಾಗ ಸಾಲ ತೆಗಂಬ್ಸಿದ್ರಲ್ಲ ಅವ್ರಿಗೆಲ್ಲ ಹೇಳಿ ಬಂದ ಗುಟ್ಟಾಗಿ...ಹಟ್ಟಿ ಜನಕ್ಕೆ ಮನಿ ಕಟ್ಟಿಸಿಕೊಳ್ಳಾಕೆ ಸರಕಾರದೋರು ಬಾಳ ದುಡ್ಡುಕೊಟ್ಟಿದ್ದಾರೆ...ಈಗೆ ಏನಾರ ಮಾಡಿ ಮೊಂಡು ಹಿಡಿದು ನಿಮ್ಮ ಬಾಕಿ ವಸೂಲಿ ಮಾಡ್ಕಳ್ರಿ ಈಗ ಬಿಟ್ರೆ ಕೆಟ್ರಿ....ಅಂತ.

ಮಾದಿಗರ ಹಟ್ಟಿಯೋರಿಗೆ ಸಾಲ ಕೊಟ್ಟೋರು ಗರಿ ಹೊಡೆದು ವಸೂಲಿ ಮಾಡಿಕಂಡ್ರು ಸಬೂಬು ಕೇಳದೆ.

—ಇದ್ದ ಮನಿಗೆ ಬೆಂಕಿ ಹಚ್ಕಿಕಂಡ್ರು, ಸುಟ್ಟ ಮನಿಗೆ ಸರಕಾರ ದೋರು ದುಡ್ಡು ಕೊಟ್ರು, ಕೊಟ್ಟ ದುಡ್ನ ಅತ್ಲಾಗಿಷ್ಟು ಇತ್ಲಾಗಿಷ್ಟು ಹಂಚಿ ಹಲಾಕು ಮಾಡಿಕೊಂಡು ಕಟ್ಟೋ ಮನಿಗೆ ಸೂರು ಇಲ್ಲದಂಗೆ ಮಾಡಿ ಕೊಂಡ್ರು ಹಟ್ಟಿ ಜನ! ಆಟು. ಈಟು, ಉಳಿದೆ ದುಡ್ಡನ್ನ ನೋಡಿಕಂಡ್ರು— ಯಾವುದಕ್ಕೂ ಆಗಂಗಿಲ್ಲಿ ಉಳಿದ ದುಡ್ಡು....! ಬ್ಯಾಸ್ರ ಹತ್ತಿ-ಈಡಿಗರ ಸರಾಯಿ ಅಂಗಡಿಗೆ ನುಗ್ಗಿದ್ರು, ಕಂಠಪೂರ್ತಿ ಕುಡಿದ್ರು, ಕೈ ಕಾಲಿ ಮಾಡಿ ಕೊಂಡ್ರು, ಸೂರಿಲ್ಲದ ಮನ್ಯಾಗ ನಿಶಾ ಏರಿಸಿಕೊಂಡು ಎಲ್ಲ ಮರೆತು ಬಿದ್ದು ಹೊರಳಾಡಿದ್ರು

ತುಕ್ರ ಸಣ್ಣೀರ ನಂತೋರು-ಪಾಪ ಮಾದೇವಣ್ಣ ದುಡ್ಡು ಕೊಡಿಸಿದ್ರು

ಓಡಾಡಿ. ನಾವ ಬುದ್ಧಿವಂತ್ರಲ್ಲ...ಅಂತ ತಮಗೆಂತ ಬಡವರ ಹೇಳಿ ಅತ್ತುಕೊಂಡಾಗ, ಆ ಬಡವರು ಬಂದು ಮಾದೇವಣ್ಣಗ ಗಂಟು ಬಿದ್ರು.

—ಮಾದಿಗರ ಹಟ್ಟಿಯೋರ್ಗೆ ಮನಿ ಕಟ್ಟಿಕೊಳ್ಳಾಕೆ ದುಡ್ಡು ಕೊಡ್ಸಿರಿ ನಮಗೆ ಮನಿ ಕಟ್ಟಿಕೊಳ್ಳಾಕೆ ಜಾಗವು ಇಲ್ಲ...ನಾವು ನಮ್ಮದು ಅಂತ ಗುಡಿಸಲು ಆದ್ರೂ ಹಾಕಂಬ್ತೀವಿ...ಎಲ್ಲೆರ ಒಂದಿಷ್ಟು ಜಾಗೇವು ಕೊಡಿ ಸಿರಿ..."ಅಂತ! ಮಾದೇವಣ್ಣ ಹೇಳಿದ.... "ತಲೆ ಒಯ್ತೆನ್ರಲೆ ನಿಮಗೆ?" ಪಾಪ...ಬಡವರು ತಮ್ಮ ತಲೆ ಇದೆಯೋ, ಇಲ್ಲವೋ ಅಂತ ಅನುಮಾನ ದಿಂದ ಮುಟ್ಟಿ ನೋಡಿಕೊಂಡ್ರು. ತಲೆ ಇತ್ತು. ಆದರೆ ಮೆದುಳು ಇತ್ತೊ ಇಲ್ಲವೋ ಅದು ಮಾದೇವಣ್ಣನಿಗೆ ಗೊತ್ತು."

"ಎಲ್ಲಾರು ಕಟ್ಟಿಕಂಟ್ತೀರೇನ್ರೊ ಗುಡಿಸಲ್ನ? ಬಡವ್ರೆಲ್ಲ ಒಂದು ಐದು ನೂರು ಗುಡಿಸಲ್ನ ಹಾಕ್ಕಳ್ರಿ...ಆದ್ರ ಮೇಲಿನೋರಿಗೆ ಕೈ ಬೆಚ್ಚಗೆ ಮಾಡ ಬೇಕು. ಎಲ್ರೂ ಇಪ್ಪತ್ತು ಇಪ್ಪತ್ತು ರೂಪಾಯಿಗೆ ಸೇರಿಸಿ ಒಟ್ಟಾಗಿ ಕೊಡ್ಸಿ ತಂದು ಕೊಡ್ರಿ ...ಯಾರಿಗೂ ಹೇಳಬಾರದು...ಆ ಕುಡಿಯೋ ನೀರಿನ ಹೊಂಡದ ಪಕ್ಕದ ಖಾಲಿ ಜಾಗೇವು ಇದೆಯಲ್ಲ...ಅಲ್ಲಿ ನಿಮಗೆ ಎಷ್ಟು ಬೇಕೋ ಅಷ್ಟು ಜಾಗೇವು ಹಿಡಿದು ಗುಡಿಸಲು ಹಾಕಿಕೊಳ್ರಿ...

"ಆ ಜಾಗೇವು ಬ್ಯಾರೇರದಲ್ಲ...?"

"ಹಂ...ಎಲ್ಲಾ ಬ್ಯಾರೇರದ ಮೊದ್ಲ...ನಾವು ನಮ್ಮದು ಮಾಡಿ ಕೊಂಡ್ರ ನಮ್ಮದು ಆಗ್ತೈತಿ...ಅವರು ಮನಿ ಕಟ್ಟಿಸಂಗಿಲ್ಲ..ಖಾಲಿ ಜಾಗೇವು ಬಿಟ್ಕಂಡವ್ರೆ...ನಿಮಗೆ ಮನೆ ಬೇಕು...ಖಾಲಿ ಜಾಗ ಇಲ್ಲ...ಇನ್ನೇನು? ಸುಮ್ನೆ ಹಾಕ್ಕಳ್ರಿ. ನಾನಿದ್ದೇನೆ..." ಅಂದ ಮಾದೇವಣ್ಣ. ಮಾರನೇ ದಿನಾನೆ ಬಡವರ ಒಟ್ಟು ಇಪ್ಪತ್ತುಗಳು ಸೇರಿ ಐದು ಸಾವಿರ ರೂಪಾಯಿ ಮಾದೇವಣ್ಣನ ಜೇಬಿಗೆ ಬಿದ್ದವು.

ಮಾದೇವಣ್ಣ ಎಂಟು ದಿನ ಟ್ಯೂರ್ ಹೊರಟಿದ್ದ—ದೀನದಲಿತರ ಸಮ್ಮೇಳನಕ್ಕೆ ಪ್ರತಿನಿಧಿಯಾಗಿ...ಬಡವರು—ನಮ್ಮ ಮಾದೇವಣ್ಣ ಗುಡಿಸಲು

ಹಾಕಿಕೊಳ್ಳಲಿಕ್ಕೆ ಜಾಗೆವು ಕೊಟ್ಟ....!-ಅಂತ ಸಾಲಸೂಲ ಮಾಡಿ ಇದ್ದದ್ದು ಇಲ್ಲದ್ದು ಸೇರಸಿಕೊಂಡು, ಬೊಂಬುಗಳ, ಬಿದಿರು ತಟ್ಟಿ, ಮಣ್ಣುಮಸಿ ತಂದು ಆನಂದವಾಗಿ ಹೊಂಡದ ಪಕ್ಕದ ಖಾಲಿ ಸ್ಥಳದಲ್ಲಿ ಗುಡಿಸಲು ಹಾಕಿ ಕೊಳ್ಳತೊಡಗಿದರು.

ಗುಡಿಸಲ ಕಾರ್ಯ ಆರಂಭವಾದುದನ್ನು 'ನೋಡಿದ ಮಾದೇವಣ್ಣ. ಸರಿ, ಖಾಲಿ ಸೈಟಿನ ಮಾಲೀಕರನ್ನ ಗುಟ್ಟಾಗಿ ಕಂಡ. ಗುಟ್ಟಾಗಿ ಹೇಳಿದ, "ನಿಮ್ಮ ಖಾಲಿ ಜಾಗ...ನೀವು ಈಗ ಗುಡಿಸಲು ಹಾಕಿಕೊಳ್ಳಲಿಕ್ಕೆ ಬಿಟ್ರಿ ಅಂದ್ರೆ, ನೀವು ನಿಮ್ಮ ಸೈಟು ಕಳಕೊಂಡ್ರಿ ಅಂತ...ಈಗಲೇ ಮೇಲಿನೋರ್ನ ಕಂಡು ಬುಲ್‌ಡೋಜರ್ ತನ್ನಿರಿ...ಗುಡಿಸಲು ಕಿತ್ತುಹಾಕಕೆ...." ಅಂದ.

"ಮತ್ತೆ ಹೇಗೆ ಮಾಡೋಣಪ್ಪಾ....ಮಾದೇವಣ್ಣಾ....? ಅಂದ್ರು. ಈಗ ನೀವು ಒಂದಿಷ್ಟು ಕೈ ಬಿಚ್ಚಿರಿ...." ಅಂದ. ಅವ್ರು ಕೈ ಬಿಚ್ಚಿದ್ರು.... ನಮ್ಮ ಸೈಟು ನಮಗೆ ಉಳಿದ್ರೆ ಸಾಕಲ್ಲ....ಅಂತ. ಮಾದೇವಣ್ಣ ಕಾರಿನಾಗ ಕುಂತು ಮೇಲಿನವರನ್ನ ಕಂಡು....ಗುಡ್ಲು ಕಟ್ಟಕೂಡದು.....ಅಂತ ಸ್ಟೇ ಆರ್ಡರ್ ಕೊಡಿಸಿದ. ಜೊತೆಗೆ ಬುಲ್‌ಡೋಜರ್ ಬಂದು ಅರ್ಧಂಬರ್ಧ ಆಗಿದ್ದ ಗುಡಿಸಲುಗಳನ್ನ ಪೂರಾ ನೆಲಸಮ ಮಾಡಿದ್ವು...ಸೈಟಿನ ಮಾಲಿಕರು ಬೊಂಬುಗಳ, ತಡಕಿ ತಟ್ಟು ಎಲ್ಲಾನೂ ರಸ್ತಿಗೆ ಒಗೆದು.

ಪಾಪ ಬಡವರು ಮುಂದೇನು ಮಾಡೋದು? ನಮ್ಮ ಮಾದೇವಣ್ಣ ನಮಗೆಲ್ಲ ಗುಡಿಸಲು ಹಾಕಿಕೊಳ್ಳಾಕೆ ಸೈಟು ಕೊಟ್ಟಿದ್ದು. ಇವ್ರು ಸೈಟಿ ನೋರು ಈಗ ಇಂತ ಕೆಲಸ ಮಾಡಿದ್ರು ಬುಲ್‌ಡೋಜರ್ ಒಂದೇ ಬರ್ಲಿಲ್ಲ. ಜೊತೆಗೆ ಪೋಲಿಸ್ನೋರು ಬಂದ್ರು....ಏನು ಮಾಡೋದು?....ಅಂತ, ನಾಕು ಮಂದಿನ್ನ ಮಾದೇವಣ್ಣನ ಕರ್ಕಂಡು ಬರಾಕೆ ಕಳಿಸಿದ್ರು....ಪಾಪ ನಾಕು ಮಂದಿ ಮಾದೇವಣ್ಣನ್ನ ಎಲ್ಲಾ ಕಡೆ ಹುಡುಕಿದ್ರು....ಹುಡುಕಿ ಹುಡುಕಿ ಸಾಕಾಗಿ–ಅವರು ಟ್ಯೂರ್‌ಗೆ ಹೋದ್ರಂತೆ" ಅಂತ ಸುದ್ದಿ ತರೋ ಹೊತ್ತಿಗೆ.

—ರಸ್ತೆಗೆ ಬೊಂಬುಗಳ ಅಡ್ಡ ಹಾಕಿ ಓಡಾಡೋ ಜನಕ್ಕೂ ದನಕ್ಕೂ, ಬಸ್ಸು ಕಾರುಗಳಿಗೂ ಬಾಳ ತೊಂದ್ರೆ ಮಾಡಿದ್ದೀರಿ ಅಂತ-ಮುನಿಸಿಪಾಲಿಟಿ ಲಾರಿಯವರು ಬಂದು ಬೊಂಬುಗಳ, ತಡಕಿ ಪಡಕಿ ಎಲ್ಲಾ ತುಂಬಿಕೊಂಡು ನಡೆದ್ರು....

"ಪಾಪ....ಬಡವರು–ನಮ್ಮ ಮಾದೇವಣ್ಣ ಈಗ ಊರಾಗ ಇದಿದ್ರೆ ಹಿಂಗ ಆಗಾಕೆ ಬಿಡ್ತಿದ್ದಿಲ್ಲ..." ಅಂತ ನಿಟ್ಟುಸಿರು ಬಿಟ್ಟು ಸುಮ್ಮನಾದ್ರು. ಎಂಟು ದಿನ ಆದಮೇಲೆ ಎಲ್ಲಾ ತಣ್ಣಗಾಗಿತ್ತು. ಮಾದೇವಣ್ಣಗ ಪರಮ ಎಲ್ಲ ಸುದ್ದಿ ಮುಟ್ಟಿಸಿದ.

ಮಾದೇವಣ್ಣ ಬಂದ ಅನ್ನೋ ಸುದ್ದಿ ಕೇಳಿ ಬಡವರು ಬಂದು ಅತ್ತು ಕರೆದು ಗೋಳಾಡಿದ್ರು.

—ಬಡವರಿಗೆ ಇಂತ ಅನ್ಯಾಯ ಮಾಡಿದ್ದಾರೆ ಖಾಲಿ ಸೈಟಿನ ಮಾಲಿಕರು...ನಾನು ಇದನ್ನ ಖಂಡಿಸ್ತೇನೆ....ಸಭೆ ಕರೆಯಿರಿ ಹನುಮಂತರಾಯನ ಗುಡಿ ಮುಂದ...."ಅಂದ ಮಾದೇವಣ್ಣ.

ಬಡವರು ನುತ್ತೆ ಚೆಂದ ಎತ್ತಿದ್ರು...ದೊಡ್ಡ ಹೂವ್ವಿನ ಮಾಲೆ ತಂದ್ರು. ನಮ್ಮ ಪರವಾಗಿ ಮಾದೇವಣ್ಣ ಖಂಡಿಸ್ತಾನೆ ಅಂತ. ಸಂಜೆ ಸಭೆಯೊಳಗೆ ಖಾಲಿ ಸೈಟಿನ ಮಾಲೀಕರನ್ನ ಜೋರಾಗಿ ಖಂಡಿಸಿದ. ಬಡಜನ ದೊಡ್ಡ ಹಾರ ಹಾಕಿದ್ರು....ಮನಿಗೆ ಹೋಗಿ ಉಪವಾಸ ಮಕ್ಕೊಂಡ್ರು.

"ಹ್ಯಾಗಿತ್ತಲೇ ಪರಮ ನನ್ನ ಭಾಷಣ?" ಅಂಧ.

"ಕೇಳಿ ಕೇಳಿ ನನಗುತೂ ತಟ್ಟಿ ಮಲಗಿಸಿದಂಗೆ ನಿದ್ದಿ ಬಂದುಬಿಷ್ತ್ರ ಮಾದೇವಣ್ಣ" ಅಂದ ಪರಮ ಮಾದೇವಣ್ಣಗ ಹಾಕಿದ ದೊಡ್ಡ ಹೂವ್ವಿನ ಹಾರ ಹೊತ್ಗಂಡು.

"ಸರಿ...ನೀನು ಈ ಮಾಲಿ ಮನ್ಯಾಗ ಇಟ್ಟು ಅಲ್ಲಿಗೆ ಬಾ"

"ಎಲ್ಲಿಗೆ?"

"ಅದೇ ಕಣ್ಲೇ...ಖಾಲಿ ಸೈಟಿನ ಮಾಲೀಕರು ಟೀಪಾರ್ಟಿ ಇಟ್ಟಿದಾರೋ–ಅವರ ಮನಿಗೆ ಬಾ...." ಅಂದು ಟೋಪಿ ಸರಿಪಡಿಸಿಕೊಂಡು ಹೋದ,

—ನಮ್ಮ ಮಾದೇವಣ್ಣನ ತಲಿ ಅಂದ್ರೆ ತಲಿ...ಇಲ್ಲದಿದ್ರ ನಮ್ಮ ಮಾದೇವಣ್ಣ ತಾಲ್ಲೂಕು ಬೋರ್ಡ್ ಪ್ರೆಸಿಡಂಟ್ ಆಗ್ತಿದ್ದನಾ?...ಅಂತ ಮಾಲಿ ಮನ್ಯಾಗ ಇಟ್ಟು ಟಿಪಾರ್ಟಿಗೆ ಬಂದು ನೋಡ್ತಾನೆ....

ಪಾರ್ಟಿ ಜೋರಾಗಿ ನಡಿದಿರತೈತಿ ...

ಮಾದೇವಣ್ಣ ದೇವರು ಬಂದು ತೂರಾಡ್ತಿರ್ತಾನೆ....ನಾನು ನಿನ್ನ ಜತೆಗೆ....ಅಂತ ಪರಮನೂ ತೂರಾಡಕೆ ಸುರು ಮಾಡಿದ. ......

000

# ಬಂದಳಿಕೆ

—ಪದ್ಮಾ ಶೆಣೈ

ಮನೆಯ ಹಿಂಭಾಗದ ದೊಡ್ಡ ತೋಟದ ಮೂಲೆಯಲ್ಲೊಂದು ಹೆಬ್ಬಲಸಿನ ಮರ. ಅದನ್ನು ಸುತ್ತಿಕೊಂಡು ಬೆಳೆದ 'ಮನಿಪ್ಲಾಂಟ್' ಬಂದಳಿಕೆ ಯಾದುದರಿಂದಲೊ ಏನೋ. ನೋಡುವವರು ಬೆರಗಾಗುವಂತೆ ಸೊಂಪಾಗಿ ಬೆಳೆದಿತ್ತು. ಒಂದಾಳು ಊಟ ಮಾಡಬಹುದಾದಂತಹ ದೊಡ್ಡ ದೊಡ್ಡ ಎಲೆಗಳು. ಸೊಸೆಯ ದೃಷ್ಟಿ ಇತ್ತ ಬಿದ್ದುದೇ ತಡ ; ಒಂದು ತುಂಡನ್ನು ಕಿತ್ತು ತಂದು ಸುಂದರವಾದ ಹೂದಾನಿಯಲ್ಲಿಟ್ಟು 'ಡ್ರಾಯಿಂಗ್ ರೂಂ'ನಲ್ಲಿ ಇಟ್ಟಳು. ಅದನ್ನಿಟ್ಟ ತಾಣವೂ ಅಷ್ಟೇ ಸುಂದರ. ಅದಕ್ಕಾಗಿಯೇ ಹೇಳಿ ಮಾಡಿಸಿದಂತೆ ಎರಡು ಕಿಟಕಿಗಳ ಮೂಲೆಯೊಂದರಲ್ಲಿ ನಳನಳಿಸುತ್ತಿದ್ದ ಅದು ಎಲ್ಲರ ಕಣ್ಮನಗಳನ್ನು ಸೆಳೆಯುತ್ತಿತ್ತು. ಸೊಸೆಯ ಗೆಳತಿಯರೆಲ್ಲ ಮೆಚ್ಚಿಗೆ ಸೂಸಿದ್ದರು. ಯಾರೇ ಅಪರಿಚಿತರಿದ್ದರೂ ಒಮ್ಮೆ, 'ಎಷ್ಟು ಚೆನ್ನಾಗಿದೆ, ಎನ್ನುವ ಉದ್ಗಾರ ಬರುತ್ತಿತ್ತು.

ಅತ್ತೆ ಸರಸ್ವತಮ್ಮನವರ ಗೆಳತಿ ಇಂದಿರೆ ಬಂದಿದ್ದರು. ಒಂದು ಕ್ಷಣ ಅದನ್ನು ನೋಡುತ್ತಾ ನಿಂತರು. ಇನ್ನೇನು, ಅವರೂ ಮೆಚ್ಚುಗೆಯ ನಾಲ್ಕಾರು ನುಡಿಗಳನ್ನುಆಡುತ್ತಾರೆ ಎಂದುಕೊಳ್ಳಬೇಕಾದರೇ ಆಕೆ ಸುಮ್ಮನೆ ಇತ್ತ ಬಂದು ಬಿಟ್ಟಿದ್ದರು. ಇಂದಿರೆ ಕಾಲೇಜಿನ ನಿವೃತ್ತ ಉಪನ್ಯಾಸಕಿ. ಸದಭಿರುಚಿಗಳ ಹೆಂಗಸು. ನೆರೆಯಲ್ಲಿಯೇ ಮಗಸೊಸೆಯಂದಿರೊಂದಿಗೆ ವಾಸಮಾಡಿಕೊಂಡಿದ್ದಾರೆ. ಆಕೆಯ ಮೌನದಿಂದ ಸರಸ್ವತಮ್ಮನವರಿಗೆ ಆಶ್ಚರ್ಯವೇ ಆಯಿತು! ಆಮೇಲೆ ಇಂದಿರೆ ಬಂದಾಗಲೆಲ್ಲ ಹೂದಾನಿಗೆ ಬೆನ್ನು ಮಾಡಿಯೇ ಕುಳಿತುಕೊಳ್ಳುತ್ತಿದ್ದರು. ಅದನ್ನವರು ನೋಡಲು

ಇಷ್ಟಪಡುವುದಿಲ್ಲವೆಂಬುದು ಸ್ಪಷ್ಟವಾಗಿತ್ತು, ಇಂದಿರಯೊಡನೆ ಬಹಳ ಆತ್ಮೀಯತೆ ಬೆಳೆದಿದ್ದರಿಂದ ಸರಸ್ವತಮ್ಮ ಕೇಳಿಯೇ ಬಿಟ್ಟರು.

ಇಂದಿರಾ, ನಿಮಗ್ಯಾಕೋ ಆ ಹೂದಾನಿಯಲ್ಲಿದ್ದ 'ಮನಿಪ್ಲಾಂಟ್ ಮನಸ್ಸಿಗೆ ಹಿತವಾಗ್ತಾ ಇಲ್ಲ ಎಂದು ನನ್ನ ಮನಸ್ಸಿಗೆ ಅನ್ನಿಸ್ತಾ ಇದೆ"

ಇಂದಿರೆ ಆಶ್ಚರ್ಯದಿಂದ ಕೇಳಿದರು.

"ಹೌದು. ಅದನ್ನು ನೋಡಿದರೆ ನನಗೆ ನನ್ನ ಗತಜೀವನದ ಚರಿತ್ರಯ ಪುಟಗಳನ್ನು ತೆರೆದಿಟ್ಟಂತಾಗುತ್ತದೆ. ಆದರೆ ನಿಮಗೆ ಇದು ಹೇಗೆ ತಿಳಿಯಿತು?"

"ಅಷ್ಟೂ ತಿಳಿಯೊಲ್ವೇ? ಬಂದುಹೋಗೋ ಮಂದಿಯಲ್ಲ ಅದನ್ನು ಮೆಚ್ಚುತ್ತಿದ್ರೆ ನೀವು ಸದಾ ಬೆನ್ನು ಹಾಕಿ ಕುಳಿತುಬಿಡ್ತೀರಾ, ಅಷ್ಟಕ್ಕೂ ಅದನ್ನು ಅಲ್ಲಿಯೇ ಇಡಬೇಕೆಂದೇನೂ ಇಲ್ಲ. ನಾಳೆಯೇ ಬೇರೆಡೆಗೆ ಇಡ್ತೀವಿ."

"ಛೆ,ಛೆ. ಎಲ್ಲಾದ್ರು ಉಂಟೇ? ಊರುತುಂಬ ಬಂದಳಿಕೆಗಳು ಇವೆ. ಅವನ್ನೆಲ್ಲ ಎಲ್ಲಿ ಸಾಗಿಸ್ತೀರಾ? ನಂಗ್ಯಾಕೋ ಈ ಬಂದಳಿಕೆಗಳನ್ನು ನೋಡುತ್ತಿರುವಂತೆಲ್ಲ ಅಸಹಾಯ ಹೆಣ್ಮಕ್ಕಳ ಜೀವನ ಜ್ಞಾಪಕಕ್ಕೆ ಬರುತ್ತೆ. ಒಂದು ಕಾಲದಲ್ಲಿ, ನಾನೂ ಬಂದಳಿಕೆಯೇ ಆಗಿದ್ದೆ ಗೊತ್ತೇ"

ಇಂದಿರೆ ಹೇಳಿದ ಆತ್ಮವೃತ್ತಾಂತವಿದು.

ಇಂದಿರೆಯ ಹೈಸ್ಕೂಲು ವಿದ್ಯಾಭ್ಯಾಸ ಮುಗಿದಾಗ ಅವಳಿಗೆ ಹದಿನಾರು ವರ್ಷ ವಯಸ್ಸು. ಎಂಟು ಮೈಲುಗಳ ಅಂತರದಲ್ಲಿಯೇ ಕಾಲೇಜು ಇದೆ: ಹೋಗಿ ಬರಲು ಸಿಟಿಬಸ್ಸುಗಳು ಇವೆ. ಆದರೆ ಮನೆಯಲ್ಲಿಯೇ ಯಾರಿಗೂ ಒಪ್ಪಿಗೆಯಿಲ್ಲ. ತಂದೆ ನೊಂದುಕೊಂಡೇ ಹೇಳಿದ್ದರು.

"ನಿನ್ನ ಮಾರ್ಕುಗಳನ್ನು ನೋಡಿದ್ರೆ,ಗಂಡುಮಗನಾಗಿ ಹುಟ್ಟಬೇಕಿತ್ತು

ವಾದು ಕಾಣತ್ತೆ. ಕಾಲೇಜು ಕಲಿಸಿದ್ರೆ, ಮುಂದೆ ನಿನಗಿಂತ ಹೆಚ್ಚು ಕಲಿತ ವನನ್ನು ಎಲ್ಲಿ ಹುಡುಕೋದು?"

ತಂದೆಯೆದುರು ನಿಂತು ಮಾತಾಡಿ ಅಭ್ಯಾಸವೆ ಇಲ್ಲದಿದ್ದುದರಿಂದ ಇಂದಿರೆ ಮೆಲ್ಲನೆ ತಾಯಿಯೊಡನೆ ಹೇಳಿದ್ದಳು.

"ಅಮ್ಮ, ನನಗೆ ಮದುವೆಯೇ ಆಗಬೇಕೆಂದೇನೂ ಇಲ್ಲ. ಕಾಲೇಜು ಕಲಿತರೆ ಒಳ್ಳೇ ನೌಕರಿ ಸಿಗುತ್ತೆ. ನಾನು ನೌಕರಿ ಮಾಡಿಕೊಂಡು ಇರ್ತೀನಿ."

ತಾಯಿ ಒಮ್ಮೆಲೇ ರೇಗಿಗೆದ್ದರು.

"ಈ ಶಾಲೆ ವಿದ್ಯಾಭ್ಯಾಸವೇ ನಿನ್ನ ತಲೆ ಕೆಡಿಸಿದೆ. ಮದುವೆ ಬೇಡ ವಂತೆ ಇನ್ನೇನು, ಬೀದಿಬಸವಿಯಂತೆ ಅಡ್ಡಾಡುವಿಯೇನು? ನೀನು ನೌಕರಿ ಮಾಡಿಕೊಂಡು ಯಾರನ್ನು ಸಾಕಬೇಕಾಗಿದೆ? ಯಾವ ತಂದೆತಾಯಿಯೂ ಹೆಣ್ಣುಮಗಳ ಋಣಕ್ಕೆ ಬೀಳುವುದಿಲ್ಲ. ಅಣ್ಣನೊಡನೆ ಹೇಳಿಕೊಂಡರೆ ಆತ ನದೂ ಅದೇ ಮಾತು.

"ಹೆಣ್ಣು ಮಕ್ಕಳಿಗೇಕೆ ಕಾಲೇಜು? ಸುಮ್ಮನೆ ದುಡ್ಡು ದಂಡ. ಎಷ್ಟು ಕಲಿತರೂ ಮಡಕೆ ತೊಳೆಯುವುದೇನು ತಪ್ಪುವುದೇ? ಮನೆ ಕೆಲಸ, ಅಡುಗೆ ಕಲಿ ಸಾಕು." ಮನೆಯಲ್ಲಿ ಮದುವೆಗೆ ನೆರೆದ ಮೂರನೆಯ ಅಕ್ಕನಿದ್ದಳು. ಅವಳಿಗಿನ್ನೂ ನೆಂಟಸ್ಥಿಕೆಯಾಗಿರಲಿಲ್ಲ, ಅದುವರೆಗೆ ಟ್ಯಾಪಿಂಗ್ ಆದರೂ ಕಲಿತೀನಿ ಎಂದಳು ಇಂದಿರೆ.

"ಛಿ, ಛಿ. ಹೆಣ್ಣು ಹುಡುಗಿಗೆ ಟ್ಯಾಪಿಂಗ್ ಯಾಕೆ? ನೀನು ನೌಕರಿ ಮಾಡಿ ಇಲ್ಲಿ ಯಾರೂ ಉಣ್ಣಬೇಕಾಗಿಲ್ಲ." ಎಂದರು ಎಲ್ಲರೂ ಒಂದಾಗಿ.

ಅಕ್ಕನಿಗೆ ಮದುವೆಯಾಗುವಾಗ ಇಂದಿರೆಗೆ ಹತ್ತೊಂಭತ್ತು ವರ್ಷಗ ಳಾಗಿದ್ದುವು. ಮೂರು ವರ್ಷ ಮನೆಯಲ್ಲಿಯೇ ಕೂತು ಜಿಡ್ಡು ಕಟ್ಟಿದಂ ತಾಗಿತ್ತು. ಆದರೂ ಜೊತೆಗೆ ಅಕ್ಕನಿದ್ದಳು. ಅಷ್ಟಿಷ್ಟು ಕೆಲಸ, ಒಂದೆರಡು ಕಸೂತಿ, ಸಿಕ್ಕಿದರೆ ಅಲ್ಲಿಂದ ಇಲ್ಲಿಂದ ತಂದ ಎರವಲು ಪುಸ್ತಕಗಳು, ಮಾತು

ಕತೆಯಲ್ಲಿ ಹೊತ್ತು ಹೇಗೋ ಸರಿಯುತ್ತಿತ್ತು. ಈಗ ಅಕ್ಕನ ಮದುವೆಯು ಸಾಲ ಸ್ವಲ್ಪ ಇತ್ತು. ಅದು ತೀರುವವರೆಗೂ ಚಿಕ್ಕವಳ ಮದುವೆ ಪ್ರಸ್ತಾಪವಿಲ್ಲ ವೆಂದು ನಿರ್ಣಯಿಸಿದ್ದರು. ಮನೆಯಲ್ಲಿಯೂ ಒಬ್ಬಂಟಿಗಳು. ಸ್ನೇಹಿತೆ ಯರು ಒಬ್ಬೊಬ್ಬರಾಗಿಯೇ ಮದುವೆಯಾಗಿ ಹೋಗಿದ್ದರು. ಅಲ್ಲದೇ ತಾಯಿಗೆ ಮಗಳು ಅತ್ತಿತ್ತ ತಿರುಗಾಡಿಕೊಂಡಿರುವುದು ಇಷ್ಟವೂ ಇಲ್ಲ. ಏನಾದರೂ ಅಪವಾದ ಬಂದರೆ ಯಾವ ಮಹಾಶಯ ಕೈ ಹಿಡಿಯುತ್ತಾನೆ. ಎನ್ನುವ ಗೊಣಗಾಟ ತಪ್ಪಿರಲೇ ಇಲ್ಲ. ಮನೆಯೊಳಗೆ ಇಂದಿರೆ ಸಮಯ ವನ್ನು ಹೇಗೆ ಕಳೆಯುವುದು ? ಕಿರಿಯ ಮಗಳಾಗಿ ಹುಟ್ಟುವುದೇ ತಪ್ಪೆಂದು ಕಾಣುತ್ತಿತ್ತು.

ನೆಂಟರಿಷ್ಟರು ಯಾರು ಬಂದರೂ ಮೊದಲು ಕೇಳುವ ಪ್ರಶ್ನೆ, "ಹುಡುಗಿಗೆಲ್ಲಾದರೂ ನೆಂಟಸ್ತಿಕೆಯಾಗಿದೆಯೇ ?"

ಇವಕ್ಕೆ ಉತ್ತರರೂಪವಾಗಿ ತಾಯಿಯಿಂದ ಪತ್ತಾರು ತಾಪತ್ರಯಗಳ ಬಣ್ಣನೆ. ಇಂದಿರೆಗೆ ತಲೆ ಚಿಟ್ಟುಹಿಡಿದಂತಾಗುತ್ತಿತ್ತು. ಇದರಿಂದ ತಪ್ಪಿಸಿ ಕೊಳ್ಳುವುದಕ್ಕಾಗಿಯೇ, ಆಕೆ ಮನೆಗೆ ಯಾರಾದರೂ ಬಂದರೆ ತಾನು ಸುಮ್ಮನೆ ಹೋಗಿ ಹಿತ್ತಲಲ್ಲಿ ಕುಳಿತುಬಿಡುತ್ತಿದ್ದಳು. ಅಲ್ಲೊಂದು ದೊಡ್ಡ ಮಾವಿನ ಮರ ; ಅದರ ಮೇಲೆ ಅಲ್ಲಲ್ಲಿ ಬಂದಳಿಕೆಗಳು ; ಆಗಲೇ ಅವಳಿಗೆ ವಿಚಿತ್ರ ಹೋಲಿಕೆಯೊಂದು ಮನಸ್ಸಿಗೆ ಬಾದುದು. ಹೆಣ್ಮಕ್ಕಳ ಜೀವನವೂ ಯಾತಕ್ಕೂ ಬಾರದ ಈ ಪರೋಪಜೀವಿಗಳಂತೆಯೇ ಅಲ್ಲವೇ ? ತನ್ನ ಜೀವಿ ತಕ್ಕೇ ಸದಾ ಇನ್ನೊಬ್ಬರ ಆಧಾರ, ಅವಲಂಬನಗಳನ್ನೇ ಹೊಂದಿಕೊಂಡಿರು ವುದು ಅದೆಂತಹ ಬಾಳು ? ಹೆಣ್ಣು ಹುಡುಗಿಯರನ್ನು ಹೀಗೇಕೆ ಬಂಧನ ವಲ್ಲಿಟ್ಟು ಪರಾವಲಂಬಿಗಳಾಗಿ ಬೆಳೆಸುತ್ತಿದ್ದಾರೆ ? ಈ ಪ್ರಶ್ನೆಗಳು ಬಗೆಹರಿಯುವಂತೆಯೇ ಇರಲಿಲ್ಲ. ತಾಯಿ ಮಗಳನ್ನು ಕೂಗಿದಾಗಲೇ ಅವಳೆದ್ದು ಒಳಗೆ ಹೋಗುತ್ತಿದ್ದುದು.

ಅಣ್ಣನಿಗೀಗ ಮೂವತ್ತೆರಡನೆಯ ವರ್ಷ ನಡೆಯುತ್ತಿತ್ತು. ಆಗೀಗ ಕನ್ಯಾಪಿತೃಗಳು ಮನೆಗೆ ಎಡತಾಕುತ್ತಿದ್ದರು. ತಂದೆತಾಯಿ ಮಗಳ ಮದುವೆ

ಯಾಗಲಿ ಎಂದು ಅವರನ್ನು ಸಾಗಹಾಕುತ್ತಿದ್ದರು. ಅಣ್ಣನಿಗೆ ಇದು ತಿಳಿದು ಬಂದಾಗಲೆಲ್ಲ ಆತ ಸಿಡಿಮಿಡಿಗೊಳ್ಳುತ್ತಿದ್ದ. ಆತ ಮಾತು ಮಾತಿಗೆ ತಾಯಿ ಯೊಡನೆ ಸಿಟ್ಟಾದರೆ, ತಾಯಿ ಅದನ್ನು ಮಗಳ ಮೇಲೆ ತೀರಿಸಿಕೊಳ್ಳು ತ್ತಿದ್ದರು,

'ಯಾವ ಕಾಲಕ್ಕೆ ನೀನು ಗಂಡನ ಮನೆಗೆ ಹೋಗುವುದೋ !' 'ನಮ್ಮೆಲ್ಲರ ಹೊಟ್ಟೆ ಉರಿಸೋಕೆ ಯಾವ ಘಳಿಗೇಲಿ ಹುಟ್ಟಿದೆಯೊ ಏನೊ ! 'ಕತ್ತೆಗಾಗುವ ವಯಸ್ಸಾಯಿತು.' 'ಬ್ರಹ್ಮ ನಿನಗೊಬ್ಬ ಗಂಡನನ್ನು ಸೃಷ್ಟಿಸಿ ದ್ದಾನೊ ಇಲ್ಲವೊ.'

ತಾಯಿ, ಮನದೊಳಗಿನ ಸಂಕಟವನ್ನು ಮಾತುಗಳಲ್ಲಿ ತೋಡಿಕೊಳ್ಳು ತ್ತಿದ್ದರು. ಆದರೆ ಇದಕ್ಕೆಲ್ಲ ಇಂದಿರೆ ಹೊಣೆಯೇ ? ಅಣ್ಣನಂತೂ ಒಂದು ದಿನ ಅಪನ ಬಟ್ಟೆಯ ಕೊಳೆಯನ್ನು ತೆಗೆಯಲಿಲ್ಲಾಂತ ತಂಗಿಯನ್ನು ಸಿಕ್ಕಾ ಬಟ್ಟೆ ಬೈದುಬಿಟ್ಟ. ತಾನು ಕಷ್ಟಪಟ್ಟು ದುಡಿಯುವಾಗ ಮನೆಯಲ್ಲಿ ಸುಖ ವಾಗಿ ಕೂತು, ತಿಂದುಂಡು ಬೆಳೆದಿರುವಿ ಎಂದ. 'ನಿನ್ನಿಂದಲೇ ಮನೆಯ ಸುಖ, ಶಾಂತಿಯೆಲ್ಲವೂ ಹಾಳಾಯಿತು' ಎಂದು ರೇಗಾಡಿದ.

ಇಂದಿರೆ ಅಂದು ಇಡೀ ದಿನ ತೋಟದಲ್ಲಿಯೇ ಕುಳಿತ್ತಿದ್ದಳು. ಕಂಬನಿಮಂಬಿದ ದೃಷ್ಟಿ ಮಾಮರದ ಮೇಲೆ ಹರಿಯುತ್ತಿತ್ತು. ಅಪ್ಪ, ಅಣ್ಣ ಈ ಮಾಮರದಂತೆ. ಮತ್ತು ತಾನು ಆ ಬಂದಳಿಗೆಯಂತೆ. ಮರದ ಸತ್ವವನ್ನೂ, ಸಾರವನ್ನು ಹೀರಿ ಬೆಳೆದು ಈ ಬಂದಳಿಕೆ ಮರದ ಅಸ್ತಿತ್ವಕ್ಕೇ ಹೇಗೆ ಹಾನಿಕರವಾಗಿದೆಯೋ ಅದೇ ರೀತಿ ತಾನು ತಾನೂ ಅವರನ್ನು ಹೀರು ತ್ತಿಲ್ಲವೇ? ಈ ಮನೆಯಲ್ಲಿ ಒಂದಗುಳು ಅನ್ನವನ್ನು ತಿನ್ನಬಾರದು ಎಂದೆನಿಸು ತ್ತಿತ್ತು. ಆದರೆ ಎಲ್ಲಿಗೆ ಹೋಗುವುದು ? ಏನು ಮಾಡುವುದು ? ಹೆಣ್ಣು ಬಾಳಿನ ಅಸಹಾಯಕತೆಯನ್ನು ನೆನೆನೆನೆದು ಅತ್ತಳು. ಸರಿಕಟ್ಟಾಗಿ ನೆಂಟಸ್ಥಿಕೆ ಕೂಡಿಬಾರದೇ ಇದ್ದುದು ಯಾರ ತಪ್ಪು? ತನಗೆ ಕಾಲೇಜು ಕಲಿಸಿದ್ದರೆ ಯಾವುದಾದರೂ ನೌಕರಿ ಮಾಡಿಕೊಂಡಿರುತ್ತಿರಲಿಲ್ಲವೇ ? ಮದುವೆಯೇ

ಬೇಕೆಂದು ಯಾರು ಕಾಲು ಹಿಡಿದಿದ್ದರು ? ಈಗಲೂ ನೌಕರಿಗೆ ಹೆಚ್ಚಿದರೆ ತಾನಂತೂ ತಯಾರಾಗಿಯೇ ಇದ್ದೇನೆ. ಈ ಮಾತು ಎತ್ತಿದರೆ ಇನ್ನೇನು ರಾದ್ಧಾಂತವಾಗುವುದೊ !

ತಾಯಿ ಬಹಳ ಸಂತವಿಸಲೆತ್ನಿಸಿದರು. ದುಡಿದು ತರುವ ಗಂಡು ಏನಾದರೂ ಹೇಳಿದರೆ, ಅದನ್ನೇ ದೊಡ್ಡದು ಮಾಡಬಾರದು. ಅವನಿಗೂ ಮದುವೆ ವಯಸ್ಸು ದಾಟುತ್ತಿದೆ. ಮನಸ್ಸಿನಲ್ಲಿ ಹತ್ತಾರು ಚಿಂತೆಗಳು ಇರುವಾಗ ಸುಲಭದಲ್ಲಿ ಸಿಟ್ಟುಬರುತ್ತದೆ....ಇತ್ಯಾದಿ.

ಹೆಣ್ಣು ತಾನೂ ದುಡಿಯುತ್ತೇನೆನ್ನುವಾಗ ಬೇಡವೆಂದು ಹತ್ತಾರು ಕಟ್ಟುಪಾಡುಗಳನ್ನು ವಿಧಿಸಿ 'ದುಡಿಯುವ ಗಂಡು' ಎಂದು ಪೂಜೆ ಮಾಡು ವವರೊಡನೆ ಏನು ಮಾತು ? ಗಂಡಿಗೆ ಮಾತ್ರ ಮದುವೆ ವಯಸ್ಸು, ಚಿಂತೆ, ಸಿಟ್ಟು ಇರುವುದೇ ? ಹೆಣ್ಣು ಕಲ್ಲು ಬಂಡೆಯೇ ?

ಈ ವಾತಾವರಣದಿಂದ ಯಾವಾಗಲೊಮ್ಮೆ ಬಿಡುಗಡೆಯಾದೀತೋ ಎಂದು ತನು, ಮನ ಹಾತೊರೆಯುತ್ತಿತ್ತು. ಕೊನೆಗೂ ಆ ಘಳಿಗೆ ಕೂಡಿ ಬಂತು. ಇಂದಿರೆಯ ಇಪ್ಪತ್ತನಾಲ್ಕನೆಯ ವಯಸ್ಸಿನಲ್ಲಿ ಅವಳ ಮದುವೆ ಯಾಯಿತು. ಹುಡುಗ, 'ಮೆಡಿಕಲ್ ರೆಪ್ರೆಸೆಂಟೆಟಿವ್' ನೋಡಲು ಸ್ಫುರದ್ರೂಪಿಯಾಗಿದ್ದ. ತುಂಬ ವಾದಾಳಿ. ಯಾರನ್ನೂ ಮರುಳು ಗೊಳಿಸುವ ಮಾತುಗಾರಿಕೆ.

ಇಂದಿರೆ ಸಹಜವಾಗಿಯೇ ಸಂತೋಷಿಸಿದಳು. ಇನ್ನು ತವರುಮನೆಗೆ ಬರಲೇಬಾರದು ಪಲಕ ಹರಿಯಿತೆಂದೇ ತಿಳಿದುಕೊಳ್ಳಬೇಕು ಎಂದುಕೊಳ್ಳು ತ್ತಲೇ ಗಂಡನೊಡನೆ ಹೊರಟುಹೋಗಿದ್ದಳು. ಅವಳ ಮದುವೆಯಾದ ಎರಡೇ ದಿನಗಳೊಳಗೆ ಅಣ್ಣನ ಮದುವೆಯೂ ಆಗಿತ್ತು. ಅತ್ತಿಗೆಯೂ ಮನೆಗೆ ಬಂದಿದ್ದಳು.

ಗಂಡನಿಗೆ ಕೈತುಂಬ ಸಂಬಳ ತರುವ ನೌಕರಿ. ಆದರೆ ಬಹಳ

ಷೋಕಿ ಮನುಷ್ಯ. ಎಲ್ಲ ದುರಭ್ಯಾಸಗಳು ಬೇರೆ. ತಿಂಗಳ ಸಂಬಳ ಅವನಿಗೇ ಸಾಲುತ್ತಿರಲಿಲ್ಲ. ಹೆಸರಿಗೊಂದು ಬಿಡಾರ. ಅಚ್ಚುಕಟ್ಟಾಗಿ ಯಾವುದೂ ಇಲ್ಲ, ಪಾತ್ರೆ ಪಡಗಗಳು, ಸಾಮಾನು ಸರಂಜಾಮು, ಹಾಸಿಗೆ ದಿಂಬುಗಳೆಂದು ಜೋಡಿಸುವಾಗಲೇ ಕೈಯಲ್ಲಿದ್ದ ಅಷ್ಟಿಷ್ಟು ರೂಪಾಯಿಗಳು ಖಾಲಿಯಾಗಿದ್ದವು. ಅಮೇಲೆ ಯಾವುದಕ್ಕೂ ಅವನನ್ನೇ ಕಾಯಬೇಕು. ಆತ ಕೊಟ್ಟರುಂಟು ; ಇಲ್ಲದಿದ್ದರೆ ಇಲ್ಲ. ಮೊದಲೇನೋ ಆತ ಯಾವ ವಿಷಯಕ್ಕೂ ನಯವಾಗಿ ಹೇಳಿ ತಪ್ಪಿಸಿಕೊಳ್ಳುತ್ತಿದ್ದ. ಆಮೇಲೆ ಸಿಟ್ಟು ಮಾಡುವುದು ಆರಂಭವಾಯಿತು. ಸಂಬಳ ಸಿಕ್ಕಿದಾಗ ಏಳೆಂಟು ದಿನ ಮನೆಯ ಕಡೆ ಮುಖವನ್ನೇ ತೋರಿಸುತ್ತಿರಲಿಲ್ಲ. ಅವನ ವೃತ್ತಿಯಲ್ಲಿ ಆಗೀಗ ಪರಊರಿಗೆ ಹೋಗುವುದು ಮಾಮೂಲಾಗಿತ್ತು. ಕೆಲವೊಮ್ಮೆ ತಿಂದು ಕುಡಿದು ಮನೆಗೆ ಬರುತ್ತಿದ್ದ. ಭಯ, ಸಿಟ್ಟು, ತಿರಸ್ಕಾರ ಎಲ್ಲವೂ ಕೂಡಿ ಇಂದಿರೆ ಮೌನಿಯಾಗುತ್ತಿದ್ದಳು. ಹೆಂಡತಿಗೆ ಉಪವಾಸವೋ, ವನವಾಸವೋ ಎನ್ನುವುದರ ಕಾಳಜಿ ಕೂಡ ಅವನಿಗಿರುತ್ತಿರಲಿಲ್ಲ. ಅವಳಿಗನ್ನಿಸಿತ್ತು. ತನಗೆ ಬಿಡುಗಡೆಯಾಯಿತು ಎಂದು ತಿಳಿದುಕೊಂಡುದು ತಪ್ಪು. ಬಂದಳಿಕೆಗೆ ಬಿಡುಗಡೆಯೆಂಬುದು ಇಲ್ಲ. ಅದು ಒಂದು ಮರವನ್ನು ಬಿಟ್ಟು ಇನ್ನೊಂದು ಮರವನ್ನು ಆಶ್ರಯಿಸಿತು—ಅಷ್ಟೆ.

ಈ ಸಮಯದಲ್ಲಿಯೇ ಇಂದಿರೆ ತಾಯಿಯಾಗುವ ಚಿಹ್ನೆಗಳು ಕಾಣಿಸಿಕೊಂಡವು. ಅವಳಿಗೆ ಮನಸ್ಸಿಲ್ಲದಿದ್ದರೂ ಬಾಣಂತಿತನಕ್ಕೆ ತವರುಮನೆಗೆ ಹೋಗಲೇಬೇಕಾಯಿತು. ತಂದೆಯಾಗಲೇ ಕೊನೆಯುಸಿರೆಳೆದಿದ್ದರು. ತಾಯಿಯ ದೇಹಸ್ಥಿತಿಯೂ ಕೆಟ್ಟಿತ್ತು. ಅತ್ತಿಗೆಗೆ, ನಾದಿನಿ ಬಾಣಂತಿತನಕ್ಕೆ ಬಂದುದೇ ಅಸಮಾಧಾನವಾಗಿತ್ತು. ಅವಳು ಆಕೆಯನ್ನು ಸರಿಯಾಗಿ ಮಾತನ್ನಾಡಿಸಲೇ ಇಲ್ಲ. ಹುಟ್ಟಿದ ಮಗು ಗಂಡಾದರೂ, ಒಮ್ಮೆಯಾದರೂ ಪ್ರೀತಿಯಿಂದ ಎತ್ತಿಕೊಂಡು ಮುದ್ದಿಸಲಿಲ್ಲ. ಅಣ್ಣನಂತೂ ಹೆಂಡತಿಯ ಪ್ರೇಮದಲ್ಲಿಯೇ ಲೋಲುಪನಾಗಿದ್ದ. ಇಂದಿರೆಗನ್ನಿಸಿತ್ತು ; ಕಷ್ಟವೋ, ಸುಖವೋ, ಗಂಡನ ಬಳಿಯೇ ಇದ್ದುಬಿಡಬೇಕಾಗಿತ್ತು. ಇಲ್ಲಿಗೇ ಬರಲೇಬಾರದಾಗಿತ್ತು ಎಂದು, ಹೇಗೋ ಎರಡು ತಿಂಗಳ

ಬಾಣಂತನ ಮುಗಿಸಿ ಮಗು ಅರವಿಂದನನ್ನೆತ್ತಿಕೊಂಡು ಗಂಡನ ಮನೆಗೆ ಬಂದಳು. ಮಗು ಹುಟ್ಟಿದ ಮೇಲಾದರೂ ಗಂಡ ಸ್ವಲ್ಪ ಜವಾಬ್ದಾರಿಯನ್ನು ಅರಿತು ಬಾಳಬಹುದೆಂಬುದೇ ಅವಳ ನಿರೀಕ್ಷೆಯಾಗಿತ್ತು. ಆದರೆ ಅವನ ನಡೆವಳಿಕೆ ತದ್ವಿರುದ್ಧವಾಗಿತ್ತು, ಮಗುವನ್ನು ಎತ್ತಿಕೊಂಡು, ಮುದ್ದಿಸುವುದಂತೂ ದೂರವೇ ಉಳಿಯಿತು. ಅವನು ಅತ್ತರೆ ಸಿಟ್ಟು, ಅಸೌಖ್ಯಗೊಂಡರೆ ಸಿಟ್ಟು...ತನ್ನ ಸೇವೆ, ಉಪಚಾರಗಳಲ್ಲಿ ಒಂದಿಷ್ಟು ಹೆಚ್ಚು ಕಡಿಮೆಯಾಗುವಂತಿಲ್ಲ...ಈತನೇನು ಮನುಷ್ಯ ರೂಪದಲ್ಲಿರುವ ಮೃಗಗಳೂ ಎಷ್ಟೋ ವಾಸಿ, ತಮ್ಮ ಸಂತಾನದ ಬಗ್ಗೆ ಅವುಗಳಿಗೆ ಕೆಲವು ಸಮಯದ ಮಟ್ಟಿಗಾದರೂ ಮಮತೆ, ಮೋಹ ಉಳಿದುಕೊಳ್ಳುವುದಲ್ಲವೇ?

ಒಮ್ಮೆ ಮಗುವಿಗೆ ಭೇದಿ ಶುರುವಾಗಿತ್ತು. ತಾನೇ ಯಾವುದೋ ಸ್ಯಾಂಪಲು ಮಾತ್ರೆಗಳನ್ನು ಕೊಟ್ಟ. ಮಗುವಿಗೆ ವಾಂತಿಯೂ ಆರಂಭವಾಗಿ ಕೈಕಾಲು ತಣ್ಣಗಾಯಿತು, ಇಂದಿರೆ ಗಲಾಟೆ ಮಾಡಿದಳೆಂದು ಡಾಕ್ಟರರನ್ನು ಕರೆತರಲು ಹೋದವನು ನಾಲ್ಕು ದಿನ ನಾಪತ್ತೆಯಾಗಿದ್ದ ಗಂಡನನ್ನು ಕಾದು ಸುಸ್ತಾಗಿ ಇಂದಿರೆ ಬಾಗಿಲಿಗೂ ಅಗುಳಿ ಹಾಕದೇ ಸುಮ್ಮನೆ ಅಡ್ಡ ಮಾಡಿಟ್ಟು ಮಗುವನ್ನೆತ್ತಿಕೊಂಡು ಡಾಕ್ಟರರಲ್ಲಿಗೆ ಓಡಿದಳು. ಆಯುಷ್ಯ ಗಟ್ಟಿಯಾಗಿತ್ತೆಂದೇ ಮಗು ಬದುಕಿ ಉಳಿದಿತ್ತು!

ಇಂದಿರೆ ಎಷ್ಟೊಂದು ರೀತಿಯಲ್ಲಿ ತಿಳಿಹೇಳುವ ಪ್ರಯತ್ನ ಮಾಡಿದ್ದಳು! ಊಹುಂ. ಎಲ್ಲವೂ ಗೋರ್ಕಲ್ಲ ಮೇಲೆ ಮಳೆ ಸುರಿದಂತೆ ವ್ಯರ್ಥ.

ಈ ಸಮಯದಲ್ಲಿಯೇ ಇಂದಿರೆ ಮತ್ತೊಮ್ಮೆ ತಾಯಿಯಾಗುವ ಲಕ್ಷಣಗಳು ಕಂಡು ಬಂದವು. ಅರವಿಂದ ಎದೆಹಾಲು ಕುಡಿಯುತ್ತಿದ್ದ, ಮಕ್ಕಳು ಮೊಲೆಹಾಲು ಕುಡಿಯುವಾಗ ಬಸಿರು ನಿಲ್ಲುವುದಿಲ್ಲ ಎಂದು ತಾಯಿ ಯಾವಾಗಲೂ ಹೇಳುತ್ತಿದ್ದಳು. ಆದುದರಿಂದ ಈ ಬಗ್ಗೆ ಇಂದಿರೆ ನಿಶ್ಚಿಂತೆಯಾಗಿದ್ದಳು. ಈಗ ತಾನು ಗರ್ಭಿಣಿಯೆಂದು ತಿಳಿದು ಬಂದಾಗ ಹೌಹಾರಿದಳು!

ಮಗುವಿಗಿನ್ನು ವರ್ಷವಾಗಿಲ್ಲ. ಇನ್ನಾರು ತಿಂಗಳಲ್ಲಿಯೇ ತಾನು ಇನ್ನೊಂದು ಮಗುವಿನ ತಾಯಿಯಾಗುವುದೆಂದರೇನು? ಮಕ್ಕಳನ್ನು ಸಾಕುವ ಬಗೆ ಹೇಗೆ?

ಗಂಡನೊಡನೆ ಹೇಳಿಕೊಂಡರೆ ಆತ,

"ನಿನ್ನಂಥವಳಿಗಾಗೀಯೇ ಸರಕಾರಿ ಆಸ್ಪತ್ರೆಯಿರೋದು ಎಂದ."

ಆತ ಹೇಳಿದ ಧಾಟಿಯಿಂದಲೇ ಸಿಟ್ಟಿಗೆದ್ದ ಇಂದಿರೆ, "ನನ್ನಂಥವರು ಎಂದರೆ ಅರ್ಥ ಏನು? ಅಗ್ನಿಸಾಕ್ಷಿಯಾಗಿ ನೀವು ಮದುವೆಯಾಗಿಲ್ಲವೇ? ಮಕ್ಕಳು ನಿಮಗೇ ಹುಟ್ಟುವುದಿಲ್ಲವೆ?" ಎಂದು ಕೇಳಿದಳು.

ಆತ ಶಾಂತವಾಗಿ, "ಯಾರಿಗೆ ಗೊತ್ತು? ನಾನು ತಿಂಗಳಲ್ಲಿ ಕೆಲವೇ ದಿನಗಳು ಮಾತ್ರ ಇಲ್ಲಿರೋದು, ವರ್ಷಕ್ಕೊಂದು ಮಗು ಹುಟ್ಟುವುದೇಕೆ?" ಎನ್ನಬೇಕೇ!

ಛಿ. ಛಿ. ಹೀನಮನುಷ್ಯ, ನೀಚಮಾತುಗಳು! ಈತನೊಡನೆ ವಾದ ಮಾಡುವವರಿಗೆ ಬುದ್ಧಿಯಿಲ್ಲ ಆದರೂ ತಡೆಯದೆ ಆಕೆಯೆಂದಳು.

"ನಿಮಗೆ ಮಕ್ಕಳು ಬೇಡವೆಂದಾದಲ್ಲಿ ನಿಮ್ಮ ಹತ್ತಿರ ಬೇಕಾದಷ್ಟು ಮಾತ್ರೆಗಳಿಲ್ಲವೇ? ಮೊದಲೇ ಯಾವುದನ್ನಾದರೂ ಕೊಡಬಾರದಿತ್ತೇ?"

"ಈಗಲೂ ಏನು? ಮಾತ್ರೆ ಕೊಡ್ತೀನಿ. ತೆಗೆದುಕೊ, ರಕ್ತಸ್ರಾವ ವಾಗಿ ಬಿದ್ದುಹೋಗುತ್ತೆ." ಮೊದಲೇನೋ ಹೂಂ ಎಂದು ಮಾತ್ರೆಗಳನ್ನು ಇಸುಕೊಂಡಿದ್ದಳಾಕೆ. ಆದರ ತೆಗೆದುಕೊಳ್ಳಲಿಲ್ಲ, ಮಗುವಿಗೆ ಏನೋ ಮಾತ್ರೆ ಕೊಟ್ಟು ಅರೆ ಜೀವವಾದುದನ್ನು ಕಣ್ಣಾರೆ ಕಂಡಿಲ್ಲವೇ? ತನಗೂ ಹಾಗೇನಾದರೂ ಆಗಿ ನರಳುವಂತಾದರೆ ಯಾರು ನೋಡಿಕೊಳ್ಳುತ್ತಾರೆ? ಕೆಲವೊಮ್ಮೆ ಎಂತೆಂತಹ ಮುಟ್ಟುಗಳಿಗೂ ಬಗ್ಗದೇ ಗರ್ಭ ಬೆಳೆಯುದನ್ನು ಅವಳು ಕೇಳಿದ್ದಾಳೆ. ಕುಂಟೋ, ಕುರುಡೋ ಆದ ಸಂತಾನವಾದರೆ ಮುಂದೆ ಗತಿ

ಯೇನು? ಏನಾದರಾಗಲಿ, ಈ ಬಾರಿ ಮಗುವನ್ನು ಸುಸೂತ್ರವಾಗಿ ಪಡೆ
ದೇ ಸರಿ. ಆಮೇಲೆ ಆಪರೇಷನ್ ಮಾಡಿಸಿ ಕೊಂಡರಾಯಿತು ಆಕೆ ತಾ
ಯೇ ಈ ನಿರ್ಣಯವನ್ನು ಕೈಗೊಂಡರೂ ದಿನಗಳು ತುಂಬಿದಂತೆಲ್ಲ ಆ
ಳಾಗ ತೊಡಗಿದ್ದಳು. ಗಂಡನಂತೂ ತನಗೂ ಅವಳಿಗೂ ಸಂಬಂಧ
ಇಲ್ಲವೆಂಬಂತೆ ಉದಾಸೀನನಾಗಿ ಬಿಟ್ಟಿದ್ದ. ಆಸ್ಪತ್ರೆಗೆ ಹೋಗಿ ಹೆಸರು ಕ
ಲಿಕ್ಕಿಲ್ಲವೇ? ತಾನು ಅಲ್ಲಿ ಮಲಗಿದರೆ ಅರವಿಂದನನ್ನು ಯಾರು ನೋ
ಕೊಳ್ಳುತ್ತಾರೆ?

ಎಷ್ಟೋ ಬಾರಿ ಅವಳಿಗೆ ಆತ್ಮಹತ್ಯೆಯ ವಿಚಾರ ಬರುತ್ತಿತ್ತು, ಪ
ಭೀತಿಯಿಂದಾಗಿ ಧೈರ್ಯ ಸಾಲುತ್ತಿರಲಿಲ್ಲ. ಏನೇನು ಅನುಭವಿಸಲಿದೆ
ಅವೆಲ್ಲವನ್ನೂ ಈ ಜನ್ಮಕ್ಕೇ ಮುಗೆಸೋಣವೆನ್ನಿಸುತ್ತಿತ್ತು.

ತಾಯಿಗೆ ಪತ್ರ ಹಾಕಲೇ ಎಂದು ಎರಡೆರಡು ಬಾರಿ ಕಾ
ಪೆನ್ಸಿಲುಗಳನ್ನು ಹಿಡಿದುದುಂಟು. ಒಂದು ವೇಳೆ ಆಕೆ ತಾನೇ ಖ
ಮಾಡಿ ಬಂದರೂ ಇಲ್ಲಿಯ ಅವಸ್ಥೆಯನ್ನು ಕಂಡು ಎದೆಯೊಡೆದುಕೊ
ರೇನು ಗತಿಯೆಂದು ಕಾಣುತ್ತಿತ್ತು. ತನ್ನ ಅಸಹಾಯ ಸ್ಥಿತಿಯನ್ನು
ನೆನೆದು ಅತ್ತು ಕಣ್ಣೀರ ಸೆಲೆಯೇ ಬತ್ತಿಹೋದಂತೆನಿಸುತ್ತಿತ್ತು. ಯಾರು
ಇದಕ್ಕೆಲ್ಲ ಕಾರಣಪುರುಷನೋ ಆತ ಮಾತ್ರ ಠೀಕುಠಾಕಾಗಿ ಡ್ರೆಸ್ಸು ಮಾಡಿ
ಕೊಂಡು ಹೊರಟನೆಂದರೆ, ಇದೊಂದು ಗೋಮುಖ ವ್ಯಾಘ್ರವಾಗಿರಬಹು
ದೆಂಬ ಕಲ್ಪನೆ ಕೂಡ ಯಾರಿಗೂ ಬರುತ್ತಿರಲಿಲ್ಲ.

ಇಂದಿರೆ ಬಗೆಹರಿಯದ ಯೋಚನೆಗಳಲ್ಲಿ ಮುಳುಗಿರುವಾಗಲೇ
ಯಾರಿಂದಲೋ ತಂಗಿಯ ದುರವಸ್ಥೆಯನ್ನು ಕೇಳಿ ಅಣ್ಣ ಬಂದಿದ್ದ.
ಮನೆಯ ಈ ಕಡು ದಾರಿದ್ರ್ಯ, ಎಲ್ಲದಕ್ಕಿಂತಲೂ ಗಂಡನ ಈ ಅಸಡ್ಡೆ
ಯನ್ನು ಕಂಡು ಆಘಾತವಾಯಿತು. ಸರಿಯಾಗಿ ವಿಚಾರಿಸದೇ ಅವಸರ
ದಲ್ಲಿ ಅಯೋಗ್ಯನಿಗೆ ಧಾರೆಯೆರೆದು ಕೊಟ್ಟುದಕ್ಕಾಗಿ ವಿಚಾರಿಸದೇ ತುಂಬ
ಹಳಹಳಸಿದ. ಇನ್ನು ಅವಳನ್ನು ಕಳುಹಿಸುವುದೇ ಇಲ್ಲವೆಂದು ಹಾರಾಡಿ
ತಂಗಿಯನ್ನು ಮಗುವನ್ನು ಕರೆದೊಯ್ದ.

ಊರಿಗೆ ಬಂದ ಇಂದಿರೆ ಈ ಬಾರಿ ಹೆಣ್ಣು ಮಗುವಿಗೆ ಜನ್ಮಕೊಟ್ಟಳು. ಬಾಣಂತಿತನ ಕಳೆದಾಗ ಮಗಳು ಗಂಡನ ಮನೆಗೆ ಹೋಗಲಿ ಎನ್ನುವುದೇ ತಾಯಿಯ ಇಚ್ಛೆಯಾಯಿತು. 'ತಾಳಿಕೊಂಡು ಬಾಳಿಕೊಂಡು ನಡೆಯುವುದೇ ಧರ್ಮ' ಎಂದು ಮಗಳೂ ಉಪದೇಶಿಸಿದಳು. 'ನಿನ್ನ ಸದ್ಗುಣಗಳಿಂದ ಅವನನ್ನು ಒಲಿಸಿಕೊ' ಎಂದಳು, ಅಣ್ಣನೂ, 'ತಿಂಗಳು ತಿಂಗಳಿಗೆ ಖರ್ಚಿಗೆ ಹಣ ಕಳುಹಿಸ್ತೀನಿ. ಗಂಡನನ್ನು ಬಿಟ್ಟಿರುವುದು ಸರಿಯಲ್ಲ. ಇಂದಲ್ಲ ನಾಳೆ ಸರಿದಾರಿಗೆ ಬಂದಾನು' ಎಂದ. ಇಂದಿರೆ ಒಪ್ಪಲಿಲ್ಲ. ಗಂಡನ ಭೋಗದ ವಸ್ತುವಾಗಿ, ಹೆರುವ ಯಂತ್ರವಾಗಿ, ವರ್ಷ ವರ್ಷವೂ ತವರಿಗೆ ಬಂದು ಬಾಣಂತಿತನ ಮಾಡಿಸಿಕೊಳ್ಳುವ ಆಸೆ ತನಗಿಲ್ಲವೆಂದು ಸ್ಪಷ್ಟವಾಗಿ ಹೇಳಿದಳು. ಇಂತಹ ಬೇಜವಾಬ್ದಾರಿಯ ಜೀವನ ಎಲ್ಲಿಯವರೆಗೆ ನಡೆದೀತು? ಒಂದಲ್ಲ ಒಂದು ದಿನ ಈ ಸಮಸ್ಯೆಯನ್ನು ಎದುರಿಸಬೇಡವೇ? ಈಗಾಗಲೇ ಇಬ್ಬರು ಮಕ್ಕಳ ಜವಾಬ್ದಾರಿಯೆಂಬುದೇನು ಸಣ್ಣ ವಿಷಯವೇ? ತಾಯಿಯೆಂದರು. "ಗಂಡ ಬಿಟ್ಟವಳು ಎನ್ನುವುದು ಕುಲಕ್ಕೇ ಕಲಂಕ. ಸೀತೆ, ಸಾವಿತ್ರಿಯರೇನು ಕಡಿಮೆ ಅನುಭವಿಸಿದರೇ? ಏನಿದ್ದರೂ ಗಂಡನನ್ನು ಅನುಸರಿಸಿಕೊಂಡು ಬಾಳುವುದು ಧರ್ಮ."

ಇಂದಿರೆ ಉರಿದು ಬಿದ್ದಳು. ಹೊಟ್ಟೆಯೊಳಗಿನ ಸಂಕಟವೆಲ್ಲ ಒತ್ತಿಕೊಂಡು ಬಂತು. "ಸೀತೆ, ಸಾವಿತ್ರಿಯರೆಂದು ಹೆಣ್ಮಕ್ಕಳಿಗೆ ಉಪದೇಶ ಕೊಡುವುದನ್ನು ಇನ್ನಾದರೂ ಸಾಕು ಮಾಡು, ಪತ್ನೀವ್ರತಸ್ಥನಾದ ರಾಮನಂತಹ ಗಂಡಸಿಗೆ ಮಾತ್ರ ಸೀತೆಯಂತಹ ಹೆಂಡತಿಯ ಯೋಗ್ಯತೆಯಿರುವುದು. ನಾಲ್ಕಾರು ಮಕ್ಕಳನ್ನು ಹುಟ್ಟಿಸಿ, ಹೆಂಡತಿಯನ್ನು ಮಕ್ಕಳನ್ನು ಇನ್ನೊಬ್ಬರ ಕೂಳಿಗೆ ಕೈಯೊಡ್ಡಲು ಹಚ್ಚುವ ಲಜ್ಜೆಗೇಡಿ ಗಂಡಸಿಗೆ ಸೀತೆಯ ಹೆಸರನ್ನೆತ್ತುವ ಯೊಗ್ಯತೆಯೂ ಇಲ್ಲ ತಿಳಿಯಿತೇ? ಚಿಕ್ಕಂದಿನಿಂದಲೂ ನಮ್ಮನ್ನು ಹೆಣ್ಣು ಹೆಣ್ಣು ಎಂದು, ಸೀತೆ ಸಾವಿತ್ರಿಯೆಂದು ಇಪ್ಪತ್ತುನಾಲ್ಕು ಆದರ್ಶಗಳನ್ನು ತಲೆಯಲ್ಲಿ ತುರುಕಿಸಿ, ಅಬಲೆಯರನ್ನಾಗಿಯೇ ಬೆಳೆಯಿಸಿ ಅಯೋಗ್ಯನಿಗೆ ಮದುವೆಮಾಡಿ ಕೊಡುವುದಕ್ಕೂ, ಕೈಕಾಲು ಕಟ್ಟಿ ಹೊಳೆಯಲ್ಲಿ ಹಾಕುವುದಕ್ಕೂ ಏನೂ ವ್ಯತ್ಯಾಸವಿಲ್ಲ; ಗೊತ್ತೇ?"

ಮಗಳ ಆವೇಶದೆದ್ರುರು ತಾಯಿ ತಣ್ಣಗಾದರು. ಇಂದಿರೆ ಹಟಹಿಡಿದು ಕಾಲೇಜು ಕಲಿತಳು. ಬಂಧುಗಳ, ಊರವರ ಯಾವ ಕುಹಕದ ನುಡಿಗಳಿಗೂ ಬೆದರಲಿಲ್ಲ. ಒಮ್ಮೆ ಆರ್ಥಿಕವಾಗಿ ಸ್ವಾತಂತ್ರಳಾದರೆ ತನ್ನಸಮಸ್ಯೆಗೆ ತಾತ್ಕಾಲಿಕ ಪರಿಹಾರ ಸಿಗುವುದೆಂದು ಅವಳ ನಂಬಿಕೆಯಾಗಿತ್ತು. ಮೊದಲು ಆಕಗೆ ಶಾಲೆಯಲ್ಲಿ ನೌಕರಿ ಸಿಕ್ಕಿತು. ಆಮೇಲೆ ಎಮ್. ಎ. ಮುಗಿಸಿದಾಗ ಕಾಲೇಜಿನಲ್ಲಿ ಉಪನ್ಯಾಸಕಿಯಾದಳು. ತಾಯಿ ಕಣ್ಣು ಮುಚ್ಚಿದರು. ಅಣ್ಣನಿಗೆ ಮಕ್ಕಳಾಗಿರಲಿಲ್ಲ. ಆದರೂ ಇಂದಿರೆ ತನ್ನ ಮಕ್ಕಳೊಡನೆ ಬೇರೆಯಾಗಿಯೇ ವಾಸಮಾಡತೊಡಗಿದ್ದಳು. ಯಾರಿಗೂ ಭಾರವಾಗಿರುವುದು ಅವಳ ಸ್ವಾಭಿಮಾನಕ್ಕೇ ಒಪ್ಪುತ್ತಿರಲಿಲ್ಲ.

ನೌಕರಿಯನ್ನೂ ಕಳೆದುಕೊಂಡು, ಆರೋಗ್ಯವನ್ನೂ ಹಾಳುಮಾಡಿಕೊಂಡು ಗಂಡ ಬಂದಿದ್ದ. ತುಂಬ ಪ್ರೀತಿಯನ್ನೂ, ಪಶ್ಚಾತ್ತಾಪವನ್ನೂ ನಟಿಸಿದ. ಇದರೆ ಅವಳ ಪ್ರೀತಿ ಎಂದೋ ಸತ್ತಿತ್ತು. ನಿರ್ದಾಕ್ಷಿಣ್ಯವಾಗಿ ಅವನನ್ನು ಅಟ್ಟಿಬಿಟ್ಟಿದ್ದಳು. ಅವಳನ್ನು ಉದ್ಧಾರ ಮಾಡುವ ನಾಟಕದ ಕೊನೆಯ ಅಂಕ ಮುಗಿಯಿತು. ಮಗನನ್ನ, ಮಗಳನ್ನ ತಾಯಿ ಒಳ್ಳೇ ಶಿಕ್ಷಣವನ್ನು ಕೊಟ್ಟು ಬೆಳೆಸಿದಳು. ಎಲ್ಲದಕಿಂತಲೂ ಹೆಚ್ಚಾಗಿ ಮಗಳಿಗೆ ಒಂದು ದಿನವೂ 'ನೀನು ಹೆಣ್ಣು' ಎನ್ನುವುದನ್ನು ಜ್ಞಾಪಿಸಿಕೊಡಲಿಲ್ಲ. ಸ್ವತಂತ್ರ ವಾತಾವರಣದಲ್ಲಿ. ಸ್ವತಂತ್ರ ವಿಚಾರಗಳನ್ನು ಕೊಟ್ಟು ತನ್ನ ಕಾಲ ಮೇಲೆ ತಾನು ನಿಲ್ಲುವಂತಹ ಆತ್ಮವಿಶ್ವಾಸದೊಂದಿಗೇ ಪದವೀಧರೆಯನ್ನಾಗಿ ಮಾಡಿ ಆಮೇಲೆ ಯೋಗ್ಯ ಹುಡುಗನಿಗೆ ಅವಳ ಅನುಮತಿಯೊಂದಿಗೇ ಮದುವೆ ಮಾಡಿಕೊಟ್ಟಿದ್ದರು. ಇಂದಾಕೆ ಮೂರು ಮಕ್ಕಳ ತಾಯಿಯಾಗಿ ಸುಖಿಯಾಗಿದ್ದಾಳೆ. ಮಗ ವಕೀಲವೃತ್ತಿಯಲ್ಲಿದ್ದಾನೆ. ಸೊಸೆ ಬ್ಯಾಂಕ್ ನೌಕರಿ ಮಾಡುತ್ತಿದ್ದಾಳೆ. ಮೊಮ್ಮಕ್ಕಳಿಬ್ಬರೂ ಶಾಲೆಗೆ ಹೋಗುತ್ತಿದ್ದಾರೆ.

ಆದರೂ, ಇಂದಿಗೂ ಬಂದಳಿಕೆ ಕಣ್ಣಿಗೆ ಬಿದ್ದರೆ ಪರಾವಲಂಬಿಗಳಾದ ಹೆಣ್ಣು ಮಕ್ಕಳ ಚಿತ್ರ ಅವರ ಕಣ್ಣಿಗೆ ಕಟ್ಟುತ್ತದೆ.

"ಹೆಣ್ಮಕ್ಕಳನ್ನು ಜರೆಯದೇ ಸರಿಯಾದ ಶಿಕ್ಷಣ ಕೊಟ್ಟು ಅವರಲ್ಲಿ

ಆತ್ಮವಿ ಶ್ವಾಸವನ್ನು ತುಂಬುವ ಅಗತ್ಯ ಇಂದು ಎಂದಿಗಿಂತಲೂ ಹೆಚ್ಚಾಗಿಯೇ ಇದೆ." ಎಂದರು ಇಂದಿರೆ.

ಸ್ವಸ್ವತಮ್ಮ ಮನನೊಂದು ನುಡಿದರು.

" ಆರಿಮೆ, ಪರಾವಲಂಬನ ಹೆಣ್ಣಿನ ಸ್ವಂತಿಕೆಯನ್ನು ನಷ್ಟ ಮಾಡುತ ನೆ. ನೀವಾದುದಕ್ಕೆ ಇಂತಹ ಪರಿಸ್ಥಿತಿಯನ್ನ ಧೈರ್ಯವಾಗಿ ಎದುರಿಸಿ ಗೆದ್ದು ಬಂದಿರಿ. ಮುಖ್ಯವಾಗಿ ಹೆಣ್ಣು ದಿಟ್ಟೆಯಾಗಿರಬೇಕು. ತಾನು ನ ನುದನ್ನ, ಬದುಕಿನಲ್ಲಿ, ಕೃತಿಯಲ್ಲಿ ಇಳಿಸುವ ಕೆಚ್ಚು ಬೇಕು. ಆಗ ಅವ ಗೆ ಗೆಲುವು ಕಟ್ಟಿಟ್ಟ ಬುತ್ತಿ." "ಅಂತೂ ಎಂದೆಂದೂ ಬಂದಳಿಕೆ ಯಾಗೋ ು ಬೇಡ." ಎನ್ನುತ್ತಾ ಇಂದಿರೆ ಮಾತು ಮುಗಿಸಿದರು.



# ತುಂಬುಜೀವನ

—ಜಯಲಕ್ಷ್ಮೀ ಶ್ರೀನಿವಾಸನ್

ಮಕ್ಕಳನ್ನು ಪಾಠಶಾಲೆಗೆ ಕಳುಹಿಸಿ ಬೀದಿಯ ಬಾಗಿಲು ಮುಚ್ಚಿ ಬಂದಳು ವಂದನಾ. ಇನ್ನು ಪತಿದೇವರ ಊಟವಾಗಬೇಕು. ಆ ಬಳಿಕ ತಾನು ಪೂಜೆ ಮುಗಿಸಿ, ತಾನು ಊಟಕ್ಕೆ ಕೂರಬೇಕು. ಸಾಕಪ್ಪಾ, ಈ ಸಂಸಾರ ತಾಪತ್ರಯ 'ಉಸ್ ಅಪ್ಪಾ' ಎಂದು ಒಂದು ಘಳಿಗೆ ನೆಮ್ಮದಿಯಾಗಿ ಕುಳಿತುಕೊಳ್ಳಲು ಅವಳಿಗೆ ಸಮಯವೆಲ್ಲಿ ?

ಇಬ್ಬರ ಊಟ ಮುಗಿದು ಎಲೆ ಅಡಿಕೆ ಹಿಡಿದು ಬಂದಾಗ ರಘುಪತಿ "ಇನ್ನು ಆಫೀಸಿಗೆ ಹೋಗುವ ಯೋಚನೆ ಮಾಡಬೇಕು" ಎಂದು ಮಾತಿಗೆ ಪ್ರಾರಂಭಿಸಿದನು.

ವಂದನಾ ಕುರ್ಚಿಯಲ್ಲಿ ಕುಳಿತು ಸುಧಾರಿಸಿಕೊಳ್ಳುತ್ತ "ಯಾಕೆ ಇಷ್ಟು ಅವಸರ ? ಜ್ವರ ಬಿಟ್ಟು ವಾರವಾಗಲಿಲ್ಲ"

"ಈಗಾಗಲೇ ಫೈಲುಗಳು ರಾಶಿರಾಶಿ ಸೇರಿರುತ್ತವೆ. ನಾನು ಹೋಗುವುದು ಇನ್ನೂ ನಿಧಾನವಾದರೆ ಮತ್ತಷ್ಟು ಸೇರಿಹೋಗುತ್ತಷ್ಟೆ"

"ಇನ್ನೂ ನಾಲ್ಕು ದಿನಗಳು ರಜ ಬಾಕೀ ಇದೆ. ಈ ನಾಲ್ಕು ದಿನಗಳನ್ನೂ ಆರಾಮವಾಗಿ ಕಳೆಯಿರಿ."

"ನಾನು ಆರಾಮದಿಂದಿರುವುದು ಇರಲಿ. ನನಗೀಗ ಆಯಾಸವೇನೂ ಇಲ್ಲ. ನಿನಗೇ ಈಗ 'ಪೆರ್‌ಪೆಕ್ಟ್‌ರೆಸ್ಟ್' (Perfect rest) ಬೇಕು. ನನಗೊಂದು ಹೊಸ ಯೋಚನೆಯೊಂದು ಹೊಳೆದಿದೆ.

"ಅದೇನದು ?"

"ನಿನ್ನ ಗೆಳತಿ ಡಾಕ್ಟರ್ ?"

"ರಾಧಿಕಾ..."

"ನಿನ್ನನ್ನು ಬಹಳ ದಿನದಿಂದ ಮದರಾಸಿಗೆ ಕರೆಯುತ್ತಾಳಲ್ಲಾ. ಅವಳ ಮನೆಗೆ ಹೋಗಿ ನಾಲ್ಕು ದಿನಗಳು ಆರಾಮವಾಗಿ ಇದ್ದು ಬಾ"

"ಇದೇನ್ರೀ ಇದು !" "ನಾನು ಹೊರಟು ಹೋದರೆ, ನಿಮಗೆ ಇಲ್ಲಿ ಅಡಿಗೆ ಮಾಡಿ ಬಡಿಸುವವರಾರು ? ಮಕ್ಕಳನ್ನು ಸುಧಾರಿಸುವವಳಾರು ? ನೀವಂತೂ ಖಾಯಿಲೆಯಿಂದ ಎದ್ದು ಇದೇ ತಾನೇ ಚೇತರಿಸಿಕೊಳ್ಳು ತ್ತಿರುವಿರಿ..."

ರಘು "ಈ ಚಿಂತೆಯೆಲ್ಲ ನಿನಗೆ ಬೇಡ. ಸುಬ್ಬಯ್ಯನ ಹೋಟಲಿನಿಂದ ಊಟ ತರಿಸಿಕೊಳ್ಳುತ್ತೇನೆ. ಹಾಲು ಕಾಯಿಸಿ ಕಾಫೀ ತಯಾರಿಸಿ....ಈ ಎಲ್ಲ ಕೆಲಸಗಳೂ ನನ್ನ ಪಾಲಿಗಿರಲಿ. ಟಿಫನಿಗಂತೂ ಐಯ್ಯಂಗಾರ್ ಬೇಕರಿಯ ಬ್ರೆಡ್ ಬನ್, ಬಿಸ್ಕತ್....ಇದ್ದೇ ಇವೆ. ಇವು ಮಕ್ಕಳಿಗೂ ಬಹಳ ಇಷ್ಟ. ನಾಲ್ಕುದಿನ ಹೋಗಿ ಬಾ ಎಂದು ಬಹಳ ಹಿತವಾಗಿ ಹೇಳಿದನು.

"ನನ್ನನು ತಮಾಷೆ ಮಾಡುವಿರಾ ?"

ಇಲ್ಲ ಚಿನ್ನ, ನಿಜವಾಗಿಯೂ ಹೇಳುತ್ತಿದ್ದೇನೆ, ನೀನು ಹೋಗಿ ಬಾ"

"ಸಂಗೀತಾಳನ್ನಾದರೂ ಜೊತೆಗೆ ಕರೆದುಕೊಂಡು ಹೋಗ್ತೀನಿ."

"ಯಾರೂ ಬೇಡ ವಂದನಾ. ಎಲ್ಲರನ್ನೂ ನಾನು ನೋಡಿಕೊಳ್ಳು ತ್ತೇನೆ. "ನಿನಗೆ ತುಂಬ ವಿಶ್ರಾಂತಿಯೂ ಬದಲಾವಣೆಯೂ ಬೇಕು. ನಾಲ್ಕುದಿನ ಸುಧಾರಿಸಿಕೊಂಡು ಬಾ"

ಪತಿಯ ಸೂಚನೆ ಮನೆಯ ಯಾಂತ್ರಿಕ ಜೀವನದಿಂದ ಬೇಸತ್ತಿದ್ದ ವಂದನಾಗೂ ಹಿತವೆನಿಸಿತು.

ವಂದನಾ ಮರುದಿನ ಮಧ್ಯಾಹ್ನದ ಬೃಂದಾವನ್ ಎಕ್ಸ್‌ಪ್ರೆಸ್ಸಿನಲ್ಲಿ ಮದರಾಸಿಗೆ ಪಯಣ ಬೆಳೆಸಿದಳು. ಅವಳ ಬಹು ದಿನಗಳ ಬಯಕೆ ಇದೀಗ ಈಡೇರಿತು. ಪ್ರಯಾಣ ಮಾಡುತ್ತಿದ್ದಂತೆಯೇ ತನ್ನ ಪತಿಯ ಹಿರಿಯ ಗುಣಕ್ಕಾಗಿ ಮನಸಾರೆ ಅವನನ್ನು ಮೆಚ್ಚಿ ಧನ್ಯವಾದ ನೀಡಿದಳು. ಕಾಲೇಜು ದಿನಗಳ ಸವಿನೆನಪುಗಳಂತೂ ಮಿಂಚಿನಂತೆ ಮಿನುಗುಟ್ಟಿದವು. ವಂದನಾ ರಾಧಿಕಾಗಿಂತ ಚೆಲುವೆ. ಗಳಿಗೆ ಗಳಿಗೆಗೂ ಗಾಜಿನ ಬಟ್ಟಲು ಒಡೆಯುವಂತೆ ಕಿಲಕಿಲನೆ ನಗುತ್ತ ಚೂಟಿಯಾಗಿ ಓಡಿಯಾಡುತ್ತಿದ್ದ ಆ ಸೌಂದರ್ಯ ರಾಣಿ ಎಲ್ಲರಿಗೂ ಅಚ್ಚುಮೆಚ್ಚು. ಹೂವು ಮುಗುಳೂ ತುಂಬಿದ ವಸಂತದಕಾಲದ ಪುಷ್ಪಿತ ಗಿಡದಂತಿದ್ದಳು. ಇದೀಗ ಬತ್ತಿದ ದೇಹ, ಜೋಲು ಕೆನ್ನೆ, ಸುಕ್ಕಿದ ಮುಖ, ಇಂಗಿದ ಕಣ್ಣುಗಳುಳ್ಳ ಮೂರು ಮಕ್ಕಳ ತಾಯಿ. ವಂದನಾಳನ್ನು ರಾಧಿಕಾ ಕಂಡರೆ ಗುರುತು ಹಿಡಿಯಬಲ್ಲಳೆ ? ರಾಧಿಕಾಳಂತೂ ಇನ್ನೂ ವಿವಾಹವಾಗದ ರಮಣಿ. ಹರೆಯದ ಹುಡುಗಿಯಂತಿರಬಹುದು. ತನ್ನಂತೆ ಅವಳಿಗೆ ಸಂಸಾರದ ನೂರೆಂಟು ತಾಪತ್ರಯಗಳೇನೂ ಇರಲಾರವು. ಹಾಯಾಗಿ ರಾಣಿಯಂತಿದ್ದಾಳೆ. ಕೈ ತುಂಬ ಸಂಬಳ, ಕೈಗೊಂದು ಕಾಲಿಗೊಂದು ಆಳುಗಳು. ತನ್ನಂತೆ ಅವಳು ಮನೆ, ಮಠ, ಗಂಡ, ಮಕ್ಕಳು, ಖಾಯಿಲೆ ಕಸಾಲೆಯೆಂದು ಒಂದಿಲ್ಲೊಂದು ಕಷ್ಟ ಅನುಭವಿಸಬೇಕಿಲ್ಲ. ಆಸ್ಪತ್ರೆಯ ಡ್ಯೂಟಿ ಮುಗಿದು ಮನೆಗೆ ಬಂದಳೆಂದರೆ ತಾನೇ ತನ್ನ ಮನೆಗೆ ರಾಣಿ, ರಾಜ ಎಲ್ಲ ! ಅವಳಿಗೆ ಇನ್ನೆಂತಹ ನೆಂಟರೂ ಇಲ್ಲ...." ಈ ರೀತಿ ವಂದನೆಯ ಯೋಚನೆ ಓಡಿತು. ಕೈಯಲ್ಲಿ ಹಿಡಿದಿದ್ದ ಪುಸ್ತಕದ ಮೇಲೂ ಅವಳ ಗಮನ ಹರಿಯಲಿಲ್ಲ. ಚಿಂತನಾರಂಗದಲ್ಲಿ ಹೊತ್ತು ಹೋದುದೇ ತಿಳಿಯಲಿಲ್ಲ.

ಸಂಜೆಯ ವೇಳೆಗೆ ರೈಲುಗಾಡಿಯು ಮದರಾಸ್ ತಲುಪಿತು. ಡಾ॥ ರಾಧಿಕಾ ಸ್ಟೇಷನ್‌ಗೆ ಬಂದಿದ್ದಳು. "ಬಾ ವಂದನಾ !" ಎಂದೆನ್ನುತ್ತ ಗೆಳತಿಯನ್ನು ಆದರದಿಂದ ಕೈಹಿಡಿದು ಗಾಡಿಯಿಂದ ಇಳಿಸಿಕೊಂಡಳು. ಗೆಳತಿಯರಿಬ್ಬರೂ ಪರಸ್ಪರ ಯೋಗಕ್ಷೇಮಗಳನ್ನು ವಿಚಾರಿಸಿಕೊಂಡ ನಂತರ

ಡಾ॥ ತನ್ನ ಕಾರಲ್ಲಿ ವಂದನೆಯನ್ನು ಕುಳ್ಳಿರಿಸಿಕೊಂಡು 'ಕೋಡಂ ಬಾಕ್ಕಂ' ವಿಸ್ತರಣದಲ್ಲಿರುವ ತನ್ನ ಮನೆಗೆ ಕರೆದೊಯ್ದಳು. ರಾಧಿಕಾ ವಂದನೆಯರು ಕಾರಿಂದ ಇಳಿದುಬಂದು ಮನೆಯ ಡ್ರಾಯಿಂಗ್ ರೂಮಲ್ಲಿ ಕುಳಿತರು. ಅವರಿಬ್ಬರ ಮಾತುಕತೆ ರಾತ್ರಿಯಾದರೂ ಮುಗಿಯದ. ಮಾತಿನ ನಡುವೆಯೇ ತಿಂಡಿ, ಕಾಫಿ ಊಟ ಉಪಚಾರಗಳೂ ಮುಗಿದುವು.

ಎಲ್ಲ ಸರಿ, ವಂದನಾ ಅಂದುಕೊಂಡಿದ್ದಂತೆ ರಾಧಿಕಾ ಆರಾಮ ಜೀವನ ನಡೆಸುತ್ತಿದ್ದಳು...ಆದರೆ......ಅವಳ ಕಣ್ಣುಗಳಲ್ಲಿ ಕಾಲೇಜು ದಿನದ ಆ ಹೊಳಪಿಲ್ಲ. ಅವಳ ತುಟಿಗಳಲ್ಲಿ ಆ ಹುರುಪಿನ ತುಂಟಾಟಿಕೆಯ ನಗುವಿಲ್ಲ. ಮಾವಿನ ಹಣ್ಣುಗಳಂತೆ ಅವಳ ಚೆಲುವಾದ ಹುಬ್ಬುಗೆನ್ನೆಗಳಲ್ಲಿ ಈಗ ಆ ರಂಗಿಲ್ಲ. ಕಣ್ಣುಗಳ ಕೆಳಗೆ—ಅದೇನದು ? ಆ ಕಪ್ಪು ಛಾಯೆ ? ಕಾಡಿಗೆಯಂತೂ ಹಚ್ಚಿಕೊಂಡಿಲ್ಲವಲ್ಲ....ಹಾಂ...ಅದು ಆಯಾಸದ ವಯಸ್ಸಿನ ಕಪ್ಪು ಗುರುತು. ಹೌದು........ಹೌದು, ಅವಳಿಗೆ ಬದುಕಿನಲ್ಲಿ ಆಸಕ್ತಿ ಇಲ್ಲ....ಆಕೆ ನಿರ್ಲಿಪ್ತೆ....!

ಪಾಪ ರಾಧಿಕಾ, ಈ ಏಕಾಂತ ಜೀವನದಲ್ಲಿ ಬೇಸತ್ತಿದ್ದಾಳೆ. ತನಗಿಂತ ಬೇಗ ಅವಳನ್ನು ಮುಪ್ಪು ಸಮೀಪಿಸುತ್ತಿದೆ. 'ಪಾಪ ರಾಧಿಕಾ ಅವಳಲ್ಲಿ ತಾನು ಅಸೂಯೆಗೊಂಡದ್ದು ಶುದ್ಧ ತಪ್ಪು ಎಂದರಿವಾಯಿತು, ವಂದನಾಗೆ.

ರಾಧಿಕಾ ಮನೆಯಲ್ಲಿದ್ದು ಆ ನಾಲ್ಕು ದಿನಗಳೂ ಅವಳು ವಂದನೆಗೆ ರಾಜೋಪಚಾರ ಮಾಡಿದಳು. ಆ ನಾಲ್ಕು ದಿನಗಳೂ ತಾನೂ ಆಸ್ಪತ್ರೆಗೆ ರಜಬರೆದು ಹಾಕಿ ವಂದನೆಯ ಜೊತೆಯಲ್ಲೇ ಇದ್ದಳು. ಇಬ್ಬರೂ ಹಗಲಿರುಳೂ ಮಾತನಾಡಿದ್ದೂ ಮಾತನಾಡಿದ್ದೇ. ತಮ್ಮ ಗತಕಾಲದ ಸವಿನೆನಪುಗಳನ್ನು ಪರಸ್ಪರ ಹೇಳಿ ತಣಿದರು. ರಾಧಿಕಾ ತನ್ನ ಒಡವೆ, ವಸ್ತು, ಅಮೂಲ್ಯವಾದಂತಹ ಸೀರೆಗಳು ಎಲ್ಲವನ್ನೂ ಗೆಳತಿ ತೋರಿಸಿದಳು. ಆದರೆ ಅವಳ ಒಣನಗುವಲ್ಲಿ ಅವಳಿಗೆ ಎಂತಹುದೋ ಕೊರತೆ

ಘುಂಟೆಂಬುದನ್ನು ನಂದನಾ ಅರಿತಳು. ಬಾಯಿ ಬಿಟ್ಟು ಕೇಳಿ ತಿಳಿಯುವ ಧೈರ್ಯವಂತೂ ವಂದನಾಗೆ ಇಲ್ಲ.

ಆ ಹೊತ್ತು, ಮಧ್ಯಾಹ್ನ ಗೆಳತಿಯರಿಬ್ಬರೂ ಅದೇ ತಾನೇ ಅಡ್ಯೆ ಯಾರ್ ಕಲಾಕ್ಷೇತ್ರದಿಂದ ಬಂದವರು. ಊಟ ಮುಗಿಸಿ ಹಜಾರಕ್ಕೆ ಬಂದರು. ಟಪಾಲು ಬಂತು ವಂದನಾ ನಿನಗೆ ವಾರೆಂಟ್! ನಿನ್ನ ಡಾರ್ಲಿಂಗ್ ನಿನ್ನನ್ನಿನ್ನೂ ಬಿಟ್ಟಿರಲಾರರು ಎಂದು ತಮಾಷೆ ಮಾಡುತ್ತ ಲಕೋಟೆಯನ್ನು ವಂದನೆಯ ಕೈಗೆ ಕೊಟ್ಟಳು ರಾಧಿಕಾ.

"ಹೋಗೆ, ರಾಧೀ, ನಿನಗೆ ಯಾವಾಗಲೂ ನನ್ನನ್ನು ಗೋಳುಯ್ಕೋ ಬೇಕು" ಎಂದೆಂದು ಲಕೋಟೆಯನ್ನೂ ಒಡೆದು ಗಟ್ಟಿಯಾಗಿಯೇ ಓದಿದಳು

"ಪ್ರಿಯ ವಂದನಾ"

ಮಕ್ಕಳೆಲ್ಲರೂ ಸೌಖ್ಯವಾಗಿದ್ದಾರೆ. ಆದರೆ ನಾನು ಅವರನ್ನು ಎಷ್ಟೇ ಚೆನ್ನಾಗಿ ನೋಡಿಕೊಂಡರು ನಿನ್ನ ಬರುವಿಕೆಗಾಗಿ ಕಾದಿದ್ದಾರೆ! ಅಮ್ಮ ಯಾವಾಗ ಬರುತ್ತಾಳೆ? ಥೂ ನಿನಗೆ ಚಾಕಲೇಟ್ ಬೇಡ. ಅಮ್ಮಾನೆ ಬೇಕು ಹೀಗೆ ನನ್ನನ್ನು ಕಾಡಿಸುತ್ತಿದ್ದಾ. ಅವರನ್ನೇಕೆ ಹೇಳಲಿ? ನನಗೂ ನೀನು ಈಗಲೇ ಬಂದರೆ ಚೆನ್ನ. ಬುಧವಾರ ಮಧ್ಯಾಹ್ನ ರೈಲ್ವೆ ಸ್ಟೇಷನ್‌ನಲ್ಲಿ ನಾವೆಲ್ಲರೂ ಕಾದಿರುತ್ತೇವೆ ನೀನು ಖಂಡಿತ ಆ ಗಾಡಿಯಲ್ಲಿ ಬಂದುಬಿಡು,

ಇಂತಿನಿನ್ನ ...ರಘು

ವಂದನೆಯ ಮುಖ ಆನಂದದಿಂದಲೂ ನಾಚಿಕೆಯಿಂದಲೂ ಕೆಂಪೇ ರಿತು, ಮಳೆಗಾಲದ ಹೂದೋಟದ ಸೊಬಗಿನಂತೆ ಅವಳ ಮುಖ ಕಳಕಳಿಯಾಗಿ ಲಾವಣ್ಯವನ್ನು ಹೊರಚೆಲ್ಲಿತು. ರಾಧಿಕಾ ಆ ಮನೋಹರ ದೃಶ್ಯವನ್ನು ಕಂಡುಬೆರಗಾದಳು.

ವಂದನಾ! ನೀನೇ ಧನ್ಯೆ, ನಾನು ಕೇಳುತ್ತಿದ್ದೇನೆ, ಈ ನಾಲ್ಕು ದಿನ ಗಳಿಂದ ನಿನ್ನ ಕೌಟುಂಬಿಕ ಬಾಳ್ವೆಯಲ್ಲಿ ಬಹಳ ಶ್ರಮ ಪಡುತ್ತಿರುವುದಾಗಿ ಗೋಳಾಡುತ್ತಿದ್ದೀ ! ಶ್ರಮವಂತೆ ಏತರ ಶ್ರಮ ಇದು ? ಮುದ್ದು ಮಕ್ಕಳು ! ನಿನ್ನಲ್ಲಿ ಪ್ರಾಣವಿಟ್ಟಿರುವ ಪತಿ! ಇದಕ್ಕಿಂತ ಹೆಚ್ಚಿನ ಸುಖ ಈ ಲೋಕದಲ್ಲಿ ಬೇರೇನಿದೆ?....ವಂದನಾ ನೀನೇ ಸುಖಿ! ನೀನೇ ಧನ್ಯೆ ನಮ್ಮ ಆಪ್ತರಿಗೆ ಮಾಡುವ ಕೆಲಸ ಕಾರ್ಯಗಳು ದುಡಿತವೇನೇ ಪೆದ್ದೀ" ಎಂದು ಗೆಳತಿಯನ್ನು ಮುದ್ದಾಗಿ ಖಂಡಿಸಿದಳು ರಾಧಿಕಾ.

"ವಂದನಾ! ನಾನು ಮೋಸ ಹೋದೆ ಕಣೇ. ಸ್ವತಂತ್ರ ಜೀವ ನವೇ ಸುಖಮಯವೆಂದು ಕೊಂಡಿದ್ದೆ. ಅದು ತಪ್ಪು. ಈಗ ನೋಡು- ನನಗೆ ಯಾರಿದ್ದಾರೆ? ನಾಳೆ ನೀನು ಬೆಂಗಳೂರಿಗೆ ಹೋರಟು ಹೋಗುತ್ತಿ, ನನ್ನನ್ನು ಕೇಳುವವರಾರು? ನಾನು ಒಂಟೀ, ಒಂಟೀ, ನಿನ್ನದೇ ತುಂಬು ಜೀವನ ರಾಧಿಕಾಳ ಕಂಠ ದುಃಖದಿಂದ ಬಿಗಿಯಿತು. ಮುಂದೆ ಮಾತನಾಡಲಾರದಾದಳು, ರಾಧಿಕಾಳ ಒಣನಗುವಿನ ಕಾರಣವನ್ನು ಈಗಾಗಲೇ ವಂದನಾ ಇತ್ಯರ್ಥ ಮಾಡಿಕೊಂಡಿದ್ದಳು. ಗೆಳತಿಯನ್ನು ಹೇಗೆ ಸಂತೈಸಬೇಕೋ ತಿಳಿಯಲಾರದೆ, ಬೆಂಗಳೂರಿನ ರೈಲು ಹತ್ತಿದಳು.

O✱O

# ಮೊನ್ನಾ

—ನೀಳಾದೇವಿ

ರಾತ್ರಿ ಹತ್ತೂವರೆಯಾಗಿತ್ತು, ಜುಕೇಲಿಗೆ ತಲುಪುವ ರೈಲು ಇಂದೂ ಒಂದು ಗಂಟೆ ತಡವಾಗಿಯೇ ಬಂದಿತ್ತು. ಯಃಕಶ್ಚಿತ ಫ್ಲ್ಯಾಗ್ ಸ್ಟೇಷನ್ ಎಂದ ಮೇಲೆ ಅದಕ್ಕೊಂದು ನಿಯಮಿತ ವೇಳೆ ಎಲ್ಲಿ?

ಐದು ವರ್ಷಗಳ ನಂತರ ಅದೇ ಪ್ಲಾಟ್ ಫಾರಂ ಮೇಲೆ ಕಾಲಿಡುತ್ತಿದ್ದಾಳೆ ಜಯಶ್ರೀ. ಆಡಿಟಿಂಗ್ ಟೂರ್ ಹೊರಟಿದ್ದ ಗಂಡ ರಘುವನ್ನು ನೆರಳಂತೆ ಹಿಂಬಾಲಿಸುತ್ತಿದ್ದಾಳೆ. ಹೌದು, ಅವನು ಹತ್ತು ಹದಿನೈದು ದಿನ ಟೂರ್ ಹೊರಟು ಹೋದರೆ ನಾಗಪುರದ ಮನೆಯಲ್ಲಿ ಒಬ್ಬಂಟಿಗಳಾಗಿ ಇರುವುದು ತಾನೇ ಹೇಗೆ?

ಈ ಊರಿನ ಮಣ್ಣಿನ ಮೇಲೆ ಕಾಲಿಟ್ಟೊಡನೆಯೇ ಮುಳ್ಳು ಚುಚ್ಚಿದಂತಾಗಿ ಏಕೊ ಮೈಜುಂ ಎಂದಿತು.

ಛಿ! ಎಲ್ಲ ಹಳೇ ನೆನಪೇ ಅವಳನ್ನು ಸುತ್ತಿ ಸುತ್ತಿ ಉಸಿರು ಕಟ್ಟಿಸುತ್ತಿದೆ.

—ಉಸಿರು ಕಟ್ಟಿಯೇ ಹೋಗುತ್ತಿತ್ತೇನೊ! ಅಷ್ಟರಲ್ಲಿ ಎಚ್ಚರಿಸಿತ್ತು ಗಂಡನ ಕರೆ. "ಜಯಶ್ರೀ, ಏನು ಯೋಚನೆ ಮಾಡುತ್ತಿದ್ದಿಯಾ?... ಸಾಮಾನೆಲ್ಲಾ ಸರಿಯಾಗಿದೆಯೇ ಎಣಿಸಿಕೊ..."

ಆಫೀಸಿನವರು ಕಳಿಸಿಕೊಟ್ಟಿದ್ದ ಆಳು ದೊಡ್ಡ ಸಲಾಂ ಹಾಕಿ, ಮಂಗನಂತೆ ಚುರುಕಾಗಿ ಸಾಮಾನುಗಳನ್ನು ಡಬ್ಬಿಯಿಂದ ಕೆಳಕ್ಕೆ ಹಾಕಿದ್ದ.

ಅದೊಂದನ್ನೂ ಗಮನಿಸದ ಜಯಶ್ರೀ ತನ್ನ ಹಳೆಯ ಪ್ರಪಂಚದ ಬಲೆಯಿಂದ ಬಿಡಿಸಿಕೊಳ್ಳುವಷ್ಟರಲ್ಲಿ ಗಾಡಿ ಜೋಹಿಲ್ಲಾ ನದಿಯ ಸೇತುವೆಯನ್ನು ದಾಟುತ್ತಿತ್ತು. ಆಗ ಜಯಶ್ರೀ ಸಾಮಾನುಗಳನ್ನೆಲ್ಲಾ ಎಣಿಸಿಕೊಂಡಳು.

"ಒಂದು ಎರಡು ಮೂರು...ಆರು...ಅರೇ! ಒಟ್ಟು ಏಳು ಸಾಮಾನಿತ್ತಲ್ಲ!.. ಗಾಡಿಯಲ್ಲೇ ಒಂದು ಉಳಿದು ಹೋಯಿತೇನೋ!"

ರಘು ತಾನೂ ಒಮ್ಮೆ ಎಣಿಸಿದ.

"ಒಂದು, ಎರಡು. ಮೂರ್‍ನಾಕು...ಐದಾರೇಳು...ಎಲ್ಲ ಸರಿಯಾಗೆ ಇದೆಯೆಲ್ಲಾ!...ನಿದ್ದೆ ಬಂದಿದ್ಯಾ ನಿಂಗೆ!...." ಎಂದು ನಗೆಯಾಡಿದ.

ಅವರಿಗಾಗಿಯೇ ಕಳುಹಿಸಿದ್ದ ಲ್ಯಾಂಡ್‌ರೋವರ್ ಇಬ್ಬರನ್ನೂ ನಿಲ್ದಾಣದಿಂದ ನಾಲ್ಕು ಮೈಲಿ ಆಚೆ ಇದ್ದ ವಸಾಹತಿಗೆ ಒಯ್ಯುತ್ತಿತು. ಹಾದಿಯುದ್ದಕ್ಕೂ ವಿಂಧ್ಯದ ಕಾಡೇ ಕಾಡು, ಕತ್ತಲಿನ ಕರೀ ಕಂಬಳಿ ಹೊತ್ತು ಸುತ್ತಲಿನ ಕಾಡಿನ ಜಿರ್ ಅನ್ನುವ ಕ್ರಿಮಿ ಕೀಟಗಳ ನಿರಂತರ ಚೀರುವಿಕೆ, ಇರುಳು ಹಕ್ಕಿಗಳ ವಿಚಿತ್ರ ಕೂಗು, ಅಲ್ಲೊಂದಿಲ್ಲೊಂದು ಚಿಮ್ಮುವ ಕಾಡು ಮೃಗಗಳು ಇವುಗಳೊಂದಿಗೆ ತೇಲಿ ಬಂದಿತು "ಮೊವ್ಹಾ" (ಇಪ್ಪೆ) ಹೂಗಳ ಮಾದಕ ಸುವಾಸನೆ. ಅದನ್ನು ಘ್ರಾಣಿಸಿದ ಜಯಶ್ರೀಗೆ ಮತ್ತೆ ಹಳೆ ನೆನಪಿನಿಂದ ತಲೆಯೆ ತಿರುಗುವಂತಾಯಿತು!

"ಮೊವ್ಹಾ" ವಸಂತ ಋತುವಿನ ಕಾಡು ಹೂವು. ಮದಭರಿತ ಸುವಾಸನೆಯುದಕ್ಕೆ. ಹೂ ಬಿರಿದಾಗ ಕಾಡು ಕರಡಿಗಳು ಈ ಹೂಗಳನ್ನು ಯಥೇಷ್ಟವಾಗಿ ತಿಂದು, ಮತ್ತೇರಿ ಉರುಳಿ ಬಿಡುವುವು. ಆಗ ಕರಡಿ ಹಿಡಿಯುವುದು ಬಹು ಸುಲಭ. ಸುಲಭವಾಗಿ ಮಾನವನ ಕೈಗೆ ಸೆರೆ ಬಿದ್ದು, ನಂತರ ಪಶ್ಚಾತ್ತಾಪ ಪಡುವುವು ಆ ಕರಡಿಗಳು!

ಪಾಪ, ನಂತರ ಅವಿನ್ನೇನು ಮಾಡಬಲ್ಲವು? ಕರಡಿ ಆಡಿಸುವವನು

ಮೂಗಿ ದಾರ ಎಳೆದ ಹಾಗೆ ಕುಣಿದು ಜೀವನ ನಡೆಸಲೇಬೇಕು...ಪ್ರಾಣ ಹೋಗುವ ತನು.

(ತನ್ನ ಬಾಳೂ ಹಾಗೇ ಅಲ್ಲವೇ?)

ಇದೀಗ ಮೊವ್ವಾ ಹೂಗಳು ಹಣ್ಣಾಗಿರಬೇಕು. ಏಕೆಂದರೆ ಮಳೆಗಾಲ ಆರಂಭವಾಗುವುದರಲ್ಲಿತ್ತು. ಕಳೆದ ಸಮಯದ ವಾಸನೆ ಹಣ್ಣಿನಲ್ಲೂ ಬೆರಸಿಯೇ ಬಂದಿತು.

ಜಯಶ್ರೀ ಕಾಡೊಳಗಿನ ಮೊವ್ವಾ ಸುಗಂಧವನ್ನೆಲ್ಲಾ ಒಟ್ಟಿಗೆ ಸೆಳೆದುಕೊಳ್ಳುವಂತೆ ಉಸಿರು ತೆಗೆದುಕೊಂಡಳು. ಮತ್ತೆ ತಪ್ಪು ಮಾಡಿದವಳಂತೆ ಮನಸ್ಸಿನಲ್ಲೇ ಮುದುಡಿಕೊಂಡಳು.

ವಿಂಧ್ಯಾಟವಿ ಒಳಗೆ ಈ ಕಲ್ಲಿದ್ದಲಿನ ಗಣಿಯ ವಸಾಹತು ಅಡಗಿತ್ತು. "ಜು ಕೇಲಿ ಕೊಲ್ಲೈರೀಸ್" ಎಂಬ ದೊಡ್ಡ ಸಂಸ್ಥೆಯೊಂದು ಈ ಗಣಿಯನ್ನು ನಡೆಸುತ್ತಿತ್ತು, ಹಿಂದೆ ಜಯಶ್ರೀಯ ತಂದೆ ಈ ಗಣಿಗೆ ಮ್ಯಾನೇಜರ್ ಆಗಿದ್ದರು. ತಮಗೆ ನಿವೃತ್ತಿಯಾಗಿ ದಕ್ಷಿಣಕ್ಕೆ ಮೈಸೂರು ಕಡೆ ಹೊರಟು ಹೋಗುವ ಮುಂಚೆ ಅಳಿಯನಿಗೆ ಇದೇ ಕಂಪನಿಯಲ್ಲಿ ಕೆಲಸ ಕೊಡಿಸಿದ್ದರು. ಆಗ ಮುಖ್ಯ ಕಾರ್ಯಾಲಯವಿದ್ದ ನಾಗಾಪುರದಲ್ಲಿರುವ ರಘು ಆಫೀಸ್ ಸೂಪರಿಂಡೆಟ್ ಆಗಿದ್ದವನು ಇದೇ ತಾನೇ ಆಡಿಟರ್ ಆಗಿದ್ದ, ಕಂಪನಿಗಿದ್ದ ನಾಲ್ಕಾರು ಗಣಿಗಳನ್ನು ಸುತ್ತಿ ಆಡಿಟ್ ಮಾಡುವುದು ಅವನ ಹೊಣೆ.

ಹಿಂದೆಲ್ಲಾ ಜಯಶ್ರೀ ಜಬ್ಬಲ್‌ಪುರದಲ್ಲಿ ರಜದ ದಿನಗಳಲ್ಲಿ ಮಾತ್ರ ಜುಕೇಲಿಗೆ ತಂದೆ ತಾಯಿ ಬಳಿ ಇರಲು ಬರುತ್ತಿದ್ದಳು. ಓದಿಗಾಗಿ ಮಕ್ಕಳನ್ನು ಜಬ್ಬಲಾಪುರದ ಹಾಸ್ಟಲುಗಳಲ್ಲಿ ಬಿಡುವುದು ವಸಾಹತಿನ ಅಧಿಕಾರಿಗಳ ಪದ್ಧತಿ. ಅಲ್ಲಿಗೆ ಸಮೀಪವಾದ ದೊಡ್ಡ ಪಟ್ಟಣವೆಂದರೆ ಜಬ್ಬಲ್‌ಪುರವೊಂದೇ.

ಹಾಗೆ, ಇಲ್ಲಿಗೆ ರಜಕ್ಕೆಂದು ಬರುತ್ತಿದ್ದಾಗ ಹೊತ್ತು ಕಳೆಯಲು ಅವಳಿಗೆ ಎಷ್ಟು ಬೇಸರವಾಗುತ್ತಿತ್ತು!...ದೊಡ್ಡ ಬಂಗಲೆಗೆಲ್ಲಾ ತಾನು, ತಂದೆ-ತಾಯಿ ಮಾತ್ರ ಅಕ್ಕ ವಸುವಿಗೆ ಮದುವೆಯಾಗಿ ಹೊರಟುಹೋಗಿದ್ದಳು. ಅಣ್ಣ ಮಾಧವ ನ್ಯೂಜರ್ಸಿಗೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಹೋಗಿ ಎರಡು ವರ್ಷಗಳಾಗಿದ್ದವು. ತಮ್ಮ ಮನೆಯಲ್ಲಿ ತಾನೊಬ್ಬಳೇ! ಹಾಸ್ಟಲ್ ಕಾಲೇಜಿನಲ್ಲಂತೂ ಉಸಿರಾಡಲೂ ಪುರುಸೊತ್ತು ಇರುತ್ತಿರಲಿಲ್ಲ–ಎಂದರೆ ಸಿನಿಮಾ, ವಿಹಾರ. ಆಟಿಪಾಠವೂ ಇದ್ದೇ ಇತ್ತಲ್ಲ!

ರಜಕ್ಕೆ ಮನೆಗೆ ಬಂದರೆ ಅದೊಂದು ರೀತಿ ಶಿಕ್ಷೆಯೇ ಅನ್ನಿಸಿಬಿಡುತ್ತಿತ್ತು ಕಾಲಿಗೊಬ್ಬ ಕೈಗೊಬ್ಬ ಆಳು. ಮ್ಯಾನೇಜರ್‌ನ ಹೆಂಡತಿ ಕೃಪಾಕಟಾಕ್ಷವನ್ನು ಪಡೆಯಲು ಬರುತ್ತಿದ್ದ ವಸಾಹತಿನ ಕಾಗದದ ಗೊಂಬೆಗಳಂಥಹ ಹೆಂಗಸರು ಇವರುಗಳ ನಡುವೆ ತನ್ನ ಕೈಕಾಲು ಕಟ್ಟಿ ಹೋಗುತ್ತಿತ್ತು.

ಯಾರಿಗೆ ಬೇಕಿತ್ತು ಈ ಕೃತಕ ಅಟ್ಟಹಾಸದ ಜೀವನ? ಅದರಿಂದ ಬಿಡುಗಡೆಯಾಗಲು ಅವಳು ಯಾವಾಗಲೂ ಹಾತೊರೆಯುತ್ತಿದ್ದಳು.

ಒಂದು ದಿನ ಹೀಗೆಯೆ ಹೊತ್ತು ಹೋಗದೇ ಬೇಸರದಲ್ಲಿದ್ದಾಗ ಅಲ್ಲಿನ ಡಾಕ್ಟರ್ ಮನೆಯವರು ಶಿಕಾರಿಗೆ ಹೋಗುವರೆಂದು ತಿಳಿಯಿತು. ಡಾಕ್ಟರ್ ದಂಪತಿಗಳಿಗೆ ವಿಪರೀತ ಶಿಕಾರಿ ಹುಚ್ಚು. ತಾನೂ ಅವರೊಡನೆ ಮೋಜು ನೋಡಲು ಹೋಗುತ್ತೇನೆಂದು ತಾಯಿಯನ್ನು ಕೇಳಿದಳು. ಅವರಿಗೆ ಅಂಥದೆಲ್ಲಾ ಇಷ್ಟವಾಗುತ್ತಿರಲಿಲ್ಲ. ಬೇಡ ಎಂದೇ ಹೇಳಿದರು. ಆದರೆ ಜಯಶ್ರೀ ತಂದೆಗೆ ಅವಳನ್ನು ಕಂಡರೆ ಅತಿ ಮುದ್ದು. ಮಗಳ ಮುಖ ಬಾಡಿದ್ದನ್ನು ನೋಡಿ ತಡೆಯಲಾರದೆ. "ಇಲ್ಲಿ ಹೊತ್ತು ಕಳೆಯಲು ಏನಿದೆ ಹೇಳು....? ಒಂದು ಸಿನಿಮಾನೇ, ನಾಟಕವೇ ಜೋತೆ ಸ್ನೇಹಿತರೆ? ಮನೆಯಲ್ಲಿ ಹೊತ್ತು ತಾನೇ ಹೇಗೆ ಹೋಗಬೇಕು?...."ಹೋಗಿ ಸುತ್ತಾಡಿ ಕೊಂಡು ಬರಲಿ ಬಿಡು...ಡಾಕ್ಟರ್ ಹೆಂಡತೀನೇ ಜೋತೆಲಿರುವಾಗ ಏನು ಭಯ?...?" ಎಂದು ತಾಯಿ ಹಾಕಿದ್ದ ಲಗಾಮು ಕಿತ್ತುಬಿಟ್ಟರು!

ಜಯಶ್ರೀ ಹಿಗ್ಗಿದಳು. ಕಾಡಿನಲ್ಲಿ ಹುಚ್ಚ ಹುಚ್ಚಾಗಿ ಅಲೆಯುವುದರಲ್ಲಿ ಅವಳಿಗೊಂದು ಖುಷಿ. ಆಗ ಆದೇ ವಸಂತಋತುವಿನ ಮೊದಲು.

ಇನ್ನೂ ಬಿಸಿಲೂ ಬಲಿತಿರಲಿಲ್ಲ. ಸೌಮ್ಯ ರಮ್ಯ ವಾತಾವರಣ. ಎಲ್ಲೆಲ್ಲೂ ಮುತ್ತುಗದ ಹೂ ಅರಳಿ ಕಾಡಿಗೆಲ್ಲಾ ಹೊಸ ಬಣ್ಣ ಚಿಮುಕಿಸಿತ್ತು 'ಮೊವ್ಹಾ' ಹೂವಿನ ಮಾದಕ ಪರಿಮಳ ತುಂಬಿದ ದಿನಗಳು...

ಆಗ ಅದೇ ಹೂವಿನ ಪರಿಮಳ ಮತ್ತೆ ಮೂಗಿಗೆ ತಾಕಿ, ತನ್ನನ್ನು ಯಾವುದೋ ಲೋಕಕ್ಕೆ ಒಯ್ಯುತ್ತಿದೆ.

ಅದಳ ಮೈ ಜುಂ ಎಂದಿತು.

ಏಳೆಂಟು ವರ್ಷಗಳ ಹಿಂದೆ ಆದಿನ ತಾನು ಮಾಡಿದ್ದು ಎಂಥಹ ನಡತೆಗೆಟ್ಟ ಅಪರಾಧ! ಆ ಋತುವಿನಲ್ಲಿ ಕಾಲೇಜಿನ ಓದಿನಲ್ಲಿ ಮುಳುಗಿರಬೇಕಿತ್ತು. ಪರೀಕ್ಷೆಯ ಸಮೀಪದ ದಿನಗಳವು...

ಆದರೆ ಜಬಲ್‌ಪುರಕ್ಕೆ ಹೋಗದ ಹಾಗೆ ಮಾಡಿ ಹೀಗಾಗಬೇಕೆಂದೇ ಟೈಫಾಯಿಡ್ ಜ್ವರ ತಗುಲಿತ್ತೆ!...ಅದಕ್ಕಾಗಿ ಅರೈಕೆ ಮಿತಿಮೀರಿದಾಗ ಮೈಯಲ್ಲಿ ಕೊಬ್ಬೇರಿಕೆ ?... ಇದಕ್ಕೆ ಯಾರು ಹೊಣೆ ?... ವಸಂತದನಿಸರ್ಗವೆ ? ಕಾಯಿಲೆ ಕಳೆದು ಹಗುರಾದ ಆಲಸ್ಯದ ಮೈಯೆ ?...

ತಾನೆಂಥಹ ಪತಿತೆ !...

ಪಾಪ ರಘು ! ತನ್ನ ವಿಷಯ ಏನೇನೂ ಅರಿಯದ ಮುಗ್ಧ! ... ಮದುವೆಯಾದಮೇಲೆ ಅವನೇ ತನ್ನ ಪ್ರಾಣವಾಗಿದ್ದರೂ ಒಮ್ಮೊಮ್ಮೆ ಎಲ್ಲೋ ಅವಿತಿಟ್ಟುಕೊಂಡಿದ್ದ ಅಪರಾಧ ಪ್ರಜ್ಞೆ, ಅದೇ ತಾನೇ ತೆರೆದ ಬುಟ್ಟಿಯಿಂದ ಬುಸ್ಸೆನೆ ನುಗ್ಗುವ ಬಂಧಿತ ನಾಗನಂತೆ ಹೆಡೆ ಎತ್ತಿ ತನ್ನ ಮೇಲೆ ಬಂದಪ್ಪಳಿಸುವುದು.

ಅದನ್ನು ತೀರಿಸಿ ಹಾಕಲು ಶಕ್ತಿ ಇಲ್ಲದ ಅವಳು ತನ್ನಲ್ಲೇ ಮೆತ್ತಗಾಗುತ್ತಿದ್ದಳು. ಆ ಪ್ರಸಂಗವೊಂದು ನಡೆಯದ್ದಿದ್ದಲ್ಲಿ!....ರಘುವನ್ನು ನೂರಕ್ಕೆ ನೂರು ಶ್ವೇತ ಪುಷ್ಪಗಳಿಂದ ಅರ್ಚಿಸಲು ಸಾಧ್ಯವಿದ್ದಿದ್ದರೆ !....

ಆ ದಿನ. ಡಾಕ್ಟರ್ ದಂಪತಿಗಳು ಜೀಪನ್ನು ಕಾಡಿನ ಅಂಚಿನ

ಒಂದು ಮರದ ಕೆಳಗೆ ನಿಲ್ಲಿಸಿ, ಕೈಗೆ ಕೋವಿ ತೆಗೆದುಕೊಂಡು ಹೊರಟಾಗ ಜಯಶ್ರೀ ಗಾಡಿಯನ್ನು ಬಿಟ್ಟು ಇಳಿಯಲೇ ಇಲ್ಲ.

"ನಾನು ಜೀಪ್ನೊಳಗೇ ಇರುತ್ತೇನೆ...ನೀವು ಹೋಗಿ...ನನಗೆ ಶಿಕಾರಿ ನೋಡಲು ಅಸಹ್ಯ...ಇಲ್ಲಿ ಕುಳಿತು ಕಾಡಿನ ಸೌಂದರ್ಯ ನೋಡುವುದರಲ್ಲೇ ನನಗೆ ವೇಳೆ ಚೆನ್ನಾಗಿ ಕಳೆಯುತ್ತೆ ..." ಎಂದು ಹಿಂದೆ ಉಳಿದಳು. ಅದೇ ಕಾಯಿಲೆಯ ಆರೈಕೆ ಮುಗಿಸಿಕೊಂಡ ಹುಡುಗಿಗೆ ಡಾಕ್ಟರು ಹೆಚ್ಚು ಬಲವಂತ ಮಾಡಲಿಲ್ಲ. ಒಂಟಿಯಾಗಿ ಇದ್ದದ್ದಕ್ಕೆ ನೂರು ಬಾರಿ ಎಚ್ಚರಿಕೆ ಕೊಟ್ಟು, ಬಕ-ಮಕ ಅರಸುತ್ತಾ ಆಳುಗಳೊಡನೆ ಹೆಂಡತಿಯನ್ನು ಕರೆದುಕೊಂಡು ಹೊರಟುಹೋದರು.

ಈಗ ಜಯಶ್ರೀ ಒಬ್ಬಳೇ ಆ ಸುಂದರ ಪ್ರಕೃತಿಗೆಲ್ಲಾ ರಾಣಿಯಾದಳು ಬೇಕಾದ ಹಾಗೆ ಕೂಗಿದಳು. ಕುಣಿದಳು, ಜಂಗಿದಳು...ಕುಪ್ಪಿದಳು.... ಬಾಲೆ.

ಇಲ್ಲಿ ಯಾರ ನಿರ್ಬಂಧವೂ ಇಲ್ಲ. ತಾನೇ ತಾನು!

ಅಲ್ಲೇ ಸಮೀಪದಲ್ಲಿ ಮೊವ್ಹಾದ ಮರವೊಂದಿತ್ತು. ಕೆಂಡಸಂಪಿಗೆ ಎಲೆಗಳಂತೆ ತುಸುನೀಳ ಪತ್ರಗಳು ನಡು, ನಡುವೆ ನಸು ಹಳದಿಯ ಹಾಲ್ಕೆನೆ ವರ್ಣದ ಚಿಕ್ಕ ಚಿಕ್ಕ ಹೂಗಳು ಗಿಡದ ತುಂಬ ಅರಳಿದ್ದವು, ಸುವಾಸನೆ ಸಮ್ಮೋಹ ಬೀರುತ್ತಾ! ಅವಳಿಗೆ ಆ ದಿನದವರೆಗೂ ಅದರ ಹೂವನ್ನು ಜನ ತಿನ್ನುವರೆಂದೂ ತಿಳಿದಿರಲಿಲ್ಲ. ಆಡು ಕಾಯುವ ಹುಡುಗನೊಬ್ಬ ನೀಳವಾದ ದೋಟಿ ಹಿಡಿದುಕೊಂಡು ಹೂಗಳನ್ನೆಲ್ಲಾ ಹಕ್ಕಿ ತಿನ್ನುತ್ತಿದ್ದ.

ಸೋಜಿಗವಾಗಿ ತಾನು ಒಂದು ಹೂ ಬಾಯಿಗೆ ಹಾಕಿಕೊಂಡು ಅಗಿದಳು, ಅವಳಿಗೂ ರುಚಿ ಹತ್ತಿತು.

ಆ ಹುಡುಗ ಹೊರಟು ಹೋಗುವುದನ್ನೇ ಕಾಯುತ್ತಿದ್ದು ನಂತರ ಸರಸರನೆ ಇನ್ನೂ ಮಿಕ್ಕಿದ್ದ ಹೂಗಳನ್ನೆಲ್ಲಾ ಆಯ್ದುಕೊಂಡಳು, ಮರದ ನೆರಳಿನ ಬಂಡೆಯ ಮೇಲೆ ಕುಳಿತು ಆರಾಮದಿಂದ ಸವಿಯ ತೊಡಗಿದಳು.

ಕಾಲ ಕೆಳಗೆ ನಾಲೆಯ ಮೃದು ಮರಳ ರತ್ನಗಂಬಳಿ ಉದ್ದಕ್ಕೂ ಹಾಸಲ್ಪಟ್ಟಿತ್ತು. ತಲೆ ಎತ್ತಿ ನೋಡಿದಳು. ಅದೊಂದು ಪುಟ್ಟ ಕಣಿವೆ. ಬರೀ ಗುಡ್ಡಗಳ ಕೋಟೆ. ಸುತ್ತಲೂ ತೇಗ, ಮುತ್ತುಗ, ಆಗ, ಮೊಪ್ಪಾ ಮರಗಳ ಅಷ್ಟೇನೂ ದಟ್ಟವಲ್ಲದ ವನ.

ಸಹಸಾ ಹೆಜ್ಜೆಗಳ ಸಪ್ಪಳವಾಯಿತು. ಡಾಕ್ಟರ್ ದಂಪತಿಗಳು ತನ್ನನ್ನು ಒಬ್ಬಳೇ ಆಗಿ ಬಿಟ್ಟಿರಲಾರದೆ ವಾಪಸ್ಸು ಬಂದು ಬಿಟ್ಟರೇನೊ ಎಂದು ಕೊಂಚ ಒಳಗೇ ಸಿಡಿಮಿಡಿಕೊಂಡಳು.

ಅವಳಿಗೆ ಏಕಾಂತದಲ್ಲಿ ಆರಾಮ ಬೇಕಿತ್ತು!

ಆದರೆ ಬಂದದ್ದು ಸಧ್ಯ ಡಾಕ್ಟರಲ್ಲ ! ರಾಮ್‌ಧಿನ್ !! ಮೃತಪ್ರಾಯ ಕಾಲೋನಿ ಜೀವನಕ್ಕೆ ಜೀವನಾಡಿ ಮಿಡಿಸುತ್ತಿದ್ದ ರಾಮ್‌ಧಿನ್ !!

ಒಳ್ಳೆ ಕಟ್ಟಾಳಾದ ಸ್ಪೋರ್ಟ್ಸ್‌ಮನ್. ಅಲ್ಲಿನ ಕ್ಲಬ್ಬಿನಲ್ಲಿ ಯಾವ ಪಂದ್ಯ ಕೂಟವಾದರೂ ಅವನು ಸಾಲು ಸಾಲು ಬೆಳ್ಳಿ ಕಪ್ಪುಗಳನ್ನು ದೋಚುತ್ತಿದ್ದ. ಹಾಡುತ್ತಿದ್ದ. ಅಭಿನಯಿಸುತ್ತಿದ್ದ. ಎಲ್ಲಕ್ಕೂ ಮುಂದಾಳು ಅವನು.

ಹುರಿಯಾದ ಬಲಿಷ್ಠ ತೋಳು, ವಿಶಾಲವಾದ ಎದೆ. ಆರಡಿ ನಿಲುಕುತ್ತಿದ್ದ ಉನ್ನತ ದೇಹ.

ಅವನನ್ನು ಅನೇಕ ಸಾರಿ ನೋಡಿದ್ದಳು ಜಯಶ್ರೀ—ಆ ಪುಟ್ಟ ಹೃದಯದ ಒಂದು ಮೂಲೆಯಲ್ಲಿ ಮೆಚ್ಚಿಕೊಂಡಿದ್ದಳೂ ಸಹ! ಆದರೆ ಯಾರನ್ನೂ ಅವನ ಬಗ್ಗೆ ವಿಚಾರಿಸಿರಲಿಲ್ಲ....ತವಕಗೊಂಡಿದ್ದರೂ ಆ ವಿಚಾರಗಳಲ್ಲಿ ಹೃದಯಕ್ಕೆ ಸಮೀಪರಾದ ಸ್ನೇಹಿತರಲ್ಲದೆ ಅದು ಹೊರಕ್ಕೆ ಬಂದೇ ಇರಲಿಲ್ಲ.

ಗುಡ್ಡಗಳ ನಡುವೆ ಒಬ್ಬಳೇ ಕುಳಿತಿದ್ದ ಅವಳನ್ನು ಕಂಡು ಅವನಿಗೆ ಆಶ್ಚರ್ಯವಾಗಿರಬಹುದು.

ಆದರೂ ಗಂಭೀರವಾಗಿ ಹೇಳಿದ.

"ನಮಸ್ತೆ."

"ನಮಸ್ತೆ" ತನ್ನ ಹೃದಯ ಧೃತಿಗೆಟ್ಟಿದ್ದರೂ ತೋರ್ಪಡಿಸಿ ಕೊಳ್ಳದೆ ಎಳೆ ಮಗುವಿನಂತೆ ಮುಗ್ಧತೆ ಸೂಸುತ್ತಾ, ಕಲ್ಲುಗಳನ್ನು ಹೆಕ್ಕಿಕೊಂಡು ತನ್ನ ಪಾಡಿಗೆ ತಾನು ಮೊಪ್ಪಾ ಪುರಕ್ಕೆ ಕಲ್ಲು ಬೀರತೊಡಗಿದಳು. ನೂರು ಕಲ್ಲು ಹೊಡೆದರೂ ಹೂಗಳು ಕೆಳಗೆ ಉದುರಲಿಲ್ಲ. ಕಲ್ಲು ಬೀಸಿ ಹಣೆ ಮಾತ್ರ ಒದ್ದೆಯಾಗಿ ಮುಂಗುರುಳಿನ ಸುರುಳಿ ಹಣೆಯನ್ನಪ್ಪಿಕೊಳ್ಳುತ್ತಿತ್ತು. ಎಗರಿ, ನೆಗೆದು, ಕಲ್ಲು ಬೀಸುವುದರಲ್ಲಿ ದುಂಡುಗೆನ್ನೆಗಳು ರಂಗಾದವು.

"ಛಿ !...." ಬೇಸರದ ಬೆಡಗು ತೋರಿ, ಮತ್ತೆ ಮೊಂಡಿಮೇಲೆ ಗಲ್ಲ ಊರಿ ಮರದ ಮೇಲೆ ಸಿಟ್ಟು ತೋರಿ ಕುಳಿತಾಗ ರಾಮ್‌ಧಿನ್ ಅಲ್ಲಿ ಬೆಳೆದಿದ್ದ ಗುಣವಂತಿ ಗಿಡದ ಚಾವರದಂಥಹ ತೆನೆಯನ್ನು ಸವರುತ್ತಾ ಅವಳ ಕಡೆಗೇ ನೋಡುತ್ತಿದ್ದ. ಅವಳ ಸೋಲನ್ನು ಕಂಡೋ ಏನೋ ಅವನ ತುಟಿಯಲ್ಲಿ ಮೃದು ಹಾಸವೊಂದು ಲೇಪಗೊಂಡಿತು.

"ನಿಮಗೆ ಈ ಹೂವು ಇಷ್ಟವೇ ?..."

"ಹುಂ. ಆದರೆ ಕೈಗೆ ಎಟಕುವುದಿಲ್ಲ. ಜೊತೆಯಲ್ಲಿ ಆಳುಗಳೂ ಇಲ್ಲ. ಇದ್ದಿದ್ದರೆ ಕೀಳಿಸಿಕೊಳ್ಳಬಹುದಾಗಿತ್ತು."

"...ಜೊತೆಗೆ ಬಂದವರೆಲ್ಲಾ ಎಲ್ಲಿ...?"

"ಎಲ್ಲರೂ ಶಿಕಾರಿಗೆ ಹೋಗಿದ್ದಾರೆ...."

"ಈ ಹೂವು-ಹಣ್ಣಿನಲ್ಲಿ ಏನಿದೆ ಗೊತ್ತೆ....?

"ಏನಿದೆ ?...ಒಳ್ಳೆ ರುಚಿ ಇದೆ. ಹುಳಿ, ಒಗರೂ ಇದೆ...."

"ಅಷ್ಟೇ ಅಲ್ಲ !... ಇದರಿಂದ ಹಳ್ಳಿಯವರು ಮಧು ತಯಾಸುರಿತ್ತಾರೆ. ನಿಮಗೆ ತಿಳಿದಿರಲಿಲ್ಲವ ?...."

"ಊಹುಂ."

"ವಿಂಧ್ಯ ಪ್ರದೇಶದ ಹಳ್ಳಿಗಾಡಿನವರಿಗೆಲ್ಲಾ ಇದರ ಹಣ್ಣಿನ ಹೆಂಡ ವೆಂದರೆ ತುಂಟಾ ಪ್ರೀತಿ. ಇದರ ಕಾಲ ಬಂದಿತೆಂದರೆ ಟೊಂಗೆ ಮುರಿಯುವ ತನಕ ಮರ ಜಗ್ಗಿ ಹಾಕುತ್ತಾರ...."

"ಹಣ್ಣಿನಲ್ಲಿ ಹೆಂಡ ಇದ್ದರೇನಂತೆ ?....ಹೂವಂತೂ ಚನ್ನಾಗಿದೆ.... ಅದರಲ್ಲೇನೂ ಮಾದಕತೆ ಇಲ್ಲವಲ್ಲಾ!...."

"ಈ ಹೂವು ತಿಂದ ಕರಡಿಗಳನ್ನು ನೋಡಬೇಕು !....ತಿಂದೂ ತಿಂದೂ ಮತ್ತೇರಿ ಹೋಗುತ್ತವೆ !...."

"ನಾನೇನೂ ಮಾದಕತೆ ಬರೋ ಹಾಗೆತಿಂದಿಲ್ಲ!..." ಎಂದು ನಗೆ ಮಿಂಚು ಬೀರಿದಳು. ಆ ನಗೆಯೇ ಅವನಿಗೆ ಈ ಮ್ಯಾನೇಜರ್ ಮಗಳ ಬಳಿ ಸ್ವಾತಂತ್ರ, ಸ್ವಾಗತ ಕೊಟ್ಟಿತೇನೊ ! ಕ್ಷಣ ಕ್ಷಣಕ್ಕೂ ಅವರ ಮಾತು ಕತೆ ಆತ್ಮೀಯವಾಗುತ್ತಾ ಬಂದಿತು. ಅರ್ಧ ಗಂಟೆ ಸಾಮೀಪ್ಯವೇ ಎರಡು ದಿಕ್ಕುಗಳನ್ನು ಒಂದಾಗಿಸಿಬಿಟ್ಟಿತು.

ಮೊವ್ವಾ ಹೂವಿನ ಮಾದಕ ಪರಿಮಳ, ಇಬ್ಬರ ಹೃದಯಗಳಲ್ಲೂ ನೊರೆಯುಕ್ಕಿಸಿತು. ಉಕ್ಕಿದ ನೊರೆಯ ಆಳದಲ್ಲಿ ಇಬ್ಬರೂ ಪ್ರಪಂಚ ವನ್ನೇ ಮರೆತು, ಒಂದಾಗಿ ಮುಳುಗಿಯೇ ಹೋದರು.

ದೂರದಲ್ಲೆಲ್ಲೋ ಬಂದೂಕದ ಗುಂಡಿನ ಶಬ್ದವಾಯಿತು.

ಆಗ ಬೆಚ್ಚಿ ಇಬ್ಬರೂ ಬೇರೆಯಾಗಿ ಸಿಡಿದರು.

ತಾನೇನು ಮಾಡಿಬಿಟ್ಟೆ!–ಜಯಶ್ರೀಯ ಬಾಲಹೃದಯ ಕಂಪಿಸಿತು.

*   *   *   *

ಆ ನೆನಪೆಲ್ಲಾ ಈ ವಳಿಗೆಬಂದಿತು.

ಲ್ಯಾಂಡ್‌ರೇವಲ್ ಸಾಗುತ್ತಲೇ ಇದೆ...

ಅದೇ ಬಂದೇ ಬಿಟ್ಟಿತು, ಕೂಲೈರಿಯ ವಸಾಹತ....ಹೌದು, ಅದೇ "ಬಾಯ್ಲರ್ ಆಶ್" ಸಿಂಪಡಿಸಿದ ಕರೀ ರಸ್ತೆ !...ಈ ಮೊದಲನೇ ದೊಡ್ಡ ಬಂಗಲೆಯೇ ತಾವಿದ್ದದ್ದು!...ಹೂಂ, ಈಗ ಅಲ್ಲಿ ಯಾರಿದ್ದರೇನು ?.... ಯಾರಿಗೆ ಬೇಕಾಗಿದೆ ಅವೆಲ್ಲಾ!

ಈಗಂತೂ ಆ ಮನೆಯಲ್ಲಿರಲೂ ತನಗೆ ಅಧಿಕಾರವಿಲ್ಲ.

ಅಧಿಕಾರವಿರಲಿ, ನಾಳೆ ಬೆಳಿಗ್ಗೆ ತಾನು ಹೀಯಾಳಿಸುತ್ತಿದ್ದ "ಕಾಗದದ ಗೊಂಬೆಗಳಂಥಹ ಹೆಂಗಸರಂತೆಯೇ ತಾನೂ ಆ ಮ್ಯಾನೇಜರನ ಹೆಂಡತಿಯನ್ನು 'ನೋಡಿ ಬರಲು' ಪೋಗಬೇಕು ಹೋಗಬೇಕು. ನಮ್ರಳಾಗಿರಬೇಕು. ಅವರತೋಟ, ಮಕ್ಕಳು ಎಲ್ಲಿವನ್ನೂ ಸುಮ್ಮನಾದರೂ ಹೊಗಳಬೇಕು.

ಅಂದಿಗೆ ಇಂದಿಗೆ ತನ್ನ ಅಂತಸ್ಸಿನಲ್ಲಿ ಎಂಥಾ ಮಾರ್ಪಾಡು !

ಗಾಡಿ ಮ್ಯಾನೇಜರ್ ಬಂಗಲೆಯನ್ನು ದಾಟಿ ಇನ್‌ಕ್ಲೈನ್‌ಗಳನ್ನೂ ಹೊರಹಾಕಿದ ಕಲ್ಲಿದ್ದಲುರಾಶಿಯನ್ನು ಪಕ್ಕಕ್ಕೆ ಬಿಟ್ಟುಕೊಂಡು ಓಡುತ್ತಿತ್ತು. ಕೊನೆ ಶಿಫ್ಟ್‌ನ ಕೆಲಸಗಾರರು ಆ ಕತ್ತಲಿನಲ್ಲಿ ಆ ಕಲ್ಲಿದ್ದಲಷ್ಟೇ ಕಪ್ಪಾಗಿ ಲೋಡಿಂಗ್, ಅನ್‌ಲೋಡಿಂಗ್ ಮಾಡುತ್ತಿದ್ದರು. ಕಲ್ಲಿದ್ದಲ ರಾಶಿಯೇ ರಾಶಿ ! ಪಾಪ, ಅವರ ಜೀವನವೆಷ್ಟು ಕಷ್ಟ. ಎಂದಾದರೊಮ್ಮೆ ಗಣಿ ಒಳಗಿದ್ದಂತೆಯೇ ಅದೇ ಅವರ ಸಮಾಧಿಯಾಗಬಹುದು. ಅಲ್ಲಿರುವ ವಿಷ ಅನಿಲಗಳೇ ಅವರಿಗೆ ತಾವೇ ಅಗ್ನಿಸಂಸ್ಕಾರವನ್ನೂ ಮಾಡಬಹುದು. ಅದೃಷ್ಟ ಬಲದಿಂದ ಅಂಥ ದುರಂತವೇನೂ ನಡೆಯದಿದ್ದರೂ ನಿತ್ಯ ಸಾಯುವ ಮಂದಿ ಅವರು. ಕಲ್ಲಿದ್ದಿಲಿನ ಸೂಕ್ಷ್ಮ ಕಣಗಳು ಅವರ ಶ್ವಾಸಕೋಶಗಳನ್ನು ಹೊಕ್ಕು ನಿತ್ಯ ಅಷ್ಟಷ್ಟು ಆಯಸ್ಸು ಕಡಿದುಕೊಳ್ಳುತ್ತವೆ ಪಾಪ.

ಎಂದೂ ಉಕ್ಕದಷ್ಟು ಕರುಣೆ ಇಂದೇಕೆ ಉಕ್ಕುತ್ತಿದೆ ?...

ಏನೇ ಭಾವೋದ್ವೇಗ ! ಹುಂ ಕರುಣೆ !!... ಅದೇ ಕರುಣೆ ಈಗ ರಘುವನ್ನು ಕಂಡರೆ ಸಹಾ ಉಕ್ಕುತ್ತಿದೆಯಲ್ಲಾ!?...ತಾನು ಮಾಡಿದ್ದನ್ನೇನನ್ನೂ ಅರಿಯದೆ ಕುರಿಯಂತೆ ವಿವಾಹಕ್ಕೆ ಬಲಿಯಾಗಿದ್ದಾನೆ !

ಮದುವೆಯಾದ ಮೇಲೆ ಅವನು ತನ್ನನ್ನು ನಡೆಸಿಕೊಂಡಿದ್ದ ರೀತಿ ಅವಳಿಗೆ ಇಷ್ಟು ದಿನವೂ ತನ್ನ ಹಿಂದಲಕೃತ್ಯವನ್ನೆಲ್ಲಾ ಮರೆಯುವಂತೆ ಮಸುಕು ಮಾಡಿತ್ತು.

ಈಗ ಮನ ಕೆದಕುತ್ತಿದೆ ಅವನಿಗೆ ತಾನು ಅನ್ಯಾಯ ಮಾಡುತ್ತಿರ್ರು ವೆನೆಲ್ಲಾ! ಮುಗ್ಧತೆಯ ಕತ್ತಲಲ್ಲಿ ಅವನನ್ನು ಸೆರೆಹಾಕಿರುವುದು ನ್ಯಾಯವೆ?–

ಗಾಡಿ ಲೇಬರ್ ಕಾಲೋನಿಯನ್ನು ದಾಟುತ್ತಿತ್ತು. ಗಾಳಕ್ಕೆ ಸಿಕ್ಕಿಸಿದ ಹುಳುವಿನಂತೆ ಆ ಕಾರ್ಮಿಕರ ವಸತಿಗಳು ಉದ್ದಕ್ಕೂ ಕಾಂಕ್ರೀಟಿನಲ್ಲಿ ಅಚ್ಚುಕಟ್ಟಾಗಿ ಕಟ್ಟಲ್ಪಟ್ಟಿದ್ದವು. ಸಾಲು ದೀಪ, ಸುರಿದು ಹೋಗುವ ನಲ್ಲಿ ನೀರು, ಕೈತುಂಬ ಸಂಬಳ, ಬೋನಸ್ಸು!...ಈಗ ರಾತ್ರಿಯಲ್ಲಿ ಎಲ್ಲರೂ ನೆಮ್ಮದಿಯಾಗಿ ಮಲಗಿರಬಹುದು. ಗಾಳವನ್ನು ಕಚ್ಚಿಕೊಂಡು ಮೀನುಗಳು ಯಾವ ಕ್ಷಣಕ್ಕೆ ಹೇಗೆ ದುರಂತಕ್ಕೆ ಈಡಾಗುವುವೊ ?–ಮತ್ತೆ ಅವಳಿಗೆ ಅದೇ ಚಿಂತನೆ....ದೊಡ್ಡ ಅಧಿಕಾರಿ ಮಗಳೆಂದು ತನ್ನನ್ನು ಮದುವೆಯಾದ ರಘುವೂ ಹೀಗೆ ಮೀನಾದ.

ಲ್ಯಾಂಡ್‌ರೋವರ್ ತಿರುವು ತಿರುಗಿತು.

ಅವರು ಇಳಿದುಕೊಳ್ಳುವ ಕಂಪನಿಗೆಸ್ಟ್ ಹೌಸ್, ಅಲ್ಲಿಂದ ನಿರ್ಜನ ಪ್ರದೇಶ ಒಂದರ್ಧ ಮೈಲಿ ದಾಟಿದರೆಂದರೆ ಸಿಗುವುದಿತ್ತು.

ಡ್ರೈವರ್ ಏನೇನೋ ಬಡಬಡಿಸುತ್ತಿದ್ದ...ಕಾರ್ಮಿಕರ ಕ್ರಾಂತಿ, ಗಲಾಟೆ ಈಗ ಮೂರುವರ್ಷಗಳ ಹಿಂದೆ ತುಂಬಾ ಜಾಸ್ತಿಯಾಗಿತ್ತಂತೆ.... ಕಮ್ಯುನಿಸ್ಟ್ ಯೂನಿಯನ್ನಿಗೂ ಸೋಷಯಲಿಸ್ಟ್ ಯೂನಿಯನ್ನಿಗೂ ಘರ್ಷಣೆಯಾಗಿ ಸೋಷಿಲಿಯಸ್ಟ್ ಯೂನಿಯನ್ನಿನ ಮುಖಂಡರನ್ನು ಕೊಲೆ ಮಾಡಿದರಂತೆ...

ಗೆಸ್ಟ್‌ಹೌಸಿನ ಗೇಟುದಾಟಿ ಪೋರ್ಟಿಕೊ ಬಳಿ ನಿಂತಿತು. ವಿಶಾಲ ವಾದ ಕಾಂಪೌಂಡು....ಸುತ್ತಲೂ ಹರಡಿದ ಹೂ ಗಿಡಗಳು, ಹುಲ್ಲಿನ ಹಸಿ ಹಾಚಿ ಮೇಲೆ ಸದಾ ಚಿಮ್ಮುವ ಕಾರಂಜಿ....ಇದ್ಯಾವುದನ್ನೂ ಅವಳು ನೋಡಲಿಲ್ಲ. ಬುದ್ಧಿಗೆ ಬೂದಿ ಮುಸುಕಿ ಹೋಗಿತ್ತು.

ರಘು ಮೇಟಿಯನ್ನು ಕೇಳುತ್ತಿದ್ದ.

"ನಮ್ಮ ರೂಮು ಎಲ್ಲಿ ರಿಸರ್ವ್ ಆಗಿದೆ ?"

"ಕೆಳಗಡೆ ಒಂದೂ ಕಾಲಿ ಇಲ್ಲ ಸಾಹೆಬ್, ಮಹಡಿ ಮೇಲೆ ಬೆಡ್ ರೂಮು, ತೆರೆದ ವರ್ಾಂಡ. ಡ್ರಾಯಿಂಗ್ ಹಾಲ್ ಇರುವ ಸೂಟ್ ನಿಮಗಾಗಿ ಸ್ವಚ್ಛ ಮಾಡಿಟ್ಟಿದೀನಿ....ಅದನ್ನು ಡೈರೆಕ್ಟರ್ ವಿನಾ ಇನ್ನಾರಿಗೂ ಸಾಧಾರಣವಾಗಿ ಕೊಡುವುದಿಲ್ಲ. ಈಗ ಯಾವ ಕೋಣೆಯೂ ಖಾಲಿ ಇರದಿದ್ದರಿಂದ ಅದನ್ನೇ ಕೊಡಬೇಕಾಯಿತು..." ರಘುವಿಗೆ ಅತ್ಯಂತ ಉತ್ತಮ ಕೋಣೆ ತಮಗೆ ದೊರತದ್ದು ನೆಮ್ಮದಿ ! ಮೋಟೆ ಎಲ್ಲ ಸಾಮಾನುಗಳನ್ನು ಮೇಲೇರಿಸಿದ ಮೇಲೆ ರಘುವಿನ ಹಿಂದೆ ಜಯಶ್ರೀಯು ಮೆಟ್ಟಲೇರ ತೊಡಗಿದಳು.

ಮೆಟ್ಟಿಲು ಕೊನೆಗೊಂಡ ಒಡನೆ ವಿಶಾಲವಾದ ತೆರೆದ ವರ್ಾಂಡ. ವಿಶ್ರಮಿಸಿಕೊಳ್ಳಲು ನಾಲ್ಕಾರು ಕುರ್ಚಿಗಳನ್ನು ಇಟ್ಟಿದ್ದರು. ಅಲ್ಲಿಂದ ನೋಡಿದರೆ ಎದುರಿಗೇ ವಿಂದ್ಯಪರ್ವತದ ಹಾಳೆತುಣುಕೊಂದು ಕಾಣುತ್ತಿತ್ತು. ಕಾಂಪೊಂಡಿನ ಆಚೆ ಬರೀ ತೆಂಗು ಮರಗಳ ಕಾಡು. ಈ ರಾತ್ರಿಯಲ್ಲಿ ಎಲ್ಲ ನಿಶ್ಯಬ್ದವಾಗಿ ಗೂಢವಾಗಿ ಕತ್ತಲಲ್ಲಿ ಮುಸುಕಿಹೋಗಿತ್ತು. ರಮ್ಯತೆ ಬದಲಾಗಿ ಏನೋ ಗೌಪ್ಯತೆ, ಕರಾಳತೆ ಕಾಣುತ್ತಿದೆ.

ತಮ್ಮ ಕೋಣೆಗೆ ಬಂದು, ಮುಖ ತೊಳೆದುಕೊಳ್ಳುವಷ್ಟರಲ್ಲಿ ಬೇರರ್ ಬಂದು ಇಣುಕಿದ.

ಊಟ ರೆಡಿಯಾಗಿದೆ ಸಾಬ್..."

ರಘು ಜಯಶ್ರೀ ಕಡ ಪ್ರಶ್ನಾರ್ಥಕವಾಗಿ ನೋಡಿದ.

"ಊಟ ಮಾಡೋಣವೇ ?..."

ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನೇ ನೋಡಿಕೊಳ್ಳುತ್ತಾ ಡ್ರೆಸ್ಸಿಂಗ್ ಟೇಬಿಲಿನ ಮುಂದೆ ಕುಳಿತಿದ್ದ ಜಯಶ್ರೀ ಗರಬಡಿದವಳಂತಿದ್ದಳು. ಕ್ಷಣಕಾಲ ಮಾತನ್ನೇ ಆಡಲಿಲ್ಲ. ಅವಳಿಗೆ ಊಟ, ನಿದ್ದೆ...ಏನೂ ಬೇಕಾಗಿರಲಿಲ್ಲ.

ಈ ಹೃದಯ ಭಾರ ಹೊತ್ತು ಆಜೀವ ನೆರಳಿನಂತೆ ಕತ್ತಲಿನ ಜೀವ ವಿಲ್ಲದ ಜೀವನ ನಡೆಸುತ್ತಾ ಹೋಗುವುದು ಹೇಗೆ ?

ಇದಕ್ಕೆಂದಿಗೆ ಮುಕ್ತಿ?

ಇಂದು ಮುಕ್ತಿ ದೊರಕಿದರೇ ನಾಳೆ ಹಸಿವು, ನಿದ್ದೆ ಏಲ್ಲಾ.

"ನನಗೆ ಹಸಿವಿಲ್ಲ...ನೀವು ಮಾಡಿ..."

ಅವನಿಗೂ ಆ ವೇಳೆಯಲ್ಲಿ ಊಟ ಬೇಕಿರಲಿಲ್ಲ. ಒಂದು ಲೋಟ ತಣ್ಣೀರು ತರುವಂತೆ ಹೇಳಿ ಹಾಸಿಗೆ ಮೇಲೆ ಉರುಳಿಕೊಂಡ.

ಜಯಶ್ರೀ ಅವನ ತಲೆ ಬಳಿ ಬಂದು ಕುಳಿತು, ಮೃದುವಾಗಿ ತಲೆ ಯನ್ನು ಬೆನ್ನನ್ನು ತಡವತೊಡಗಿದಳು. ಈ ರೀತಿ ಅವಳಿಗೆ ತೀರ ಹೊಸದು. ರಘು ಇಂದೇ ಮೊದಲ ಬಾರಿಗೆ ಆ ಸಹೃದಯತೆ ಸಾಮೀಪ್ಯ ವನ್ನು ಅವಳಿಂದ ಪಡೆದದ್ದು.

ಅವಳ ಮೃದುವಾದ ಕೈಗಳನ್ನು ನೇವರಿಸಿ ಮುದ್ದು ಕರೆದ.

ಏನು ಜಯಶ್ರೀ, ಒಂದು ರೀತಿ ಇದ್ದೀಯಲ್ಲ ಇಲ್ಲಿಗೆ ಬಂದ ಮೇಲೆ ?....ಇಲ್ಲಿನ ರಾಜಕುಮಾರಿಯಂತೆ ಮೆರೆದವಳು ಈಗ ಕೇವಲ ಆಡಿಟರ್ ಹೆಂಡತಿಯಾಗಿ ಬಂದೆ ಎಂದು ಬೇಸರವೇ ?...

"ಎಂಥಾ ಮಾತು !....ಆ ಭಾವನೆ ನನ್ನಲ್ಲೆಂದೂ ಇಲ್ಲ."

"ಮತ್ತೆ, ಯಾಕೆ ಒಂದು ರೀತಿ ಇದ್ದೀಯ ?...."

"ಮತ್ತೆ. ನಾನು..."

"ಹೂಂ ?..."

"ನಾನೊಂದು ಮಾತು ಹೇಳಬೇಕಾಗಿದೆ...." ಆ ಪೀಠಿಕೆಯ ನಮ್ರತೆಯೋ ಯಾವುದೋ ತೀಕ್ಷ್ಣ ಅಲುಗಿದ್ದಂತಿತ್ತು.

ಅಷ್ಟರಲ್ಲಿ ಬೇರರ್ ಬಂದು ಬಾಗಿಲು ತಟ್ಟುತ್ತಿದ್ದ. ಜಯಶ್ರೀ ಹೋಗಿ ನೀರು ತಂದಳು. "ನೀರು ತೆಗೆದುಕೊಳ್ಳಿ" ಅತ್ಯಂತ ಮೃದು ವಾಗಿತ್ತು ಅವಳ ದನಿ.

ರಘು ಅವಳು ಏನು ಹೇಳಲು ಹೊರಟಿರುವಳೋ ಎಂಬ ಕುತೂಹಲ ದಿಂದ ಒಂದೇ ಗುಟುಕಿಗೆ ನೀರನ್ನೆಲ್ಲಾ ಸುರಿದುಕೊಂಡು ತುಟಿ ಒರಸಿ ಕೊಂಡನು.

"ಹೇಳು....ಈ ದಿನ ನಿನಗೇನಾಗಿದೆ ಹೇಳು ಜಯಶ್ರೀ....

"...ಇರಿ, ದೀಪವಾರಿಸಿ ಬರುತ್ತೇನೆ...." ಎದ್ದು ಹೋಗಿ ದೀಪ ವನ್ನು ಆರಿಸಿ ಪಂಕವನ್ನು ಪೂರ್ತಿ ತ್ವರಿತಗತಿಯಲ್ಲಿ ತಿರುಗುವಂತೆ ಮಾಡಿ, ಪುನಃ ಮಂಚದ ಬಳಿ ಬಂದಳು ಏನೋ ಧಗೆ !

ಹಾಸಿಗೆಯ ಹತ್ತಿಯೇ ಬೆಂಕಿಯಾಗಿ ಹೊತ್ತಿಕೊಂಡಂತೆ ಇತ್ತು. ಕಿಟಕಿ ಪರದೆಗಳನ್ನೆಲ್ಲಾ ಸರಿಸಿ, ಕಿಟಕಿಗಳನ್ನು ಹಾರುಬಡೆದಳು. ಆದರೂ ತಂಪಿನ ಗಾಳಿ ಒಳಕ್ಕೆ ಸುಳಿಯಲಿಲ್ಲ—

"ಹೇಗೆ ಹೇಳಲಿ ? ಯಾವ ನಾಲಿಗೆ ಹೊತ್ತು, ನಾನಿದುವರೆಗೆ ಮುಚ್ಚಿಟ್ಟಿದ್ದನ್ನೆಲ್ಲಾ ಹೇಳಿ ಬಿಡಲಿ.?....

–ಹುಳ್ಳಮನಸ್ಸಿನ ಎಲ್ಲ ಕಡಿವಾಣಗಳನ್ನು ಬಿಗಿಯಾಗಿ ಹಿಡಿದು ಕೊಂಡು, ನಾಲಿಗೆ ಕುದುರೆಯನ್ನು ದನಿಯ ತಗ್ಗಿನಲ್ಲಿ ಜಾಗರೂಕತೆಯಿಂದ ಇಳಿಸಿದಳು. "....ನಾನೊಂದು ತಪ್ಪೊಪ್ಪಿಕೊಳ್ಳುವುದಿದೆ........ ಅಕ್ಷಮ್ಯ ವಾದದ್ದು....ನೀವು ನನ್ನನ್ನು ಸೀಳಿ ಹಾಕಿದರೂ ನಿಮ್ಮ ಮೇಲೆ ಅಪರಾಧದ ಹೊರೆ ನಾನಿಡಲಾರದ ತಪ್ಪು...ಇಷ್ಟು ದಿನ ಹೇಳದೇ ಇದ್ದದ್ದಕ್ಕಾಗಿ ಕ್ಷಮಿ ಸುವಿರಾ ?

ನೀನೇನು ಮಾತನಾಡುತ್ತಿದ್ದೀ ಜಯಶ್ರೀ ?....

ಅವಳು ಹುಶಾರಾಗಿ, ಅತಿ ವಿವರಗಳಿಗೆ ಹೋಗದೆ, ಮದುವೆಗೆ ಮುಂಚೆ ರಾಮ್‌ಧಿನ್‌ಗೂ ತನಗೂ ಆಗಿದ್ದ ಸ್ನೇಹವನ್ನು ಹೇಳಿದಳು. ಆದ ದ್ದನ್ನು ಸೂಕ್ಷ್ಮಕಣಗಳುಳ್ಳ ಒಂದು ಚಿಕ್ಕ ಗುಳಿಗೆ ಮಾಡಿ ಅವನ ಮೃದು ಹೃದಯ ಹೊಕ್ಕುವಂತೆ ಮಾಡಿದಳು.

ಹೌದು, ಅದು ಕಾರ್ಕೋಟಕನಂಥಹ ಕಹಿ ವಿಷ. ಆದರೆ ರಘು ಅವನ್ನು ಒಂದೇ ಬಾರಿಗೆ ನುಂಗಿದ! ಕಹಿ ಎಂದು ಹೇಳಲಿಲ್ಲ!

"ನಿಂದೇನೂ ತಪ್ಪಿಲ್ಲ ಜಯಶ್ರೀ ಇದರಲ್ಲಿ. ನಾಗರೀಕತೆಯನ್ನು ಹಿಂದೆ ಬಿಟ್ಟುಕೊಂಡು ನಿರ್ಜೀವ ಯಾಂತ್ರಿಕ ವಾತಾವರಣದಲ್ಲಿ ಕಾಲೋನಿ ಮಧ್ಯ ಕೃತಕತೆಯ ಗೊಂಬೆಯಾಟವಾಡುವಂಥಹ ಜೀವನ ಇಲ್ಲಿ. ಇಂಥಾ ಸ್ಥಳಗಳಲ್ಲಿ ಕೈ ತುಂಬಾ ಕೆಲಸಗಳಿಲ್ಲದಿದ್ದರೆ ಮನಸ್ಸು ಸ್ವಾಭಾವಿಕವಾಗಿಯೇ ಕೆಲವು ಕಾಲ ತಳ್ಳುವುದರಲ್ಲಿ ಪಿಶಾಚಿ ಕಾರ್ಖಾನೆಯಾಗುತ್ತದೆ... ನೀನೂ ಕೈಗೆ ಸಿಕ್ಕ ಸುಖವನ್ನು ಅನುಭವಿಸಿಬಿಡುವಂತಾದೆ...ಅಪ್ರಬುದ್ಧ ಮನಸ್ಸು ಹುಚ್ಚಾಟವಾಡಿರಬಹುದು....ಇಷ್ಟಕ್ಕೆಲ್ಲಾ ಹೀಗೆ ಯಾಕೆ ಚಿಂತಿಸುತ್ತಿದ್ದಿ? ....ಇನ್ನು ಮುಂದೆ ಅವನ ನಪನ್ನೇ ತೆಗೆದುಕೊಳ್ಳಬೇಡ. ನಾನೊಮ್ಮೆ ಕ್ಷಮಿಸಿಬಿಟ್ಟಿದ್ದೇನೆ...ಅದೇ ನಿನಗೆ ರಕ್ಷಾ ತಾಳಿ!..."

ಜಯಶ್ರೀಗೆ ಅವನ ಮನೋಭಾವ ಕಂಡು ಆಶ್ಚರ್ಯವಾಗಿತ್ತು. ಯಾವ ಗಂಡಸು ಇಂಥ ಉದಾತ್ತ ಬುದ್ಧಿಯುಳ್ಳವನಾಗಿರುತ್ತಾನೆ.

ಅವನು ಮತ್ತೆ ಹೇಳಿದ, "ಹೆಣ್ಣು ತಾನು ಮಾಡದೇ ಇರುವ ತಪ್ಪಿಗಾಗಿ ಹೃದಯದಲ್ಲಿ ಒಂದು ಕರೀ ಮೂಲೆ ಸದಾ ಕಾಯ್ದಿಟ್ಟುಕೊಂಡಿರುವವಳಂತೆ! ...ನೀನೂ ಆ ನುಡಿಗೆ ಹೊರತಾಗಲಿಲ್ಲ..."ಎಂದು ಅವಳ ಮೈತಲೆ ನೇವರಿಸಿದನು.

ಅವಳು ಮಾಡಿಕೊಂಡ ತಪ್ಪೊಪ್ಪಿಗೆ ಅವನಿಗೆ ಪ್ರಿಯವಾಗಿತ್ತು. ಅಂದು ಅವಳು ಎಂದೂ ಇರದಷ್ಟು ಸಮೀಪವಾಗಿ ಕಂಡಳು.

ಆದರೆ ಜಯಶ್ರೀ ಮನದಲ್ಲಿ ಕೊರೆಯುತ್ತಲೇ ಇತ್ತು-ತಾನು ಮಾಡದೇ ಇರುವ ತಪ್ಪು? ಅವನ ನಂಬಿಕೆ!...ಅಂದಿನ ಮೊವ್ಹಾ ಮರದಡಿಯ ಪ್ರಸಂಗವನ್ನು ಅವಳು ಹೇಳಿಯೇ ಇರಲಿಲ್ಲ, ಹೇಳುವುದಕ್ಕೆ ಅವಳಿಗೆ ತೀರಾ ಅಸಾಧ್ಯವಾಗಿತ್ತು.

ಒಂದು ವೇಳೆ ಅದೂ ಹೇಳಿದ್ದರೆ ಕ್ಷಮಿಸಬೇಕು!....

ಕೊಂಚವಾದರೂ ತನ್ನ ಭಾರ ಇಳಿಯುವಷ್ಟು ಕತೆಯನ್ನು ಅವನಿಗೆ ಹೇಳಿದ್ದಳೇ ವಿನಾ ಪೂರಾ ಸತ್ಯ ಬಿಚ್ಚಿ ತೋರಿರಲಿಲ್ಲ.

ಈಗ ಅವನ ಕ್ಷಮೆಯಿಂದ ಭಾರ ಇಳಿದರೂ, ಕೃತಜ್ಞತೆ ಹೊರೆ ಈಗ ಅವಳ ಮೇಲೆ ಇನ್ನಷ್ಟು ಬೀಳುವಂತಾಯಿತು. ತುಂಬು ಸಾಗರದಂತೆ ಕಂಡಿತು ಅವನ ಮನ. ಅದರ ದಡದಲ್ಲಿ ನೀರು ಸೋಂಕದಂತೆ ನಿಂತಿದ್ದಳು ಜಯಶ್ರೀ, ಅದೇ ತುಂಬು ಸಾಗರದಲ್ಲಿ ಮುಳುಗಿ ತನ್ನದೆಲ್ಲವನ್ನೂ ಕಳೆದು ಕೊಂಡು ಬಿಡಲು ಕಾತುರಪಟ್ಟಳು. ಆದರೆ ಅವಳ ಮನಸ್ಸು ಅದೆಷ್ಟು ಹಗುರವಾಗಿ ಹೋಯಿತೆಂದರೆ ಅದು ಮುಳುಗುವ ಆಸ್ಪದವನ್ನೂ ಕಳೆದು ಕೊಂಡುಬಿಟ್ಟಿತು.

ಏನೋ ಹಗುರತೆ...ಶಾಂತತೆ ಇವೆರಡರಿಂದ ತಪ್ಪಿಸಿಕೊಂಡು ಹೋಗುವ ಬಯಕೆ! ಈ ಸುಳಿಬಂಧನಕ್ಕೆ ಸಿಲುಕಿ ಇರುಳನೆಲ್ಲಾ ಕಳೆದಳು.

* * * *

ಆಕಾಶದಲ್ಲಿ ದಟ್ಟೈಸಿದ ಮೋಡ ಕೆಳಕ್ಕೆ ಜಗ್ಗುತ್ತಿತ್ತು. ಬೆಂಕಿ ಹಚ್ಚಿಟ್ಟ ಒಲೆ ಮೇಲಿನ ಬಾಣಲೆಯಂತೆ ಭೂಮಿಯ ಸೆಖೆ ಮೋಡಕ್ಕೆ ಕಾವು ಕೊಡುತ್ತಿತ್ತು. ಜಯಶ್ರೀ ಮಹಡಿ ಮೇಲಿನ ವರ್‍ಯಾಂಡದ ಕಂಬಕ್ಕೆ ಒರಗಿ ಕೊಂಡು ನಿಂತಿದ್ದಳು. ಆದೇ ತಾನೆ ಬಂದ ರಘು ಸೆಖೆ ತಡೆಯಲಾರದೆ ತಣ್ಣೀರೇ ತುಂತುರು ಸ್ನಾನ ಮಾಡಲು ಬಾತ್ ರೂಂ ಹೊಕ್ಕಿದ್ದ.

ನಾಲ್ಕರ ಸಮಯ. ಮಳೆ ಬೀಳುವ ಮುನ್ನಿನ ಸೆಖೆ ತಡೆಯಲು ಅಸಾಧ್ಯವಾಗಿದ್ದರೂ ಮೋಡ ಸೂರ್ಯನಿಗೆ ಅಡ್ಡ ಛತ್ರಿ ಹಿಡಿದಿದ್ದರಿಂದ ಬಿಸಿಲಿನ ಪ್ರಖರತೆ ಇರಲಿಲ್ಲ. ಎಲ್ಲೊ ಮಳೆ ಆದೇ ತಾನೇ ಸಮೀಪದಲ್ಲಿ ಆಗುತ್ತಿತ್ತೇನೋ, ಕಾವಿನ ಮಧ್ಯೆ ತಂಪಿನ ಗಾಳಿಯೂ ತೂರಿ ಬಂದಿತು.

ಆಗಲೇ ಮಳೆಯ ಸುಳಿವು ಪ್ರಕೃತಿಗೆ ಅರಿವಾಯಿತೇನೋ. ಎಲ್ಲೆಡೆ ಏನೋ ವ್ಯತ್ಯಾಸ. ಜಯಶ್ರೀ ಬಾಗಿ ನೋಡಿದಳು. ಬಲಿತ ಕರೀ ಎಲೆಗಳನ್ನು ಹಿಂದಕ್ಕೆ ತಳ್ಳಿಹಾಕಿ, ಮುಂದೆ ಮುಂದೆ ಬೆಳೆದಿದ್ದ ಚಿಗುರು ತಳಿರಿನ ಮಾವಿನ ಮರ ಹೊಸ ನೀರಿಗಾಗಿ ಬಾಯ್ಬಿಟ್ಟು ನಿಂತಿತ್ತು. ಹಣ್ಣು, ಕಾಯಿ ಎಲ್ಲ ಅರ್ಪಿಸಿಯಾಗಿದ್ದರೂ ಮರದ ತುಟ್ಟ ತುದಿಯಲ್ಲಿ ಇನ್ನೂ ಒಂದೆರಡು ಹಸಿ ಕಾಯಿಗಳು ಮರವನ್ನು ಬಿಡಲಾರೆವೆಂದು ಟೊಂಗೆಯನ್ನು ಕಚ್ಚಿ ಕುಳಿತಿದೆ. ಯಾರ ಕಣ್ಣಿಗೂ ಬೀಳದೆ, ತನ್ನಲ್ಲಿನ ಹೂವನ್ನು ಕಳೆದುಕೊಂಡು, ಚಿಗುರನ್ನು ಇನ್ನೂ ಮೂಡಿಸದೆ ಸಾಲು ಸಾಲಾಗಿ ಬರಲಂತೆ ನಿಂತಿವೆ, ಪನ್ನೀರು ಗುಲಾಬಿ ಗಿಡಗಳು. ಇನ್ನೊಂದು ಕೊನೆಗೆ ವಸಂತ ಋತುವಿನಲ್ಲಿ ರಮ್ಯವಾಗಿ ಕೆಂಪು ಬಣ್ಣ ಎರಚಿದ ಗುಲ್‌ಮೊಹರ್ ಮರದ ಹೂಗಳು ಈಗ ಪೀತವರ್ಣತಾಳಿ ಮಳೆ ನೀರಿನ ಏಟಿನಿಂದ ಉದುರಿ ಹೋಗಲು ಆತುರಪಡುತ್ತಿದೆ–ಸಾಯಲು ಸಿದ್ಧವಾದ ವೃದ್ಧನಂತೆ.

ತನ್ನಂತೆ ಹುಳಿ ಹೊತ್ತ ಮಾವು. ಹೊಸ ಜೀವನ ನಡೆಸಲು ಕಾತರಿಸುವ ಮುಳ್ಳು ಗುಲಾಬಿ ಗಿಡ, ಅದೂ ತನ್ನಂತೆ,... ಪ್ರಕೃತಿ ತನಗಾಗಿಯೇ ಸಂದೇಶ ತೋರುತ್ತಿದೆಯೇ ? ಆದರೆ ಹುಳಿಯೂ ಇಲ್ಲದ, ಹೊಸ ಜೀವನವನ್ನು ಈ ಋತುವಿನಲ್ಲಿ ಆರಂಭಿಸಲೂ ಅಸಾಧ್ಯವಾಗಿದ್ದ ಗುಲ್‌ಮೊಹರ್ ಗಿಡದ ಹೂ ಗಳಿಗೆ ನಾಶವಾಗಲು ಕಾತುರ. ಗುಲ್‌ಮೊಹರ್ ಗಿಡದ ನಡು ನಡುವೆ ಹುಟ್ಟಿಕೊಂಡಿದ್ದವು, ಪುಟ್ಟ ಪುಟ್ಟ ಕತ್ತಿಯಂಥಹ ಕಾಯಿಗಳು.

ಅವಳಿಗೆ ಏನೋ ವಿಚಿತ್ರ ಭಾವ...ಆ ಕತ್ತೀ ಕಾಯಿ ನಿಜವಾಗಿಯೂ ಝಳಪಿಸುವ ಅಲಗಾಗಿ ಏಕೆ ಹುಟ್ಟಬಾರದು, ತನ್ನನ್ನು ಕೊಚ್ಚಿ ಹಾಕುವಷ್ಟು ತೀಕ್ಷ್ಣವಾಗಿ ? ಅಷ್ಟರಲ್ಲಿ ಬಿಳಿ ಪಕ್ಕಿಗಳ ಸಾಲೊಂದು ಎದುರಿನ ಬೆಟ್ಟಗಳ ಹಿಂಬದಿಯಿಂದ ಮೋಡದ ಅಡ್ಡ ಹಾರಿದವು. ಮೋಡದ ಕಪ್ಪಿಗೆ ಅವುಗಳ ಬಿಳುಪು ಸ್ಪಷ್ಟ ವ್ಯತಿರಿಕ್ತವಾಗಿತ್ತು. ಮೋಡದ ಮೇಲಿನ ದೃಷ್ಟಿ ಕಿತ್ತು ಅವಳು ಪಕ್ಷಿಗಳ ಸ್ವಛಂದ ಹಾರಾಟವನ್ನೇ ನೋಡಿದಳು. ಆಹಾ, ಎಷ್ಟು ಅಂದ !

ಕ್ಷಣದಲ್ಲೇ ಮೋಡದಿಂದ ಮಿಂಚಿನ ಗೊಂಚಲೊಂದು ಅವಳ ಕಣ್ಮುಂದೆಯೇ ಜ್ವಲಿಸಿ ಮಾಯವಾಯಿತು.

"ಅಬ್ಬಾ..." ಒಮ್ಮೆಗೇ ಬೆಚ್ಚಿಬಿದ್ದರೂ ಆ ಜಾಗ ಬಿಟ್ಟು ಕದಲಲಿಲ್ಲ ನೋಡುತ್ತಲೇ ನಿಂತಿದ್ದಳು. ಮೆಲ್ಲ ಮೆಲ್ಲನೆ ಮಳೆ ಹನಿಗಾರಂಭವಾಯಿತು. ಗುಡುಗು ಮಿಂಚಿನ ಸಮೇತ ಟಪ್ಪ ಟಪ್ಪನೆ...ತಂಪಾಗಿ ಮೋಹಕ ತಂಪು ತರುತ್ತಾ ಮೆಲ್ಲ ಮೆಲ್ಲನೆ ಮಳೆಯ ಬೆಳ್ಳಿ ಗೆಜ್ಜೆಗಳು ಝುಣತ್ಕಾರ ಮಾಡಿ ನರ್ತಿಸತೊಡಗಿದವು-ಕಾದು ನಿಂತ ಭೂಮಿ ಮೇಲೆ ಆ ಕಾದ ನೆಲದ ಮೇಲೆ ಬಿದ್ದ ಮೊದಲ ತಣ್ಣೀರ ಸ್ನಿಗ್ಧ ಸುವಾಸನೆ....ಹಾ, ಏನು ಮೋಹಕ....ಆ ತಂಗಾಳಿ?

ಜೊತೆಗೇ ತೇಲಿ ಬಂದಿತು, ಎಲ್ಲಿನದೋ ಹತ್ತಿರ ಒಂದು ಮರದ ಮೊಪ್ಪಾದ ಮಾದಕ ಸುಂಗಧ! ಅಹಾ....ಹಾ ..

ಅವಳಿಗೆ ಆ ಪ್ರಕೃತಿಯ ಆಮೋದದಲ್ಲಿ ಜೀವನವೇ ಮರೆತು ಹೋಯಿತೇನೋ!....ಯಾವುದೋ ಮಧುರ ಸ್ವಪ್ನ ತೇಲಾಡಿದಳು,

ಹಿಂದಿನ ರಾತ್ರಿ ರಘು ತೋರಿದ ಕ್ಷಮೆಯಿಂದ ಅವಳಲ್ಲಿ ಏನೊ ಹಗುರತನ ಮೂಡಿತ್ತು. ಈ ಕ್ಷಣಕ್ಕೆ ಏತರಿಂದ ತನ್ನ ಭಾರ ಕಮ್ಮಿಯಾಯಿತೆಂಬುದನ್ನೂ ಮರೆತಳು-ಕೇವಲ ಮಳೆಯ ಮೋಹಕತೆ, ಮೊಪ್ಪಾದ ಮಾದಕತ ಪರಿಮಳದಲ್ಲಿ ಮುಳುಗಿದಳು. ಪುತ್ತೆಲ್ಲ ಮರೆತಳು. ನಿದ್ರೆಯಲ್ಲ ಕನಸು ಕಾಣುವವರಂತೆ ಬರೀ ತನ್ನ ಸಾಮ್ರಾಜ್ಯದಲ್ಲೇ ತಾನು ತೇಲಾಡಿದಳು. ಬಿಗಿಹಿಡಿಯಲು ಅರಿಯದ ಮನಸ್ಸು ಕೋತಿಯಂತೆ ಚಂಚಲ! ಅವಳು ಅನ್ಯಮನಸ್ಸಿನಿಂದ ಎಚ್ಚೆತ್ತು ಕಣ್ ಬಿಟ್ಟಾಗ ಹಗೂರಾಗಿ ಬಂದ ಮಳೆ ನಿಂತು, ರಸ್ತೆ, ಕೊರೆಕಲು, ಎಲ್ಲಾ ಸೂರ್ಯನ ಬೆಳ್ಳಿ ಕಿರಣಗಳ ಮುಲಾಮು ಪಡೆದು ಬೆಳ್ಳಿ ತಗಡಿನಂತೆ ಥಳಗುಟ್ಟಿದವು, ವೃಕ್ಷ ಸಮೂಹವೆಲ್ಲಾ ತಂಪಾಗಿ ಮಿಂಚುತ್ತಿದ್ದವು.

ಬೇರರ್ ಕಾಫಿ ಟ್ರೇ ತಂದಿಟ್ಟ.

"ಕಾಫಿಯನ್ನು ಅಲ್ಲೇ ಗುಂಡು ಮೇಜಿನ ಮೇಲಿಡು...."ವರ್ಾಂಡದಲ್ಲಿದ್ದ ಪುಟ್ಟ ಮೇಜೊಂದನ್ನು ಅವನಿಗೆ ತೋರಿಸಿದಳು.

—ರಘು ಒಳಗೆ ತಲೆ ಬಾಚಿಕೊಳ್ಳುತ್ತಿದ್ದನೇನೊ.

ಜಯಶ್ರೀ ತನ್ನಲ್ಲಿ ಉತ್ಪತ್ತಿಯಾಗಿದ್ದ ಕುತೂಹಲದ ಹೊಗೆಯೊಂದನ್ನು ಅದುಮಿಟ್ಟುಕೊಳ್ಳಲಾರದೆ ಬೇರರನ್ನು ಕೇಳಿಯೇ ಬಿಟ್ಟಳು-ಕಣ್ಣು ಕೋಣೆಯ ಬಾಗಿಲ ಕಡೆಗೆ ಇತ್ತು...ಬೆದರುತ್ತಾ.

"ಇಲ್ಲಿ ಕ್ಲಬ್ಬಿನಲ್ಲಿ ಒಬ್ಬ ಒಳ್ಳೆ ಆಟಗಾರನಿದ್ದನಲ್ಲ....ರಾಮ್‌ಧಿನ್.... ಈಗ ಇಲ್ಲಿಲ್ಲವೇ?..."

"ಯಾವ ರಾಮ್‌ಧಿನ್?...ಹೋ, ಗೊತ್ತಾಯಿತು....ಲೇಬರ್ ಲೀಡರ್ ರಾಮ್‌ಧಿನ್ ಉದ್ದಕ್ಕಿದ್ದ...ಗುಂಗುರು ಕ್ರಾಪ್...ಅವ್ನೇ ಅಲ್ವೆ?... ಅವ್ನು ಈಗೆಲ್ಲಿದ್ದಾನೆ!....

--ಅವನ ಧ್ವನಿ ಅಷ್ಟು ಏರಿದ್ದ ಅವಳಿಗೆ ಮುಜುಗರವಾಯಿತು. ರಘುವಿಗೆ ತನ್ನ ಕಳ್ಳ ಕುತೂಹಲ ಅರಿವಾಗಿಬಿಟ್ಟರೆ!

ಅವಳು ಹೆದರಿದಂತೆಯೇ ರಘು ಬಾಗಿಲ ಬಣಿ ಬಂದು ಬಿಟ್ಟಿದ್ದ. ನಾಲಿಗೆ ಕಚ್ಚಿಕೊಂಡು ಗಂಡನನ್ನು ಕಾಫಿಗೆ ಕರೆದಳು.

ಆತ ಮೌನವಾಗಿ ಬಂದು, ಕಾಫಿ ಹೀರತೊಡಗಿದ.

—ಅವನು ತನ್ನ ಕತೆ ಕೇಳಿಯೂ ಕ್ಷಮಿಸಿದ ಮೇಲೆ ಮತ್ತೆ ತಾನು ರಾಮ್‌ಧಿನ್ ವಿಚಾರ ಬೇರರ್ ಬಳಿ ಎತ್ತಿದ್ದು ರಘುವಿಗೆ ಸ್ವಲ್ಪವೂ ಸರಿ ಬರದಿದ್ದದ್ದು ಸ್ಪಷ್ಟವಾಗಿತ್ತು. ಹೊಸದಾಗಿ ಹುಟ್ಟಿಕೊಂಡ ಅಸೂಯೆ ಅವನ ಮುಖವನ್ನೆಲ್ಲಾ ಪಸರಿಸಿತು. ಅದು ಜಯಶ್ರೀಗೆ ಚೆನ್ನಾಗಿ ವ್ಯಕ್ತವಾಯಿತು. ಸುಮ್ಮನಿದ್ದಳು.

ಅವನು ಕಾಫಿ ಕುಡಿದು ಹೊರಟು ನಿಂತ, "....ಸಂಜೆ ವಾಪಸು ಬರುವುದು ಹೊತ್ತಾಗಬಹುದು...ಮ್ಯಾನೇಜರ್ ಮನೆಯಲ್ಲಿ ಆಫೀಸರುಗಳ ಪಾರ್ಟಿ ಇದೆ...ನನಗಾಗಿ ಕಾಯಬೇಡ....ಊಟ ಮಾಡಿಬಿಡು..."ಯಂತ್ರದಂತೆ ನಾಲಿಗೆ ತಿರುಗಿಸಿದ. ಆ ಬಂಗಲೆಯ ಪಾರ್ಟಿ ಎಂದರೆ ತಿಳಿದೇ ಇದೆ!....ಆಫೀಸರುಗಳೆಲ್ಲಾ ಹುಚ್ಚು ಹುಚ್ಚಾಗಿ ಕುಡಿದು ಓಲಾಡುವ ಪಾರ್ಟಿ

ಎಂದು. ಕೆಲವರಿಗಂತೂ ಪೂರಾ ಜ್ಞಾನವೇ ಇಲ್ಲದೆ ಮೋಟಾರಿನಲ್ಲಿ ಹೊತ್ತು ತಂದು ಮನೆ ಬಾಗಿಲಿಗೇ ಬಿಡುತ್ತಾರೆ...ಮಾರನೇ ದಿನ ಆಫೀಸಿಗೆ ರಜವಿದ್ದರಂತೂ ಸರಿ. ಇಲ್ಲದಿದ್ದರೆ, ಒಬ್ಬೊಬ್ಬರು ಒಂದೊಂದು ವೇಳೆಗೆ ಆಫೀಸಿಗೆ ಹಾಜರಾಗುತ್ತಾರೆ–ಇವನ್ನೆಲ್ಲಾ ಜಯಶ್ರೀ ತಂದೆ ಕಾಲದಲ್ಲೇ ನೋಡಿದ್ದಳು.

ಹೊರಟ ಗಂಡನಿಗೆ ಎಚ್ಚರಿಕೆ ಮಾತು ಹೇಳಿದಳು. "ಜಾಸ್ತಿ ಬಾಟ್ಲಿ ಹಾಕಬೇಡಿ!....ಹೊಸಬರೆಂದು ಬೇಕಂತ ಹೆಚ್ಚು ಕುಡಿಸಿ 'ಮಜಾ' ನೋಡ್ತಾರೆ ಹಳಬರು... ಜೋಕೆ!...." ರಘು ಹೊರಟು ಹೋದ. ಜಯಶ್ರೀ ತನ್ನ ಕೋಣೆಗೆ ಹೋಗಿ, ಸುಮ್ಮನೇ ಅಡ್ಡಾಡತೊಡಗಿದಳು. ಬೇರರ್ ಹೇಳಿದ ಮಾತು ಅವಳ ಹೃದಯವನ್ನು ಕಳವಳಪಡಿಸಿತು. ಕಾಫಿ ಟ್ರೇ ತೆಗೆಯಲು ಅವನು ಬಂದಾಗ ಕೇಳಿದಳು.

"ಆ ರಾಮ್‌ಧಿನ್ ಈಗೆಲ್ಲಿದ್ದಾನೆ?...ಈಗಲೂ ಗಣಿ ಕೆಲಸಗಾರರ ಜಂಜಾಟ ತುಂಬ ಇದೆಯೇ?..." ವೈಯುಕ್ತಿಕವಾಗಿ ಸುಮ್ಮನೆ ಅವನ ವಿಚಾರವನ್ನೇ ಕೇಳುತ್ತಿದ್ದರೆ ಅವನೆಲ್ಲಿ ತನ್ನನ್ನು ತಪ್ಪಾಗಿ ತಿಳಿಯುತ್ತಾನೊ ಎಂದು. 'ಕೆಲಸಗಾರರ ಜಂಜಾಟ'ದ ಮುಸುಕು ಬೇರೆ ಹಾಕಿ, ತನ್ನ ಕುತೂಹಲವನ್ನು ಹೊರಗೆಡುಹಿದಳು.

"ಲೇಬರ್ ಟ್ರಬಲ್ ಈಗ ಸಧ್ಯಕ್ಕೆ ತುಂಬಾ ಕಮ್ಮಿಯಾಗಿದೆ.... ರಾಮ್‌ಧಿನ್ ಕೊಲೆ ಆಗಿ, ಕಮ್ಯೂನಿಸ್ಟ್ ಪಾರ್ಟಿ ಗೇಂದೂಗೆ ಮರಣ ದಂಡನೆ ಆದಂದಿನಿಂದ ಬಿಸಿ ಕೊಂಚ ಕಮ್ಮಿಯಾಗಿದೆ."

ಹಿಡಿರಕ್ತ ಅವಳ ಎದೆಯಿಂದ ಒಮ್ಮೆಗೇ ಜಲಪಾತದಂತೆ ಧುಮುಕಿತು. "ಇದೆಲ್ಲಾ ಯಾವಾಗಾಯಿತು?...." ಕ್ಷಣ ಪೃಥ್ವಿ ಚಲಿಸಲೇ ಇಲ್ಲ.

ಅವನು ಹೇಳಿದ. "ನಿಮಗೆ ಆ ಕತೆ ತಿಳಿಯದೆ?....ರಾಮ್‌ಧಿನ್ ಸೋಷಿಯಲಿಸ್ಟ್ ಯೂನಿಯನ್ನಿನ ಲೀಡರ್. ಗೇಂದೂ ಕಮ್ಯೂನಿಸ್ಟ್ ಪಾರ್ಟಿ ಯೂನಿಯನ್ನಿನ ಮುಖಂಡ–ಇಬ್ಬರಿಗೂ ಏನೊ ಶಿಕ್ಕಾಟ ಆರಂಭ

ವಾಗಿ ದೊಡ್ಡ ಹೊಡೆದುಟ ಆರಂಭವಾಯಿತು. ಗೇಂದೂ ಬೇಟೆನಾಯಂತೆ ವಾಸನೆ ರಕ್ತ ಹೀರೊ ತನಕ ಬಿಡೋನಲ್ಲ, ರಾಮ್‌ಧಿನ್‌ನನ್ನು ಕೊಚ್ಚಿ ಹಾಕಬೇಕೆಂದು ಪಣತೊಟ್ಟ, ರಾಮ್‌ಧಿನ್ ಜೀವ ಭಯದಿಂದ ಎಲ್ಲೆಲ್ಲೂ ತಲೆ ಮರೆಸಿಕೊಳ್ಳಲು ನೋಡಿದ. ಅಷ್ಟರಲ್ಲಿ ಅವನಿಗೆ ಈ ಗೆಸ್ಟ್‌ಹೌಸ್ ಬಹಳ ಸುರಕ್ಷಿತ ಸ್ಥಳ ಎನ್ನಿಸಿತೆನೋ...ಕಾಲೋನಿಗೆ ದೂರವಾಗಿದೆ, ಯಾರು ತನ್ನನ್ನು ಇಲ್ಲಿ ಹಿಡಿಯಲಾಗುವುದಿಲ್ಲ ಎಂದು ತಿಳಿದೊ ಏನೋ ನೇರ ಇಲ್ಲಿಗೆ ಬಂದು ಇದೇ ಮಹಡಿ ಹತ್ತಿ, ಆ ಕಂಬದ ಮರೆಯಲ್ಲಿ ಅವಿತಿಟ್ಟುಕೊಂಡ....ಅಲ್ಲೆ ನೋಡಿ...ಮೇಜು ಕುರ್ಚಿ ಪಕ್ಕಕ್ಕೂ ಮೆಟ್ಟಿ ಲಿಗೂ ನಡುವೆ ಕಂಬ ಇದೆಯಲ್ಲಾ ಅಲ್ಲೇ ಗೇಂದೂಗೆ ಅದನ್ನು ಕಂಡು ಹಿಡಿಯಲು ಕ್ಷಣಕಾಲ ಬೇಕಾಗಲಿಲ್ಲ!....ಕೊಚ್ಚಿಹಾಕಿದ. ರಾಮ್‌ಧಿನ್ ಕತೆ ಅಲ್ಲಿಗೆ ಮುಗಿಯಿತು.....ಇದೇ ಮೆಟ್ಟಲ ಕೊನೇ ಹಂತದಲ್ಲಿ ಕುಸಿದು ಬಿದ್ದ....," ಜಯಶ್ರೀ ನಿರ್ಜೀವ ಗೊಂಬೆಯಾಗಿದ್ದಳು.

ಬೇರರ್ ಟ್ರೇ ಎತ್ತಿಕೊಂಡು ಹೊರಟವನೇ ಮತ್ತೆ ಏನೊ ನೆನೆದು ಹೇಳಿದ,

"ಮಾ—ಸಾಬ್, ಸ್ವಲ್ಪ ಒಳಗೆ ಬರಲೇ..."

"ಯಾಕೆ?...."

"ಇಲ್ಲಿ ಕಾಡು ಇಲಿಗಳ ಕಾಟ ಬಹಳ ಜಾಸ್ತಿ ...ಎಷ್ಟು ಸಾಯಿಸಿದರೂ ಬರುತ್ತಲೇ ಇರುತ್ತವೆ....ಕೆಳಗಿನ ರೂಮಿನ ಕಾರ್ಪೆಟನ್ನು ನೆನ್ನೆ ರಾತ್ರಿ ಕಚ್ಚಿ ಹಾಕಿದೆ....ಭಾತ್‌ರೂಂ ಗೂಡಿನಲ್ಲಿ ಇಲಿ ಪಾಸಾಣದ ಶೀಸೆ ಇಟ್ಟಿದ್ದೇನೆ.... ಈ ರೊಟ್ಟಿಗೆ ಒಂದಿಷ್ಟು ಹಾಕಿಕೊಂಡು ಹೋಗಿ ಇಡ್ತೀನಿ...ಈಗ ಸಾಯಲಿ ಪಾಳಾದ್ದು ನೆಗೆದು ಬೀಳುತ್ತದೆ..." ಎನ್ನುತ್ತಾ ಒಳಗೆ ಹೋದನು. ಅವನು ರೊಟ್ಟಿಗೆ ಪಾಸಾಣವನ್ನು ಹಾಕಿಕೊಂಡು ಹೊರಗೆ ಬಂದಾಗ ಜಯಶ್ರೀ ಕುಳಿತಿದ್ದ ಭಂಗಿ ಕಂಡು ತುಂಬಾ ಗಾಬರಿಯಾಗಿರಬೇಕು. ಅವಳ

ಮುಖದಲ್ಲಿ ಕಳೆ ಸೋಸಿಹೋಗಿತ್ತು. ಮೈಯಲ್ಲಿ ಜೀವರಸ ಹರಿದಾಡು ತ್ತಿಲ್ಲವೇನೋ ಎಂಬಂತೆ ಮರದ ಕೊರಡಾಗಿ ಕುಳಿತುಬಿಟ್ಟಿದ್ದಳು. ತಪ್ಪಿತಸ್ಥ ನಂತೆ ಮೆದುದನಿಯಲ್ಲಿ ಆಗ ಇವನು ಹೇಳಿದ.

"ಈ ಸಳಜೆ ವೇಳೇಲಿ ಈ ಕೊಲೆ ಕತೆ ನಾನು ನಿಮಗೆ ಹೇಳಬಾರ ದಿತ್ತೇನೋ?....ತುಂಬಾ ಹೆದರಿದ್ದೀರ ಮಾ ಸಾಹಬ್...ಆದರೆ ಹೆದರಿಕೆ ಸ್ವಲ್ಪವೂ ಕಾರಣವಿಲ್ಲ. ರಾವ್‌ಧಿನ್ ಇಲ್ಲೇ ಸತ್ತಿದ್ದರೂ ಅವನೇನೂ ಭೂತವಾಗಿಲ್ಲ ಎಷ್ಟೋ ಜನ ಧೈರ್ಯವಾಗಿ ಒಂಟೊಂಟಿಯಾಗೇ ಈ ಕೋಣೆಲಿ ಕಳೆದಿದ್ದಾರೆ...ಒಂದು ದಿನವೂ ಯಾರಿಗೂ ಏನೂ ಆಗಿಲ್ಲ....ರಾಮ್‌ಧಿನ್ ತುಂಬ ಒಳ್ಳೆ ಹುಡುಗ. ದೆವ್ವವಾಗಿ ಪೀಡಿಸುವ ಆತ್ಮವೇ ಅಲ್ಲ ಅವನದ್ದು. ಗೇಂದೂಗೆ ನೇಣಾದ ದಿನವೇ ಅವನ ಆತ್ಮಕ್ಕೆ ತೃಪ್ತಿ ದೊರೆತು ಬಿಟ್ಟಿದೆ! ಹೆದರಿಕೆ ಬೇಡ..ಬೇಕಾದರೆ ನಿಮ್ಮ ಜೋತೆಗಿರಲು ನನ್ನ ಮಗಳನ್ನು ಕಳುಹಿಸಿ ಕೋಡುತ್ತೇನೆ...."

"ಇಲ್ಲಪ್ಪಾ, ನಾನು ತುಂಬ ಧೈರ್ಯವಾಗಿದ್ದೇನೆ!"

ಬೇರರ್ ಮಗಳು ಐದಾರು ನಿಮಿಷಗಳಲ್ಲಿ ಬಂದು. ಅರ್ಧ ಗಂಟೆ ಯಿಂದಾ ಬಾಗಲ ಬಳಿಯೇ ಕುಳಿತಿದ್ದರೂ ಜಯಶ್ರೀಗೆ ಪರಿವೆಯೇ ಇಲ್ಲ. ಅವಳ ಜಗತ್ತಿಗೆ ಈಗ ಏನೂ ಕಾಣುತ್ತಿಲ್ಲ. ನೆಟ್ಟ ದೃಷ್ಟಿಯಿಂದ ಬೇರರ್ ತೋರಿದ ಜಾಗವನ್ನೇ ಸುಮ್ಮನೆ ನೋಡುತ್ತಾ ಕುರ್ಚಿ ಮೇಲೆ ಕುಳಿತು ಬಿಟ್ಟಿದ್ದಾಳೆ.

ಹೊರಗೆ ಕತ್ತಲಾವರಿಸುತ್ತಾ ಬಂದಿತು. ಕೋಣೆ ದೀಪ ಹಚ್ಚಲೂ ಅವಳಿಗೆ ಬೇಕಿರಲಿಲ್ಲ.

ಮಳೆ ಬಿದ್ದ ದಿನ ದೀಪ ಹಚ್ಚಿದರೆ ದೀಪದಾಸೆಗೆ ಕಾಡಿನ ಕ್ರಿಮಿಕೀಟ ಗಳೆಲ್ಲಾ ರೆಕ್ಕೆ ಹೊತ್ತು ದೀಪವಿದ್ದಲ್ಲಿ ದಾಳಿ ನಡೆಸುತ್ತವೆ, ಅದನ್ನು ತಡೆ ಯಲು ಮೇಮ್‌ಸಾಬ್ ಕತ್ತಲಲ್ಲಿ ಕುಳಿತಿರಬಹುದೆಂದು ಆ ಹುಡುಗಿ

ಊಹಿಸಿ, ತಾನೂ ಸುಮ್ಮನೇ ಕುಳಿತು ಬಿಟ್ಟಿತು. ಪುಟ್ಟು ಎಂಟು ವರ್ಷದ ಮಗುವಿಗೇನು ಗೊತ್ತು ಜಯಶ್ರೀ ಆಂದೋಳನ ?

ಕತ್ತಲಲ್ಲಿ ತನ್ನ ಹೃದಯದ ಕತ್ತಲ ಕೋಣೆಯನ್ನು ಶೋಧಿಸಿಕೊಳ್ಳುತ್ತಿದ್ದಳು ಆಕೆ. ನೋಡುತ್ತಿದ್ದ ಹಾಗೆಯೇ ಕರೀ ಕತ್ತಲ ವರಾಂಡಾದ ಬಿಳುಪು ಕಂಬದ ಬುಡದಿಂದ ರಾಮ್‌ಧಿನ್ ಎದ್ದು ಬಂದ ಸುಟ್ಟ ಮದ್ದಿನಿಂದ ಹಾವಿನ ರೂಪದ ಬೂದಿ ಎದ್ದು ಬಂದಂತೆ ಭೂಮಿಯೊಳಗಿಂದ ಎದ್ದು ಬಂದಂತೆ. ತನ್ನ ಆಂಧೋಳನವನ್ನು ಕಂಡು ನಕ್ಕಂತೆ—ಮನಃ ಪೂರ್ವಕವಾಗಿ ಗಹಗಹಿಸಿ ನಕ್ಕ ಅವನು—ತನ್ನನ್ನೂ ಬಿಡದೆ, ಗಂಡಸನ್ನೂ ಅಂಟಿ ಬಂದಿದ್ದ ಅವಳ ಇಬ್ಬಾಗ ಮನಸ್ಸನ್ನು ಕಂಡು, ಅವಳೆದೆ ಸೀಳಿ ಹೋಗುವಂಥ ತೀಕ್ಷ್ಣ ನಗೆ ನಕ್ಕನು-ಚೀರುವುದಕ್ಕೂ ಉಸಿರೇರಲಿಲ್ಲ ಜಯಶ್ರೀಗೆ !.... ಕೈಕಾಲು ತಣ್ಣಗಾಗಿತ್ತು. ಉಸಿರು ಮಂಜಿನ ಆವಿಯಾಗಿತ್ತು. ಧ್ವನಿ ಮರಗಟ್ಟಿ ಹೋಗಿತ್ತು. ಅವಳೀಗ ಬದುಕಿದವರ ಬುಡದಲ್ಲಿರಲಿಲ್ಲ—ಎಂದೊ ಭಯಗೊಂಡು ಪ್ರೇತಲೋಕಕ್ಕೆ ಹೋಗಿದ್ದಳು. ಇಲ್ಲಿನ ಶರೀರ ಕೇವಲ ನೆಪ ಮಾತ್ರ ಉಸಿರಾಡುವ ಯಂತ್ರ !

ಇಹ—ಪರ ಎರಡರಲ್ಲೂ ವಂಚನೆ ಮಾಡಿದವಳುತಾಗಿದ್ದಳು. ಎರಡು ಕೊನೆಗಳಲ್ಲೂ ಕೈಗಳಿಂದ ಹಿಡಿದು ಹಿಂಡುವ ಒದ್ದೆ ಬಟ್ಟೆಯಂತಾದಳು... ತೊಟ್ಟುತೊಟ್ಟಾಗಿ ಹೊರಟುಹೊಗಿತ್ತು ಅವಳ ಎಲ್ಲ ಸತ್ವ.

ರಾತ್ರಿ ಯಾವಾಗಲೊ ರಘು ಕೋಣೆಗೆ ಬಂದ.

ಬಂದದ್ದೇನು ! ಪೂರ ಮತ್ತನಾಗಿದ್ದವನನ್ನು ಯಾರೋ ಹೊತ್ತು ತಂದುಬಿಟ್ಟಿದ್ದರು ಕೊರಡಾಗಿ ಹಾಸಿಗೆ ಮೇಲೆ ಉರುಳಿದ.

ಅವನೊಂದು ರೀತಿ ಮತ್ತಿನಲ್ಲಿ ಬಿದ್ದಿದ್ದರೆ, ಜಯಶ್ರೀ ಇನ್ನೊಂದು ರೀತಿ ಮಬ್ಬಿನಲ್ಲಿ ಮುಳುಗಿ ಹೋಗಿದ್ದಳು.

ಎಂದೂ ಇಷ್ಟು ಕುಡಿದವನೇ ಅಲ್ಲ. ಗೆಳೆಯರ ಗುಂಪಿನಲ್ಲಿ ಶಿಷ್ಟಾಚಾರಕ್ಕಾಗಿ ಕೇವಲ ಸ್ವಲ್ಪವನ್ನು ನಿಧಾನವಾಗಿ ತೆಗೆದುಕೊಳ್ಳುವುದು ಅವನ

ಪದ್ಧತಿ. ಈ ಬಾರಿ ಅವನ ಹೊಟ್ಟೆ ಪಪಾಯಿಯಾಗಿತ್ತು. ತಲೆಸುಟ್ಟು ಹೋಗಿತ್ತು.

ಬೆಳಿಗ್ಗೆ ಎಂದಿನಂತೆ ಬೇರರ್ ಅವನನ್ನು ಎಬ್ಬಿಸಲು ಬಾಗಿಲು ತಟ್ಟಿದ. ತೂರಾಡಿಕೊಂಡು ನಿದ್ರೆಯಲ್ಲಿ ರಘು ಬಾಗಿಲು ತೆಗೆದ. ಅವನು ಕಾಫಿ ಇಟ್ಟು 'ಗುಡ್‌ಮಾರ್ನಿಂಗ್' ಹೇಳಿ ಹೊರಟು ಹೋದ. ಅಷ್ಟರಲ್ಲಿ ಜಯಶ್ರೀಗೂ ಎಚ್ಚರವಾಗಿ ಹೋಯಿತು. ಅವಳೆದ್ದು ಬರುವಷ್ಟರಲ್ಲಿ ರಘುವೇ ಕಾಫಿಯನ್ನು ಸರಸರನೆ ಕಪ್ಪಿಗೆ ಸುರಿವಿ, ಅವಳದ್ದನ್ನು ದೂರ ಸರಿಸಿಟ್ಟ....

ಬಾತ್ ರೂಮಿನಲ್ಲಿ ಅವನು ಕಂಡಿದ್ದ ಇಲಿ ಪಾಷಾಣ ಅವಳ ಬಟ್ಟಲಲ್ಲಿ ಬಿದ್ದಿತ್ತು! ಲೇಡಿ ಮ್ಯಾಕ್ ಬತ್‌ಳ ಕೈಯಂತೆ ಅವನ ಕೈ ಕಣ್ಮುಂದೆ ಬಂದಿತ್ತು ಆದರೆ ಕೆಂಪಾಗಿ ಅಲ್ಲ....ಕಪ್ಪಾಗಿ !

ಹಿಂದಿನ ಸಂಜೆ ಅವಳು ಮತ್ತೆ ಮತ್ತೆ ರಾಮ್‌ದಿನ್ ವಿಚಾರ ಬೇರರ್‌ರನ್ನು ಕೇಳಿ ತಿಳಿದುಕೊಳ್ಳಬೇಕಿದ್ದರೆ ಅವಳು ತಾನೆಣಿಸಿದಷ್ಟು ಮುಗ್ಧೆಯಲ್ಲ. ತನ್ನನ್ನು ಮೋಸಪಡಿಸುವ ಪಾತಕಿ...ಇಲ್ಲಿ ರಾಮ್‌ದಿನ್‌ನನ್ನು ಭೇಟಿಯಾಗಲೆಂದೇ ಅವನ ವಿಚಾರ ಕೇಳುತ್ತಿರಬೇಕು !...ಗಂಡನಾಗಿ ತಾನು ಅವಳಿಗೆ ಅವಕಾಶ ಕೊಡಲೆ !....

...ಸರಸರನೆ ಚಮಚೆಯಲ್ಲಿ ಅವಳ ಕಾಫಿಯನ್ನು ಕದಲಿಸಿಟ್ಟು ಮತ್ತೆ ಹಾಸಿಗೆ ಮೇಲೆ ಸೋತಂತೆ ಉರುಳಿದ.

ಜಯಶ್ರೀ ಎದ್ದು ಕಾಫಿ ಬಟ್ಟಲು ಕೈಗೆ ತೆಗೆದುಕೊಂಡದ್ದನ್ನು ನೋಡಿದ. ಮುಂದೆ ಎಲ್ಲಾ ಮಂಪರು ಮಂಪರು...ತಲೆ ಹುಳಿಕೊಡವಾಗಿತ್ತು !...ಮತ್ತೆ ತಡೆಯಲಾರದ ಮಬ್ಬು ಕವಿಯಿತು.

ನಿದ್ದೆಯೋ ಮತ್ತೆ ಯಾವುದೋ ಅವನನ್ನು ಅಪ್ಪಿ ಹಾಕಿತು.

ಪುನಃ ಅವನಿಗೆ ಎಚ್ಚರವಾದಾಗ ಸೂರ್ಯ ಚೆನ್ನಾಗಿ ಬಲಿತಿದ್ದ ಆಫೀಸಿಗೆ ತುಂಬಾ ಹೊತ್ತಾಗಿ ಹೋಗಿತ್ತು. ಅವನು ಅಧೈರ್ಯದಿಂದ ಪಕ್ಕಕ್ಕೆ ತಿರುಗಿ ನೋಡಿದ. ಅವಳು ಇನ್ನೂ ಮಲಗಿಯೇ ಇದ್ದಳು–ಕೊರಡಂತೆ !....

ನಿದ್ದೆಯೋ ?

ಸಾವೊ ? !

ಆಕೆ ಸತ್ತು ಹೋದಳೆಂದು ಭಯ !...

ಬೆಳಿಗ್ಗೆ ಕಾಫಿಯಲ್ಲಿ ಕಲಸಿಕೊಟ್ಟ ವಿಷ ಅವಳನ್ನು ಏನು ಮಾಡಿದೆಯೊ !...ಬಗ್ಗಿ ನೋಡಿದ. ಇನ್ನೂ ಉಸಿರಾಡುತ್ತಿದ್ದಾಳೆ !...ಅಬ್ಬ, ಸದ್ಯ ಕೊಲೆ ಮಾಡಲಿಲ್ಲ !

ರೋಷದ ವೇಳೆಯಲ್ಲಿ ವಿಷ ಕೊಟ್ಟು ಯತ್ನಿಸಿದರೂ ಅವಳು ಸಾಯಲಿಲ್ಲ,

ಒಂದು ಪ್ರಾಣವನ್ನು ಹೊಸಕಿ ಹಾಕುವುದು ತನಗೆ ಬೇಕೇ ಇರಲ್ಲಿಲ್ಲ–ಆದರೂ ತನ್ನ ಕೈ ಆ ಕೆಲಸ ಮಾಡಿತ್ತು!

ಸಧ್ಯ, ದೈವವೇ ತನ್ನನ್ನು ಪಾರು ಮಾಡಿತ್ತು.

ಇನ್ನು ಮುಂದೆ ಇವಳು ಇದ್ದರೂ ಸತ್ತಳೆಂದೇ ತಿಳಿದುಕೊಳ್ಳುತ್ತೇನೆ........ಅಷ್ಟಕ್ಕೆ ಕೊಲೆ ಏಕೆ ?–ಈ ಬುದ್ದಿ ಆಗ ಏಕಿರಲಿಲ್ಲ ?

—ದೊಡ್ಡ ತಲೆಭಾರವನ್ನು ಅದೇ ತಾನೇ ಇಳಿಸಿಕೊಂಡವನಂತೆ ರಘು ಆಫೀಸಿಗೆ ಹೊರಟು ಹೋದ.

ಜಯಶ್ರೀಗೆ ಎಚ್ಚರವಾಯಿತು. ಎಚ್ಚರವೆಂದರೇನು ? ಕಣ್ಬಟ್ಟಿದ್ದಳು ಅಷ್ಟೆ. ಬುದ್ಧಿ ಎಲ್ಲಾ ಆ ಬಿಳಿ ಕುಂಬವೊಂದಕ್ಕಾಗಿ ಎಚ್ಚರವಾಗಿತ್ತೆ ವಿನಾ ಇನ್ನೇನೂ ಅವಳ ನೆನಪಿನಲ್ಲಿರಲಿಲ್ಲ. ಎಚ್ಚರವಾಗಿ ಕಣ್ಬಿಟ್ಟೊಡನೆಯೇ ಬಾಗಿಲಾಚೆ ಕಣ್ಣೆದುರಿಗೇ ಕಾಣುತ್ತಿತ್ತು, ಆ ಕಂಬ, ಆ ಸ್ಥಳ ...ರಾಮ್‌ದಿನ್ ಸತ್ತ ಸ್ಥಳ—

—ಅವಳ ಮನಸ್ಸಿನಲ್ಲಿ ಏನೋ ತೊಳಲಾಟ. ಹೊಟ್ಟೆಯಲ್ಲಿ ಸಂಕಟ ....ಹಾಗೇ ಬಿದ್ದುಕೊಂಡೇ ಇದ್ದಳು ಎಷ್ಟೋ ಹೊತ್ತು.

ಸ್ವಲ್ಪ ಹೊತ್ತಿನ ಮೇಲೆ ಕ್ಲೋರೋಫಾರಂನಿಂದ ಎಚ್ಚೆತ್ತ ರೋಗಿಯಂತೆ ಮಂಪರು 'ಕರಗುತ್ತಾ ಬಂದಿತು.

ಗಂಡ ಹೊರಟುಹೋಗಿರುವುದು ಆಗ ತಿಳಿಯಿತವಳಿಗೆ—ಅಬ್ಬ! ಎಂಥ ನಿದ್ರೆ ಆವರಿಸಿಬಿಟ್ಟಿತ್ತು. ಬೆಳಗಿನ ಜಾವದ ಮೇಲೆ! ಎದ್ದುಹೋಗಿ ಮುಖ ತೊಳೆದು ವರಾಂಡದ ಕುರ್ಚಿ ಮೇಲೆ ಬಂದು ಕುಳಿತಳು.

ಕುರ್ಚಿ, ದುಂಡು ಮೇಜು... ಅದರ ಪಕ್ಕಕ್ಕೇ ಆ ಕಂಬ... ಆ ಕರೀ ಸ್ಥಳ! ಆದರೂ ಅವಳ ಮುಖದಲ್ಲಿ ಯಾವ ಉದ್ವೇಗವೂ ಕಾಣಲಿಲ್ಲ, ಅವಳು ಕುರ್ಚಿಯನ್ನು ಬೇರೆ ಕಡೆ ಸರಿಸಲೂ ಇಲ್ಲ..

ಬೆಲ್ ಮಾಡಿ, ಬೇರರನ್ನು ಕಾಫಿ ತಾರೆಂದು ಹೇಳಿದಳು. ಅವನು ಕಾಫಿ ತರುವುದರಲ್ಲಿ ಅಲ್ಲೇ ಇದ್ದ ಆಫೀಸ್ ನೋಟ್ ಬುಕ್, ಪೆನ್ಸಿಲನ್ನು ತೆಗೆದುಕೊಂಡು ಯಾವುದೋ ಕಗ್ಗ ಗೀಚತೊಡಗಿದಳು—ತನ್ನ ಭಾವಗಳ ನ್ನೆಲ್ಲಾ ಬಿಳಿ ಕಾಗದದ ಮೇಲೆ ಇಳಿಸಿ ಹಗುರ ಮಾಡಿಕೊಳ್ಳಲೊ ಏನೋ?

ಬೇರರ್ ಕಾಫಿ ತಂದಿಟ್ಟು ಹೋದ.

ಅವಳು ಅತ್ಯಂತ ಶಾಂತ ಭಾವದಿಂದ ಕಪ್ಪಿಗೆ ಡಿಕಾಕ್ಷನ್, ಸಕ್ಕರೆ, ಹಾಲು ಎಲ್ಲವನ್ನೂ ಸುರಿದು ಚಮಚೆಯಿಂದ ಸುತ್ತಿದಳು, ಪುನಃ ಬೇರರ್ ಏತಕ್ಕೊ ಅತ್ತಕಡೆ ಬಂದಾಗ ಕೇಳಿದಳು.

"ಸಾಹೇಬರು ಹೊರಟು ಹೋಗಿ ತುಂಬ ಹೊತ್ತಾಯಿತೆ?..."

"ಈಗತಾನೇ ಹೋದರು, ಮಾ ಸಾಬ್...ರಾತ್ರಿ ಮ್ಯಾನೇಜರ್ ಮೋಟರಿನಲ್ಲೇ ಬಂದರು ನೀವೇಕೆ ಒಂದೇ ದಿನದಲ್ಲಿ ಹೀಗಾಗಿ ಹೋಗಿದ್ದೀರಿ?....ನಿನ್ನೆ ನೀವಿದ್ದ ರೀತಿಯಂತೂ ನನಗೆ ತುಂಬಾ ಗಾಬರಿ ತಂದಿತು. ರಾತ್ರಿ ಸಾಹೇಬರು ಬರೋ ತನಕ ನಾನೂ ನಿಮ್ಮ ಬಳಿಯೆ ಕುಳಿತಿದ್ದೆ.... ನಿಮಗದು ತಿಳಿದಿರಲಾರದು....ನೀವು ಕುರ್ಚಿ ಮೇಲೆ ಕುಳಿತಿದ್ದ ಹಾಗೆಯೇ ಕಣ್ಣು ಮುಚ್ಚಿದಿರಿ ನಾನೂ, ನನ್ನ ಮಗಳೂ ಸೇರಿ ನಿಮ್ಮನ್ನು ಮೆಲ್ಲಗೆ ಹಾಸಿಗೆಯಲ್ಲಿ ಬೆಟ್ಟೆವು ರಾತ್ರಿ ನೀವೇನಾದರೂ 'ಕಂಡಿರೆ'?...ರಾಮ್‌ಧಿನ್ ಕೊಲೆಯಾದಂದಿನಿಂದ ಈ ರೀತಿ ಆದ್ದದ್ದು ಇದೇ ಮೊದಲ ಬಾರಿ...."

"....................."

"ಈ ದಿನ ಕೆಳಗಿನ ರೂಮು ಖಾಲಿಯಾಗಬಹುದು...ಆದೊಡನೆ ನೀವು ಆ ಕೋಣೆಗೆ ಬದಲಾಯಿಸಿಕೊಂಡುಬಿಡಿ...."

ಜಯಶ್ರೀ ಅವನ ಹೆದರಿಕೆಗೆ ನಕ್ಕು, ಕಾಫಿಯನ್ನು ಕೈಗೆ ತೆಗೆದು ಕೊಂಡಳು.

ಪುನಃ ಏನೋ ಸಂಕಟ....ಆಹಿತ....

ಕಾಫಿಯೂ ಬೇಕಿರಲಿಲ್ಲ....ಆದರೆ ಬೆಳಗೆದ್ದು ಆ ಪಾನೀಯ ಕರುಳನ್ನು ಪ್ರವೇಶಿಸದಿದ್ದರೆ ಹೇಗೆ;...ದಿನ ಚಲಿಸುವುದು ಆ ಪಾನೀಯದಿಂದ ತಾನೆ;

—ಹನ್ನೊಂದು ಗಂಟೆ ವೇಳೆಗೆ ಗೆಸ್ಟ್‌ಹೌಸಿನಿಂದ ರಘು ಆಫೀಸಿಗೆ ಟೆಲಿಫೋನ್ ಕರೆ ಬಂದ್ದಿತು, ಬೇರರ್ ಕರೆ ಮಾಡಿದ್ದ. ರಿಸೀವರ್ ಕೈಗೆ ಎತ್ತಿದೊಡನೆ ರಘುವನ ಜಂಘಾಬಲವೇ ಉಡುಗಿಹೋಯಿತು...ಕೊನೆಗೂ ಜಯಶ್ರೀ ನನ್ನ ಕೈಯಿಂದ ಕೊಲೆಯಾದಳೆ?;

ಮತ್ತೇಕೆ ಎಂದೂ ಇಲ್ಲದ ಕರೆ ಇಂದು ತನಗೆ ಬಂದಿವೆ:...

ರಿಸೀವರನ್ನು ಕಿವಿ ಬಳಿ ಹಿಡಿದು. "ಹಲೋ..." ಎನ್ನುವಷ್ಟರಲ್ಲಿ ಬೇರರ್ ದನಿ ಅತ್ತಕಡೆಯಿಂದ ಗಾಬರಿಯುಲ್ಲಿ ಒದರಿಕೊಂಡಿತು,

"ಮಾ-ಸಾಬ್‌ಗೆ ಏನೋ ಆಗಿಯೋಗಿದೆ!...ಕುರ್ಚಿ ಮೇಲೆ ಸುಸಿದು ಬಿದ್ದುಬಿಟ್ಟಿದ್ದಾರೆ...ಕೈಕಾಲು ತಣ್ಣಗಾಗುತ್ತಿದೆ..ಬೇಗ ಬನ್ನಿ..ಡಾಕ್ಟರಿಗೂ ಫೋನ್ ಮಾಡಿದ್ದೇನೆ–"

—ರಿಸೀವರನ್ನು ಕುಕ್ಕಿ' ಗದಗುಟ್ಟಿದ ರಘು,

ಅವನು ಹೋಗುವಷ್ಟರಲ್ಲಿ ಎಲ್ಲ ಮುಗಿದುಹೋಗಿತ್ತು. ವರ್ಸಾಂಡದ ಬಳಿ ಕಂಬದ ಬುಡದಲ್ಲಿ ಕುರ್ಚಿಮೇಲೆ ಹಾಗೇ ಮಲಗಿಬಿಟ್ಟಿದ್ದಾಳೆಜಯಶ್ರೀ! ಚಿರಂತರ ನಿದ್ರೆ–ಎಲ್ಲ ಕಪ್ಪು ಭಾವನೆಗಳಿಂದ ಮುಕ್ತಳಾಗಿ!...

ಡಾಕ್ಟರು ತಲೆಯಾಡಿಸಿ ಒಂದು ವಿಧವಾಗಿ ನಡೆದು ಹೋದರು–

ಹೊರಡುವ ಮುಂದೆ ರಘುವಿನ ಕಿವಿಯಲ್ಲಿ ಮೆಲ್ಲನೆ ಉಸಿರಿದರು"ವಿಷ ಪ್ರಾಶನವಾದಂತಿದೆ!–"

ರಘುವಿನ ಎದೆಯ ಪಕ್ಷಿ ಪಟಪಟನೆ ರೆಕ್ಕೆಬಡಿದು ಚೀರಿತು!–ತಾನು ಏನು ಮಾಡಿಬಿಟ್ಟೆ!!

ಭ್ರಮಿಸಿ ಹೋದ ಬುದ್ಧಿ ಎಲ್ಲಾದರೂ ಕಣ್ಮರೆಯಾಗಿ ಓಡಿಹೋಗಿ ಬಿಡಬೇಕೆಂದಿತು...

ಈಗ ಎಲ್ಲರಿಗೂ ತನ್ನ ಅಪರಾಧ ತಿಳಿದುಹೋಗುತ್ತದೆ.

ಮರಣ ದಂಡನೆ...

ತಪ್ಪಿದರೆ ಜೀವಾವಧಿ ಶಿಕ್ಷೆ! ಈ ಅವಮಾನ ತಡೆದುಕೊಳ್ಳುವುದು ಹೇಗೆ? ಆ ಕುರ್ಚಿ ಕಡೆ ತಿರುಗಿ ನೋಡಲೂ ಕಷ್ಟವಾಯಿತವನಿಗೆ. ಯೋಚನಾ, ವಿವೇಚನಾಶಕ್ತಿ ಕಳೆದುಕೊಂಡ ಬುದ್ಧಿವಿಹೀನ ಪ್ರಾಣಿಯಾಗಿ ಹೋದ.

ನಿನ್ನೆ ಅವಳು ಮತ್ತೆ ರಾಮ್‌ಥಿನ್ ವಿಚಾರ ಎತ್ತದೇ ಇದ್ದಿದ್ದರೆ ಹೀಗಾಗುತ್ತಿರಲಿಲ್ಲ, ಕ್ಷಮೆ ತೋರಿದ್ದ ಹೃದಯ ಮತ್ತೆ ಅವಳ ಕುತೂಹಲ ಕಂಡು ಹಲಾಹಲಾವಾಗಿ ಹೋಗಿತ್ತು. ನಾನಿನ್ನು ತಡೆಯಲಾರೆನೆಂದು ಹೃದಯದ ಯಾವುದೋ ಕಪ್ಪು ಮೂಲೆ ಕೂಗಿಕೊಂಡಿತು.

—ನಾಯಿ ಬಾಲ ದಬ್ಬೆ ಕಟ್ಟಿದರೂ ಸೆಟ್ಟಗಾಗದಿದ್ದರೆ ಕತ್ತರಿಸಿಯೇ ಹಾಕಬೇಕು...

ನಾನೇನು ಋಷಿಯೆ?...ಕ್ಷಮೆಗೆ ಪಾತ್ರಳಲ್ಲ ಆ ಮಧ ಭರಿತಹೆಣ್ಣು!...

ಅಬ್ಬ, ಜಯಶ್ರೀ!....ಹೇಗೆ ಕಪ್ಪಾಗಿ ಬಿದ್ದಿದ್ದಾಳೆ!...ತನ್ನನ್ನೇ ಇರಿಯುವಂತೆ ಗಾಜಾದ ಕಣ್ಣಿನಿಂದ ನೋಡುತ್ತಿದ್ದಾಳೆ!! ...

—ಆ ಕ್ಷಣ ಚೀರಿ, ಓಡಿಹೋಗುವುದನ್ನು ಅವನು ಹೇಗೆ ತಡೆದು ಕೊಂಡನೋ? ಆವನಿಗೆ ಧೈರ್ಯದ ಮುಖವಾಡ ಹಾಕಿಕೊಂಡೇ ಇರಬೇಕಾಗಿತ್ತು!...

ಡಾಕ್ಟರು ತಲೆ ಬಗ್ಗಿಸಿಕೊಂಡು ಹೊರಟುಹೋಗಿ, ಮನೆ ಜನ ಬರುವ ಮೊದಲೇ ಬಾತ್‌ರೂಂಗೆ ನುಗ್ಗಿ ಬಾಗಿಲು ಹಾಕಿಕೊಂಡ ರಘು.

ಅದೇ ಸ್ಥಳದಲ್ಲಿ ಇಲಿ ಪಾಷಾಣದ ಶೀಸೆ ಇತ್ತು-ಈಗ ಖಾಲಿಯಾಗಿ! ಅದನ್ನು ಕಂಡೊಡನೆ ಮೈ ಬೆವತಿತು.

ಅದನ್ನು ಜಜ್ಜಿ ಪುಡಿ ಮಾಡಿ ತಾನೇ ತಿಂದುಬಿಡಬೇಕೆಂದು ಕುಟ್ಟಿದನು. ಆದರೂ ಏನು ಅಧೈರ್ಯವಾಯಿತೊ, ಅಷ್ಟನ್ನೂ ತೆಗೆದು 'ಫ್ಲಾಷ್' ಒಳಗೆ ಹಾಕಿ ಸರಪಳಿ ಎಳೆದುಬಿಟ್ಟ. ನೀರು ಅದನ್ನು ಕಚ್ಚಿಕೊಂಡು ಪಾತಾಳಕ್ಕೆ ಎಳೆದುಕೊಂಡು ಹೊರಟುಹೋಯಿತು. ಅದನ್ನೇ ನೋಡುತ್ತ ನಿಂತ ರಘುವಿನ ತಲೆ 'ಧಿಂ' ಎಂದಿತು.

ಮಧ್ಯಾಹ್ನದ ವೇಳೆಗೆ ನಾಲ್ಕಾರ ಪೋಲಿಸರು ಉಮೇರಿಯಾದಿಂದ ಬಂದು, ಹೆಣವನ್ನು ಪೋಸ್ಟ್ ಮಾರ್ಟಂ ಮಾಡಲು ತೆಗೆದುಕೊಂಡು ಹೋದರು. ರಘುವೂ ಅವರ ಜೊತೆಯಲ್ಲಿರಬೇಕಾಯಿತು.

ಪೋಸ್ಟ್ ಮಾರ್ಟಂ ಮುಗಿದು ಡಾಕ್ಟರುಗಳು, ಪೋಲಿಸರು ಕೋಣೆಯಿಂದ ಈಚೆಗೆ ಬಂದಾಗ,

"ವೆರಿಸಾರಿ..."ಎಂದು ಅವನ ಹೆಗಲ ಮೇಲೆ ಕೈಯಿಟ್ಟು ಯಾರೋ ಅವನ ಕೈಗೆ ಒಂದು ಪತ್ರ ತೋರಿದರು.

—ಯಾರು ಏನು ಹೇಳಿದರೂ, ಏನು ತೋರುತ್ತಿದ್ದಾರೆ ಒಂದೂ ಅವನ ಪರಿವೆಯಲ್ಲಿರಲಿಲ್ಲ—ಆಲುಗಿನ ತಿರುಗುಣಿಯಲ್ಲಿ ಸಿಕ್ಕಿಹೋಗಿದ್ದ.

"ಅದನ್ನು ಬಿಡಿಸಿ ಓದಿ..." ಯಾರದೋ ಒತ್ತಾಯ,

ಅದನ್ನು ಬಿಡಿಸುವುದರಲ್ಲಿ ಅವನ ಮೈ ಬೆವರಿನ ಒದ್ದೆಗೊಂಬೆಯಾಗಿ, ಆ ಕಾಗದವೇ ಥರಥರನೆ ಕೈಯಲ್ಲಿ ಕಂಪಿಸುತ್ತಿತ್ತು.

ಇಂಗ್ಲೀಷ್‌ನಲ್ಲಿ ಆ ಪತ್ರ ಬರೆದಿತ್ತು.

ಅದು ಜಯಶ್ರೀ ಬರೆದ ಪತ್ರ—"...ಎಷ್ಟೇ ಕ್ಷಮಿಸಿದರೂ, ಒರೆಸಿದರೂ ವಯಸ್ಸಿನ ಕಳಂಕ ಹೋಗಲಾರದು.....ಗಂಡನಿಗೆ ಮಾಡುವ ಅನ್ಯಾಯ ಒಂದು ಅನ್ಯಾಯ ಒಂದು ಕಡೆ ಹಿಂಡಿದರೆ ಇನ್ನೊಂದು ಕಡೆಯಿಂದ ಸತ್ತ ರಾಮ್‌ಧಿನ್ ಆತ್ಮ ನಕ್ಕು ಹಿಂಡುತ್ತಿದೆ ..ಈ ಎರಡೂ ಕಡೆಯಿಂದಾದ ಮಾನಸಿಕ ಒದ್ದಾಟದಲ್ಲಿ ಸಿಕ್ಕಿ ನಾನು ಚಚ್ಚೆಯಾಗಿ ಹೋಗಿದ್ದೇನೆ. ನಾನಿನ್ನು ತಡೆಯಲಾರೆ...ಈ ಬೆಳಿಗ್ಗೆ ನಾನೇಳುವ ಮುಂಚೆ ಅವರು ದೇವರ

ದಯದಿಂದ ಆಫೀಸಿಗೆ ಹೊರಟು ಹೋಗಿದ್ದರು. ಈಗ ಕಾಫಿಯೊಳಗೆ ಇಲಿ ಪಾಷಾಣದ ದ್ರಾವಕವನ್ನೆಲ್ಲಾ ಸುರಿದುಕೊಂಡು ಕುಡಿಯುತ್ತೇನೆ. ಖಂಡಿತ ಇದರಿಂದ ಸತ್ತೇ ಸಾಯುತ್ತೇನೆ!....ಈ ಕೃತ್ಯಕ್ಕೆ ಯಾರೂ ಕಾರಣ ರಲ್ಲ. ಕಾಗದವನ್ನು ಈಗ ತನ್ನ ಬಳಿ ಇಟ್ಟು ಕೊಂಡು ಇರುವ ಈ ಎದೆ ಬಡಿತ ನಿಲ್ಲುವುದೇನೆ, ಎದುರು ನೋಡುತ್ತಿದ್ದೇನೆ. ಕಾದು ಕುಳಿತಿದ್ದೇನೆ, ಈ ಕಪ್ಪು ಸ್ಥಳದಲ್ಲಿ...ರಾಮ್‌ದಿನ್ ಕೊಲೆಯಾದ ಸ್ಥಳದಲ್ಲಿ!...ಅಗೋ, ಮೊಪ್ಪಾ ಹಣ್ಣಿನ ಮಾದಕ ಸುವಾಸನೆ ಗಾಳಿಯೊಂದಿಗೆ ನನ್ನೊಡನೆ ಬರುತ್ತಿದೆ.... ಇದೊ. ಹೊರಟೆ!!....ಎಂದು ದಡ ಸೇರಲು—ಅದರೆ ನನಗೆ ಒಂದೇ ನೋವು, ಏಂದರೆ ಮೊಪ್ಪಾದ ಮಾದಕತೆ ರಾಮ್‌ದಿನ್ ಗಾಯಿತು, ಆದರ ಹುಳಿ ಸಿಕ್ಕಿದು ನನಗೆ ಕೊನೆಯಲ್ಲಿ ಏನೂ ಅರಿಯದ ನಿಷ್ಕಲ್ಮಷರೂಪಿ ನನ್ನ ರಘುವಿಗೆ ಸಿಕ್ಕಿರುವುದು ಅದರಬಗಜು!— ಎಲ್ಲಕ್ಕೂ ಮೂಲ ನಾನೆ! ಆದಕ್ಕೇ ಇಂದೇ ಅಂತ್ಯ! —ಜಯಶ್ರೀ,"

"ಜಯಶ್ರೀ—" ಎಂದು ಕೂಗಿ ಬೀಳುವಂತಾಗಿದ್ದ ರಘುವನ್ನು ಹಿಡಿದುಕೊಳ್ಳಲು ಸಹಾನುಭೂತಿ ಹಸ್ತಗಳು ಕಾದಿದ್ದವು.

—ಆದರೂ ರಘು ಕೊಲೆ ನನ್ನಿಂದಾಯಿತು ಎಂದು ಕೊಂಡದ್ದು ಒಂದು ಕನಸೇ?....ಕುಡಿದ ಅಮಲಿನ ಭ್ರಮೆಯಷ್ಟೆಯೇ?

—ಇಲ್ಲ, ಈಗ ಆತ್ಮಹತ್ಯೆ ಆವಳೇ ಮಾಡಿಕೊಂಡಳು ಎಂನುಕೊಳ್ಳು ವುದೂ ಅಂಥದ್ದೇ ಊಹೆಯೇ!?...

ಅವನ ಬುದ್ದಿಗೆ ಕಾರ್ಮೋಡ ಕವಿಯುತ್ತಿತ್ತು, ಮೊಪ್ಪಾ ಹಣ್ಣು ಮಣ್ಣಾಗುವ ಕಾಲದಂತೆ!!....

[ಕ್ಷಮಿಸಿ, ನನ್ನ ದೊಂದು ಕೊನೇ ಅನಿಸಿಕೆ! ಇಂದಿನ ಲೌಕಿಕ ಪ್ರಜ್ಞೆ ಅಧಿಕವಾಗಿರುವ ಯುವ ಪೀಳಿಗೆ ಬುದ್ದಿಗೆ ಕಥೆ ಅಸಂಗತ ಎನ್ನಿಸಲೆ ಕ್ಕಿಲ್ಲವಷ್ಟೆ!!!]

OOOOOOO

"ಕೊರಮ, ನಿನ್ನ ಮನೆಗೆ" ಹಣ ಸ್ಯಾಂಕ್ಷನ್ ಆಗಿದೆ. ನಾಳೆ ಬೆಳಿಗ್ಗೆ ಬಂದು ಕಾಣು" ಮತ್ತೇನೊ ನೆನಪಾಗಿ ಕೇಳಿದರು "ಚೆನ್ನಿ ಬಂದಳೇನೊ?

"ಹಾಂ" ಎಂದಿಷ್ಟೇ ನುಡಿದ ಕೊರಮ. ತನ್ನ ಮನೆಗೆ ಹಣ ಸಿಗುತ್ತದೆ! ಅವನಿಗೆ ನಂಬಿಕೆ ಬರಲಿಲ್ಲ. ಮುರುಕು ಗುಡಿಸಲಿನ ಬದಲು ಇನ್ನು ಮೇಲೆ ಸರಕಾರದ ದಯೆಯಿಂದ ತನಗೂ ಒಂದು ಹಂಚಿನ ಮನೆ! ಚೆನ್ನಿಗೆ ಈಗಲೇ ಹೋಗಿ ವಿಷಯ ತಿಳಿಸಬೇಕು. ತುಕ್ರನನ್ನು ಎತ್ತಿಕೊಂಡು ಬೊಚಲೊಚನೆ ಮುದ್ದಿಡಬೇಕು. ಅವನು ಅವಸರದಿಂದ ಹೊರಟು ಬಿಟ್ಟ.

ಅರೆ, ಪಟೇಲರಿಗೆ ಯಾಕೆ ಚೆನ್ನಿಯ ಮೇಲೆ ಇಷ್ಟು ಆಸಕ್ತಿ....? ತನಗಿಂತ ಅವರಿಗೇ ಆತಂಕ ಹೆಚ್ಚಿರಬೇಕು. ದಯಾರ್ದ್ರ ಮನುಷ್ಯ. ಯಾರ ನೋವನ್ನು ಅವರು ನೋಡಲಾರರು. ಕೊರಮನ ಮೈ ಮೇಲೆ ಕೋಮಲವಾದ ಹೂವು ಹರಿದಾಡಿದಂತಾಯಿತು. ಚೆನ್ನಿಯೊಡನೆ ಕಳೆದ ಆ ದಿನಗಳು ...ಅವಳಂತೂ ಗುಡಿಸಲಿನಲ್ಲಿ ಆನಂದ, ಸಂತೋಷದ ಕೋಲಾಹಲವನ್ನು ಬೆಸೆದು ಮಗುವಿನ ತಾಯಿಯಾಗಲಿದ್ದಳು. ಪ್ರಕೃತಿ ಹೊಸ ಜೀವದಸೃಷ್ಟಿಗೆ ಕಾತರಗೊಂಡಿತ್ತು. ಅವನ ಮನಸ್ಸಿನ ತುಂಬಾ ಧನ್ಯಭಾವ, ತೃಪ್ತಭಾವ. ಇಷ್ಟು ವರ್ಷಗಳೂ ಅವನು ಬೇರೆ ಬೇರೆ ಹೆಂಗಸರೊಡನೆ ಸಂಪರ್ಕ ಬೆಳೆಸಿದ್ದರೂ ಅವನದೇ ಒಂದು ಮಗು ಆಗಿರಲಿಲ್ಲ. ಆಗಿದೆಯೋ ಇಲ್ಲವೋ ಎಂದೂ ತಿಳಿದಿರಲಿಲ್ಲ. ತುಕ್ರ ಹುಟ್ಟಿದ ದಿನ ಗಾಳಿ ತುಂಬಿದ ಬುಗ್ಗೆಯಾದ. ಹಠಾತ್ತನೆ ಇನ್ನೂ ಒಂದು ಹೊಸ ಪ್ರಪಂಚವ ಬಾಗಿಲು ತೆರೆದಿದೆ ಅವನಿಗಾಗಿ ಅವನು ತಂದೆಯ ಸ್ಥಾನಕ್ಕೇರಿ ಆ ಹೊಣೆಯನ್ನು ಹೆಮ್ಮೆಯಿಂದ ಹೊರಬೇಕಾಗಿದೆ. ಎಳ ಜೀವ ಅವನನ್ನೇ ಪಿಳಿ ಪಿಳಿ ಕಣ್ಣುಬಿಟ್ಟು ನೋಡಿತು. ಅವನು ಆ ಕೂಡಲೆ ತೆಂಗಿನಕಾಯಿ,ಸಿಂಗಾರ ಬಾಳೆಹಣ್ಣು ಎಲೆ ಅಡಿಕೆ ತೆಗೆದುಕೊಂಡು ಪಟೇಲರ ಮನೆಗೆ ಓಡಿ ಸುದ್ದಿತಿಳಿಸಿ "ಅಡ್ಡ ಬಿದ್ದೆ ಅಯ್ಯ" ಎಂದ,

"ಸಂತೋಷವಪ್ಪ!" ಅವರೆಂದರು "ಒಂದು ಕೆಲ್ಸ ಮಾಡು. ಹೇಗೂ ಇಳಿಪ್ರಾಯದಲ್ಲಿ ನಿನ್ನದೊಂದು ಸಂಸಾ ರಕುದುರಿದೆ. ಮಗುವೂ ಆಗಿದೆ, ನಿನ್ನ ಗುಡಿಸಲು ಸರಕಾರೀ ಜಾಗದಲ್ಲಿರುವುದರಿಂದ ಅದಕ್ಕೆ ಡಿಕ್ಲನೆರೆಷನ್ ಸಲ್ಲಿಸಿ ನಿನ್ನದಾಗಿ ಮಾಡ್ಕೊ. ಆಮೇಲೆ ಹಂಚಿನ ಮನೆ ಕಟ್ಟಿಸಲು ಸರಕಾರ ದಿಂದ ಹಣ ಸಿಗುವಂತೆ ನಾನೇ ಪ ಯತ್ನ ಮಾಡ್ತೇನೆ."

"ಬಾ ಕೊರಮ" ಹೆಂಡದಂಗಡಿ ದತ್ತು ಪೂಜಾರಿ ಕೊರಮನನ್ನು ನೋಡಿದಾಕ್ಷಣ ಮೊದಲು ಹೆಂಡ ಬಗ್ಗಿಸಿದ. "ನಿನ್ನ ಮನೆಗೆ ಹಣ ಸಿಕ್ಕು ತ್ತದೆಯೆಂತೆ, ಹರಿಜನರಿಗೇನಪ್ಪ ಒಂದು ಗೆರೆ ಅರ್ಜಿ ಬರೆದರೂ ಧಿಡೀರ್ ಅಂತ ಅವರು ಕೇಳಿದ್ದನ್ನು ಸರಕಾರ ಕೊಟ್ತದ" ಅವನು ಮೀಸೆ ತಿರುವಿ ನಕ್ಕ. "ಏನಾಯ್ತು ಚೆನ್ನಿ ವಿಷಯ ನೀನು ಇಲ್ಲಿ ಮನೆ ಕಟ್ಟಿಸಲು ಒದ್ದಾ ಡಿದರೆ ಅವಳು ಮುರಿದು..."

"ಅವಳ ದಾರಿ ಅವಳಿಗೆ" ಕೊರಮ ಒಂದು ಗುಟುಕಿಗೆ ಎರಡು ಗ್ಲಾಸ್ ಹೆಂಡ ಹೀರಿ ಢರ್‌ನೆ ತೇಗಿದ. ಬುಟ್ಟಿ ಹೆಣೆಯಲು ಎಷ್ಟೋ ಬಾಕಿ ಇದೆ. ಪಟೇಲರ ಹೆಂಡತಿ ಗೊಬ್ಬರ ಹೊರಲು ಬಾ ಎಂದಿದ್ದಾರೆ ಆದರೆ ನಾನು ಯಾರಿಗಾಗಿ ದುಡಿಯಬೇಕು-?

ಗುಡಿಸಲಿಗೆ ಬಂದಾಗ ಈಗಲೂ ಒಳಗೆ ಹಣಕಿ ನೋಡುವ ಧೈರ್ಯ ಬರಲಿಲ್ಲ. ಅಭ್ಯಾಸಬಲದಿಂದ ನೆಲಕ್ಕೆ ಕುಳಿತು ಮಾಡಿದ ಬದಿಯಲ್ಲಿರುವ ಕೊಳಲನ್ನು ಎತ್ತಿಕೊಂಡ. ಆದರೆ ಊದಲು ಸಾಧ್ಯವಾಗದೆ ಅಪಸ್ವರ ಹೊರಟಿತು. ತುಕ್ರನ ಆಟ, ನಗೆ, ಅಳು ನೆನಪಿಗೆ ಬಂದು ಕಸಿವಿಸಿಗೊಂಡ ಎಳೆ ಮಗು ತುಕ್ರ ಅವನ ಹೃದಯದ ಮೇಲೆ ಹೊಸ ಭಾವನೆಗಳ ಒತ್ತಡ ಹೇರಿ ಕಿಲಕಿಲನೆ ನಗುತ್ತಿದ್ದ. ತನ್ನ ಪುಟ್ಟ ಕೈಗಳಿಂದ ಅವನ ಮುಖ, ತಲೆ ಗೂದಲನ್ನು ಕಿತ್ತು ನಗಿಸುತ್ತಿದ್ದ. ಜೋಗುಳ ಹಾಡುವಾಗ, ಇಂಪಾಗಿ ಕೊಳಲೂದುವಾಗ ತುಕ್ರ ಅರ್ಥವಾದವನಂತೆ ನಿಶ್ಚಿಂತೆಯಿಂದ ನಿದ್ರಿಸುವು ದನ್ನು ಕಂಡಾಗ, ಎಲ್ಲಿ ಅವನಿಗೆ ದೃಷ್ಟಿ ತಗಲಿಬಿಡುತ್ತದೋ ಯೆಂದು ಕೊರ

ಮನಿಗೆ ಹೆದರಿಕೆ. ಆಗಾಗ 'ಕೊರಮನ ಹಾಡು'ಗಳಿಂದ ಸುತ್ತಲಿನ ಜನರೂ ಮನೋರಂಜನೆ ಪಡೆಯುತ್ತಿದ್ದರು. ಮಗುವಿನ ವಿಷಯದಲ್ಲಿ ಅವನದು ನೂರು ಕನಸು.

"ಚೆನ್ನಿ, ನಮ್ಮ ಮಗುವಿನ ಭವಿಷ್ಯ ಸುಂದರವಾಗಿರಬೇಕು. ನಮ್ಮಂತೆ ಅವನು ಕಾಡು ಮನುಷ್ಯನಾಗಿ ಬೆಳೆಯಬಾರದು" ಎಂದಿದ್ದ ಒಂದು ದಿನ.

"ನಮ್ಮ ಮಕ್ಕಳು ನಮ್ಮ ಹಾಗೆ ಬೇಳಿತಾವೆ. ಏನ್ಮಹಾ ?"

"ಸರಕಾರ ನಮ್ಮಂತಹ ಬಡ ಮಕ್ಕಳಿಗೆ ಎಷ್ಟೋ ಉದಾರ ಕೊಡುಗೆ ಕೊಡುತ್ತಿದೆಯಂತೆ. ಮೊದಲು ಮನೆ ಕಟ್ಟಿಸುವಾ. ಆಮೇಲೆ ಇವನನ್ನು ಚೆನ್ನಾಗಿ ಓದಿಸುವಾ ?"

ಪಕಪಕನೆ ನಕ್ಕು ಬಿಟ್ಟಳು ಚೆನ್ನಿ. "ನಿಜ ಕೊರಮ. ಬೇವಿನ ಮರ ದಾಗೆ ಬೇವಿನ ಹಣ್ಣಲ್ಲದೆ ಮಾವು ಸಿಗ್ತದಾ ? ನಮ್ಮ ತುಕ್ರ ನಮ್ಹಂಗೆ ಬೆಳೆ ದರೆ ಚೆನ್ನ ನಾಲ್ಕು ಗೋಡೆಗಳ ಬಂಧನ, ವೇಟೆ ಜನರ ಥಳುಕು ನಮ್ಮಂಥ ವರಿಗೆ ಬ್ಯಾಡ." ಅವಳ ದೃಷ್ಟಿ ಸ್ವತಂತ್ರವಾಗಿ ಹಾರುವ ಚಿಟ್ಟೆಯತ್ತ ಹರಿದಿತ್ತು.

ತೀರ ಇತ್ತೀಚೆಗೆ ಚೆನ್ನಿ ಬಹಳ ಮಂಕಾಗಿರುವುದು ಕೊರಮನಿಗೂ ತಿಳಿದಿದೆ. ಅಂಗಾರನ ಮರಣದ ನಂತರ ಅನ್ಯಮನಸ್ಕತೆ ಹೆಚ್ಚಿದೆ ! ಅವಳ ಮನಸ್ಸು ಯಾವ ಕೆಲಸಗಳಲ್ಲಿಯೂ ಸ್ಥಿರವಾಗಿರಲಿಲ್ಲ. ಚಂಚಲ ದೃಷ್ಟಿ ರಸ್ತೆಯ ಉದ್ದಗಲವನ್ನಳೆಯುತ್ತ ಕಾಡಿನಾಚೆ ಎಲ್ಲೆಲ್ಲೊ ಸುತ್ತುವಾಗ ಕೊರಮ ಅಧೀರನಾಗಿ "ಯಾಕೆ ಚೆನ್ನಿ ಹೀಗಿದ್ದಿ ?" ಎನ್ನುತ್ತಾನೆ.

ರಾತ್ರಿಯ ಕತ್ತಲು ಸುತ್ತಲೂ ಹಬ್ಬಿಕೊಂಡು ಬಂದಂತೆ ಅವನು ಬೀಡಿ ಹೊತ್ತಿಸಿ ಒಳ ಕಾಲಿರಿಸಿದ. ಮುಸುಕಿದ ಮಬ್ಬುಗತ್ತಲೆಯಲ್ಲಿ ಬಟ್ಟೆ

ತೊಟ್ಟಿಲು ಕಾಣಿಸಿಕೊಂಡಾಗ ದುಃಖ ಉಮ್ಮಳಿಸಿ, ಕಣ್ಮುಂಚು ಒದ್ದೆಯಾಗಿ 'ಚೆನ್ನೀ....' ಎಂದು ಜೋರಾಗಿ ಅರಚಿದ.

*          *          *          *

ನಾಲ್ಕಾರು ದಿನಗಳು ಕಳೆದುಹೋಗಿತ್ತು, ತೊಟ್ಟಿಲು, ಮನೆ ಮತ್ತು ಕೊರಮನ ಮನೆ ಖಾಲಿಯಾಗಿ, ಅಲ್ಲೀಗ ಕೇವಲ ನೆನಪಿನ ಛಾಯೆ ಮಾತ್ರ ಉಳಿದಿದೆ. ಒಂದು ತಿಂಗಳ ಹಿಂದೆ ಊರ ಜಾತ್ರೆ ನಿಮಿತ್ತ ಮೂರು ಜನ ಕೊರಗ ಹೆಂಗಸರು ಕೊರಮನ ಮನೆಯಲ್ಲಿ ಎರಡು ದಿನದ ಅತಿಥಿಗಳಾಗಿ ಉಳಿದಿದ್ದರು. ಎರಡು ದಿನಗಳೂ ಕೊರಮನ ಮನೆಯಲ್ಲಿ ಸಂಭ್ರಮ. ಬೆಳಿಗ್ಗೆ, ಸಂಜೆ ದೇವಸ್ಥಾನದಲ್ಲಿ ಬಲಿಪೂಜೆ, ತೇರೆಳೆಯುವುದನ್ನು ನೋಡಿ ದರೆ ಉಳಿದ ಹೊತ್ತಿನಲ್ಲಿ ನಗು ಮಾತನಾಡುವುದರಲ್ಲೆ ಸಮಯ ಕಳೆದರು. ಕೊರಮ ಸ್ವಲ್ಪ ಹೆಚ್ಚಾಗಿಯೇ ಹೆಂಡ ತರಿಸಿ ಅವರಿಗೆ ಕುಡಿಸಿದ. ತಾನೂ ಚೆನ್ನಿಯೊಡನೆ ಕುಡಿದ ತುಕ್ರ ಎಲ್ಲರ ಕೈಗೊಂಬೆಯಾದ. ಹೆಂಗಸರು ಅಲ್ಲಿಂದ ಹೊರಡುವಾಗ ತಾವು ತಂದಿದ್ದ ಗಾಜಿನ ಬಳೆ, ಬಿಳಿ ಲೇಪವಿದ್ದ ಉಂಗುರ, ಮತ್ತು ಒಂದು ಮಣಿಸರವನ್ನು ನೆನಪಿನ ಕಾಣಿಕೆಯಾಗಿ ಚೆನ್ನಿಗೆ ಕೊಟ್ಟರು. ಅವರು ಹೋದ ಮೇಲೆ ಚೆನ್ನಿಗೆ ಎಷ್ಟೋದಿನ ಅವರದೇ ಗುಂಗು. ಏನನ್ನೋ ಮರೆಯಲೆತ್ನಿಸಿದಳು. ನಿತ್ಯಕ್ಕಿಂತ ಹೆಚ್ಚಾಗಿಯೇ ಕೊರಮನ ಮೇಲೆ ಪ್ರೀತಿಯ ಧಾರೆಯನ್ನೆರೆದಳು.

ಆದರೆ ಪ್ರೀತಿಯ ಈ ಮಹಾಪೂರ ಮುಂದೆ ಕೆಲವೇ ದಿನಗಳಲ್ಲಿ ಬತ್ತಿ ಹೋಗಿ ಅಲ್ಲಿ ಬಿರುಕು ಕಾಣಿಸಿಕೊಂಡಿತು. ತನ್ನ ಮಡಿಲನ್ನು ತುಕ್ರ ನಿಂದ ತುಂಬಿಕೊಂಡಿದ್ದ ಚೆನ್ನಿ ಸಂತೃಪ್ತಳಾಗಿದ್ದಳು. ರಕ್ಷಣೆ ನೀಡಿದ ಹಸ್ತ ನೆತ್ತಿಯ ಮೇಲೆ ಭದ್ರವಾಗಿದ್ದರೂ ಯಾವ ರಕ್ಷಣೆ ಬೇಕಿತ್ತೋ ಅದು ದೊರ ಕಿತ್ತು. ಗೂಟಕ್ಕೆ ಕಟ್ಟಿದ ದನವಾಗಲು ಅವಳಿಗಿಷ್ಟವಾಗಿರಲಿಲ್ಲ. ಒಂದು ಬೆಳಿಗ್ಗೆ ಕೊರಮನಿಗೂ ತಿಳಿಸದೆ ಮಗುವನ್ನು ಕರೆದುಕೊಂಡು ತನ್ನ ಪಾಡಿಗೆ ತಾನು ಎತ್ತಲೋ ಹೊರಟುಹೋದಳು. ದಿಗ್ಭ್ರಾಂತನಾದ ಕೊರಮ

ಊರೆಲ್ಲೆಲ್ಲ ಹುಡುಕಾಡಿದ. ಕಾಡಿನಲ್ಲೆಲ್ಲ ಅಲೆದಾಡಿದ. ತನ್ನ ಪರಿಚಿತರ ಮನೆಗಳಿಗೆಲ್ಲ ಹೋಗಿ ಬಂದ. ಹೇಳದೆ ಕೇಳದೆ ಚೆನ್ನಿ ಯಾಕೆ ಹೊರಟು ಹೋದಳು ಎಂದು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ. ಅವಳೊಬ್ಬಳು ಎಲ್ಲರಿಗಿಂತ ಬೇರೆ ಎಂದುಕೊಂಡದ್ದು ಕೇವಲ ಭ್ರಮೆ. ಚೆನ್ನಿಯ ಮೇಲೆ ಅವನಿಗೆ ಇದ್ದದ್ದು ಒಂದು ವಿಧದ ಮೋಹ. ಆದರೆ ತುಕ್ರನ ಮೇಲಿರುವ ನೈಜ ವ್ಯಾಮೋಹವನ್ನು ಅವನಿಂದ ಮರೆಯಲು ಸಾಧ್ಯವೆ? 'ಅವಳು ಹೋದರೆ ಹೋಗಲಿ. ಆ ಮಗುವಾದರೂ ತನ್ನ ಜೊತೆ ಇರಬಾರದಿತ್ತೆ?' ಅವನು ಗಾಯಗೊಂಡ ಹಕ್ಕಿಯಂತೆ ಚಡಪಡಿಸಿದ.

ಗುಡಿಸಲು ವಾಸ ಅಸಹನೀಯವಾಗಿತ್ತು. ಖಾಲಿ ತೊಟ್ಟಿಲನ್ನೇ ತೂಗಿದ. ಅಪಸ್ವರದಲ್ಲಿ ಕೊಳಲು ಬಾರಿಸಿದ. ಅಳುವ ಮಗುವನ್ನು ನಗಿಸುವ ಚೇಷ್ಟೆಗಳನ್ನು ಮಾಡುತ್ತ ನಕ್ಕ. ಜೋಗುಳ ಹಾಡಿ ಅತ್ತ! ಅಂಗಾರನನ್ನು ನಾನೇ ಕೊಂದೆ. ಆದರೂ ಚೆನ್ನಿ ನನ್ನ ಜೊತೆ ಉಳಿಯಲಿಲ್ಲ, ಮಗುವನ್ನೂ ಉಳಿಸಲಿಲ್ಲ. ಎಂದು ಊರಲ್ಲೆಲ್ಲ ಹೇಳಿಕೊಂಡು ತಿರುಗಿದಾಗ ನಿಜವಾಗಿಯೂ ಕೊರಮನಿಗೆ ಹುಚ್ಚು ಹಿಡಿಯಿತು ಎಂದು ಊರಜನರು ಆಡಿಕೊಂಡರು.

"ಪಾಪ ಈ ವಯಸ್ಸಿನಲ್ಲಿ ಹೆಂಡತಿ ಬಿಟ್ಟು ಹೋದಳಲ್ಲ, ಹೀಗಾಗು ವುದು ಸಹಜವೇ" ಎಂದರು ಕೆಲವು ಅನುಭವಿಗಳು.

ಅವನಿಗಾಗಿ ಎಲ್ಲರೂ ಕನಿಕರಪಟ್ಟರು. ಸಂತಾಪ ಸೂಚಿಸಿದರು. ಇದಕ್ಕಿಂತ ಹೆಚ್ಚಿನ ಉಪಕಾರ ಮಾಡುವುದು ಯಾರಿಂದಲೂ ಸಾಧ್ಯವಿರಲಿಲ್ಲ. ಕೆಲವು ದಿನಗಳ ನಂತರ ಒಂದು ರಾತ್ರಿ ಸುತ್ತಲಿನ ನಿಶ್ಶಬ್ದತೆಯನ್ನು ಭೇದಿಸಿ ಕೊಂಡು ಕೊರಮನ ಗುಡಿಸಲಿನಿಂದ ಅವನ ಕೊಳಲಿನ ಇಂಪು ಸ್ವರ ಕೇಳಿಸ ಲಾರಂಭಿಸಿತು. ಕೊರಮ ಸಂತೋಷ ಚಿತ್ತನಾದಾಗ ಮಾತ್ರ ಈ ರೀತಿ ನುಡಿಸಬಲ್ಲ. ಕೊಳಲಿನ ಸ್ವರ ಕೇಳಿದ ಊರವರು "ಓಹೋ, ಚೆನ್ನಿ ಮನೆಗೆ ಹಿಂದಿರುಗಿರಬೇಕು" ಎಂದುಕೊಂಡರು.

ಮರುದಿನ ಬೆಳಿಗ್ಗೆ ಕೊರಮ ಸಣ್ಣ ಧ್ವನಿಯಲ್ಲಿ ಹಾಡುತ್ತ ಗುಡಿಸಲಿನ ಎದುರು ಬುಟ್ಟಿ ಹೆಣೆಯುತ್ತಾನೆ. ಅವನ ಹತ್ತಿರವೇ ಹದಿಹರೆಯದ ಹೆಣ್ಣೊಬ್ಬಳು ನಗುತ್ತ ಕುಳಿತಿದ್ದಾಳೆ. ಆ ದಾರಿಯಾಗಿಯೆ ಬಂದ ಯಾರೋ ಒಬ್ಬರು ಕೊರಮನತ್ತ ನೋಡಿ ಕೇಳಿದರು, "ಚೆನ್ನಿ ಮನೆಗೆ ಬಂದಳೇನೊ ?"

'ಇಲ್ಲ' ಎಂಬಂತೆ ತಲೆಯಲ್ಲಾಡಿಸಿ ಕೊರಮ ಬಹಳ ದಿನಗಳ ನಂತರ ನಗುತ್ತ ಹೇಳಿದ "ಆವಳೆಲ್ಲಿ ಹೋದಳೋ ಯಾರಿಗೆ ಗೊತ್ತು? ಇವಳು ಚೆನ್ನಿಗಿಂತ ಇನ್ನೂ ಚೆನ್ನಾಗಿರುವವಳು....ಹ್ಹೋ....ಹ್ಹೋ...."

ಅವನ ನಗುವಿನ ಬಂದಿರುವ ಒಳ ಮನಸ್ಸು ಇನ್ನೋರ್ವ ತುಕ್ರನಿಗಾಗಿ ಹಂಬಲಿಸುತ್ತಿತ್ತು.

000

# ನಾನು

ಚಿ. ನ. ಮಂಗಳ

ಒಂದು. ಎರಡು, ಮೂರು...ನಾಲ್ಕು...ಒಂದಾದಮೇಲೊಂದು, ಗಂಟೆ ಯೊಡೆಯಿತು. ನಾಲ್ಕು ಹೊಡೆದದ್ದೇ ತಡ. ಚಂಗನೆದ್ದು ಕುಳಿತೆ ನಾನು—ನನ್ನ ರೂಮಿನಲ್ಲಿ—ನನ್ನ ಬೆಡ್ ರೂಮಿನಲ್ಲಿ—ನನ್ನ ಸ್ಟಡಿ ರೂಮಿನಲ್ಲಿ—ನನ್ನ ಸರ್ವಸ್ವವೂ ಆಗಿದ್ದ ಆ ನನ್ನ ರೂಮಿನಲ್ಲಿ, ಮಂಚದ ಪಕ್ಕದಲ್ಲಿದ್ದ ಕಿಟಕಿಯತ್ತ ತಿರುಗಿ ನೋಡಿದೆ. ಕತ್ತಲು ಇನ್ನೂ ಕಗ್ಗತ್ತಲು. ಕಿಟಕಿಯಿಂದ ದೂರದಲ್ಲಿ ಕಾಣಬೇಕಾಗಿದ್ದ ಬೀದಿ ದೀಪ ಯಥಾಪ್ರಕಾರ ಕಾಣುತ್ತಿರಲಿಲ್ಲ. ಬೀದಿಯಲ್ಲಿ ಎಲೆಕ್ಟ್ರಿಕ್ ಕಂಬವೇನೋ ಇತ್ತು. ಆದರೆ, ನಾನು...ಅಲ್ಲ ನಾವು ಆ ಮನೆಗೆ ಬಂದಾಗಿನಿಂದ ಆ ದೀಪದ ಕಂಬದಲ್ಲಿ ದೀಪ ಉರಿದಿದ್ದು ಹೆಚ್ಚೆಂದರೆ ಎರಡುಸಲ. ಸ್ವಲ್ಪ ದಿನ ಆ ಬಲ್ಬು ಕೆಟ್ಟು ಕೂತಿತ್ತು. ಆದರೆ ಆ ಕೆಟ್ಟ ಬಲ್ಬನ್ನೂ ಬಿಟ್ಟಿರಲಿಲ್ಲ ಆ ಕಳ್ಳ ಬಡ್ಡೀ ಮಕ್ಕಳು. ಅದನ್ನೂ ಕದ್ದುಕೊಂಡು ಹೋಗಿದ್ದರಂತೆ. ನನಗೇನು ಗೊತ್ತು. ಹಾಗೆಂದು ಹೇಳಿದರು ಎಲೆಕ್ಟ್ರಿಕ್ ಡಿಪಾರ್ಟ್‌ಮೆಂಟಿನವರು. ಆದರೆ ಆ ಸ್ಥಳವನ್ನು ಬೇರಾವ ಬಲ್ಬೂ ಆಶ್ರಯಿಸಿರಲಿಲ್ಲ. ತೆರೆದ ಸ್ಥಾನವನ್ನು ಭರ್ತಿಮಾಡಬಲ್ಲ ಬೇರೊಂದು ಬಲ್ಬು ಸಿಕ್ಕಿರಲಿಲ್ಲ. ತುಂಬಲಾರದ ನಷ್ಟವಾಗಿ ಹೋಗಿತ್ತು ಅಲ್ಲಿ ಆ ಕಗ್ಗತ್ತಲಿನಲ್ಲಿ....

ಹೊರಗೆ ಕತ್ತಲೋ ಕತ್ತಲು. ಒಳಗೆ ನನ್ನ ರೂಮಿನಲ್ಲಿ ನೈಟ್ ಲೈಟಿನ ಮಿಣುಕು ಮಿಣುಕು ಬೆಳಕು. ಅರೆಕ್ಷಣ ಗೋಡೆಯ ಮೇಲೆ ಅದರ ಪ್ರತಿಬಿಂಬವನ್ನೇ ನೋಡುತ್ತ ಕುಳಿತೆ. ಛೆ, ಸುಮ್ಮನೆ ಕಾಲ ವ್ಯರ್ಥ ಅಷ್ಟೆ. ನನಗೆ ಬೇಕಾದ್ದು ನನ್ನ ಪ್ರತಿಬಿಂಬ. ಆ ಲೈಟಿನ ಪ್ರತಿಬಿಂಬವನ್ನು ಕಟ್ಟಿ

ಕೊಂಡು ನನಗೇನು. ನಾನು ಮೇಲೆದ್ದೆ. ಮೇಲೆದ್ದೆ ಎಂದರೆ ಸಾಲದೆ? ನಾನು ಎಂದು ಬೇರೆಯಾಗಿ ಹೇಳಬೇಕೆ? ಆದರೆ ಅದೇನೋ ಹಾಳು ಅಭ್ಯಾಸ ಬಲ. ಎಲ್ಲಕ್ಕೂ ಮೊದಲು ನಾನು ನಾನು....ಹೌದು ಏಕಾಗ ಬಾರದು? 'ನಾನು' ಎಂದು ತುಂಬಾ ಯೋಚಿಸಬಾರದಂತೆ 'ಅಹಂ' ಕೆಟ್ಟದ್ದಂತೆ ಯಾರೋ ಹೇಳಿದರು. ಆದರೆ ನನಗೆ ನಾನೇ ಬೇಡವಾದರೆ, ನನಗೆ ನಾನೇ ಅಲ್ಪವಾದರೆ ಇನ್ನು ಯಾರಿಗೆ ತಾನೇ ನಾನು ಬೇಕಾದೇನು? ...ನಾನು...ಹೌದು...ನಮ್ಮ ಮನೆಯಲ್ಲಿ ಯಾರೂ ಇಷ್ಟು ದಪ್ಪವಾಗಿ ಕುಳ್ಳಾಗಿಲ್ಲವಲ್ಲ....ನಾನೇಕೆ ಹೀಗಾದೆ? ಮೊನ್ನೆ ಆ ಸಮಾರಂಭಕ್ಕೆ ಹೋದಾಗ ಎಲ್ಲರೂ ನನ್ನನ್ನೇ ನೋಡುತ್ತಿದ್ದಾರೇನೋ ಎನ್ನಿಸಿತು. ನನ್ನ ವಯಸ್ಸಿಗೆ ನಾನು ಬಲು ದಪ್ಪ...ನಾನೇಕೆ ಹೀಗಾದೆ? ನನ್ನ ಅಪ್ಪ ಅಮ್ಮ ಯಾರೂ ಹೀಗಿಲ್ಲವಲ್ಲ?....

ಛೆ, ಯೋಚಿಸಿ ಏನು ಪ್ರಯೋಜನ? ಮಾಡುವ ಕೆಲಸ ಮಾಡೋಣ ಏನು ಮಾಡೋದೋ ಏನೋ. ಒಂದೊಂದು ಸಲ ಬೇಜಾರಾಗುತ್ತೆ, ನಾನೂ ಕಸರತ್ತು ಮಾಡುತ್ತಲೇ ಇದ್ದೇನೆ. ನೂರಾರು ರೂಪಾಯಿ ಖರ್ಚು ಮಾಡಿ ಆ ಬುಲ್‌ವರ್ಕರ್ ಬೇರೆ ತರಿಸಿಯಾಯಿತು. ಆಯಿತು ಆಗಲೆ ಒಂದು ವರ್ಷ. ಒಂದಿಂಚಷ್ಟಾದರೂ ಕಡಿಮೆಯಾಗಿಲ್ಲ ...ಎಂದು ನಾನು ಸಣ್ಣಗಾದೇನೋ ಏನೋ ! ಆದರೂ ನಾನು ಆಶಾವಾದಿ. ಪ್ರಯತ್ನವ ನ್ನಂತೂ ಬಿಡಲ್ಲ. ಅದೂ ಅಲ್ಲದೆ ಆ ಬುಲ್‌ವರ್ಕರ್‌ಗೆ ನೂರು ರೂಪಾಯಿ ಸುರಿದಿಲ್ಲವೆ ?....ಅದಕ್ಕೋಸ್ಕರವಾದರೂ ಮಾಡಲೇಬೇಕು...ಆದರೂ.... ನಾನಿಷ್ಟು ದಪ್ಪವಾಗಬಾರದಿತ್ತು...

ಈವತ್ತು ಯಾಕೋ ಎಕ್ಸರ್‌ಸೈಜ್‌ಮಾಡೋಕೇ ಮನಸ್ಸಿಲ್ಲ....ಅವಳು ....ತಲೇ ತುಂಬಾ ಅವಳು....ಆ ನನ್ನ ಸಹೋದ್ಯೋಗಿ....ನನ್ನ ನೋಡಿ ನಗುವುದೊಂದೇ ಕೆಲಸವೆಂದು ಕಾಣುತ್ತದೆ ಅವಳಿಗೆ. ಏನು ಜಂಬ. ನಾನು ದಪ್ಪಗಿದ್ದರೆ ಇದ್ದೆ. ಅವಳಿಗೇನಂತೆ ! ಅವಳ ರೂಪ ! ಅಹಹಾ ... ಪಾಲುಗಣ್ಣು...ಮುಖದ ಮೇಲೆ ಅಂಗೈಯಗಲ ಮಚ್ಚೆ, ಉಬ್ಬು ಹಲ್ಲು,

ನರೆತ ಕೂದಲು...ಎರಡು ಕಣ್ಣು ಸಾಲದು ನೋಡೋಕೆ...ಆದರೂ ಯಾವಾಗಲೂ ನಗುತ್ತಲೇ ಇರುತ್ತಾಳಲ್ಲ...? ನಾನು ಯಾಕೆ ಹಾಗೆ ನಗ ಲಾರೆ?...ಅಲ್ಲಾ ಮೊನ್ನೆ ಅವಳು ಹಾಗೆ ನಕ್ಕಾಗ ನಾನೂ ಹಾಗೇ ನಗ ಬೇಕೆಂದು ಎಷ್ಟು ಪ್ರಯತ್ನ ಪಟ್ಟೆ....ಮುಖ ಬೆವರಿತೇ ಹೊರತು ...ನಗು ಮಾತ್ರ ಬರಲಿಲ್ಲ. ಯಾಕೆ?—ಆದರೆ ಅವಳೊ?....ಅಹಂಕಾರದ ಮುದ್ದೆ ಅವಳು. ಅಲ್ಲಾ ಒಂದು ವರುಷದಿಂದ ಒಂದೇ ಕಡೆ, ಒಂದೇ ಜಾಗದಲ್ಲಿ, ಒಂದೇ ಕೊಠಡಿಯಲ್ಲಿ ಕೂತು ಕೆಲಸ ಮಾಡಿದ್ದೆವಲ್ಲ....ಒಂದು ದಿನ ಒಂದರ್ಥ ಮಾತು ಬೇಡವೆ ? ಎಂಥಾ ಹೆಣ್ಣು... ಮಾತು ಬೇಡ ಹೋಗಲಿ ಒಂದೇ ಒಂದು ಕುಡಿನೋಟ....ಬೇಡ ಒಂದು ಮುಗುಳ್ನಗೆ....ಒಂದೂ ಬೇಡವೆ? ....ಎಂಥಾ ಅಹಂಕಾರದ ಮುದ್ದೆ ಅವಳು....ಇರಬಹುದು, ನಾನು ದಪ್ಪವೇ ಇರಬಹುದು ಆದರೆ ನಾನು ಅವಳ ಸಹೋದ್ಯೋಗಿಯಲ್ಲವೆ...ಇನ್ನೇನೂ ಅಲ್ಲದಿದ್ದರೂ ಕೊನೆಗೆ ಸೌಜನ್ಯಕ್ಕಾದರೊ...ಸರಿ ಸರಿ. ಸೌಜನ್ಯವೆಲ್ಲಿಂದ ಬರಬೇಕು, ಆ ಹೆಣ್ಣಿಗೆ? ಆ ಸುಟ್ಟ ಹೆಣ್ಣಿಗೆ....? ಮಾಲುಗಣ್ಣು ...ಉಬ್ಬು ಹಲ್ಲು, ನರೆತ ಕೂದಲು ...ಅಸಹ್ಯ ...ಸರಿ, ಕತ್ತು ಬೇರೆ ಯಾವಾಗಲೂ ಒಂದೇ ಪಕ್ಕಕ್ಕೆವಾಲಿರುತ್ತೆ....ಏನಾದರೂ ಐಬೋ....ಆದರೂ ಏಗಹಂಕಾರ ಅವಳಿಗೆ .. ನಾನು ದಪ್ಪವಿರಬಹುದು... ನಾನು ಗಂಡಸೇ ಇರಬಹುದು.... ಆದರೆ ಅವಳೇನು ಮಹಾ ಸೀತೆ ಸಾವಿತ್ರಿಯೊ....ಅಥವಾ ಅವರ ತಾತನೊ ಛೈಛೆ ನಾನೆಂತಹ ಪೆದ್ದು! ಸೀತೆ ಸಾವಿತ್ರಿಯರ ತಾತ ಪತಿವ್ರತೆಯಾಗಿದ್ದಿರಲು ಸಾಧ್ಯವೆ? ಅಂದ ಹಾಗೆ ಸಾವಿತ್ರಿಯ ತಾತ ಯಾರು? ಎಷ್ಟೊಂದು ಕಥೆ ಕೇಳಿದ್ದೆ ಚಿಕ್ಕಂದಿನಲ್ಲಿ. ಒಂದಾದರೂ ಜ್ಞಾಪಕಕ್ಕೆ ಬರೋದಿಲ್ಲವಲ್ಲ? ಏನನ್ಯಾಯ?

ಢಣ್........ಢಣ್......

ಇದೇನು ಆಗಲೇ ನಾನೆದ್ದು ಒಂದು ಗಂಟೆಯಾಗಿ ಹೋಗಿದೆಯೆ? ಒಂದು ಗಂಟೆಯ ಕಾಲ ವ್ಯರ್ಥವಾಗಿ ಹೋಯಿತಲ್ಲ...ನಾನು ಅವಳು.... ನಾನು....ನನಗ್ಯಾಕೆ ಅವಳ ಯೋಚನೆ. ನಾನು ನಾನು...ಅವಳು ಅವಳು ...ಅಂಗೈಯ್ಯಗಲ ಮಚ್ಚೆ, ಉಬ್ಬು ಹಲ್ಲು, ನರೇಕೂದಲು. ನೋಡಲಾರೆ

ಅವಳ ರೂಪ....ಆದರೂ ಎಷ್ಟು ಅಹಂಕಾರ ಅವಳಿಗೆ. ಅಬ್ಬಾ ಹೆಣ್ಣೆ ನಿನ್ನನ್ನು ಯಾರ ಥರ...ಥರ ಥರ... ಹಿಂಸೆ ಮಾಡಿದರೂ ನನಗೆ ತೃಪ್ತಿಯಾಗೊಲ್ಲ ಏನು ಮಾಡಿದರೆ ನಿನಗೆ ಹಿಂಸೆಯಾಗುತ್ತೆ?...ನನಗೆ ಸಂತೋಷವಾಗುತ್ತೆ? ಏನಾದರೂ ಮಾಡಿ ನಿನ್ನ ಹಿಂಸೆ ಮಾಡಲೇ ಬೇಕು ....ಸಂತೋಷಪಡಲೇ ಬೇಕು....ನೀನು ಅತ್ತಷ್ಟೂ ನನಗೆ ಸಂತೋಷ... ನೀನು...ಹಿಂಸೆಪಟ್ಟಷ್ಟೂ ನನಗೆ ಸಂತೋಷ...ಮೊನ್ನೆ ನೀನು ಬಂದಿರಲಿಲ್ಲ....

ನೀನು ಯಾಕೆ ಬರಲಿಲ್ಲ...

ಕೆಲಸಕ್ಕೆ ಸೇರಿದಾಗಿಂದ ಒಂದು ದ್ದಿವಸ ಕೂಡ ನೀನು ರಜೆದೆಗೆದು ಕೊಂಡದ್ದನ್ನು ನಾನು ನೋಡಿಲ್ಲ. ನೀನು ತೆಗೆದುಕೊಂಡಿಲ್ಲವೆಂದು ನಿನ್ನ ಮೇಲಿನ ಪೈಪೋಟಿಗೆ ನಾನೂ ತೆಗೆದುಕೊಂಡಿರಲಿಲ್ಲ. ಆದರೆ ಮೊನ್ನೆ ನೀನು ರಜೆ ಚೀಟಿ ಕೂಡ ಕಳುಹಿಸದೆ ಬರದೆ ಹೋದೆಯಲ್ಲ. ಯಾಕೆ ಬರಲಿಲ್ಲ?

ನಿನ್ನ ಕುರ್ಚಿ ಖಾಲಿ?

ಮೈ ಚನ್ನಾಗಿಲ್ಲವೆ?

ಯಾರ್‍ರಾದರೂ ಕಾಲವಾಗಿರಬಹುದೆ?....

ಅಯ್ಯೊ ಪಾಪ, ಯಾರು ತೀರಿದರೋ ಏನೊ. ಕೆಲಸಕ್ಕೆ ಸೇರಿದಾಗಿನಿಂದ ನಾನೂ ನೊಡುತ್ತಿದ್ದೇನೆ. ಒಂದು ಹೊಸ ಸೀರೆಯನ್ನಾದರೂ ಕೊಂಡುಕೊಂಡಿಲ್ಲವಲ್ಲ ಅದೇ ನಾಲ್ಕು ಸೀರೆ. ಇಂದು ಕೆಂಪಂಚಿನ ಹಳದಿ....ನಾಳೆ....ಹಸುರಂಚಿನ ನೀಲಿ....ನಾಡದ್ದು ಮತ್ತದೇ ಕೆಂಪಂಚಿನ ಹಳದಿ....ಅದರ ಮಾರನೆಯ ದಿನ ಮತ್ತೆ ಹಸುರಂಚಿನ ಅಲ್ಲಲ್ಲ....ಇನ್ನೊಂದು ಸೀರೆ...ಬಿಳಿಯ ಒಡಲಿನ ಮೇಲೆ ಅದೇನೋ ಗೆರೆಗೆರೆ,..ಬರೆ.ಬರೆ... ನಾಲ್ಕನೆಯದಿನ...ಬಣ್ಣಹೋದಂಥ ಒಂದು ಸೀರೆ....ಒಂದು ವರುಷದಿಂದ

ಅದೇ ನಾಲ್ಕು ಸೀರೆ...ಬೇರೆ ಉಟ್ಟಿದ್ದನೇ ಕಾಣೆ....ಕೆಲಸಕ್ಕೂ ಅದೆ... ಸಮಾರಂಭಕ್ಕೂ ಅದೆ...ಪ್ರವಾಸ ಹೋದಾಗಲೂ ಅದೆ ..ಯಾಕೆ.... ಬರುವ ಸಂಪಾದನೆ ನಿನಗೆ ಸಾಲದೆ"....ನಿನ್ನ ಸಂಪಾದನೆಯಲ್ಲಿ ಒಂದಂಶವೂ ನಿನಗಿಲ್ಲವೆ,?...ಸರಿ ಸರಿ....ಆ ನಿನ್ನ ಉಬ್ಬು ಹಲ್ಲು, ನರೆತ ಕೂದಲು, ಅಂಗೈಯಗಲ ಮಚ್ಚೆ...ಅಸಹ್ಯ ಅಸಹ್ಯ....ಸಾಕು ಆ ಮೂತಿಗೆ ಅಷ್ಟಲಂಕಾರ ನೀನು ಒಂದು ದಿನವಾದರೂ ಮುಗುಳ್ನಕ್ಕಿದ್ದೀಯ ನೀನು...ಕೊಬ್ಬಿದ ನೀನು?....ಸಾಕು ನಿನಗೆ ಆ ನಾಲ್ಕು ಸೀರೆಗಳೇ. ಸಾಕು ನೆನ್ನೆ ಆ ನಿನ್ನ ಕುರ್ಚಿ ಖಾಲಿ?...ಯಾಕೆ ಬರಲಿಲ್ಲ ನೀನು?...ನಿನ್ನ ಟೇಬಲ್ಲಿನ ಮೇಲಿದ್ದ ಟೈಪ್ ರೇಟರಿನ ಮುಸುಕು ಹಾಕಿದ್ದು ಹಾಕಿದ ಹ್ಹಾಗೇ ಇತ್ತು ...ಖಾಲಿ ಕುರ್ಚಿಯ ಎದುರ ಮುಸುಕು ಹೊದ್ದ ಯಂತ್ರ ಪಕ್ಕದ ಕುರ್ಚಿಯಲ್ಲಿ ಕುರ್ಚಿತುಂಬ ಕುಳಿತ ನಾನು...ಮತ್ತೊಂದುಯಂತ್ರ...ನನಗೂ ಅದಕ್ಕೂ ಏನು ವ್ಯತ್ಯಾಸ ಏನೂ ಇಲ್ಲವೆ? ಇದೆಯೇ?....ಇದೆಯೆ ಇಲ್ಲವೆ?

ಢಣ್ ಢಣ್......

ಅಯ್ಯೋ ಇದೇನು....ಇನ್ನೂ ಒಂದು ಗಂಟೆ ಕಳೆದುಹೋಯಿತೆ?.... ಇನ್ನು ಸಾಕು ಬೆಳಗಾದ ಕೂಡಲೇ ಆ ನರೆತಕೂದಲು ಉಬ್ಬುಹಲ್ಲು ಅಂಗೈ ಯಗಲ ಮಚ್ಚೆಯವಳ ಜಪ ಸಾಕು.

ಏನಾಯಿತೋ ಏನೋ ಪಾಪ. ಈವತ್ತಾದರೂ ಬರುತ್ತಾಳೋ ಏನೋ ನೋಡಬೇಕು.

ಒಂದು ದಿವಸ ಕೂಡ ರಜ ತೆಗೆದುಕೊಂಡಿರಲಿಲ್ಲವಲ್ಲ ಪಾಪ.

ಎಲ್ಲೋ ಅವಳ ಮನೆ.

ಒಂದು ವರುಷದಿಂದ ನಾವು ಒಬ್ಬರ ಪಕ್ಕದಲ್ಲೇ ಒಬ್ಬರು ಕುಳಿತರೂ ಅವಳು ಎಲ್ಲಿದ್ದಾಳೆಂದು ಕೂಡ ನನಗೆ ಗೊತ್ತಿಲ್ಲವಲ್ಲ? ಹೋಗಿ ನೋಡಿ ಕೊಂಡಾದರೂ ಬರಬಹುದಾಗಿತ್ತು. ನಾನು ದಪ್ಪಗಿದ್ದರೇನಂತೆ. ಮನೆಗೆ ಹೋದರೆ ಬಾಗಿಲು ಹಾಕಿಕೊಂಡಾಳೆಯೆ?.

ಇದೇಕೆ ನನಗೆ ಅವಳ ಹುಚ್ಚು—ನನ್ನ ಕಡೆ ತಿರುಗಿಯೂ ನೋಡದ ಆ ಮಚ್ಚೆ ಹುಡುಗಿಯ ಹುಚ್ಚು—

ಒಂದು ಹೆಣ್ಣಿಗೊಂದು ಗಂಡು.

ಹೇಗೋ ಬಂದು ಸೇರಿಕೊಂಡು....'ಸೇರಿಕೊಂಡು' ಸಾಲು ಸರಿಯಾಗಿದೆಯೆ?—ನನ್ನ ತಲೆಯಲ್ಲೇಕಿವೆ ಈ ಸಾಲುಗಳು—ನನಗೂ ಸಾಹಿತ್ಯಕ್ಕೂ ಎಲ್ಲಿಯ ಸಂಬಂಧ? ಯಾರು ಬರೆದರೋ ಈ ಸಾಲುಗಳನ್ನು—ಯಾರೋ ನನ್ನಂಥಹವರೇ ಇರಬೇಕು—

ಒಂದು ಹೆಣ್ಣಿಗೊಂದು ಗಂಡು—

ಅಲ್ಲ ಒಂದು ಗಂಡಿಗೊಂದು ಹೆಣ್ಣು..........

ಗಂಡು ಹೆಣ್ಣು...........

ಹೆಣ್ಣಿಗೆ ಗಂಡಾದರೇನಂತೆ ಗಂಡಿಗೆ ಹೆಣ್ಣಾದರೇನಂತೆ—

ಅರೆ ಎಷ್ಟು ಬೆಳಕಾಗಿದೆ. ಸಾಕು ಆ ಮಚ್ಚೆ—ಹುಡುಗಿಯ ಹುಚ್ಚು ಆದರೂ ಆದೇನು ಅವಳ ಕೆಚ್ಚು—ಇದೇನು—ನನಗೂ ಹೀಗೆ ಪ್ರಾಸದ ಹುಚ್ಚು—ಸಾಕು ಸಾಕು—ಆದರೆ ನಾನು ಆ ಕಾಲಿ ಕುರ್ಚಿ ನೋಡಲಾರೆ —ಅವಳು ಬಾಗಿಲು ಹಾಕಿಕೊಂಡರೆ ಹಾಕಿಕೊಳ್ಳಲಿ. ನನಗೆ ಮುಖಭಂಗವಾದರೂ ಪರವಾಯಿಲ್ಲ. ಹೋಗೇ ಹೋಗುತ್ತೇನೆ. ಅವಳು ಹ್ಯಾಗಿದ್ದಾಳೋ ಏನೊ ಆ ಕೊಬ್ಬಿದ ಹೆಣ್ಣು—ಏನವಳ ಧಿಮಾಕು—ಇರಲಿ ನಾನು ಹೋಗುತ್ತೇನೆ. ಮುಚ್ಚಿದ ಬಾಗಿಲ ಬಳಿ ನಿಂತು ತೆರೆದ ಕಿಟಕಿಯಲ್ಲಿ ಬಗ್ಗಿ ನೋಡುತ್ತೇನೆ.

—೧—

# ನಾನು ನೀನೇ ಅಲ್ಲವೇ

—ಹೇಮಾ

ಗುಡ್ಡ ಹತ್ತುವಾಗ ಆಯಾಸವಾಗಿತ್ತು. ಬಿಸಿಲಿನ ಪ್ರಖರತೆ ಆಯಾಸವನ್ನು ಇನ್ನೂ ಹೆಚ್ಚಿಸಿತ್ತು. ಉಳಿದವರೆಲ್ಲ ಸಾಕಷ್ಟು ಮುಂದೆ ಹೋಗಿದ್ದರು. ಅವನು ಮಾತ್ರ ನನ್ನ ಜೋತೆಗೇ ಹೆಜ್ಜೆ ಹಾಕುತ್ತಿದ್ದ.

ಹುಲುಗಲ ಗಿಡದ ಸಮೀಪ ಬಂದಾಗ, ತುಂಪು ಹಿತವೆನಿಸಿ ಅಲ್ಲಿಯೇ ಕುಳಿತುಕೊಂಡೆ. ಅವನೂ ಕುಳಿತ. ಆಗಲೇ ಅವನು ತನ್ನ ಗೆಳೆಯನ ನೂರಾಯೆಂಟು ಭಾನಗಡಿಗಳ ವರ್ಣನೆ ಮಾಡಿದ್ದು. ಬಹುಶಃ ತಾನು ಅವನಿಗಿಂತ ಸಂಭಾವಿತ ಎಂದು ನಾನು ತಿಳಿಯಬೇಕೆಂದು ಅವನ್ನೆಲ್ಲ ಹೇಳಿದನೋ ಏನೋ! ಗಂಡಸರ ಇಂಥ ಸಂಭಾಯಿತಗಿರಿಗಳಿಗೆ ಇವನೂ ಹೊರತಾಗಿಲ್ಲವೇನೋ, ಇದೆಲ್ಲ ನನಗೆ ಹೊಸದಲ್ಲ ಎಂದುಕೊಂಡು ಸುಮ್ಮನೆ ಕೇಳುತ್ತಿದ್ದೆ.

"ನಡೀರಿನ್ನ, ಅವರೆಲ್ಲಾ ಈಗ ಪೂರ್ತಿ ಮ್ಯಾಲೆ ಹೋಗಿರಬೇಕು. ಇಷ್ಟೊತ್ತನಕಾ ನಾವು ಕೂತೇವೆಂತ ಏನರ ತಿಳಕೊಂಡಗಿಂಡಾರು" ಎಂದು ಅವನೇ ಹೇಳಿದಾಗ, 'ಏನಾದರೂ ತಿಳಕೊಳ್ಳಲಿ, ಅಥವಾ ಆ ಏನಾದರೂ ನಡೆದರೂ ನಡೆಯಲಿ' ಎನ್ನುವ ಅನಿಸಿಕೆಯನ್ನು ಸಮರ್ಥವಾಗಿ ಸುರಕ್ಷಿಸುವ ಶಕ್ತಿ ಅವನ ಕಣ್ಣುಗಳಿಗಿದೆ ಅನಿಸಿ ನೇರವಾಗಿ ಅವನನ್ನೇ ದಿಟ್ಟಿಸಿದೆ. ಅವನು ದೃಷ್ಟಿ ಬದಲಿಸಿದ.

'ಇಂವಾ ಇಂಥಾದ್ದೆಲ್ಲಾ ಇಲ್ಲದ್ದ ಯಾಕ ವಿಚಾರ ಮಾಡಬೇಕು.

ನಂದೇನದ ಇವನ ಜೋಡಿ ಸಂಬಂಧ, ಏನರ ಆಗಲಿ ಅನ್ನೂದುಕ್ಕ?'
ಅಂದುಕೊಂಡೆ.

'ಖರೆ, ಏನೋ ಸಂಬಂಭ ಇಲ್ಲದಿದ್ರ ಇಂಥಾ ವಾತಾವರಣದೊಳಗ, ಇವನ ಜೋಡಿ ಒಬ್ಬೇಕಿನ ಹಿಂಗ ಕೂಡ್ರಲಿಕ್ಕೆ ಯಾಕ ಅವಕಾಶ ಕೊಡತಿದ್ದೆ....!'

ಅವನು ಏಳಲಿಲ್ಲ. ನಾನು ಕುಳಿತೇ ಇದ್ದೆ. ತನ್ನ ಕಾಲೇಜಿನ ಮೊದಲ ದಿನಗಳ ಕಿತಾಪತಿಯನ್ನೆಲ್ಲ ಹೇಳಿದಾಗ, ಅವನು ಪ್ರೀತಿಯೆಂದ್ರ ಹೇಳಿದ್ದು-ನನಗೆ ಆಶ್ಚರ್ಯವೆನಿಸಿತ್ತು.

ಮೊದಲಿನಿಂದಲೂ ಅನೇಕ ಟೀನ್‌ಏಜ್ ಲ್ಲವ್‌ಗಳ ಬಗ್ಗೆ ಕೇಳಿ ಬಾಲಿಶ ಎಂದು ನಕ್ಕಿದ್ದ ನನಗೆ ಈಗ ಮಾತ್ರ ಹಾಗೆ ನಗ ಬೇಕೆನಿಸಲಿಲ್ಲ.

ಆ ಹುಡುಗಿಯನ್ನು ಅವನು ಮಾತಾಡಿಸಿದ್ದೇ ಅಪರೂಪವಂತೆ. ಕೊನೆಯವರೆಗೂ ತನ್ನ ಯಾವ ಭಾವನೆಯನ್ನೂ ಅವಳೆದುರು ಹೇಳಲಾಗದೆ ನೂರಾರು ಕವನಗಳನ್ನು ಬರೆದು ಇವನು ಸುಮ್ಮನಾದದ್ದು ಹೇಡಿತನವೇನೋ ಅನಿಸಿತು. ಅಷ್ಟಾದ ಮೇಲೆ ಬೇರೆ ಹುಡಿಗೆ/ಯರ ಬಗ್ಗೆ ಏನಾದರೂ ಅನಿಸಿಕೊಳ್ಳುವುದು ಹೋಗಲಿ, ಯೋಚಿಸುವುದೂ ಪಾಪವೆಂದುಕೊಂಡದ್ದು ಕೇಳಿದಾಗ ಅವನ ಪ್ರೀತಿ, ಮುಗ್ಧತೆ-ನಾನು ಎಂದಿಗೂ ಅನುಭವಿಸಲಾಗದ್ದು, ಆಪ್ಯಾಯಮಾನವಾದದ್ದು ಅನಿಸಿತ್ತು. ಮುಂದೆ ಕೆಲವೇ ದಿನಗಳಲ್ಲಿ ಪ್ರೀತಿಗೆ ಮದುವೆಗೆ ಏನೂ ಸಂಬಂಧವಿಲ್ಲವೆಂದು ತಿಳಿದಾಗ ಮದುವೆಯಾದನಂತೆ.

'Love need not end in marriage, because it s not physical attraction.......' ಎಂದು ನಾನು ಆ ಸಜಿದ್‌ಗೆ ಹೇಳಿದ್ದು ನೆನಪಾಗಿ ನನ್ನಲ್ಲೇ ನಕ್ಕೆ.

"ಯಾಕ ನಗಲಿಕ್ಕೆ ಹತ್ತೀರೀ?"

ಓಹ್ ! ನನ್ನ ಮನಸ್ಸಿನ ನಗು ತುಟಿಯಲ್ಲೂ ತೇಲಿದ್ದು ಅವನ ಪ್ರಶ್ನೆಯಿಂದಲೇ ನನಗೆ ಅರಿವಾದದ್ದು.

"ಇಲ್ಲಾ ನಾಯೆಲ್ಲೆ ನಕ್ಕೇನಿ ?" ಎನ್ನುತ್ತ ಮುಕ್ತವಾಗಿ ನಕ್ಕಾಗ ಅವನೂ ನನ್ನ ನಗೆಯಲ್ಲಿ ಸೇರಿಬಿಟ್ಟ.

ಮತ್ತೆ ಮೌನ.

'ಪ್ರೀತಿಸೂದs ಬ್ಯಾರೆ, ಮದುವಿ ಆಗೂದs ಬ್ಯಾರೆ'–ಅವನ ಮಾತು ನನಗೆ ಬರೋಬರಿ ಅನಿಸಿತಾದರೂ ಅವನು ಹೇಳಿದ ತನ್ನ ಎರಡು–ಮೂರು ಪ್ರೀತಿಗಳ ಅರ್ಥ ಮಾತ್ರ ನನಗೆ ಸ್ಪಷ್ಟವಾಗಲಿಲ್ಲ. 'ಒಬ್ಬರಲ್ಲೇ ಪ್ರೀತಿಯ ಎಲ್ಲ ಮುಖಗಳನ್ನೂ ಕಾಣಲೂ ಸಾಧ್ಯವಾಗದಾದಾಗ ಎರಡು—ಮೂರು ಪ್ರೀತಿಗಳು ವಾಸ್ತವವಾಗುತ್ತವೆ' ಎನ್ನುವ ಅವನ ಮಾತು 'ಖರೆ' ಅನಿಸಿ ರದಿದ್ದರೂ 'ಇರಬೇಕು' ಅಂದುಕೊಂಡಿದ್ದೆ. ಮುಂದೆ, ಅವನು ತನ್ನನ್ನು ಸಮರ್ಥಿಸಿಕೊಳ್ಳಲು ಹೇಳಿದ್ದ ಈ ಮಾತು, ಒಂದು ಥರ ಡಿಫೆನ್ಸ್ ಮೆಕ್ಯಾ ನಿಜಂದಂತೆ ಸ್ವಾಸ್ಥ್ಯ ಸಮತೋಲನದ ದೃಷ್ಟಿಯಿಂದ ಸಹಜ ಸಮರ್ಥನೀಯ ವೆಂಬುದನ್ನು ಕಂಡುಕೊಂಡೆ.

ಅವನು ಬಯಸುವ ಸಂಪೂರ್ಣ ಪ್ರೀತಿಯೂ ನನ್ನಲ್ಲೇ ಅವನಿಗೆ ಸಿಕ್ಕರೆ....ಅನಿಸಿದಾಗ ಮೊಟ್ಟಮೊದಲ ಬಾರಿಗೆ ಮೈತುಂಬ ಎಂಥದೋ ಪುಳಕ !

ಹಿಂದೆ ಸರಿದು ಬೊಡ್ಡೆಗೆ ಆತು ಕುಳಿತೆ.

"ಇನ್ನೂ ಸ್ವಲ್ಪ ಹೊತ್ತು ಕೂಡ್ರೂಣs ?"

"ಹೂಂ, ಇನ್ನೇನು ಹೊರಟs ಬಿಡೂಣಲ್ಲಾ."

ವ್ಯಾನಿಟಿ ಬ್ಯಾಗಿನಿಂದ ಪಾಪಿನ್ಸ್ ಹೊರತೆಗೆದು ಬಿಚ್ಚಿ ಅಂಗೈಯ ಲ್ಲಿಟ್ಟು ಅವನೆದುರು ಚಾಚಿದೆ.

"ಅಷ್ಟೂ ನನಗ್ಯಾ ?" ಅನ್ನುತ್ತ ಎರಡು ಮೆಜೆಂಟಾ ಬಣ್ಣದವನ್ನೇ ಆಯ್ದುಕೊಂಡ. ಒಂದನ್ನು ತನ್ನ ಬಾಯಲ್ಲಿ ಹಾಕಿಕೊಳ್ಳುತ್ತ ಎದ್ದು ನಿಂತು, ಇನ್ನೊಂದನ್ನು ನನ್ನೆಡೆಗೆ ಚಾಚಿದ. ನನಗೆ ಮಜಾ ಚೆಂದ ಅನಿಸಿ ನನ್ನ ಎರಡೂ ಕೈ ಬಳಸಿ ಅವನ ಅಂಗೈ ಹಿಡಿದು ಎದ್ದು, ಬಲಗೈಯಿಂದ ಆ ಪಾಪಿನ್ಸ್ ಎತ್ತಿ ಬಾಯಿಗಿಟ್ಟುಕೊಂಡೆ.

ಸಾವಕಾಶ ನಡೆದೆವು. ತಾನು ಓದಿದ್ದ ಮರಾಠಿ ಕಥೆಯೊಂದನ್ನು ಹೇಳತೊಡಗಿದ. ಕೇಳುವ ನನ್ನ ಆಸಕ್ತಿ ಹೇಳುವ ಅವನ ಆಸಕ್ತಿಯನ್ನು ದ್ವಿಗುಣಿಸಿತ್ತು. ನಡುನಡುವೆ ಕಥೆ ನನ್ನನ್ನೇ ಸುತ್ತುತ್ತಿದೆ ಅನಿಸಿದಾಗ ಅವನ ಕಣ್ಣುಗಳಲ್ಲೇ ಹುಡುಕುತ್ತಿದ್ದೆ.

ನಾವು ಪೂರ್ತಿ ಗುಡ್ಡ ಹತ್ತಿದಾಗ ಉಳಿದವರೆಲ್ಲ ಇಳಿಯುವ ಸನ್ನಾಹ ದಲ್ಲಿದ್ದರು. ಕೆಲವು ವಿಶೇಷ ನೋಟಗಳು. ಪಿಸಿಪಿಸಿ ಶಬ್ದಗಳು, ನೇರ ಚೇಷ್ಟೆಗಳು ನಮ್ಮನ್ನು ಸ್ವಾಗತಿಸಿದವು.

ಸುತ್ತಲೂ ದಿಟ್ಟಿಸಿದೆ. ಅವನು ನನಗೆ ಸಮೀಪ ಬಂದು ನಿಂತ. ಮಾತು ಬೇಕಿರಲಿಲ್ಲ. ದೂರದಲ್ಲಿ ಕಾಣುವ ಮನೆಗಳು ಕಡ್ಡೀ ಪೆಟ್ಟಿಗೆಗಿಂತ ಚಿಕ್ಕವು....ಹೊಲಗಳೆಲ್ಲ ಕುಂಟಲಪಿಗೆ ಕೊರೆದ ಮನೆಗಳು....ಹರಿಯುತ್ತಿರುವ ಹೊಳೆ ಕಾಣುತ್ತಲೆ ಅದನ್ನು ತೋರಿಸಿ, "ಅಲ್ಲಿ ಹೋಗಿ ಕೂಡ್ರೂಣ್ರಾ ?" ಅಂದೆ. "ಹೂಂ" ಅಂದು ನಗುತ್ತ ಅವನು ಪಕ್ಕದ ಕಲ್ಲಿನ ಮೇಲೆ ಕುಳಿತ. ನಾನೂ ಅವನ ಮಗ್ಗುಲಲ್ಲಿ ಕುಳಿತೆ.

ಅವನ ಕಡೆ ಹೊರಳಿದಾಗ ಅವನು ಸ್ತಬ್ಧನಾಗಿ ನನ್ನನ್ನೇ ದಿಟ್ಟಿಸುತ್ತಿ ರುವುದು ತಿಳಿದು ಒಂದು ಥರಾ ಅನಿಸಿತು. ತಮ್ಮ ಇಡೀ ಮೈಯನ್ನು ಕಣ್ಣಾಗಿಸಿಕೊಂಡು ನನ್ನ ಉಬ್ಬು–ತಗ್ಗುಗಳನ್ನೆಲ್ಲ ಅಳತೆ ಮಾಡುವ ಸಜಿದ್, ವಿಶ್ವ, ಶರತ್, ಇನ್ನೂ ಯ್ಯಾರ್ಯಾರೊ.........ಇಲ್ಲ, ಅವರ ಕಣ್ಣಲ್ಲಿಯ ಚುಚ್ಚುವಿಕೆ ಇವನ ಕಣ್ಣುಗಳಲ್ಲಿಲ್ಲ. ಇದು ಒಂದು ರೀತಿಯ ಆರಾಧನೆ.

ಲಕ್ಷ್ಯ ಬದಲಿಸಲು, "ಹುಂ, ಕಥಿ ಅರ್ಧಾನ ಆತಲ್ಲ....?" ಅಂದೆ. "ಅಂ ! ಹೌದಲ್ಲs" ಎನ್ನುತ್ತ ನನ್ನ ಕಡೆ ಮುಖಮಾಡಿ ಕುಳಿತ. "ಕೆಲವು ವಿಮರ್ಶಕರು ಆ ಕಥಾನಾಯಕಿಯಂಥಾ ಹೆಣ್ಣು ಇರೂದs ಸಾಧ್ಯಿಲ್ಲಾ ಅಂತ ಬರದಾರ. ಆದ್ರು ನಿಮ್ಮ ನೋಡತಿರಬೇಕಾದ್ರು ಅದು ಸಾಧ್ಯ ಅನಸ್ತದ ........" ಅವನು ಪ್ರಾಮಾಣಿಕನಾಗಿ ಹೇಳುತ್ತಿರುವ ರೀತಿ, ಅನಿಸಿಕೆಗಳನ್ನು ಅನಿಸಿಕೊಂಡು ನನಗಾದ ಖುಷಿ......

ನೇರವಾಗಿ ನಡೆಯುವ, ನಡೆದದ್ದಕ್ಕಾಗಿ ಚಿಂತಿಸದ, ವ್ಯಥಿಸದ ಆ ಕಥಾನಾಯಕಿ ತನ್ನ ಪ್ರಾಮಾಣಿಕ ಸಹಜ ಅನಿಸಿಕೆಗಳನ್ನು ಕೃತಿಯಾಗಿಸುವ ಸಾಮರ್ಥ್ಯ ಹೊಂದಿದ್ದಳು. ಅವಳ ನಿರ್ಭೀತ, ನಿರ್ಭಿಡೆಯ, ನಿಸ್ಸಂಕೋಚ ಪ್ರವೃತ್ತಿಯನ್ನು ಅವನು ವಿಶ್ಲೇಷಿಸುತ್ತಿದ್ದುದನ್ನು ಕೇಳಿ ಸ್ತಬ್ಧಳಾದೆ.

ನನ್ನನ್ನು ಯಾರೂ ಅರ್ಥಮಾಡಿಕೊಳ್ಳುವುದಿಲ್ಲ ಎಂಬ ನೋವು ಇಷ್ಟು ದಿನಗಳಿಂದ ನನ್ನನ್ನು ಕೊರೆಯುತ್ತಿದ್ದುದು ಈಗ ಇವನ ಸಾಮೀಪ್ಯ ದಲ್ಲಿ ಸಾವಕಾಶ ಕರಗತೊಡಗಿತ್ತು. ಬದುಕಿನಲ್ಲಿ ಇದ್ದದ್ದನ್ನು, ಲಭಿಸಿದ್ದನ್ನು ಪೂರ್ತಿಯಾಗಿ ಹೀರಬೇಕೆಂಬ ಆಶೆ ನನ್ನನ್ನು ತುಂಬಿಕೊಂಡಿತ್ತು. ಇಲ್ಲದ್ದಕ್ಕಾಗಿ ಕಳೆದದ್ದಕ್ಕಾಗಿ ಬೆನ್ನುಹತ್ತುವುದು ಅರ್ಥಹೀನವೆಂದು ತಿಳಿದಿತ್ತು. ಆದರೆ ಈಗ ಇದೆಲ್ಲ ಇಲ್ಲದ್ದಲ್ಲ, ಕಳೆಯುವಂಥದಲ್ಲ' ಎಂದು ಏಕಾಏಕಿ ಅನಿಸ ತೊಡಗಿತ್ತು.

ನಾನು....ಅವನು...ಯಾರ ಸಮೀಪ ಯಾರು ಸರಿಯುತ್ತಿದ್ದೇವೆ ?

ಅವನ ಕಥೆ ಮುಂದುವರೆಯಿತು, ಮುಗಿಯಲಿಲ್ಲ.

...ಹೆಂಡತಿ, ಅವಳ ವಿಚಿತ್ರ ಸ್ವಭಾವ, ನಡತೆ, ತಾನು ಗಂಡಸ ಕರ್ತವ್ಯ ನಿಭಾಯಿಸುತ್ತಿರುವುದು, ಮಾತಿಲ್ಲದೆ ಮನೆ...ಇದೆಲ್ಲವನ್ನೂ ಸಹಿಸಿ ಆಗೀಗ ಕಥೆ-ಕವನಗಳನ್ನು ಬರೆದು ಸಂತೈಸಿಕೊಳ್ಳುತ್ತಿರುವುದನ್ನು ಕೇಳಿ ನನ್ನ ಕಣ್ಣು ಹನಿದುಂಬಿದ್ದವು.

ಅವನ ತಲೆಯನ್ನು ನನ್ನೆದೆಯಲ್ಲಿ ಹುದುಗಿಸಿಕೊಂಡುಬಿಡುವ ಇಚ್ಛೆ ನನ್ನಲ್ಲಿ ಚಿಗುರೊಡೆಯುತ್ತಿದ್ದಂತೆಯೇ ಹತ್ತಿರ ಸರಿದು ಅವನೇ ಕಣ್ಣೀರು ಒರೆಸಿದ. ಒಮ್ಮೆಲೆ ಬಗ್ಗಿ ನನ್ನ ಹಣೆಗೆರೆಯನ್ನು ಚುಂಬಿಸಿದ. ಅವಾಕ್ಕಾದೆ.

ನನ್ನ ಸಂಕೋಚಕ್ಕೆ ಎಡೆಗೊಡದೆ ಕೈ ಹಿಡಿದು ಎಬ್ಬಿಸಿ ತನ್ನ ಬಲಗೈ ಯಿಂದ ನನ್ನ ನಡ ಬಳಸಿ ನಡೆಯತೊಡಗಿದ. ಅಷ್ಟು ದಿನಗಳಿಂದ ನಮ್ಮ ಸ್ನೇಹವಿದ್ದರೂ ನಾವು ಎಂದೂ ಇಷ್ಟು ಸಮೀಪ ಬಂದಿರಲಿಲ್ಲ. ಹಾಗೆಂದು ಈಗ ಮುಜುಗರವೆನಿಸಲೂ ಇಲ್ಲ.

ನಡೆಯುತ್ತ ಸುಮ್ಮನೆ ನಿಂತೆ.

"ಯಾಕ, ಇನ್ನೂ ದಣಿವ ಅನಸಲಿಕ್ಕೆ ಹತ್ಯದೇನು ?" ಎನ್ನುತ್ತ ನನ್ನ ತಲೆಯನ್ನು ತನ್ನ ಎದೆಗಾನಿಸಿಕೊಂಡ. ನಾನು ಕಣ್ಣು ಮುಚ್ಚಿದೆ. ಮೆಲ್ಲಗೆ ಕೂದಲಲ್ಲಿ ಬೆರಳಾಡಿಸಿದ.

"ಇನ್ನೊಂದು ಸ್ವಲ್ಪ ಹೊತ್ತು ಕೂಡ್ರೂಣೇನು ?" ಮತ್ತೆ ಅವನದೇ ಮಾತು.

ನಾನು ಗೋಣು ಅಲ್ಲಾಡಿಸಿದೆ.

ಆಗಲೇ ಗುಡ್ಡದ ಅರ್ಧದಷ್ಟು ಇಳಿದಿದ್ದೆವು. ನನಗೆ ಅರಿವಿರದೆ ನನ್ನ ಎಡಗೈ ಅವನ ಬೆನ್ನನ್ನು ಸುತ್ತುವರೆದಿತ್ತು. ಮನಸ್ಸು, ದೇಹಗಳೆರಡಕ್ಕೂ ಆಧಾರ ಪಡೆದ ತೃಪ್ತಿ ನನ್ನನ್ನು ನಿಧಾನವಾಗಿ ಮುಂದೆ ಒಯ್ಯತೊಡಗಿತ್ತು.

ನಮ್ಮ ಮಾತು ಅವನ ಬರವಣಿಗೆಯ ಕಡೆಗೆ ತಿರುಗಿತ್ತು. ಆ ವಿಷಯ ದಲ್ಲಿ ಅವನಿಗೆ ಸಮಾಧಾನವಿದ್ದಂತೆ ತೋರಲಿಲ್ಲ. ಅವನ ಕಥೆ–ಕವನಗಳಲ್ಲಿ, ನನಗೆ ಸೇರಿದ್ದು, ಸೇರದ್ದರ ಬಗ್ಗೆ ಹೇಳಿದೆ. ಒಪ್ಪಿಕೊಳ್ಳುತ್ತ, ಇನ್ನೂ ಹೆಚ್ಚು ಚೆಂದಾಗಿ ಏನಾದ್ರೂ ಬರೀಬೇಕು ಎನ್ನುವಂತೆ ಗುನುಗುನಿಸಿದ.

"ನಿಮ್ಮ ಸ್ವಡೀಜ್ ಭಾಳ ಹೆವಿಆಗ್ತಿರ ಬೇಕಲ್ಲಾ?" "ಹೂಂ, ಸರ್ಜರಿಯೊಳಗ ಮಾಸ್ಟರ್ಸ್ ಡಿಗ್ರಿ ಅಂದ್ರ ಆಗೂದನs. ಅದರಾಗ ನಮ್ಮ ಬಾಸ್ ಭಾಳಸ್ಟ್ರಿಕ್ಟ್"—ತನ್ನ ಕೆಲಸ, ಬಾಸ್, ಎಮ್. ಎಸ್. ಕೋರ್ಸ್, ಬಗ್ಗೆ ಹೇಳತೊಡಗಿದ. "ಇಷ್ಟೆಲ್ಲಾ ಇದ್ರೂ ನೀವೆಷ್ಟು ಬರದೀರೆಲ್ಲಾ ಇತ್ಯಾದಿಗಳ ಆದೇನ ಸಣ್ಣ ಮಾತs ?"

ಆವನು ನಿಟ್ಟುಸಿರುಬಿಟ್ಟ.

"ಖರೆನs ನನ್ನ ರೈಟಿಂಗಿಗೆ ಒಂದು ಆಸರೆ ಇದ್ರ ನಾ ಏನೆಲ್ಲಾ ಬರೀಬಹುದಿತ್ತು...ಆದ್ರ..." ತಕ್ಷ ತಡೆದು ತಾನೇ ಮುಂದುವರೆಸಿದ. "ನನಗ ಈಗ ಅನಸಲಿಕ್ಕೆ ಹತ್ಯಾದ, ಸುಮೀ...ನೀ..." ಎನ್ನುತ್ತ ತಡವರಿಸಿ, ಮತ್ತೆ ಒಮ್ಮೆಲೆ "ನೀ ನನಗ ಆಸರ ಆಗಬಲ್ಲಿ. ಹೌದು ನನಗ ನಿನ್ನ ಆಸರಬೇಕು" ಎಂದು ಭಾವಪರವಶನಾಗಿ ಹೇಳಿ ಥಟ್ಟನೆ ನಿಂತು ನನ್ನನ್ನೇ ನೆಟ್ಟ ದೃಷ್ಟಿಯಿಂದ ನೋಡತೊಡಗಿದ.

ನನ್ನ ಕಣ್ಣುಗಳಲ್ಲಿ ಅವನನ್ನು ಪೂರ್ಣ ತುಂಬಿಕೊಳ್ಳುವಂತೆ ನೋಡಿ ತೃಪ್ತಿಯಿಂದ ಕಣ್ಣು ಮುಚ್ಚಿದೆ. ಆತ ನನ್ನನ್ನು ಸಂಪೂರ್ಣವಾಗಿ ಬಳಸಿಬಿಟ್ಟಿದ್ದ.

ಕಣ್ಣು ತೆರೆದಾಗ ಅವನ ಕಣ್ಣುತುಂಬ ಮಾತು, ತುಟಿತುಂಬ ನಗು. ಕರ್‌ಚೀಫಿನಿಂದ ತುಟಿ ಒರೆಸಿಕೊಂಡೆ. ಹೊಳೆಯುತ್ತಿದ್ದ ಅವನ ಕಣ್ಣು ಮ್ಮೆಲೆ ಮಂಕಾದವು. "ಹಂಗ ಒರಿಸಿಕೋಬಾರ್ದಲ್ಲs ?" ಮದುವೆಯಾಗಿ ಅಂದ. ಹೌದೆನಿಸಿತು, ನನ್ನ ತುಟಿಗಳು ತಪ್ಪು ತಿದ್ದಿಕೊಂಡವು.

ನಾವು ಕೆಳಗಿಳಿದು ಬಂದು ಉಳಿದವರನ್ನು ಕೂಡಿಕೊಳ್ಳುವಾಗ ದೂರ ದಿಗಂತದಲ್ಲಿ ಮುಳುಗುತ್ತಿದ್ದ ಸೂರ್ಯ ಸೌಂದರ್ಯ ನನ್ನ ಕಣ್ಣ ಗರ್ಭದಲ್ಲಿ ಶಿಶುವಾಗಿ ನಗುತ್ತಿತ್ತು.

'ಶನಿವಾರ ಪಣಜಿಗೆ ಹೋಗೋಣ, ನಿಮ್ಮ ಕಾರಿನಲ್ಲಿ. ಹೂಂ ಅನ್ನಿ,—ಈ ಒಂದು ವಾಕ್ಯ ಅವನಿಗೆ ಮುಟ್ಟಿಸಲು ಎರಡು ದಿನ ಕಾಯ್ದಿದ್ದೆ.

ಅವತ್ತು ಅವನ ಡ್ಯೂಟಿ ಓ.ಪಿ.ಡಿ.ಯಲ್ಲಿತ್ತು ನಾನೇ ಹೋಗಿ ಚೀಟಿ ಅವನೆದುರಿಗಿಟ್ಟೆ.

ಓದಿ ಒಮ್ಮೆಲೇ ಗಾಬರಿಯಾದಂತಾಗಿ. ಇದೆಲ್ಲ ಏನು ಅನ್ನುವಂತೆ ಪಿಳಿ ಪಿಳಿ ನೋಡಿದ.

'ಎಲ್ಲಾ ಸಾಧ್ಯ'ವೆಂದು ನನ್ನ ಕಣ್ಣುಗಳೇ ತಿಳಿಸಿ ಹೇಳಿದವು. 'ಹೂಂ ಅವತ್ತ ಹನ್ನೊಂದಕ್ಕೆ ಬಸ್‌ಸ್ಟ್ಯಾಂಡಿನೊಳಗಿರು'—ಪ್ರಿಸ್ಕ್ರಿಪ್ಶನ್‌ದಲ್ಲಿಯೇ ಅವನು ಬರೆದು ನನ್ನ ಮುಂದೆ ಸರಿಸಿದ ಒಂದು ಸಾಲು.

ಪಣಜಿ ತಲುಪಿದಾಗ ಗಂಟೆ ಐದಾಗಿತ್ತು.

'ಟೂರಿಸ್ಟ್'ದ ರೂಮೊಂದರಲ್ಲಿ ನಮ್ಮ ಸೂಟ್‌ಕೇಸ್ ಒಗೆದು ಮುಖ ತೊಳೆದು ಬಟ್ಟೆ ಬದಲಿಸಿ ಬೀಚ್ ಕಡೆಗೆ ಹೊರಟೆವು.

ಮಾಂಡವಿಯ ದಂಡೆಗುಂಟ ನೇರವಾಗಿ ಮೈ ಚಾಚಿ ಬಿದ್ದ ಪಣಜಿಯ ಏಕಮಾತ್ರ ಮುಖ್ಯ ಮಾರ್ಗದ ಆಚೆ ತುದಿಯೇ ಮಿರಾ ಮಾರ್ ಬೀಚ್.

ಆಯಸ್ಕ್ರೀಮ್ ತಿನ್ನುತ್ತ, "ಸುಮೀ ನಿನ್ನಿಂದ ನಾ ಹತ್ತು ವರ್ಷ ಸಣ್ಣಾಂವ ಆಗೇನಿ" ಅನ್ನುವಾಗ ಅವನ ಕಣ್ಣುಗಳಲ್ಲಿ ಮೂಡಿದ್ದ ನಾನು ಸ್ಪಷ್ಟವಾಗಿದ್ದೆ.

ಉಸುಕಿನಲ್ಲಿ ಆಟವಾಡುತ್ತಿದ್ದ ಮಕ್ಕಳು, ಅಲೆಯುತ್ತಿದ್ದ ಜೋಡಿ ಗಳ ಬಣ್ಣಗಳೆಲ್ಲ ಅವನ ರಿಕ್ತನೋಟದಲ್ಲಿ ಸೇರಿ ಕೇವಲ ಸಮುದ್ರದ ದಟ್ಟ ನೀಲಿ ನುಡಿಯುತ್ತಿತ್ತು.

"ಹೆಂಡತಿನ್ನ ಪ್ರೀತಿ ಮಾಡೂದs ಬ್ಯಾರೆ. ಪ್ರೀತಿನ್ನ ಮದುವಿ ಆಗೂದs ಬ್ಯಾರೆ. ಇದೆಲ್ಲ ನನಗ ಈಗ ಅನಸಲಿಕ್ಕೆ ಹತ್ಯದ. ನನ್ನ

ವಿಷಯಕ್ಕಿಂತೂ, ಖಾಲಿಪುಕ್ಕಟ ಕಾಮ, ಆಕರ್ಷಣೆ ಇತ್ಯಾದಿ ಹೊಲಸನ ಮದುವೀ ಸಂಗಾತಿ ಇಳಿಜಾರಿನ ಗುಂಟ ಹರಿಸಿ ಒಗದು ಶುದ್ಧ ಆಗಿ, ಶುದ್ಧ ಮನಸ್ಸಿನಿಂದ ಪ್ರೀತಿ ಆಗಬಹುದು. ಆಗಬೇಕು..."

ನನಗೆ ಸಹಿಸಲಾಗದ ಭಾರ ಈ ಪ್ರಾಮಾಣಿಕತೆ, ಅವನ ಭಾವಗಳು ನನ್ನ ಕಣ್ಣುಗಳಲ್ಲಿ ಅನುವಾದಗೊಂಡು ರೆಪ್ಪೆಗಳ ಗುಂಟ ಗೀತವಾಗುತ್ತ ಹನಿಗೊಂಡವು.

ಸಮುದ್ರದ ಅಂಚಿಗೆ ಬಂದು ನಿಂತೆ. ಅಲೆಗಳು ಕುಣಿಯುತ್ತ ನನ್ನ ಪಾದಗಳನ್ನಪ್ಪಿ ಅಡಿಯ ಉಸುಕನ್ನು ಮೆಲ್ಲಗೆ ತೀರ ಮೆಲ್ಲಗೆ ತಮ್ಮೊಡನೆ ಎಳೆದುಕೊಂಡು ಹೋದಾಗ ನಾನು ಅವನೊಂದಿಗೆ ಜಾರುತ್ತಿರುವಂತೆ, ಸ್ಥಿರತೆ ಸಡಿಲಾದಂತೆ.......

ಅವನು ಸಮುದ್ರದ ಅಲೆ.

ಹೌದು, ಪ್ರತಿಯೊಂದು ಸಲದ ಅವನ ಅಪ್ಪುಗೆಯಲ್ಲಿ ನಾನು ಒಂದು ಥರ ಶಿಥಿಲಗೊಳ್ಳುತ್ತಿರುವಂತೆ, ಸಂಪೂರ್ಣವಾಗಿ ಸೋಲುತ್ತಿರುವಂತೆ...

ಹೊರಳಿ ನೋಡಿದೆ. ಅವನ ಮುಖದ ತುಂಬ ಸಂಜೆ ಸೂರ್ಯ !

* * * *

ಕಣ್ಣು ತೆರೆದಾಗ ಬಿಸಿಲು ಕಿಟಕಿಯೇರಿ ಕುಳಿತಿತ್ತು. ಪಕ್ಕದಲ್ಲಿ ಅವನ ಪ್ರಸನ್ನ ಮುಖ. ಆ ಪ್ರಸನ್ನತೆಗೆ ನಾನು, ಹೌದು ನಾನೇ ಕಾರಣವೆನಿಸಿದಾಗ ಜೀವನ ಸಾರ್ಥಕಗೊಳ್ಳುವುದು ಎಂದರೆ ಇದೇ ಇರ ಬೇಕು ಅನಿಸಿತು.

ನಾನು ನಾನಾಗಿ ಉಳಿದಿಲ್ಲ. ಈ ಸಮರ್ಪಣೆಯೇ ಮುಕ್ತಿ.

ನಾನು ಮುಕ್ತಳು.

ರಾತ್ರಿ ನೆನಪಾಗಿ ದಿಂಬಿನಲ್ಲಿ ಮುಖ ಹುದುಗಿಸಿದೆ. ನನ್ನ ಮೈ ತುಂಬ ಅವನ ತುಟಿ.

ನಾನೇ ಮೊದಲು ಎದ್ದದ್ದು ಛಲೋ ಆಯಿತೆಂದುಕೊಂಡು ಬಾಥ್‌ರೂಮಿಗೆ ಹೋಗಿ ಬಂದು, ಮತ್ತೆ ಅವನ ಪಕ್ಕದಲ್ಲಿ ಉರುಳಿಕೊಂಡೆ ನಿದ್ದೆಗಣ್ಣಿನಲ್ಲೇ ಅವನ ನನ್ನನ್ನು ಎಳೆದುಕೊಂಡ.

ನಾನು ಸಾವಕಾಶವಾಗಿ ಹೊರಳಿ ಅಂಗಾತ ಮಲಗಿದೆ. 'ದೇವರು, ಅವ್ವ ನಮಗ ಜೀಂವಾ ಕೊಟ್ಟಿರತಾರ ಅಂತ ನಾವು ಅವರಿಗೆ ಋಣಿ ಯಾಗಿರ್‍ತೀವಿ. ಮತ್ತ ನೀನು....ನೀ ನನಗ ಜೀವಾನ ಕೊಟ್ಟಿ. ನಿನ್ನ ಋಣಾ ನಾ........' ತುಂಬಿ ಹೇಳಿದ್ದ, 'ನಾ ಬದುಕೇನಿ ನಿಮ್ಮಿಂದ, ಮಾತ್ರ.' ಎಂದು ಹೇಳಬೇಕಿದ್ದ ನನ್ನ ಮಾತುಗಳನ್ನು ಅವನ ತುಟಿಗಳು ನಿಃಶಬ್ದವಾಗಿ ಹೀರಿಕೊಂಡಿದ್ದವು.

'ಎಷ್ಟೋ ಸುತ್ತಿ ನಾವು ಒಬ್ಬರ ಮಾತ ಒಬ್ಬರು ಕಸಗೊಂಡ ಮಾತಾಡ್ತೇವಿ. ಅಲ್ಲs ? ಅವನು ಹೇಳಿದ್ದು, ಖರೆ.

'ಜೀವನಾ ಪಡಿಯೂದರಕಿಂತಾ ಜೀವನಾ ಕೊಡೂದರಾಗ ಎಂಥಾ ತೃಪ್ತಿ ಇರ್‍ತದಲ್ಲಾ! ಇಂಥಾ ತೃಪ್ತಿ ಎಷ್ಟು ಹೆಣ್ಣಿಗೆ ಸಿಕ್ಕೀತು !'

ಈಗ ಅವನು ನನ್ನನ್ನು ತನ್ನೆಡೆಗೆ ಎಳೆದುಕೊಂಡಾಗ ಅವನಿಗೆ ಪೂರ್ತಿ ಎಚ್ಚರಾಗಿತ್ತು. ಒಂದೇ ಸಮನೆ ನನ್ನ ಹಣೆಗೆ ಮುತ್ತಿಟ್ಟು ನನ್ನನ್ನೇ ನೋಡತೊಡಗಿದ. ನನಗೆ ಲಜ್ಜೆಯೆನಿಸಿ ಅವನೆದೆಯಲ್ಲಿ ಮುಖ ಅಡಸಿದೆ.

"ಇಲ್ಲಿ ನೋಡಿಲ್ಲೆ ಸುಮೀ......" ಗದ್ದ ಹಿಡಿದು ಬಲವಂತದಿಂದ ಮುಖ ಮೇಲೆತ್ತಿದ.

"ನನ್ನ ಕ್ಷಮಿಸಿಬಿಡು, ನಿನಗ ಬ್ಯಾಡ ಅನಿಸಿದ್ದು ಏನರ ನಡದಿದ ನನ್ನ ಕ್ಷಮಿಸು ಸುಮೀ .. ...."

ಮೆತ್ತಗೆ ಮುತ್ತಿಸಿ ಮೇಲೆದ್ದೆ.

o o o o

ಸ್ನಾನ ಮುಗಿಸಿ ಬಂದಾಗ ಅವನು ಏನೋ ಬರೆಯುತ್ತಿದ್ದ.

ಪಕ್ಕದ ಬೆತ್ತದ ಕುರ್ಚಿಯಲ್ಲಿ ಸುಮ್ಮನೆ ಕುಳಿತೆ.

'ಕ್ಷಮಿಸು'ವ ಮಾತು ನೆನಪಾಯಿತು.

ಒಮ್ಮೆ ಆವನು ನನ್ನ ಬದುಕಿನ ಬಗ್ಗೆ ಏನೇನೊ ಹೇಳುತ್ತ 'ನನ್ನ ಬಗ್ಗೆ ಕಾನ್‌ಫಿಡೆನ್ಸ್ ಉಳಿದಿದ್ರೆ ನನ್ನ ಮಾತು ಕೇಳು' ಅಂದಾಗ, ಆ ಮಾತು ನನಗೆ ತೀರ ನಾಟಕೀಯವೆನಿಸಿ, ಕಾನ್‌ಫಿಡೆನ್ಸ್ ಪ್ರಶ್ನೆಯೇ ಅನುಚಿತವಾಗಿದ್ದರಿಂದ, ಮನಸ್ಸಿನ ವ್ಯಗ್ರತೆಯಲ್ಲಿಯೇ 'ಇದ್ರಲ್ಲಾ ಉಳಿಯೂದು?' ಅಂದಿದ್ದೆ. ಒಮ್ಮೆಲೆ ಅವನ ಮುಖದಲ್ಲಿ ಕಂಪಕ ಕಂಡಿತ್ತು. ಮತ್ತೆ ಎಂಟು ದಿನಗಳ ನಂತರ ವಾರ್ಡಿನ ರೌಂಡ್ಸ್‌ಗೆ ಅವನು ಬಂದಾಗ, 'ನನ್ನ ಕ್ಷಮಿಸಬೇಕು ಅನಿಸಿದ್ರೆ..., ಕ್ಷಮಿಸಿದ್ರೆ ನನಗೆ ಹೇಳ್ರಿ' ಅನ್ನುವಷ್ಟರಲ್ಲಿ ನನಗೆ ರಗತ್ವಡ ಆಗಿತ್ತು. ನಾನು ಈ ಮೊದಲು ಯಾರಿಗೂ ಹಾಗೆ ಕೇಳಿದ್ದಿಲ್ಲ. ಮುಂದೂ ಕೇಳಲಿಕ್ಕಿಲ್ಲ. ಕೇಳಲಾರೆ.

'ನಮ್ಮಲ್ಲೆ ಕ್ಷಮಿಸೂ ಪ್ರಶ್ನನ್ಯ ಇಲ್ಲಾ' ಅಂತ ಅವನು ಹೇಳಿದ್ದನ್ನು ಸಂಪೂರ್ಣವಾಗಿ ನಂಬಲಿಕ್ಕೇ ಆಗದೆ ನಾಲ್ಕು ದಿನ ಅವನಿಗೆ ಭೆಟ್ಟಿಯಾಗಿ ದ್ದಿಲ್ಲ ಕೂಡ.

'ನಾನು ನೀನು ಏನಾದರೂ ತಪ್ಪು (ಮಾಡಿದರೆ) ಮಾಡಿದಾಗ, ಅದು ತಿಳಿದಾಗ ನಮ್ಮ ನಮ್ಮನ್ನೇ ಸ್ವತಃ ಕ್ಷಮಿಸಿಕೊಳ್ಳೋಣ. ಒಬ್ಬರ ತಪ್ಪು ಇನ್ನೊಬ್ಬರು ಕ್ಷರುಸಿ, ಒಬ್ಬರು ದೊಡ್ಡವರಾಗಿ ಇನ್ನೊಬ್ಬರನ್ನು ಸಣ್ಣವರನ್ನಾಗಿಸುವ ಪದ್ಧತಿ ಬೇಡ. ನಾವು ಮಾಡುವ ತಪ್ಪು ನಮಗಿ ಬ್ಬರಿಗೂ ತಿಳಿದಾಗ ನಮ್ಮನ್ನೇ ಪರಸ್ಪರ ಇನ್ನೂ ಹೆಚ್ಚು ಆತ್ಮೀಯತೆಯ. ಪ್ರೀತಿಯ ದೃಷ್ಟಿಯಿಂದ ನೋಡುವ ಹಾಗೂ ನಡೆಸಿಕೊಳ್ಳುವ ಶಕ್ತಿಯನ್ನು ಸಂಪಾದಿಸಿಕೊಳ್ಳೋಣ ಆದರೂ ನಾನೂ ಕ್ಷಮಿಸಬೇಕೆಂದು ನಿನಗನಿಸಿದರೆ ಹಾಗೆ ಮಾಡಿದ್ದೇನೆ. ಯಾಕೆಂದರೆ, ನಾನು ಮಾಡುವ ಪ್ರತಿಯೊಂದು ತಪ್ಪನ್ನೂ ನೀನು ಕ್ಷಮಿಸಿದ್ದಿ ಎಂದು ನಾನು ಭಾವಿಸಿದ್ದೇನೆ. ಈ ಭಾವನೆ ಯಿಂದಾಗಿಯೇ ನಿನ್ನ ಕೂಡ ಇಷ್ಟೊಂದು ಸತ್ಯಾದಿಂದ ನಡೆದುಕೊಳ್ಳುತ್ತೇನೆ. ಬಿಳಿ ಹಾಳೆಯ ಮೇಲೆ ಮೂಡಿದ ಅವನ ಕೈ ಬರಹದ ಒಂದೊಂದು ಅಕ್ಷ ರವೂ ಸಾರ್ಥಕವಾಗಿ ನನ್ನೆದುರು ಬಿಚ್ಚಿಕೊಳ್ಳುತ್ತಿತ್ತು.

"ಸುಮೀ, ತುಗೋ ಇದನ್ನ. ನಾ ಜಳಕಾ ಮಾಡಿ ಬರಲ್ಯಾ?" ಅವನು ತಾ ಬರೆದ ಕಾಗದವನ್ನು ನನ್ನ ಕೈಯಲ್ಲಿಟ್ಟು ಬಾಥ್ ರೂಮಿಗೆ ನಡೆದಿದ್ದ.

"ನನ್ನ ಪ್ರೀತಿಯ ನಿನ್ನ
ಇಷ್ಟುದ್ದ ಕೂದಲಿನಾಣೆ
ನನ್ನ
ಹೆಗಲ ಮೇಲಿನ ನಿನ್ನ
ಹಲ್ಲಿನಾಣೆ
ನಿನ್ನ
ಹಣೆ ಗೆರೆಯಾಣೆ
ಬಲಗಾಲ
ಕರಿಚುಕ್ಕೆಯಾಣೆ
ಹುಚ್ಚೆಬ್ಬಿಸುವ ಬೆಳದಿಂಗಳ
ದಲ್ಲಿ ನಾ ನೀ
ನಕ್ಕ ನಗೆಯಾಣೆ
ಮಳಲಿನಲ್ಲಿ ನೀ
ಕುಣಿದ ಹೆಜ್ಜೆಯ ಆಣೆ
ಕಡಲ ತೆರೆ ತೆರೆ
ಯಂತೆ ಮಿಡಿದ ನನ್ನೆದೆಯಾಣೆ
ನಾ
ನಿನ್ನವ."

ರಾತ್ರಿ ಉನ್ನತ ಆನಂದದಲ್ಲಿ ಅವನ ಭುಜ ಕಡಿದದ್ದು ನೆನಪಾಗಿ ನಗು ಬಂತು.

'ನಾವು ಲಗ್ನಾಗಿ ಹತ್ತ ವರ್ಷ ಆದವರಂಗ ಆದೇವೆಲ್ಲಾ.' ನೆನಪಾಗಿ ರಾತ್ರಿ ಅವನು ನನ್ನ ಕಿವಿಯಲ್ಲಿ ಪೀಸುಗುಟ್ಟಿದ್ದು ಅವನ ಮಾತಾದರೂ ನನ್ನ ಅನಿಸಿಕೆ.

ಅವನ ತಂಪು ಭುಜಗಳೆರಡೂ ಕುರ್ಚಿಯ ಹಿಂದಿನಿಂದ ನನ್ನನ್ನು ಸುತ್ತಿಕೊಂಡಾಗ ಮುಖ ಮೇಲೆ ಮಾಡಿದೆ

ಊಟ ಮಾಡಿದ ಮೇಲೆ ಇಬ್ಬರಿಗೂ ನಿದ್ರೆಯ ಮಂಪರು. ಚಳಿ ಗಾಲವಾದರೂ ಪಣಜಿಯ ಸೆಕೆ ಕಡಿಮೆಯಿರಲಿಲ್ಲ.

ಸಂಜೆ ಮತ್ತೆ ಸಮುದ್ರದ ಇನ್ನೊಂದು ದಂಡೆ ದೋನಾಪೌಲಾ. ಅವನು ತನ್ನ ಬೂಟು ಕಳಚಿ ಕೈಯಲ್ಲಿ ಹಿಡಿದುಕೊಂಡ. ನಾನೂ ಚಪ್ಪಲಿ ತೆಗೆದಿಟ್ಟೆ. ಇಬ್ಬರೂ ಸಮುದ್ರದ ಗುಂಟ ಓಡಿದೆವು. ಓಡಿದೆವು ಬದು ಕೆಲ್ಲ ಹೀಗೆ ಓಡುತ್ತಿರಬೇಕು ಅನಿಸಿತು, ದಣಿದು ಕುಳಿತೆ. ಅವನೂ ಕುಳಿತ,

"ನಿನ್ನ ಮೈಯಾಗ ಸಮುದ್ರ ಉಕ್ಕಲಿಕ್ಕೆ ಹತ್ಯದ." ಅಂದ, ಅವನ ಕಣ್ಣು ನೋಡಿ ಸರಕ್ಕನೆ ಸೆರಗು ಮುಚ್ಚಿಕೊಂಡೆ, ದೂರ ವಾಸ್ಕೋ ಬಂದರ ಲಂಗರು ಹಾಕಿದ ಹಡಗುಗಳು ಸ್ಪಷ್ಟ ಕಾಣುತ್ತಿದ್ದವು. ಸೂರ್ಯ ಕೆಂಪಾಗಿ ಬಲಗಡೆ ಸಮುದ್ರನಂಚಿನಲ್ಲಿ ನಿಷಾಭಿಮುಖನಾಗಿದ್ದ, ನೀರಲ್ಲಿ ಕೆಂಪು, ಸಮುದ್ರ, ಸೂರ್ಯ, ಅವನು—ಯಾರನ್ನು ನೋಡುತ್ತಿರಲಿ? ಯಾರ ಸೌಂದರ್ಯ ಕಳೆದುಕೊಳ್ಳಲಿ?

ಆಕಾಶದ ತುಂಬ ನವ್ಯ ಕಲೆಗಳು. ಹಲವು ಹೆಸರಿಲ್ಲದ ಬಣ್ಣಗಳು, ನೂರೆಂಟು ಆಕಾರಗಳು! ಪ್ರಕೃತಿಯೆದುರು ಮನುಷ್ಯನ ಗಾತ್ರ ಎಷ್ಟು ಚಿಕ್ಕದು!

"ಸುಮೀ, ಇತ್ತಿತ್ತಲಾಗ ನಾ ಬರೆದ ಕವನಾ ಎಲ್ಲಾ ಕೂಡಿಸಿ ಒಂದು ಹೊಸಾ ಕಲೆಕ್ಶನ್ನ ಮಾಡತೇನಿ. ಅದಕ್ಕ ಏನಂತ ಹೆಸರಿಡಲೀ?....ಅದನ್ನ

ನಿನನಗ ಅರ್ಪಿಸಬೇಕಂತೆ ನನ್ನ ಇಚ್ಛಾ.....ಅದ್ರೆ ಹೆಂಗ? ಅದೇನರ ನನ್ನ ಹೆಂಡತೀಗೆ ಗೊತ್ತಾತು ಅಂದ್ರು ಮುಗಿತು. ಅದಕ್ಕ ಹಿಂಗ ಮಾಡ್ತೇನಿ, "ಟೂರಿಸ್ಟ್‌ದ ಹದಿನಾರನೇ ನಂಬರ್ ಕೋಣೆಗೆ ಅಂತ ನಿನನರ್ಪಸತೇನಿ, ಹುಂ ಹೌದು,"

ಅವನ ಮಾತಿಗೆ ನಾ ಬರೇ ನಕ್ಕೆ.

"ನೋಡು, ನಾನು ಎಂಥಾ ಹೇಡಿ ಅದೇನಿ. ನಿನಗೂ ಅನಸ್ತಿರಬೇಕಲ್ಲಾ? ಖರೆ, ನನಗೆ ಕೆಟ್ಟೆನಿಸಿತು.

"ಹೇಡಿ ಯಾಕ? ನಾವು ಹಂಗೇನಿಲ್ಲ. ಆಗೂದುನೂ ಇಲ್ಲ, ನಮಗ ಸಾಧ್ದಿಲ್ಲದ್ದನ್ನೂ ಸಾಧ್ಯ ಮಾಡ್ತೇವಲ್ಲಾ ಇಬ್ರೂ ಕೂಡಿ"

ಓಹ್! ಅವನ ಆಸೆ....ನನಗಾಗಿ ಅವನ ಆಸೆ .. ಅವನಿಗಾಗಿ ಅವನ ಆಸೆಗಾಗಿ ನನ್ನ ಆಸೆ! ಅವನಿಗೆ ನಾ ಬೇಕು. ನನಗೆ ಅವನು ಬೇಕು ಅವನ 'ಬೇಕು' ಬೇಕು.

ಮರುದಿನ ಮುಂಜಾನೆ ಇನ್ನೂ ನಸುಕಿನಲ್ಲಿಯೇ ಹೊರಡಬೇಕು ಎಂದು ಅವನು ಹೇಳಿದಾಗ ನನಗೆ ಅಳು ಬಂತು.

"ಹೋಗುವಾಗ ಬೆಳಗಾಂವಿ ಮ್ಯಾಲಿಂದ ಹೋಗೂಣು. ನಿನ್ನ ಅಲ್ಲಿ ಬಿಟ್ಟು ಹೋಗತೇನಿ,"

"ಬ್ಯಾಡಾ, ನನಗ ಅಲ್ಲಿ ಹೋಗಲಿಕ್ಕೆ ಮನಸ್ಸಿಲ್ಲ."

"ಹಂಗಂದ್ರ ಹೆಂಗ ಸುಮೀ, ಅಪ್ಪಾ, ಅವ್ವಾ, ಮನೀ ಸಲುವಾಗಿ ನಮ್ಮ ಡ್ಯೂಟಿ ಅಂತ ಒಂದ ಇರ್ತದ ನೋಡು, ಅದನ್ನ ತಪ್ಪಿಸಬಾರ್ದು. ನಾಲ್ಕೈದು ದಿವ್ಸ ಇದ್ದ ಬಾ."

ಚಿಕ್ಕಂದಿನಿಂದಲೂ ಹಾಸ್ಟೇಲ್‌ಗಳಲ್ಲಿಯೇ ಬೆಳೆದು ಈಗಲೂ ಅಲ್ಲಿಯೇ ಇರುತ್ತಿದ್ದ ನನಗೆ ಮನೆ, ಮರೆಮಂದಿ ಬಗ್ಗೆ ನನ್ನದು ಅನಿಸುವಂಥದ್ದೇನೂ ಇರಲಿಲ್ಲ,

ಕಾರು ಹೊರಟಾಗ ಮನಸ್ಸು ಬಹಳ ಉದಾಸವಾಗಿತ್ತು, ದಾರಿಯ ಘುಗ್ಗುಲೆಲ್ಲ ಮಸಕು ಮಸಕು. ಒಂದು ನಮೂನಿ ಜಡತ್ವ ನನ್ನನ್ನು ಆವರಿಸಿತ್ತು.

"ಬೆಳಗಾಂವಿ ಬಂತಂದ್ರ ನಾ ಯಾರೋ ನೀ ಯಾರೋ...." ಆವನ ಧ್ವನಿ ಕೇಳಿ, ಸ್ಟಿಯರಿಂಗ್ ಮೇಲೆ ಕೈಯಿಟ್ಟೆ.

"ಯಾಕ, ಕಾರ ನಿಲ್ಲಸಲೀ?"

"ಹಂಗಲ್ಲಾ....ಹಂಗಿದ್ರೆ ನಾವು ತಿರಗಿ ಹೋಗುದ ಬ್ಯಾಡಲ್ಲಾ."

ಬ್ರೇಕ್ ಹಾಕಿ ಒಂದು ಬದಿಗೆ ಕಾರು ನಿಲ್ಲಿಸಿ ನನ್ನನ್ನು ತನ್ನ ಭುಜಕ್ಕೆ ಒರಗಿಸಿಕೊಂಡ,

"ನಾ ಯಾರೋ ನೀ ಯಾರೋ"ಗುನುಗುಸಿದೆ.

"ಹಂಗಲ್ಲಾ ಸುಮೀ....ನೀ...ನಿನಗ, ಹೆಂಗ ಹೇಳ್ಲೀ..." ಅವನ ತೊಳಲಾಟ ನನ್ನದೂ ಆಯಿತು.

ಒಂದು ತಿಂಗಳ ನಂತರ ಅವನು ನನ್ನನ್ನು ಹುಡುಕಿಕೊಂಡು ಹಾಸ್ಟೆಲ್ಲಿಗೆ ಬಂದ, ಮೊದಲು ನನ್ನ ಆರೋಗ್ಯದ ಬಗ್ಗೆ ವಿಚಾರಿಸಿದ. ಇಷ್ಟು ಯಾಕೆ ಭೆಟ್ಟಿಯಾಗಿಲ್ಲವೆಂದು ಆಕ್ಷೇಪಿಸಲು ನನ್ನಿಂದ ಆಗಲಿಲ್ಲ.

'ನನಗೆ ಪ್ರಾಮಾಣಿಕಥೆಯ ನೈಜತೆಯ ಅರ್ಥವನ್ನು ಕಲಿಸಿದವಳು. ನೀನು, ನಿನಗಲ್ಲದೆ ಇನ್ನಾರಿಗೆ ಋಣಿಯಾಗಿರಲಿ?

ಒಂದು:ಯಾರು ಏನೇ ಅನ್ನಲಿ, ಸಹಿಸಿಕೋ.

ಓದು, ಚೆನ್ನಾಗಿ ಓದು,

ಈ ಅನ್ನುವವರು. ಅನ್ನುವಾರ ಮಾತು ಕೇಳುವವರು ಹೊಟ್ಟೆ ಕಿಚ್ಚು ಪಡುವಂತೆ, ಸ್ವತಃ ನಾಚಿಕೆಕೊಳ್ಳುವಂತೆ ನಡೆದುಕೋ, ನಿನ್ನ ಏಳಿಗೆ ವಿಕಾಸ ನಿನ್ನ ವ್ಯಕ್ತಿತ್ವದ ನಿರ್ಮಾಣ ನಿನ್ನ ಸ್ವಂತಿಕೆಯ ಅರಿವು ಆತ್ಮ

ತೃಪ್ತಿಗಾಗಿ ಯಾರ ಹಂಗೂ ಇಲ್ಲದೆ ಹೋರಾಡು. ಇದು ಬಹಳ ಮುಖ್ಯ ನಿನ್ನ ನಿನ್ನತನ ನಿನಗಾಗಿ ನನಗಾಗಿ ಬೇಕು.

ಇನ್ನೊಂದು ಮಾತು; ತಿಳಿಯದೆ ಯಾರಾದರೂ ನಿನಸ್ನು ನೋಯಿಸಿದ್ದರೆ ಕ್ಷಮಿಸಿಬಿಡು.

ನಾನು ಯಾವಾಗಲೂ ನೀನೇ ಅಲ್ಲವೇ......"

ಹೋಗುವಾಗ ಅವನು ಕೊಟ್ಟು ಹೋದ ಹಾಳೆ ಎಷ್ಟು ಮಾತಾಡಿತು!

ಅವನು ನಾನು ಸಮುದ್ರ.........

೦ ೦ ೦

# ನನ್ನ ಊಹೆ

—ತನುಜ

ಎದುರು ಮನೆಯ ಬಾಗಿಯ ಶಬ್ಧವಾಗಲು ಓದುತ್ತಿದ್ದ ಪುಸ್ತಕವನ್ನು ಮುಚ್ಚಿಟ್ಟು ಕುತೂಹಲದಿಂದ ಕಿಟಕಿಯಲ್ಲಿ ನೋಡಿದೆ.

ಅಧುನಿಕ ಪೋಷಾಕಿನಲ್ಲಿದ್ದ ಹುಡುಗನೊಬ್ಬ ಕೈಯಲ್ಲಿ ಪುಸ್ತಕ ಹಿಡಿದು ನಿಂತಿದ್ದ. ಅವನ ಬೆನ್ನು ನನ್ನ ಕಡೆಗಿದ್ದುದರಿಂದ ಅವನ ಮುಖ ನೋಡುವುದಕ್ಕಾಗಲೀ, ಮುಖದಲ್ಲಿ ಮೂಡಿದ ಭಾವನೆಯನ್ನು ಓದುವುದಕ್ಕಾಗಲೀ ನನಗೆ ಸಾಧ್ಯವಿರಲಿಲ್ಲ. ಅವನ ಪೋಷಾಕು, ಕೇಶವಿನ್ಯಾಸ, ಕೈಯಲ್ಲಿದ್ದ ಪುಸ್ತಕ ಕಂಡು ಆತ ಕಾಲೇಜು ವಿದ್ಯಾರ್ಥಿಯೇ ಇರಬೇಕೆಂದು ಊಹಿಸಿದೆ.

ಅವನು ಯಾರಾದರೆ ನನಗೇನಂತೆ? 'ಮಾಡುವುದಕ್ಕೆ ಬೇರೆ ಕೆಲಸ' ವಿಲ್ಲದ ಹೆಂಗಸರಿಗೆ ಇದೇ ಕೆಲಸ' ಎಂದು ಆಗಾಗ ಹೇಳುತ್ತಿರುವ ನಾನು ಕೈತುಂಬಾ ಕೆಲಸವಿದ್ದರೂ ಅದರ ಕಡೆ ಲಕ್ಷವಿಲ್ಲದೆ ಇದೆಂಥ ಪತ್ತೇದಾರಿ ಕೆಲಸ ಮಾಡ್ತಾಯಿದ್ದಿನಿ ಎಂದು ನನ್ನನ್ನು ನಾನೇ ಶಪಿಸಿಕೊಂಡೆ.

ಆದರೂ ದೃಷ್ಟಿಯನ್ನು ಅಲ್ಲಿಂದ ಕೀಳಲಾಗಲಿಲ್ಲ. 'ಸಾಮಾನ್ಯವಾಗಿ ಮತ್ತೊಬ್ಬರ ಬಗ್ಗೆ ಕೆಟ್ಟ ಕುತೂಹಲವಿರುವದು ಮನುಷ್ಯನ ಸ್ವಭಾವವಿರಬೇಕು, ನಾನೊಬ್ಬ ಅದರಿಂದ ಹೊರತಾಗಿರಲು ಹೇಗೆ ಸಾಧ್ಯ?' ನನ್ನದೇನೂ ತಪ್ಪಿಲ್ಲವೆಂದು ಸಮರ್ಥಿಸಿಕೊಳ್ಳುತ್ತಾ ಅಲ್ಲೇ ದೃಷ್ಟಿನೆಟ್ಟಿದ್ದೆ.

ಬಾಗಿಲು ತೆರೆದ ತರುಣಿ ಕಿಲಕಿಲನೆ ನಕ್ಕು ಅವನನ್ನು ಸ್ವಾಗತಿಸಿದಳು. ಅವನ ಹಿಂದೆಯೇ ಬಾಗಿಲು ಮುಚ್ಚಿಕೊಂಡಿತು.

'ಅವನು ಯಾರಿರಬಹುದು?' ಅವರಿಬ್ಬರ ನಡುವಿನ ಸಂಬಂಧ ಎಂಥದ್ದಿರಬಹುದು?' ಪುಸ್ತಕದ ಮೇಲೆ ತಲೆಯಿಟ್ಟು ಯೋಚಿಸಲಾರಂಭಿಸಿದೆ. ಓದುವ ಯೋಚನೆ ದೂರವೇ ಉಳಿಯಿತು.

ಅವರು ಆಮನೆಗೆ ಬಂದು ಕೆಲವಾರು ದಿನಗಳಷ್ಟೇ ಕಳೆದಿತ್ತು. ಆ ಮನೆಯಲ್ಲಿ ಯಾರ್‍ಯಾರು ಇದ್ದಾರೆ? ಯಾರು ಹೇಗಿದ್ದಾರೆ? ಅವರ ಪೂರ್ವೋತ್ತರಗಳನ್ನೆಲ್ಲಾ ತಿಳಿಯುವ ಹಂಬಲ ನಮ್ಮ ಬೀದಿಯ ಹೆಂಗಳೆಯರಿಗೆಲ್ಲ.

ನನಗೆ ಅಂಥ ಹಂಬಲವೇನೂ ಇರಲಿಲ್ಲವಾದರೂ ಸದಾ ಅಂಥ ಮಾತುಗಳನ್ನೇ ಕೇಳುತ್ತಿರುವುದರಿಂದ ಕುತೂಹಲ ತಾನೇ ತಾನಾಗಿ ಬಂದುಬಿಟ್ಟಿತೇನೋ!

ಒಂದುದಿನ ಆ ಮನೆಗೆ ವಾಸಕ್ಕೆ ಬರುವ ಮುಂಚೆ. ಮನೆ ಮಾಲೀಕರ ಜತೆ ಮನೆಯ ಯಜಮಾನ ಮಾತನಾಡುತ್ತಿದ್ದುದನ್ನು ಸ್ವಲ್ಪ ಮಟ್ಟಿಗೆ ಕೇಳಿಸಿಕೊಂಡಿದ್ದೆ.

ಮೊದಲು ಏನೇನು ಮಾತನಾಡುತ್ತಿದ್ದರೋ ನನಗೆ ತಿಳಿಯದು. ನಾನು ಕೇಳಿದಾಗ ಅವರ ಸಂಭಾಷಣೆ ಹೀಗೆ ಸಾಗಿತ್ತು.

"ಒಬ್ಬಳೇ ಹೆಣ್ಣುಮಗಳು..." ಆತ ಹೇಳುತ್ತಿದ್ದ.

"ಮದುವೆ ಮಾಡಿದ್ದೀರೇನು?"

"ಶ್ರಾವಣಕ್ಕೆ ಇಪ್ಪತ್ತು ತುಂಬಿತು. ಇನ್ನು ಮುಂದೆ ಪ್ರಯತ್ನ ಮಾಡಬೇಕು.

ನನ್ನ ಮನಸ್ಸಿನಲ್ಲಿ ಸಹಜವಾಗಿಯೇ ಒಂದು ಯೋಚನೆ ಬಂತು :

'ಹುಡುಗಿ ಅನುರೂಪಳಾಗಿದ್ದರೆ ನಾನೇ ಯಾಕೆ ಮದುವೆಯಾಗ ಬಾರದು ?'

ಅವರು ಮನೆಗೆ ವಾಸಕ್ಕೆ ಬರುವವರೆಗೂ ಯಾರ್‍ಯಾರು ಬರುತ್ತಾರೆ ? ಎಂದು ಬಾಗಿಲು ಒಂದಿಷ್ಟು ಶಬ್ದವಾದರೆ ಸಾಕು ಕಿಟಕಿಯ ಬಳಿ ನಿಂತು ನೋಡಿದ್ದೇ ನೋಡಿದ್ದು.

ಆ ವೃದ್ಧರೊಬ್ಬರೇ ಲಾರಿಯಲ್ಲಿ ಸಾಮಾನುಗಳನ್ನು ತಂದು ಹಾಕಿಸಿದಾಗ ನನಗೆ ತುಂಬಾ ನಿರಾಶೆಯಾಯಿತು. ನನ್ನ ನಿರಾಶೆಯನ್ನು ಹೋಗಲಾಡಿಸಲೋ ಎಂಬಂತೆ ಅದೇ ದಿನ ಸಂಜೆ ಆ ವೃದ್ಧರ ಜತೆಗೆ ಬಳಕು ನಡಿಗೆಯ ತರುಣಿಯೊಬ್ಬಳು ಬಂದಳು.

ಆ ತರುಣಿಯೇ ಆ ವೃದ್ಧರ ಮಗಳು ಎಂದು ಊಹಿಸುವದು ನನಗೇನೂ ಕಷ್ಟವಾಗಲಿಲ್ಲಿ.

ನನ್ನ ಊಹೆಗೆ ಪುಷ್ಟಿಕೊಡುವಂತೆ ಆಕೆ.

"ಅಪ್ಪಾಜಿ ಬಾಗಿಲು ಯಾಕೊ ತುಂಬಾ ಟೈಟ್ ಆಗಿದೆ. ಸ್ವಲ್ಪ ತೆಗೆಯಿರಿ"

ಆ ವೃದ್ಧರು ಬಾಗಿಲು ತೆರೆದ ನಂತರ ಆ ತರುಣಿ ಒಳಗೆ ಹೊರಟು ಹೋದಳು.

ಆಕೆಯ ಬಗ್ಗೆ ನನ್ನ ಹೃದಯದಲ್ಲಿ ಯಾವ ಭಾವನೆಯಿತ್ತೋ ನಾನು ಸ್ಪಷ್ಟವಾಗಿ ಹೇಳಲಾರೆ. ಆದರೂ ಆಕೆ ಸ್ವಲ್ಪಹೊತ್ತು ಅಲ್ಲಿಯೇ ನಿಂತಿರ

ಬಾರದಿತ್ತೇ ಎಂದು ನನಗನ್ನಿಸಿತು.

ಆಕೆಯ ಮಂಜುಳ ಧ್ವನಿ ಮಧುರ ಸಂಗೀತದಂತೆ ನನ್ನ ಕಿವಿಯಲ್ಲಿ ಗುಂಯ್‌ಗುಟ್ಟುತ್ತಲಿತ್ತು. ಆಕೆಯ ಧ್ವನಿಗಿಂತ ಬೆನ್ನಮೇಲೆ ಕರಿನಾಗರಿನಂತೆ ಮಲಗಿದ್ದ ಜಡೆ ನನ್ನನ್ನು ಆಕರ್ಷಿಸಿತು ಎಂದರೆ ತಪ್ಪಾಗಲಾರದು.

ಆಕೆಯ ಪರಿಚಯ ಮಾಡಿಕೊಳ್ಳಬೇಕಾದರೆ ಮೊದಲು ಆ ವೃದ್ಧರ ಬಳಿ ಸ್ನೇಹ ಬೆಳೆಸುವುದು ಉಚಿತ ಎನ್ನಿಸಿತು.

ನಾನು ಎಷ್ಟೋ ಬಾರಿ ಆತನನ್ನು ಮಾತನಾಡಿಸಲು ಪ್ರಯತ್ನಿಸಿದೆ ನಾದರೂ ಆತ ಚುಟುಕಾಗಿ ಉತ್ತರ ಕೊಟ್ಟು ಹೊರಟು ಹೋಗುತ್ತಿದ್ದರು. ಸ್ನೇಹ ಬೆಳೆಸುವ ಮಾತು ದೂರವೇ ಉಳಿಯಿತು.

ಆತ ಹೊರಗೆ ಹೋಗುತ್ತಿದ್ದುದೇ ಅಪರೂಪ. ಬೆಳಿಗ್ಗೆ, ಮಧ್ಯಾಹ್ನ ಲೆಕ್ಕಹಾಕಿದಂತೆ ಎರಡು ಬಾರಿ ಹಾಲಿನ ಕ್ಯಾನ್ ಹಿಡಿದು ಹೋಗಿ ಬಂದರೆ ಮನೆಯಿಂದ ಆಸಾಮಿ ಕದಲುತ್ತಲೇ ಇರಲಿಲ್ಲ.

ಸಂಜೆ ಆಕೆ ಸಿಂಗರಿಸಿಕೊಂಡು ಕೈಯಲ್ಲಿ ಒಂದು ಬ್ಯಾಸ್ಕೆಟ್ ಹಿಡಿದು ಹೋದರೆ ಬಹುಃಶ ರಾತ್ರಿ ಬರುತ್ತಿದ್ದಳೆಂದು ಕಾಣುತ್ತದೆ.

ಇವರ ಸಂಪಾದನೆ ಏನು ? ಸಂಸಾರ ಹೇಗೆ ತೂಗಿಸ್ಕೊಂಡು ಹೊಗ್ತಾರೆ ? ಮನೆಯ ಬಾಡಿಗೆ ಹೇಗೆ ಕೊಡುತ್ತಾರೆ ? ಆಕೆ ದಿನಕ್ಕೊಂದು ಹೊಸ ಸೀರೆ ಉಡುತ್ತಾಳೆ. ಸಂಪಾದನೆಯಿಲ್ಲದೆ ಇಷ್ಟೆಲ್ಲಾ ತೆಗೆದುಕೊಳ್ಳಲು ಹೇಗೆ ಸಾಧ್ಯ? ಪ್ರತಿ ದಿವಸ ಆಕೆ ಹೋಗುವುದಾದರೂ ಎಲ್ಲಿಗೆ ? ... ಮುಂತಾದ ಯೋಚನೆಗಳು ನನ್ನನ್ನು ಕಿತ್ತುತಿನ್ನುತ್ತಿದ್ದವು.

ಅವರ ಮನೆಯ ವಿಷಯ ನನಗ್ಯಾಕೆ ? ಎಂದು ಸುಮ್ಮನಾಗಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ.

ನನ್ನ ಪತ್ರೆದಾರಿ ಕೆಲಸಕ್ಕೆ ವಿಷಯ ಸಂಗ್ರಹಿಸಿಕೊಡಲೋ ಎಂಬಂತೆ ಪಕ್ಕದ ಮನೆಯಾಕೆ ನೆರೆಮನೆಯುವರೊಡನೆ ಪಿಸುಗಟ್ಟುತ್ತಿದ್ದುದ್ದನ್ನು ಆಸಕ್ತಿಯಿಂದ ಕೇಳಸಿಕೊಂಡೆ.

"ಅಲ್ಲಾ ಎದುರುಮನೆ ಹುಡುಗಿಗೆ ಅದೆಷ್ಟು ಜಂಭ ಅಂತೀನಿ! ಬಾಯಿ ಬಿಟ್ಟರೆ ಮುತ್ತು ಉದುರಿಹೋಗುತ್ತೇನೋ ?"

"ಅವರವರು ಮಾಡೋ ಕೆಲಸಕ್ಕೆ ಅವರಿಗೇ ಮುಖ ಇರುವುದಿಲ್ಲಾರೀ: ನಾಲ್ಕು ಜನರಂತೆ ಸರಿಯಾಗಿ ಜೀವನ ನಡೆಸಿದಳೆ ಎಲ್ಲರ ಜತೆ ಮಾತನಾಡು ವುದಕ್ಕೆ ಧೈರ್ಯ ಇರುತ್ತೆ."

"ಹಾಗಂದ್ರೆ ಏನ್ರೀ ?"

"ಹಾಗಾದರೆ ಅವರ ಸಮಾಚಾರ ನಿಮಗೇನು ಗೊತ್ತಿಲ್ಲಾಂತ ಕಾಣುತ್ತೆ. ಮೊದಲು ನಮ್ಮ ಮಗಳ ಮನೆಯ ಹತ್ತಿರವೇ ಅವರು ಇದ್ದಿದ್ದು. ಹುಡುಗಿ ನಡತೆ ಏನೂಂದ್ರ ಏನೂ ಚೆನ್ನಾಗಿಲ್ಲವಂತೆ. ಅದಕ್ಕೇ ಮನೆಯವರು ಮನೆ ಬಿಡಿಸಿ ಕಳುಹಿಸಿದ್ದಂತೆ"

"ಹಾಗಾ ಸಮಾಚಾರ ?......"

ಮುಂದೇನು ಮಾತನಾಡಿದರೋ ನನಗೆ ತಿಳಿಯದು.

ಆ ಮಾತು ಕೇಳಿ ಮನಸ್ಸು ನೋವಿನಿಂದ ಚೀರಿತು.

ಅವರ ಮಾತು ಸುಳ್ಳೇಕೆ ಇರಬಾರದು ?' ಮನಸ್ಸಿನ ಯಾವುದೋ ಮೂಲೆಯಿಂದ ಹೊರಟ ಧ್ವನಿಯೊಂದು ಪ್ರಶ್ನಿಸಿತಾದರೂ ಆ ಧ್ವನಿಗೆ ಓಗೊಡುವ ಸ್ಥಿತಿಯಲ್ಲಿ ನಾನಿರಲಿಲ್ಲ.

'ಹೇಗಾದರೂ ಹಾಳಾಗಿ ಹೋಗ್ಲಿ' ಎಂದು ಸುಮ್ಮನಾದರೂ ಮನಸ್ಸು ಕೇಳಲಿಲ್ಲ.

ಒಂದೆರಡು ದಿವಸ ಪ್ರಯತ್ನಪೂರ್ವಕವಾಗಿ ಸುಮ್ಮನಿದ್ದೆನಾದರೂ ಈ ದಿನ ಬಾಗಿಲ ಶಬ್ದ ಕೇಳಿದಾಗ ನನ್ನ ಸ್ಥಿತಿ ನಾಯಿ ಬಾಲ ಡೊಂಕು ಎನ್ನುವಂತಾಗಿತ್ತು.

ಪುಸ್ತಕದಿಂದ ತಲೆಯೆತ್ತಿ ಕಿವಿಯನ್ನು ಅವರ ಮನೆಯತ್ತ ತಿರುಗಿಸಿದೆ.

ಒಳಗಿನಿಂದ ಕಿಲಕಿಲ ನಗು ಕೇಳಿಸಿತು.

ಆ ನಗು ಕೇಳಿ, ಮೈಗೆಲ್ಲಾ ಮುಳ್ಳು ಚುಚ್ಚಿದಂತಾಯಿತು.

ಮನೆಯ ಯಜಮಾನ ಎನಿಸಿಕೊಂಡ ಮುದುಕ ಗುಂಡುಕಲ್ಲಿನ ಹಾಗೆ ಒಳಗೆ ಅದ್ಹೇಗೆ ಕುಳಿತ್ತಿದ್ದಾನೋ ಎನ್ನಿಸಿತು.

ಪಕ್ಕದ ಮನೆಯಾಕೆಯ ಮಾತನ್ನು ನಂಬಬಾರದೆಂದು ನಾನು ಪ್ರಯತ್ನಿಸಿದರೂ ಒಳಗಿನಿಂದ ಒಂದೇ ಸಮನೆ ಕೇಳಿಬರುತ್ತಿದ್ದ ಕಿಲಕಿಲ ನಗೆ ಅದಕ್ಕೆ ಅವಕಾಶ ಕೊಡಲಿಲ್ಲ.

'ಅವರ ಮನೆ ಮರ್ಯಾದೆ ಕಟ್ಟಿಕೊಂಡು ನನಗೇನು ? ಅವರಿಗೂ ನನಗೂ ಎಲ್ಲಿಯ ಸಂಬಂಧ ? ಹೇಗಾದರೂ ಹಾಳಾಗಿ ಹೋಗ್ಲಿ,' ನನ್ನ ಮನಸ್ಸಿನ ಅಸಮಾಧಾನವನ್ನೆಲ್ಲಾ ಪುಸ್ತಕದ ಮೇಲೆ ಕಕ್ಕಿ ಪುಸ್ತಕವನ್ನು ಬಿಸುಟು ಸುಮ್ಮನೆ ಬಿದ್ದುಕೊಂಡೆ.

ಬಿದ್ದುಕೊಂಡೆನಾದರೂ ನಿದ್ರಾದೇವಿಯನ್ನು ಸ್ವಾಗತಿಸಲಿಲ್ಲ. ಮತ್ತೆ ಬಾಗಿಲು ಸದ್ದಾದರೆ ಕಿಟಕಿಯ ಬಳಿ ಹೋಗಿ ಆ ವ್ಯಕ್ತಿಯ ಮುಖವನ್ನು ಒಮ್ಮೆ ನೋಡೋಣವೆಂದು ಭಾವಣೆ ದಿಟ್ಟಿಸುತ್ತಾ ಮಲಗಿದ್ದೆ.

ಆ ವ್ಯಕ್ತಿ ಹೋಗುವ ಸುಳಿವೇ ಕಾಣಲಿಲ್ಲ.

ಏನೋ ಅತೃಪ್ತಿ, ಯಾವುದೋ ನಿರಾಶೆ, ಏನೋ ಕಸಿವಿಸಿ. ಮನಸ್ಸು ಉದ್ವಿಗ್ನಗೊಂಡಿತ್ತು.

ಮೈ ಮೇಲೆ ಬತ್ತ ಹಾಕಿದರೆ ಹರಳಾಗುವುದೇನೊ ಎನ್ನುವಷ್ಟರ ಮಟ್ಟಿಗ ನನ್ನ ದೇಹದ ಶಾಖ ಏರಿತ್ತು.

'ಅವರ ಮನೆಗೆ ಯಾರೋ ಹುಡುಗ ಬಂದ್ರೆ...ಅವರ ಮನೆಯಿಂದ ಕಿಲಕಿಲ ನಗು ತೇಲಿ ಬಂದ್ರೆ ಅದರಿಂದ ನನಗಾದ ನಷ್ಟವೇನು?' ನನ್ನನ್ನು ನಾನೇ ಪ್ರಶ್ನಿಸಿಕೊಂಡೆ. ಉತ್ತರ ಮಾತ್ರ ದೊರಕಲಿಲ್ಲ.

ನನಗರಿವಿಲ್ಲದಂತೆಯೇ ನಿದ್ರೆಯ ವಶನಾಗಿದ್ದೆ! ಊಟಕ್ಕೆ ಕರೆ ಬಂದಾಗಲೇ ಎಚ್ಚರ.

ಮತ್ತೆ ರಾತ್ರಿಯವರೆವಿಗೂ ಆ ಹುಡುಗನ ಸಮಾಚಾರ ಏನಂದೇ ತಿಳಿಯಲಿಲ್ಲ, ನಂತರ ಹೊರಗೆ ಬಂದ. ಕತ್ತಲಾಗಿದ್ದರಿಂದ ಮುಖ ಸರಿಯಾಗಿ ಕಾಣಲಿಲ್ಲ.

ಈ ದಿನ ಅವಳು ಹೊರಗೆ ಹೋದಳೋ ಇಲ್ಲವೋ ತಿಳಿಯದು ಎಂದುಕೊಳ್ಳುತ್ತಿರುವಾಗಲೇ ಬಾಗಿಲು ಹಾಕಿ ಕೊಳ್ಳಲು ಬಂದಳು.

ಆ ಯುವಕನ ಮನೆ ಎಲ್ಲಿದೆ? ಆತ ಯಾರು? ಅವನನ್ನು ಹಿಂಬಾಲಿಸಲೇ? ಎಂದು ಕೊಂಡವನು ಇಲ್ಲದ ತಾಪತ್ರಯ ಎಂದು ಸುಮ್ಮನಾದೆ.

* * * *

ಪ್ರತಿದಿನ ಸಂಜೆ ಅವಳು ಹೊರಡುತ್ತಿದ್ದ ಸಮಯಕ್ಕೆ ಸರಿಯಾಗಿ ಈ ದಿನ ಅವನೂ ಹೊರಟುನಿಂತಿದ್ದ. ಗಂಡ ಹೆಂಡಿರಂತೆ ನಡೆಯುತ್ತಿದ್ದ ಅವರನ್ನು ಕಂಡು 'ಅಬ್ಬಾ ಧೈರ್ಯವೇ;' ಎಂದುಕೊಂಡೆ.

ಆತ ನೋಡಿದರೆ ಮಗಳಿಗೆ ಮದುವೆಯಿಲ್ಲ ಎನ್ನುತ್ತಿದ್ದರು. ಇವರ್ನ್ನ ನೋಡಿದರೆ ಯಾವ ದಂಪತಿಗಳಿಗೂ ಕಡಿಮೆಯಿಲ್ಲ ಎನ್ನುವಂತೆ ಓಡಾಡುತ್ತಾರಲ್ಲ. ನಾಚಿಕೆಯಿಲ್ಲದೆ ಎಂದು ಕೊಂಡೆ.

ಆ ದಿನ ಆಗಿಲ್ಲಾಂದ್ರೆ ಈಗಲೂ ಆಗಿಲ್ಲಾಂತ ಹೇಳುವುದು ಹೇಗೆ?

ಚಪ್ಪರ ಹಾಕಿ ಓಲಗ ಊದಿದರೇನು ಮದುವೆ ಎನ್ನುವ ಕಾಲ ಹೋಗುತ್ತಿದೆ ಯಲ್ಲ ಎಂದುಕೊಂಡೆ.

ಮಾರನೆಯ ದಿನ ಆಕೆ ಬಾಗಿಲಿಗೆ ರಂಗೋಲಿ ಹಾಕಲು ಬೀದಿಗೆ ಬರುವುದನ್ನೇ ಕಾದಿದ್ದೆ. ಸೀರೆ ಮೇಲಕ್ಕೆತ್ತಿ ಕಟ್ಟಿದ್ದರಿಂದ ಕಾಲುಂಗುರ ಗಳಿಲ್ಲದ್ದು ಸ್ಪಷ್ಟವಾಗಿ ಕಾಣುತ್ತಿತ್ತು. ಕತ್ತಿನಲ್ಲಿರುವ ಸರದಲ್ಲಿ ಮಾಂಗಲ್ಯ ಪೋಣಿಸಿದೆಯೋ ಇಲ್ಲವೋ ನೋಡಲು ಸಾಧ್ಯವಾಗಲಿಲ್ಲ. ಆಕೆ ಮೈ ತುಂಬಾ ಸೆರಗು ಹೊದ್ದಿದ್ದಳು.

ಆತ ಹಾಲಿನ ಕ್ಯಾನ್ ಹಿಡಿದು ಮೆಟ್ಟಿಲು ಇಳಿಯುತ್ತಿರುವುದನ್ನು ಕಂಡು ಸುಮ್ಮನೆ ಯಾಕೆ ಕಷ್ಟಪಡಬೇಕು, ಆತನನ್ನೇ ಕೇಳಿದರೆ ಆಯಿತು ಎಂದುಕೊಂಡು ಅವಸರವಾಗಿ ಮುಂಬಾಗಿಲು ತಗೆದು ಬೀದಿಗಿಳಿದೆ.

"ಹಾಲಿಗೆ ಹೊರಟಿರೇನೋ?" ನಾನೇ ಮೇಲೆಬಿದ್ದು ಕೇಳಿದೆ.

"ಹುಂ"

"ಮಗಳಿಗೆ ಮದುವೆ ಮಾಡಿದಿರೇನು?" ಏನೊಂದೂ ಪೀಠಿಕೆಯಿಲ್ಲದೆ ನೇರವಾಗಿ ಕೇಳಿದೆ. ಇನ್ನು ಆತ ಹೊರಟು ಹೋದಾರು ಎಂಬ ಅವಸರ ದಿಂದ ಹಾಗೆ ಮಾಡಿದೆ.

"ಎಲ್ಲಿ ಬಂತು ಸ್ವಾಮಿ?" ಮುಂದಿನ ಮಾತಿಗೆ ಅವಕಾಶ ಕೊಡದೆ ಮಾತನಾಡುತ್ತಲೇ ಆತ ಹೊರಟುಬಿಟ್ಟರು. ನನಗೆ ತುಂಬಾ ನಿರಾಶೆ ಯಾಯಿತು.

ವಿದ್ಯಾವಂತ ಅನ್ನಿಸಿಕೊಂಡಿದ್ದೀಯ. ಬುದ್ಧಿವಂತ ಅಂತ, ಹೆಸರು ತಗೊಂಡಿದ್ದೀಯಾ! ಸುಸಂಸ್ಕೃತ ಎನಿಸಿಕೊಂಡು ಇಂಥ ಕುಕಲ್ಪನೆಗಳನ್ನು ಮಾಡಿಕೊಳ್ಳುವುದಕ್ಕೆ ನಿನಗೆ ನಾಚಿಕೆಯಾಗುವುದಿಲ್ಲವೇ? ನಿನಗೂ ನೆರೆ ಹೊರೆಯ ಹೆಂಗಸರಿಗೂ ಏನು ವ್ಯತ್ಯಾಸ ಮನಸ್ಸು, ಛೇಡಿಸಿತು.

ಮನಸ್ಸಿನ ನುಡಿಗೆ ಕಿಂಚಿತ್ತಾದರೂ ಕಿವಿಗೊಡದಿರಲು ಸಾಧ್ಯವೇ ?

'ಮದುವೆ ಗೊತ್ತಾಗಿರಬಹುದು. ಮೊದಲೇ ಎಂಜಾಯ್ ಮಾಡ್ತಿರಬಹುದು' ಎಂದು ನನಗೆ ನಾನೇ ಹೇಳಿಕೊಂಡು ಸುಮ್ಮನಾದೆ.

ನಾಯಿಬಾಲ ಡೊಂಕು ಎನ್ನುವಂತೆ ಮತ್ತೆ ಪತ್ತೇದಾರಿ ಕೆಲಸದಲ್ಲಿ ತೊಡಗಿದೆ.

ಒಂದೆರಡು ದಿವಸಗಳಲ್ಲಿಯೇ ಅವನು ನಾಪತ್ತೆ.

'ಅವನು ಯಾಕೆ ಬಗಲಿಲ್ಲ ? ಏನಾಗಿರಬಹುದು ?' ಮತ್ತೆ ಯೋಚನೆಗೆ ಆಹಾರ ಸಿಕ್ಕಿತು.

ಒಂದೆರಡು ದಿವಸ ಅನಿವಾರ್ಯ ಕೆಲಸಗಳಿಗೆ ಉಪಯೋಗಿಸಲೇಬೇಕಾದ ವೇಳೆ ಬಿಟ್ಟರೆ ಉಳಿದ ಸಮಯವನ್ನೆಲ್ಲಾ ಕಿಟಕಿಯ ಬಳಿಯಲ್ಲಿಯೇ ಕಳೆದೆ.

ಅವನ ಸುಳಿವೇ ಇಲ್ಲ !

'ಏನಾದರೂ ಮನಸ್ತಾಪವಾಗಿರಬಹುದು' ಎಂದು ಊಹಿಸಿದೆ.

'ಎಲ್ಲಾದರೂ ಹಾಳಾಗಿ ಹೋಗಲಿ' ಎಂದು ಸುಮ್ಮನಾದೆ.

* * * *

ಬಿಸಿಲು ಮಬ್ಬಿನಲ್ಲಿ ನಿಂತು ದೂರ ದಿಗಂತದಲ್ಲಿ ದೃಷ್ಟಿ ನೆಟ್ಟಿದ್ದೆ.

ಸಂಜೆಯ ರವಿ ಕಿರಣಗಳಿಗೆ ಮೈಯೊಡ್ಡಿ ತೇಲುತ್ತಿದ್ದ ಬಿಳಿ ಮೋಡಗಳು, ಗುಂಪು ಗುಂಪಾಗಿ ಹಾರುತ್ತಿದ್ದ ಬೆಳ್ಳಕ್ಕಿಗಳು; ಗಗನದೆತ್ತ

ರಕ್ಕೊ ಬೆಳೆದು ನಿಂತಿದಿಯೋನೋ ಎಂದು ಭ್ರಮೆ ಹುಟ್ಟಿಸುವಂಥ ಮರಗಳು........

ಪಕೃತಿಯಲ್ಲಿ ಲೀನವಾಗಿ ಹೋಗಿದ್ದ ನನ್ನನ್ನು ಬಳೆಯನಾದ ಬಲ ವಂತವಾಗಿ ಹೊರತಂದಿತ್ತು.

ಆ ನಾದ ಎದುರು ಮನೆಯ ಕಡೆಯಿಂದ ನನ್ನ ಬಳಿ ಧಾವಿಸಿ ಬಂದಿದ್ದು

ದೃಷ್ಟಿಯನ್ನು ಮೇಲಿಂದ ಕೆಳಕ್ಕೆ ಇಳಿಸಿದೆ.

"ಬಾಗಿಲು ಹಾಕಿಕೊಳ್ಳಿ ಅಪ್ಪಾಜಿ. ನಾವು ಹೋಗಿದ್ದು ಬರ್ತೀವಿ" ಎಂದು ಆಕೆಯ ಧ್ವನಿಯಲ್ಲಿ ಸಡಗರ ಸಂಭ್ರಮ ತುಂಬಿ ತುಳುಕುತ್ತಿತ್ತು.

ಆಕೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದೆ.

ತುಂಬಾ ಶ್ರದ್ಧೆಯಿಂದ ಸಿಂಗರಿಸಿಕೊಂಡಂತಿತ್ತು.

ಜತೆಯಲ್ಲಿ ಹೊರಟಿದ್ದ ವ್ಯಕ್ತಿಯನ್ನು ನೋಡಿದೆ. ಒಹ್ ನಾನು ಆ ದಿನ ಕಂಡ ವ್ಯಕ್ತಿಯಲ್ಲ !

ಅವನಿಗಿಂತಲೂ ಇವನು ಆಕರ್ಷಕ ವ್ಯಕ್ತಿ.

ಆಕೆ ಅವನೊಡನೆ ಹೋದ ರೀತಿಯನ್ನು ನೋಡಿ ಏನು ತಿಳಿಯ ಬೇಕೋ ಅರ್ಥವಾಗಲಿಲ್ಲ.

ಅತ್ತ ಕಡೆ ಕೇಂದ್ರಿಕೃತವಾಗಿದ್ದ ನನ್ನ ಗಮನವನ್ನು ಬೇರೆಡೆ ಹರಿಸಿದೆ.

ಕೆಲವು ದಿವಸಗಳಲ್ಲಿಯೇ ಅವರ ಮನೆಯ ಬಗ್ಗೆ ನನಗಿದ್ದ ಆಸಕ್ತಿ ತನಗೆ ತಾನೇ ಕಡಿಮೆಯಾಗುತ್ತಾ ಹೋಯಿತು.

ನಾನು ಊರಿಗೆ ಹೋಗಿ ವಾಪಸ್ಸು ಬರುವುದರಲ್ಲಿ ಅವರು ಮನೆ ಖಾಲಿ ಮಾಡಿ ಹೊರಟು ಹೋಗಿದ್ದರು.

ಕೆಲಮಂದಿ ವಿಧ್ಯಾರ್ಥಿಗಳು ಸೇರಿ ಆ ಮನೆಯನ್ನು ಬಾಡಿಗೆಗೆ ಹಿಡಿದಿದ್ದಳು.

ಬೇರೆ ಉಪಯುಕ್ತ ವಿಷಯಗಳನ್ನು ಸಂಗ್ರಹಿಸಲು ನನ್ನ ತಲೆಯೂ ಖಾಲಿಯಾಯ್ತು ಎಂದು ಸಮಾಧಾನ ತಿಳಿದೆ,

ಇದ್ದಕ್ಕಿದ್ದಂತೆ ಬಂದು ಕಾಣಿಸಿಕೊಂಡ ನನ್ನ ಬಾಲ್ಯ ಸ್ನೇಹಿತನನ್ನು ಕಂಡು ಆನಂದ, ಆಶ್ಚರ್ಯ ಏಕಕಾಲದಲ್ಲಿ ಮೂಡಿ ನನ್ನನ್ನು ಮೂಕನನ್ನಾಗಿಸಿತು.

"ಬಾರೋ, ಏನು ಸಮಾಚಾರ? ನಿನ್ನ ನೋಡಿ ಎಷ್ಟು ದಿವಸ ಆಯ್ತು ಏನ್ ಕಥೆ! ಏನೋ ಇದ್ದಕ್ಕಿದ್ದಂತೆ ಇಳಿದುಬಿಟ್ಟೆ?" ಒಂದು ಕ್ಷಣದ ನಂತರ ಸಾವರಿಸಿಕೊಂಡು ಒಟ್ಟೊಟ್ಟಿಗೆ ಪ್ರಶ್ನೆ ಹಾಕಿದೆ.

ಅವನು ಅರ್ಥಗರ್ಭಿತವಾಗಿ ನಕ್ಕನೇ ವಿನಾ ತಕ್ಷಣ ಮಾತನಾಡಲಿಲ್ಲ, ಕಣ್ಣುಗಳಲ್ಲಿ ಮಿಂಚಿದ ಹೊಳಪನ್ನು ಗುರುತಿಸಿ ಏನೋ ವಿಶೇಷವಿರಬೇಕು ಎಂದುಕೊಂಡೆ.

ಅವನ ಕೆದರಿದ ತಲೆ, ಸ್ವಲ್ಪಮಟ್ಟಿಗೆ ಅಸ್ತವ್ಯಸ್ತವಾಗಿದ್ದ ಉಡುಪು ಕಂಡು ಊರಿನಿಂದ ಬಂದವನು ನೇರವಾಗಿ ನನ್ನಲ್ಲಿಯೇ ಬಂದಿದ್ದಾನೆ ಎಂದು ತಿಳಿಯುವುದು ಕಷ್ಟವಾಗಲಿಲ್ಲ.

"ಸ್ವಲ್ಪ ಬೇಗ ರೆಡಿಯಾಗು ಮರಿ ಹೋಗಿ ಬರೋಣ" ಎಂದ.

"ಎಲ್ಲಿಗೆ?". ನನಗೆ ಅರ್ಥವಾಗಿದ್ದರೂ ಬೇಕಂತಲೇ ಕೇಳಿದೆ

"ಹುಡುಗಿಯನ್ನು ನೋಡುವುದಕ್ಕೆ"

"ಮದುವೆ ಮಾಡಿಕೊಳ್ಳುವವನು ನೀನು. ಸುಮ್ಮನೆ ನಾನ್ಯಾಕೆ? ನೀನು ಹೋಗಿದ್ದು ಬಾ"

"ಒಬ್ಬನೇ ಹೋಗುವುಕ್ಕೆ ಸಂಕೋಚ ಆಗುತ್ತದೆ. ಬಾರೋ"

"ಈಗಲೂ ಅದೆಂಥ ಗೊಡ್ಡು ಪದ್ಧತಿನೋ? ನನಗೆ ಇವೆಲ್ಲಾ ಸರಿ ಬರುವುದಿಲ್ಲ. ನೀನು ಹೋಗಿ ನನ್ನನ್ನೇ ಕರೆಯುತ್ತಿದ್ದೀಯಾ!" ಹೋಗಲು ನಿರಾಕರಿಸಿದೆ.

ಆದರೆ ಅವನ ಜಿಗಣೆಯಂತೆ. ಅವನಿಂದ ಬಿಡಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಅವನೊಡನೆ ಹೊರಡುವುದು ಅನಿವಾರ್ಯವಾಯಿತು,

ಮನೆ ಹುಡುಕುವುದೇನೂ ಕಷ್ಟವಾಗಲಿಲ್ಲ. ಆದರೆ ಮನೆಯೊಳಗೆ ಆಹ್ವಾನಿಸಿದ ವ್ಯಕ್ತಿಯನ್ನು ಕಂಡು ಏನು ಮಾಡಬೇಕೆಂದು ತೋರಲಿಲ್ಲ.

ನನಗೆ ಗೊತ್ತಿರುವಷ್ಟನ್ನು ತಿಳಿಸೋಣವೆಂದರೆ ಅವನ ಪ್ರಶ್ನೆಗಳನ್ನು ಕೇಳುವುದು ತುಂಬಾ. ಜತೆಗೆ ಊಹೆಯಿಂದಲೇ ಗ್ರಹಿಸುವ ನನ್ನ ಸ್ವಭಾವ ಕಂಡರೆ ಅವನಿಗೆ ಆಗದು.

'ಹೇಗಾದರೂ ಹಾಳಾಗಿ ಹೋಗ್ಲಿ. ವಿಷಯ ಎಲ್ಲಿಯವರೆಗೆ ಬರುತ್ತದೋ ಕಾದು ನೋಡುವುದು, ವಿಷಯ ಕೈಮೀರಿದರೆ ಆಮೇಲೆ ನೋಡೋಣ' ಎಂದು ತೆಪ್ಪಗಾಗಿ ಅವರು ತೋರಿದ ಕಡೆ ಕುಳಿತೆ.

ನನ್ನ ಗೆಳೆಯನ ಜತೆ ಅವರು ಏನೇನೋ ಮಾತಾಡುತ್ತಿದ್ದರಾದರೂ ಒಂದು ಮಾತನ್ನು ಕೇಳುವ ಶ್ರಮ ನಾನು ತೆಗೆದುಕೊಳ್ಳಲಿಲ್ಲ.

ನನ್ನ ಬಿಗಿದ ಮುಖ ನೋಡಿ ಅವರಿಗೇ ಏನನ್ನಿಸಿತೋ? ಅವರೇ ನನ್ನನ್ನು ಮಾತನಾಡಿಸಿರಬೇಕು.

ಗೆಳಯ ತೊಡೆ ಚಿವುಟಿದಾಗಲೇ ನನಗೆ ಎಚ್ಚರವಾಗಿದ್ದು.

"ಆಂ" ಎಂದೆ.

"ನಾವಿದ್ದ ಮನೆ ಎದುರುಗಡೆ ಇದ್ದವರಲ್ಲವೇ ನೀವು"

ಆತನ ಮಾತು ಕೇಳಿ ಸಿಟ್ಟು ಬಂತು.

'ನಾನಾಗಿಯೇ ಮಾತನಾಡಿಸಿದರೂ ಕಾಟಾಚಾರಕ್ಕೆ ಮಾತಾಡಿ ಮುಖ ತಿರುಗಿಸಿ ಹೋಗುತ್ತಿದ್ದ. ಆಹಾ ಎಷ್ಟು ಚೆನ್ನಾಗಿ ಮಾತನಾಡಿಸ್ಕೊಂಡು ಬರ್‍ತಿದ್ದಾನೆ. ಕಾರ್ಯವಾಸಿ ಕತ್ತೆಕಾಲು.......' ಎಂದುಕೊಂಡು ಆತ ಮೊದಲು ನನ್ನ ಜತೆ ಯಾವ ರೀತಿಯಲ್ಲಿ ಮಾತನಾಡುತ್ತಿದ್ದನೋ ಅದೇ ಧಾಟಿಯಲ್ಲಿ ಅಷ್ಟೇ ಚುಟುಕಾಗಿ,

"ಹಂ" ಎಂದೆ.

ಮುಂದೆ ಆತನೇನು ಮಾತನಾಡಿದನೋ, ನಾನು ಏನು ಹೇಳಿದೆನೋ ನನಗೆ ಒಂದೂ ಗೊತ್ತಿಲ್ಲ.

"ತಗೊಂಡು ಬಾ ಮಗು" ಆತ ಕುಳಿತಲ್ಲಿಂದಲೇ ಕರೆದರು.

ಆಕೆ ತಟ್ಟೆಯಲ್ಲಿ ಪಾನಕದ ಲೋಟಗಳನ್ನಿಟ್ಟುಕೊಂಡು ಬಳುಕುತ್ತಾ ಬಂದಳು.

ಅಲಂಕಾರದಲ್ಲಿ ಸರಳತೆ ಇದ್ದಿತಾದರೂ ವೈಯ್ಯಾರದಲ್ಲಿ ಕಡಿಮೆಯೇನಿರಲಿಲ್ಲ.

'ಅಯ್ಯೋ ವೈಯ್ಯಾರವೇ' ನನ್ನ ಮನ ಶಪಿಸಿತು.

"ನಾವು ಹಿಂದೆ ಇದ್ದೆವಲ್ಲಾ ಆ ಮನೆಯ ಎದುರುಗಡೆ ಇರುವವರು". ಆತ ಆಕೆಗೆ ಪರಿಚಯ ಮಾಡಿಕೊಟ್ಟರು.

ಆಕೆ ನನ್ನ ಮುಖ ನೋಡಿ ಎಷ್ಟೋ ವರ್ಷದ ಪರಿಚಿತಳಂತೆ ನಗೆಬೀರಿ.

"ನೋಡಿದ್ದೆ. ಪರಿಚಯ ಇರಲಿಲ್ಲ ಅಷ್ಟೆ" ಎಂದಳು.

"ನೀವು ಓಡಾಡ್ತಾ ಇದ್ದಿದ್ದನ್ನು ನಾನು ಎಷ್ಟೋಬಾರಿ ನೋಡಿದ್ದೀನಿ"

ಬೇಕೆಂದೇ ಚುಚ್ಚಿ ನುಡಿದೆ.

ನನ್ನ ನುಡಿಯಿಂದ ಸ್ವಲ್ಪವೂ ವಿಚಲಿತಳಾಗದೆ.

"ಹೌದಾ?" ಎನ್ನುತ್ತಾ ಪಾನಕದ ಲೋಟವನ್ನು ಮುಂದೆ ಹಿಡಿದಳು.

ನಾನು ನೋಡದವನಂತೆ ನಟಿಸಿ ಲೋಟ ತೆಗೆದುಕೊಳ್ಳಲಿಲ್ಲ.

ಆಕೆ ಬಾಗಿ ಲೋಟವನ್ನು ನನ್ನ ಮುಂದಿರಿಸಿದಳು. ಆಕೆ ಹಾಗೆ ಬಗ್ಗಿದಾಗ ಕೊರಳಿನ ಸರ ಸೆರಗಿನ ಸೆರೆಯಿಂದ ತಪ್ಪಿಸಿಕೊಂಡು ಹೊರಗೆ ದುಮುಕಿತು.

ಏನಾಶ್ಚರ್ಯ! ಕರಿಮಣಿಗಳ ನಡುವೆ ಮಾಂಗಲ್ಯ ತಳತಳನೆ ಹೊಳೆಯುತ್ತಿದೆ!

ನನ್ನ ಮನಸ್ಸಿನ ಭಾವನೆಯನ್ನು ಓದಿಕೊಂಡರೇನೋ ಎನ್ನುವಂತೆ ಆತನೇ ನನ್ನ ಪ್ರಶ್ನೆಗೆ ಉತ್ತರೆ ಹೇಳಿ ಆಕೆಯ ಪರಿಚಯ ಮಾಡಿಕೊಟ್ಟರು:

"ಈಕೆ ನನ್ನ ಸೊಸೆ. ಮಗಳಿಗಿಂತ ಹೆಚ್ಚಾಗಿದ್ದಾಳೆ. ನನ್ನನ್ನು 'ಅಪ್ಪಾಜೀ' ಎಂದೇ ಕರೆಯುವುದು. ಮಗ ಮದ್ರಾಸ್‌ನಲ್ಲಿದ್ದಾನೆ. ಅಲ್ಲೇ ಮನೆ ಮಾಡ್ತಿನಿ ಅಂದ. ಅಲ್ಲಿನನಗೆ ಹವಾ ಒಗ್ಗುವುದಿಲ್ಲ. ನನ್ನಪಾಡು ಹೇಗೋ ಆಗುತ್ತೆ. ನಿನ್ನ ಗಂಡನ ಜತೆ ನೀನು ಹೋಗು ಅಂದ್ರೆ ಕೇಳದೆ ನನಗೋಸ್ಕರ ಇಲ್ಲೇ ಇದ್ದಾಳೆ. ಅವನು ರಜಾ ಸಿಕ್ಕಿದಾಗ ತಿಂಗಳಿಗೋ ಎರಡು ತಿಂಗಳಿಗೋ ಬಂದು ಹೋಗ್ತಾನೆ. ಹಿಂದಿನ ಜನ್ಮದಲ್ಲಿ ನನ್ನ ತಾಯಿಯಾಗಿ ಹುಟ್ಟಿದ್ದಳೇನೋ ಈಗ ಸೊಸೆಯಾಗಿ ಬಂದು ಮಗಳಿಗಿಂತ ಹೆಚ್ಚಾಗಿ..........."

"ಪಾನಕ ಕುಡಿದುಬಿಡಿ ಅಪ್ಪಾಜಿ" ತನ್ನ ಹೊಗಳಿಕೆ ಅತಿಯಾದೀತೆಂದು ಮಾತು ಮರೆಸಲು ಯತ್ನಿಸಿದಳು—ಆಕೆ

ಪಾನಕ ಕುಡಿಯುತ್ತಿದ್ದಂತೆ ಯಾರೋ ಬಂದಂತಾಯಿತು. ತಲೆ ಯೆತ್ತಿ ನೋಡಿದೆ, ಅದೇ ವ್ಯಕ್ತಿ ಎಂದುಕೊಳ್ಳುತ್ತಿರುವಷ್ಟರಲ್ಲಿ ಆತನೇ ಪರಿಚಯ ಮಾಡಿಕೊಟ್ಟರು.

"ನನ್ನ ಸೊಸೆಯ ಚಿಕ್ಕಮ್ಮನ ಮಗ ಮನೆಗೆ ಆಗಾಗ ಬರ್ತ್ತಿದ್ದ ನೀವು ನೋಡಿದ್ದಿರಬಹುದು ತುಂಬಾ ಒಳ್ಳೆಯ ಹುಡುಗ"

ಅವರ ಮಾತಿನಲ್ಲಿ ಕಿಂಚಿತ್ತೂ ಕೃತ್ರಿಮತೆಯ ಸೋಂಕಿದ್ದಂತೆ ಕಾಣಲಿಲ್ಲ

ಆತನ ಮುಖದಲ್ಲಿಯೂ ಕಳಂಕ ಗುರುತಿಸಲಾಗಲಿಲ್ಲ.

'ಕತೆ ಕಟ್ಟುವುದು ನೆರೆಹೊರೆಯವರ ವೈಶಿಷ್ಟ್ಯವೇನೋ?' ಎಂದುಕೊಂಡೆ.

"ಅವರ ಮಾತನ್ನು ನಂಬಿದ ನಾನೆಷ್ಟು ಮೂರ್ಖ' ಎನ್ನಿಸದಿರಲಿಲ್ಲ. ಅಷ್ಟರಲ್ಲಿ ಮಾವನ ಸಲಹೆಯಂತೆ ಆಕೆ ಒಳಗೆ ಹೋಗಿ ನಾದಿನಿಯನ್ನು ಕರೆತಂದಳು.

ಹುಡುಗಿ ಲಕ್ಷಣವಾಗಿದ್ದಳು. ಗೆಳೆಯನ ಮುಖ ನೋಡಿದಾಗ ಅಲ್ಲಿ ಸಮ್ಮತಿಯ ಮುದ್ರೆಯನ್ನು ಕಂಡೆ.

"ಆ ಮನೆಯಲ್ಲಿದ್ದಾಗ ನಿಮ್ಮ ಮಗಳನ್ನು ನೋಡಿದ ಹಾಗೆ ಕಾಣಲಿ ಲ್ಲವಲ್ಲ" ಎಂದೆ.

"ಮೈಸೂರಿನಲ್ಲಿ ಓದುತ್ತಿದ್ದರು" ಆತನ ಬದುಲು ಆಕೆಯೇ ಉತ್ತರ ಕೊಟ್ಟಳು.

ತಲೆ ಎತ್ತಿ ಆಕೆಯ ಮುಖ ನೋಡಿದೆ. ಬಾಹ್ಯವಲ್ಲಿ ನವನಾಗರೀಕ, ತರುಣಿಯಂತೆ ಕಂಡರೂ ಎಲ್ಲೆಲ್ಲೂ ಸ್ವಾರ್ಥಿಗಳೇ ತುಂಬಿರುವ ಈ ಕಾಲದಲ್ಲಿ ಪತಿಯಿಂದ ದೂರವಿಷ್ಟು ಮಾವನ ಸೇವೆಯಲ್ಲಿ ತೊಡಗಿರುವ ಆಕೆಯ

ಸೇವಾ ಮನೋಭಾವನೆ ಕಂಡು ಆಕೆಯ ಕಾಲು ಮುಟ್ಟುವಷ್ಟು ಪವಿತ್ರವಾದ ಭಾವನೆ ನನ್ನಲ್ಲುಂಟಾಯಿತು.

ಸೊಸೆಯೆಂದರೆ ಮಗನನ್ನು ತಮ್ಮಿಂದ ಕಿತ್ತುಕೊಳ್ಳಲು ಬಂದಿರುವ ವೈರಿ ಎಂದೇ ಭಾವಿಸುವ ವೃದ್ಧರೇ ಹೆಚ್ಚಾಗಿರುವಾಗ ಸೊಸೆಯನ್ನು ಮಗಳಿಗಿಂತ ಹೆಚ್ಚೆಂದು ಭಾವಿಸಿ ಮಮತೆಯನ್ನು ತೋರಿ ಅವಳ ಭಾವನೆಯನ್ನು ಅರ್ಥ ಮಾಡಿಕೊಳ್ಳುವ ಹೃದಯ ವೈಶಾಲ್ಯ ಇದೆಯಲ್ಲ ಎಂದು ಆ ವೃದ್ಧರ ಬಗ್ಗೆಯೂ ಗೌರವ ಭಾವನೆ ಉಂಟಾಯಿತು.

ಫೋಟೋಫ್ರೇಂನಲ್ಲಿ ಕುಳಿತಿದ್ದ ದಂಪತಿಗಳ ಭಾವಚಿತ್ರ ನನ್ನನ್ನು ಅಣಕಿಸಿ ನಕ್ಕಂತೆ ಭಾಸವಾಯಿತು.

೦೦೦

# ಪತ್ನಿ??

—ಎಂ. ವ್ಹಿ, ಕನಕಮ್ಮ (ಅಶ್ವಿನಿ)

ನನ್ನ ಪತಿ ಸತ್ತಾಗ ನನಗೆ ದುಃಖವಾಗಿತ್ತು. ನಿಜ ಆದರೆ ಅಷ್ಟು ಒಳ್ಳೆಯ ವ್ಯಕ್ತಿ-ಹತ್ತಾರು ಜನರ ಅಭಿಮಾನಕ್ಕೆ ಪಾತ್ರರಾದ ಗುಣವಂತರು -ಕಣ್ಮರೆಯಾದರಲ್ಲಾ ಎಂದಲ್ಲ! ನನ್ನ ಸ್ವಾರ್ಥಕ್ಕಾಗಿ ನನಗೆ ದುಃಖವಾಗಿತ್ತು. ನಾನಿನ್ನು ತರಹ ತರಹವಾಗಿ ಅಲಂಕರಿಸಿಕೊಂಡು ಮೆರೆಯುವಂತಿಲ್ಲ! ಹತ್ತಾರೆಡೆಯಲ್ಲಿ ಮುತ್ತೈದೆಯವರಿಗೇ ಸ್ಥಾನವಿರುವ ಕಡೆಗಳಲ್ಲಿ ಕುಳಿತುಕೊಳ್ಳುವಂತಿಲ್ಲ. ಎಲ್ಲರ ದೃಷ್ಟಿಯಲ್ಲಿ ಅಸ್ಪೃಶ್ಯಳಾಗಿಬಿಡುತ್ತೇನೆಂಬ ಭಾವನೆಯಿಂದ ನನಗೆ ದುಃಖ. ಎಲ್ಲರ ತಲೆ ಮೊಟ್ಟುವಂತೆ ಠಾಕುಠೀಕಾಗಿ ನಡೆದಾಡುತ್ತಿದ್ದ ನಾನು ಹಿಂದಿನ ಸಾಲಿನಲ್ಲಿ ನಿಲ್ಲುವಂತಾಯಿತಲ್ಲಾ ಎಂಬ ದುಗುಡ, ಯಾವ ಪಾರ್ಟಿಗಳಲ್ಲೂ, ಸಡಗರ ಸಂಭ್ರಮಗಳಲ್ಲೂ, 'ಸರಿ ಜೋಡಿ' ಸ್ಪರ್ಧೆಗಳಲ್ಲೂ ಇನ್ನು ನಾನು ಪಾಲುಗೊಳ್ಳುವಂತಿಲ್ಲ,

ದಾಂಪತ್ಯ ಸುಖ ಬಿಡಿ. ಅದು ಎಂದೋ ಮಾಯವಾಗಿತ್ತು. ನನಗೆ ಅದೇಕೋ ಅದು ಕೊರತೆಯೆಂದೇ ಅನಿಸಲಿಲ್ಲ, ಮುದ್ದಾದ ಮೂರು ಮಕ್ಕಳು ಆದಮೇಲೆ ಬಹುಶಃ ಕುಟುಂಬ ಯೋಜನೆಯೋ ಅಥವಾ ಮತ್ತೆ ಯಾವ ಯೋಜನೆಯೋ, ನಾವಂತೂ ಮಲಗುತಿದ್ದುದು ನಮ್ಮ ಹೊಸ ಮನೆಯ ಬೇರೆ ಬೇರೆ ಕೋಣೆಗಳಲ್ಲಿಯೇ. ಈ ಬಗ್ಗೆ ಪ್ರಶ್ನಿಸಬೇಕೆಂದು ಅನೇಕ ಬಾರಿ ನಾನು ಅಂದುಕೊಂಡದ್ದುಂಟು. ಆದರೆ ಆತನ ಮೌನ ಯಾವುದಕ್ಕೂ ಅಸ್ಪದ ಕೊಡುತ್ತಿರಲಿಲ್ಲ. ಹಾಗೆಂದು ಅವರೆಂದೂ ನನ್ನ ಮನನೋಯಿಸಿದವರಲ್ಲ. ನಾನು ಹೋಗಬೇಕು ಎಂದೆಡೆಗೆ ಚಕಾರವಿಲ್ಲದೆ

ಸಿದ್ಧವಾಗಿ ಹೊರಟುಬಿಡುತ್ತಿದ್ದರು. ನಾನು ಬೇಕೆಂದುದನ್ನು ತಕ್ಷಣವೇ ತಂದಿಟ್ಟು ಬಿಡುತ್ತಿದ್ದರು.

ನಮ್ಮಿಬ್ಬರ ರೂಪವನ್ನು ಬ್ರಹ್ಮ ಬಹಳ ಚನ್ನಾಗಿ ಜೋಡಿಸಿ. ಸ್ಪರ್ಧೆಗಳಲ್ಲಿ ಗೆಲ್ಲುವಂತೆ ಮಾಡಿದ್ದ, ನನಗಿಂತಲೂ ಅವರ ಸೌಂದರ್ಯ ಹೆಚ್ಚಿನದು, ಗುಣ ಸ್ವಭಾವಗಳಲ್ಲಿ ನಾವು ಏರು ಪೇರು.

ಮುಂಚೆ ಮುಂಚೆ ಜೀವನದಲ್ಲಿ ತುಂಬಾಉಲ್ಲಾಸದಿಂದ ಇದ್ದವರು ಇದ್ದಕ್ಕಿದ್ದಂತೆ ಸಪ್ಪಗಾಗಿ ಬಿಟ್ಟರು. ಅದಕ್ಕೂ ಬಹುಶಃ ನಾನೇ ಕಾರಣವಿರಬೇಕು, ನನ್ನ ಹುಟ್ಟುಸ್ವಾರ್ಥ ನನ್ನ ಬದುಕಿನಲ್ಲಿ ಬಹಳಷ್ಟು ಹಾನಿ ಮಾಡುತ್ತಿದ್ದರೂ ನಾನು ಎಚ್ಚೆತ್ತುಕೊಳ್ಳಲೇ ಇಲ್ಲ. ಅದೇ ದೌರ್ಭಾಗ್ಯ,

ನನ್ನ ಮದುವೆಯ ಸಮಯದಲ್ಲೇ ನನಗೆ ಅವರೆಂದರೆ ನಿಕೃಷ್ಟವೆನಿಸಿತ್ತು. ಅವರು ನಮಗಿಂತ ಬಹಳ ಕೆಳಗಿನ ಅಂತಸ್ತಿನವರು, ಅವರ ಆಸ್ತಿಯೆಲ್ಲಾ ಅವರ ರೂಪು, ವಿದ್ಯೆ, ಹುದ್ದೇ ಅಷ್ಟೇ. ಆದರೆ ನಾನಾದರೋ ಧನಿಕ ವಕೀಲರ ಏಕಮಾತ್ರ ಪುತ್ರಿ! ಸಂಸಾರ ಹೂಡಿದಾಗಲೇ ನಾನು ಶುರು ಮಾಡಿದ್ದೆ, ಇದು ಹೀಗೆ ಇರಬೇಕು. ಹಾಗೇ ಆಗಬೇಕು. ಎಂದು ಅನೇಕ ವೇಳೆ ನಗುನಗುತ್ತಾ ನನ್ನನ್ನು ಸಹಿಸುತ್ತಿದ್ದರು, ಹಲವೊಮ್ಮೆ ದರ್ಪದಿಂದ ನನ್ನನ್ನುನಡೆಸಿಕೊಳ್ಳುತ್ತಿದ್ದರು, ಬರುಬರುತ್ತಾ ಮೌನವಹಿಸತೊಡಗಿದರು ನಾನೇ ಗಂಡ, ಅವರೇ ಹೆಂಡತಿ ಎನ್ನುವಂತಾಗುತ್ತಿತ್ತು. ಇದರಿಂದ ನನಗೇನೂ ನೋವೆ ಅನ್ನಿಸಲಿಲ್ಲ.

ನನ್ನದು ಅತಿಯಾದದ್ದು ಅವರನ್ನು ಹಂಗಿಸತೊಡಗಿದಾಗ, "ನಿಮ್ಮ ಗಾವ ಆಸ್ತಿಯಿದೆ ಅಂತ ಮಹಾ ಮಾತಾಡ್ತೀರಿ". ಒಂದು ಕಾರೇ, ಒಂದು ಮನೆಯೇ?" ಎಂದು ಸದಾ ಚುಚ್ಚುತ್ತಿದ್ದೆ. ಅವರು ಚಕಾರವಾಡುತ್ತಿರಲಿಲ್ಲ. ಬಂದ ಸಂಬಳವನ್ನೆಲ್ಲಾ ನನ್ನ ಕೈಯಲ್ಲಿ ಹಾಕಿ ನಿರ್ಲಿಪ್ತರಾಗತೊಡಗಿದರು. ನಾನು ಖುಷಿಪಟ್ಟೆ. ನನ್ನ ಸಂತೋಷದಿಂದ ಮನೆಯಲ್ಲಿ ಶಾಂತಿ

ನೆಲೆಸಿತೆಂದೋ ಏನೋ ಅವರೂ ತೃಪ್ತರಾಗಿದ್ದಂತಿದ್ದರು.

ಸುಂದರ ಕಾಯಕ್ಕೆ ಶೋಭಿಸುವ ಬಟ್ಟೆಬರೆಗಳನ್ನು ಹೊಲಿಸಿಕೊಳ್ಳುವು ದನ್ನು ಬಿಟ್ಟರು. ಇದ್ದುದ್ದನ್ನೇ ಹೇಗೋ ತೊಟ್ಟು ನಡೆದುಬಿಡುತ್ತಿದ್ದರು. ಆದರೆ ನಾನು ಮಕ್ಕಳಿಗೂ, ನನಗೂ ಪ್ರತಿ ತಿಂಗಳೂ ಬೆಲೆಬಾಳುವ ಬಟ್ಟೆ ಕೊಂಡರೂ ತುಟಿ ಎರಡು ಮಾಡುತ್ತಿರಲಿಲ್ಲ. ನಾನು ಇದಾವುದನ್ನೂ ಮನಸ್ಸಿಗೇ ಹಚ್ಚಿಕೊಳ್ಳುತ್ತಿರಲಿಲ್ಲ. ಹೆಂಡತಿ ಮಕ್ಕಳನ್ನು ಸುಖವಾಗಿಡು ವುದೇ ಪತಿಯ ಧರ್ಮ, ಕರ್ತವ್ಯ ಎಂದು ವಾದಿಸಿಕೊಳ್ಳುತ್ತಿದ್ದೆ.

ನಮ್ಮ ಶೀತಲ ಯುದ್ಧನಡೆಯುತ್ತಿದ್ದಂತೆಯೇ ಅವರು ಇದ್ದಕಿದ್ದಂತೆ ಬದಲಾಗತೊಡಗಿದರು. ಮುಖದಲ್ಲಿ ಪ್ರಸನ್ನತೆ, ಮೆಲುನಗೆ ತುಂಬಿ ಬಂದಿತು. ಒಮ್ಮೊಮ್ಮೆ ನನ್ನೊಂದಿಗೂ ಸಂತೋಷವಾಗಿ ಹೃದಯ ತುಂಬಿ ಮಾತನಾಡುತ್ತಿದ್ದರು. ಮೊದಲಿನಂತೆ ಒಳ್ಳೊಳ್ಳೆಯ ಬಟ್ಟೆ ಬರೆ ಹೊಲಿಸಿ ಕೊಳ್ಳತೊಡಗಿದರು. ದಿನಕ್ಕೊಂದರಂತೆ ಹೊಸ ಸೂಟು, ಟೈ ಕಟ್ಟಿ ನಲವತ್ತರ ಹರೆಯದ ಅವರು ಇಪ್ಪತ್ತರ ಯುವಕನ ಉತ್ಸಾಹದಲ್ಲಿ ಆಫೀಸಿಗೆ ಹೊರಡುತ್ತಿದ್ದರು. ಯಾಕೆ ಹೀಗೆ ? ಇವರಿಗೇನಾದರೂ ಮತಿ ಭ್ರಂಶವಾಗಿದೆಯೇ ? ಅಮಾವಾಸ್ಯೆ ಹುಣ್ಣಿಮೆಗೆ ಹುಚ್ಚು ಕೆರಳುವಂತೆ. ಕೆಲವು ದಿನ ಬೇಸರದ ಪ್ರತಾಪ, ಮತ್ತೆ ಕೆಲವು ದಿನ ಉತ್ಸಾಹ, ಉಲ್ಲಾಸ ಗಳ ಚಿಲುಮೆ ಎಂದು ತಲೆ ಕೆರೆದುಕೊಂಡೆ.

ಹೆಚ್ಚು ಬೆಲೆ ಬಾಳುವ ಒಂದು ಮೋಟಾರ್‌ಸೈಕಲ್ ಕೊಂಡರು. ಮನೆ ಕಟ್ಟಲು ಪ್ರಾರಂಭಿಸಿದರು. ಬಂಗಲೆಯಂತಹ ಮನೆಯಾಯಿತು.

'ಹಂಗಿಸುತ್ತಿದ್ದೆಯಲ್ಲಾ ಈಗ ನೋಡು' ಎನ್ನುವಂತೆ ಜಂ ಎಂದು ಮೋಟಾರ್ ಸೈಕಲ್ ಹತ್ತಿ ಹೋಗುತ್ತಿದ್ದರು. ನನ್ನೊಂದಿಗೆ ಮಾತುಕತೆ ಎಷ್ಟೋ ಅಷ್ಟೆ. ಮಕ್ಕಳೊಂದಿಗೆ ಮಾತ್ರ ಬಹಳ ಪ್ರೀತಿಯಿಂದಿರುತ್ತಿದ್ದರು ಅವರ ಈ ಸಂತೋಷದಿಂದ ನನಗೆ ಒಮ್ಮೊಮ್ಮೆ ಅಸೂಯೆಯಾಗುತ್ತಿತ್ತು.

ಬರುವ ಹಣವೆಲ್ಲಾ ನನಗೇ ಕೊಟ್ಟು ಬಿಡುತ್ತಾರಲ್ಲಾ, ಈ ಹೊಸ ಆಸ್ತಿ. ಬಟ್ಟೆ ಬರೆ ಎಲ್ಲಕ್ಕೂ ಹಣ ಎಲ್ಲಿಯದು ? ಎಂದೂ ಆಲೋಚಿಸುತ್ತಿದ್ದೆ.

ದಿನಗಳುರುಳುರುಳಿ ನನ್ನ ಬಾಳಿನ ದುರ್ಘಟನೆ ಬಂದೇ ಬಿಟ್ಟಿತು. ಯಾವುದೋ ಕಾನ್ಫರೆನ್ಸಿಗಾಗಿ ದೆಹಲಿಗೆ ವಿಮಾನಹತ್ತಿದವರು, ವಿಮಾನಾಪಘಾತದಲ್ಲಿ ಕಣ್ಣುಮುಚ್ಚಿದ್ದರು. ಅವರು ಇನ್ನಿಲ್ಲ ನನ್ನಪಾಲಿಗೆ, ಅಂದರೆ ಇದುವರೆಗೆ ಇದ್ದರೆ ? ಎಂಬ ಪ್ರಶ್ನೆ ಕಾಡತೊಡಗಿತು. ಹೌದು ಇದ್ದರು. ಲೋಕದ ಕಣ್ಣುಮುಚ್ಚಲು ಇದ್ದರು. ಸಮಾಜದಲ್ಲಿ ಕುಟುಂಬ ಯಜಮಾನನಾಗಿ ಇದ್ದರು. ಆದರೆ ನನಗೆ ಅವರು? ಅಥವಾ ಅವರಿಗೆ ನಾನು ? ಇರಲಿಲ್ಲ. ಅವರ ಕೈಹಿಡಿದ ದಿನದಿಂದ ನಾನವರ ಶಾಂತಿಯನ್ನು ಕದ್ದು ಬಿಟ್ಟೆ. ಸ್ವಾತಂತ್ರ್ಯ ಕಸಿದುಕೊಂಡೆ. ಅವರ ಚೈತನ್ಯಪೂರಿತ ಜೀವವನ್ನು ನನ್ನ ಐಶ್ವರ್ಯ ಮದದಿಂದ, ಸ್ವಾರ್ಥದಿಂದ ಚಿವುಟಿ ನಿರ್ವೀರ್ಯಗೊಳಿಸಿದ್ದೆ.

ಆದರೂ ಸಾವಿನಲ್ಲೂ ಅವರು ನನ್ನ ಹಣ ದಾಹವನ್ನು ಅಣಕಿಸಿದರು ಅಪಘಾತದಲ್ಲಿ ಸತ್ತುದರಿಂದ, ಪತ್ನಿಯೆಂದು ನನಗೆ ಅವರ ವಿಮಾ ಹಣ ಲಕ್ಷಕ್ಕೂ ಮಿಕ್ಕು ಬಂದಿದೆ. ಸರಕಾರವೂ ಸಾಕಷ್ಟು ಹಣ ನನಗೆ ಕೊಟ್ಟಿದೆ. ಈಗ ಮನೆ ನನ್ನದಾಗಿದೆ. ನಮ್ಮಪ್ಪನೂ ತಮ್ಮ ಆಸ್ತಿಯನ್ನೆಲ್ಲಾ ನನಗೆ ಬರೆದು ನನ್ನ ಮನೆಯಲ್ಲೇ ಇದ್ದಾರೆ. ನನಗೆ ಬಾಳಿಗೆ ಅರ್ಥಕೊಡಬೇಕಾದ ವ್ಯಕ್ತಿ? ಪ್ರಾಯಶಃ ನನ್ನ ಬಾಳಿನ ಅರ್ಥವೆಂದರೆ ಹಣ, ಆಸ್ತಿ ಅಂತಸ್ತು ಮಾತ್ರ ಎಂದು ತಿಳಿದುಬಿಟ್ಟರೇನೋ. ಅಷ್ಟನ್ನೂ ನನ್ನ ಪಾಲಿಗ ಬಿಟ್ಟು ನಡೆದು ಬಿಟ್ಟಿದ್ದಾರೆ.

*     *     *     *

ಇತ್ತೀಚೆಗೆ ಅವರು ಹೊಲಿಸಿಕೊಂಡ ಬಟ್ಟೆ ಬರೆ, ಕೊಂಡುಕೊಂಡ ನಮೂನೆಯ ಗಡಿಯಾರಗಳು. ಪೆನ್ನುಗಳು, ಟೈಗಳು. ಟೈಪಿನ್ನುಗಳು. ಕಾಲುಚೀಲಗಳು ಇತ್ಯಾದಿ ಒಂದು ಅಲಿಮಾರದ ತುಂಬಾ ಕುಳಿತಿವೆ. ಅವು ಗಳನ್ನು ಯಾರಿಗಾದರೂ ಕೊಟ್ಟುಬಿಡುವ ಮನಸ್ಸು ಮಾಡಲಾರದ ಪಾಪಿಷ್ಠೆ

ನಾನು ಹನ್ನೆರಡರ ಮಯೂರ ದೊಡ್ಡವನಾಗುವುದಾದರೂ ಎಂದಿಗೆ? ಆದರೂ ಅಪ್ಪನ ಹಳೆಯದನ್ನು ತೊಡುತ್ತಾನೆಯೇ? ಅವನು ಖಂಡಿತ ವಾಗಿಯೂ ನನ್ನ ಮಗ ಈಗಾಗಲೇ ಅಹಂಕಾರದ ಮುದ್ದೆ.

ಯಾವಾಗಲಾದರೊಮ್ಮೆ ಅಲಮಾರು ತೆಗೆದು ಅದರ ಮುಂದೆ ನಿಲ್ಲು ತ್ತೇನೆ ಸುಮ್ಮನೆ. ಆ ವಸ್ತುಗಳ ಮೇಲೆ ಕೈ ಆಡಿಸುತ್ತೇನೆ. ಭಾವಸಂಚ ಲನವಾಗುತ್ತದೆ. ಮತ್ತೆ ಕೆಲವು ಸಲ ಆ ವಸ್ತುಗಳನ್ನು ಅತ್ತಿಂದಿತ್ತ ಇತ್ತಿಂದತ್ತ ಓರಣ ಮಾಡುತ್ತೇನೆ.

ಹಾಗೊಮ್ಮೆ ಮಾಡಿದಾಗಲೇ ಇವರ ಬಾಳಿನ ಪುಟ ಸರ್ರೆಂದು ಬಿಚ್ಚಿ ಕೊಂಡದ್ದು. ಬಟ್ಟೆಗಳ ನಡುವಿನಿಂದ ಜಾರಿಬಿತ್ತು ಅವರ ಡೈರಿ, ಏನೋ ನಿಧಿ ಸಿಕ್ಕಂತಾಯಿತು. ಅದರಲ್ಲಿನ ಬರಹ ಓದತೊಡಗಿದೆ.

"ಲಲಿತಾ. ನೀನು ನನ್ನ ಬಾಳಿನಲ್ಲಿ ಹೆಜ್ಜೆ ಇಟ್ಟ ದಿನದಿಂದ ನನ್ನ ಬದು ಕಿಗೇ ಒಂದು ತಿರುವು ಬಂದಿದೆ. ನಿನಗೆ ಧನ್ಯವಾದ. ಲೈಫ್‌ನಲ್ಲಿ ಅರ್ಥವೇ ಇಲ್ಲವೆಂದುಕೊಂಡಿದ್ದೆ. ಆದರೆ ನನಗೀಗ ತುಂಬ ಅರ್ಥ ಕಾಣುತ್ತಿದೆ..."

"ನನ್ನೊಂದಿಗೆ ಹೆಚ್ಚು ಮಾತನಾಡಲೂ ಸಹ ನೀನು ಹಿಂಜರಿಯುತ್ತೀ. ಅದರಲ್ಲಿ ತಪ್ಪೇನು? ವಿವಾಹಿತನೆಂದು ದೂರಮಾಡಬೇಡ......"

"ನಾನು ನಿನ್ನನ್ನು ಬಯಸುವುದಿಲ್ಲ ಲಲಿತಾ. ನಿನ್ನ ಸಖ್ಯ ಬಯಸು ತ್ತೇನೆ.....ನಿನ್ನಲ್ಲಿ ಎಷ್ಟು ಉದಾರತೆ ಇದೆ. ವಿನಯ ಇದೆ, ಪ್ರೇಮ

ಅನುಕಂಪವಿದೆ."

"ಹುಚ್ಚಿ, ಮದುವೆಯೇ ಬೇಡ ಎಂದೇಕೇ ಅನ್ನುತ್ತಿ? ನೀನಿನ್ನೂ ಚಿಕ್ಕವಳು. ಈ ನಲವತ್ತರ ಮುದುಕನನ್ನು ಪ್ರೀತಿಸಿ, ಪ್ರೀತಿಸಿದರೂ ದೂರವೇ ನಿಲ್ಲಲು ನಿಶ್ಚಯಿಸಿ, ಒಂಟಿ ಬಾಳಿಗೇ ಆಶಿಸುವ ನಿನ್ನನ್ನು ಹುಚ್ಚಿ ಎನ್ನದೆ ಬೇರೆ ಏನನ್ನಲಿ ಹೇಳು?........."

"ಹತ್ತಾರು ಜನರೆದುರಲ್ಲಿ. ಹಿರಿಯರ ನಿಶ್ಚಯದಂತೆ ತಾಳಿ ಕಟ್ಟಿಸಿ ಕೊಂಡವಳೇ ಪತ್ನಿ ಎಂದು ವಾದಿಸುತ್ತಿ ನೀನು. ನಾನು ಒಪ್ಪುವುದಿಲ್ಲ. ಮನಗಳನ್ನು ಅರ್ಪಿಸಿಕೊಂಡು, ಅನ್ಯೋನ್ಯವಾಗಿ ಪರಸ್ಪರ ಅರ್ಥ ಮಾಡಿ ಕೊಂಡಾಗಲೇ ಪತಿ–ಪತ್ನಿಯರು ಅನ್ನುತ್ತೇನೆ ನಾನು. ನಿಜ ಹೇಳಲೇನು? ನೀನು ನನ್ನ ಮೈ ಸ್ಪರ್ಶವನ್ನು ಒಮ್ಮೆಯೂ ಮಾಡದಿದ್ದರೂ' ಅದಕ್ಕಾಗಿ ಸ್ವಲ್ಪವೂ ಆಸೆಪಡದಿದ್ದರೂ, ನನ್ನ ಅಭಿಪ್ರಾಯದಲ್ಲಿ ನೀನೇ ನನ್ನ ಪತ್ನಿ. ನಕಾರವಾಗಿ ತಲೆ ಆಡಿಸುತ್ತೆಯಲ್ಲವೆ? ಹಾಗಾದರೆ ಹೀಗೆನ್ನೋಣ, ಮಾನ ಸಿಕ ಪತ್ನಿ, ವೈವಾಹಿಕ ಪತ್ನಿ. ಹ....ಹ....ಹ ..."

"ನನ್ನ ಬಳಿ ಒಮ್ಮೆಯೂ ಬರಬಾರದೆಂದುಕೊಂಡಿದ್ದೀಯಾ ಲಲಿತಾ?" "ಎಂದು ನಾನು ದೀನವಾಗಿ ಕೇಳಿದಾಗ ನೀನೆನದೆ' ಬಳಿ ಎನ್ನುವದರ ಅರ್ಥವೇನು? ನನ್ನ ದೇಹ ನಿಮ್ಮ ದೇಹದ ಸನಿಯಕ್ಕೆ ಬಂದರೆ ಮಾತ್ರ 'ಬಳಿಯೆ?' ಇಲ್ಲದಿದ್ದರೆ ನಾನು ದೂರವೇ ಹೇಳಿ. ನಿಮ್ಮನ್ನೇ ಪ್ರಶ್ನಿಸಿ ಕೊಳ್ಳಿ. ನಾನು ನಿಮ್ಮಿಂದ ದೂರ ಇದ್ದಂತೆನಿಸುತ್ತದಯೇ? ಸದಾ ನಿಮ್ಮ ಲ್ಲಿಯೇ ಇದ್ದನಲ್ಲ. ನಿಜ. ನನಗೂ ಗೊತ್ತು. ಇಷ್ಟು ಉತ್ಕಟವಾಗಿ ನಾವು ನಾವು ಪರಸ್ಪರ ಆರಾಧಿಸುತ್ತಿರುವುದರಿಂದ ದೈಹಿಕ ಸನಿಯವನ್ನು ನಾವು ಬಯಸಬಹುದು. ಆದರೆ ನಮಗದು ಬೇಡ. ಅಂತಹ ಸಂಬಂಧ ಬೆಳೆಸಿ ಬದುಕುಗಳನ್ನು ಕಲುಷಿತ ಮಾಡಿಕೊಳ್ಳುವ ಬದಲು, ಸಾಧಾರಣ ಪ್ರೀತಿ ಪ್ರೇಮಗಳಿಗಿಂತ ಒಂದು ಮೆಟ್ಟಿಲು ಮೇಲೆ ನಿಂತು ನಾವು ಬದುಕು ಸಾಗಿ ಸೋಣ. ಎಲ್ಲರಂತಲ್ಲ ನಾವು ಎಂದು ಲೋಕಕ್ಕೆ ತಿಳಿಯಬೇಕು.' ಎಂದುಬಿಟ್ಟೆ ನೀನು ಎಂತಹ ತರ್ಕ! ಎಷ್ಟು ಉತ್ತುಂಗ ವಿಚಾರ ನಿನ್ನದು ಲಲಿತಾ... .."!

ಪುಟ ಪುಟಗಳು ಹೀಗೇ ನಡೆದಿತ್ತು. ಅಂತಹ ಒಂದು ಉದಾತ್ತ ಸ್ತ್ರೀ ಲಲಿತಾ ನಿಜವ್ಯಕ್ತಿಯೆ ? ಅಥವಾ ನಮ್ಮವರ ಕಲ್ಪನೆಯ ಹುಡುಗಿಯೆ? ಎಂದು ಶಂಕಿಸ ತೊಡಗಿತು ನನ್ನ ಹೃದಯ. ಎಲ್ಲೂ ಅವರಿಬ್ಬರ ನಡುವೆ ಪ್ರಣಯಕೇಳಿ ನಡೆದಂತೆ ಸೂಚನೆಯೇ ಇಲ್ಲ. ಅವರಿಬ್ಬರೂ ಕಲೆತು ಎಲ್ಲೂ ಹೋದಂತಾಗಲೀ, ಕಾಲಕಳೆದಂತಾಗಲೀ ಸುಳಿವಿಲ್ಲ. ಹುಂ, ಅದೆಲ್ಲಾ ಹೇಗೆ ಬರೆದಾರು. ಎಂದೂ ಸಂದೇಹಪಟ್ಟೆ,

ಆದರೂ ನನ್ನ ಮನಸ್ಸಿಗೇಕೋ ಖಚಿತವಾಯಿತು—ಆ ಲಲಿತಾ ದೂರ ದೂರವೇ ಉಳಿದು ಹತ್ತಿರ ಸೆಳೆದವಳು ಈತನ ಒಂದು ಹಸ್ತ ಸ್ಪರ್ಶವನ್ನೂ ಬಯಸದೆಯೇ ಮನ ಅರ್ಪಿಸಿದಳು. ಅವಳ ಎದುರಿಗೆ ಏಕೋ ನಾನು ಏನೂ ಅಲ್ಲವೇನೋ ಅನ್ನಿಸಿತು. ಹೀಗೂ ಉಂಟೆ ? ಇಂಥವರೂ ಇರುತ್ತಾರೆಯೆ ?

ಪುಟಗಳನ್ನು ಮತ್ತೆ ತಿರುಗಿಸಿದೆ. ಒಂದು ಉತ್ತಮ ಆದರ್ಶ ಸ್ನೇಹಕತೆಯೇ ಮುಂದೆ ಕುಳಿತಿತ್ತು. ತನ್ನ ನಿರ್ವ್ಯಾಜ ಪ್ರೇಮದಿಂದ ಇವರ ಮನಕ್ಕೆ ತಂಪನ್ನು ಎರೆದಿದ್ದವಳು ಲಲಿತಾ ಅವರ ಬದುಕಿಗೆ ಉತ್ತೇಜನ ಕೊಟ್ಟವಳು ಈ ಲಲಿತಾ.

"ಇದು ಅತಿಯಾಯ್ತು ಲಲಿತಾ. ಇಷ್ಟೊಂದು ಹಣ ! ನೀನು ಸಾಲಮಾಡಿಯಾದರೂ ನನಗೆ ಕೊಡಬೇಕೆ" ಎಂದೆ ನಾನು. ಅವಳು ಪ್ರಾವಿಡೆಂಟ್ ಫಂಡಿನಿಂದ ಹಣ ತೆಗೆದುಕೊಟ್ಟಾಗ, ಅದಕ್ಕೇನೆಂದಳು ನನ್ನ ಲಲಿತಾ ? "ಯಾರಿಗಾಗಿ ಕೊಡುತ್ತೇನೆ ? ನನ್ನ ಸ್ವಾರ್ಥಕ್ಕಾಗಿ ತಾನೆ. ಇದರಿಂದ ನೀವು ನೆಮ್ಮದಿಪಟ್ಟರೆ. ಸಂತೋಷ ಹೊಂದಿದರೆ ಅದರ ತೃಪ್ತಿ ಯೆಲ್ಲಾ ನನಗೇ ಅಲ್ಲವೆ ?" ಎಂದು ತುಂಬು ಹೃದಯದಿಂದ ನುಡಿದಳು. ಇದು ಯಾವ ಋಣಾನುಬಂಧವೋ. ಎಂತಹ ನಿಸ್ವಾರ್ಥದ ಹುಡುಗಿ ಇವಳು ! ಇದು ಅವಳ ಸ್ವಾರ್ಥವಂತೆ !"

"ಈ ದಿನ ಲಲಿತಾ ಅಂದಳು 'ನನ್ನೆ ಸೂಟಿನಲ್ಲಿ ನೀವು ಪ್ರಿನ್ಸ್ ತರಹ ಇದ್ದೀರಿ'

'ನಿನ್ನ ಸೂಟಾ ?' ಎಂದೆ ನಗುತ್ತಾ.

'ಮತ್ತೆಯಾರದು ?' ಎಂದಳು ಮೆಲುವಾಗಿ ನಗುತ್ತಾ,

ಅವಳು ಹೊಲಿಸಿದುದೇ ಅದು. ನಾನು ಉಡುಪಿನಲ್ಲಿ ಆಸಕ್ತಿ ಕಳೆದು ಕೊಂಡು ಹಳೆ ಪಳೆಯದನ್ನು ಒಡ್ಡೊಡ್ಡಾಗಿ ತೊಡುತ್ತಿದ್ದಾಗ, ಮತ್ತೆ ನನ್ನ ಸೌಂದರ್ಯಕ್ಕೆ ಮೆರುಗು ಕೊಟ್ಟವಳು ಈ ನನ್ನ ಹುಡುಗಿ.

ಹೀಗೆ ಅವಳು ಕೊಟ್ಟಿರುವುದೆಷ್ಟೋ. ನನ್ನಲ್ಲಿ ಇಲ್ಲವೆಂದಾಗಲಿ, ನಾನು ಆಸಕ್ತಿಕಳೆದು ಕೊಂಡಾಗಲಾಗಲಿ ತಕ್ಷಣವೇ ತಂದಿಟ್ಟುಬಿಡುತ್ತಾಳೆ ಯಾವುದಾದರೊಂದು ವಸ್ತುವನ್ನು...ಓ ಲಲಿತಾ ಈ ಋಣ......"

"ನಿನ್ನ ಋಣ ಹೆಚ್ಚಾಯ್ತಮ್ಮ. ನಾನು ನಿನಗೆ ಏನನ್ನೂ ಕೊಟ್ಟಿಲ್ಲ. ನೀನು ಮಾತ್ರ ಈವರೆಗೆ ಮಾಡಿರೋದು ಸಾಲದೂಂತ, ಈಗ ಮೋಟಾರ್ ಸೈಕಲ್ ಅಡ್ವಾನ್ಸ್ ತೊಗೊಂಡು ವಾಹನ ನನಗೇ ಕೊಟ್ಟುಬಿಟ್ಟಿದ್ದಿ, ಈ ಸಾಲ ನೀನು ತಾನೇ ತೀರಿಸ್ಬೇಕು. ನಿನ್ನ ಒಳ್ಳೆಯತನದಿಂದ ನನಗೆ ಬಹಳ ಕಷ್ಟಕೊಡ್ತಿದ್ದಿ ಲಲಿತಾ' ಎಂದಂದು ನಿನ್ನ ಕಣ್ಣಲ್ಲಿ ನೀರು ತರಿಸಿಬಿಟ್ಟೆ, ನನಗೆ ಗೊತ್ತು ನೀನು ನೊಂದ್ಕೊಳ್ತಿ ಅಂತ. ಆದರೂ ನೀನು ಕಣ್ಣೀರು ಒರೆಸಿ ಕೊಂಡು—'ಹಾಗಾದ್ರೆ ಇನ್ಮೇಲೆ ಬೇಡ ಬಿಡಿ. ನಿಮಗೆ ಕಷ್ಟಕೊಡ್ಬೇಕು ಅನ್ನೊ ಮನಸಲ್ಲ ನಂದು. ನನ್ನ ಹುಚ್ಚು ಮನಸ್ಸಿಗೆ. ನೀವು ಸಂತೋಷ ಪಟ್ಟರೆ, ಏನೋ ಸಂತೋಷವಾಗುತ್ತೆ. ನಿಜ ಹೇಳಬೇಕೆಂದ್ರೆ ಪ್ರೇಮ ಅನ್ನೋದನ್ನ ಅರ್ಥೈಸೋದೇ ಸಾಧ್ಯವಿಲ್ಲ, ಏಕೆ ಹೀಗಾಗುತ್ತೆ ಅಂತ ಹೇಳ ಲಾರೆವು. ಒಂದೇ ಒಂದು ವ್ಯಕ್ತಿಯೆಡೆಗೆ ಮಾತ್ರ ಮನಸ್ಸು ಯಾಕೆ ಹೀಗೆ ಆಕರ್ಷಿತವಾಗುತ್ತೋ. ಅವನು ವಿವಾಹಿತನೇ, ಇಲ್ಲವೇ. ಮುದುಕನೇ ಯುವಕನೇ, ಧನಿಕನೇ, ಬಡವನೇ ಒಂದನ್ನೂ ನೋಡದು ಈ ಭಾವನೆ. ನನ್ನಿಂದ ನಿಮಗೆ ಸಾಧ್ಯವಾದರೆ ಸಂತೋಷ, ಸುಖ, ನೆಮ್ಮದಿ ಸಿಗಬೇಕೇ

ವಿನಾ ನೋವಲ್ಲ. ಮುಂದೆ ಎಚ್ಚರವಹಿಸ್ತೇನೆ.' ಅಂತ ನಕ್ಕು ಅಳು–ನಗು ವಿನ ನಡುವೆ ಮುಖ ಎಷ್ಟು ಸುಂದರ ವಿರಚಹುದು ಎಂದು ನನಗೆ ತೋರಿಸಿ ಅಪಾರ ಸುಖಕೊಟ್ಟೆ. ಇದೀಗಲೇ ತೀರ್ಮಾನಿಸಿದ್ದೇನೆ. ಇನ್ಮೇಲೆ ಲಲಿತಾ ಏನುಕೊಟ್ಟರೂ ನಕಾರ ಹೇಳದೆ, ಖುಷಿಯಾಗಿ ಸ್ವೀಕರಿಸೋ ದೂಂತ..........."

"ಇದುವರೆಗೆ ಲಲಿತಳಿಂದ ಪಡೆದಿರುವ ಹಣ—ಆಗಾಗ ಚಿಲ್ಲರೆ ಚಿಲ್ಲರೆ ಯಾಗಿ ಪಡೆದದ್ದು 3000ರೂ. ಪ್ರಾವಿಡೆಂಟ್ ಫಂಡ್ ಹಣ 3500ರೂ. ಮೋಟಾರ್ ಸೈಕಲ್‌ಗಾಗಿ ಅಡ್ವಾನ್ಸ್ ಮತ್ತು ಸ್ವಲ್ಪ ಅದರ ಜೊತೆಗೆ 5500 ರೂ. ನನ್ನ ಮನೆ ಕಟ್ಟುವ ಅಡ್ವಾನ್ಸಿನ ಜೊತೆಗೆ ಅವಳು ಕೊಟ್ಟ ಅವಳ ಸ್ವಂತ ಉಳಿತಾಯ 18,000-00 ರೂ. ಅಬ್ಬಾ 30,000ರೂ. ಗಳು ಅಬ್ಬಾ! ಯಾವಾಗ ತೀರಿಸ್ತೇನೋ. ಈ ಹೆಂಡತಿಯ ಕೈಯಲ್ಲಿ ಸಿಕ್ಕಿಕೊಂಡು, ನಾನು ತೀರಿಸಿದಂತೆಯೇ ಇದೆ. ಅಯ್ಯೋ ದೈವವೇ, ಏನು ನನ್ನ ದುರದೃಷ್ಟ! ಒಳ್ಳೆಯ ಮನಸ್ಸು ಹೃದಯ ಪಡೆದ ಆ ಹೆಣ್ಣು ಹತ್ತಿರ ಬೇಕೆಂದರೂ ದೂರ. ನನ್ನ ಕಷ್ಟ ಸುಖದ ಅಕ್ಕರೆಯೇ ಇಲ್ಲದ ಈ ಹೆಣ್ಣು ನನ್ನ ಧರ್ಮ ಪತ್ನಿ!!"

"ಇದು ಸಾಲವಲ್ಲ ಎನ್ನುತ್ತ ಲಲಿತಾ. ಆದರೆ ಅಷ್ಟು ಹಣ ನಿನ್ನಿಂದ ಸುಮ್ಮನೆ ಪಡೆಯಲು ನನಗೇನು ಅಧಿಕಾರ ಹೇಳು 'ನಾನು ನಿಮ್ಮ ಪತ್ನಿಯ ಲ್ಲವೆ' ಅಂತ ನನ್ನ ಮಾತನ್ನೇ ನನಗೆ ತಿರುಗಿಸಿ ದಬಾಯಿಸ್ತಿ. 'ಏನೇ ಆಗಲಿ ಒಂದು ದಿನ ನಾನು ಅದನ್ನು ಹಿಂತಿರುಗಿಸ್ತೀನಿ. ನೀನು ತೊಗೋಬೇಕು' ಅಂತ ಎಷ್ಟು ಹೇಳಿದರೂ ಒಡಂಬಡಲಿಲ್ಲವಲ್ಲಾ. ಅದೆಷ್ಟು ಅತ್ತುಬಿಟ್ಟಳು !

'ನಾನಿನ್ನೂ ಗಳಿಸ್ತೀನಿ ಸಂಜೀ (ನನ್ನ ಹೆಸರು ಸಂಜೀವನಾದರೂ, ಎಲ್ಲರೂ ನನ್ನನ್ನು ಜೀವು, ಜೀವಣ್ಣ ಎಂದು ಕರೆದರೂ, ಲಲಿತಾ ಮಾತ್ರ ಅದೆಷ್ಟು ಮುದ್ದಾಗಿ ಸಂಜೀ ಎನ್ನುತ್ತಾಳೆ). ಬೇಕಾದಷ್ಟು ಸರ್ವಿಸಿದೆ ನನ ಗಿನ್ನೂ, ಮಹಾ ಏನು ಹಣ ಹೇಳಿ, ಅಷ್ಟರ ಮೇಲೆ ನೀವು ಇನ್ನೂ ಬಲ

ವಂತ ಮಾಡೋದಾದ್ರೆ ಸರಿ ಕೊಟ್ಬಿಡಿ. ಬಡ್ಡಿ ಸಮೇತ ಕೊಡಿ ಆಯ್ತು. ಆದ್ರೆ ಅವತ್ತಿನಿಂದ ನಮ್ಮ ಸ್ನೇಹಾನೂ ಬೇಡ. ಋಣ ತಾನೇ ಅದು. ಮುಗಿಸ್ಬಿಡೋಣ ಆ ಋಣನ." ಎಂದಳು ಕಠಿಣವಾಗಿ, ಅಬ್ಬಾ ಏನು ಕೋಪ ! 'ಮೃದೂನಿ ಕುಸುಮಾದಪಿ' ಮಾತ್ರವಲ್ಲ 'ವಜ್ರಾದಪಿ ಕಠೋರಾಣಿ' ನನ್ನ ಲಲಿತಾನ ಮಾತುಗಳು !

'ಆಲ್‌ರೈಟ್ ಮೇಡಂ. ಇನ್ಮೇಲೆ ನಿನ್ನ ಹಣ ಎಲ್ಲಾ ನಂದೇ. ನಿನ್ನ ಸಂಬಾಳಾನೂ ಕಿತ್ಕೊಂದ್ಬಿಡ್ತೇನಿ' ಎಂದಾಗ ನೋಡಬೇಕಿತ್ತು ಅವಳ ಮುಖ ಅದೆಷ್ಟು ಸಂತಸ ಅವಳಿಗೆ !"

"ಅಂತೂ ಲಲಿತಳ ಕೃಪೆಯಿಂದಾಗಿ ಮನೆಯಲ್ಲಿ ನನಗೂ ಮರ್ಯಾದೆ. ವಿನುತಳ ದೃಷ್ಟಿಯಲ್ಲಿ ಈಗ ನಾನೂ ಉಳ್ಳವನಾಗಿದ್ದೇನಿ. ಸ್ವಂತಮನೆ, ಮೋಟಾರ್ ಸೈಕಲ್ ಇತ್ಯಾದಿ ಇತ್ಯಾದಿ. ಅಯ್ಯೋ ವಿನುತಾ. ವಿನುತನಳೇ ಲಲಿತಳಂತಿದ್ದಿದ್ದರೆ !! ಹುಂ. ನನಗೆಲ್ಲಿ ಆ ಭಾಗ್ಯ."

ಅಲ್ಲಿಗೆ ಮುಗಿದಿತ್ತು ಲಲಿತಳ ಬಗೆಗಿನ ಡೈರಿ. ಅದು ಎಲ್ಲಿಗೆ ಮುಗಿಯುತ್ತಿತ್ತೋ ಅವರು ಉಳಿದಿದ್ದರೆ !

ಕುತೂಹಲವಾಗಿ ಓದುತ್ತಿದ್ದ ನನಗೆ ಒಮ್ಮೆಲೆ ರೋಷ ಉಕ್ಕಿಬಂತು. ಯಾವಳೋ ದುಡಿಯುವ ಪರದೇಶಿಯ ಹಣ ಪಡೆದು ಮೆರೆದಿದ್ದಾರೆ ಇವರು. ಅಯ್ಯೋ ! ಆ ಹಣ ಅವಳ ಮುಖದ ಮೇಲೆ ಎಸೆದು ಬಂದು ಬಿಡಬೇಕು ಅವಳ ದರಿದ್ರ ಹಣ ನನಗ್ಯಾಕೆ ? ನನಗೇನು ಕಡಿಮೆಯಾಗಿದೆ ? ಎಂದು ದಡಬಡ ಸಿದ್ಧವಾದೆ. ದೈವವಶಾತ್. ನನ್ನ ಹೆಸರಿಗೆ ಬಂದಿದ್ದ ಎಲ್ಲ ಹಣ ಇನ್ನೂ ಸೇವಿಂಗ್ಸ್ ಖಾತೆಯಲ್ಲೆ ಇತ್ತು. ಚೆಕ್ ಬುಕ್ಕನ್ನು ಕೈ ಚೀಲದಲ್ಲಿ ತುರುಕಿ ಹೊರಟೆ.

ಅವರ ಆಫೀಸ್ ಹುಡುಕಿ ಹೊರಟಾಗ, ಆ ಆಫೀಸಿನಲ್ಲಿ ಅವರಿಗೆ ಇದ್ದ ಗೌರವದ ಅನುಭವ ನನಗಾಯಿತು. ನಾನು ಅವರ ಶ್ರೀಮತಿಯೆಂದು

ಎಲ್ಲರೂ ತೋರಿದ ಗೌರವದಿಂದ ನನಗೆ ಹೆಮ್ಮೆ ಆದಂತೆಯೇ ನಾಚಿಕೆಯೂ ಆಯಿತು. ಅವರನ್ನು ನಾನು ಎಂದು ತಾನೆ ಗೌರವದಿಂದ ಕಂಡಿದ್ದೆ. ಅವರಿಗೆ ಏನೇನೂ ಸಂಬಂಧ ವಿಲ್ಲದ ಸಿಬ್ಬಂದ ಅವರಲ್ಲಿ ಇಟ್ಟ ಗೌರವ ಅಭಿಮಾನಗಳೆಲ್ಲಿ ? ಕೈಹಿಡಿದ ಪತ್ನಿಯಾದ ನಾನು ತೋರಿದ ಅಸಡ್ಡೆಯಲ್ಲಿ!

ಅಂದು ಲಲಿತ ರಜ. ಅಡ್ರೆಸ್ ಕೇಳಿ ಪಡೆದುಕೊಂಡು ನನ್ನದೇ ಕಾರಿನಲ್ಲಿ—ಅವರ ಮೋಟರ್ ಸೈಕಲ್ ಮಾರಿ ಕಾರು ಕೊಂಡಿದ್ದೆನಲ್ಲ— ಲಲಿತಳ ಮನೆಯ ಮುಂದೆ ಇಳಿದೆ.

ಬಾಗಿಲು ತೆಗೆದವರು ಒಬ್ಬ ವೃದ್ಧರು. ಅವಳ ತಂದೆ ಇರಬಹುದು "ಮಲಗಿದ್ದಾಳೆ ಬನ್ನಿ. ನಿನ್ನೆಯಿಂದ ಸ್ವಲ್ಪಜ್ವರ" ಎಂದು ಆಹ್ವಾನಿಸಿ ಒಳನಡೆದರು.

ಸೋಫಾದಲ್ಲಿ ಕುಳಿತೆ. ಸುತ್ತಲೂ ಕಣ್ಣು ಹಾಯಿಸಿದೆ. ಸುಸಂಸ್ಕೃತ ವಾತಾವರಣದ ಮನೆ. ಎದುರಿಗಿನ ಕೋಣೆಯಿಂದ ಹೊರಬಂದಳು ಲಲಿತ. ಸರಳ ಉಡುಪಿನ ಗಂಭೀರ ಸ್ತ್ರೀ. ಬಿಳಿಯ ಸೀರೆ ಉಟ್ಟಿದ್ದಳು. ಹಣೆಗೆ ಕುಂಕುಮವಿಟ್ಟಿರಲಿಲ್ಲ. ಕೈಯಲ್ಲಿ ಒಂದು ಜತೆ ಚಿನ್ನದ ಬಳೆ. ಕುತ್ತಿಗೆಯಲ್ಲಿ ಒಂದೇ ಒಂದೆಳೆ ಸರ. ಕಿವಿಯಲ್ಲಿ ವಜ್ರದ ಓಲೆ ಮಾತ್ರ ಮಿಂಚುತ್ತಿತ್ತು.

"ನಮಸ್ಕಾರ, ನೀವು....?" ಎಂದು ಕೈ ಜೋಡಿಸಿ ಬಂದು ಪಕ್ಕ ಕುಳಿತಳು.

"ನಾನು ಸಂಜೀವ್ ಅವರ ಪತ್ನಿ. ಸುಮ್ಮನೆ ನೋಡಿ ಹೋಗೋಣವೆಂದು ಬಂದೆ ಜ್ವರ ಎಂದರು. ಎದ್ದು ಓಡಾಡ್ತಿದೀರಲ್ಲ" ಎಂದೆ ಸೌಜನ್ಯ ಪೂರಿತವಾಗಿ. ಎಷ್ಟೇ ಒರಟಾಗಿರಬೇಕೆಂದುಕೊಂಡರು ಏಕೋ ಆ ಹೆಣ್ಣಿನ ಎದುರಿಗೆ ಬೆಪ್ಪಾಗಿ ಬಿಟ್ಟಿದ್ದೆ, 'ಅವರ ಪತ್ನಿ ನಾನು' ಎಂದು ಅವಳೆದುರಿಗೆ ಹೇಳುವಾಗ ನನ್ನನ್ನು ನಾನೇ ಅಣಕಿಸಿ ಕೊಂಡಂತೆಯೂ ಆಯಿತು.

"ನಿನ್ನೆ ಸಂಜೆಯಿಂದ ಸ್ವಲ್ಪ ಮೈ ಬೆಚ್ಚಗಾಗಿದೆ. ಅದೇನು ಮಾಡುತ್ತೆ ಬಿಡಿ" ಎಂದವಳು ಒಂದು ಘಳಿಗೆ ಶೂನ್ಯದೊಳಕ್ಕೆ ನೋಡುತ್ತಾ,—

"ಈವತ್ತಿಗೆ ಸರಿಯಾಗಿ ಅವರು ಹೋಗಿ ಮೂರು ವರ್ಷವಾಯ್ತಲ್ಲ" ಎಂದಳು.

ನನ್ನ ಮೂಗು ಹಿಡಿದು ಕೆನ್ನೆಗೆ ತಾಡಿಸಿದಂತಾಯ್ತು ನನಗೆ. ವಾಸ್ತವ ವಾಗಿ ಅದರ ನೆನಪೇ ಇರಲಿಲ್ಲ. ನಾನು ಅವರ ಪತ್ನಿ!

"ತಾರೀಕಿನ ಪ್ರಕಾರ ಹೌದು. ತಿಥಿ ನಕ್ಷತ್ರದ ಪ್ರಕಾರ ಇನ್ನೂ ಹದಿನೈದು ದಿನಕ್ಕೆ ಮೂರು ವರ್ಷ"—ಬಿದ್ದ ಏಟಿನಿಂದ ಎಚ್ಚೆತ್ತುಕೊಳ್ಳ ಲೆಂದು ಏನೋ ಬಡಬಡಿಸಿದೆ, ನನಗೆ ಖಂಡಿತ ತಿಳಿಯದು ಇಂದೋ ನಾಳೆಯೋ ಅಪ್ಪ ಪಂಚಾಂಗ ನೋಡಿ ಹೇಳ್ತಾರೆ. 'ನಿನ್ನ ಗಂಡನ ತಿಥಿ' ಇಂತಾ ದಿನ ಅಂತ. ಅವತ್ತು ಮಾಡಬೇಕಾದದ್ದು ಮಾಡೋದು ಸಹ ಮಯೂರ ಮತ್ತು ಅಪ್ಪ. ಎಲ್ಲಾ ಅವರದ್ದೇ ಜವಾಬ್ದಾರಿ.

ನನ್ನ ಮಾತಿನಿಂದ ಲಲಿತ ಮೆಲ್ಲಗೆ ನಕ್ಕಂತಾಯಿತು. ನನಗೆ ಹೇಗೆ ಹೇಗೋ ಆಯಿತು. ಸ್ವಲ್ಪ ಹೊತ್ತು ಮೌನ. ನಾನು ತುಟಿ ಭದ್ರಮಾಡಿ ಕುಳಿತಿದ್ದೆ. ಅವಳನ್ನು ಏನೆಲ್ಲಾ ಅನ್ನಬೇಕೆಂದು ಸಂಕಲ್ಪಿಸಿ ಬಂದಿದ್ದೆ, ಆದರೆ ಆ ಗಂಭೀರ ವ್ಯಕ್ತಿಯ ಎದುರಿಗೆ. ಡೈರಿಯ ಪುಟಗಳಿಂದ ಎದ್ದು ಬಂದ ಆದರ್ಶ ಪ್ರೇಮಿಯನ್ನು ಏನೂ ಅನ್ನಲಾರದೆಂದೆ.

ಅವಳು ಎದ್ದು ಕೋಣೆಯ ಪರದೆ ತಳ್ಳಿ ಒಳ ಹೊಕ್ಕಾಗ ಅಲ್ಪ ಸ್ವಲ್ಪ ಕಂಡ ಒಳಗಿನ ದೃಶ್ಯದಿಂದ ಸ್ತಂಭೀಭೂತಳಾದೆ. ಟೇಬಲ್ಲಿನ ಮೇಲೆ ಸಂಜೀವರ ದೊಡ್ಡ ವರ್ಣದ ಫೋಟೋ. ಅದಕ್ಕೊಂದು ಗಂಧದ ಹೂವಿನ ಹಾರ. ಮೇಲೆ ಇಂದೇ ಇಟ್ಟ ದೊಡ್ಡ ಗುಲಾಬಿ ಹೂ. ಮುಂದೆ ತಟ್ಟೆಯಲ್ಲಿ ಏನೇನೋ ಇದ್ದವು. ಸರಿಯಾಗಿ ಕಾಣಲಿಲ್ಲ.

ನನಗಾಗ ಆದ ಭಾವನೆ ದುಃಖವೋ, ಹೀನಾಯವೋ, ಅಸೂಯೆಯೋ ತಿಳಿಯದು.

ಸೌಮ್ಯವಾದ ಮೆಲುನಗೆ ಹೊತ್ತು ಲಲಿತಾ ಹೊರ ಬಂದು, ಅಡುಗೆ ಮನೆ ಹೊಕ್ಕು ಮತ್ತೆ ಬಂದು ನನ್ನ ಮುಂದೆ ಒಂದು ತಟ್ಟೆ ಹಿಡಿದಾಗಲೇ ನನಗೆ ಎಚ್ಚರ.

"ಸ್ವಲ್ಪತೊಗೋಳ್ತೀರಾ?—ಎಂತಹ ಮೆಲುವಾದ ವಿಶ್ವಾಸದ ದನಿ!

"ಶೂರ್ ತೊಗೊಳ್ದೆ ಏನು? ಆದಕ್ಕೆ ಮುಂಚೆ ನಾನು ನಿಮ್ಮನ್ನೊಂದು ಮಾತು ಕೇಳ್ಬೇಕು. ಉತ್ತರ ಹೇಳ್ತೀರಾ" ಎಂದೆ. ಆವಳ ಸಮ್ಮತಿಗೆ ಕಾಯದಲೇ "ನೀವು ಸಂಜೀವ್‌ನ ಪ್ರೇಮಿಸಿದ್ದಿರಾ?" ಕೇಳಿಯೇ ಬಿಟ್ಟೆ ಹೇಗೋ ಧೈರ್ಯವಹಿಸಿ.

ಅವಳ ಕಣ್ಣು ತೀವವಾಗಿ ಮಿಂಚಿತು. ಒಂದು ನಿಟ್ಟಿಸಿರು ಬಿಟ್ಟು —"ಹುಂ. ಪ್ರೇಮಿ! ಪ್ರೇಮಿ ಎಂದರ ಏನು ಎಂದು ಸರಿಯಾದ ವಿವರಣೆ ಯಾರು ಕೊಡಬಲ್ಲವರು ಹೇಳಿ. ಪ್ರೇಮ ನಿಮ್ಮ ಹಕ್ಕು, ನೀವವರ ಪತ್ನಿ ನಾನ್ಯಾರು? ನಾನು ಏನವರಿಗೆ? ಸಹೋದ್ಯೋಗಿ, ಗೆಳತಿ ಮಾತ್ರ. ಹೇಗೆ ಹೇಳ್ಬೇಕೋ ಗೊತ್ತಿಲ್ಲ. ಅವರೆಡೆಗೆ ನಾನು ಆಕರ್ಷಿತಳಾಗಿದ್ದೆ ನಿಜ. ಆದ್ರೆ ಒಂದು ದಿನಾನೂ ನಾನು ಅವರನ್ನು ಬಯಸಲಿಲ್ಲ. ಅವರು ಹದ್ದು ಮೀರಿ ವರ್ತಿಸಲಿಲ್ಲ. ಅವರು ನಿಮ್ಮವರು. ನಿಮ್ಮವರಾಗಿಯೇ ಉಳಿದಿರ ಬೇಕೂಂತ ನಾನು ಎಷ್ಟೋಸಲ ಅವರಿಗೆ——"

ನನಗೆ ನನ್ನ ಬಗೆಗಿನ ಲೋಪದ ಸತ್ಯ ತಿಳಿಯಲು ಅಕ್ಕರೆ ಇರಲಿಲ್ಲವೋ ಅಥವಾ ಅರ್ಹತೆಯೇ ಇರಲಿಲ್ಲವೋ ಅವಳ ವಾಕ್ಯ ಮುಗಿಯುವ ಮುನ್ನವೇ ನಡುವೆ ಬಾಯಿ ಹಾಕಿ—"ಕ್ಷಮಿಸಿ, ಅಂತೂ ನೀವು ನಮ್ಮವರಿಗೆ ಬಹಳ ಕೃಪೆ ತೋರಿದ್ದೀರಿ. ಆ ಋಣ ಅವರೇ ತೀರಿಸ ಬೇಕಿತ್ತು. ಅದು ನನಗೆ ಬಹಳ ಭಾರ ಅನ್ನಿಸ್ತಾ ಇದೆ. ಸುಮಾರು

ನೀವು ಅವ್ರಿಗೆ ಕೊಟ್ಟಿರೋ ಹಣ ಎಷ್ಟು ಅಂತ ತಿಳಿಸಿದ್ರೆ, ನಾನು ತೀರಿಸ್ತೀನಿ" ಎಂದೆ.

"ಹಣ ತೀರಿಸಬಲ್ಲಿರಿ ಮೇಡಂ. ಆದ್ರೆ ಅವರಿಗೆ ಕೊಟ್ಟ ತೃಪ್ತಿ, ನೆಮ್ಮದಿ, ಶಾಂತಿ ನೀವು ಇನ್ನೊಂದು ಜನ್ಮದಲ್ಲೂ ತೀರಿಸಲಾರಿರಿ ಅಲ್ಲವೇ!" ವ್ಯಂಗವಾಗಿ ನುಡಿದಳು ಲಲಿತ.

"ಆ ಮಾತೆಲ್ಲಾ ಇರಲಿ. ಎಷ್ಟು ಹಣ ಹೇಳಿ...ಬೇಡ ಬಿಡಿ. ನನಗೇ ಗೊತ್ತು. ಮೂವತ್ತು ಸಾವಿರ" ಎಂದು ಚಕ್ ಬುಕ್ ತೆಗೆದು ಬರೆಯಲು ತೊಡಗಿದೆ.

"ನನ್ನ ಹೆಸರು ಲಲಿತಾಶಾಸ್ತ್ರಿ ಎಂದು ಬರೆಯಿರಿ. ಇಲ್ದಿದ್ರೆ ಕ್ಯಾಷ್ ಆಗೋದು ಕಷ್ಟವಾಗಬಹುದು" ಎಂದಳು ಗಂಭೀರವಾಗಿ, ಕೊಡುವಷ್ಟು ಕೊಡು ಎಂದು ಕೈ ನೀಡಿದಂತೆ ನುಡಿದಿದ್ದಳು.

ಚೆಕ್ ಬರೆದು ಅಗತ್ಯವಿದ್ದುದಕ್ಕಿಂತ ಹೆಚ್ಚಿನ ರಭಸದಿಂದ 'ಪರ್' ಎಂದು ಹರಿದು ಅವಳ ಕೈಗಿತ್ತು ಋಣ ಭಾರ ಕಳೆಯಿತು ಎಂದುಕೊಂಡು ನನ್ನ ಉತ್ಕೃಷ್ಟತೆ ನಿರೂಪಿಸಿದೆ ಎಂದುಕೊಂಡೆ.

"ಬರ್ತೀನಿ" ಎಂದು ಎದ್ದು ನಿಂತಾಗ ಲಲಿತ—"ಟಿಫಿನ್ ತೊಗೊಳ್ಳೊಲ್ವೆ? ನನ್ನ ಮೇಲೆ ಕೋಪ ಇದ್ರೂ ಇದರ ಮ್ಯಾಲೆ ಏಕೆ? ಅದೂ ಅಲ್ದೆ ಈವತ್ತು ಇದನ್ನ ಅವರ ನೆನಪಾಗಿ ಮಾಡಿದ್ದು. ಬೇಡ ಅನ್ನೋ ಅಸೌಜನ್ಯ ತೋರಬಾರ್ದು ನೀವು" ಎಂದಳು ಮೃದುವಾಗಿ.

ನಿಂತಿದ್ದವಳು ಕುಕ್ಕರಿಸಿಬಿಟ್ಟೆ. ಅವರಿಗೆ ಪ್ರೇಮವಾದ ಕೇಸರೀ ಭಾತು. ಎಂದೂ ಇಲ್ಲದುದು ಗಂಟಲು ಹಿಡಿಯಿತು. ಅವಳಿಗಿರುವಷ್ಟು ಮಮತೆ,ವಿಶ್ವಾಸ,ನಿಷ್ಠೆಗಳು ನನಗಿಲ್ಲವಾಯಿತೆ ಎನ್ನಿಸಿತು ನನ್ನ ಮನಸ್ಸಿಗೂ.

ಭಾವೋದ್ವೇಗಗಳೇ ಇಲ್ಲದ ನನ್ನಲ್ಲಿ ಭಾವ ಸಂಚಲನವಾಗಿ' ನಾನು ನಾನಲ್ಲವೆ? ಎಂದು ಕೊಳ್ಳುವಂತಾಯಿತು.

ಆ ಡೈರಿಯನ್ನು ಮತ್ತೆ ಅವರ ವಸ್ತುಗಳ ನಡುವೆಯೇ ತುರುಕಿ ಇನ್ನು ಮುಂದೆ ಎಂದೂ ಆ ಅಲಮಾರದ ಬಾಗಿಲು ತೆರೆಯುವುದೇ ಬೇಡ ಎಂದು ಮುದ್ರೆ ಹಾಕಿದೆ.

ಹದಿನೈದು ಇಪ್ಪತ್ತು ದಿನ ಕಳೆದಿರಬಹುದು.

ಒಂದು ದಿನ ಬೆಳಿಗ್ಗೆ ಮಯೂರ—" ಅಮ್ಮ, ಇಲ್ನೋಡಿದೆಯೇ ನಮ್ಮ ಯಾವಾಗಮ್ಮ ಕೊಟ್ಟೆ? ನಮಗ್ಯಾರ್ಗೂ ಗೊತ್ತೇ ಇಲ್ಲ" ಎಂದು ಕೂಗಿದ. ಏನಿರಬಹುದು ಎಂದು ಮಾಡುತ್ತಿದ್ದ ಕೆಲಸಬಿಟ್ಟು ಮಯೂರ ಬಳಿಗೆ ಓಡಿದೆ. ಪೇಪರ್ ಕೈಲಿ ಹಿಡಿದಿದ್ದ ಮಯೂರ ಬೆಟ್ಟು ತೋರಿದಲ್ಲಿ ಕಣ್ಣಾಡಿಸಿದೆ:

## ಕೊಡುಗೆ

'ಮೂರು ವರ್ಷದ ಹಿಂದೆ ವಿಮಾನಾಪಘಾತದಲ್ಲಿ ಮಡಿದ ಡೆಪ್ಯುಟಿ ಸೆಕ್ರೆಟರಿ ದಿ॥ ಸಂಜೀವ್ ಅವರ ಪತ್ನಿ ಶ್ರೀಮತಿ ವಿನುತ ಸಂಜೀವ್ ಅವರು ತಮ್ಮ ದಿವಂಗತ ಪತಿಯ ಹೆಸರಿನಲ್ಲಿ ಮೂವತ್ತು ಸಾವಿರ ರೂ. ಗಳನ್ನು ಆಸ್ಪತ್ರೆಯ ಹೊಸ ವಿಭಾಗ ತೆಗೆಯಲು ಉದಾರ ದಾನವಾಗಿ ಕೊಟ್ಟಿರುತ್ತಾರೆ.'

ಓದಿದ ನಾನು ನಿಂತಲ್ಲೇ ಕುಸಿದೆ.

ಲಲಿತಾ! ಓ ಲಲಿತಾ! ! ಎಂದು ಉಲಿಯಿತು ನನ್ನ ಅಂತಸ್ಸಾಕ್ಷಿ. 'ಅವರು ಅಂದುದು ನಿಜ ಲಲಿತಾ ನೀನೇ ಅವರ ಪತ್ನಿ, ಎಂದು ಒಂದೇ ಸಮ ಕೂಗುತ್ತಿತ್ತು ನನ್ನ ಅಂತರಂಗ.

ಕೆಲವೇ ದಿನಗಳಲ್ಲಿ ಆಸ್ಪತ್ರೆಗೆ ಸಂಬಂಧಪಟ್ಟವರು ಆ ಕೊಡುಗೆಯ ಸಂಬಂಧದ ಕಾಗದ ಪತ್ರಗಳ ಸಹಿಗಾಗಿ ಬಂದಾಗ, ಲಲಿತ ನನ್ನ ಜೊತೆ

ಯಲ್ಲೇ ಇದ್ದಳು. ಆ ನಿಃಸ್ವಾರ್ಥಿಯ ತಂಪು ಸ್ನೇಹದ ನೆರಳಲ್ಲಿ ನಾನೂ ನನ್ನ ಸ್ವಾರ್ಥವನ್ನು ಹೇಳ ಹೆಸರಿಲ್ಲದಂತೆ ತೊಳೆದು ಬಿಡುತ್ತಿದ್ದೇನೆ. ಹಲವಾರು ಸಂಘ ಸಂಸ್ಥೆಗಳಿಗೆ ಸದಸ್ಯಳಾಗಿ ನಿಸ್ವಾರ್ಥ ಸೇವೆ, ಆರ್ಥಿಕ ನೆರವು ನೋಡುತ್ತಿದ್ದೇನೆ.

ಅವಳಿಂದ 'ಪತ್ನಿ' ಎಂಬ ಬಿರುದನ್ನು ಕಸಿದು ನನ್ನದಾಗಿ ಮಾಡಿಕೊಳ್ಳಬೇಕೆಂಬ ಆಸೆ ನನ್ನದು. ಸಮಾಜದ ದೃಷ್ಟಿಯಲ್ಲಿ ನಾನೇ ಪತ್ನಿಯಾದರೂ ಅವಳ ಮುಂದೆ ನಾನು ? ? ?

೦೦೦

# ರಾಜೂ...........

—ಶರ್ವಾಣಿ

"ಹೊರಗೆ ಬೋರ್ಡು ಹಾಕಿದೆ. ನೋಡಿದೆಯೇನಯ್ಯಾ?"

"..............................................."

"ಹಾಗಾದರೆ ಇದೆಲ್ಲಾ ಏನು?"

"........... ......................................"

"ಈ ಊರಿಗೆ ಹೊಸಬನೇನು?"

ಒಳಕ್ಕೆ ಹೆಜ್ಜೆಯಿಡುತ್ತಿದ್ದ ನಾನು ಈ ಮಾತುಗಳನ್ನು ಕೇಳಿ ತಟ್ಟನೆ ನಿಂತು ಬಿಟ್ಟೆ, ನಾನೂ ಆ ಊರಿಗೆ ಹೊಸಬನೇ ಆದ್ದರಿಂದ ಆ ಬೋರ್ಡಿನ ವಿಷಯ ತಿಳಿದುಕೊಳ್ಳೋಣವೆಂದು ಹಿಂದಿರುಗಿ ನೋಡಿದೆ. "ಉಚಿತ ವೈದ್ಯಾಲಯ" ಎಂದು ದೊಡ್ಡ ದೊಡ್ಡ ಅಕ್ಷರಗಳಲ್ಲಿ ಬರೆದಿದ್ದ ಬೋರ್ಡು ಕಾಣಿಸಿತು.

"ಒಳ್ಳೇ ಮನುಷ್ಯನಯ್ಯಾ ನೀನು! ಸರಿ, ಸರಿ, ಹೋಗಿ ಬಾ, ಮಾರಾಯ," ಎಂದು ಪಕಪಕನೆ ನಕ್ಕ ಸದ್ದು ಕೇಳಿಸಿತು. 'ಯಾರದು ಈ ನಗು' ಎಲ್ಲಿಯೋ ಕೇಳಿದಂತಿದೆಯಲ್ಲಾ, ಯಾರಿರಬಹುದು? ಅಂದು ಕೊಳ್ಳುತ್ತಾ ಒಳಕ್ಕೆ ಹೆಜ್ಜೆಯಿಟ್ಟೆ. ಡಾಕ್ಟರ್ ರೋಗಿಗಳನ್ನು ನೋಡುವ ಕೋಣೆ ಅದು. ಸಾಕಷ್ಟು ವಿಶಾಲವಾಗಿತ್ತು. ದೃಢ ಶರೀರದ ಡಾಕ್ಟರ್ ಕುರ್ಚಿಯಲ್ಲಿ ಕುಳಿತು ಅಂಗೈಯನ್ನು ಗಡ್ಡಕ್ಕೆ ಆನಿಸಿ ತನ್ನ ಬಳಿ ನಿಂತಿದ್ದ

ರೋಗಿ ಹೇಳುತ್ತಿದ್ದುದನ್ನು ಕೇಳುತ್ತಿದ್ದಂತಿತ್ತು. ಆತನ ದೃಷ್ಟಿ ಮಾತ್ರ ತನ್ನ ಮುಂದಿದ್ದ ಮನುಷ್ಯನನ್ನು ಹಾದು ಎಲ್ಲಿಯೋ ಶೂನ್ಯವನ್ನು ದಿಟ್ಟಿಸುತ್ತಿದ್ದಂತಿತ್ತು. ತನ್ನೆದುರಿಗೆ ನಿಂತು ಮಾತನಾಡುತ್ತಿದ್ದ ಮನುಷ್ಯನ ಮಾತುಗಳನ್ನಾತ ಕೇಳುತ್ತಿರುವನೋ ಇಲ್ಲವೋ ಎಂಬ ಸಂಶಯ ಬರುವಂತಿತ್ತು. 'ಉಹುಂ ನನ್ನ ಪರಿಚಯದ ವ್ಯಕ್ತಿಯಲ್ಲ ಈತ' ಅಂದುಕೊಂಡೆ ಅಷ್ಟರಲ್ಲಿ ಆತ ಪಕಪಕನೆ ನಕ್ಕ. ಬೆಚ್ಚಿ ಆತನ ಮುಖ ನೋಡಿದೆ. ಕಣ್ಣಿನಲ್ಲಿ ಕಾಂತಿ ಮಿಂಚುತ್ತಿತ್ತು. ಮುಖ ದೀಪ್ತವಂತವಾಗಿತ್ತು. ಸ್ವಚ್ಛವಾದ ನಗು ಅದು. ನನಗೆ ಚಿರಪರಿಚಿತವಾದ ನಗು ಅದು. ಯಾರೀತ?

"ಒಳ್ಳೆವನಯ್ಯಾ ನೀನು! ಇಷ್ಟು ಮಾತ್ರಕ್ಕೇ ಗಾಬರಿ ಪಡ್ತೀಯಲ್ಲಾ. ಏನೂ ಪರ್ವಾಗಿಲ್ಲ.. ಈಗೊಂದು ಇಂಜಕ್ಷನ್ ಕೊಡ್ತೀನಿ. ಈ ಮಾತ್ರೆ ಹಾಕಿಕೋ. ನಾಳೆ ಇಷ್ಟೊತ್ತಿಗೆ ಹೇಗಿರ್‍ತೀಯೋ ನೋಡು ಮತ್ತೆ....ಹುಂ...ಆ ಕೋಣೆಯಲ್ಲಿ ಕುಳಿತುಕೋ." ಎಂದೆಂದು ಮತ್ತೊಬ್ಬ ರೋಗಿಯನ್ನು ಮುಂದಕ್ಕೆ ಕರೆದ, ಆತ. ಮತ್ತೆ ಅನ್ಯಮನಸ್ಕತೆ ಆತನ ಮುಖವನ್ನು ಆವರಿಸಿತು. ಅಂಗೈಯನ್ನು ಗಡ್ಡಕ್ಕೆ ಆನಿಸಿ ತನ್ನ ಹತ್ತಿರ ನಿಂತಿದ್ದ ರೋಗಿ ಹೇಳುತ್ತಿದ್ದುದನ್ನು ಕೇಳತೊಡಗಿದ. ಆತನ ದೃಷ್ಟಿ ಎದುರಾಗಿ ನಿಂತವನನ್ನು ಹಾದು ಎಲ್ಲಿಯೋ ಶೂನ್ಯವನ್ನು ನಿಟ್ಟಿಸುತ್ತಿತ್ತು.

ನನ್ನ ಮನಸ್ಸು ಕಳವಳಕ್ಕೀಡಾಯಿತು. ಆತನಲ್ಲಿ ನನಗೆ ಚಿರಪರಿಚಿತವಾದುದೇನೋ ಇದೆ, ಯಾರಿರಬಹುದು ಎಂದು ಎಷ್ಟು ಆಲೋಚಿಸಿದರೂ ನೆನಪಾಗಲೊಲ್ಲದು. ಅಷ್ಟರಲ್ಲಿ ಡಾಕ್ಟರ್ ಇಂಜಕ್ಷನ್ ಕೊಡಲೋ ಏನೋ ಎದ್ದು ಪಕ್ಕದ ಕೋಣೆಗೆ ಹೋದರು.

ಡಾಕ್ಟರ ಹೆಸರು ಬೋರ್ಡಿನ ಮೇಲಿರುತ್ತಲ್ಲಾ, ನೋಡಬೇಕಾಗಿತ್ತು ಎಂದುಕೊಂಡೆ. ನನ್ನ ಪಕ್ಕದಲ್ಲಿ ಕುಳಿತಿದ್ದ ಮನುಷ್ಯನನ್ನು "ಈ ಡಾಕ್ಟರ ಹೆಸರೇನಪ್ಪಾ" ಎಂದು ಕೇಳಿದೆ. ಆತ ಆಶ್ಚರ್ಯದಿಂದ ಕಣ್ಣರಳಿಸಿ ಇದೆಂಥಾ

ಪ್ರಶ್ನೆ ಎಂಬಂತೆ ನನ್ನ ಕಡೆ ನೋಡಿದ. ಅನಂತರ 'ಈ ವೂರ್‍ಗೆ ಹೊಸದಾಗಿ ಬಂದಂಗೆ ಕಾಣ್ತದೆ ತಾವು. ನಮ್ಮ ಡಾಕ್ಟ್ರಯ್ನೋರ ಎಸ್ರು ರಾಜಸೇಕರ ಪ್ನೋರೂ ಅಂತ ಏನೋ ಐತೆ. ನಾವೆಲ್ಲಾ ಕೂಗೋದು 'ರಾಜಪ್ನೋರು' ಅಂತಾನೇ. ಆ ಎಸರು ತಿಳಿದ ಮಂದಿ ಇಲ್ಲ—ಈ ಸುತ್ತಮುತ್ತಲಾಗ' ಎಂದ.

ನನ್ನ ಕಣ್ಣಿನ ಪೊರೆ ಕಳಚಿದಂತಾಯಿತು. ಹಾಗಾದರೆ ಈತ ರಾಜೂನೇ ? ನನ್ನ ಚಿಕ್ಕಂದಿನ ಒಡನಾಡಿ, ಐವತ್ತು ವರ್ಷವಾದರೂ, ದೃಢಕಾಯ, ಅಜಾನುಬಾಹು, ಸ್ಫುರದ್ರೂಪಿಯಾದ ರಾಜುವನ್ನು ಗುರ್‍ತು ಹಿಡಿಯುವುದು ಕಷ್ಟವೇನಲ್ಲ. ಆದರೆ ಮುಖದಲ್ಲಿ ಕಾಣುವ ಅನ್ಯಮನಸ್ಕತೆ ಮುಖದ ಚಹರೆಯನ್ನೆ ಬದಲಾಯಿಸಿದಂತಿತ್ತು. ಶೂನ್ಯವನ್ನು ದಿಟ್ಟಿಸು ತ್ತಿದ್ದ ಕಣ್ಣುಗಳು ರಾಜೂನ ಕಣ್ಣುಗಳಂತೆ ಕಾಣುತ್ತಿರಲಿಲ್ಲ.

ಅಷ್ಟರಲ್ಲಿ ಡಾಕ್ಟರು ಪಕ್ಕದ ಕೋಣೆಯಿಂದ ಹೊರಬಂದರು ಪರಿಶೀಲಿಸಿ ನೋಡಿದೆ. ನಡಿಗೆಯಲ್ಲಿ ಮೊದಲಿನ ಠೀವಿ ಇರಲಿಲ್ಲ. ವಯಸ್ಸಿನ ಪ್ರಭಾವವಿರಬಹುದು. ನನ್ನನ್ನು ಮಾತ್ರ ಈಗ ಹಳೆಯ ಸ್ನೇಹಿತರಾದರೂ ನೋಡಿದರೆ ಗುರ್ತಿಸಬಲ್ಲರೇನು ? ಆದರೆ....ರಾಜಶೇಖರ ಎಂಬ ಹೆಸರಿ ನವರು ಎಷ್ಟೋ ಜನರಿರಬಹುದು. ನನಗೆ ತಿಳಿದ ರಾಜಶೇಖರನ ಕಣ್ಣು ಗಳಲ್ಲಿ ಸದಾ ಜೀವನಗೆ ತುಂಬಿತುಳುಕುತ್ತಿತ್ತು. ನಾನಾತನನ್ನು ನೋಡಿ, ಸುಮಾರು ಹತ್ತುವರ್ಷವಾಗಿತ್ತು. ಅದೊಂದು ದಿನ ರೈಲಿನಿಂದಿಳಿಯು ತ್ತಿದ್ದಾಗ ಅಕಸ್ಮಾತ್ ಕಾಣಿಸಿದ್ದ. ನನ್ನನ್ನು ನೋಡಿ ಅವನಿಗಾದ ಸಂತೋಷ ಅಷ್ಟಿಷ್ಟಲ್ಲ—ಬಾಚಿ. ತಬ್ಬಿ, ಈಗ ಬರಲಾರೆ ಕಣೋ ಅಂತ ಗೋಗರೆದರೂ ಕೇಳದೆ ಮನೆಗೆ ಎಳೆದುಕೊಂಡು ಹೋಗಿದ್ದ ನಾವಿಬ್ಬರೂ ಅಕಸ್ಮಾತ್ತಾಗಿ ಒಂದು ಕಡೆ ಸೇರಿದ್ದು ಇಬ್ಬರಿಗೂ ನಿಧಿ ಸಿಕ್ಕಿದಷ್ಟು ಸಂತೋಷವಾಗಿತ್ತು. ಚಿಕ್ಕಂದಿನ ವಿಷಯಗಳನ್ನು ಜ್ಞಾಪಿಸಿಕೊಳ್ಳುವುದರಲ್ಲಿ ವೇಳೆ ಕಳೆದುದೇ ತಿಳಿಯಲಿಲ್ಲ. ಅನಂತರ ತನ್ನ ಮಗನನ್ನು ತೋರಿಸಿದ್ದ. ತಂದೆಗೆ ತಕ್ಕ ಮಗ ಅನ್ನಿಸಿತ್ತು.

"ಇಗೋ, ನೋಡಿದೆಯೋ ಇವನ್ನ. ನನ್ನ ಏಕಮಾತ್ರ ಪುತ್ರ, ಇವನ ತಾಯಿಯನ್ನು ನೋಡುವ ಅದೃಷ್ಟ ನಿನಗಿಲ್ಲ. ಆದರೆ ಇವನನ್ನು ನೋಡಿದರೆ ಸಾಕು. ಎಲ್ಲಾ ತದ್ರೂಪು ತಾಯಿನೇ........ನಾನೇ ಬೆಳೆಸಿ ದೊಡ್ಡವನನ್ನಾಗಿ ಮಾಡಬೇಕಾಯಿತು........" ರಾಜೂನ ಕಂಠ ತುಂಬಿ ಬಂದಿತ್ತು. ತಕ್ಷಣ ಆ ಹುಡುಗ ಒಂದು ಹೆಜ್ಜೆ ಮುಂದಿಟ್ಟ. "ಅಪ್ಪಾ, ಈವತ್ತು ಕಾಲೇಜಿನಲ್ಲಿ ಪಂಕ್ಷನಿದೆ ಅಂತ ಹೇಳಿದ್ದು ನೆನಪಿದೆ ತಾನೇ ನಿಮಗೆ? ಖಂಡಿತ ಬರಬೇಕು..." ಎಂದು ನನ್ನ ಕಡೆ ನೋಡಿ ನೀವೂ ಖಂಡಿತ ಬನ್ನಿ ಅಂಕಲ್ ಎಂದ. ಆ ಹುಡುಗ ಬೇಕೆಂದೇ ಮಾತು ಬದಲಾಯಿಸಿ ದಂತೆನ್ನಿಸಿತು ನನಗೆ.

ಆ ನಂತರ ರಾಜು ತನ್ನ ಮಗನನ್ನು ಕುರಿತು ತುಂಬಾ ತುಂಬಾ ಹೇಳಿದ್ದ. ಅವನ ಬುದ್ಧಿ ಮತ್ತೆ, ಚುರುಕುತನ ಕುರಿತು ವಿವರಿಸಿದ್ದ. ಗುಣವಂತನಾದ ಮಗನನ್ನು ಕುರಿತು ಮಾತನಾಡುತ್ತಿರುವಾಗ ಅವನ ಕಣ್ಣುಗಳಲ್ಲಿ ತೃಪ್ತಿ ಮೂಡಿ ನಿಂತಿತ್ತು. ಇಷ್ಟರಲ್ಲಿಯೇ ತನಗೆ ವೃತ್ತಿಯಲ್ಲಿ ಸಹಾಯವಾಗಿ ನಿಲ್ಲುವ ಮಗನನ್ನು ಕಂಡರೆ ಯಾವ ತಂದೆಗೆ ತಾನೇ ಹೆಮ್ಮೆ ಯೆನಿಸದು.

ಅನಂತರ ನಾನು ರಾಜೂನ ನೋಡಿಯೇ ಇರಲಿಲ್ಲ ಈಗ ಈ ಡಾಕ್ಟರನ್ನು ನೋಡಿದರೆ ರಾಜೂನ ನೆನಪಾಗುತ್ತಿದೆ. ಪಕ್ಕದಲ್ಲಿದ್ದಾತ ನೊಂದಿಗೆ "ಈತನಿಗೆ ಮಕ್ಕಳೆಷ್ಟುಮಂದಿ ?" ಎಂದು ವಿಚಾರಿಸಿದೆ.

"ಪ........ಆ ವಿಷಯ......"

ಅಷ್ಟರಲ್ಲಿ ಆತನ ಸರದಿ ಬಂದು ಎದ್ದು ಡಾಕ್ಟರ ಬಳಿಹೋದ. ಏನು ಮಾಡಬೇಕೀಗ ? ನನ್ನ ಸಂದೇಹ ಪರಿಹಾರವಾಗುವುದೆಂತು ? ಪ್ರಯತ್ನಿ ಸಲೇ ಬೇಡವೇ ಎಂಬ ಸಂದಿಗ್ಧದಲ್ಲಿರುವಾಗಲೇ ನನ್ನ ಸರದಿ ಬಂತು. ಕೊನೆಯವನು ನಾನೇ. ಎದ್ದುಹೋಗಿ ಡಾಕ್ಟರ ಮುಂದೆ ನಿಂತೆ. ಆತನ ದೃಷ್ಟಿ ನನ್ನ ಮೇಲೆ ಇರಲಿಲ್ಲ. ನನ್ನನ್ನು ಹಾದು ಎಲ್ಲಿಯೋ ಶೂನ್ಯವನ್ನು ದಿಟ್ಟಿಸುತ್ತಿತ್ತು.

ಆದದ್ದಾಗಲಿ ಎಂದು "ನಾನು ನರಹರಿ" ಎಂದೆ.

ಡಾಕ್ಟರ ದೃಷ್ಟಿ ನನ್ನ ಮೇಲೆ ಬಿತ್ತು. ಮತ್ತೊಂದು ಕ್ಷಣದಲ್ಲಿ ಅದು ಆಶ್ಚರ್ಯವಾಗಿ ಮಾರ್ಪಟ್ಟಿತ್ತು. ಮರುಕ್ಷಣದಲ್ಲಿ ಆತನ ಮುಖದಲ್ಲಿ ಆನಂದದ ಕಳೆ ಎದ್ದು ಕುಣಿಯಿತು, ಕೈಯಲ್ಲಿದ್ದ ಪೆನ್ನು ಜಾರಿ ಕೆಳಗೆ ಬಿದ್ದುದನ್ನು ಗಮನಿಸಿದೆ ಎದ್ದು ನಿಂತ. ನರಹರೀ ಎಂದು ನನ್ನನ್ನು ಬಾಚಿ ತಬ್ಬಿದ, ಸಂತೋಷದಿಂದ ಕ್ಷಣಕಾಲ ಮೈಮರೆತೆ ನಾನು. "ರಾಜೂ, ನೀನೇನೇನೋ. ನಂಬಲಾಗುತ್ತಿಲ್ಲ ಕಣೋ ನನಗೆ" ಎಂದು ತಡವರಿಸಿದೆ. ಸ್ವಲ್ಪ ಹೊತ್ತಿನ ನಂತರ ಚೇತರಿಸಿಕೊಂಡೆ. ಒಂದು ಕುರ್ಚಿ ಎಳೆದುಕೊಂಡು ಕುಳಿತುಕೊಂಡೆ.

ಏನೋ ಇದು? ಇದ್ದಕ್ಕಿದ್ದ ಹಾಗೆ ಆಕಾಶದಿಂದ ಇಳಿದುಬಂದೆಯಾ ? ಏನುಕಥೆ ? ನಿನ್ನನ್ನು ನನ್ನ ಹತ್ತಿರಕ್ಕೆ ಎಳೆದು ತಂದಂಥಾ ನಿನ್ನ ರೋಗದ ನಾಮಧೇಯವೇನೆಂದು ವಿವರಿಸುವಂಥಾವನಾಗು. ಅದಕ್ಕೆ ತಕ್ಕ ಬಹುಮಾನ ಕೊಡೋಣಾಂತೆ" ಅಂದ. ಕಣ್ಣಿನಲ್ಲಿ ಎಂದಿನ ನಗೆ ಚಿಮ್ಮುತ್ತಿತ್ತು. ಇಷ್ಟು ಹೊತ್ತಿನಿಂದ ನಾನು ನೋಡುತ್ತ ಕುಳಿತಿದ್ದ ಡಾಕ್ಟರ್ ಅಲ್ಲ ಈತ. ನನ್ನ ಚಿಕ್ಕಂದಿನ ಮಿತ್ರ ರಾಜೂನೇ. ತೃಪ್ತಿಯಿಂದ ನಿಟ್ಟುಸಿರುಬಿಟ್ಟೆ.

"ನನ್ನ ವಿಷಯ ಹಾಗಿರಲಿ, ನೀನೆಷ್ಟು ಬದಲಾಯಿಸಿದೀಯೋ ರಾಜೂ, ಒಂದು ಗಂಟೆಯಿಂದ ನೀನು ಹೌದೋ ಅಲ್ಲವೋ ಅಂತ ಒದ್ದಾಡುತ್ತಿದೀನಿ ಸುಮ್ನೆ" ಎಂದೆ.

ಸರಿ, ನನ್ನನ್ನು ಮನೆಗೆ ಹೋಗಗೊಡಲಿಲ್ಲ ರಾಜು. ಊಟ ಮಾಡಿಯೇ ಹೋಗಬೇಕೆಂಬ ಅವನ ಮಾತನ್ನು ಮೀರಲಾಗಲಿಲ್ಲ ನನಗೆ. ಅಲ್ಲಿನ ಕೆಲಸ ಮುಗಿಸಿಕೊಂಡು ಹನ್ನೆರಡು ಗಂಟೆಯ ವೇಳೆಗೆ ಮನೆಗೆ ಹೋದೆವು.

"ಬಾರೋ, ಇದೇ ನಮ್ಮ ಮನೆ" ಎಂದು ಮನೆಯೊಳಕ್ಕೆ ಆಹ್ವಾನಿಸಿದ. ಮನೆಯಲ್ಲಿ ಮಕ್ಕಳು ಮರಿಯ ಸದ್ದೇನೂ ಕೇಳಿಸಲಿಲ್ಲ. ಒಂದು

ವಿಧವಾಗಿ ಹೇಳಬೇಕೆಂದರೆ ಮನೆಯನ್ನು ಆವರಿಸಿದ್ದ ನೀರವತೆ ಭಯಂಕರ ವಾಗಿತ್ತೆನ್ನಬಹುದು. ಮನೆಯಲ್ಲಿ ಹೆಜ್ಜೆಯಿಡುತ್ತಿದ್ದಂತೆಯೇ ಅದುವರೆ ವಿಗೂ ಎಷ್ಟೋ ಸಂಭ್ರಮದಿಂದ ಮಾತನಾಡುತ್ತಿದ್ದ ರಾಜೂ ಅಕಸ್ಮಾತ್ತಾಗಿ ಮೌನ ವಹಿಸಿದ. ಅವನ ಮುಖ ನೋಡಿದ ನನಗೆ ವಿಷಯವೇನೆಂದು ಕೇಳಲೂ ಬಾಯಿ ಬರಲಿಲ್ಲ.

ಇಬ್ಬರೂ ಊಟಕ್ಕೆ ಕುಳಿತೆವು. ಅಡಿಗೆಯವನು ಬಡಿಸುತ್ತಿದ್ದ.

"ಅಂದಹಾಗೆ ಈ ಊರಿಗೇಕೆ ಬಂದೆಯೋ ಹೇಳಲೇ ಇಲ್ಲವಲ್ಲಾ," ಎಂದು ಸಂಭಾಷಣೆ ಪ್ರಾರಂಭಿಸಿದ ರಾಜು ಮಾತನಾಡಿಸಿದರೆ ಸಾಕೆನಿಸಿತ್ತು ನನಗೆ.

"ಇನ್ನೇನಪ್ಪಾ, ರಿಟೈರ್ ಆಯಿತಲ್ಲಾ ಮತ್ತೆ ಹೆಣ್ಣು ಮಕ್ಕಳಿಬ್ಬರಿಗೂ ಮದುವೆ ಮಾಡಿಯಾಯಿತು. ಗಂಡು ಮಕ್ಕಳ ತಂದೆಯಾಗುವ ಅದೃಷ್ಟ ವಿಲ್ಲವಲ್ಲಾನಂಗೆ! ಇಲ್ಲಿ ಸ್ವಲ್ಪ ಭೂಮಿ–ಕಾಣಿ ಇದೆ. ಒಂದು ಹಳೆಯ ಮನೆಯೂ ಇದೆ. ಸರಿ, ಇಲ್ಲಿಗೇ ಬಂದುಬಿಟ್ಟೆ. ಒಂದು ವಾರ ಆಯಿತಷ್ಟೆ. ಸ್ವಲ್ಪ ನೆಗಡಿಯಿಂದಾಗಿ ಮೈ ಬೆಚ್ಚಗಾಯಿತು. ನಮ್ಮಾಕೆ ಡಾಕ್ಟರಿಗೆ ತೋರಿಸಿಕೊಳ್ಳೀಂತ ಒಂದೇ ಸಮ ರಾಗ ತೆಗೆದಳು. ಸರಿ, ನಾನು ಡಾಕ್ಟರಿಗೋಸ್ಕರ ಹುಡುಕುತ್ತಾ ಬಂದೆ—ನಿನ್ನನ್ನು ಕಂಡೆ. ನನ್ನ ನೆಗಡಿ ಯನ್ನೂ, ನಮ್ಮಾಕೆಯನ್ನೂ ಅಭಿನಂಧಿಸಲೇಬೇಕಾಗಿದೆ–ಈಗ."

"ತುಂಬಾ ಸಂತೋಷಕಣಪ್ಪಾ, ನೀನು ತುಂಬಾ ಅದೃಷ್ಟವಂತ. ಇಳಿವಯಸಿನಲ್ಲಿ ಬಾಧ್ಯತೆಗಳನ್ನೆಲ್ಲಾ ನೆರವೇರಿಸಿ, ನಿಶ್ಚಿಂತೆಯಿಂದ, ನಿರಾಳ ವಾಗಿ ಉಸಿರಾಡಿಸುತ್ತಾ ಕಾಲಕಳೆಯುವ ಅದೃಷ್ಟ ಸಿಗುವುದು ಅಷ್ಟು ಸುಲಭ ವಲ್ಲ. ನೀನು ಈ ಊರಿಗೆ ಬಂದಿದ್ದಂತೂ ನನಗೆ ದೇವರು ವರ ಕೊಟ್ಟಂ ತೆಯೇ ಸರಿ. ಇನ್ನು ಮೇಲೆ ನಾವಿಬ್ಬರೂ ಪ್ರತಿದಿನವೂ ಕೆಲಸಮಯ ಒಟ್ಟಾಗಿ ಕಾಲಕಳೆಯಬಹುದೆಂಬ ವಿಷಯ ನನಗೆಷ್ಟು ಸಂತೋಷವನ್ನುಂಟು ಮಾಡಿದೆಯೋ ನೀನು ಊಹಿಸಲೂ ಆರೆ. ಕೊನೆಯ ದಿನಗಳಲ್ಲಿ ಇಷ್ಟು ಅದೃಷ್ಟ ನನ್ನದಾಗುತ್ತದೆಯೆಂಬ ಆಸೆ ನನಗೆಳ್ಳಷ್ಟೂ ಇರಲಿಲ್ಲ ಕಣೋ ..."

"ಅದು ಸರಿ. ನಿನ್ನ ಮಗ ಎಲ್ಲಿದಾನೀಗ? ಅಲ್ಲಿಯೇ ಪ್ರಾಕ್ಟೀಸ್ ಮುಂದುವರಿಸಿದಾನೇನು?"

ರಾಜೂ ಜವಾಬು ಹೇಳಿಲಿಲ್ಲ. ಬೇಗ ಬೇಗ ಅನ್ನಕಲೆಸತೊಡಗಿದ, ತಲೆಯೆತ್ತಿ ನೋಡಿದೆ, ಅಡಿಗೆಯವನು ಆ ವಿಷಯ ಮಾತನಾಡಬೇಡ ಎನ್ನುವಂತೆ ಗಾಬರಿಯಿಂದ ಸನ್ನೆಮಾಡುತ್ತಿದ್ದ. ನನಗೆ ದಿಕ್ಕೆ ತೋಚಲಿಲ್ಲ. ಮೌನವಾಗಿ ಊಟಮಾಡಲು ಪ್ರಯತ್ನಿಸಿದೆ.

* * * *

ಮನೆಗೆ ಬಂದರೂ ರಾಜೂನೇ ಕಣ್ಣ ಮುಂದೆ ನಿಂತಂತಾಗಿತ್ತು. ರಾತ್ರಿ ನಿದ್ದೆ ಹಿಡಿಸಲಿಲ್ಲ, ವಿಧಿ ರಾಜೂನ ವಿಷಯದಲ್ಲಿ ವಕ್ರದೃಷ್ಟಿ ಬೀರಿಕೆ? ಏನಾಗಿರಬಹುದು? ಇದೇ ಆಲೋಚನೆ.

ಮರುದಿನ ರಾಜು ಆಸ್ಪತ್ರೆಯಲ್ಲಿರುವ ಸಮಯ ನೋಡಿ ಮನೆಗೆ ಹೋದೆ....ಅಡಿಗೆಯವನಿಗೆ ನನ್ನ ಪರಿಚಯ ಹೇಳಿಕೊಂಡು,

"ಡಾಕ್ಟ್ರ ಮಗ ಹೋಗಿ ಎಷ್ಟು ದಿನವಾಯಿತು? ಎಂದು ಕೇ ದೆ,"

"ಹೋಗು ಬಿಟ್ಟರೆ? ಯಾವಾಗ?" ಆಶ್ಚರ್ಯದಿಂದ ಕೇಳಿದ ಅವನು,

ಮತ್ತೆ ಅವಾಕ್ಕಾದೆ.

"ಮತ್ತೆ....ಮತ್ತೆ...ನಿನ್ನ ಹಾಗೆ ಸನ್ನೆಮಾಡಿದ್ದೇಕೆ?" ಎಂದೆ ಕುರ್ಚಿಯಲ್ಲಿ ಕುಸಿದು ಕುಳಿತು.

ಅವನ "ಹಮ್ಮಯ್ಯ" ಎಂದು ನಿಟ್ಟುಸಿರು ಬಿಟ್ಟು" "ಓಹೋ! ಅದಕ್ಕೇ ಹಾಗೆಂದುಕೊಂಡಿರೋ? ಸರಿ. ಆ ವಿಷಯ ನೆಮಗೂ ಏನೂ ಗೊತ್ತಿಲ್ಲರೀ. ಇವರಿಗೊಬ್ಬ ಮಗ ಇದಾರೆ ಅಂತ ಗೊತ್ತು, ಇಷ್ಟವಿಲ್ಲದ

ಮದುವೆ ಮಾಡಿಕೊಂಡಿದಾರೇಂತ ಹೇಳಿ ಕೋತಾರೆ ಜನ. ವಿವರ ನನಗೇನೂ ಗೊತ್ತಿಲ್ಲ.........."

"ಮತ್ತೆ ಒಬ್ಬನೇ ಇದಾನೇನು ಇಲ್ಲಿ?"

"ಹೌದು ಮತ್ತೆ, ಈ ಹಳ್ಳಿಯವರಿಗೆಲ್ಲಾ ಡಾಕ್ಟರ್ ಬಾಬು ದೇವರೇ ಆಗಿದಾರೆ, ಪ್ರತಿಯೊಬ್ಬರೂ ಕೈಯೆತ್ತಿ ಮುಗೀತಾರೆ. ಈ ಕಾಲದಲ್ಲಿ ಇಂಥಾ ಮನುಷ್ಯರೂ ಇರ್ತಾರೆಯೇ? ನೀವೇ ಹೇಳಿ....ಎಷ್ಟು....ದಯೆ ಕರುಣೆ......."

ನನಗೆ ಮುಂದಿನ ಮಾತುಗಳು ಕೇಳಿಸದಾಯಿತು. ತನಗಿಷ್ಟವಿಲ್ಲದ ಮದುವೆ ಮಾಡಿಕೊಂಡಾಕ್ಷಣ, ಪ್ರಾಣಕ್ಕೆ ಪ್ರಾಣವಾಗಿ ಬೆಳೆಸಿದ ಒಬ್ಬನೇ ಮಗನನ್ನು ತೊರೆದು ಕೊಳ್ಳುತ್ತಾನೆಯೇ ರಾಜು ಅಷ್ಟು ಮೂರ್ಖನೆ? ನನಗೆ ನಂಬಲಾಗಲಿಲ್ಲ...........

ದಿನಾ ನಾನೂ ರಾಜೂ ಸಾಯಂಕಾಲ ವಾಕಿಂಗ್ ಹೋಗುತ್ತಿದ್ದೆವು. ಅವನ ಮಾತಿನಲ್ಲಿ ಆಗಾಗ ಇಣುಕಿ ನೋಡುತ್ತಿದ್ದ ವಿಷಾದದಿಂದಾಗಿ ಅವನ ಮನಸ್ಸಿಗೆ ದೊಡ್ಡಪೆಟ್ಟೇ ತಗುಲಿರಬೇಕೆನಿಸುತ್ತಿತ್ತು. ಆದರೆ ಅದೇನೆಂದು ಕೇಳುವ ಧೈರ್ಯವಾಗುತ್ತಿರಲಿಲ್ಲ ನನಗೆ, ಕೊನೆಗೊಂದು ದಿನ ರಾಜೂನೇ ಅಂದ.

"ನಿನ್ನದು ಕಲ್ಲುಮನಸ್ಸು ಕಣೋ ನರಹರೀ, ನೀನಾಗಿ ಕೇಳುತ್ತೀ ಯೇನೋ ಅಂತ ನೋಡುತ್ತಿದೀನಿ, ಆ ಮಾತೇ ಇಲ್ಲ......"

"ರಾಜೂ, ನಾನಾಗಿ ಹಳೆಯದನ್ನು ಕೆದಕಿ ನಿನ್ನನ್ನು ನೋಯಿಸಬಾರ ದೂಂತ ಸುಮ್ಮನಿದೀನಿ ಕಣೋ. ನೀನು ಒಳಗೊಳಗೇ ಕೊರಗ್ತಿದೀಯ. ನಿನ್ನ ಮನಸ್ಸಿನಲ್ಲಿ ತುಂಬಿರೋ ವ್ಯಥೆ ನನಗೆ ಹೇಳಿ ನಿನ್ನ ಭಾರ ಕಡಿಮೆ

ಮಾಡಿಕೊಳ್ಳೋ" ಎಂದೆ ಕಲಕಳಿಯಿಂದ.

"ಭಾರ ಕಡಿಮೆ ಮಾಡಿಕೊಳ್ಳಲೇ? ಹುಚ್ಚು ನಿನಗೆ" ಎಂದ.

"ರಘು ಎಲ್ಲಿದಾನೋ ಈಗ?" ಎಂದೆ.

"ಗೊತ್ತಿಲ್ಲ"

"ಅವನ ಮುಖ ಕಲ್ಲಿನಂತೆ ಸೆಟೆದುಕೊಂಡಿತ್ತು. ಗಂಭೀರವಾಗಿ ಶೂನ್ಯವನ್ನು ದಿಟ್ಟಿಸುತ್ತಾ ಹೇಳತೊಡಗಿದ,

"ರಘು ವಿದೇಶಕ್ಕೆ ಹೋಗಿದ್ದು ಗೊತ್ತೇನು ನಿನಗೆ?"

"ಇಲ್ಲವಲ್ಲಾ, ನಾನು ನೋಡಿದಾಗಿನ್ನು ಮೆಡಿಸಿನ್ ನಾಲ್ಕನೆಯ ವರ್ಷ ಓದುತ್ತಿದ್ದನಷ್ಟೆ. ವಿದೇಶದಿಂದ ಹಿಂತಿರುಗಿದ?"

"ಹೂಂ....ಬಂದ. ಒಬ್ಬಂಟಿಗನಾಗಲ್ಲ. ಜತೆಗೊಂದು ಹೆಣ್ಣನ್ನು ಕಟ್ಟಿಕೊಂಡು"

"ಸರಿ, ಆಮೇಲೆ?

"ಆಮೇಲೇನು?"

"ಅಲ್ಲದೆ! ತಾನು ಮೆಚ್ಚಿದ ಹೆಣ್ಣನ್ನು ಮದುವೆಯಾಗಿರುತ್ತಾನೆ, ಅಷ್ಟೇತಾನೇ, ಅಷ್ಟು ಮಾತ್ರಕ್ಕೇ ನೀನು..."

ರಾಜೂ ತಲೆಯೆತ್ತಿ ನನ್ನ ಕಡೆ ನೋಡಿದ. ಅವನ ಕಣ್ಣು ಕ್ರೋಧ ದಿಂದ ಕೆಂಪಾಗಿ ಉರಿಯುತ್ತಿತ್ತು. ನಾನು ಮೆಲ್ಲನೆ ಅವನ ಕೈಹಿಡಿದ ಸಾಂತ್ವನ ಗೊಳಿಸುತ್ತಾ 'ಏನಾಯಿತೋ ರಾಜೂ?" ಎಂದೆ.

ಓಹೋ, ಹಾಗಾದರೆ ನಿನಗೆ ಏನೂ ಗೊತ್ತಿಲ್ಲ ಎಂದಾಯಿತು . ಸರಿ,

ಒಂದು ಮಾತು ಕೇಳುತ್ತೀನಿ ಉತ್ತರ ಹೇಳೋ...ಮನಷ್ಯ ಬದುಕೋದು ಯಾಕೇಂತೀಯಾ?"

ಏನೋ ಹೇಳ ಹೊರಟವನು ಆಕಸ್ಮಾತ್ತಾಗಿ ನನ್ನನ್ನೇ ಪ್ರಶ್ನಿಸಿದ್ದನ್ನು ಕಂಡು ಒಂದು ಕ್ಷಣ ಚಕಿತನಾದೆ.

ಇದೆಂತಹ ಪ್ರಶ್ನೆ ! !

ನನಗೆ ತಟ್ಟನೆ ನಾವು ಓದುತ್ತಿದ್ದ ಕಾಲದಲ್ಲಿನ ರಾಜೂ ನೆನಪಾದ ರಾಜೂ ಎಂದರೆ ಸುಗುಣಗಳ ಮತ್ತೊಂದು ರೂಪ ಎಂದೇ ಹೇಳಬೇಕು. ನೀತಿ, ಪ್ರಾಮಾಣಿಕತೆ ಎಂದರೆ ಪ್ರಾಣಕೊಡುತ್ತಿದ್ದ. ಎಲ್ಲರೂ ಹಾಗೆಯೇ ಇರಬೇಕೆಂದು ಅವನಾಸೆ. ಹಾಗಲ್ಲದ ಕೆಲಸಮಯಗಳಲ್ಲಿ ಸ್ನೇಹಿತರೊಂದಿಗೆ ಖಡಾ ಖಂಡಿತವಾಗಿ ಮಾತನಾಡಲೂ ಹಿಂಜರಿಯುತ್ತಿರಲಿಲ್ಲ. ಮನುಷ್ಯನಾಗಿ ಹುಟ್ಟಿದ್ದಕ್ಕೆ ಇನ್ನೊಬ್ಬರಿಗೆ ಉಪಕಾರ ಮಾಡದಿದ್ದರೆ ಹೋಗಲಿ, ನಿನ್ನಷ್ಟಕ್ಕೆ ನೀನು ಪ್ರಾಮಾಣಿಕವಾದ ಬದುಕನ್ನಾದರೂ ಬದುಕಬೇಕು ಬೇಕೋಬೇಡವೋ ಎನ್ನುತ್ತಿದ್ದ. ಅವನ ಮಾತಿನ ವೈಖರಿ. ಪ್ರಭಾವಕ್ಕೆ ಒಳಗಾಗಿ ನಮ್ಮಲ್ಲಿ ಕೆಲವರು ಆ ರೀತಿ ಪ್ರಮಾಣ ಮಾಡಿದ್ದೂ ಉಂಟು...ಅನಂತರ ಕಾಲ ಪ್ರವಾಹಕ್ಕೆ ಸಿಕ್ಕಿ ಒಟ್ಟಾಗಿದ್ದ ನಾವು ದಿಕ್ಕಿಗೊಬ್ಬರಂತೆ ಚದುರಿದ್ದೆವು. ಬದುಕಿನ ಚದುರಂಗದಾಟದಲ್ಲಿ ಕಷ್ಟಸುಖಗಳೆಷ್ಟನ್ನೋ ಅನುಭವಿಸಿದ್ದೆವು. ಈ ದಿನ ಗತ ಜೀವನವನ್ನು ನೆನಸಿಕೊಂಡು ಪ್ರಾಮಾಣಿಕನಾದ ಬದುಕನ್ನೇ ಸಾಗಿಸಿದೇನೆಂದು ಎದೆಯಮೇಲೆ ಕೈಯಿಟ್ಟು ಹೇಳುವ ಧೈರ್ಯ ನನಗಂತೂ ಇರಲಿಲ್ಲ....ಹಾಂ ಅಂದಹಾಗೆ ರಾಜೂ ತನ್ನ ಬಾಳಿನಲ್ಲಿ ತನ್ನ ಆಶಯ ಆದರ್ಶಗಳನ್ನು ಸಾಧಿಸಿದನೆ?

ರಾಜೂನ ಪ್ರಶ್ನೆಗೆ ನಾನಂತೂ ಸಮಾಧಾನ ಹೇಳದಾದೆ.

"ಏನೋ ಸುಮ್ಮನಾದೆ? ಉತ್ತರವಿಲ್ಲವೇ ನಿನ್ನಲ್ಲಿ? ಸರಿ, ಕೇಳು"

ಮತ್ತೆ ಮುಂದುವರಿಸಿದ ರಾಜು.

"ರಘು ಇಲ್ಲಿನ ಓದು ಪೂರ್ತಿಯಾದ ಕೂಡಲೇ ಉನ್ನತ ವ್ಯಾಸಂಗ ಕ್ಕಾಗಿ ವಿದೇಶಕ್ಕೆ ಹೋಗಬೇಕೆಂದು ಅಪೇಕ್ಷಿಸಿದ. ಸಂತೋಷವಾಗಿ ಒಪ್ಪಿ ಕೊಂಡೆ, ಹಿಂತಿರುಗಿದ ನಂತರ ಮದುವೆಯ ಪ್ರಯತ್ನ ಮಾಡೋಣವೆಂದ್ಕೊ ಕೊಂಡೆ. ಆದರೆ ರಘು ಮದುವೆ ಮಾಡಿಕೊಂಡೇ ಹೊರಡುತ್ತೆನೆಂದ.

ಆಲೋಚಿಸು ಮಗೂ, ನೀನು ಹಿಂತಿರುಗಿ ಬರಲು ಕೆಲವು ವರ್ಷ ಗಳಾಗಬಹುದು, ಅದುವರೆವಿಗೂ..............."ಎಂದೆ,

ಪರವಾಗಿಲ್ಲಪ್ಪ, ರತ್ನನ ಓದು ಇನ್ನೂ ಎರಡು ವರ್ಷ ಇದೆ. ಮದುವೆ ಮಾಡಿಕೊಂಡೇ ಹೊರಡುತ್ತೇನೆ. ರತ್ನ ನನಗೋಸ್ಕರ ಎಷ್ಟು ವರ್ಷಗಳಾದರೂ ಕಾಯಬಲ್ಲಳು. ಬಂದ ನಂತರ ಇಬ್ಬರು ಸೇರಿ ನರ್ಸಿಂಗ್ ಹೋಂ ತೆಗೆದರೆ ಚೆನ್ನಾಗಿರುತ್ತೆಲ್ಲವೇನಪ್ಪಾ...." ಎಂದ,

ಅವನ ಮಾತು ನನಗೂ ಕೆಡುಕೆನಿಸಲಿಲ್ಲ. ವಧೂವನ್ನೂ ತಾನೇ ನಿಶ್ಚಯಿಸಿಕೊಂಡಿದ್ದ. ಎರಡು ವರ್ಷಗಳ ಸ್ನೇಹದ ನಂತರ ತೆಗೆದುಕೊಂಡ ನಿರ್ಣಯ ಅದು ರಘುವಿನ ಗೆಳತಿಯಾಗಿ ರತ್ನಳ ಪರಿಚಯವಿತ್ತು. ನಾನು "ಸರಿ" ಎಂದೆ, ಮದುವೆಯಾಯಿತು, ರತ್ನ ರತ್ನದಂತಹ ಹುಡುಗಿ, ಇಷ್ಟು ವರ್ಷಗಳು ನಂತರ ಒಬ್ಬಂಟಿಗ ನಾಗಿರಬೇಕಲ್ಲ ಎಂಬ ಚಿಂತೆ ಸಹ ದೂರವಾಗಿತ್ತು, ನನಗೆ, ರತ್ನ ಸೊಸೆಯಂತಿಲ್ಲದೆ ಮಗಳಿನಂತೆಯೇ ನಡೆದು ಕೊಂಡಿದ್ದಳು. ತನ್ನ ಓದಿನ ಜತೆಗೆ ನನ್ನ ಊಟ ಉಪಚಾರಕ್ಕೂ ಕೊರತೆ ಬಾರದಂತೆ ನಿರ್ವಹಿಸುತ್ತಿದ್ದಳು. ಗಂಡನಿಂದ ಬರುವ ಕಾಗದಗಳಿಗೋಸ್ಕರ ಆತುರದಿಂದ ಕಾಯುತ್ತಿದ್ದಳು. ಕಾಗದ ಬಂದ ಕ್ಷಣ ಅವಳ ಮುಖದಲ್ಲಿ ತಿಂಗಳ ಬೆಳಕು ಮೂಡುತ್ತಿತ್ತು, ಇದನ್ನೆಲ್ಲಾ ಗಮನಿಸುತ್ತಾ ತೃಪ್ತಿಯಿಂದ ದಿನ ದೂಡುತ್ತಿದ್ದೆ ನಾನು.

ಅನಂತರ ಏನಾಯಿತೋ ಗೊತ್ತೇನು ನಿನಗೆ?

ನನ್ನ ತಲೆಯಮೇಲೆ ಬರಸಿಡಿಲು ಬಿದ್ದಿತು.

ಆಕಸ್ಮಾತ್ತಾಗಿ ಅವನಿಂದ ಬಂದ ಕಾಗದದಲ್ಲಿ ನಮ್ಮ ಹೃದಯಗಳನ್ನು ಸುಟ್ಟುಹಾಕುವಂತಹ ವಿಷಯವನ್ನು ಅತಿ ಸಮಾನ್ಯವೆಂಬಂತೆ ಬರೆದಿದ್ದ. ತಾನು ಅಲ್ಲಿ ಒಬ್ಬ ಹುಡುಗಿಯನ್ನು ಮದುವೆಯಾಗಿರುವುದಾಗಿಯೂ, ಇಷ್ಟರಲ್ಲಿಯೇ ಇಬ್ಬರೂ ಸ್ವದೇಶಕ್ಕೆ ಬರಲಿದ್ದೇವೆಂದೂ ಅದರ ಸರಾಂಶ. ಆ ದಿನ ನನ್ನ ಪ್ರಾಣ ಹಾರಿಹೋಗದೆ ಹೇಗೆ ಉಳಿದುಕೊಂಡಿತೋ ನನಗೇ ಗೊತ್ತಿಲ್ಲ ಕಣೋ ನರಹರೀ...ನಿಜವಾಗಿಗೊತ್ತಿಲ್ಲ.....ಇದು ತಮಾಷೆ ಅಂದುಕೊಳ್ಳುವ ವಿಷಯವೂ ಅಲ್ಲ. ನಿಜವೆಂದು ನಂಬಲೂ ಆತಿ ನರಕಯಾತನೆಯನ್ನನುಭವಿಸಿದೆ. ದಿನಗಳೆಯಿತು. ಕಡೆಗೊಂದು ದಿನ ಅವರು ಬರುವ ದಿನ ತಿಳಿಸುತ್ತಾ ಕಾಗದವೂ ಬಂತು. ಎರಡೂ ಕಾಗದಗಳೂ ನನಗೇ ಬಂದಿದ್ದವು. ರತ್ನನಿಗೆ ಕಾಗದ ಬರೆಯುವುದನ್ನು ಬಿಟ್ಟು ಆಗಲೇ ಕೆಲವು ತಿಂಗಳಾಗಿತ್ತು. ಆ ಕಾಗದ ರತ್ನನಿಗೆ ತೋರಿಸಿದೆ. ಸೌಮ್ಯವಾದ ಆಕೆಯ ಮುಖ ಕಪ್ಪಿಟ್ಟಿತು.ಅ ಪರಾಧಿಯಂತೆ ತಲೆ ಬಾಗಿಸಿದೆ ನಾನು,

ರಘು ಬರುವ ದಿನ ಸಮೀಪಿಸಿತು. ರತ್ನ ಮನೆಯಲ್ಲಿ ಕಾಣಿಸಲಿಲ್ಲ. "ನಿಮ್ಮ ಸೇವೆ ಮಾಡುವ ಅದೃಷ್ಟ ನನಗಿಲ್ಲ. ರತ್ನ"ಎಂದಿದ್ದ ಚೀಟಿ ಮಾತ್ರ ಕಾಣಿಸಿತು.

ರಘು ಹಿಂದಿರುಗಿ ಬಂದ ಆದರೆ ನಾನವನ ಮುಖ ನೋಡಲಿಲ್ಲ. ಮಾತನಾಡಿಸಲೂ ಇಲ್ಲ. ಒಂದು ದಿನವಿಡೀ ಮನೆಯಲ್ಲಿದ್ದುದು ತಿಳಿಯುತ್ತಲೇ ಇತ್ತು. ನೀತಿ, ಪ್ರಾಮಾಣಿಕತೆಗಳಿಗೆ ತಿಲತರ್ಪಣ ಬಿಟ್ಟಿದ್ದರೂ ಅಭಿಮಾನ ಮಾತ್ರ ಉಳಿದೇ ಇತ್ತೇನೋ. ಮನೆಯಿಂದ ಹೊರಟು ಹೊದ...ಮುಗಿಯಿತು...ಎಲ್ಲವೂ ಮುಗಿದು ಹೋಯಿತು ಅಂದಿಗೆ, ನನಗೆ ಉಳಿದಿದ್ದಾದರೂ ಏನು? ಏನೂ ಇಲ್ಲ, ಅವನು ಬಂದು ನಾನು ಸಂಪಾದಿಸಿದ ಆಸ್ತಿಯನ್ನು ಅನುಭವಿಸಲಿಲ್ಲವಲ್ಲಾ ಎಂದಲ್ಲ ನನ್ನ ಚಿಂತೆ....ವೃತ್ತಿಯಲ್ಲಿ ನನಗೆ

ಸಹಾಯವಾಗಿ ನಿಲ್ಲಲಿಲ್ಲವಲ್ಲಾ ಎಂದಲ್ಲ ನನ್ನ ಕೊರಗು... ನನ್ನ ಕೈಗಳಿಂದ ಬೆಳಸಿ ದೊಡ್ಡವನನ್ನಾಗಿ ಮಾಡಿದೆ ಅವನನ್ನು ಅಂತಹ ರಘು ಇಂತಹ ಕೆಲಸ ಮಾಡಿದ ಇನ್ನೂ ನಾನು ಬದುಕ ಬೇಕೇಕೆ?....ಆ ಕ್ಷಣದಲ್ಲಿ ಸಾವನ್ನ ಪ್ಪಬೇಕೆಂಬ ನನ್ನ ಬಯಕೆ ಎಷ್ಟು ಬಲವಾಗಿತ್ತೋ ಹೇಳಲಾರೆ. ಆದರೆ ನಾನು ಡಾಕ್ಟರ್, ಆತ್ಮಹತ್ಯೆ ಮಾಡಿಕೊಳ್ಳುವ ಅಧಿಕಾರ ನನಗಿಲ್ಲ....... ಆರೋಗ್ಯವಂತನಾದ ನನಗೆ ಸಾವೂ ಬೇಗ ಬಾರದು. ಹೀಗಾಗಿ ಕಾಣದ ಪ್ರದೇಶಕ್ಕೆ ಬಂದು ಕಾಲಹಾಕುತ್ತಿದ್ದೇನೆ. ಬದುಕಿದೇನಾದ್ದರಿಂದ ನನ್ನ ಕರ್ತವ್ಯವನ್ನು ಮಾಡುತ್ತಿದೇನೆ......."

ಅವನ ಮುಚ್ಚಿದ ಕಣ್ರೆಪ್ಪೆಗಳ ಕೆಳಗಿನಿಂದ ಕಣ್ಣೀರು ಪ್ರವಹಿಸು ತ್ತಿತ್ತು. ತೇಜೋವಂತವಾದ ಅವನ ಮುಖವನ್ನು ವಿಷಾದದ ಮೋಡ ಮುಚ್ಚಿಬಿಟ್ಟಿತ್ತು.

ಓಹ್! ರಾಜೂ ಎಳ್ಳಷ್ಟು ಬದಲಾಯಿಸಲಿಲ್ಲ. ಬದುಕಿನಲ್ಲಿ ಯಾವ ವಿಧವಾದ ವ್ಯಾಮೋಹವೂ ಅವನನ್ನು ಅವನ ಧ್ಯೇಯದಿಂದ ಬೇರೆ ಮಾಡಿ ರಲಿಲ್ಲ. ಆದರೆ ನಿರಾತಂಕವಾಗಿ, ತೃಪ್ತಿಯಿಂದ ಜೀವನದ ಚರಮಾಂಕವನ್ನು ಕಳೆಯಬೇಕಾಗಿದ್ದ ಅವನಿಗೆ ದೊಡ್ಡಪೆಟ್ಟೇ ತಗುಲಿತ್ತು. ಅದು ಅವನಿಗೆ ಎಂತಹ ಅಘಾತವನ್ನುಂಟು ಮಾಡಿದೆಯೆಂಬುದನ್ನು ಅವನನ್ನು ಮೊದಲಿ ನಿಂದಲೂ ಬಲ್ಲ ನನಗೆ ಅರ್ಥವಾದಾಗ ಕರುಳು ಇರಿದಂತಾಯಿತು.

ಕಾರಣ ಯಾವುದಾದರೇನು? ವೃದ್ಧಾಪ್ಯದಲ್ಲಿ ಮನಶ್ಶಾಂತಿಗೆ ದೂರ ವಾದ ನನ್ನ ಬಾಲ್ಯಮಿತ್ರನನ್ನು ಆ ಸ್ಥಿತಿಯಲ್ಲಿ ನೋಡುತ್ತಿದ್ದ ನನ್ನಲ್ಲಿ ಕರುಣೆ ಉಕ್ಕಿ ಕಣ್ಣು ಹನಿಯಿತು.

ಅವನ ಎರಡೂ ಕೈಗಳನ್ನು ಹಿಡಿದುಕೊಂಡು "ರಾಜೂ..." ಎಂದೆ ನನ್ನ ಕಂಠ ಗದ್ಗದವಾಗಿತ್ತು. ಅವನನ್ನು ಸಮಾಧಾನ ಪಡಿಸಲು ನನ್ನಲ್ಲಿ ಮಾತೇ ಇರಲಿಲ್ಲ.

o o o o

# ಕಾಣಿಕೆ

—ಅನಸೂಯ ರಾಮರೆಡ್ಡಿ

"ಗೌರೀ!!! ಬಕೀಟಿಗೆ ನೀರು ತೋಡಿ ಕೊಂಡು ಬಾ."

ಸುರೇಶ ಕೂಗಿದ್ದನ್ನು ಕೇಳಿ "ಬಂದೇ ಇರಪ್ಪಾ" ಎಂದು ತೊಳೆದ ಬಟ್ಟೆಲುಗಳನ್ನು ಬೋರಲುಹಾಕಿ ಓಡಿ ಬಂದಳು ಗೌರಿ.

ಸುರೇಶ ಹಲ್ಲಿಗೆ ಬ್ರಷ್ ಹಾಕಿ ಉಜ್ಜುತ್ತಿದುದನ್ನು ನೋಡಿ.

"ಹಲ್ಲು ಉಜ್ಜೋದೆ ಆಗಿಲ್ಲ ಇನ್ನೂ ಏನಾತ್ರಮಾಡ್ತೀ. ನಾಳೆಯಿಂದ ನೀನೇ ತೋಡ್ಕೊಬೇಕು ತಿಳೀತಾ, ನನಗಂತೂ ಆಗಲ್ಲ."

"ಅದ್ಯಾಕೆ ಆಗಲ್ಲ ನೋಡ್ತೀನಿ" ಬ್ರಷ್‌ನ್ನು ಈಚೆ ತೆಗೆದು ಬಾಯಲ್ಲಿದ್ದ ಪೇಸ್ಟಿನ ನೊರೆಯನ್ನು ಉಗುಳಿ ಹೇಳಿದ ಸುರೇಶ.

"ಏನು ನೋಡ್ತೀ. ಅಮ್ಮಾನೆ ಹಂಗಂತಾ ಹೇಳಿದಾರೆ ಗೊತ್ತಾ!"

"ನೀನೇನೋ ನನ್ಮೇಲೆ ಚಾಡಿಚುಚ್ಚಿರಬೇಕು ಇರು ಕೇಳ್ತೀನಿ" ಎಂದ ಸುರೇಶ ದನಿ ಎತ್ತರಿಸಿ

"ನೋಡಮ್ಮ ನಾಳೆಯಿಂದ ಗೌರಿ ಸ್ನಾನಕ್ಕೆ ನೀರು ತೋಡಿಕೊಡಲ್ಲಂತೆ" ಕೂಗಿಕೊಂಡ. ಮಗನ ಪಿರ್ಯಾದನ್ನು ಕೇಳಿಸಿಕೊಂಡ ಶಾರದಮ್ಮ ಅಡಿಗೆ ಮನೆಯಿಂದಲೇ ಹೇಳಿದರು.

"ಹೂಂ ಕಣೊ ನಾಳೆಯಿಂದ ಅವಳಿಗೆ ಬಹಳ ಕೆಲ್ಸ ಇದೆ. ಬಾಗಿಲಿನ ಪರದೆ, ಮೇಜಿನ ಹೊದಿಕೆ ಇವಕ್ಕೆಲ್ಲಾ ಡಿಸೈನ್ ಹಾಕ್ಬೇಕು, ಹಪ್ಪಳ-ಸಂಡಿಗೆ ಮಾಡೋದಕ್ಕೆ ನಂಗೆ ನೆರವಾಗ್ಬೇಕು. ಇರೋ ಎರಡು ಕೈನಲ್ಲಿ ಅವಳು ಎಷ್ಟೂಂತ ಮಾಡ್ತಾಳೆ ಹೇಳು !"

ಸುರೇಶ, ನೀರು ತೋಡುತ್ತಿದ್ದ ಗೌರಿಯ ಬಳಿಗೆ ಬಂದವನೆ, "ಗೊತ್ತಾಯ್ತು ಬಿಡು ಗೌರಿ. ಅಮ್ಮ ಹೇಳಿದ್ದೆಲ್ಲಾ ನಿಮ್ಮ ಮದುವೆಗೆ ಅಂತ. ಮಾಲತಕ್ಕನದು. ಆಮೇಲೆ ನಿಂದು ಅಲ್ಲವಾ ? ಚಪ್ಪಾಳೆ ತಟ್ಟಿ ನಗತೊಡಗಿದಾಗ,

"ಮದ್ವೆ ಗಿದ್ವೆ ಅನ್ನಬೇಡಪ್ಪ. ನಂದೇನಲ್ಲ" ಹುಸಿಮುನಿಸಿನಿಂದ ಅವನ ಕಡೆ ನೋಡಿ. ನೀರು ತೋಡಿಕೊಟ್ಟು ಈಚೆ ಬಂದಳು ಗೌರಿ.

"ಅನ್ನೊಲ್ಲ ಬಿಡೇ...ಗೌರಿಗೆ ಗಂಡ ಬರ್ತಾನೆ. ಚಿರೋಟಿ ಲಾಡು ಹಾಕಿಸ್ತಾನೆ" ರಾಗವೆತ್ತಿದ.

"ಏನೋ ಅದೂ....ನಿನ್ನ ಗಲಾಟೆ ಅತಿಯಾಯ್ತು" ಶಾರದಮ್ಮ ಕೂಗು ಹಾಕುತ್ತಲೂ ಬೇಗನೆ ಬಚ್ಚಲು ಮನೆಯ ಬಾಗಿಲು ಹಾಕಿಕೊಂಡ.

ಗಂಡ ಬರ್ತಾನೆ ಎಂದು ಸುರೇಶ ಹೇಳಿದ್ದನ್ನು ನೆನಸಿಕೊಂಡಳು ಗೌರಿ. ಮುಖದಲ್ಲಿ ಮಂದಹಾಸ ಮೂಡಿತು. ಅವಳ ಹೃದಯದ ಹಕ್ಕಿ ಪುಲಕ ಗೊಂಡು ಪುಕ್ಕ ಬಿಚ್ಚಿ ಹಾರಾಡಿ ಮತ್ತೆ ನಾಚಿಕೆಯಿಂದ ಮುದುಡಿ ಕೊಂಡಿತು.

"ಚಾಪೆ ಹಾಸಿ ವೀಣೆ ಒರೆಸಿಡು ಗೌರಕ್ಕಾ" ಅಡಿಗೆ ಮನೆಯಲ್ಲಿ ಕಾಫಿ ಕುಡಿಯುತ್ತಿದ್ದ ಕುಸುಮ ಹೇಳುತ್ತಿದ್ದಂತೆಯೇ

"ಒರೆಸ್ತೀನಿ ಕುಸುಮಾ" ಎಂದವಳೇ ಗೌರಿ ರೂಮಿಗೆ ಹೋಗಿ ಚಾಪೆ

ಹಾಸಿ, ಗೌನು ತೆಗೆದು, ವೀಣೆಯನ್ನು ಒರೆಸಿ ಮೆಲ್ಲಗೆಜಾಪೆಯ ಮೇಲಿರಿಸಿ
ದಳು. ಎಂದಿನಂತೆ ಬೆರಳುಗಳು ತಂತಿಯ ಮೇಲೆ ಓಡಾಡಿದಾಗ, ಇನಿದನಿ
ಯೆದ್ದು ತಂಪೆರೆಯಿತು ಅವಳಿಗೆ. ಅದೇ ಗುಂಗಿನಲ್ಲಿ ತೂಗಾಡುತ್ತಾ
ಮುಂದಿನ ಕೆಲಸದಲ್ಲಿ ಮಗ್ನಳಾದಳು.

"ದಾರ....ಬಟ್ಟೆ....ಮಣಿ ಅದೇನೇನು ಬೇಕು ಎಷ್ಟೆಷ್ಟು ಬೇಕು
ಹೇಳು. ಸಂಜೆ ಪೇಟೆ ಕಡೆ ಹೋದಾಗ ತರ್‍ತೀನಿ" ಶಾರದಮ್ಮ ಕೇಳಿದಾಗ,
ಎಷ್ಟೆಷ್ಟು ಬೇಕಾಗುತ್ತೋ ತಕ್ಷಣ ಹೇಳಲಾಗಲಿಲ್ಲ ಗೌರಿಗೆ.

"ಆಮೇಲೆ ನಿಧಾನಕ್ಕೆ ಯೋಚ್ನೆಮಾಡಿ ಹೇಳ್ತೀನಮ್ಮ" ಎಂದಳು.

"ಹಾಗೇ ಬರೆಕೊಟ್ರೆ ಒಳ್ಳೆದು. ಸುರೇಶನಾದ್ರೂ ತರ್‍ತಾನೆ ಬಾಯಲ್ಲಿ
ಹೇಳಿದ್ರೆ ಯಾರಿಗೆ ನೆನಪಿರುತ್ತೇ ?"

ಬರ್‍ಕೊಟ್ರೆ ಒಳ್ಳೇದು ಅಂದ್ರಲ್ಲಾ ಅಮ್ಮ...ಬರೆಯೋಕಾದ್ರು ಎಲ್ಲಿ
ಬರುತ್ತೆ. ಮಾವಯ್ಯನ ಮನೇಲಿದ್ದಾಗ ಅಷ್ಟು ಇಷ್ಟು ಕಲ್ತಿದ್ದರೂ ಈಗ
ಅದೆಲ್ಲಾ ಮರೆತುಹೋಗಿದೆ. ಈಗ ಯಾರತ್ರ ಬರೆಸ್ಲಿ? ಸುರೇಶನ್ನ ಕೇಳಿದ್ರೆ
ಬರೀ ತಮಾಷೆ ಮಾಡ್ತಾನೆ. ಹೀಗಂದಕೊಳ್ಳುತ್ತಿದ್ದಂತೆ ಬೆಳಿಗ್ಗೆ ಅವ
ನಂದಿದ್ದು ನೆನಪಿಗೆ ಬಂದು ಅವಳ ಮುಖ ರಂಗುರಂಗಾಯಿತು.

ಮಾಲತಕ್ಕನ್ನ ಕೇಳೋಣಾಂದ್ರೆ, ಅದೇನೊ ನನ್ನ ಕಂಡ್ರೆ ಆಗೋಲ್ಲ
ಆಕೆಗೆ, ಅದ್ಯಾಕೊ ಏನೋ ದೇವ್ರೇ ಬಲ್ಲ. ಕುಸುಮನ್ನೇ ಕೇಳ್ಬೇಕು
ಕಾಲೇಜಿನಿಂದ ಬಂದ್ಮೇಲೆ ಬರ್‍ಕೊಡ್ತಾಳೆ ತಾನೂ ಮಾಲತಕ್ಕನ ಹಂಗೆ...
ಕುಸುಮನ ಹಂಗೆ ಚೆನ್ನಾಗಿ ಕಲ್ತಿದ್ರೆ ! ತನಗೆಲ್ಲಿ ಆ ಪುಣ್ಯ! ನೋವಿನಿಂದ
ಮುದುಡಿತು ಅವಳ ಮುಖ.

ಗೌರಿ ತಬ್ಬಲಿಯಾದಾಗ ಐದು ವರ್ಷದವಳು. ಸಾಕುತ್ತೇನೆಂದು ಕರೆ
ದೊಯ್ದು ಸೋದರಮಾವನಿಗೆ ಮೂರುವರ್ಷಗಳಿಗೇ ಸಾಕಾಗಿ ಹೋಯಿತು.
ಈ ಹುಡುಗಿ ಹೆಂಡತಿಗೆ ಒಂದು ತೊಡಕಾಗಿದ್ದಳು. ಹಿಂದೆ ತಾನು ಕೆಲಸ

ಮಾಡುತ್ತಿದ್ದ ಸತ್ಯನಾರಾಯಣಪ್ಪನವರ ಮನೆಗೆ ಗೌರಿಯನ್ನು ಕರೆದು ಕೊಂಡು ಹೋಗಿ.

"ಸಣ್ಣ ಪುಟ್ಟ ಕೆಲ್ಸ ಮಾಡ್ಕಂಡಿರ್ತಾಳೆ ನಿಮ್ಮನೇಲಿ ಇಟ್ಕಳ್ತೀರಾ" ಎಂದು ಕೇಳಿದಾಗ, ಸತ್ಯನಾರಾಯಣಪ್ಪನವರ ಹೆಂಡತಿ ಶಾರದಮ್ಮನಿಗೆ ಹುಡುಗಿಯ ಮುದ್ದಾದ ಮುಖ, ಮನಸೆಳೆಯುವ ಕಣ್ಣನ್ನು ನೋಡಿ ಮರುಕ ಉಂಟಾಯಿತು. "ಕೆಲ್ಸಕ್ಕೇಂತ ಬೇಡ ನನ್ನ ಮೂರುಜನ ಹೆಣ್ಮಕ್ಕಳಲ್ಲಿ ಇವಳೂ ಒಬ್ಬ ಮಗಳಾಗಿರಲಿ" ಎಂದು ಹೇಳಿ ಮನೆಯಲ್ಲಿರಿಸಿ ಕೊಂಡಿದ್ದರು. ಹತ್ತುವರ್ಷಗಳಾದವು ಗೌರಿ ಈ ಮನೆಗೆ ಬಂದು. ಮನೆ ಯವರಲ್ಲಿ ಇವಳೂ ಒಬ್ಬಳಾಗಿ ಹೋಗಿದ್ದಾಳೆ.

ಕಾಲೇಜಿನಿಂದ ಸಂಜೆ ಕುಸುಮ. ಬಂದಾಗ ಕೇಳಿದಳು ಗೌರಿ.

"ನಾನೊಂದು ಕೇಳ್ತೀನಿ ಬರ್ಕೊಡ್ತೀಯ ಕುಸುಮಾ ?"

"ಅದಕ್ಕೇನಂತೆ ಆಗ್ಲಿ ಗೌರಕ್ಕ ಅದೇನು ಬರ್ಕೊಡಬೇಕೊ ಹೇಳು" ಪೆನ್ನು ಪೇಪರನ್ನು ಎತ್ತಿಕೊಂಡು ಬಂದಳು ಕುಸುಮ. ಗೌರಿ ಹೇಳಿದ್ದನ್ನೆಲ್ಲಾ ಬರೆದಾದ ಮೇಲೆ.

"ಮುಗಿಯ್ತಾ! ಇದು ಮಾಲತಕ್ಕನಿಗೆ. ಮುಂದಿನವರ್ಷ ಗೌರಕ್ಕ ನಿಗೆ" ಹೀಗಂದು ಕುಸುಮ ನಕ್ಕಾಗ ಗೌರಿಯ ಮುಖವೆಲ್ಲಾ ಒಕುಳಿ ಯಾಯಿತು.

ಕುಸುಮ ಗೌರಿಗಿಂತ ವಯಸ್ಸಿನಲ್ಲಿ ಚಿಕ್ಕವಳಾಗಿದ್ದಳು, ಎಂತಲೇ ಅವಳು ಗೌರಕ್ಕ ಎಂದು ಕರೆಯುತ್ತಿದ್ದಳು.

"ಆದರೆ ಮುಂದಿನ ವರ್ಷ ಕುಸುಮನಿಗೆ" ಎಂದು ಚೀಟಿ ಕಿತ್ತು ಕೊಂಡು ಅಲ್ಲಿಂದ ಓಡಿದಳು ಗೌರಿ.

ಹೊಲಿಗೆಗೆ ಬೇಕಾದ ಬಣ್ಣ ಬಣ್ಣದ ದಾರ, ಮಣಿ, ಬಟ್ಟೆ, ಉಲ್ಲನ್

ಇದೆಲ್ಲಾ ತರಿಸಿ ಆಯಿತು. ಗೌರಿಯ ಕೈಚಳಕದಿಂದ, ವಿಧವಿಧದ ಡಿಸೈನ್ ಗಳಲ್ಲಿ ಬಣ್ಣ ಬಣ್ಣದ ದಾರ ತುಂಬಿಕೊಂಡು, ಬಾಗಿಲು. ಮೇಜು. ಕಿಟಕಿ ಗಳನ್ನೆಲ್ಲಾ ಅಲಂಕರಿಸಿದವು.

ಮಾಲತಿಯ ಮದುವೆ ಮುಗಿದಮೇಲೆ ಒಂದು ದಿನ

"ಇಲ್ನೋಡಮ್ಮಾ ಇದು ಮಾಲತಕ್ಕನಿಗೆ ರಾಜಣ್ಣನಿಗೆ" ಎಂದು ಹೇಳಿ ಎರಡು ದಿಂಬಿನ ಕವರುಗಳನ್ನು ಕೊಟ್ಟಾಗ ಅವನ್ನು ಬಿಡಿಸಿ ನೋಡಿದ ಶಾರದಮ್ಮನಿಗೆ ಅಚ್ಚರಿ !

"ಯಾವಾಗ ಹಾಕಿದ್ದೇ ! ಎಲ್ಲಿ ಅಡಗಿಸಿಟ್ಟಿದ್ದೋ... ತೋರಿಸೇ ಇರ್ಲಿಲ್ಲ !" ಚೆಂದದ ಕಸೂತಿಗೆ ಮಾರು ಹೋಗಿದ್ದರು ಶಾರದಮ್ಮ.

ಗೌರಿಯ ಮುಖದಲ್ಲಿ ತೃಪ್ತಿ......ಸಂತೋಷ........ನಾಚಿಕೆ ತುಂಬಿ ಕೊಂಡಿತ್ತು. ಏನನ್ನೂ ಹೇಳದೆ ಮೌನವಾಗಿದ್ದಳು.

ಸುತ್ತಲೂ ಬಣ್ಣದ ಅಂಚುಕಟ್ಟಿಕೊಂಡು, ಮಧ್ಯೆ ಬಿಡಿಸಿದ್ದ ಹೂ ಗೊಂಚಲುಗಳ ಅಡಿಯಲ್ಲಿ 'ಸ್ವೀಟ್ ಡ್ರೀಮ್ಸ್' ಮಲಗಿತ್ತು. ಪ್ರೀತಿಯಿಂದ ಗೌರಿಯ ಕಡೆ ನೋಡಿದ ಶಾರದಮ್ಮ ದಿಂಬುಗಳಿಗೆ ಕವರುಗಳನ್ನು ತೊಡಿಸ ತೊಡಗಿದರು.

ಇಷ್ಟರಲ್ಲಿಯೇ ಅಲ್ಲಿಗೆ ಬಂದ ಮಾಲತಿಯ ನಾದಿನಿ ಕೇಳಿದಳು.

"ಎಷ್ಟು ಚೆನ್ನಾಗಿದೆಯಲ್ಲಾ ! ಕೊಂಡಿದ್ದೊ....ಹಾಕಿದ್ದೋ ಅತ್ತೆ?

"ಕೊಂಡಿದ್ದಲ್ಲ ಸುಗುಣಾ, ಈ ಮಗಳು ಹಾಕಿದ್ದು ಎಂದು ಗೌರಿಯ ತಲೆ ನೇವರಿಸಿ ಪ್ರೀತಿಯಿಂದ ನೋಡಿದಾಗ ಗೌರಿಯ ಮುಖ ಅರಳುವುದರ ಲ್ಲಿತ್ತು. ಆದರೆ ಇದಿರಿನಲ್ಲೇ ಕುಳಿತ ಮಾಲತಿಯ ಹುಬ್ಬು ಗಂಟಿಟ್ಟಿದ್ದರಿಂದ ಅರಳಲಿದ್ದ ಮುಖ ಮುದುಡಿಕೊಂಡಿತು.

ಈ ಮಗಳು ಹಾಕಿದ್ದು ಅಂತ ಅಮ್ಮ ಹೇಳಿದ್ದು ಮಾಲತಕ್ಕನಿಗೆ ಇಷ್ಟವಾಗ್ಲಿಲ್ಲವೇನೋ—ಅದಕ್ಕೇ ಹಾಗೆ ಸಿಟ್ಟಿನಿಂದ ನೋಡಿದಳು. ಅಮ್ಮ ಮಾತ್ರ ತಮ್ಮ ಮಗಳಹಾಗೇನೆ ನೋಡಿಕೊಳ್ತಾರೆ. ಅದ್ಯಾಕೊ ಮಾಲತಕ್ಕನಿಗೆ ಮಾತ್ರ ಕೆಲಸದ ಹುಡುಗೀನೆ ನಾನು. ಎಂದುಕೊಳ್ಳುತ್ತಿದ್ದಂತೆ ಗೌರಿಗಿನ್ನು ಅಲ್ಲಿ ನಿಲ್ಲಲಾಗಲಿಲ್ಲ. ಭಾರವಾಧ ಕಾಲನ್ನೆಳೆದುಕೊಂಡು ಈಚೆ ಬಂದು ನಿಂತಳು.

ಒಳಗಡೆ ಹಾಸಿಗೆಯ ಶೃಂಗಾರ ನಡೆಯುತ್ತಿದ್ದುದು ಹೊರಗಡೆ ನಿಂತಿದ್ದ ಗೌರಿಗೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಅಲ್ಲೇ ಇದ್ದ ಶಾರದಮ್ಮ ಯಾತಕ್ಕೋ ಎದ್ದು ಹೊರಗೆ ಹೋದಾಗ,

"ಅಮ್ಮನಿಗೆ ಏನೇನೂ ಗೊತ್ತಾಗೊಲ್ಲ ಸುಗುಣ. ಅದೇ ಗೌರಿ ಇದಾಳಲ್ಲ ಕೆಲಸದ ಹುಡುಗಿ, ಅವಳನ್ನ ತುಂಬಾ ಹಚ್ಚಿಕೊಂಡಿದಾಳೆ. ಹೆತ್ತ ಮಗಳಿಗಿಂತ ಹೊಕ್ಕ ಹುಡುಗಿಯ ಮೇಲೆ ಹೆಚ್ಚು ಮಮತೆ ಅಮ್ಮನಿಗೆ. ಅವಳೇ ಹಾಕಿದ್ದು ಅಂದಳಲ್ಲಾ ಅಮ್ಮ. ಅವಳಿಗೇನು ಬರುತ್ತೆ ಮಹಾ!" ಮಾಲತಿ ಗೌರಿಯ ಮೇಲಿನ ಕಹಿ ಕಾರಿದಾಗ,

"ಹೌದೇ ! ಅಂದ್ರೆ, ಹುಡುಗಿ ಮಾತ್ರ ತುಂಬಾ ಅಂದವಾಗಿದಾಳೆ. ಚುರುಕೂ ಎರೋ ಹಾಗೆ ಕಾಣಿಸ್ತಾಳೆ" ಸುಗುಣ ಅಂದಿದ್ದನ್ನು ಕೇಳಿ ಮಾಲತಿಯ ಮುಖ ಇಷ್ಟಾಯಿತು.

ಮಾಲತಿಯ ಕಣ್ಣಿಗೆ ಮುಳ್ಳಾಗಿದ್ದಳು ಗೌರಿ. ಗೌರಿಯಷ್ಟು ರೂಪವತಿಯಲ್ಲ ತಾನು ಎನ್ನುವುದು ಅವಳ ಕೊರಗು, ತನ್ನ ಪತಿ ರಾಜೂವಿನ ಕಣ್ಣು....ಮನಸ್ಸು ಅವಳ ಕಡೆ ಹಾಯ್ದರೆ! ಎನ್ನುವ ಹೆದರಿಕೆ ಅವಳಿಗೆ. ಎಂತಲೇ ಮದುವೆಯಲ್ಲಿ ಸೀರೆಗಳನ್ನು ಆರಿಸುವಾಗ ಉದ್ದೇಶಪೂರ್ವಕವಾಗಿಯೇ ಗೌರಿಗೆ ಅಗ್ಗದ ಮಾಸಲು ಬಣ್ಣದ ಸೀರೆಯನ್ನಾರಿಸಿದ್ದಳು.

ಕೆಸರಿನ ನಡುವೆ ಇದ್ದರೂ ಕಮಲದ ಹೂವು ಅಂದವೆ.! ಮಾಲತಿ ಇದನ್ನು ಮರೆತಿದ್ದಳೇನೋ.! ಅವಳು ಅತ್ತೆಯ ಮನೆಗೆ ಹೋಗುವಾಗ

ಹೇಳಿಹೋಗದೆ ಇದ್ದುದು ಗೌರಿಗೆ ಮಾತ್ರ. ಗೌರಿಯ ಕಣ್ಣು ತುಂಬಿ ಬಂದು, ನೆಲಕ್ಕುರುಳಿದ ಹನಿ ಕರಗಿದುದನ್ನು ಯಾರೂ ಗಮನಿಸಲಿಲ್ಲ.

ಮಾಲತಿಯನ್ನು ಕಳುಹಿಸಲು ಬಂದಿದ್ದ ನೆರೆಮನೆಯ ಮಂಗಳಮ್ಮ ಅಂದಳು.

"ಇಬ್ಬರಿಗೆ ಮದ್ವೆಮಾಡಿಕಳ್ಸಿದ್ರಿ. ಗೆದ್ದುಕೊಂಡ್ರಿ ಶಾರದಮ್ಮ. ಇನ್ನೇನೂ ಭಯವಿಲ್ಲ ಬಿಡಿ"

"ಇನ್ನೂ ಇದಾರಲ್ಲ ಮಂಗಳಮ್ಮಾ. ಈ ಇಬ್ಬರದೂ ಆದ್ಮೇಲೆ ತಾನೆ ಗೆದ್ದುಕೊಳ್ಳೊದೂ" ಅಲ್ಲಿಯೇ ನಿಂತಿದ್ದ ಗೌರಿ...ಕುಸುಮಳ ಕಡೆ ನೋಡಿ ಶಾರದಮ್ಮ ಅಂದಾಗ

ಮುಂದಿನ ಸರತಿ ತನ್ನದೇ ಅಲ್ಲವೆ ಎಂದು ಪುಳಕಗೊಂಡು ತೂಗಾಡಿದಳು ಗೌರಿ.

ಒಂದು ದಿನ ಗೌರಿ, ಹರಿದಿದ್ದ ಸೀರೆಯನ್ನು ಹೊಲಿಯುತ್ತಾ ನಡುಮನೆಯಲ್ಲಿ ಕುಳಿತಿದ್ದಾಗ ಅಲ್ಲಿ ಬಂದ ಶಾರದಮ್ಮ. "ಏನು ಹೊಲಿತಿದ್ದೀ ಗೌರಿ. ಇನ್ಮೇಲೆ ಕಸೂತಿ ಕೆಲ್ಸ ಶುರುಮಾಡಬೇಕು. ವಿಶಾಲು ಮದುವೇಲಿ ನೀನು ಹಾಕಿದ್ದವನ್ನೆಲ್ಲಾ ಅವಳು ಗಂಡನ ಮನೆಗೆ ಹೋಗೋವಾಗ ತಗೊಂಡು ಹೋದಳು. ಮಾಲತೀನೂ ಹಾಗೇ ಮಾಡಿದಳು. ಇನ್ನು ಬರೋ ಮದುವೆಗಳಿಗೆ ಬೇಕಲ್ಲಾ.! ಈಗಿನಿಂದಾನೆ ಹಾಕಿದ್ರೆ ಒಳ್ಳೇದು. ಮದುವೆ ಹತ್ರ ಬಂದ್ರೆ ಎಷ್ಟೋ ಕೆಲಸಗಳು. ಹಾಕೋದೊಂದೂ ಸಾಗೊಲ್ಲ, ಈಗ ಬಿಡುವಿನಲ್ಲಾದ್ರೆ ಚೆನ್ನಾಗಿ ಹಾಕಬಹುದು "ಏನೇನು ಬೇಕೋ ತರಿಸಿ ಬಿಡೋಣ."

ಆಗಲಮ್ಮ ಎನ್ನಲು ಹೋದರೆ ನಾಚಿಕೆ ಅವಳ ನಾಲಿಗೆ ಹಿಡಿಯಿತು. ಮುಂದೆ ಆಗೋದೇ ತನ್ನ ಮದ್ವೇನೆ; ಎನ್ನಿಸಿ ಆ ಮುಖದ ಮೇಲೆ ಲಜ್ಜೆ ಆವರಿಸಿ ದನಿ ಮುಷ್ಕರ ಹೂಡಿತು. ತಲೆಯನ್ನಾಡಿಸಿ ಒಪ್ಪಿಗೆ ಸೂಚಿಸಿದಳು.

ಮತ್ತೆ ಪಟ್ಟಿತಯಾರಿಸ್ಬೇಕು. ಕುಸುಮಾನ್ನ ಕೋಳೋಲ್ಲ. ಸುಮ್ನೆ ಗೋಳು ಹುಯ್ಕೊಳ್ತಾಳೆ. ಸುರೇಶನನ್ನಂತೂ ಕೇಳೋದೇ ಬೇಡ–ಕೂಸು ಹುಟ್ಟೋಕೆ ಮುಂಚೆ ಕುಲಾವಿನೆ ಅಂತ ಅಂದ್ರೂ ಅಂದ್ನೆ, ಸುಮ್ನೆ ಅನಿತಾ ಅಕ್ಕನ್ನ ಕೇಳೋದೆ ಸರಿ.

ಅನಿತಾ ಹೈದರಾಬಾದಿನ ಕಡೆಯವಳು. ಆಕೆಯ ಗಂಡ ಇಲ್ಲಿ ಗಾಜಿನ ಸಾಮಾನಿನ ಅಂಗಡಿಯಿಟ್ಟಿರಿಸಿಕೊಂಡಿದ್ದ. ಹೋಲಿಗೆ....ಹೆಣಿಗೆ....ಮಣಿ ಕೆಲಸ .. ಬಣ್ಣ ಹಾಕುವುದು ಇದರಲ್ಲೆಲ್ಲಾ ಪಳಗಿದ ಕೈ ಆಕೆಯದು, ಮನೆ ಪಕ್ಕದಲ್ಲೇ ಅದ್ದುದರಿಂದ ಬಿಡುವಿನ ವೇಳೆಯಲ್ಲಿ ಗೌರಿ ಆಕೆಯಿಂದ ಕಲಿಯು ತ್ತಿದ್ದಳು. ಅವಳ ಆಸಕ್ತಿಯನ್ನು ಕಂಡು ತಾನೇ ದಾರ ಬಟ್ಟೆ ಇದನ್ನೆಲ್ಲಾ ಮೊದಲು ಮೊದಲು ಕೊಟ್ಟು ಕಲಿಸಿಕೊಡುತ್ತಿದ್ದಳು,

ಆಕೆಯ ಬಳಿ ಹೋಗಿ ಪಟ್ಟಿ ತಯಾರಿಸಿಕೊಡಲು ಕೇಳಿದಾಗ "ಓ ಈಗಿನಿಂದಾನೆ ಮದ್ವೆಗೆ ತೆಯೊರೀನಾ ಎಂದು ನಕ್ಕಳು.

ನಾಚಿಕೆಯಿಂದ ನೀರಾದಳು ಗೌರಿ. ಪಟ್ಟಿ ತಯಾರಿಸಿ ಆದ ಮೇಲೆ

"ಯಾವಾಗ ಬರ್‍ತಾರೆ ಗೌರಿ ನಿನ್ನ ನೋಡೋದಕ್ಕೆ–ನನಗೂ ತೋರಿ ಸ್ತೀಯಾ ನಿನ್ನ "ಆಕೆ ಕೇಳಿದ್ದು ಪೂರ್ತಿಯಾಗುವ ಮೊದಲೇ, ಕತ್ತು ವಾಲಿಸಿ. ಕಿರುನಗೆ ಸೂಸಿ, ನಡೆದು ಬಂದಳು ಗೌರಿ.

ಕಸೂತಿಯ ಸಲಕರಣೆಗಳೆಲ್ಲಾ ಸಿದ್ಧವಾಗಿದ್ದರೂ ಹಾಕಲು ಹಿಂದೇಟು ಅವಳಿಗ. ತನ್ನ ಮದುವೆಗೇಂತ ಅದೇನು ಶ್ರದ್ಧೇನಪ್ಪಾ ಅಂತ ಮನೆಯ ವರು ಅಂದ್ಕೊಂಡ್ರೆ! ಎಂದ.

ಸುರೇಶ-ಕುಸುಮ ಶಾಲೆ-ಕಾಲೇಜಿಗೆ ಹೋಗಿ, ಸತ್ಯನಾರಯಣಪ್ಪ ಆಫೀಸಿಗೆ ಹೋಗಿದ್ದಾಗ, ಒಳಗಿನ ಕೆಲಸವೆಲ್ಲಾ ಮುಗಿದು ಮಧ್ಯಾಹ್ನ ಶಾರ ದಮ್ಮ ಮಲಗಲು ರೂಮು ಸೇರಿದಾಗ, ಊಟದ ಮನೆಯಲ್ಲಿ ಗೌರಿಯ ಕಸೂತಿಯ ಕಲಾಶಾಲೆ ಪ್ರಾರಂಭ. ಹೊರಗೆ ಹೋಗಿದ್ದವರು ಬಂದು

ಶಾರದಮ್ಮ ಏಳುತ್ತಲೂ ಶಾಲೆ ಬಂದ್, ಮತ್ತೆ ರಾತ್ರಿ ಕೆಲಸ ಮುಗಿದ ಮೇಲೆಯೇ ಶಾಲೆ ಶುರುವಾಗುತ್ತಿದ್ದುದು.

ಹೆತ್ತವರ ಸುಖ ಕಾಣಲಿಲ್ಲ ತಾಳಿಕಟ್ಟುವಾತನಿಂದಲಾದರೂ ಸುಖ ಕಾಣುವ ರಂಗು ರಂಗಿನ ಕಲ್ಪನೆ!

ಬಟ್ಟೆಯ ಮೇಲೆ ಬಣ್ಣ ಬಣ್ಣದ ದಾರ ತುಂಬಿಕೊಳ್ಳುತ್ತಿದ್ದಂತೆಯೇ ಮನಸ್ಸಿನಲ್ಲಿ ಬಣ್ಣ ಬಣ್ಣದ ಸುಂದರ ಕನಸಿನ ಹೆಣಿಕೆ!

"ನಾಳೀನೆ ಬಂದು ಬಿಡ್ತಾರಾ ನೋಡೋದಕ್ಕೆ! ಮಾಲತಿನ ನೋಡೋ ದಕ್ಕೆ! ಬಂದಾಗ್ಲೂ ಹಿಂಗೆ ಆತ್ರಾತ್ರ ಆಯ್ತು, ಈ ಹಂಡಿಗಿಯರಿಗೆ ತಿಳಿಸಿ ಬಿಟ್ರೆ ಒಬ್ಬರಿಗೊಬ್ಬರು ತಮಾಷೆ ಮಾಡ್ಕೊಂಡು ಎದ್ದು ಬಿಡ್ತಾರೆ. ಆಮೇಲೆ ನನ್ನ ಕೈಯೇ ಸಾಗೊಲ್ಲ. ಏನ್ಮಾಡಬೇಕೊ ಏನೋ!

ಗೌರಿ ಆಗಿನ್ನೂ ಅಡಿಗೆ ಮನೆ ಕೆಲಸ ಮುಗಿಸಿಕೊಂಡು ನಡುಮನೆಗೆ ಬಂದಾಗ ರೂಮಿನಲ್ಲಿ ಶಾರದಮ್ಮ ಸತ್ಯನಾರಾಯಣಪ್ಪ ಮಾತಾಡು ತ್ತಿದ್ದುದು ಕೇಳಿ ಬಂತು. ಇದಕ್ಕೆ ಮೊದಲು ಅವರು ಏನೇನು ಮಾತಾಡಿದ್ದ ರೊ ಏನೋ ನೋಡೋದಕ್ಕೆ ಬರ್‍ತಾರೆ ಎನ್ನುವುದು ಮಾತ್ರ ಸ್ಪಷ್ಟವಾಗಿ ಅವಳ ಕಿವಿಗೆ ಬಿತ್ತು.

ಮನವಿರೆದ್ದು ಸಂತೋಷ ಹರಿದಾಡಿತು ಸಂಭ್ರಮಗೊಂಡು ಹಿತ್ತಲ ಕಡೆ ಓಡುತ್ತಿದ್ದ ಅವಳನ್ನು ತಡೆದು ಶಾರದಮ್ಮ

"ಹೊಲಿಗೆ ಕೆಲ್ಸಕ್ಕೆ ಹೊರಟೆಯೊ ಹೇಗೆ. ಅದಿರ್‍ಲಿ' ಬಾ ಇಲ್ಲಿ. ಅಡಿಗೆ ಮನೀಲಿ ಸಿಕ್ಕಪಟ್ಟೆ ಕೆಲ್ಸ ಇದೆ ಎಂದವರೆ ಆತುರದಿಂದ ಅಡಿಗೆ ಮನೆಗೆ ಹೋದರು.

ಬಾಯಿ ಬಿಟ್ಟರೆ ತನ್ನ ಸಂತೋಷ ಎಲ್ಲಿ ಬಯಲಾಗುವುದೋ ಎನ್ನುವ ಭಯ! ಸುಮ್ಮನೆ ಶಾರದಮ್ಮನನ್ನು ಅನುಸರಿಸಿ ಒಳಗೆ ನಡೆದಳು ಗೌರಿ.

ಶಾರದಮ್ಮ ಡಬ್ಬಿಯಲ್ಲಿನ ರವೆಯನ್ನು ಒಂದು ತಟ್ಟೆಗೆ ಸುರುವಿ,

"ಸ್ವಲ್ಪ ಆರಿಸಿಕೊಡು ಬೇಗ್ನೆ .. ಹುರಿಯ್ಬೇಕು. ಕುಸುಮ ಬರೋದು ಇನ್ನೂ ಎಷ್ಟು ಹೊತ್ತಿಗೊ ಏನೊ ದ್ರಾಕ್ಷಿನಾದ್ರೂ ಬಿಡಿಸಿಕೊಡ್ತಿದ್ದಳು. ಕೋಡುಬಳೆಗಿನ್ನೂ ಅಣಿಮಾಡಬೇಕು."

ಆಕೆಯ ಆತುರವನ್ನು ಕಂಡು ಒಳಗೊಳಗೇ ನಗು ಗೌರಿಗೆ.

"ಇದೆಲ್ಲಾ ಯಾಕಮ್ಮಾ ಈಗ. ಯಾರಾದ್ರೂ ಬರ್‍ತಾರಾ ?" ನಗು ತಡೆದುಕೊಂಡು ಕೇಳಿದಳು.

"ಗೊತ್ತೇ ಇದೆಯಲ್ಲಾ ನಿಮ್ಮಪ್ಪನದು. ಯಾರೋ ಹಳೆ ಸ್ನೇಹಿತರು ಬರ್‍ತಾರಂತೆ. ಏನಾದ್ರೂ ಸ್ವಲ್ಪ ರುಚಿಯಾಗಿರೋದನ್ನ ಮಾಡೂಂತ ಕೆಲ್ಸ ಹಚ್ಚಿದ್ದಾರೆ. ಗಂಡಸರದೇ ಇಷ್ಟು. ನೆನೆಸಿಕೊಂಡಕೂಡ್ಲೆ ಆಗಿಬಿಡಬೇಕು ನಾಳೆ ನೀನು ಗಂಡನ ಮನೆಗೆ ಹೋಗ್ತಿಯಲ್ಲ ತಿಳಿಯುತ್ತೆಬಿಡು" ಹೀಗಂದು ಶಾರದಮ್ಮ ಇವಳ ಕಡೆ ನೋಡಿ ನಕ್ಕಾಗ, ಗುಲಾಬಿ ಕುಂಕುಮ ಗೌರಿಯ ಮುಖ. ಒಳ್ಳೆಯ ಅಮ್ಮ ನಂಗೇನೂ ಗೊತ್ತಿಲ್ಲಾಂದ್ಕೊಂಡು ಮುಚ್ಚಿಡ್ತಿದ್ದಾಳೆ ಎಂದುಕೊಂಡು ತನ್ನಲ್ಲೇ ನಕ್ಕಳು,

ನಂತರ ಅವಳ ಮನಸ್ಸು ಎಲ್ಲೆಲ್ಲೋ ಹರಿದಾಡತೊಡಗಿತು. ಅವರು ಹೇಗಿದ್ದಾರೋ. ಎಂಥವರೋ! ನಾಳೆ ಅನ್ನೋದು ಯಾವಾಗ ಆಗುತ್ತೋ! ಎಂದೆಲ್ಲಾ ಚಡಪಡಿಸಿದಳು.

ರವೆ ಆರಿಸಿ .. ದ್ರಾಕ್ಷಿ ಬಿಡಿಸಿ, ಒಂದು ಕಡೆ ಇರಿಸಿ, ತೆಂಗಿನಕಾಯಿ ತುರಿಯನ್ನು ನುಣ್ಣಗೆ ರುಬ್ಬಿ ಕೋಡುಬಳೆಗೆ ಎಲ್ಲಾ ಅಣಿಮಾಡಿಯಾಯಿತು. ಕರಿಯಲು ಬಾಂಡ್ಲಿಗೆ ಎಣ್ಣೆ ಹಾಕುತ್ತಾ "ಸದ್ಯ ಎಲ್ಲಾ ಒದಗ್ಬಿದೆ ಗೌರಿ— ನೀನಿದ್ರೆ ನಂಗೆ ಬಲಗೈ—ಇದ್ದಹಾಗೆ ನೋಡು" ಎಂದು ಶಾರದಮ್ಮ ಮೆಚ್ಚಿಕೆಯಿಂದ ನುಡಿದಾಗ ಗೌರಿಯ ಕೈ ಇನ್ನೂ ಚುರುಕಾಯಿತು.

ಪಾಪ ! ಅಮ್ಮನಿಗೆ ಈಗಿನಿಂದಾನೆ ಯೋಚ್ನೆ. ನಾನು ಅತ್ತೆಮನೆಗೆ ಹೋದ್ಮೇಲೆ ಹೇಗೇಂತ ಎಂದುಕೊಂಡಳು.

ಸಂಜೆಗೆ ಮುಂಚೆಯೆ ಕೆಲಸವೆಲ್ಲಾ ಮುಗಿಯಿತು. "ಇನ್ನು ಉಳಿದಿ ರೋದನ್ನ ನಾಳೆಗೆ ನೋಡ್ಕೊಂಡ್ರೆ ಆಯ್ತು. ಹಾಯಂತ ಒಂದುಗಳಿಗೆ ಹಾಗೇ ಉರುಳುಕೊಳ್ತೀನಿ" ಎನ್ನುತ್ತಾ ಶಾರದಮ್ಮ ಅಡಿಗೆ ಮನೆಯಿಂದ ಹೊರಬಂದರು.

ಕಾಲೇಜಿನಿಂದ ಬಂದ ಕುಸುಮಳಿಗೆ ಗೌರಿ ಲಗುಬಗೆಯಿಂದ ತಿಂಡಿ ತಂದುಕೊಟ್ಟಾಗ "ಓ....ಇದೇನು ಗೌರಕ್ಕಾ ಇವತ್ತು ಸ್ಪೆಷಲ್ಲಾ....ಕೋಡು ಬಳೆ ತಿನ್ನದೆ ತುಂಬಾ ದಿನ ಆಯ್ತುನೋಡು. ಎರಡೇನಾ ! ಇನ್ನೆರಡು ಹಾಕಿಸಿಕೊಳ್ಳೋಣಾಂದ್ರೆ ಸಂಗೀತದ ಮೇಷ್ಟ್ರು ಬೇರೆ ಬರ್ತಾರೆ. ದಿವ್ಸಾ ಬೆಳಿಗ್ಗೆ ಬರ್ತಿದ್ದ ಮೇಷ್ಟ್ರು ಇವತ್ತೇ ಸಾಯಂಕಾಲ ಬರ್ತೀನಿ ಅನ್ನಬೇಕಾ ! ಹೇಳು." ಎನ್ನುತ್ತಾ ತಟ್ಟೆಗೆ ಕೈ ಹಾಕಿದಳು ಕುಸುಮ.

ಇವತ್ತು ಮನೇಲಿ ಕೋಡುಬಳೆ ಮಾಡಿರ್ತಾರೆ, ಕುಸುಮಳಿಗೆ ತುಂಬಾ ಇಷ್ಟ, ತಿನ್ನುತ್ತಾ ಕೂತಿರ್ತಾಳೆ. ನಾನು ಬೇಗ್ನೆ ಹೋದ್ರೆ ಹೇಗೆ ? ಅಂತ ನಿಮ್ಮ ಸಂಗೀತದ ಮೇಷ್ಟರಿಗೆ ಕನಸು ಏನಾದರೂ ಬಿದ್ದಿರುತ್ತಾ ಕುಸುಮಾ." ಎಂದು ಗೌರಿ ನಕ್ಕಾಗ,

"ಹೂಂ...... ಅದೂ ಸರೀನ್ನು. ಹೋಗು ಗೌರಕ್ಕ ಮೊದಲು ವೀಣೇನ ಸ್ವಲ್ಪ ಒರೆಸಿಟ್ಟುಬಿಡು–ಬಂದ್ಬಿಟ್ರೆ." ಎಂದು ಅವಸರದಿಂದ ತಿನ್ನತೊಡಗಿದಳು ಕುಸುಮ.

"ನಿಧಾನಕ್ಕೇ ತಿನ್ನು ಯಾಕೆ ಅಷ್ಟು ಆತ್ರಪಡ್ತೀಯ" ಎಂದವಳೇ ಗೌರಿ ಕುಸುಮಳ ಕೊಠಡಿಗೆ ಹೋಗಿ ವೀಣೆಯನ್ನೆತ್ತಿಕೊಂಡಾಗ, ಎಂದಿಗಿಂತ ಕೈ ಅದರಮೇಲೆ ಸರಾಗವಾಗಿ ಓಡಾಡಿತು. ಅಲೆಅಲೆಯಾಗಿ ಎದ್ದ ನಾದಕ್ಕೆ ಅವಳ ಹೃತ್ತಂತಿಯ ಝೇಂಕಾರದ ಕಿರುತೆರೆಗಳ ನಸುಮೊರೆತ ! ಆನಂದ ಮಬ್ಬರ ! ಉತ್ತರವಾಗಿ ಮೇಲೆದ್ದು ಬಂತು. ಈ ಸಡಗರ, ಸಂಭ್ರಮ

ದಲ್ಲಿ ವೀಣೆಯನ್ನೊರಸುವುದೇ ಮರೆತುಹೋಯಿತು. ಮತ್ತೆ ನೆನಪಾಗಿ ನಗು ಬಂತು. ಒರೆಸಿಟ್ಟು ಬಂದಳು.

ರಾತ್ರೆ ಕೆಲಸವೆಲ್ಲಾ ಮುಗಿದಮೇಲೆ ಮುಕ್ಕಾಲು ಮುಗಿದಿದ್ದ ಚಿತ್ರ ವನ್ನು ಹೊರತೆಗೆದು ಹರಡಿಕೊಂಡಳು. ವೆಲ್‌ವೆಟ್ ಬಟ್ಟೆಯಲ್ಲಿ ಮುದ್ದಾಗಿ ಕುಳಿತು ಮಧುರ ಮಿಲನಕ್ಕೆ ಆತುರಗೊಂಡಿರುವ ಪ್ರಣಯಿ ಹಕ್ಕಿಗಳನ್ನು ಹೆಣೆದಿದ್ದಳು. ಬಣ್ಣಬಣ್ಣದ ಜರಿ ಮತ್ತು ರೇಷ್ಮೆದಾರದಲ್ಲಿ ಸುಂದರವಾಗಿ ರೂಪಗೊಂಡ ಚಿತ್ರ ಅವಳ ಆಶೆ ಆಕಾಂಕ್ಷೆಗಳ ಪ್ರತೀಕವೇ ಆಗಿತ್ತು. ಮೃದು ಮಧುರ ಭಾವನೆಗಳೆಲ್ಲಾ ಅದರಲ್ಲಿ ಒಟ್ಟಾಗಿ ಕೇಂದ್ರೀ ಕೃತವಾಗಿದ್ದವು.

ಚಿತ್ರಕ್ಕೆ ಅಂದವಾದ ಕಟ್ಟುಹಾಕಿಸಿ, ಮೇಜಿನಮೇಲಿರಿಸಿ ತನ್ನವರೊಂ ದಿಗೆ ಕುಳಿತು ನೋಡುವಾಗ ಅದೆಷ್ಟು ಆನಂದ ! ಭಾವೀ ಸುಂದರ ಚಂದಿರ ಆಡಿಗಡಿಗೆ ಅವಳ ಮನದಂಗಳದಲ್ಲಿ ಮೂಡತೊಡಗಿದ್ದ.

ಆ ಚಂದರಿನ ದರ್ಶನ ನಾಳೆಯೇ ! ಎನ್ನಿಸಿದಾಗ ಹಿತವಾದ ನವರಿನ ತೆರೆ ಮೈಯನ್ನಾವರಿಸಿತು. ಎಷ್ಟುಹೊತ್ತಿಗೆ ನಾಳೆಯಾಗುವುದೋ ! ಸುಂದರ ಕನಸುಗಳಲ್ಲಿಯೇ ಬೆಳಗಾಯಿತು. ಏಳುತ್ತಿದ್ದಹಾಗೆಯೇ ಹಾಸಿ ಗೆಯ ಪಕ್ಕದಲ್ಲಿದ್ದ ಪ್ರಣಯಿ ಪಕ್ಷಿಗಳ ಚಿತ್ರ ಕಣ್ಣುತುಂಬಿತು, ಹೂವಿನಂತೆ ಹಗುರವಾಯಿತು ಮನಸ್ಸು. ಕಪ್ಪು ಬಸಿಗಳನ್ನು ತೊಳೆದು ಒಳಗಿಡಲು ಹೋಗುತ್ತಿದ್ದಂತೆ ಆತುರದಿಂದ ಅಲ್ಲಿಗೆ ಬಂದ ಶಾರದಮ್ಮ.

"ತೊಳೆದಾಯ್ತು! ಹಾಗೇ ಬೇಗ್ನೆ ನೀರುತೋಡಿಬಿಡು, ಕುಸುಮ ಸ್ನಾನಮಾಡಿಬಿಡಲಿ. ಅವರು ಈಗ್ಲೆ ಬಂದರೂ ಬಂದರೆ ಹೇಳೋಕಾಗಲ್ಲ"

ಇದ್ದಕ್ಕಿದ್ದಹಾಗೆ ನೆತ್ತಿಗೆ ಸುತ್ತಿಗೆಏಟು ಬಿದ್ದಂತಹ ಅನುಭವವಾಯಿತು ಗೌರಿಗೆ. ಸಿಡಿಯತೊಡಗಿದ್ದ ತಲೆಯನ್ನು ಕೈಗಳಿಂದ ಒತ್ತಿಕೊಂಡು ನಿಂತ ಲ್ಲಿಯೇ ಶಿಲಾಬಾಲಿಕೆಯಾದಳು ಅವಳು.

"ಅದೇನೆ ಗೌರಿ ಹಾಗೆ ನೋಡ್ತಿದ್ದೀ. ತಿಳಿಯಲಿಲ್ಲವೇ ! ಇವತ್ತು ಕುಸುಮನ್ನ ನೋಡೋಕೆ ಬರ್ತಾರೆಕಣೆ ಮಾಲತಿ ಕಡೆಯವರು. ಒಳ್ಳೆ ಅನುಕೂಲಸ್ಥರಂತೆ. ಬೊಂಬಾಯೀಲಿ ದೊಡ್ಡ ಕೆಲಸವಂತೆ ಹುಡುಗನಿಗೆ. ರಾಜಣ್ಣ ಕರ್ಕೊಂಡು ಬರ್ತಾರೆ. ಸದ್ಯ ಅವಳನ್ನ ಗೋಳು ಹೊಯ್ಕೊಳ್ತಾ ನಿಲ್ಲಬೇಡ. ಹಾಗೇ ವೀಣೇನ ಒರೆಸಿಟ್ಟುಬಿಡು, ಪಾಠಾನೂ ಆಗಿಹೋಗಲಿ.

"ಆಗಲಮ್ಮ" ಪಾತಾಳದಿಂದ ಬಂದಂತಿತ್ತು ತೃಪ್ತ ಹೃದಯದ ಕುಗ್ಗಿದ ದನಿ. ಮಸಣದ ಮನಸ್ಸಿನಿಂದ ಸೋತ ಕಾಲುಗಳನ್ನು ಹೊತ್ತು ರೂಮಿಗೆ ಹೋಗಿ ವೀಣೆಯನ್ನು ಒರೆಸತೊಡಗಿದಳು ಕುರುಡಿಯಂತೆ. ಎತ್ತಲೋ ನೋಡುತ್ತಾ ಕೈಯಾಡಿಸಿದಾಗ ತಂತಿ ಹಾಡಿತು. ಆದರೆ ಅವಳ ಹೃತ್ತಂತಿ ಮಾತ್ರ ಕಡಿದುಹೋಗಿತ್ತು.

ಕುಸುಮ, ಸ್ನಾನ....ವೀಣೆಪಾಠ ಮುಗಿಸಿಕೊಂಡು ಬಂದರೂ ಗೌರಿ ಒಳಗಡೆ ಕಾಣಲಿಲ್ಲ. ಎಲ್ಲಿ ಹೋದಳಪ್ಪಾ ಈ ಗೌರಕ್ಕಾ! ಎಂದುಕೊಳುತ್ತಾ, ಮನೆಯ ಹಿಂದುಗಡೆ ಬಂದಾಗ ಒಪ್ಪಾರದಲ್ಲಿ ಕುಳಿತಿದ್ದಳು ಅವಳು ಕೈಯಲ್ಲಿ ನಿನ್ನೆ ಮುಗಿಸಿದ ಚಿತ್ರ.

"ಇಲ್ಲಿಯಾಕೆ ಕುಳಿತಿದ್ದೀ ಗೌರಕ್ಕಾ. ಅದೇನೋ ಹೊಲೀತಿದ್ದೀಯೋ ಹಾಗಿದೆ" ಎನ್ನುತ್ತಾ ಕುಸುಮ ಹತ್ತಿರ ಬಂದು ನೋಡಿದಾಗ,

"ಕುಸುಮಳಿಗೆ.......ಗೌರಕ್ಕನಿಂದ" ಮುದ್ದಾದ ಅಕ್ಷರಗಳಲ್ಲಿ ಬಣ್ಣ ಬಣ್ಣದ ದಾರ ತುಂಬಿಕೊಳ್ಳುತ್ತಿತ್ತು.

* * *

# ಮೂರ್ಧನಿ

–ಮಾಲ ಜಿ. ರಾವ್

ಅನಿಲನು ಆಯಾಸವಿಲ್ಲದೇ ವಿಹರಿಸುತ್ತಿದ್ದಾನೆ. ಗಗನರಾಜನ ಗಮನ ಅಂಬುಧಿಯೆಡೆಗೆ ಸಾಗಿದೆ. ಹಕ್ಕಿಗಳ ಕೊರಲಿನ ಸುರವ ಗೂಡು ಗಳಿಗಭಿಮುಖವಾಗಿವೆ. ದನಕರುಗಳ ಕೊರಳ ಗಂಟೆಯ ನಿನಾದ ಕೊಟ್ಟಿಗೆ ಯಿನ್ನರಸಿ ಹೋಗುತ್ತಿವೆ. ಮುಗ್ಧ ಹಸುಳೆಗಳ ಕಂಠಶ್ರೀ ಗಗನಕ್ಕೇರುತ್ತಿವೆ. ಭೂರಮೆಯ ಪ್ರಕೃತಿದೇವಿಯು ಈ ಕೋಮಲ ವಾತಾವರಣವನ್ನು ಸಂತಸ ದಿಂದ ಅವಲೋಕಿಸುತ್ತಿದ್ದಾಳೆ.

ಹೊರಗಿನ ವಾತಾವರಣಕ್ಕಂಟಿದ ಮನವು ತನ್ನ ಕಾರ್ಯದಲ್ಲಿ ಒಂದ ರಕ್ಷಣ ಸ್ಥಗಿತವಾಯಿತು ಮನದ ಅರಿವಿಲ್ಲದೇ ಕಣ್ಣುಗಳು ಗಡಿಯಾರದೆಡೆ ತಿರುಗಿದವು. ಆಗಲೇ ನಿಮಿಷದ ಮುಳ್ಳು ಗಂಟೆಯ ಮುಳ್ಳನ್ನು ಆರಕ್ಕೆ ತಳ್ಳಿ ತಾನು ಹನ್ನೆರಡನ್ನು ಸೇರುವುದರಲ್ಲಿತ್ತು. ಆಫೀಸಿನ ವೇಳೆ ಮುಗಿದು ಆಗಲೇ ಅರ್ಧ ತಾಸು ಮುಗಿವುದರಲ್ಲಿತ್ತು, ಆಫೀಸೆಲ್ಲ ವೂ ಖಾಲಿಯಾ ಗಿತ್ತು. ಅಲ್ಲಿದ್ದ ಬೆಲೆ ಬಾಳುವ ಕುರ್ಚಿ, ಮೇಜುಗಳೆಲ್ಲವೂ ಅನಾಥಾಲ ಯದ ಮಕ್ಕಳ ಮುಖದಂತೆ ಜೋಲು ಬಿದ್ದಿತ್ತು. ಕೆಳಗಿದ್ದ ವಾಚ್‌ಮನ್ ಗಳ ಮಾತು ಅಸ್ಪಷ್ಟವಾಗಿ ಕೇಳಿಬರುತ್ತಿತ್ತು. ಮನೆಯೆಡೆಗೆ ಓಡಿದ್ದ ತುಂಟ ಮನಸ್ಸನ್ನು ಬಹು ಸಾಹಸದಿಂದ ನಿಲ್ಲಿಸಿ ಅಭ್ಯರ್ಥಿಗಳ ಪಟ್ಟಿಯನ್ನು ತಯಾ ರಿಸಲನುವಾದೆ.

ಖಾಲಿಯಿದ್ದ ಒಂದು ಜಾಗಕ್ಕೆ 500 ಅಪ್ಲಿಕೇಷನ್ ಬಂದಿದ್ದವು. ಪರೀಕ್ಷೆಯಲ್ಲಿ ಪಾಸಾದ ಅಭ್ಯರ್ಥಿಗಳು ಕೇವಲ 50. ಯಾರ ಭಾಗ್ಯ ಸುಮುಖವಾಗಿದೆಯೋ? ನಾಳಿನ ಇಂಟರ್‌ವ್ಯೂನಲ್ಲಿ ಯಾವ ಅದೃಷ್ಟಶಾಲಿ

ಆರಿಸಿಬರುವರೋ? ಯೋಚನೆ ಸಾಗುತ್ತಿರುವಾಗಲೇ ಮರುದಿನದಂದು ತಮ್ಮ ಸರ್ಟಿಫಿಕೇಟ್‌ಗಳನ್ನು ಹೊತ್ತು ಕಾತುರ ಭಾವದಿಂದ ಆಗಮಿಸುವ ಉದ್ವೇಗಪೂರ್ಣಮುಖಗಳು ಎದುರಿಗೆ ನಿಂತಂತಾಯಿತು. ತಮ್ಮ ಸರತಿಗಾಗಿ ಕಾಯುತ್ತಾ, ವರಾಂಡದಲ್ಲಿ ಹಾಕಿರುವ ಬೆಂಚಿನ ಮೇಲೆ ಸಾಲಾಗಿ ಕೂತು, ನಿರುದ್ಯೋಗದ ಬಗ್ಗೆ ಬೇಸತ್ತ ಭಾವದಿಂದ ಸಂಭಾಷಿಸುತ್ತಾ, ಇಂಟರ್‌ವ್ಯೂ ಮುಗಿಸಿ ಬರುವ ಅಭ್ಯರ್ಥಿಗಳನ್ನು ಸುತ್ತುಗಟ್ಟಿ ಏನ್ಕೇಳಿದ್ರು? "ಇನ್ನೇನ್ಕೇಳಿದ್ರು"? ಎಂದು ಅವರು ಉತ್ತರಿಸುವ ಮುನ್ನವೇ ಆತುರಾತುರವಾಗಿ, ಕಾತುರದಿಂದ ಪ್ರಶ್ನಿಸುವ ಅಸಹಾಯಕ ನಿರುದ್ಯೋಗಿಗಳನ್ನು ನೆನೆದು ಮನವು ಕಳವಳಪಟ್ಟಿತು. ಮೇಜಿನ ಮೇಲಿದ್ದ ಇಂಟರ್ ಕಾಂ, ಟ್ರಿಣ್ ಎಂದಿತು. "ಎಸ್ ಬಾಸ್" ಎಂದೆ. ಅಭ್ಯರ್ಥಿಗಳ ಹೆಸರಿನ ಮುಂದೆ ಅವರು ಗಳಿಸಿರುವ ಅಂಕಗಳನ್ನೂ ನಮೂದಿಸಬೇಕೆಂದು ಸೂಚಿಸಲಾಯಿತು. ಬೇಗ ಬೇಗನೇ ಕೆಲಸ ಮುಗಿಸಿ ಮನೆಗೆ ತೆರಳುವ ಯೋಚನೆಯಿಂದ ಅಭ್ಯರ್ಥಿಗಳ ಅಪ್ಲಿಕೇಶನ್‌ಗಳನ್ನು ತಿರುವಿಹಾಕಲಾರಂಭಿಸಿದೆ. ನಲವತ್ತನೇ ಅಭ್ಯರ್ಥಿಯ ಹೆಸರನ್ನು ಬರೆಯುವಾಗ ಲೇಖನಿಯ ಚಲನೆಯು ಇದ್ದಕ್ಕಿದ್ದಂತೆ ಮರಗಟ್ಟಿತು. ಆ ಹೆಸರನ್ನು ಮತ್ತೊಮ್ಮೆ ಓದಿದೆ. ಹೃನ್ಮಂದಿರವು ಕಾಲೇಜಿನ ದಿನಗಳೆಡೆ ಓಡಿತು.

ಪ್ರತಿಯೊಂದು ಕ್ಲಾಸಿನಲ್ಲೂ ನನ್ನ ಹಿಂದುಗಡೆಯೇ ಕುಳಿತಿರುತ್ತಿದ್ದ ವ್ಯಕ್ತಿ. ಅಹಂಕಾರದ ಮುದ್ದೆ. ತಂದೆಯ ಹುದ್ದೆಯಿಂದಾಗಿ ಎಲ್ಲರನ್ನೂ ಅದರಲ್ಲೂ ನನ್ನನ್ನು ಕಾಲಕಸವಾಗಿ ಕಾಣುತ್ತಿದ್ದ ಜಂಬದ ಮೊಟ್ಟೆ. ಗುಣಮಾತರ್ಯಾರೆಡೆಗೂ ಬಾಗಿನೋಡದ ಧನಿಕ ಮೌಂಟ್ ಎವರೆಸ್ಟ್. ಹೆಸರನ್ನೇ ಇಷ್ಟು ದ್ವೇಷಿಸುವ ನಾನು, ಆ ವ್ಯಕ್ತಿಯೊಡನೆ ನಾಲ್ಕಾರು ವರ್ಷಗಳು ಹೇಗೆ ಹೊಂದಿಕೊಂಡಿದ್ದೆ ಎಂಬುದರ ಬಗ್ಗೆ ಆಶ್ಚರ್ಯವಾಯಿತು.

ಯಾವಾಗಲೂ ಮುಖವನ್ನು ಗಂಟುಹಾಕಿ ಕೊಂಡಿರುತ್ತಿದ್ದ ಸ್ಮಿತ, ಸಹಜ ಸುಂದರಿಯಲ್ಲದಿದ್ದರೂ ನೂತನ ಫ್ಯಾಶನ್ನಿನ ಪೊರೆ ಹೊಕ್ಕ ಸಿಂಗಾರಿ ಹಣದ ಕಾಲಂನಲ್ಲಿ ನೂರಕ್ಕೆ ನೂರು ಮಾರ್ಕು ತೆಗೆದ ಸ್ಮಿತ ಗುಣದ ಕಾಲಂ

ನಲ್ಲಿ ಸೊನ್ನೆ. ಹಣಕ್ಕಾಗಿ ಎಲ್ಲರೂ ಅವಳನ್ನು ಆಶ್ರಯಿಸುತ್ತಿದ್ದರೂ,
ಅಂತರ್ಯದಲ್ಲಿ ದ್ವೇಷಗಳಾಗಿದ್ದರು.

'ಡಬ್ ಡಬ್' ಜವಾನ ಹಾಲಿನ ಕಿಟಕಿಗಳೆಲ್ಲವನ್ನೂ ನಿಶಬ್ದವಾಗಿ
ಮುಚ್ಚುತ್ತಿದ್ದ. ನೆನಪಿನ ಕೋಣೆಯಿಂದ ಹೊರಬಂದು ಕಾರ್ಯತತ್ಪರಳಾದೆ.
ಉಳಿದ ಹೆಸರುಗಳನ್ನೆಲ್ಲಾ ಬರೆದು ಮುಗಿಸಿ ಬಾಸ್ ಮುಂದಿನ ಮೇಜಿನ
ಮೇಲಿಟ್ಟೆ. ತಲೆಯೆತ್ತಿ ನೋಡಿದ ಬಾಸ್ ಮುಗುಳ್ನಕ್ಕು 'ವೆರಿಗುಡ್ ಮೈ
ಗರ್ಲ್' ಎಂದು ಶಹಭಾಸ್ ಗಿರಿ ಕೊಟ್ಟು ನನ್ನೊಡನೆ ಹೊರ ಬಂದರು.
ಕಾರು ಮನೆಯೆಡೆಗೆ ಮಂದಗತಿಯಿಂದ ಸಾಗುತ್ತಿತ್ತು. ನಾಳಿನ ಯೋಚನೆ
ಯಲ್ಲಿದ್ದ ಬಾಸ್ ನನ್ನ ಇರವನ್ನೇ ಮರೆತಂತಿತ್ತು. ನನ್ನ ಮನವು ನನ್ನಿರ
ವನ್ನು ಮರೆತು ಐದು ವರ್ಷಗಳ ಹಿಂದೆ ಓಡಿತು.

ಅಂದು ಪ್ರಾಕ್ಟಿಕಲ್ ಮುಗಿಸಿ ಹೊರ ಬಂದಾಗ ಗಂಟೆ ಆರು ಸಮೀ
ಪಿಸಿತ್ತು. ಕಾಲೇಜಿನಲ್ಲಿ ಹೆಚ್ಚು ಜನರಿರಲಿಲ್ಲ. ಆಗಸವು ಮೋಡಗಳ
ಭಾರದಿಂದ ಬಗ್ಗಿತ್ತು. ಮಳೆಯ ಸೂಚನೆ ಹೊತ್ತ ತಂಗಾಳಿ ಸುಳಿಸುಳಿ
ಯಾಗಿ ಬರುತ್ತಿತ್ತು. ಮನೆ ತಲುಪಲು ಒಂದೂವರೆ ಮೈಲು ಉಪಕ್ರಮಿ
ಸಬೇಕಿತ್ತು. ಕಾಂಪೌಂಡ್ ದಾಟಿದಾಕ್ಷಣ ಮಳೆ ಹನಿ ಪಟಪಟನೆ ಬೀಳಲಾ
ರಂಭಿಸಿತು. ಬಸ್ಸಿನಲ್ಲಿ ಹೋಗುವ ಯೋಗ್ಯತೆಯೂ ನನ್ನಲ್ಲಿರಲಿಲ್ಲ. ಮಳೆ
ಯಿಂದಾಗಿ, ರಾತ್ರಿಯಾಗಿದ್ದರೂ ಕತ್ತಲು ಗಾಢವಾಯಿತು. ಬೇಗಬೇಗನೇ
ಮನೆ ಸೇರುವ ಉದ್ದಿಶ್ಯದಿಂದ ದಾಪುಗಾಲು ಹಾಕಲಾರಂಭಿಸಿದೆ, ಗೆಳತಿಯ
ರೆಲ್ಲರೂ ಬಸ್ಸಿನಲ್ಲಿ ಹೋಗೋಣವೆಂದು ಬಲಾತ್ಕರಿಸಿದಾಗ, 'ಬಸ್ ಬರೋ
ಹೊತ್ಗೆ ಮನೆ ಸೇರ್ಕೊಬಹುದು' ಎಂದು ಉದಾಸೀನಭಾವದ ನಾಟಕವಾಡಿ
ನಾನೋರ್ವಳೇ ನಡೆಯಲಾರಂಭಿಸಿದೆ. ಮಳೆಯ ಹೊಡೆತ ಬಿರುಸಾಯಿತು.
ಉಟ್ಟಿದ್ದ ಅಗ್ಗದ ವಾಯಿಲ್ ಸೀರೆ ಮೈಗಂಟಿತು, ಕಾಲುಗಳನ್ನು ಸಲೀ
ಸಾಗಿ ಮುಂದಿಡಲು ಸಾಧ್ಯವಾಗಲಿಲ್ಲ. ತಡವರಿಸಿಕೊಂಡು ನಡೆಯುತ್ತಿ
ದ್ದಾಗ 'ಪ್ರೀತಿ' ಎಂಬ ಕೂಗು ಎಲ್ಲಿಂದಲೋ ಕೇಳಿ ಬಂದಂತಾಗಿ ಅಲ್ಲಿಯೇ

ನಿಂತೆ. ಹಿಂದಿನಿಂದ ಬಂದ ಸ್ಮಿತಳ ಕಾರು ಪಕ್ಕದಲ್ಲೇ ನಿಂತಿತು. 'ಆಪತ್ಕಾಲಕ್ಕೆ ಆದವನೇನೆಂಟ' ಎಂದು ಮನಸ್ಸಿನಲ್ಲೇ ಸ್ಮಿತಳಿಗೆ ನೂರು ಬಾರಿ ವಂದಿಸಿದೆ. ಕಾರಿನ ಅಭ್ಯಾಸವಿಲ್ಲದ ನಾನು ಅವಳೇ ಬಾಗಿಲು ತೆಗೆಯಲೆಂದು ಒಂದು ನಿಮಿಷ ಕಾದೆ. ಬಾಗಿಲು ಕಾರಿನಿಂದ ಬೇರ್ಪಡದಾಗ ಸ್ಮಿತಳ ಸುದನಿ ಕಾಚಿ ಬಂತು. 'ಪ್ರೀತಿ ನಂದು ಲೈಬ್ರರಿ ಬುಕ್ ಇಸ್ಕೊಂಡಿದ್ಯಲ್ಲಾ ಕೊಟ್ಬಿಡು. ಮಳೇಲಿ ನೆಂದು ಹೋಗುತ್ತೆ' ಎಂದಾಗ ಮೈಯೆಲ್ಲ ಕಿಡಿಕಿಡಿಯಾಯಿತು. ಮಳೆಯ ರಕ್ಷಣೆಗಾಗಿ ಸೀರೆಯ ಒಳಗೆ ಹಿಡಿದಿದ್ದ ಪುಸ್ತಕಗಳ ರಾಶಿಯಿಂದ ಅವಳ ಪುಸ್ತಕವನ್ನು ಕೊಟ್ಟಿದ್ದೇ ತಡ, ಧಾರಾಕಾರವಾಗಿ ಸುರಿಯುತ್ತಿದ್ದ ಮಳೆಯ ನೀರನ್ನು ಸೀಳಿ ಕಾರು ಮುಂದೋಡಿತು. ಅಂದೇ ಕೊನೆ ಅವಳನ್ನೆಂದೂ ಪುಸ್ತಕಕ್ಕಾಗಿ ಯಾಚಿಸಲಿಲ್ಲ.

ಕಾರು ಪೋರ್ಟಿಕೋದಲ್ಲಿ ಗಕ್ಕನೆ ನಿಂತಿತು. ಕಾರಿನಿಂದ ಕೆಳಗಿಳಿದ ನಾನು ಒಳಹೊಕ್ಕೆ. 'ಮಮ್ಮಿ' ಎಂದು ಅರುಣ್ ನನ್ನನ್ನು ಬಾಚಿತಬ್ಬಿದ. ಮರು ನಿಮಿಷವೇ ಅಳಲು ಮೊದಲು ಮಾಡಿದ. 'ಮಮ್ಮಿ ನನ್‌ರಾಜ ಗೊಂಬೆ ಮುರ್ದ್ಹೋಯ್ತು.' 'ಅಷ್ಟೇನಾನಾ ಸರಿಮಾಡಿ ಕೊಡ್ತೀನಿ ಕೊಡು ಮರಿ' ಎಂದು ಕಾಲನ್ನಿಟ್ಟು ಜೋಡಿಸಲಾರಂಭಿಸಿದೆ. ಅಷ್ಟರಲ್ಲಿ ಇವರು 'ಬೇಡಮರಿ' ಯಾವುದೇ ಆಗ್ಲಿ. ಒಂದು ಅಂಗ ಊನ ಆದ್ರ, ಅದರ ಪರ್ಸನಾಲಿಟೀನೇ ಕಳ್ಕೊಂಬಿಡುತ್ತೆ. ಅದು ಯೂಸ್‌ಲೆಸ್. ಎಸೆದ್ಬಿಡು. ನಾಳೆ ಬೇರೆ ತಂದ್ಕೊಡ್ತೀನಿ" ಎಂದರು. ಆ ಬೊಂಬೆ ಠೀವಿಯಿಂದ. ಜಂಬದಿಂದ ತಲೆಯೆತ್ತಿ ನಿಂತಂತಿತ್ತು. ಅರುಣ್ ಅದಕ್ಕೆ ಜಂಭಗಾರ ಎಂದು ಅಡ್ಡಹೆಸರನ್ನಿಟ್ಟಿದ್ದ. ಆಗಾಗ್ಗೆ 'ಜಂಭ ಮಾಡ್ತೀಯಾ ರ್‍ಯಾಸ್ಕಲ್' ಎಂದು ಅದನ್ನು ಮೃದುವಾಗಿ ತನ್ನ ಕೈಯಿಂದ ಹೊಡೆಯುತ್ತಿದ್ದ. ಇಂದು ಕೋಲಿನಿಂದ ಬಲವಾಗಿ ಹೊಡೆದಿದ್ದನಾದ್ದರಿಂದ ಅದರ ಕಾಲು ಮುರಿದು ಬಿದ್ದಿತ್ತು. ಸಂತಸದಿಂದ 'ಪಪ್ಪ ಗುಡ್ ಬಾಯ್' ಎಂದು ಅಪ್ಪನಿಗೆ ಜೋತು ಬಿದ್ದ. 'ಪಪ್ಪಾಯಾವಾಗ ತಂದ್ಕೊಡ್ತೀಯಾ'? ನೋಡು ಮರಿ. ನಾಳೆ ಸಂಜೆ ಬಂದ ತಕ್ಷಣ ಎಕ್ಸಿಬಿಷನ್, ನಾಳಿದ್ದು ಸಂಡೇ ಪಿಕ್ಚರ್, ಓ.ಕೆ' ಎಂದಾಗ ನನ್ನ ನೆನಪು ಸರಸರನೆ ಹಿಂದೆ ಓಡಿತು.

'ಪ್ರೀತಿ ಲಕ್ಕಿ ಗರ್ಲ್. ಇವತ್ತು ಕುಮುದ ಬರೋಲ್ವಂತೆ. ಎರಡು ಟಿಕೆಟ್ ಬುಕ್ ಮಾಡ್ಸಿದೀನಿ. ನೀ ಬಂದ್ಬಿಡು, ಎಂದಳು ಸ್ಮಿತ. ಎಂದೋ ಬಹಳ ಹಿಂದೆ ಸಿನಿಮಾ ನೋಡಿದ ನೆನಪು. 'ಸಿನಿಮಾ' ಅದೊಂದು ಸುಂದರ ಪ್ರಪಂಚ ನನ್ನ ಪಾಲಿಗೆ. ಸುಂದರ ಸೀನರಿ, ಬಾಕ್ಸಿಂಗ್, ಸ್ಕೇಟಿಂಗ್ ಸಂಗೀತ, ನೃತ್ಯ. ಓ! ಎಷ್ಟೊಂದು ಮಜಾ ಸಿಗುತ್ತೆ. 'ಬೇಡಮ್ಮ ನಾ ಬರೋಲ್ಲ. ಸಂಗಿಷ್ಟಾನೇ ಇಲ್ಲ. ಹೇಳಲಾರದೇ, ಸ್ವಾಭಿಮಾನಕ್ಕೆ ಸೋತ ನಾಲಿಗೆ ಒದರಿತು. 'ಇರ್ಲಿ ಬಾರೆ, ನೀನೂ ನೋಡೋದು ಅಪರೂಪ. ನಂಜೊತೆಗೂ ಆಗುತ್ತೆ. ಅವಳ ಅಭಿಮಾನದ ನುಡಿ ನನ್ನನ್ನು ಕೆರಳಿಸಿತು. 'ಇಲ್ಲಮ್ಮಾ. ಪಿಕ್ಚರ್ ಅಂದ್ರೆ ನಂಗೆ ತಲೆನೋವು. ಅದನ್ನೋಡಿದ ದಿನ ವೆಲ್ಲಾ ಹಾಳು ತಲೆನೋವಿನಿಂದ ಯಾವ ಕೆಲಸವೂ ಸಾಗೋದಿಲ್ಲ. ದಯ ವಿಟ್ಟು ನನ್ನನ್ನ ಬಲವಂತ ಪಡಿಸ್ಬೇಡ' ನನ್ನ ನಿರ್ಧಾರವು ಅಚಲವಾಗುತ್ತಿ ರುವುದನ್ನು ಕಂಡು. ತನ್ನ ಆಸಂಭಾವವನ್ನು 50% ಕಮ್ಮಿ ಮಾಡಿದ ಸ್ಮಿತ ಯಾಚಿಸುವ ಧ್ವನಿಯಲ್ಲಿ 'ಪ್ಲೀಸ್ ಬರೋಲ್ಲ ಅನ್ಬೇಡ. ಆ ಪಿಕ್ಚರ್ ಬಹಳ ಚೆನ್ನಾಗಿದೇಂತೆ. ಇವತ್ತೇ ಲಾಸ್ಟ್. ಅದನ್ನ ಮಿಸ್ ಮಾಡೋ ಸಾಧ್ಯವಿಲ್ಲ. ಅಪ್ಪ-ಅಮ್ಮ ನನ್ನೊಬ್ಬಳನ್ನೇ ಕಳಿಸೋದಿಲ್ಲ. ನೋಡು. ನೀ ಬಾದ್ರೆ ಪಿಕ್ಚರ್, ಇವತ್ತು ನಾ ಹೋಗದಿದ್ರೆ ನಾಳೆಯಿಂದ ನನ್ನ ಮೂಡೇ ಸರಿ ಇರೋದಿಲ್ಲ. ಪ್ಲೀಸ್ ಪ್ಲೀಸ್' ಎಂದು ಅಂಗಲಾಚಿದಳು. ವಿಧಿಯಿ ಲ್ಲದೇ ಒಪ್ಪಿದೆ. ಮನಸ್ಸೇನೋ ಸುಂದರ ಪ್ರಪಂಚದ ಸೊಬಗನ್ನವಲೋ ಕಿಸಲು ಕಾತುರವಾಗಿತ್ತು. ಅಪ್ಪನನ್ನು ಒಪ್ಪಿಸಿ ನನ್ನ ಭಾರಿ ಸೀರೆಯಾದ ಕೋಟಾಸೀರೆಯನ್ನುಟ್ಟು ಮನೆಯಲ್ಲೇ ಬಿಡುತ್ತಿದ್ದ ಕಾಕಡಾ ಹೂಗಳನ್ನು ಗುಲಾಬಿಯಂತೆ ಪಿನ್ನಿನ ಸಹಾಯದಿಂದ ಬಲಪಕ್ಕಕ್ಕೆ ಮುಡಿದು ಹೆಚ್ಚಾಗಿ ಪೌಡರನ್ನು ಹಚ್ಚಿ, ಥೀಯೇಟರಿಗೂ, ಸ್ಮಿತಳ ಮನೆಗೂ ಮಧ್ಯ ಹಾದಿಯ ಲ್ಲಿಪ್ಪ ನಮ್ಮ ಮನೆಯಿಂದ ಅವಳ ಮನೆಗೆ ನಡೆದೇ ಹೊರಟೆ. ಮೈ ಮನ ವೆಲ್ಲವೂ ಸಂತಸದಿಂದ ಹಗುರಾಗಿತ್ತು. ಯಾವುದೋ ಆನಂದದಿಂದ ಮುಖದ ತುಂಬ ಮುಗುಳ್ನಗು ಹರಡಿತ್ತು. ಆಗ್ಗಾಗ್ಗೆ ಕಾಕಡಾ ಗುಲಾಬಿ ಯನ್ನು ಪ್ರೀತಿಯಿಂದ ಸವರುತ್ತಿದ್ದೆ. ಅಕಸ್ಮಾತ್ ಸಿಕ್ಕಿದ ಈ ಛಾನ್ಸ್ ಕಳೆದುಕೊಳ್ಳಬಾರದು. ಪ್ರತಿಯೊಂದು ಸೀನನ್ನೂ ನಿಗಾ ಇಟ್ಟು ನೋಡ

ಬೇಕು. ಸೀನ್ ಬೈ ಸೀನ್ ನನ್ನ ತಮ್ಮ ರಾಜೀವ್‌ಗೆ ಹೇಳಬೇಕು. ಖುಷ್ ದಾಡ್ತಾನೆ. ಪಾಪ ಅವನ್ಗೂ ಆಸೆ ಅಲ್ವಾ. ಏನ್ಮಾಡೋದೂ ಎಲ್ಲಕ್ಕೂ ಕೇಳ್ಕೊಂಡು ಬರ್ಬೇಕಲ್ಲಾ. ಸ್ಮಿತ ಇನ್ನೊಮ್ಮೆ ಕರೆದಾಗ ಅವನನ್ನು ಕಳಿಸ ಬೇಕು. ದಾರಿ ಸವೆದುದೇ ತಿಳಿಯಲಿಲ್ಲ. ಸ್ಮಿತಳ ಬಂಗಲೆಯ ಮುಂದೆ ನಿಂತೆ ಡ್ರೈವರ್ ಷಡ್‌ನಿಂದ ಕಾರು ಈಚೆ ತೆಗೀತಿದ್ದ. ಕಾರು ಪೋರ್ಟಿಕೋದಲ್ಲಿ ನಿಂತಾಕ್ಷಣ ಸ್ಮಿತ ತನ್ನ ಕೈಚೀಲದೊಂದಿಗೆ ಕಾರನ್ನೇರಿದಳು. ಅವಳ ಹಿಂದೆಯೇ ಅವಳ ಚಂಚಾ ಕುಮುದಾ. ನನಗೆ ಆಶ್ಚರ್ಯವಾಯಿತು. ನನ್ನನ್ನು ನೋಡಿದರೂ ನೋಡದವಳಂತೆ ಸ್ಮಿತ ಕಾರಿನ ಬಾಗಿಲೆಳೆದು ಕೊಂಡಳು. ಕಾರು ಗೇಟಿನ ಬಳಿ ಬರುತ್ತಿದ್ದಂತೆಯೇ ಸ್ಮಿತ, 'ಸಾರಿ ಪ್ರೀತಿ. ಕುಮುದಾನೇ ಬಂದ್ಲು. ಬಟ್ಲರ್‌ಗೆ ಹೇಳಿದೀನಿ. ಒಂದ್ಲೋಟ ಟೀ ಕುಡ್ಕೊಂಡು ಮನೆಗ್ಹೋಗು' ಎಂದಳು. ನನ್ನ ಮೇಲೇ ನನಗೆ ಕೋಪ ಬಂತು, ಆಸೆ ಒಂದು ಇಲ್ಲದೆ ಇದ್ರೆ ಪ್ರಪಂಚದಲ್ಲಿ ಮರ್ಯಾದೆಯಾಗಿಬಾಳ ಬಹುದಿತ್ತು. ಹಾಳಾದ ಆಸೆ ಎಲ್ಲಾನೂ ಹಾಳು ಮಾಡಿಬಿಡುತ್ತೆ. ಆಸೆಯೇ ದುಃಖಕ್ಕೆ ಮೂಲ ಕಾರಣ ಎಂದೋ ಸ್ಕೂಲಿನಲ್ಲಿ ಓದಿದ ಬುದ್ಧನ ಹಿತ ವಾದ ನೆನಪಿಗೆ ಬಂತು. ಕಶ್ಮಲ ವಾತಾವರಣದೊಳಗೆ ಅಡಿಯಿಡದೇ ಹಿಂದಿರುಗಿದೆ.

'ಮಮ್ಮೀ ಹಸ್ವೆ' ಅರುಣ್ ಎಚ್ಚರಿಸಿದಾಗ ಕಿಚನ್‌ಕಡೆ ನಡೆದೆ. ಟೀ ಕುಡಿದವರೇ ಇವರು ಎಲ್ಲೋ ಹೊರ ಹೊರಟಿದ್ದರು. ಅರುಣನ ತಟ್ಟೆಗೆ ಬಡಿಸಿ ಅವನ ಎದುರಿನ ಕುರ್ಚಿಯ ಮೇಲೇ ಕುಳಿತೆ. ಅವನ ಎಡಗೈಲಿ ಮತ್ತೊಂದು ಬೊಂಬೆ ಇತ್ತು. ಹೆಣ್ಣು ಬೊಂಬೆ. ಸಾಕಷ್ಟು ದೊಡ್ಡ ಬೊಂಬೆಯಾದ್ದರಿಂದ ಬಟ್ಟೆಯ ಫ್ರಾಕ್ ತೊಟ್ಟಿತ್ತು. ಫ್ರಾಕ್‌ನಲ್ಲಿದ್ದ ಒಂದು ಸಣ್ಣ ತೂತನ್ನು ತನ್ನ ಬೆರಳಿನಿಂದ ಅರುಣ್ ದೊಡ್ಡದು ಮಾಡು ತ್ತಿದ್ದ. ಅದನ್ನು ನೋಡುತ್ತಲೇ ವಾಸ್ತವಿಕ ಪ್ರಪಂಚವನ್ನು ಮರೆತೆ.

ಅಂದು ಪಿ.ಯು.ಸಿ. ಯಲ್ಲಿದ್ದಾಗ ಲಾಜಿಕ್ ಲೆಕ್ಚರರ್ ಉಪನ್ಯಾಸ ಕೊಡುತ್ತಿದ್ದರು. ಇಂಟರೆಸ್ಟಿಂಗ್ ಸಬ್ಜೆಕ್ಟನ್ನು ಮತ್ತೂ ಸ್ವಾರಸ್ಯಕರಗೊ

ಳಿಸುತ್ತಿದ್ದರು ಅನುಭವಿ ಲೆಕ್ಚರರ್. ತದೇಕ ಚಿತ್ತಳಾಗಿ ಆಲಿಸುತ್ತಿದ್ದೆ. ಹಣದ ಪ್ರಭಾವದಿಂದಲೇ ಪ್ರತಿ ವರುಷವೂ ಪಾಸ್‌ಮಾರ್ಕ್ ಗಿಟ್ಟಿಸುತ್ತಿದ್ದ ಸ್ಮಿತ ಪಾಠಕ್ಕೆ ಗಮನ ಕೊಡಬೇಕಾದ ಅವಶ್ಯಕತೆಯಿರಲಿಲ್ಲ. ನನ್ನ ಬೆನ್ನಿನ ಮೇಲೆ ಏನೋ ಹರಿದಾಡಿದಂತಾಯಿತು. ಎಡಗೈನಿಂದ ಸವರಿಕೊಂಡೆ. ಏನೂ ಅನ್ನಿಸಲಿಲ್ಲ. ಮತ್ತೆ ಉಪನ್ಯಾಸದಲ್ಲಿ ಮಗ್ನಳಾದೆ, ಕ್ಲಾಸ್ ಮುಗಿಸಿ ಎದ್ದು ಸೆರಗನ್ನೆಳೆದುಕೊಂಡಾಗ ದಾವಣಿಯ ಸೆರಗು ಮುಕ್ಕಾಲು ಹರಿದಿತ್ತು. ಸ್ಮಿತ ಗಹಗಹಿಸಿ ನಗಲಾರಂಭಿಸಿದಳು. 'ಒಂದು ಗಂಟೆ ನಂಗೆ ಎಂಥಾ ಎಂಟರ್ ಟೇನ್‌ಮೆಂಟೂಂತ. ಪೆನ್ಸಿಲ್ ತುದಿಯಿಂದ ತೂತನ್ನು ದೊಡ್ಡದ್ ಮಾಡ್ತಾ ಮಾಡ್ತಾ ಉತ್ಸಾಹ ಜಾಸ್ತಿ ಆಗ್ತಾ ಇತ್ತು. ಇದು ಲಾಸ್ಟ್ ಪೀರಿಯಡ್ ಆಗದೆ ಇದ್ದಿದ್ದರೆ ಇನ್ನೂ ಮಜಾ ಇರ್ತಿತ್ತು. ಎಂದಳು. ಸಿಟ್ಟೂ ದುಃಖವೂ ಸುಮ್ಮಿಳಿತವಾಗಿ ವಿಚಿತ್ರ ಭಾವನೆ ಉಂಟಾಯಿತು. ಅಂದು ಹೇಗೆ ಮನೆ ಸೇರಿದೆನೋ ದೇವರೇ ಬಲ್ಲ.

ಊಟ ಮುಗಿಸಿ ಬಂದ ಅರುಣ್ ನನ್ನ ತೆಕ್ಕೆಗೆ ಬಿದ್ದ. ಅವನನ್ನು ಮಲಗಿಸಿ ನಾನೂ ಪಕ್ಕದಲ್ಲಿ ಉರುಳಿದೆ. 'ಕೆಲಸವಿಲ್ಲದ ಮಿದುಳು ದೆವ್ವದ ಪ್ರಪಂಚ' ಎನ್ನುವಂತೆ. ಕಾರ್ಯರಹಿತವಾದ ನನ್ನ ಮಿದುಳು ಉಪಯೋಗಕ್ಕೆ ಬಾರದ ಹಿಂದಿನ ನೆನಪನ್ನು ಮೆಲುಕು ಹಾಕಿತು.

ನಮ್ಮ ತಂದೆ-ತಾಯಿಗೆ ನಾವಿಬ್ಬರೇ ಮಕ್ಕಳು. ನಾನು. ರಾಜೀವ್. ನಮ್ಮ ಸಂಸಾರ ಚಿಕ್ಕದಾಗಿ ಚೊಕ್ಕವಾಗಿದ್ದರೂ, ಯಾವುದೋ ಪ್ರೈವೇಟ್ ಫರ್ಮ್‌ನಲ್ಲಿ ಬಡ ಗುಮಾಸ್ತರಾಗಿದ್ದ ನಮ್ಮ ತಂದೆಗೆ ಬರುತ್ತಿದ್ದ ಅತ್ಯಲ್ಪ ವೇತನದಿಂದ ನಮ್ಮಿಬ್ಬರನ್ನು ಸಾಕಿ ಸಲಹುವುದೇ ಅತ್ಯಧಿಕವಾಯಿತು. ಎಲ್ಲೂ ಹಿಂದುಳಿಯದೆ ಮುಂದುವರೆದ ನನ್ನ ಅಭ್ಯಾಸ ಸ್ಪೆಷಲ್ ಗ್ರೂಪ್‌ನ ಕನ್ಸಿಷನ್‌ನಿಂದಾಗಿ ಸರಾಗವಾಗಿ ಸಾಗುತ್ತಿತ್ತು, ಬಡತನದಲ್ಲಿದ್ದರೂ ಸ್ನೇಹಪರತೆಯಿಂದ ವರ್ತಿಸುತ್ತಿದ್ದ ನನಗೆ ಸೌಂದರ್ಯ ಬಳುವಳಿಯಾಗಿ ಬಂದಿತ್ತು. ಬಾಹ್ಯ ಅಲಂಕಾರಗಳೊಂದಕ್ಕೂ ಮರೆಹೋಗದ ನಾನು ಅತ್ಯಂತ ಸುಂದರಳಾಗಿ ಕಾಣುತ್ತಿದ್ದೆ. ಮೇಲಾಗಿ ಬಡತನದಲ್ಲಿ ಬೇಯುತ್ತಿದ್ದ ನಾನು, ದುಡಿ

ಮೆಯೇ ಜೀವವಾಗಿ ನಂಬಿದ್ದ ನಮ್ಮ ತಂದೆಗೆ ಆದಷ್ಟೂ ಬೇಗ ನೆರವಾಗ ಬೇಕೆಂದು ಕಷ್ಟಪಟ್ಟು ಅಭ್ಯಸಿಸಿ ಹೆಚ್ಚಿನ ಅಂಕಗಳನ್ನು ಪಡೆಯುತ್ತಿದ್ದೆ. ಈ ಕಾರಣಗಳಿಂದಲೇ ನಾನು ಸ್ಮಿತಳ ಕೋಪಕ್ಕೆ ಗುರಿಯಾದೆ.

ಸ್ಮಿತ ಪುಣ್ಯವಂತರ ಮನೆಯಲ್ಲಿ ಜನ್ಮವೆತ್ತಿದ ಹೆಣ್ಣು. ಮೇಲಾಗಿ ಮಾತಾ-ಪಿತೃಗಳ ಏಕೈಕ ಸಂತಾನ. ಹೀಗಾಗಿ ಅವಳ ಅನಿಸಿಕೆಗಳು ಮರು ಕ್ಷಣದಲ್ಲೇ ಪೂರ್ಣವಾಗುತ್ತಿದ್ದವು. ನನಗೆ ತಿಳಿದಂತೆ ಒಂದು ದಿನ ಅವಳು ಕಾಲೇಜಿಗೆ ನಡೆದು ಬಂದದ್ದಿಲ್ಲ. ಬಿಡುವಿನ ವೇಳೆಯಲ್ಲಿ ಮನೆಯಿಂದ ಕ್ಯಾರಿ ಯರ್ ಬರುತ್ತಿತ್ತು. ಪರ್ಸಿನಲ್ಲಿದ್ದ ಪಾಕೆಟ್‌ಮನಿ ಯಾವಾಗಲೂ ಕ್ಯಾಂಟೀ ನಿಗೆ ಸಂದಾಯವಾಗುತ್ತಿತ್ತು. ಮನೆಯ ಊಟ ತಿಂದದ್ದೇ ಅಪರೂಪ. ಅಂದೊಮ್ಮೆ ಆವಳ ಕ್ಯಾರಿಯರ್ ಬಂತು. ಅವಳ ಹಿಂಬದಿಯಲ್ಲಿದ್ದ ಮರ ದಡಿ ನನ್ನ ಬೇಸರವನ್ನು ಕಳೆಯಲಿಕ್ಕಾಗಿ ಹಾಗೂ ರಣ ಹಸಿವೆಯನ್ನು ಹೋಗಲಾಡಿಸಲು ಯಾವುದೋ ಕಾದಂಬರಿ ಓದುತ್ತಿದ್ದೆ. ನನ್ನ ಹೊರೆತು ಮಿಕ್ಕವರೆಲ್ಲರೂ ಕ್ಯಾರಿಯರ್ ತಂದ್ದಿದ್ದರು, ನನ್ನ ಬಳಿ ಕ್ಯಾರಿಯರ್ ಇರ ಲಿಲ್ಲ. ಅದಕ್ಕೂ ಮುಂಚೆ ಅದರಲ್ಲಿ ತುಂಬುವ ಅನ್ನ! ಬೆಳಿಗ್ಗೆ ಒಮ್ಮೆ ಕಾಲೇಜಿಗೆ ಹೊರಡುವ ಮುನ್ನ ಕಂಡರೆ, ಇನ್ನು ರಾತ್ರಿಯೇ ಕಾಣುವುದು. ಎಷ್ಟೋ ವೇಳೆ ಅಮ್ಮ ರೇಷನ್ ಸ್ಟೋರ್ಸ್‌ನಿಂದ ಕಾಡಿಬೇಡಿ ಅರ್ಧ ಕೆ.ಜಿ. ಅಕ್ಕಿ ತಂದದ್ದೂ ಉಂಟು. ರಾಜೀವ ಮೊದಮೊದಲು ಊಟಕ್ಕಾಗಿ ಹಟ ಮಾಡುತ್ತಿದ್ದ. ಬುದ್ದಿ ತಿಳಿದ ಮೇಲೆ ಹೊಟ್ಟೆ ತುಂಬದಿದ್ದರೂ 'ಅಬ್ಬಾ! ಹೊಟ್ಟೆಭಾರ" ಎಂದು ಹೊಟ್ಟೆ ಮೇಲೆ ಕೈಯಾಡಿಸುತ್ತಿದ್ದ. ಅವನ ಕಿರಿವ ಯಸ್ಸಿನ ಇಳಿವಯಸ್ಸಿನ ಬುದ್ಧಿ ಕಂಡು ಸಂತಸವಾದರೂ, ಕರಳು ಚುರುಕ್ ಎನ್ನುತ್ತಿತ್ತು. ಅಮ್ಮ ನಮ್ಮಿಬ್ಬರ ಕಣ್ಣು ತಪ್ಪಿಸಿ ಕಣ್ಣೀರಿಡುತ್ತಿದ್ದಳು. ಇನ್ನು ಅಮ್ಮನ ಹೊಟ್ಟೆ ಎಂದು ತುಂಬಿತ್ತೋ? ಅಪ್ಪ ಯಾವಾಗಲೂ ನಿರ್ಲಿಪ್ತರಾ ಗಿರುತ್ತಿದ್ದರು, ಅವರ ಹೃದಯದಲ್ಲಿ ಯಾವ ಯಾವ ಭಾವ ತರಂಗಗಳೇಳು ತ್ತಿದ್ದವೋ? ಎಂದೂ ಹೊರಗೆ ತೋರ್ಪಡಿಸುತ್ತಿರಲಿಲ್ಲ. ನನ್ನ ಗೆಳತಿಯರು ಎಷ್ಟು ಬಲಾತ್ಕರಿಸಿದರೂ ನನ್ನ ರಕ್ತಕ್ಕಂಟಿದ ಸ್ವಾಭಿಮಾನ ಅವರ ಭಾಗದ ಊಟವನ್ನು ಕಸಿದುಕೊಳ್ಳಲು ಬಿಡುತ್ತಿರಲಿಲ್ಲ. ಗೆಳತಿಯರೆಲ್ಲರೂ ಬಗೆ

ಬಗೆಯ ಪದಾರ್ಥವನ್ನು ಹಂಚಿಕೊಂಡು ತಿನ್ನುತ್ತಿದ್ದರು. ಸ್ಮಿತಳ ಕ್ಯಾರಿಯರ್‌ನಲ್ಲಿ ಏನಿತ್ತೊ? ತೆರೆದಾಕ್ಷಣ ಘಂ ಎನ್ನುತ್ತಿತ್ತು. ಅವಳು ತನ್ನದರಲ್ಲಿ ಯಾರಿಗೂ ಕೊಡುತ್ತಿರಲಿಲ್ಲ. ಹಾಗೂ ಯಾರದ್ದೂ ತಿನ್ನುತ್ತಿರಲಿಲ್ಲ. ಎರಡು ಸ್ಪೂರ್ಣ ಬಾಯಲ್ಲಿಟ್ಟಳು. ಅದರ ಪರಿಮಳವನ್ನು ಸ್ವಾದಿಸುತ್ತಲೇ ನಾನು ತೃಪ್ತಿ ಪಟ್ಟೆ. ಅಧನ್ನುಂಡು ಅವಳ ತೃಪ್ತಿ ಇನ್ನೆಷ್ಟಿರಬಹುದೋ ಎಂದು ಎಣಿಸುತ್ತಿರುವಲ್ಲಿ ಚಜ್ ಎಂಬ ಸದ್ದಾಯಿತು ದೂರದಲ್ಲೆಲ್ಲೋ ಇದ್ದ ನಾಯನ್ನು ಕರೆದು ಅದರ ಮುಂದೆ ತನ್ನ ಕ್ಯಾರಿಯರ್ ಅನ್ನು ಪೂರ್ಣ ತಲೆಕೆಳಗುಮಾಡಿದಳು. 'ಛೀ ಯಾಕೇ' ಎಂಬ ಉದ್ಗಾರವೆತ್ತಿದರು ಗೆಳತಿಯರು. ರುಚಿಕರವಾದ, ಸುವಾಸನಾಯುಕ್ತ ಅಡಿಗೆಯನ್ನು ತಿನ್ನುವ ಯೋಗ್ಯತೆಯೂ ನಿನ್ನಲ್ಲಿಲ್ಲ ಎಂಬಂತಿತ್ತು ಅವರುಗಳ ಧ್ವನಿ. ಆ ಅಡಿಗೆ ಏನಿರಬಹುದೆಂದು ದೃಷ್ಟಿಸಿ ನೋಡಿದೆ. ಅವರೆಕಾಳು, ವಿಧವಿಧ ತರಕಾರಿ, ತುಪ್ಪದಲ್ಲಿ ಕರೆದ ಕಡಲೇಕಾಯಿ ಬೀಜವನ್ನು ಹಾಕಿ ತಯಾರಿಸಿದ ಬಿಸಿಬೇಳೆಭಾತ್. ಬೆಣ್ಣೆ ಕಾಸಿದ ತುಪ್ಪದ ವಾಸನೆ ಘಂ ಎನ್ನುತ್ತಿತ್ತು. ಅದನ್ನು ನೋಡುತ್ತಿದ್ದಂತೆಯೇ ಬಾಯಲ್ಲಿ ನೀರೂರಿತು. ನನ್ನ ಸ್ಥಿತಿಗೆ ನಾಚಿ ಕತ್ತನ್ನು ತಿರುವಿದೆ. ಅಲಂಕಾರದಿಂದ ತುಂಬಿ ತುಳುಕುತ್ತಿರುವ ಹೊಟ್ಟೆಗೆ ಇದೇಕೋ ಎನಿಸಿತು.

'ಕಾಲೇಜಿನ ಕೋಗಿಲೆ' ಎಂದು ಹೆಸರು ಪಡೆದಿದ್ದ ನನ್ನ ದನಿ ಎಲ್ಲರಿಗೂ ಪ್ರಿಯವಾಗಿದ್ದರೂ ಸ್ಮಿತಳಿಗೆ ಅಪ್ರಿಯವಾಗಿತ್ತು. ಪ್ರತಿ ವರ್ಷವೂ ಇಂಟರ್ ಕ್ಲಾಸ್ ಕಾಂಪಿಟೇಶರ್ನನಲ್ಲಿ ಭಾವಗೀತೆಯ ವಿಭಾಗದಲ್ಲಿ ಬಹುಮಾನ ನನಗೆ ಕಟ್ಟಿಟ್ಟ ಬುತ್ತಿಯಾಗಿತ್ತು. ಆಗ ಫೈನಲ್ ಇಯರ್‌ನಲ್ಲಿದ್ದೆ. ಕಾಲೇಜ್ ಡೇ ಸಮೀಪಿಸುತ್ತಿತ್ತು. ಸ್ಪರ್ಧೆಗಳೆಲ್ಲವೂ ನಡೆಯಲು ಮೊದಲಾಯಿತು. ಭಾವಗೀತೆ ಸ್ಪರ್ದೆ ಮಾತ್ರ ಕಾಲೇಜ್‌ಡೇ ದಿನವೇ, ಅದೂ ಚೀಫ್‌ಗೆಸ್ಟ್ ಮುಂದೆಯೇ ನೆಡೆಯುತ್ತಿತ್ತು.. ವೇಳೆಯನ್ನು ಕಾಪಾಡಲಿಕ್ಕಾಗಿ ಸ್ಪರ್ಧಿಗಳೆಲ್ಲರನ್ನೂ ಮುಂದಿನ ಸಾಲಿನಲ್ಲಿ ಕೂಡಿಸಲಾಗಿತ್ತು. ಅರ್ಧ ಮೈಲಿಯವರೆಗೆ ಪೆಂಡಾಲ್ ನಿರ್ಮಿಸಲಾಗಿತ್ತು. ರಂಗಮಂಚವನ್ನು ವಿವಿಧ ಅಲಂಕಾರ ಸಾಮಗ್ರಿಗಳಿಂದಲೂ. ವಿವಿಧ ಬಣ್ಣದ ವಿದ್ಯುದ್ದೀಪಗಳಿಂದಲೂ

ಅಲಂಕರಿಸಲಾಗಿತ್ತು. ಎಳ್ಳು ಹಾಕಿದರೆ ಸಿಡಿಯದಷ್ಟು ಪೆಂಡಾಲ್ ತುಂಬಿತ್ತು ಸೂಜಿ ಕೆಳಗೆ ಬಿದ್ದರೂ ರದ್ದಾಗುವಷ್ಟು ನಿಶಬ್ದದಿಂದ ಕೂಡಿತ್ತು ಪೆಂಡಾಲ್. ಇಂಗ್ಲೀಷ್ ಲೆಕ್ಚರರ್ ಮಿಸಸ್ ಗೌಡ್ ಸ್ಪರ್ಧಿಗಳ ಹೆಸರುಗಳನ್ನು ಓದಿದರು. ಒಬ್ಬರ ನಂತರ ಒಬ್ಬರು ಹಾಡಲುಪಕ್ರಮಿಸಿದರು. ನನ್ನ ಸರದಿ ಬಂದಾಗ ವಿದ್ಯಾರ್ಥಿನಿಯರು ಉತ್ಸಾಹದಿಂದ ಚಪ್ಪಾಳೆ ತಟ್ಟಿದರು. ನನಗೆ ಬಹು ಪ್ರಿಯವಾದ, ಭಾವ ಭರಿತವಾದ 'ಬೇಸರಾಗಿದೆ ಮಾತು' ನಿಸಾರ್ ಅಹ್ಮದ್ ರವರ ಭಾವಗೀತೆಯನ್ನು ತನ್ಮಯಳಾಗಿ ಹಾಡಿದೆ. ಸಭಿಕರೆಲ್ಲರೂ ಮಂತ್ರ ಮುಗ್ಧರಂತೆ ಕುಳಿತಿದ್ದರು. ನನಗಂತೂ ಯಾವುದೋ ಹಿತವಾದ ಪ್ರಪಂಚ ದಲ್ಲಿ ತೇಲಾಡುತ್ತಿರುವಂತೆ ಭಾಸವಾಯಿತು. ಗೀತೆ ಮುಗಿಯುತ್ತಿದ್ದಂತೆಯೆ ಕಿವಿಗಡಚಿಕ್ಕುವಂತೆ ಚಪ್ಪಾಳೆಯ ಸುರಿಮಳೆಯಾಯಿತು. ಓನ್ಸ್‌ಮೋರ್ ಎಂಬ ಕೂಗು ಅವಿರತವಾಗಿ ಸಾಗಿತು. ಸ್ಮಿತಳ ಸರದಿಯೂಬಂತು. 'ಬಾಗಿಲೋಳು ಕೈಮುಗಿದು' ಕುವೆಂಪುರವರ ಕವನವನ್ನು, ಕವಿಯ ಹೆಸ ರನ್ನು ಸ್ಟೈಲಾಗಿ ಹೇಳಿ ಮಂದ್ರದಲ್ಲಿ ಪ್ರಾರಂಭಿಸಿದಳು. ಆ ಸ್ಥಾಯಿ ಬಹಳ ತಗ್ಗಾಯಿತೇನಿಸಿ ತಾರಕಕ್ಕೆ ಮುಟ್ಟಿದಳು. ಅದು ಬಹಳ ಹೆಚ್ಚಾಯಿ ತೆಂದು ಮಧ್ಯಮವೂ ಅಲ್ಲದ, ಮಂದ್ರವೂ ಅಲ್ಲದ ಸ್ಥಿತಿಯಲ್ಲಿ ಹಾಡಿದಳು. 'ಸರಸದಿಂದಲಿಯುತಿದೆ' ಆರಂಭವಾದಾಗ ಮುಂದಿನದು ಮರೆತುಹೋಯಿ ತೇನೋ. 'ಉಲಿಯುತಿದೆ, ಉಲಿಯುತಿದೆ' ಎಂದು, ಸ್ಕ್ರಾಚ್ ಆದ ರೆಕಾರ್ಡಿನಂತೆ ನಾಲ್ಕಾರು ಬಾರಿ ಅದನ್ನೇ ಪುನರುಚ್ಚರಿಸಿ ಮತ್ತೊಮ್ಮೆ ಮೊದಲಿನಿಂದ ಆರಂಭಿಸಿ ಯು.ಕೆ.ಜಿ. ಮಕ್ಕಳು ಇಂಗ್ಲೀಷ್ ಪದ್ಯವನ್ನು ಉರು ಹೊಡೆದು ಒಪ್ಪಿಸುವಂತೆ, ಭಾವ ಪೂರ್ಣ ಭಾವಗೀತೆಯನ್ನು ಭಾವರಹಿತವಾಗಿ ಹಾಡಿ ಮುಗಿಸಿದಳು. ಈ ಬಾರಿ ಚಪ್ಪಾಳೆ ರಂಗಮಂಚದ ಮೇಲೆ, ಹಾಗೂ ಮುಂದಿದ್ದ ಕಾಲೇಜು ಸಿಬ್ಬಂದಿಯಿಂದ ಮಾತ್ರ ಕೇಳಿ ಬಂತು. ತೀರ್ಪುಗಾರರಾಗಿದ್ದ ಉಪನ್ಯಾಸಕರೂ ಸಹ ತಮ್ಮ 'ಸ್ಥಾನ ಗೌರ' ವವನ್ನು ಮರೆತು ಚಪ್ಪಾಳೆಯಿಕ್ಕಿದರು. ನನಗೆ ಅವರ ವರ್ತನೆ ವಿಚಿತ್ರ ವಾಗಿ ತೋರಿತು. ಸ್ಪರ್ಧೆ ಮುಗಿಯುತ್ತಿದ್ದಂತೆಯೇ 'ಪ್ರೀತಿ ಗಾಟ್ ದಿ ಫಸ್ಟ್ ಪ್ಲೇಸ್' ಎಂಬ ಉದ್ಗಾರ ಶ್ರೋತೃಗಳೆಡೆಯಿಂದ ಕೇಳಿಬಂತು. ಅಂದು ನನ್ನ ಆನಂದ ಹೇಳತೀರದು. ನನ್ನ ಸಾಧನೆ ಸಾರ್ಥಕವಾಯಿತೆಂದು

ತೃಪ್ತಿಪಟ್ಟೆ. ಎಂದೂ ಬಾರದಿದ್ದ ಅಪ್ಪ-ಅಮ್ಮನನ್ನು ಕಾಲೇಜಿಗೆ ಬಲವಂತ ವಾಗಿ ಕರೆತಂದದ್ದು ಒಳ್ಳೆಯದಾಯಿತೆನಿಸಿ ಸರಾಗವಾಗಿ ಉಸಿರು ಹಾಕಿದೆ ತೀರ್ಪನ್ನು ತರುವವರೆಗೆ ಎಲ್ಲರ ಬಾಯಲ್ಲೂ 'ಪ್ರೀತಿ' ಎಂಬ ಶಬ್ದ ನಿರರ್ಗಳ ವಾಗಿ ಸಾಗಿತ್ತು. ತೀರ್ಪುಗಾರರು ತೀರ್ಪನ್ನು ಪ್ರಿನ್ಸಿಪಾಲ್ ಮುಂದಿಟ್ಟು ಕೆಳಗೆ ಬಂದರು. ಪ್ರಿನ್ಸಿಪಾಲರು ಎದ್ದು ನಿಂತು 'ಐ ಆಮ್ ವೆರಿ ಗ್ಲಾಡ್ ಟು ಅನೌನ್ಸ್ ದಟ್ ಟುಡೇಸ್ ಚೀಫ್ ಗೆಸ್ಟ್ಸ್ ಡಾಟರ್ ಕುಮಾರಿ ಸ್ಮಿತ ಗಾಟ್ ದಿ ಫಸ್ಟ್ ಪ್ಲೇಸ್' ಎಂದಾಗ ಉಸಿರು ಕಟ್ಟಿದಂತಾಯಿತು. ಪ್ರೇಕ್ಷ ರಲ್ಲಿ ಪಿಸಪಿಸ ಆರಂಭವಾಯಿತು. ತೀರ್ಪನ್ನು ಎಲ್ಲರೂ ಮನಸಾರೆ ವಿರೋ ಧಿಸಿದರೂ ಬಾಯ್ದೆರೆದು ಆಡುವಂತಿಲ್ಲವಾಯಿತು. ಕಾರಣ-ರಂಗಮಂಚದ ಮೇಲೆ ಪ್ರತಿಷ್ಠಿತನಾಗಿದ್ದ ಮುಖ್ಯ ಅತಿಥಿ ಸಮಾಜದ ಅಗ್ರಗಣ್ಯ ವ್ಯಕ್ತಿ ಆಡಳಿತ ಪಕ್ಷದ M.L.A. ತೀರ್ಪನ್ನು ಒಪ್ಪಲಾರದೆ, ಪ್ರತಿಭಟಿಸಲೂ ಆಗದೆ ಮೂಕ ಪಶುವಿನಂತೆ ಕುಳಿತಿದ್ದರು ಪ್ರಜಾಪ್ರಭುತ್ವದ ಪ್ರಜೆಗಳು. ಎರಡನೇ ಬಹುಮಾನ ನನಗೆ ಸಿಕ್ಕಿತು. ಅಂದಿನಿಂದ ಸ್ಮಿತಳ ತಲೆಗೆ ಮತ್ತೂ ಮತ್ತೇರಿತು.

ಸಮರ್ಥ ನನ್ನ ಸೋದರ ಮಾವನ ಮಗ. ನನ್ನ ಸೋದರ ಮಾವ ವಿಧಾನಸೌಧದಲ್ಲೇ ಕೆಲಸದಲ್ಲಿದ್ದರು. ಸಮರ್ಥ ಬುದ್ಧಿವಂತ, ರೂಪವಂತ. ಮೇಲಾಗಿ ಪುಣ್ಯವಂತ. ಮಮತೆಯಮೂರ್ತಿ. ಚಿಕ್ಕಂದಿ ನಿಂದಲೂ ನನ್ನ ಕಂಡರೆ ಅದೇನೋ ಅಕ್ಕರೆ ಅವನಿಗೆ. ಅವರಮ್ಮನ ಗುಣ ವನ್ನೇ ಎರಕ ಹೊಯ್ದಂತಿದ್ದ ಅವನನ್ನು ಕಂಡರೆ ನನಗೂ ಅಳಿಸಲಾಗದ ಅಕ್ಕರೆ. ನನ್ನ ಫೈನಲ್ ಮುಗಿದಾಗ ಅವನದೂ ಬಿ. ಇ. ಮುಗಿಯಿತು. ಬಾಲ್ಯದಿಂದ ಯೌವ್ವನಕೆ ಕಾಲಿಡುತ್ತಿದ್ದಂತೆಯೇ ನನ್ನ ರೂಪ ವರ್ಧಿಸಲಾ ರಂಭಿಸಿತು. ನನ್ನ ಪಕ್ಷವಾದ ರೂಪ ಬಾಲ್ಯದ ಮುಗ್ಧಮಮತೆಯಿಂದ ಪ್ರೀತಿಯಾಗಿ ಮಾರ್ಪಟ್ಟು ಸಮರ್ಥನ ಆಕರ್ಷಣೆಗೊಳಗಾಯಿತು. ಸಮ ರ್ಥನ ಆಗಮನ ದಿನ ದಿನಕ್ಕೆ ಹೆಚ್ಚಾಯಿತು. ನಮ್ಮಲ್ಲಿ ಪ್ರೀತಿಯು ಮೊಳ ಕೆಯೊಡೆಯುತ್ತಿದೆಯೆಂದು ಮನಗಂಡು ಪ್ರೋತ್ಸಾಹಿಸುವ ಆಸೆಯಿದ್ದರೂ ಮಾವನ ಗುಣವನ್ನು ಅರಿತಿದ್ದ ಅಮ್ಮ ಅಸಹಾಯಕಳಾದಳು. ಮಾವ

ನೊಬ್ಬ ಧನ ಪಿಶಾಚಿಯಾಗಿದ್ದ. ವರಮಾನ ಬರುವ ಎಂಥ ನೀಚ ಕೆಲಸ ವನ್ನು ಮಾಡಲೂ ಹಿಂಜರಿಯುತ್ತಿರಲಿಲ್ಲ. ದುಡಿಯದೇ ತಿನ್ನುವ ದುರ್ಬ ಲರನ್ನೂ ಅವರು ರೇಗುತ್ತಿದ್ದರು. ಮಾವನ ಸೋದರತ್ತೆ ಒಬ್ಬ ಬಾಲ ವಿಧವೆ. ಇಳಿವಯಸ್ಸಿನಲ್ಲಿ ಅವರಲ್ಲಿಯೇ ತಂಗಿದ್ದರು. ಅವರನ್ನು ಪೋಷಿ ಸಲು ಮಾವನಿಗೆ ಸಾಕಷ್ಟು ಶಕ್ತಿಯಿದ್ದರೂ ಅವರಿವರ ಮುಂದೆ ಅಕ್ಕನನ್ನು ಬಹುವಾಗಿ ಹೀಯಾಳಿಸುತ್ತಿದ್ದರು. 'ಒಂದು ಪೈಸೆ ದುಡಿಯೋಲ್ಲಾ. ಬಂಡಿ ಬಂಡಿ ಅನ್ನ ತಿಂತಾಳೆ. ದಾರೀಲಿ ಯಾರ್‍ಯಾರೋ ಆಕ್ಸಿಡೆಂಟಾಗಿ ಸಾಯ್ತಾರೆ. ಇವಳ ಹತ್ತಿರ ಸಾವೇ ಬರೋಲ್ವೆ!' ಎನ್ನುತ್ತಿದ್ದರು. ತನ್ನ ಅಸಹಾಯಕ ಸ್ಥಿತಿಯಲ್ಲಿ ಹೆಣ್ಣು ಹೆಂಗಸು ಎಲ್ಲಿ ದುಡಿದು ಸಂಪಾದಿ ಸುತ್ತಾಳೆ ಎಂಬ ತಿಳುವಳಿಕೆಯೂ ಅವರಲ್ಲಿದ್ದಂತಿರಲಿಲ್ಲ. ಇಂತಹ ಧನ ದಾಹಿಯ ಒಬ್ಬನೇ ಮಗ ಸಮರ್ಥ. ಒಮ್ಮೆ ನನ್ನಮ್ಮನನ್ನು ಬಲಾತ್ಕ ರಿಸಿ ಒಪ್ಪಿಸಿ ನನ್ನನ್ನು ಹೊರಗೆ ಸುತ್ತಾಡಲು ಕರೆದೊಯ್ದ. ಸ್ಮಿತಳ ಬಂಗಲೆ ಯನ್ನು ಹಾದು ಹೋಗಬೇಕಾಯಿತು. ಬಾಲ್ಕನಿಯ ಈಸೀ ಚೇರಿನ ಮೇಲೆ ಕುಳಿತು ಟ್ರಾನ್ಸಿಸ್ಟರ್‌ನಲ್ಲಿ ಬರುತ್ತಿದ್ದ ಹಿಂದಿ ಸಿನಿಮಾ ಗೀತೆಯೊಡನೆ ಧ್ವನಿಗೂಡಿಸುತ್ತಿದ್ದಳು ಸ್ಮಿತ, ಮೇಲಿನಿಂದ ನಮ್ಮಿಬ್ಬರನ್ನು ದೂರದಿಂದಲೇ ನೋಡಿ ಏನೆನ್ನಿಸಿತೋ ಕೆಳಗಿಳಿದು ಬಂದಳು. ನಿರ್ವಾಹವಿಲ್ಲದೇ ಸಾಮರ್ಥ್ಯ ನನ್ನು ಅವಳಿಗೆ ಪರಿಚಯಿಸಿದೆ. ಸುಂದರ ಯುವಕನಾದ ಸಮರ್ಥನನ್ನು ಅಡಿಯಿಂದ ಮುಡಿಯವರೆಗೆ ಆಸೆಯಿಂದ ಮೆಚ್ಚುಗೆಯ ದೃಷ್ಟಿಯಲ್ಲಿ ನೋಡಿ, ನನ್ನೆಡೆಗೆ ಅಸೂಯೆಯ ದೃಷ್ಟಿ ಹರಿಸಿದಳು. ನನಗೆ ಮೆಚ್ಚುಗೆ ಎನಿಸಿತು. ಕೆಲಸವಾಗುತ್ತಲೇ ನನ್ನ ಕೈ ಹಿಡಿಯುವುದಾಗಿ ಸಮರ್ಥ ಅವಳಿಗೆ ತಿಳಿಸಿದ. ನಾಚಿಕೆಯ ಮುದ್ದೆಯಾಗಿ ಸಮರ್ಥನ ಮಿರುಗುವ ಕಪ್ಪು ಬೂಟನ್ನೇ ಒಂದರೆನಿಮಿಷ ದಿಟ್ಟಿಸಿದೆ. ತಲೆ ಎತ್ತಿದಾಗ ಸ್ಮಿತ ಅಲ್ಲಿರಲಿಲ್ಲ. ತನ್ನ ಮಾತನ್ನು ಅರ್ಧಕ್ಕೇ ನಿಲ್ಲಿಸಿ ಒಳಗೆ ಓಡಿದಳು.

ಇದಾದ ಒಂದು ತಿಂಗಳು ಸಮರ್ಥನ ಪತ್ತೆಯೇ ಇಲ್ಲ. ತಿಂಗಳ ನಂತರ ಸಮರ್ಥ ತನಗೆ ಯಾವುದೋ ಫ್ಯಾಕ್ಟರಿಯಲ್ಲಿ ಕೆಲಸವಾಗಿರುವುದಾಗಿ ಹೇಳಿ ನಾನು ಶಾರ್ಟ್ ಹ್ಯಾಂಡ್ ಕ್ಲಾಸಿಗೆ ಹೋಗಿದ್ದಾಗ ಬಂದು ಸಿಹಿ

ಕೊಟ್ಟು ಒಂದು ನಿಮಿಷವೂ ನಿಲ್ಲದೆ ಹೊರಟು ಹೋಗಿದ್ದ. ಅವನಿಗೆ ಕೆಲಸವಾದದ್ದು ಖುಷಿಯಾಯಿತಾದರೂ ನನಗೆ ಮುಖ ತೋರಿಸದೇ ಹೋದುದು ಬಹಳ ನಿರಾಸೆಯಾಯಿತು. ಅಂದು ರಾತ್ರಿ ನನೆಗೆ ಊಟವೂ ಬೇಡವಾಯಿತು. ನನ್ನ ಮನವಲ್ಲಿ ನಡೆಯುತ್ತಿದ್ದ ತುಮುಲವನ್ನು ಪೂರ್ಣ ವಾಗಿ ಅರ್ಥಮಾಡಿಕೊಂಡ ನನ್ನಮ್ಮ, ತಾನೂ ಸಂಕಟದಲ್ಲಿ ಬೇಯುತ್ತಾ ಉಪವಾಸ ಮಲಗಿದಳು. ಅಪ್ಪನಿಗೆ ಇದ್ಯಾವುದರ ಪರಿಣಾಮವೂ ಆದಂತೆ ಕಾಣಲಿಲ್ಲ.

ಸೀನಿಯರ್ ಶಾರ್ಟ್‌ಹ್ಯಾಂಡ್ ಹಾಗೂ ಸೀನಿಯರ್ ಟೈಪಿಂಗ್‌ನಲ್ಲಿ ಎರಡು ಹಾಗೂ ಮೂರನೇ ರ್‍ಯಾಂಕ್ ಗಿಟ್ಟಿಸಿದೆ, ಮರುದಿನದಿಂದಲೇ ಎಲ್ಲ ಸ್ಥಳಗಳಿಗೂ ಅರ್ಜಿಯನ್ನು ಗುಜರಾಯಿಸಲಾರಂಭಿಸಿದೆ. ಮೆರಿಟ್ ಇತ್ತಾದ್ದರಿಂದ ಇದೇ ಆಫೀಸಿನಲ್ಲಿಷ್ಟೆನೋ ಕೆಲ್ಸಸಿಕ್ಕಿತು. ಮೊದಲಿನಿಂದಲೂ ಕಷ್ಟ ಸಹಿಷ್ಣುವಾದ ನಾನು ಕಷ್ಟಪಟ್ಟು ಆಫೀಸಿನ ಉನ್ನತಿಗಾಗಿ ನಿಷ್ಠೆಯಿಂದ ದುಡಿದೆ. ಬಾಸ್ ನಿಷ್ಠಾವಂತ ಗಂಭೀರ ಯುವಕ. ಯಾವ ಕೆಲಸಗಾರ ರನ್ನೂ ಹೆಚ್ಚಾಗಿ ಹಚ್ಚಿಕೊಳ್ಳುತ್ತಿರಲಿಲ್ಲ, ಕೆಲಸಗಾರರ ಕರ್ತವ್ಯ ನಿಷ್ಠೆ ಯನ್ನು ಮೆಚ್ಚುವ ಹಿರಿತನ ಅವರಲ್ಲಿತ್ತು. ಎಂದೂ ಸೋಮಾರಿಯಾಗಿ ಕುಳಿತಿರುತ್ತಿರಲಿಲ್ಲ. ಯಾವಾಗಲೂ ಏನಾದರೂ ಕೆಲಸ ಹಚ್ಚಿಕೊಂಡು ಕೆಲಸಗಾರರ ಸಂಗಡ ದುಡಿಯುತ್ತಿದ್ದರು. ಇದರಿಂದ ಅವರ ಹಿರಿಮೆ ಮತ್ತೂ ಹೆಚ್ಚಿತು. ಯಾರನ್ನು ಮನ ನೋಯುವಂತೆ ಗದರುತ್ತಿರಲಿಲ್ಲ. ಉಪಾಯವಾಗಿ ಸೋಮಾರಿಯನ್ನೂ 'ಬಿಸಿಬೀ'ಯಾಗಿ ಪರಿವರ್ತಿಸುತ್ತಿದ್ದರು. ಹಣವಂತ ಮಧಾಂಧ ಯುವಕರಂತೆ ಎಂದೂ ವರ್ತಿಸುತ್ತಿರಲಿಲ್ಲ, ಬಡವರಿಗೆ ಧಾರಾಳವಾಗಿ ನೆರವಾಗುತ್ತಿದ್ದರು. ಈ ಕಾರಣದಿಂದ ಯುವಕ ರಾದರೂ ಅವರ ಮುಖದಲ್ಲಿ ಹಿರಿತನ ಎದ್ದು ಕಾಣುತ್ತಿತ್ತು. ಕೆಲಸವಿಲ್ಲದೆ ಆಕಸ್ಮಾತ್ ಒಂದು ನಿಮಿಷ ಕುಳಿತರೂ ಏನೋ ಗಾಢ ಯೋಚನೆಯಲ್ಲಿ ಮುಳುಗುತ್ತಿದ್ದರು. ಅವರ ನೋವಿನ ಆಳವನ್ನು ತಿಳಿಯಲು ಸಾಧ್ಯವಾ ಗುತ್ತಿರಲಿಲ್ಲ. ಸಿಬ್ಬಂದಿವರ್ಗದಲ್ಲೆಲ್ಲಾ ಅತಿ ನಿಷ್ಠೆಯಿಂದ ನನ್ನ ಆರೋಗ್ಯ ವನ್ನೂ ಒಮ್ಮೊಮ್ಮೆ ಲೆಕ್ಕಿಸದೆ ದುಡಿಯುತ್ತಿದ್ದ ನನ್ನ ಮೇಲೆ ಅವರಿಗೆ ಅತ್ಯಂತ

ಅಭಿಮಾನ. ದುಡಿಮೆಯ ಬಗ್ಗೆ ಮಾತಾಡುವಾಗ ನನ್ನನ್ನೇ ಉದಾಹರಿಸು ತ್ತಿದ್ದರು. ನಮ್ಮಿಬ್ಬರ ನಡವಳಿಕೆಯನ್ನು ಎಲ್ಲರೂ ಚೆನ್ನಾಗಿ ಅರ್ಥಮಾಡಿ ಕೊಂಡಿದ್ದರಾದ್ದರಿಂದ, ಒಬ್ಬರಾದರೂ ನಮ್ಮ ಬಗ್ಗೆ ಚಕಾರವೆತ್ತುತ್ತಿರಲಿಲ್ಲ. ತಿಳಿಯದ್ದನ್ನು ಎಲ್ಲರೂ ನಿಸ್ಸಂಕೋಚವಾಗಿ ನನ್ನಿಂದ ಕೇಳಿ ತಿಳಿಯುತ್ತಿದ್ದರು. ನನ್ನ ಬಗ್ಗೆ ಎಲ್ಲರಿಗೂ ತಿಳಿಸಲಾಗದ ಅಭಿಮಾನ. ಭರಿಸಲಾಗದ ಮಮತೆ. ಸಾಕಷ್ಟು ಸಂಬಳವೂ ನನ್ನ ಕೈ ಸೇರುತ್ತಿತ್ತು. ನಮ್ಮ ಆರ್ಥಿಕಸ್ಥಿತಿ ಬಹು ಮಟ್ಟಿಗೆ ಸುಧಾರಿಸಿತ್ತು. ಇಲ್ಲಿ ನನಗೆ ಸಾಕಷ್ಟು ಶಾಂತಿ–ಸಮಾಧಾನಗಳು ದೊರಕುತ್ತಿದ್ದುದರಿಂದ ಆಫೀಸನ್ನು ಹೆಚ್ಚಾಗಿ ಪ್ರೀತಿಸಲಾರಂಭಿಸಿದೆ. ಈ ದಿನಗಳಲ್ಲೇ ನಾನು ಪ್ರೈವೇಟ್ ಸೆಕ್ರೆಟರಿ ಕೋರ್ಸನ್ನು ಮುಗಿಸಿದೆ. ಬಾಸ್‌ನ ಪಿ. ಎ. ಯಾವುದೋ ಬಿಸಿನೆಸ್ ಸ್ಟಾರ್ಟ್ ಮಾಡಿದಾಗ ಈ ಕೆಲಸಕ್ಕೆ ರಾಜೀ ನಾಮೆ ಇತ್ತರು. ತೆರವಾದ ಜಾಗಕ್ಕೆ ನಾನೂ ಅರ್ಜಿ ಹಾಕಿದೆ. ನನ್ನ ಕರ್ತವ್ಯ ನಿಷ್ಠೆಯನ್ನೂ ನಡವಳಿಕೆಯನ್ನೂ ಮೆಚ್ಚಿಕೊಂಡಿದ್ದ ಬಾಸ್ ನನ್ನನೇ ಅವರ ಪಿ. ಎ. ಆಗಿ ಆರಿಸಿದರು.

ಇತ್ತೀಚೆಗೆ ಸಮರ್ಥ್‌ನ ಸುಳಿವೇ ಇರಲಿಲ್ಲ. ನೂತನ ವಾತಾವರ ಣಕ್ಕೆ ಸಾಕಷ್ಟು ಹೊಂದಿಕೊಂಡು ಮನಸ್ಸು ಹಳೆಯದೆಲ್ಲವನ್ನೂ ಸಾಕಷ್ಟು ಮರೆತಿತ್ತು. ನನ್ನ ಮೇಲೆ ಹೆಚ್ಚಾದ ಜವಾಬ್ದಾರಿ ಬಿದ್ದ ಕಾರಣ ಹೆಚ್ಚು ಕಾಲ ಹೆಚ್ಚು ನಿಷ್ಠೆಯಿಂದ ಆಫೀಸಿನಲ್ಲಿ ದುಡಿಯಲಾರಂಭಿಸಿದೆ. ಆ ವರ್ಷ ಎಲ್ಲ ಕೆಲಸಗಾರರ ಅದರಲ್ಲೂ ನನ್ನ ಅತಿಶಯವಾದ ಕಾರ್ಯತತ್ಪರತೆಯಿಂದ ಒಂದಕ್ಕೆ ಮೂರರಷ್ಟು ಲಾಭ ಬಂತು. ಬಂದ ಲಾಭದಿಂದ ಆನಂದ ಪಟ್ಟ ಬಾಸ್ ಎಲ್ಲರಿಗೂ ಆ ವರ್ಷ ಹೆಚ್ಚು ಬೋನಸ್ ದಯಪಾಲಿಸಿದರು. ಅವರ ಮುಖದಲ್ಲಿ ಕೃತಜ್ಞತಾಬಾವ ಅಚ್ಚೊಳಿಯದಂತಿತ್ತು.

ಈ ಮಧ್ಯೆ ತಿಳಿವಾತಾವರಣದಲ್ಲಿ ಸಣ್ಣ ಬಿರುಗಾಳಿ ಎದ್ದಿತು. ಸಮರ್ಥ್‌ನ ಲಗ್ನಪತ್ರಿಕೆ ನಮ್ಮ ಮನೆ ಸೇರಿತು. ಲಗ್ನಪತ್ರಿಕೆಯಲ್ಲಿ ವಧು ವಿನ ಸ್ಥಾನದಲ್ಲಿ ನನ್ನ ಹೆಸರಿನ ಬದಲಾಗಿ ಸ್ಮಿತಳ ಹೆಸರು ವಿರಾಜಿಸುತ್ತಿತ್ತು. ಒಂದು ಕ್ಷಣ ತಲಗೆಳಗಾದ ನನ್ನ ಸ್ಥಿತಿ ಮರುಕ್ಷಣವೇ ಸಾಮಾನ್ಯ ಮಟ್ಟ

ವನ್ನು ತಲುಪಿತು. ಹೆಣ್ಣಿನ ಮನಸ್ಸು ಚಂಚಲವೆನ್ನುತ್ತಾರೆ. ಆದರೆ ನನ್ನ ಮಟ್ಟಿಗೆ ಗಂಡಿನ ಹೃದಯವೇ ಚಂಚಲವೆನ್ನುವುದು ಸ್ಪಷ್ಟಪಟ್ಟಿತ್ತು. ಇದಕ್ಕೆ ನಮ್ಮ ಮಾವನವರ ದಬ್ಬಾಳಿಕೆಯೂ ಸಾಕಷ್ಟು ಕಾರಣವಾಗಿರಬೇಕು. ಎಂ. ಎಲ್. ಎ. ಹುದ್ದೆಯಲ್ಲಿ ಸಾಕಷ್ಟು ಗಳಿಸಿದ ಸ್ಮಿತಳ ತಂದೆಯ ಗಳಿಕೆ ಮಾವನವರ ಕಣ್ಣು ಕುಕ್ಕಿರಬೇಕು. ಸ್ಮಿತಳ ವಿನಹ ಅವಳ ತಂದೆಯ ಆಸ್ತಿಗ್ಯಾವುದಕ್ಕೂ ವಾರಸುದಾರರಿಲ್ಲದಿರುವುದು ಮಾವನವರಿಗೆ ಹಿಡಿಸಲಾರದಷ್ಟು ಆನಂದವಾಗಿರಬೇಕು. ಮಗನ ಮೇಲೆ ಸಾಕಷ್ಟು ದಬ್ಬಾಳಿಕೆ ನಡೆಸಿ ಈ ಮದುವೆಗೆ ಒಪ್ಪಿಸಿರಬೇಕು. ಇದರಲ್ಲಿ ಸ್ಮಿತಳ ಪಾತ್ರ ಬಲು ದೊಡ್ಡದು. ನಿರುದ್ಯೋಗಿಯನ್ನು ಉದ್ಯೋಗಿಯಾಗಿಸಿದ ಹೆಮ್ಮೆ ತಂದೆ ಮಗಳಿಗೆ ಸೇರಿತ್ತು. ಈ ಮೇಲಿನ ಎಲ್ಲಾ ಕಾರಣಗಳಿಂದ ಸಮರ್ಥ ವಿವಾಹವಾಗಲು ನಾನು ಸಮರ್ಥಳಾಗಲಿಲ್ಲ. ಆ ಮದುವೆಯ ಸಮಯದಲ್ಲೇ ನಮ್ಮ ಆಫೀಸಿನ ಟೂರ್ ಫಿಕ್ಸ್ ಆಗಿದ್ದು ನನ್ನ ಅದೃಷ್ಟ. ನನ್ನ ಸಂಗಡ ರಾಜೀವ್‌ನನ್ನೂ ಎಳೆದೊಯ್ದೆ. ಅಪ್ಪ-ಅಮ್ಮ ಹೋಗದೆ ವಿಧಿ ಇರಲಿಲ್ಲ. ಟೂರ್‌ನಿಂದ ವಾಪಸಾದಾಗ ಮದುವೆಯ ಸಂಭ್ರಮವೆಲ್ಲಾ ಮುಗಿದಿತ್ತು. ಮಂಟಪದಲ್ಲಿ ಅಪ್ಪ-ಅಮ್ಮನ ಟ್ರೀಟ್‌ಮೆಂಟ್ ಅಷ್ಟಾಗಿ ಸರಿಯಾಗಿರಲಿಲ್ಲವೆಂದು ತಿಳಿಯಿತು. ಮದುವೆಯಿಂದ ಬಂದ ಅಮ್ಮನ ಮೈ-ಮನಸ್ಸು ಹಗುರಾಗಿರಲಿಲ್ಲ. ಬರುಬರುತ್ತಾ ಹಾಸಿಗೆ ಹಿಡಿದು ಮಲಗಿದಳು. ಈ ಸಮಯದಲ್ಲೇ ಬಾಸ್ ಎಲ್ಲಾ ಜವಾಬ್ದಾರಿಯನ್ನು ನನ್ನ ಮೇಲೆ ಹೊರಿಸಿ ಮೂರು ತಿಂಗಳ ಟೂರ್ ಹೊರಟರು. ಮೈ-ಮನಸ್ಸಿನ ನಿತ್ರಾಣದಿಂದ ತಿಂಗಳೊಪ್ಪತ್ತರಲ್ಲೇ ಅಮ್ಮ ವಿಧಿವಶಳಾದಳು. ಇಂದಿನವರೆಗೆ ಸಂಸಾರದ ಸುಖ-ದುಃಖವನ್ನು ಹೆಚ್ಚಾಗಿ ತಲೆಗೆ ಹಚ್ಚಿಕೊಳ್ಳದಿದ್ದ ಅಪ್ಪ ಅಮ್ಮನ ಗೈರುಹಾಜರಿಯಲ್ಲಿ ದಿಕ್ಕುಗಾಣದಾದರು. ಮೊದಲೇ ತೆಳ್ಳಗಿದ್ದ ಅಪ್ಪ ಅಮ್ಮನ ಕೊರಗಿನಿಂದ ಸೊರಗಿ ಸೊರಗಿ ಕಡ್ಡಿಯಂತಾದರು. ಮಲಗಿದ್ದಲ್ಲಿಂದ ಮೇಲೇಳಲಾಗದಷ್ಟು ನಿಶಕ್ತರಾದರು. ಆಸ್ಪತ್ರೆಗೆ ಸೇರಿಸದೆ ವಿಧಿಯಿಲ್ಲವಾಯಿತು. ಆಸ್ಪತ್ರೆಯ ಓಡಾಟ, ಕೆಲಸದ ಒತ್ತಡದಿಂದಾಗಿ ಹಣ್ಣಾದೆ. ಆದರೂ ಅಪ್ಪನನ್ನು ಉಳಿಸಿಕೊಳ್ಳಲಾಗಲಿಲ್ಲ. ಶಿಷ್ಟಾಚಾರಕ್ಕಾಗಿ ಮನೆಗೆ ಬಂದ ಮಾವ ಧೈರ್ಯದ ಮಾತುಗಳನ್ನು ಹೇಳುವ ಬದಲಾಗಿ

ಸಮರ್ಥ್-ಸ್ಮಿತಾಳ ಸೌತ್ ಇಂಡಿಯಾ ಟೂರ್ ಬಗ್ಗೆ ಹೇಳತೊಡಗಿದರು. ಮರುವರುಷ ನಾರ್ತ್ ಇಂಡಿಯಾ ಟೂರ್‌ಗೆ ಹೋಗುವುದಾಗಿ ಹೇಳಿದರು. ನವದಂಪತಿಗಳ ಪತ್ತೆಯಿರಲಿಲ್ಲ. ನೆಂಟರಿಷ್ಟರಿಂದ ಮನೆ ತುಂಬಿತ್ತು. ನನ್ನ ಮನ ಅಪ್ಪ-ಅಮ್ಮನನ್ನು ಕಳೆದುಕೊಂಡು ಬರಿದಾಗಿತ್ತು. ಅವರ ಜಂಬದ ಮಾತಿಗೆ ಕಿವಿಗೊಡದೆ ಸುಮ್ಮನೆ ಹೂಂಗುಟ್ಟುತ್ತಿದ್ದೆ. ಎರಡು ದಿನಗಳ ನಂತರ, ಬಂದಿದ್ದ ನೆಂಟರೆಲ್ಲರೂ 'ಏನಮ್ಮಾ ಬರೋದಾದ್ರೆ ನಮ್ಮನೆಗೆ ಬಾ. ಬೇಡಾಂದ್ರೆ ಹುಶಾರು. ಒಂಟಿ ಹೆಣ್ಣು, ರಾತ್ರಿ ಬಾಗಿಲು ಭದ್ರ' ಎಂದಷ್ಟೇ ಹೇಳಿ ಮಾವನ ಹೃದಯವನ್ನೇ ಹೊತ್ತು ಮಾವನೊಂದಿಗೆ ಮಾಯವಾದರು. ನಿಶ್ಶಬ್ದದಿಂದ ಕೂಡಿದ ಮನೆ ಭೋ ಎನ್ನುತ್ತಿತ್ತು. ರಾಜೀವನೂ ಮಂಕಾಗಿ ಒಂದು ಮೂಲೆ ಹಿಡಿದಿದ್ದ. ಅವನನ್ನು ರಮಿಸಿ ವಾತಾವರಣ ಬದಲಾಯಿಸಲು ಬಲವಂತವಾಗಿ ಕಾಲೇಜಿಗೆ ಅಟ್ಟಿ ನಾನೂ ಆಫೀಸಿಗೆ ನಡೆದೆ. ಇಷ್ಟೊಂದು ಕಷ್ಟ ಪರಂಪರೆಗಳನ್ನೆದುರಿಸಿದರೂ ನನ್ನ ಮನದ ದುಃಖ ಅಷ್ಟು ಆಳವಾಗಿರಲಿಲ್ಲ. ಕಷ್ಟಕ್ಕೇ ಒಗ್ಗಿಕೊಂಡು ನಾನು ಸಂಕಟಗಳನ್ನು ಸರಾಗವಾಗಿ ಎದುರಿಸುತ್ತಿದ್ದೆ. ಧೈರ್ಯದಿಂದ ಮನೆಬಿಟ್ಟು ಹೊರಟು ಎಲ್ಲರಿಗೂ ಮುಂಚೆ ನನ್ನ ಛೇಂಬರನ್ನು ಸೇರಿದೆ. ಸೀಟಿನಲ್ಲಿ ಕುಳಿತದ್ದೇ ತಡ, ಕಟ್ಟೆ ಹೊಡೆದಾಗ ತಡೆ ಹಿಡಿದಿದ್ದ ನೀರು ಮೇಲೆ ಚಿಮ್ಮು ವಂತೆ ದುಃಖ ಒತ್ತರಿಸಿ ಬಂತು. ತೆರೆದ ಬಾಗಿಲನ್ನೇ ಅರ್ಥವಿಲ್ಲದೆ ದಿಟ್ಟಿ ಸುತ್ತ ಹಾಗೆಯೇ ಕುಳಿತುಬಿಟ್ಟೆ. ಒಬ್ಬೊಬ್ಬರಾಗಿ ಬಂದ ಕೆಲಸಗಾರರು ತಮ್ಮ ವಿಷಾದವನ್ನು ವ್ಯಕ್ತಪಡಿಸಿದರು. ಯಾರಿಗೂ, ಏನೂ ರೆಸ್‌ಪಾಂಡ್ ಮಾಡಲಿಲ್ಲ. ಏನೂ ಮಾಡಲೂ ಮನಸ್ಸಾಗಲಿಲ್ಲ. ಭಾರವಾದ ವರ್ತ ಮಾನವನ್ನು ಹೊರಲಾರದೆ, ಕತ್ತಲಿನ ಭವಿಷ್ಯವನ್ನು ನೋಡಲಾಗದೆ ಸತ್ತ ಭೂತವನ್ನೇ ಯಾಚಕದೃಷ್ಟಿಯಿಂದ ದಿಟ್ಟಿಸುತ್ತಿದ್ದೆ. ಒಂದು ಗಂಟೆಯ ಸುಮಾರಿಗೆ ಆಗಷ್ಟೇ ಟೂರಿನಿಂದ ಹಿಂತಿರುಗಿದ ಬಾಸ್ ವಿಷಯವನ್ನು ತಿಳಿದು ನನ್ನ ಛೇಂಬರ್‌ಗೆ ಧಾವಿಸಿದರು. ಅವರ ಗಂಭೀರ ಮುಖದೆಡೆ ನನ್ನ ದೃಷ್ಟಿ ಹರಿಯಿತು. 'ಐ ಆವಮ್ ಸೋ ಸಾರಿ ಮಿಸ್' ಗಂಟೆಯ ದನಿಯಂತೆ ಆಳವಾದ ಭಾರವಾದ ಅವರ ಧ್ವನಿಯನ್ನು ಕೇಳಿ ನನ್ನ ದುಃಖದ ಕಟ್ಟೆಯೊಡೆಯಿತು. ಅವಿರತವಾಗಿ ಕಣ್ಣೀರು ಸುರಿಯಲಾರಂಭಿಸಿತು.

'ವಾಟ್ ಈಸ್ ಅಲಾಟೆಡ್ ಕೆನಾಟ್ ಬಿ ಬ್ಲಾಟೆಟ್ ಟೇಕ್ ಹಾರ್ಟ್. ನಾವಿಬ್ಬರೂ ಒಂದೇ ದೋಣಿಯಲ್ಲಿ ಪ್ರಯಾಣ ಮಾಡುತ್ತಿರುವ ದುರದೃಷ್ಟ ಪ್ರಯಾಣಿಕರು. ಬಿರುಗಾಳಿ ಎದ್ದಿದೆ. ಅದನ್ನೆದುರಿಸಿ ಮುನ್ನಡೆಯುವುದು ಬಲುಕಷ್ಟ. ಆದರೆ ಮುಂದೆ ಹೆಜ್ಜೆ ಹಾಕದೆ ವಿಧಿ ಇಲ್ಲ. ತಲುಪಬೇಕೆಂದಿರುವ ಸ್ಥಳವನ್ನು ಮುಟ್ಟಲಾಗದಿದ್ದರೂ ಹಾದಿಯಲ್ಲೇ ಸ್ಥಳ ಸಿಕ್ಕಿದೆಡೆ ಹೊರುಳುವುದು ಜಾಣತನ. ನಿಮ್ಮ ವ್ಯಥೆಯ ಅವಳನ್ನು ಅರ್ಥಮಾಡಿಕೊಳ್ಳಬಲ್ಲೆ. ನಾಲ್ಕು ವರ್ಷದ ಹಿಂದೆ ನಾನೂ ನಿಮ್ಮ ಸ್ಥಿತಿಯಲ್ಲೇ ಇದ್ದೆ. ನನ್ನ ಜೀವದ ಜೀವವಾಗಿದ್ದ ನನ್ನ ಅಪ್ಪ-ಅಮ್ಮ ನನ್ನ ಕಣ್ಣೆದುರಿನಲ್ಲೆ ಭಯಂಕರ ಅಪಘಾತಕ್ಕೊಳಗಾಗಿ ಒಂದೇ ದಿನದಲ್ಲಿ ಕೈ ಬಿಟ್ಟು ನಡೆದರು. ನನ್ನ ಅಪಾರ ದುಃಖವನ್ನು ಮನಸಾರೆ ಹಂಚಿಕೊಳ್ಳುವ ಹತ್ತಿರದ ವ್ಯಕ್ತಿ ಯಾರೂ ಇರಲಿಲ್ಲ. ಈ ಘಟನೆಯ ನಂತರ ಯಾರಲ್ಲೂ ಹೆಚ್ಚು ವಿಶ್ವಾಸ ತೋರದಾದೆ. ಕಾರಣ, ಅತಿ ವಿಶ್ವಾಸಿಗಳು ನಮ್ಮಿಂದ ಬಹು ಬೇಗ ಬೇರ್ಪಡುತ್ತಾರೆಂಬ ಭಾವನೆ ನನ್ನ ಮನದಲ್ಲಿ ಬೇರೂರಿತು. ಅಂದಿನಿಂದ ನನ್ನ ಮಿದುಳಿಗೆ ನಿಮಿಷವೂ ಪುರಸೊತ್ತು ಕೊಡದಾದೆ. 'ಟೈಮ್ ಹೀಲ್ಸ್ ದಿ ಸಾರೋ' ಈಗ ಸ್ವಲ್ಪ ಮಟ್ಟಿಗೆ ನನ್ನ ದುಃಖ ಸುಧಾರಿಸಿದೆ. ನೀವೇನೂ ಅಸಹಾಯಕರಲ್ಲ. ಸಾಕಷ್ಟು ವಿದ್ಯಾವಂತೆ. ಮೇಲಾಗಿ ಉದ್ಯೋಗಿ. ದುಃಖಿಸಿ ಪ್ರಯೋಜನವೇನು ?" ತಡೆಯಬೇಕೆಂದಷ್ಟೂ ಕಣ್ಣೀರು ಒಂದೇಸಮನೆ ಹರಿಯಲಾರಂಭಿಸಿತು. 'ಮಿಸ್ ನೀವು ಪ್ಲೇಸ್ ಛೇಂಜ್ ಮಾಡೋದೊಳ್ಳೇದು. ಇದೇ ರೀತಿ ದುಃಖಿಸ್ತಾ ಕೂತ್ರೆ ತಲೆ ಕೆಡುತ್ತೆ. ವಿಲ್ ಇಫ್ ಯು ಡೋಂಟ್ ಮೈಂಡ್ ಯಾವ್ದಾದ್ರೂ ಪಿಕ್ಚರ್‌ಗೆ ಹೋಗೋಣ' ಎಂದರು. ಅವಿವಾಹಿತ ಹೆಣ್ಣು ಪರಪುರುಷನೊಡನೆ. ಅಬ್ಬಾ! ಸಮಾಜದ ಕ್ರೂರಕಣ್ಣನ್ನು ಎದುರಿಸುವುದೆಂತು ? ನಾಳೆ ನನ್ನ ಜೀವನದಗತಿ ? ಮನದಲ್ಲೇ ಯೋಚಿಸಿ ನಡುಗಿದೆ. ಅಕಸ್ಮಾತ್ ಉನ್ಮಾದಕ್ಕೊಳಗಾಗಿ ಏನು ಮಾಡಿದರೆ ? ಮುಖವೆಲ್ಲಾ ಬೆವರಿಟ್ಟಿತು. 'ಫೇಸ್ ಈಸ್ ದಿ ಇಂಡೆಕ್ಸ್ ಆಫ್ ಮೈಂಡ್ ? ನನ್ನ ಮುಖಭಾವದಲ್ಲೇ ನನ್ನ ಮನಸ್ಸನ್ನರಿತ ಬಾಸ್. ಶಾಂತ ರೀತಿಯಿಂದ ನಗುತ್ತಾ 'ನನಗೆ ಎಷ್ಟೇ ಹಸಿವಿದ್ದರೂ, ಅಡಿಗೆ ರುಚಿಕಟ್ಟಾಗಿದ್ದರೂ, [illegible]

ವಾಸನೆಯನ್ನೂ ಮೂಸಲಾರೆ. ಹೆದರುವ ಅವಶ್ಯಕತೆಯಿಲ್ಲ. 'ಬನ್ನಿ' ಎಂದು ನನ್ನ ಉತ್ತರಕ್ಕೂ ಕಾಯದೆ ದುಡದುಡನೇ ಹೊರನಡೆದರು. ನಿರ್ವಾಹವಿಲ್ಲದೇ ಹಿಂಬಾಲಿಸಿದೆ. ಥಿಯೇಟರ್ ಒಳಹೊಕ್ಕು ಕೌಂಟರ್ ನನಗೆ ಹೋಗುತ್ತಿರುವಾಗ ಬ್ಲಾಕ್ ಟಿಕೆಟ್‌ಗಾಗಿ ಜಗಳವಾಡುತ್ತಾ ಇಬ್ಬರು ನನ್ನ ಮೇಲೆ ಬೀಳುವಂತೆ ಬಂದರು. ಪಕ್ಕದಲ್ಲೇ ಇದ್ದ ಬಾಸ್ ಕೈ ಚಾಚಿ ನನ್ನನ್ನಪ್ಪಿದರು. ಆ ಅಪ್ಪುಗೆಯಲ್ಲಿ ಉನ್ಮಾದವಿರಲಿಲ್ಲ. ಆಶ್ರಯದಾತನ ಕರ್ತವ್ಯ ಭಾವವಿತ್ತು. ಟಿಕೆಟ್ ಕೊಂಡಾದ ಮೇಲೆ ಬಾಲ್ಕನಿಯ ಒಂದು ಮೂಲೆಯಲ್ಲಿ ಅವರ ಪಕ್ಕದಲ್ಲಿ ನಿರಾಳವಾಗಿ ಕೂತೆ. ಅದೊಂದು ಡಿಟೆಕ್ಟಿವ್ ಇಂಗ್ಲೀಷ್ ಪಿಕ್ಚರ್ ಅತಿ ರೋಮಾಂಚಕವಾಗಿತ್ತು. ನಾಯಕಿಯ ತಾಯಿ ಭಯಂಕರ ಕೊಲೆಗೆ ತುತ್ತಾದ ನಂತರ ವಿರಾಮ ನನ್ನ ಅಪ್ಪನ ದೇಹವೂ ಆಸ್ಪತ್ರೆಯ ಭಯಂಕರ .ಶಸ್ತ್ರ ಚಿಕಿತ್ಸೆಗೊಳಗಾಗಿ ಇದೇ ರೀತಿ ವಿಚಿತ್ರವಾಗಿತ್ತು. ಅದನ್ನು ನೆನೆದೇ ಏನೋ ದೀಪಗಳು ಹತ್ತಿಕೊಂಡಾಗ ಭಯದಿಂದ. ಸಂಕಟದಿಂದ ಸಣ್ಣಗೆ ನಡುಗುತ್ತಿದ್ದೆ. ಅದನ್ನು ಆಬ್‌ಸರ್ವ್ ಮಾಡಿದ ಬಾಸ್, ನನ್ನ ಎರಡೂ ಕೈಯನ್ನು ಮೃದುವಾಗಿ ಹಿಡಿದು ಕಣ್ಣಲ್ಲಿ ಕಣ್ಣಿಟ್ಟು ನೋಡಿ 'ಭಯ ಆಯ್ತಾ? ದಿಸ್ ಈಸ್ ಆಫ್ಟರ್ ಆಲ್ ಎ ಪಿಕ್ಚರ್' ಎಂದರು. ಆ ನೋಟದಲ್ಲಿ ಮಾದಕತೆ ಇರಲಿಲ್ಲ. ಗಾಬರಿ ಗೊಂಡ ಮಗುವನ್ನು ಸಂತೈಸುವ ಸಹಜಭಾವವಿತ್ತು. ಚಿತ್ರ ಮುಗಿಸಿ ಹೋಟೇಲಿಗೆ ಕರೆದೊಯ್ದರು. ತಿಂಡಿ ತಿನ್ನಲು ನಾನು ನಿರಾಕರಿಸಿದಾಗ ಬಲವಂತವಾಗಿ ಬಾಯಿಗಿಟ್ಟರು. ಅವರ ಆ ನಡತೆಯಲ್ಲಿ ಉದ್ವೇಗವಿರಲಿಲ್ಲ. ಮಾತೆಯ ಮಮತಾಭಾವವಿತ್ತು. ಅವರ ಆ ಸನ್ನಡತೆಗಳಿಂದಾಗಿ ನನಗೆ ಅವರಲ್ಲಿದ್ದ ಗೌರವ ಇಮ್ಮಡಿಸಿತು.

ಹೋಟಲಿಂದ ಹೊರಟ ಕಾರು ಮೊದಲು ನಮ್ಮ ಮನೆ ಮುಂದೆ ನಿಂತಿತು. ಕಾರು ನೋಡಿದ ರಾಜೀವ ಓಡಿ ಬಂದು ಬಾಸ್‌ಗೆ ವಿಶ್ ಮಾಡಿದ. ನಾನಿನ್ನೂ ಕಾರಿನಿಂದ 'ಇಳಿದಿರಲಿಲ್ಲ. ರಾಜೀವನೊಡನೆ ಬಾಸ್ ಮಾತಿಗೆ ನಿಂತರು: ಅದೇ ಬೀದಿಯಲ್ಲಿದ್ದ, ನನ್ನನ್ನು ಕೆಣಕಲೆತ್ನಿಸಿ ವಿಫಲ ರಾಗಿದ್ದ ನಾಲ್ಕಾರು ಪುಂಡರು 'ಅಪ್ಪ, ಅಮ್ಮ ನೆಗೆದು ಬಿದ್ದರು. ಇನ್ನೇ

ನ್ಮಾಡೋದು ಪಾಪ. ಈ ವೃತ್ತೀನಾದ್ರೂ ಹಿಡೀಬೇಕಲ್ಲ. ಚೆಂದುಳ್ಳಿ ಚೆಲುವೆ, ಇನ್ನುದುಡ್ಡಿ ಗೇನೂ ಬರ ಇಲ್ಲ. ಮಜವಾಗಿರ್‍ರ್ಬೋದು! 'ಹೋಗ್ಲಿ ಬಿಡೋ ನಾವು ಒಂದು ಕೈ ನೋಡಿದ್ಹಾಯಿತು' ನಮಗೆಲ್ಲರಿಗೂ ಕೇಳುವಷ್ಟು ಜೋರಾಗಿಯೆ ಹರಟಿಕೊಂಡು ಕಾರನ್ನು ಸವರಿಕೊಂಡೇ ನಡೆದರು. ಇಷ್ಟೊತ್ತೂ ಶಾಂತ ಸರೋವರದಂತೆ ಏರುಪೇರಾಗದೆ ಸಮತಟ್ಟಾಗಿದ್ದ ಮಿದುಳು, ರಭಸದಿಂದ ಕಲಕಿದಂತಾಗಿ ಮುಖ ಮುಚ್ಚಿ ಬಿಕ್ಕಳಿಸಲಾರಂಭಿಸಿದೆ. ರಾಜೀನೂ ದುಃಖದಿಂದ ಮೂಕನಾದ. ಬಾಸ್‌ಗೆ ದಿಕ್ಕೇ ತೋಚದಂತಾಗಿ ಒಮ್ಮೆ ರಾಜೀವನೇಡೆಗೂ.ಮತ್ತೊಮ್ಮೆ ಆಗಷ್ಟೇ ಸಸಿದು ಹೋದ ಪುಂಡರೆಡೆಗೂ ನೋಡಿದರು, ಎಂದೂ ಕೋಪಗೊಂಡಿರದ ಅವರ ಮುಖ ಗಂಟಿಕ್ಕಿತು. ಮೂವರಲ್ಲೂ ಶಬ್ದ ಭಂಡಾರ ಬರಿದಾಗಿತ್ತು, ಗದ್ದದ ಮೇಲೆ ಕೈಯಿಟ್ಟು ಒಂದು ನಿಮಿಷ ಏನೋ ಯೋಚಿಸುತ್ತಿದ್ದ ಬಾಸ್ ನಿರ್ಧಾರಕ್ಕೆ ಬಂದರಂತೆ ರಾಜೀವನಿಂದ ಮನೆ ಬೀಗ ಹಾಕಿಸಿ ನಮ್ಮಿಬ್ಬರನ್ನೂ ಬಲವಂತವಾಗಿ ಕಾರಿನಲ್ಲಿ ಕೊಡಿಸಿಕೊಂಡು ನೇರ ತಮ್ಮ ಬಂಗಲೆಗೆ ನಡೆದರು. ಬಾಸ್‌ನಸ್ಥಿತಿ ಯಥಾ ರೀತಿಯಾಗಿರಲಿಲ್ಲ, ಯಾವುದೋ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು ತೊಳಲಾಡುತ್ತಿದ್ದಂತಿತ್ತು. ಮನೆ ಮುಟ್ಟುತ್ತಿದ್ದಂತೆಯೇ 'ಮುಖ್ಯ ವಿಷಯ ಮಾತಾನಂಡಬೇಕಾಗಿದೆ. ನಿಮ್ಮ ಅಭ್ಯಂತರ ವಿಲ್ಲದ್ದಿದ್ದರೆ ......,...ಎಂದು ಮೊದಲುಮಾಡಿದರು. ನಾನು ಸುಮ್ಮನೆ ಗೋಣು ಆಡಿಸಿದೆ. 'ಇದರಲ್ಲಿ ಅಧಿಕಾರದ ಪ್ರಶ್ನೆಯಾಗಲೀ, ಬಲವಂತದ ಪ್ರಶ್ನೆಯಾಗಲೀ ಇಲ್ಲ. ಇದು ಹೃದಯಕ್ಕೆ ಸಂಬಂಧಪಟ್ಟ ವಿಚಾರ. ನೀವು ನಮ್ಮ ಆಫೀಸಿಗೆ ಬಂದಾಗಿನಿಂದಲೂ ನಿಮ್ಮ ಗುಣ. ಸ್ವಭಾವ ನಡವಳಿಕೆ ಎಲ್ಲಾ ನನಗೆ ಮೆಚ್ಚುಗೆಯಾಗಿದೆ, ನಿಮ್ಮ ಬುದ್ಧಿವಂತಿಕೆಯಿಂದ ನಮ್ಮ ಆಫೀಸಿನಲ್ಲಿ ನನ್ನ ಪಿ. ಎ. ಆಗಿದ್ದೀರಿ. ನನ್ನ ಬಾಳಿನ ಪಿ. ಎ. ಆಗಿ ಆಗಮಿಸಲು ನಿಮಗೆ ಮನಸ್ಸಿದೆಯೇ?, ಎಂದು ಸಂಕೋಚ ಬೆರೆತ ಧ್ವನಿಯಲ್ಲಿ ಆತುರಾತುರನಾಗಿ ಎದುರಿಗಿದ್ದ ಟೇಬಲ್ಲನ್ನೇ ದಿಟ್ಟಿಸುತ್ತ ಹೇಳಿ ಮುಗಿಸಿದರು ತಲೆ ಎತ್ತಿ ಅವರನ್ನೇದಿಟ್ಟಿಸಿದೆ. ಭಾವದ ಎಲ್ಲೆಮೀರಿ ಮಾತು ಸ್ತಬ್ಧವಾಯಿತು, ಕೃತಜ್ಞತೆಯ ಭಾರದಿಂದ ಭೂಮಿಯೆಡೆಗೆ ಬಾಗಿ ನನ್ನೆಲ್ಲ ಭಾರವನ್ನೂ ಅವರ ಪಾದಗಳ ಮೇಲೆಸೆದೆ,

ವಿವಾಹಾನಂತರ ನನ್ನವರ ಪ್ರೀತಿಯ ಮಡಿಲಲ್ಲಿ ಮಗುವಾದೆ. ಆದರೆ ನನ್ನ ಸುಖಜೀವನದ ಸುಗಮ ಹಾದಿಯಾದ ಆಫೀಸನ್ನು ಬಿಡಲಿಲ್ಲ. ಮನೆ–ಆಫೀಸ್ ಎರಡೂ ಕಡೆ ಅವರ ಪಿ. ಎ. ಆಗಿಯೇ ಉಳಿದೆ. ಇದೇ ಸಮಯದಲ್ಲಿ ರಾಜೀವ್ ನ್ಯೂಸ್ ಪೇಪರಿನೊಂದಿಗೆ ಭಾರಿ ಸುದ್ದಿ ತಂದ. ಆಗ್ರಾದೆಡೆ ಹೋಗುತ್ತಿದ್ದ ಪ್ರಯಾಣಿಕರ ಬಸ್ಸೊಂದು ಭಯಂಕರ ಅಪಘಾತಕ್ಕೆ ತುತ್ತಾಗಿ ಐವರು ಸ್ಥಳದಲ್ಲೇ ಮೃತಪಟ್ಟರೆಂದೂ. ಇನ್ನುಳಿದವರ ಸ್ಥಿತಿ ಚಿಂತಾಜನಕವಾಗಿದೆಯೆಂದೆ ಸಮಾಚಾರ ಪ್ರಕಟವಾಗಿತ್ತು. ಮೃತಪಟ್ಟವರ ಪಟ್ಟಿಯಲ್ಲಿ ಸ್ಮಿತ ಸಮರ್ಥ್‌ರ ಹೆಸರುಗಳೂ ಇದ್ದವು. ಒಂದರೆಘಳಿಗೆ ತಲೆ ಧಿಂ ಎಂದಿತು. ಮರುಘಳಿಗೆಯೇ ಯಥಾಸ್ಥಿತಿಗೆ ಬಂತು. ಆ ಕ್ಷಣದಲ್ಲಿ ನನ್ನಿಂದ ಯಾವ ಭಾವವೂ ವ್ಯಕ್ತವಾಗಲಿಲ್ಲ. ಸ್ವಲ್ಪ ಸಮಯದ ನಂತರ ಅಸೂಯೆ ಮೂಡಿತು. ಬದುಕಿನುದ್ದಕ್ಕೂ ಸುಖಸಾಗರದಲ್ಲಿ ಈಜಾಡಿ ನರಳದೇ ಹೊರಳದೇ ಸ್ಮಿತ ಪ್ರಾಣ ಬಿಟ್ಟಳಲ್ಲ! ಅವಳ ಅಹಂಕಾರಕ್ಕೆ ಶಿಕ್ಷೆಯೇ ಇಲ್ಲವೇ? ಅವಳ ಬಾಳಿಗೆ ಇಷ್ಟು ಬೇಗ ಮುಕ್ತಿ ಸಿಕ್ಕಿತೇ? ಎನ್ನಿಸಿತು. ಆದರೆ ಮಾವನ ಅಹಂಕಾರಕ್ಕೆ ಶಿಕ್ಷೆಯಾಯಿತಲ್ಲ. ಅಷ್ಟೇ ಸಾಕು. ಹಾಯೆನಿಸಿತು. ಮೊದಲಿನಿಂದಲೂ ಎಲ್ಲಾ ವಿಷಯವನ್ನೂ ಹಗುರವಾಗಿ ಭಾವಿಸುತ್ತಿದ್ದ ನನಗೆ ದೇವರು ನನ್ನನ್ನು ಸುಖವಾಗಿಟ್ಟಿರುವನಲ್ಲಾ ಅಷ್ಟೇ ಸಾಕು. ಎನಿಸಿತು.

ನನ್ನವರು ಕರೆದೊಯ್ದ ಪ್ರೀತಿಯ ಸಾಗರದಲ್ಲಿ ಸಂತೋಷದಿಂದ ತೇಲಾಡಿದೆ. ಅವರ ನಿಷ್ಕಲ್ಮಶ ಪ್ರೀತಿಗೆ ಮಾರುಹೋಗಿ ಮರುವರ್ಷವೇ ಅರುಣನನ್ನು ಅವರಿಗೆ ಕಾಣಿಕೆಯಾಗಿತ್ತೆ. ನನ್ನವರ ನೆರವಿನಿಂದಲೇ ನನ್ನ ತಮ್ಮ ರಾಜೀವ್ ಈಗ ಮಣಿಪಾಲ್‌ನಲ್ಲಿ ಎಂ. ಬಿ. ಮಾಡುತ್ತಿರುವುದು. ಆ ಕಲ್ಮಶರಹಿತವಾದ ಹೃದಯ ತಂಪಾಗಿರಲೆಂದು ಹಾರೈಸಿದೆ.

"ಟ್ರಿಣ್" ಕಾಲಿಂಗ್ ಬೆಲ್ ಅರಚಿತು. ಬಾಗಿಲು ತೆರೆದಾಗ ನನ್ನವರ ಪ್ರೀತಿಯ ಮುಗುಳುನಗೆ ನನ್ನ ಹೃದಯಕ್ಕೆ ತಂಪನ್ನೆರೆಚಿತು.

ಬಾಲ ಅರುಣ ತನ್ನ ಕಿರಣಗಳಿಂದ ಭೂದೇವಿಯನ್ನು ಅಲಂಕರಿಸಿದ್ದ. ತಂಗಳ ಮುದ್ದೆಯನ್ನು ನುಂಗಿ ನೇಗಿಲನ್ನು ಹೊತ್ತ. ರೈತರು ಹೊಲದೆಡೆಗೆ ಸಾಗಿದ್ದರು. ಹೊರಲಾರದ ಪುಸ್ತಕಗಳ ಮೂಟೆಯನ್ನು ಹೊತ್ತ ಕಾನ್ವೆಂಟ್ ಕಂದಮ್ಮಗಳು ತಪ್ಪು ಹೆಜ್ಜೆಯಲ್ಲೇ ಕಾನ್ವೆಂಟ್‌ಗೆ ನಡೆದಿದ್ದರು. ತೃಪ್ತಿಯ ನಿದ್ದೆಗೈದಿದ್ದರಿಂದ ಮೈ-ಮನವು ಪ್ರಫುಲ್ಲವಾಗಿತ್ತು. ಹಿಂದಿನ ದಿನದ ಜಡತೆ ಹೇಳ ಹೆಸರಿಲ್ಲದಂತೆ ದೂರ ಓಡಿತ್ತು. ಮಿದುಳಿನ ತೊಳಲಾಟಕ್ಕೆ ಸಿಕ್ಕಿದ ದಿವಂಗತ ಸ್ಮಿತಳ ದುಷ್ಟ ಕಾರ್ಯಗಳು ನನ್ನ ಮನೋಮಂದಿರದಿಂದ ಮಾಯವಾಗಿದ್ದವು. ಪ್ರಾತರ್‌ವಿಧಿಯನ್ನು ಮುಗಿಸಿ ಅರ್ಧತಾಸು ಮುಂಚೆಯೇ ಆಫೀಸನ್ನು ಸೇರಿದೆವು. ಆಫೀಸಿನ ಪರಿಸರದ ಪರಿಚಯ ಸಾಕಷ್ಟು ಇರದ, ಆಗಮಿಸಿದ್ದ ನಾಲ್ಕಾರು ಅಭ್ಯರ್ಥಿಗಳು ಸಂಕೋಚದಿಂದ ಗೇಟಿನಾಚೆ ನಿಂತಿದ್ದರು. ನನ್ನ ಛೇಂಬರ್ ಒಳಹೊಕ್ಕು ಕಾರ್ಯೋನ್ಮುಖನಾದೆ. ಬಾಸ್ ಛೇಂಬರಿನಲ್ಲೇ ಇಂಟರ್‌ವ್ಯೂ ಆದರಾಚೆ ಅಭ್ಯರ್ಥಿಗಳು ಸೇರಲಾರಂಭಿಸಿದ್ದರು, ಆಫೀಸ್ ಪ್ಯೂನ್ ಬೋರಯ್ಯ. ಶಿಸ್ತನ್ನು ಸಾಕಷ್ಟು ಅಭ್ಯಸಿಸಿ ಬಂದಿದ್ದ ಗ್ರಾಜುಯೇಟುಗಳಿಗೆ ಶಿಸ್ತಿನ ಪಾಠ ಪ್ರಾರಂಭಿಸಿದ್ದ. ಇಂಟರ್‌ವ್ಯೂ ಸಮಯದಲ್ಲಿ ಇಲ್ಲಿಯೇ ಇರಬೇಕೆಂದು ಬಾಸ್‌ನ ಇಚ್ಛೆಯಾಗಿತ್ತು. ಅರ್ಧ ತಾಸು ಸಮಯವಿತ್ತು. ನನ್ನ ಛೇಂಬರಿನಿಂದ ಹೊರಬಂದೆ. ಅಭ್ಯರ್ಥಿಗಳು ಸಾಲಾಗಿ ಕುಳಿತಿದ್ದರು. ನೋಡಿದೊಡನೆ ಸಹಾನುಭೂತಿ ಹುಟ್ಟಿಸುವ ಮುಖ, ಸಾಕಷ್ಟು ಇಂಟರ್‌ವ್ಯೂಗಳನ್ನು ಎದುರಿಸಿ ಬಂದಿದ್ದ ಅನುಭವೀ ಮುಖ, 'ಈ ಕೆಲಸಕ್ಕೆ ಯಾರು ಕೇರ್ ಮಾಡ್ತಾರೆ' ಎಂಬಂತಿದ್ದ ತಿರಸ್ಕಾರಭರಿತ ಮುಖ, 'ಆಗ್ಲೇ ಯಾರ್ನೋ ಸೆಲೆಕ್ಟ್ ಮಾಡ್ಬಿಟ್ಟಿವಾರಂತೆ' ಎನ್ನುವ ನಿರಾಶಾದಾಯಕ ಮುಖಗಳು ಎದುರಿಗಿದ್ದವು. ಎಲ್ಲರೂ ಪಕ್ಕಪಕ್ಕದಲ್ಲಿ ಕುಳಿತು ಬಹು ಮೆಲ್ಲಗೆ ಹರಟುತ್ತಿದ್ದರೆ, ಒಂದು ವ್ಯಕ್ತಿ ಮಾತ್ರ ಬೋರಯ್ಯನ ಪಕ್ಕದಲ್ಲಿ ಕುಳಿತು ಏನನ್ನೋ ವಿಚಾರಿಸುತ್ತಿದ್ದಂತಿತ್ತು. ಅವರನ್ನು ಸಮೀಪಿಸಿದಾಗ. ನನ್ನತ್ತ ತಿರುಗಿದ ಬೋರಯ್ಯ ಎದ್ದು ನಿಂತು 'ನೋಡ್ರಪ್ಪ ಇವ್ರೇ' ಎಂದು ವ್ಯಕ್ತಿ ತಿರುಗಿತು. ನನ್ನ ತಲೆಯೂ ತಿರುಗಲಾರಂಭಿಸಿತು. ಆ ವ್ಯಕ್ತಿಯನ್ನೇ ನೆಟ್ಟ ದೃಷ್ಟಿಯಿಂದ ನಿರುಕಿಸಲಾರಂಭಿಸಿದೆ. ಅಪಮಾನವಾಯಿತು. ಕಣ್ಣುಕಿರಿದು ನೋಡಿದೆ. ಪಿಗ್ಗಲಿಸಿ ನೋಡಿದೆ. ಕಣ್ಣು

ದಿಟ್ಟಿಸಿ ನೋಡಿದೆ. ಚೆನ್ನಾಗಿ ಉಜ್ಜಿಕೊಂಡು ನೋಡಿದೆ. ಸಂಶಯ ವಿಲ್ಲ. ಅದೇ ವ್ಯಕ್ತಿ, ಅದೇ ಪರಿಚಿತ ಮುಖ. ಆದರೆ ಕುಹಕ ನಗೆಯು ತಾಂಡವವಾಡುತ್ತಿದ್ದ ಸ್ಥಳದಲ್ಲಿ ದೈನ್ಯತೆ ವಿರಾಜಿಸುತ್ತಿತ್ತು. ನಾನು ಈ ಷಾಕ್‌ನಿಂದ ಎಚ್ಚರವಾಗುವ ಮುನ್ನವೇ ಅವ್ಯಕ್ತಿ ಉಸುರಿತು.

'ನಮಸ್ತೇ ಮೇಡಂ. ನಾನೂ ನಿಮ್ಮ ಅಭ್ಯರ್ಥಿಗಳಲ್ಲಿ ಒಬ್ಬಳು. ನೀವು ಮನಸ್ಸು ಮಾಡಿದ್ರೆ ನಿಮ್ಮ ಆಫೀಸಿನಲ್ಲಿ ಸೇವೆಸಲ್ಲಿಸಲು ನಾನು ಸರ್ವ ಸಿದ್ಧಳಾಗುವೆ"

ಏನಾದರೇನು? 'ಹುಟ್ಟುಗುಣ ಸುಟ್ಟರೂ ಹೋಗೋಲ್ಲ' ಎನ್ನುವ ಗಾದೆ ಮಾತು ಸುಳ್ಳೇ? ಆ ವ್ಯಕ್ತಿಯ ಹುಟ್ಟಿನಿಂದಲೇ ಬಂದ ಅಹಂಕಾರ ಬಿಟ್ಟು ಹೋದೀತೇ? ಮುಖ ದೈನ್ಯತೆಯನ್ನು ಸೂಚಿಸುತ್ತಿದ್ದರೂ ಎದ್ದು ನಿಂತು ಬಾಸ್‌ಗೆ ಮರ್ಯಾದೆ ತೋರಿಸುವಷ್ಟು ತಾಳ್ಮೆ ಇಲ್ಲವೇ?

ನನಗೇ ಅರಿಯದಂತೆ ನನ್ನ ಮುಖ ಸಿಟ್ಟಿನಿಂದ ಗಂಟಿಕ್ಕಿತು. ಸುತ್ತಲೂ ನೋಟ ಹರಿಸಿದೆ, ಅಭ್ಯರ್ಥಿಗಳೆಲ್ಲರ ದೃಷ್ಟಿ ನನ್ನೆಡೆಗೇ ಇತ್ತು. ಆಫೀಸಿನ ಯಾಜಮಾನ್ಯ ನನ್ನದೇ ಎಂಬ ಹೆಮ್ಮೆ ತಲೆದೋರಿತು. ಆ ವ್ಯಕ್ತಿಗೆ ಉತ್ತರಿಸಲು ಮನಸ್ಸಾಗಲಿಲ್ಲ. ಲಾಬಿಯಿಂದ ಮುನ್ನಡೆದೆ.

'ಮೇಡಂ ಪ್ಲೀಸ್'——

ಕಿವಿಯಲ್ಲಿ ಮತ್ತೆ ಅದೇ ಬೇಡದ ಮಾತು.

'ನೀವು ಮನಸ್ಮಾಡಿದ್ರೆ..........

ಕೋಪ ಬುಗಿಲ್ ಎಂದಿತು. ಶಿಷ್ಟಾಚಾರಕ್ಕೆ ಮಾತನಾಡಲೇಬೇಕಿತ್ತು. 'ನೋಡಿ ನಿಮ್ಮಂತೆಯೇ ಹಲವಾರು ಅಭ್ಯರ್ಥಿಗಳು ಬಂದಿದ್ದಾರೆ, ಒಂದು ಸಾಮಾನ್ಯ ಹುದ್ದೆಗೆ ಶಿಫಾರಸ್ ಅನಗತ್ಯ. ಮೆರಿಟ್, ಕಾಂಟಕ್ಟ್ ಮೇಲೆ

ನಾವು ಸೆಲೆಕ್ಟ್‌ಮಾಡೋದು. ನಿಮ್ಮ ಕಾಲ್‌ಮೇಲೆ ನೀವು ನಿಂತ್ಕೊಳ್ಳೋದು ಕಲಿಯಬೇಕು."

ವ್ಯಂಗವಾಗಿ ಉತ್ತರಿಸಿ ಮತ್ತೆ ನನ್ನ ಛೇಂಬರ್‌ಗೆ ತೆರಳಿದ್ದೆ.

'ಇಲ್ಲ ಮೇಡಂ' ತಲೆ ಎತ್ತಿ ನೋಡಿದೆ. ಎದುರಿಗೆ, ಶಿಷ್ಟಾಚಾರವನ್ನು ಮರೆತು ನನ್ನ ಕೋಣೆಯೊಳಗೆ ಕಾಲಿರಿಸಿದ ವ್ಯಕ್ತಿ.

"ನನ್ನ ಕಾಲ್‌ಮೇಲೆ ನಾ ನಿಲ್ಲಲಾರೆ"

ಮುಖ ಸಿಂಡರಿಸಿದೆ. ಅವಳ ಇರವೇ ನನಗಿಷ್ಟವಿಲ್ಲವೆಂಬುದನ್ನು ತಿಳಿಸಲು ನನ್ನ ಕೆಲಸ ಮುಂದುವರಿಸಿದ.

ವ್ಯಕ್ತಿ ಮುಂದುವರಿಸಿತು.

ನಾ ಮಾಡಿದ ಯಾವುದೋ ಪಾಪದ ಫಲ. ಆಕ್ಸಿಡೆಂಟ್‌ನಲ್ಲಿ ನನ್ನ ಪ್ರಾಣ ಮಾತ್ರವೇ ಉಳಿಯಿತು. ಪೇಪರ್ ಮಾತೇ ನಿಜವಾಗಿದ್ದಲ್ಲಿ ನಾನು ಹಾಯಾಗಿ ಚಿರನಿದ್ರೆಯಲ್ಲಿರುತ್ತಿದ್ದೆ. ಇನ್ನೂ ಸವೆಯದ ನನ್ನ ಕರ್ಮ ನನ್ನನ್ನು ಜೀವಚ್ಛವವಾಗಿ ಇಲ್ಲಿಯೇ ಉಳಿಸಿದೆ. ನನ್ನದೇ ಚಿಂತೆಯಲ್ಲಿ ಅಮ್ಮ ಇಲ್ಲವಾದರು. ಎಲೆಕ್ಷನ್ ಹುಚ್ಚಿನಲ್ಲಿ ಇದ್ದ ಬದ್ದ ಆಸ್ತಿಯನ್ನೆಲ್ಲಾ ಕಳೆದುಕೊಂಡು, ಕಡೆಗೆ ಡಿಪಾಸಿಟ್ಟೂ ಇಲ್ಲವಾಗಿ ಹುಚ್ಚಾಗಿ ಅಲೆಯುತ್ತಿದ್ದಾರೆ ಅಪ್ಪ. ಛಲದಿಂದ ಮದುವೆಯಾದ ಒಲವಿನ ಪತಿಯನ್ನು ಪರಲೋಕಕ್ಕೆ ಕಳಿಸಿ ಇನ್ನೂ ಉಳಿದಿರುವ ನಾನು ಪರಮಪಾಪಿ. ಇನ್ನು ನನ್ನ ಮಾವ. ನನ್ನನ್ನೂ ಮೀರಿಸಿದ ಪಾಷಾಣಹೃದಯಿ. ಈ ವಿಶಾಲ ಜಗತ್ತಿನಲ್ಲಿ ನಾನು ಅನಾಥೆ. ನನಗೆ ಈಗ ಇರುವ ಒಂದೇ ಆಸರೆ ಉದ್ಯೋಗ. ಇದಿಲ್ಲವಾದರೆ ನನ್ನ ಬಾಳೇ ಶೂನ್ಯ, ನನ್ನಶೂನ್ಯ ಬಾಳಿನಲ್ಲಿ ಪ್ರಕಾಶದ ಒಂದೇ ಒಂದು ಕಿಡಿಯನ್ನು ಬೆಳಗಿಸಲು ನೆರವಾಗಿ ಮೇಡಂ ಮುಂದ ಮಾತು ಕೇಳಿಸಲಿಲ್ಲ. ನನ್ನ ಕೈ ಮೇಲೆ ಎರಡು ತೊಟ್ಟು ಕಣ್ಣೀರು ಬಿತ್ತು. ತಲೆ ಎತ್ತಿದೆ. ಆಶ್ಚರ್ಯ ! ಅವಳ ಕಣ್ಣಲ್ಲಿ ನೀರು. ಇತರರನ್ನು ಅಳಿಸಿ ಸರಾಗವಾಗಿ ಅವರ ಕಣ್ಣಿನಲ್ಲಿ ನೀರು ಹರಿಸುತ್ತಿದ್ದ ಸ್ಮಿತಳ ಕಣ್ಣಲ್ಲೂ ನೀರು! ಇದು ಮಹದಾಶ್ಚರ್ಯ.

ಆಘಾತದ ಪ್ರಖರಕ್ಕೆ ಕರಗಿ ಮೌಂಟ್ ಎವರೆಸ್ಟ್ ಮಂಜನ್ನು ಧಾರಾಕಾರವಾಗಿ ಕೆಳಗೆ ಉದುರಿಸುತ್ತಿತ್ತು. ಜಂಭದ ಕೋಳಿಯ ಮೊಟ್ಟೆಗಳೆಲ್ಲಾ ಒಡೆದು ಚೆಲ್ಲಾಪಿಲ್ಲಿಯಾಗಿತ್ತು. ಅಹಂಕಾರದ ಮುದ್ದೆ ಆಘಾತದ ಒದೆತಕ್ಕೆ ನುಚ್ಚು ನೂರಾಗಿತ್ತು.

ಅಯ್ಯೋ! ಇದೇನಿದು? ಇದುವರೆಗೂ ನನ್ನ ಕಣ್ಣಿಗೇಕೆ ಬೀಳಲಿಲ್ಲ? ದೈನ್ಯವೇ ಮೂರ್ತಿವೆತ್ತಂತೆ ನಿಂತಿದ್ದ ಸ್ಮಿತಳ ಎಡಭುಜದಲ್ಲಿ 'ಊಗೋಲು' ನನ್ನ ದೇಹದ ಯಾವುದೋ ಮೂಲೆಯಲ್ಲಿ ಹೆಪ್ಪುಗಟ್ಟಿದ್ದ ಸಿಟ್ಟು ಕರಗಲಾರಂಭಿಸಿತು. 'ಅವಳ ಕರುಣಾಜನಕ ಕಥೆ ನನ್ನ ಹೃದಯವನ್ನು ನೋವಿನಿಂದ ತುಂಬಿತು.

'ಮೇಡಂ ನಿಮ್ಗೆ ಆಶ್ಚರ್ಯ ಆಗ್ಬೋದಲ್ವಾ. ಇಷ್ಟಾದ್ರೂ ಇವಳು ಇನ್ನೂ ಯಾಕೆ ಭೂಮಿ ಮೇಲೆ ಇದ್ದಾಳೆ ಅಂತ. ಏನ್ಮಾಡ್ಲಿ ನಾನೊಬ್ಬಳೆ ಆಗಿದ್ದಿದ್ರೆ ಖಂಡಿತ ಕಳೆಗೆಟ್ಟ ನನ್ನ ಈ ಮುಖವನ್ನು ನಿಮ್ಗೆ ,ತೋರಿಸ್ತಾ ಇರ್ಲಿಲ್ಲ. ಆದರೆ...ನಾಘು ಮಾಡಿದ ಪಾಪಕ್ಕೆ ಏನೂ ಅರಿಯದ ಬಾಲ 'ಹಸುಳೆ ಭಿಕ್ಷೆ ಬೇಡೋದು ನನಗಿಷ್ಟ ಇಲ್ಲ ಮೇಡಂ. ವಿದ್ಯಾ ಬುದ್ಧಿ ಇಲ್ದೆ ಆರಿಯದ ಕಂದಮ್ಮ ಕೂಲಿ ಮಾಡೋದು ನನ್ಗೆ ಸುತರಾಂ ಇಷ್ಟ ಇಲ್ಲ ಮೇಡಂ. ತನ್ನ ಕಾಲ ಮೇಲೆ ತಾನು ನಿಲ್ಲಲು ಮರಿ ಸಮರ್ಥ- ಅಸಮರ್ಥನಾಗೋದು ನಾ ಸೋಡ್ಲಾರೆ ಮೇಡಂ ನೋಡ್ಲಾರೆ. ಪ್ಲೀಸ್ ಇದು ಕೈಯಿಲ್ಲ ಕಾಲೂಂತ ತಿಳ್ಕೊಳ್ಳಿ ... ನನ್ನೆರಡೂ ಕೈಗಳನ್ನು ಹಿಡಿದು ಯಾಚಿಸಿದಳು. ಸ್ಮಿತ ಮುಂದೆ ಮಾತಾಡಲು ಅವಳಿಗೆ ಸಾಧ್ಯವಾಗಲಿಲ್ಲ. ಕಣ್ಣೀರು ಅವ್ಯಾಹತವಾಗಿ ಹರಿಯಲಾರಂಭಿಸಿತು. ಅವಳನ್ನು ನೋಡ ನೋಡುತ್ತಲೇ ನನ್ನ ದುಃಖ ಉಮ್ಮಳಿಸಿ ಬಂತು. ನದಿಗೆ ಕಟ್ಟಿದ ಅಣೆಕಟ್ಟನ್ನು ಯಾರೋ ಗುದ್ದಲಿಯಿಂದ ಹೊಡೆದೊಡೆದು ಉರುಳಿಸಿದ ಭಾಸವಾಗಿ ಕಣ್ಣೀರುನನ್ನನ್ನು ಮತಿಯನ್ನು ಮೀರಿ ಹೊರಬರಲು ತವಕಿಸಿತು. ದುಃಖ ಉಕ್ಕುಕ್ಕಿ ಯಾರೋ ಗಂಟಲನ್ನು ತಬ್ಬಿ ಹಿಡಿದಂತಾಯಿತು. ಆದರೆ ಸ್ಮಿತಳ ಮುಂದೆ ನನ್ನ ದೌರ್ಬಲ್ಯವನ್ನು ತೋರಿಸಲು ಮನಸ್ಸಾಗಲಿಲ್ಲ. ಕಣ್ಣೀರನ್ನು ತಡೆಯಲೋಸುಗ ಪಕ್ಕಕ್ಕೆ ತಿರುಗಿದೆ. ಇದೇ ಸಮಯದಲ್ಲಿ ದೈವ ಸಹಾಯವೋ

ಎಂಬಂತೆ ಟೆಲಿಕಾಮ್ 'ಟ್ರಿಣ್' ಒಂದಿತು, ಕಮಿಂಗ್ ಬಾಸ್' ಎಂದೆ. ನನ್ನ ಧ್ವನಿ ನನಗೆ ಅರ್ಥವಾಗದಷ್ಟು ಅಪರಿಚಿತವಾಗಿತ್ತು. 'ಎಕ್ಸ್‌ಕ್ಯೂಸ್ ಮಿ' ಎಂದು ನನ್ನ ಕೈಗಳನ್ನು ಬಿಡಿಸಿಕೊಂಡು, ಯಾವುದೋ ನಿರ್ಧಾರದಿಂದ ಬಾಸ್ ರೂಮಿನತ್ತ ತೆರಳಿದೆ. ಛೇಂಬರ್‌ನ ಬಾಗಿಲು ತೆರೆದೆ. ಅವರು ಕಣ್ಣಿಗೆ ಬಿದ್ದರು. ಅವರ ವದನಾರವಿಂದವನ್ನು ಅವಲೋಕಿಸುತ್ತಲೇ ನನ್ನ ಅರುಣಸೊಡನೆ ಅವರಾಡಿದ ಮಾತು ನನ್ನ ಕಿವಿಯಲ್ಲಿ ಗುಯ್ ಗುಟ್ಟಿತು.

'ಒಂದು ಅಂಗ ಊನ ಆದ್ರೆ, ಅದು ಅದ್ರ ಪರ್ಸನಾಲಿಟೀನೇ ಕಳಕೊಂಡ್ಬಿಡುತ್ತೆ. ಅದು ಯೂಸ್‌ಲೆಸ್. ಅದನ್ನ ಎಸೆದ್ಬಿಡು. ಬೇರೆ ತರೋಣ'

o○oo

# ಗುರುತಿಸಿದೆ ಗುರುತಿಸಿದೆ! ಆದರೆ....

—ಎನ್. ಪಂಕಜಾ

ಹಾದು, ಅವನದೇ ಫೋಟೋ ಪತ್ರಿಕೆಯಲ್ಲಿ!

ಕೆಲಸಕ್ಕೆ ಹೊರಟಿದ್ದವಳು

ಹಾಗೆಯೇ ನಿಂತುಬಿಟ್ಟೆ, ಫೋಟೋವಿನ ಕೆಳಗೆ ಬರೆದಿರುವುದನ್ನು ಓದಿ ಅಲ್ಲಿಯೇ ಕುಸಿದೆ !

ಹುಶಾರಾಗಿಯೇ ಇದ್ದನಲ್ಲವೇ? ಈಗ್ಯೆ, ಒಂದು ವರುಷದ ಕೆಳಗೆ ಆಕಸ್ಮಾತ್ ಕಂಡಾಗ ಯಾವ ಸೂಚನೆಯೂ ತೋರಿರಲಿಲ್ಲವಲ್ಲ?

ಹೌದು ........ಕಣ್ಣುಗಳ ಕೆಳಗೆ ಕಪ್ಪು ಉಂಗುರುಗಳು ನೆಲೆಸಿದ್ದವು, ಕೆನ್ನೆಗಳು ಇಳಿಬಿದ್ದಿದ್ದವು, ಆದರೂ........

ಇಷ್ಟು ಬೇಗನೆಯೇ ಹೀಗಾಗಬಹುದು ಎಂದು ನಾನು ಕನಸಿನಲ್ಲಿಯೂ ನೆನೆಸಿರಲಿಲ್ಲ, ಏನಾಗಿತ್ತು, ಅವನಿಗೆ?

ಮತ್ತೆ ಓದಿದೆ...ಓದಿದಷ್ಟೂ ಹೃದಯದ ಉಕ್ಕಿನ ಕವಚ ಒಡೆದು, ಒಳಗಿನಿಂದ ಭಾವಪ್ರಕಾಶ ದುಮುಕಿತು.

ತಡೆದು ಕೊಳ್ಳುವುದು ಅಸಾಧ್ಯವಾಯಿತು, ಹೊರಗಿನಿಂದ ಆಲೋಚನೆಗಳ ಸುಳಿಗಳು ಒಳನುಗ್ಗಿದ್ದವು,

ಅಡ್ಡಿ ಮಾಡಲು ಆಗದಾಯಿತು. ಅವೆಲ್ಲವೂ ಎತ್ತರದ ತೆರೆಗಳಾಗಿ

ಹೃದಯದ ಮೇಲೆ ಅಪ್ಪಳಿಸಿದವು! ಕಲ್ಲಿನಂತಾಗಿದ್ದ ಹೃದಯ ಚಿಂದಿ ಚಿಂದಿಯಾಗಿ ಹರಿದು ಹೋಗತೊಡಗಿತು.

ಪುಡಿ ಪುಡಿಯಾಗಿ ಕೆಳಗೆ ಬೀಳದಂತೆ ಅಲ್ಲಿ ಕೈಯಿಟ್ಟುಕೊಂಡೆ.

ಹುಂ.......ಪುಡಿಪುಡಿಯಾಗಿ ಬಿದ್ದರೇನು, ಅಲ್ಲಿಯೇ ಉಳಿದರೇನು? ಬಾಳಿಂದರೇನು.......ಬದುಕು ಎಂಬುದರ ಅರ್ಥ ಏನು?

ಜೀವನ ಇಷ್ಟೇ ಏನು?

ಮತ್ತೊಮ್ಮೆ, ಮತ್ತೆ ಮತ್ತೆ ಮತ್ತೆ ಓದಿದೆ....

.......ಹುಚ್ಚಿಯಂತೆ,

ನಿಜವೇ?

ಹು......ಸುಳ್ಳು ಸುದ್ದಿ

ಹಾಕಲಿಕ್ಕೆ ಈಗೇನು ಏಪ್ರಿಲ್ ತಿಂಗಳೇ?

ಒಲುಮೆ ಎಂದರೇನು? ತ್ಯಾಗ ಎನ್ನುವುದರ ಅರ್ಥ ಏನು?

ವಿಧಿ ಎಂಬುದೊಂದೇ ನಿಜ...ಸ್ಥಿರ....ಹೌದೇನು?

ಇನ್ನೂ ನೆನ್ನೆ ಮೊನ್ನೆ ಎನ್ನುವ ಹಾಗಿದೆ, ನಾನವನನ್ನು ಕಂಡದ್ದು....

"ನನಗಾಗಿ ...ಈ ಅಲ್ಪಜೀವಿಗಾಗಿ. ನಿನ್ನ ಸರ್ವಸ್ವವನ್ನೂ ತ್ಯಾಗ ಮಾಡಲು ಹೊರಟಿರುವೆಯಾ? ಆಚ್ಚರಿಯಿಂದ ಪ್ರಶ್ನಿಸಿದ್ದೆನಲ್ಲವೇ?

"ಅದರಲ್ಲೇನು ಆಶ್ಚರ್ಯ? ನಿನ್ನ ಮುಂದೆ ಮಿಕ್ಕೆಲ್ಲ ತೃಣ......" ಸ್ವಲ್ಪವೂ ತಡವರಿಸದೆ ಉತ್ತರಿಸಿದ್ದನಲ್ಲವೇ?

"ಆದರೆ ನಿನ್ನ ಕಲೆ......"

"ನೀನೇ ನನ್ನ ಕಲೆ, ದೇವತೆ ಎಲ್ಲವೂ! ನೀನು ನನ್ನವಳಾದರೆ ಸಾಕು, ಕಲಾದೇವಿ ಒಲಿದಂತೆಯೇ........ಆಗ ನಾನು ಹೆಮ್ಮೆಯಿಂದ ಬೀಗಿದ್ದೆ, ಆದರೆ, ಆಮೇಲೆ........ಆಮೇಲೆ.......

"ಖಂಡಿತ ನಿನ್ನವಳಾಗುವೆ! ಸೂರ್ಯ ಚಂದ್ರರಿಂದ ಸಹ ನಮ್ಮಿಬ್ಬರನ್ನೂ ಬೇರೆಮಾಡಲು ಸಾಧ್ಯವಿಲ್ಲ!" ದೃಢ ಧ್ವನಿಯಲ್ಲಿ ವಾಗ್ದಾನ ಮಾಡಿದ್ದೆ.

ಅವನ ಹೃದಯದ ಮೇಲೆ ಕೈಯಿಟ್ಟು...ಇದೇ ನನ್ನ ಕೈಯಿಟ್ಟು....

ಆದರೆ, ಆಮೇಲೆ......ಆಮೇಲೆ

ನಾನೆಂದೂ ಆ ಘೋರ ದಿನವನ್ನು ಮರೆಯಲಾರೆ!

ನನ್ನ ಬಾಳಿಗೆ ಕೊಡಲಿಯೇಟನ್ನು ಹಾಕಿದ್ದ, ಅವನ ಬಾಳಿಗೆ ಬೆಳ್ಳಿ ಮೂಡಿಸಿದ್ದ, ಆ ಕರಾಳ ದಿನವನ್ನು!.........

ನಿಜಕ್ಕೂ ಅವನ ಬಾಳಿಗೆ ಬೆಳ್ಳಿ ಮೂಡಿಸಿತೆ?

ಇಲ್ಲವಾದಲ್ಲಿ ಆ ಅಪರಾಧಕ್ಕೆ ಹೊಣೆ ನಾನು!

ಇಲ್ಲ ಇಲ್ಲ........ನಾನಲ್ಲ...ಅವನ ತಾಯಿ!

ಹೌದು...... ಆಕೆ ಮಟ್ಟಿಗೆ 'ಅಂದು ಬಂದು, ಹಾಗೆ ನನ್ನ ಕಾಲು ಹಿಡಿಯದಿದ್ದಲ್ಲಿ.... ...?

"ಅವನಪ್ಪ ಅಮೋಘ ಚಿತ್ರಕಾರರು ಮಗೂ: ಆದರೆ ಅದೃಷ್ಟ ಚೆನ್ನಾಗಿರಲಿಲ್ಲ. ಅಣ್ಣನ ನೆರಳಾಗಿಯೇ ಸತ್ತರು. ಅವರಣ್ಣ ಭಾರಿ ಚಿತ್ರಕಾರರು. ತಮ್ಮ ಅಣ್ಣನನ್ನೂ ಮೀರಿಸೂವಂತೆ ಪ್ರೋತ್ಸಾಹಿಸಿ. ನಮ್ಮ ಮಗನನ್ನು ಒಂದು ಭಾರಿ ಚಿತ್ರಕಾರನನ್ನಾಗಿ ಮಾಡಬೇಕೆಂದು ನನ್ನಿಂದ ಭಾಷೆ ತಗೊಂಡಿದ್ದಾರೆ. ಆ ನನ್ನ ಪವಿತ್ರ ಭಾಷೆಯನ್ನು ಉಳಿಸಿಕೊಡು ತಾಯಿ! ನೋಡು, ಈಗ ನೀನವನನ್ನ ಮದುವೆಯಾದೆ ಅಂದುಕೋ—ನಿನ್ನನು ಸುಖವಾಗಿಟ್ಟುಕೊಳ್ಳೊದ್ರಲ್ಲಿ ಅವನು ತನ್ನ ಕಲಾದೇವಿಯನ್ನ ಮರೆತು ಬಿಡ್ತಾನೆ-ಯೋಚಿಸು—ನಿನ್ನನ್ನ ನೋಡಿದಾಗಿನಿಂದ ಒಂದು ರೇಖೆ ಎಳೆದಿದ್ದಾನೆ ಅವನು? ಹೀಗೇ ಮಾಡಿದರೆ ಕಲಾದೇವತೆಗೆ ತುಂಬಾ ಕೋಪ ಬಂದು ಎಲ್ಲಿ ಶ್ರದ್ಧೆ ಇದೆಯೋ ಅಲ್ಲಿಗೇ ಹೊರಟು ಹೋಗಿಬಿಡ್ತಾಳೆ—ನೋಡ್ಕೊಂಡಿರು! ಈ ಗಾಗಲೇ ಅದಕ್ಕೆ ಎಷ್ಟು ಬೇಸರ ಆಗಿದೆಯೋ? ನಿನ್ನ ಒಂದು ಪ್ರೇಮಕ್ಕಾಗಿ ಅವನ ಬಾಳನ್ನು ಹಾಳ್ಮಾಡಬೇಡವಮ್ಮಾ ತಾಯಿ ...ನಿನ್ನಲ್ಲಿ

ಅಷ್ಟೊಂದು ಪ್ರೀತಿಯಿದ್ರೆ ಅವನಿಗಾಗಿ, ಅವನ ಶ್ರೇಯಸ್ಸಿಗಾಗಿ, ಅವನನ್ನ ತ್ಯಾಗ ಮಾಡಮ್ಮ; ಕಲಾದೇವತೆಯ ಕೈಲಿಡು–ದೂರ ಇರು, ನಾಳೆ ಅವನು ಪ್ರಸಿದ್ಧ ಚಿತ್ರಕಾರ ಆದರೆ ನಿಂಗೂ ಹೆಮ್ಮೆ–ಇಡೀ ನಾಡಿಗೇ 'ಹೆಮ್ಮೆ! ಅವರಪ್ಪನ ಆತ್ಮಕ್ಕೆ ಶಾಂತಿ ಕೊಡೋ ಹಂಗೆ ಸಹಕರಿಸಮ್ಮ ತಾಯಿ........"

ಹೆತ್ತ ತಾಯಿಯ ಆ ಸಂಕಟವನ್ನು ನನ್ನಿಂದ ನೋಡಲಾಗಲಿಲ್ಲ.

"ಪ್ರೇಮ ಎಂದರೆ ಏನು ? ತ್ಯಾಗ ! ಅವೆರಡೂ ಒಂದಕ್ಕೊಂದು ಪೂರಕ........" ಅವನೇ ಒಂದು ಸಾರಿ ಹೇಳಿರಲಿಲ್ಲವೇ ?

ಹೌದು........ಅವನನ್ನ ನಾನು ಮನಸಾರೆ ಪ್ರೀತಿಸುವುದುಂಟು: ಆದರೆ ಆ ಪ್ರೀತಿ ವಿನಾಶಕ್ಕೆ ಕಾರಣವಾಗಬಾರದು, ನನ್ನ ಪ್ರೇಮದಿಂದಾಗಿ ಅವನ ಬಾಳು ಬೆಳಗಬೇಕು—ಬೆಳೆಯಬೇಕು ! ಅವನ ಚೇತನ ಅರಳಬೇಕು—ವಿಶ್ವವ್ಯಾಪಿಯಾಗಬೇಕು...ಅವನ ಆ ದಿವ್ಯಕಲೆಯ ಮೂಲಕ ! ಹಾಗೆ ಮಾಡುವ ಶಕ್ತಿ ನನ್ನಲ್ಲಿದೆ ನಾನು ಆ ಶಕ್ತಿಯನ್ನು ಅಲ್ಲಗಳೆಯಬಾರದು.

ಹೀಗೆಲ್ಲಾ ಆಗ ದೀರ್ಘವಾಗಿ ಯೋಚಿಸಿದ್ದನಲ್ಲವೇ ?

ಆ 'ಶಕ್ತಿ' ನನ್ನ ಕುತ್ತಿಗೆಗೆ ಕೊಡಲಿಯಾಗುವುದೆಂದು ತಿಳಿದಿದ್ದರೂ ಆ ಘೋರ ನಿರ್ಧಾರಕ್ಕೆ ಒಂದೇ ಒಂದು ರಾತ್ರಿಯಲ್ಲಿ ಬಂದಿದ್ದಳಲ್ಲವೇ ?

"ಊ....ನೀನೇನೋ ಒದರಿ ನಡೆದುಬಿಟ್ಟೆ–ಆದರೆ, ನನ್ನ ಪಾಡು ? ನಾನು ಪಟ್ಟ ಮನೋಯಾತನೆ ?"...ಪತ್ರಿಕೆಯಲ್ಲಿನ ಭಾವಚಿತ್ರ ಹಂಗಿಸಿತು.

ಅವನ ಆ ಕಣ್ಣುಗಳು ನನ್ನನ್ನೇ ನೋಡುತ್ತಿರುವಂತೇ ನನ್ನನ್ನೇ ಆಪಾದಿಸಿರುತ್ತಿರುವಂತೆ, ಭಾಸವಾಯಿತು.

ಅತ್ಮಕ್ಕೆ ಎಲ್ಲದರ ಅರಿವೂ ಆಗುವುದಂತೆ...ಈಗ ಈ ಆತ್ಮಕ್ಕೂ ಎಲ್ಲಾ ತಿಳಿದು, ನೆಟ್ಟಗೆ ಇಲ್ಲಿಗೇ ಬಂದಿರುವುದೋ ? ನಾನದನ್ನ ಸಂತೈಸುವ ಬಗೆ ?

ಈಗದನ ಭಾವನೆಗಳ ಅರಿವು ಗೊತ್ತಾಗುವುದೆಂತು ?

ನನ್ನ ಆ ಕಠೋರ ನಿರ್ಧಾರವನ್ನು ಪತ್ರ ಮುಖೇನ ತಿಳಿಸಿದಾಗ ಆತ ಏನು ತಿಳಿದುಕೊಂಡನೋ.. ಏನೆಲ್ಲ ಅರ್ಥಮಾಡಿಕೊಂಡನೋ. ಎಷ್ಟು ಒದ್ದಾಡಿದನೋ, ದೇವರಿಗೇ ಗೊತ್ತು? ವಿಳಾಸವನ್ನು ಕೊಡದೆ ಊರ ಹೊರಗೆ ಎದ್ದಿದ್ದೆನು. ಹಿಂತಿರುಗಿದಾಗ ಅವನಿರಲಿಲ್ಲ. ಫಾರಿನ್ ಸ್ಕಾಲರ್ ಶಿಫ್ ಅನ್ನು ತೆಗೆದುಕೊಂಡು ಹೊರಟು ಹೋಗಿದ್ದನು.

ಅವನ ತಾಯಿಯ ಪತ್ತೆಯೂ ಇಲ್ಲ !

ನನಗೆ ಸಂತೋಷವಾಗಬೇಕಿತ್ತು, ಆದರೆ ಆಕಸ್ಮಾತ್ ಅರಿವಾದ ಒಂದು ಸಂಗತಿ !

ನಾನು ಪಟ್ಟ ಪಾಡು ?

"ನನ್ನ ಮಗನ ಇರುವನ್ನೇ ನಂಗೆ ತಿಳಿಸಲಿಲ್ಲ ?"—ಫೋಟೋದಲ್ಲಿನ ಅವನ ಕಣ್ಣುಗಳು ಅಪಾದಿಸಿದವು.

ನಿಜ–ಆದರೆ ನಾನು ಮತ್ತೇನು ಮಾಡುವಂತಿದ್ದೆ ? ಏನನ್ನು ಮಾಡಬೇಕಿತ್ತು?

ನನಗಾಗಿ ಕಾದು ನಿಂತಿದ್ದ ಗೋಪಿಯನ್ನು ಮದುವೆಯಾದೆನು.

ಛಾನು ವರ್ಷದ ಮಗುವಾಗಿದ್ದಾಗ ವಿಧವೆಯಾದೆನು.

ಅಂದಿನಿಂದ ಇಂದಿನವರೆಗೆ ಹಳ್ಳಿಯಲ್ಲಿ ಅಧ್ಯಾಪಕಿಯಾಗಿ ಮಗುವನ್ನು ಮುಂದಕ್ಕೆ ತರುವ ಕರ್ತವ್ಯ.

ಅವನು ?

ಅವನು ಅಮೋಘ ಚಿತ್ರಕಾರನಾದ ; ವಿಶ್ವವಿಖ್ಯಾತಿ ಗತಿಸಿದ ; ವಿಶಾಲ ಭವನವನ್ನು ಕಟ್ಟಿ ಸಾವಿರಾರು ಚಿತ್ರಗಾರರನ್ನು ಮುಂದಕ್ಕೆ ತಂದ.

ಆದರೆ ನಾನು ? ಅದಿರಲಿ ನನ್ನ........ಅಲ್ಲ........ನಮ್ಮ ಮುದ್ದು ಭಾನು ?

ಜಗತ್ತಿನ ಮೂಲೆ ಮೂಲೆಗಳಿಂದ ಕಲಾಭಿಮಾನಿ ಹುಡುಗರು ಬಂದು ಅವನ ವಿಶಾಲ ಭವನದಲ್ಲಿ ಸೇರಿದರು ; ಅವನಿಂದ ಕಲಿತರು ; ಪ್ರಸಿದ್ಧರಾದರು.

ಆದರೆ....ನಮ್ಮ ಭಾನು ? ಈ ನಿಷ್ಕಪಟ ಮಗು ಏನು ಪಾಪ ಮಾಡಿತ್ತು?

ಊರಿನವರಿಗೆಲ್ಲ ಸಿಕ್ಕಿತಂತೆ ಅವನ ಆದರ, ಪ್ರೋತ್ಸಾಹ.......

ಆದರೆ ಇದಕ್ಕೆ ?

"ಅದಕ್ಕೆ ಕಾರಣ ಯಾರು ?"–ಅವನ ಕಣ್ಣುಗಳು ಕೇಳಿದವು.

ಉತ್ತರಿಸಲಿಕ್ಕಾಗದೆ ನಾನು ತಲೆ ತಗ್ಗಿಸಿದೆ.

ಕಾರಣ ನಾನೋ, ಅಥವಾ ಅವನ ತಾಯಿಯೋ ?

ಆ ತಾಯಿಯ ವೇದನೆಯನ್ನು ಅರ್ಥಮಾಡಿಕೊಂಡು, ಆ ತಾಯಿಯ ಹಂಬಲವನ್ನು ಗುರುತಿಸಿ, ಆ ತಾಯಿಯ ತಪಸ್ಸನ್ನು ಪೂರ್ಣ ಮಾಡಲು ಸಹಕರಿಸಿದ ನನಗೆ ಹೀಗೆ ಶಿಕ್ಷೆಯಾದುದು ನ್ಯಾಯವೇ ?

ಒಬ್ಬ ತಾಯಿಯ ಆಸೆಯ ಚಿಗುರನ್ನು ಬೆಳೆಸಲು ಹೋಗಿ, ಅದೇ ತಾನೇ ಕಣ್ತೆರೆದ ಕುಡಿಯನ್ನು ಚಿವುಟಿ ಹಾಕಿದ ಅಪರಾಧಿ–ಈ ತಾಯಿ !

ನಾನು ಇಂತು ಭಾನುವಿನ ವಿಷಯದಲ್ಲಿ ತಿಳಿಯದೆ ಎಸಗಿದ ಅಪರಾಧದ ಅರಿವು ಅವನಿಗಾದಲ್ಲಿ ಏನಂದಾನು ?

ಆ ತಾಯಿ ಮಟ್ಟಿಗೆ ಈ ತಮ್ಮ ಮೊಮ್ಮಗನ ಇರವು ತಿಳಿದಿದ್ದಲ್ಲಿ ಹೀಗೆ ನನ್ನನ್ನು ದೂರ ಇರಿಸುತ್ತಿದ್ದರೆ ?

ಎಷ್ಟಾದರೂ ತಮ್ಮ ಚಿಗರು.......

ಏನೊಂದೂ ತೋಚದೆ ನಿತ್ರಾಣಳಾಗಿ ಕುಳಿತುಬಿಟ್ಟೆ ಆಗ—

"ಅಮ್ಮಾ........" ಭಾನು ಸ್ಕೂಲಿನಿಂದ ನೆಟ್ಟಗೆ ಒಳಬಂದ– "ನಮಗೆ........"

ಮಾತುಗಳ ಪ್ರವಾಹ ಧಡಕ್ಕನೆ ನಿಂತು ಹೋಯಿತು ; ಕಣ್ಣುಗಳು ಆ ಭಾವಚಿತ್ರದ ಮೇಲೆ ನಾಟಿದವು.

ಕರುಳು ಅರಿತಿತ್ತು.

"ಇವರು ನನ್ನ ತಲೆ ಸವರಿದರು ಅಂದು...." ಭಾನು ಬಿಕ್ಕಿ ಬಿಕ್ಕಿ ಅತ್ತನು. ಎಷ್ಟು ಒಳ್ಳೆಯವರು ! "ನಿನ್ನ ಚಿತ್ರ ತುಂಬಾ ಚೆನ್ನಾಗಿದೆ ! ಹೀಗೆ ಬರೀತಿರು ಮಗು-ನೀನೂ ನನ್ನ ಹಾಗೆ ಮುಂದೆ ದೊಡ್ಡ ಚಿತ್ರಗಾರ ನಾಗ್ತೀ !"–ಖಂಡಿತ ಆಗ್ತೀ ಅಂದಿದ್ರು, "ಬೇಕಾದ್ರೆ ಇಲ್ಲೇ ಬಂದಿರು....ನಾ ಹೇಳಿಕೊಡ್ತೀನಿ"-ಅಂತಾನೂ ಹೇಳಿದ್ರು, ನೀ ಒಪ್ಪಲಿಲ್ಲ, ಯಾಕಮ್ಮಾ? ನಂಗೂ ಅವರ ಹಾಗೇನೇ ದೊಡ್ಡ ಚಿತ್ರಗಾರ ಆಗ್ಬೇಕೂಂತ ಆಸೆ ಇತ್ತು, ಅದಕ್ಕೇ ಅಲ್ಲೇ ಇರೋಣ ಅಂತಿದ್ದೆ. ಯಾಕಮ್ಮಾ ಕರ್ಕೊಂಡು ಬಂದು ಬಿಟ್ಟೆ? ನಂಗವರನ್ನ ಕಂಡು ತುಂಬಾ ಇಷ್ಟ ಆಯ್ತು...."

ಹೃದಯ ಬಿರಿಯುವಂತೆ ಅತ್ತಿತ್ತು....ಮೂಕಶೋಖದಲ್ಲಿ,

ನಾನದರ ತಲೆಸವರಿದೆ, ಎದೆಗೆಪ್ಪಿಕೊಂಡೆ.

ನಿಜ....ಅದರ ಮಾತು ನಿಜ, ಆದರೆ ಮತ್ತಿನ್ನೇನು ಮಾಡುವ ಹಾಗಿದ್ದೆ? ವಿಚಿತ್ರ ಪರಸ್ಥಿತಿ ನಮ್ಮದು.

ಯಾವುದೋ ಚಿತ್ರಪ್ರದರ್ಶನದಲ್ಲಿ ಹುಡುಗ ಅವನ ಕಣ್ಣಿಗೆ ಬಿದ್ದಿದ್ದ. ಕರುಳು ಕರುಳನ್ನು ಅರಿಯಿತೇನೋ, ಅಂತೂ ಇಬ್ಬರೂ ಮಾತನಾಡು ವುದನ್ನು ಕಂಡ ನಾನು ದೂರ ಅವಿತು ನಿಂತಿದ್ದೆ.

ಕಣ್ತುಂಬ ನೋಡಿದೆ.

ಆ ತಾಯಿ ಪುಟ್ಟಿಗೆ ಅಡ್ಡ ಬರದಿದ್ದಲ್ಲಿ ಇಂದು ಅವರಿಬ್ಬರೂ ಕೈ ಕೈ ಹಿಡಿದುಕೊಂಡು ಪ್ರದರ್ಶನದ ತುಂಬಾ ಓಡಿಯಾಡುತ್ತಿದ್ದರು........

ನಾನು ಅಷ್ಟೇ ಹೆಮ್ಮೆಯಿಂದ......ಆಹಾ ಒಂದೇ ಜಂಬದಿಂದ ಮೆರಯುತ್ತಿದ್ದೆ.

ನಡುವೆ ಯಾರೋ ಅವನನ್ನು ಕರೆದಿದ್ದರು, ಅತ್ತಕರೆದೊಯ್ದಿದ್ದರು.

"ಈಗ ಬರ್‍ತೀನಿ ಇಲ್ಲೇ ನಿಂತಿರು ಮಗು...." ಎಂದು ಹೇಳಿ, ಗಲ್ಲ ಮುದ್ದಿಸಿ, ಒಳಹೋಗಿದ್ದ.

"ನಾನೀಗ ಬರೋಲ್ಲ, ಮತ್ತೆ ಅವರನ್ನ ಕಾಣಬೇಕು. .."ಆಮೇಲೆ ಬರೋದು ಹಠ ಮಾಡುತ್ತಿದ್ದ. ಭಾನುವಿನ ಕರಗಳನ್ನು ದರದರ ಎಂದು ಎಳೆದು ಹೊರತಂದಿದ್ದೆ.

ಮೂರು ನಾಲ್ಕು ದಿವಸ ಸಪ್ಪಗಾಗಿತ್ತು. ಮಗು; ಒಂದೆರಡು ವಾರ ಒದ್ದಾಡಿತು.

ಈಗ ಮತ್ತೆ ನೆನಪು ಕೆದಕಿತು. ತುಂಬಾ ಹುಡುಕಿರಬೇಕು " ಅಪರು ಆಮೇಲೆ ನಂಗೋಸ್ಕರ ಭಾನು ಹೇಳಿದ, ಆ ಭಾವಚಿತ್ರವನ್ನೆ ನೋಡುತ್ತಾ..." ಅಮ್ಮಾ ನೀನು ಯಾಕೆ ಹಾಗೆ ಮಾಡಿದೆ?"

ಉತ್ತರಿಸಲಾಗದೆ ಆ ಸರಳ ಕಣ್ಣುಗಳನ್ನು ಎದುರಿಸಲಾಗದೆ, ತಲೆ ತಗ್ಗಿಸಿದೆ.

ಯಾರದು ತಪ್ಪು--ಆ ತಾಯಿಯದೋ, ಇಲ್ಲ ಈ ತಾಯಿಯದೋ?

ಮಗನ ಭವಿಷ್ಯವನ್ನು ಭವ್ಯಮಾಡಲು ಹೊರಟ ಆ ಮಾತೆಯದೋ, ಇಲ್ಲ, ಮಗನ ಭವಿಷ್ಯವನ್ನು ಹಿಸುಕಿ ಹಾಕಿದ ಈ ಮಾತೆಯದೋ ?

"ಇನ್ನೊಂದ್ಸಲ ಅವರನ್ನ ನೊಡ್ಬೇಕು ಅನ್ನುತ್ತೆ, ಇನ್ಮೇಲಿಂದ ನೋಡೋಕ್ಕೇ ಆಗಲ್ಲ, ಅಲ್ವಾ?" ಮಗು ತನ್ನ ಹಂಬಲವನ್ನು ತೋಡಿ ಕೊಂಡಿತು.

ಹೊರಡಲಾರದೆ ಹೊರಟೆ ಅಂತ್ಯದರ್ಶನಕ್ಕೆ.

ಭವನದ ಮುಂದೆ ಒಂದೇ ಜನಸಂದಣಿ! ಅದರಲ್ಲಿ ನುಗ್ಗಿಕೊಂಡು ಹೋಗಿ, ಒಂದು ಘಳಿಗೆ—ಒಂದೇ ಘಳಿಗೆ ಮಾತ್ರ ಅವನ ಮುಖದರ್ಶನ...

ಅದೇನು ಶಾಂತತೆ! ಒಂದು ಬಗೆಯ ದೈವಿಕ ಶಾಂತತೆ ಆ ಮೊಗದ ಮೇಲೆ !

ಸುತ್ತ ಅವನ ಆಶ್ರಿತರು......ಬಡ ವಿದ್ಯಾರ್ಥಿಗಳು.......

"ಅವರುಗಳಿಗೇ ತನ್ನ ಭವನ, ಮಹಲು, ಸಕಲೈಶ್ವರ್ಯವನ್ನೂ ದಾನ ಮಾಡಿ ಬಿಟ್ಟಿದ್ದಾನಂತೆ ಪುಣ್ಯಾತ್ಮ !" ಯಾರೋ ಮಾತನಾಡಿಕೊಂಡರು.

ಹೆತ್ತ ಕರುಳು ಉರಿಯಿತು !

ಇಲ್ಲಿ ಅವನ ಕಂದಮ್ಮನಿಗೆ ಓದಿಗೆ ದುಡ್ಡಿಲ್ಲ...... ಹೊತ್ತಿಗೊತ್ತಿಗೆ ಊಟವಿಲ್ಲ. ಅವನಿಗೆ ಬರಬೇಕಾಗಿದ್ದ ಈ ಎಲ್ಲ ಆಸ್ತಿ ಆ ಬೇಡಾಡಿ ಜನಕ್ಕೆ !

ಈ ಭವನದ ಮೇಲೆ ನನ್ನ ಭಾನುವಿನ ಹೆಸರಿರಬೇಕಿತ್ತು ! ಆ ಮಹ ಲಿನಲ್ಲಿ ನಮ್ಮ ಭಾನು ಕಾಲೂರಬೇಕಿತ್ತು ! ಈ ಕಾರನ್ನು ನಮ್ಮ ಭಾನು ಬಿಡಬೇಕಿತ್ತು...ಈ ಎಲ್ಲಾ ಅನುತಾಪ, ಗೌರವ, ಎಲ್ಲವೂ ನನ್ನ ಭಾನು ವಿಗೇ ಸೇರಬೇಕಿತ್ತು !

"ಯಾರೋ ಬಡ ವಿದ್ಯಾರ್ಥಿ ಕೆಂಡವನ್ನು ಕೈಲಿ ಹಿಡಿದುಕೊಂಡು ಶವದ ಮುಂದೆ ಹೊರಟಾಗ ನನ್ನ ಸಂಕಟ ಹೆಚ್ಚಿತು. ಎದುರಿನಲ್ಲೇ ಸ್ವಂತ ಮಗ—ಆದರೂ ಬೀದಿಹೋಕರ ಕೈಲಿ ಸಂಸ್ಕಾರ !

ಶವ ಹತ್ತಿರ ಬಂದಾಗ ಹೇಳಿದಂತೆ ಆಯಿತು—"ನಾ ಗುರುತಿಸಿದೆ—ಗುರುತಿಸಿದೆ ! ಆದರೆ ...."...ಹೃದಯ ಬಿರಿದು ಬಂದ ರೋದನ... "ಏ ಯಾಕೆ ಹಾಗೆ ಮಾಡಿದೆ ಶೀಲಾ ?

೦ ೦ ೦

# ಸಂಗಾತಿ

—ಮಾಲತಿ ಪಟ್ಟಣಶೆಟ್ಟಿ

ಯುನಿವ್ಹರ್ಸಿಟಿಯ ಗೋವುರದ ಗಂಟೆ ಆರು ಬಾರಿಸಿತು....ಈ ಸಲವೂ ವಿಲಿಯಂ ಕ್ರಿಸ್‌ಮಸ್ ದಿನ ನನ್ನನ್ನು ಚರ್ಚಿಗೆ ಕರೆದೊಯ್ದುದ್ದು.... ಅಂದಿನ ತನ್ನ ಅಪ್ತ ವಿಶಯಗಳನ್ನು ಆಸೆಯ ಸಾವಿರ ಕ್ಯಾಂಡಲ್‌ಗಳ ಬೆಳಕು ಹೊತ್ತಿಸಿ ನನ್ನ ಪ್ರತಿಕ್ರಿಯೆಗಾಗಿ ಕಾಯ್ದುದ್ದು...ನೆನಪು ಗೋಪುರ ವಾಗಿ ಎದೆಬಡೆತ ಗಂಟೆಯಂತೆ ಬಡೆದುಕೊಳ್ಳ ತೊಡಗಿತು. ನೆನಪು ಬೀಗಿದಂತೆ ಬೆರಳುಗಳು ಶಿಥಿಲವಾಗಿ ಕೈ ಯಿಂದ ಅವ್ವನ ಫೋಟೊ ಜಾರಿ ಬೀಳತೊಡ ಗಿತು; ದೇಹವನ್ನೆಲ್ಲ ಕೈಯಾಗಿಸಿಕೊಂಡು ಎತ್ತಿ ಹಿಡಿದುಕೊಂಡೆ....

ಫೋಟೊದಲ್ಲಿ ಮಂದವಾಗಿ ಸೂಸುವ ಈನಗೆ...ಈಣಿಗೆಯಲ್ಲಿ ಇನ್ನೂಅರಳಿಕೊಂಡ ಅವಳ ಮಗ್ಧ ಚೆಲುವು...ಈಗ ಕೇವಲ ಫೋಟೊದಲ್ಲಿ ನೋಡಸಿಗುವ ಈ ನಗೆಗಾಗಿ ಆಗಾಗ ಹಪಹಪಿಸುತ್ತಿದ್ದೆ. ಈ ನಗೆಯ ದೀಪದ ಕೆಳಗೆ ಅದುಮಿಟ್ಟ ನೋವುಗಳ ಕತ್ತಲು ಅರಣ್ಯಗಳಲ್ಲಿ ಇಣುಕಲು ಪ್ರಯತ್ನಿಸಿದ್ದೆ...ಕಣ್ಣಾರೆನೋಡಿದ ದೃಶ್ಯಗಳು....ಕೇಳಿದಮಾತು...ಅವ್ವನ ಡ್ಯಾರಿಯಲ್ಲಿಯ ಸಾಲುಗಳು....ಒಂದೊಂದೆ ನನ್ನನ್ನಾಕ್ರಮಿಸಿ ದೇಹವೆಲ್ಲ ಬೆವರಿತು...ಕೈಕಾಲು ಕೊರಡಿನಂತಾದವು.

"ಆರಾತಲ್ರಿ ಬಾಯರ, ಅವ್ವಾ ಅದರನ್ನ ದವಾಖಾನೆಗೆ ಕರಕೊಂಡು ಹೋಗಬೇಕು ನೆಫು ಮಾಡ ಅಂದಿದ್ದಿರಿ!....! ಎನ್ನುತ್ತ ಮನೆಗೊಯ್ಯಲು ಇಟ್ಟ ಪುಸ್ತಕಗಳನ್ನೆತ್ತಿಕೊಂಡು ನಿಂತ ಈರಪ್ಪ.

ಪಾರ್ಶ್ವವಾಯುವಿನಿಂದ ಬಳಲುವವಳು ಅವ್ವನೋ. ನೀನೋ ತಿಳಿಯದಾಯಿತು ಕೈ ಕಾಲು ಚಲಿಸಲೊಲ್ಲವು, ಅವ್ವ ಜಡ್ಡಾಗಿ ಮಲಗಿದ ಈ ನಾಲ್ಕು ತಿಂಗಳಿಂದಲೂ ಅಳವಂತೆ ದೈಹಿಕವಾಗಿ ಮಾನಸಿಕವಾಗಿ ಜರ್ಜರಿತಳಾಗಿದ್ದೆ. ಯಾವಾಗಲೂ ಚಿಗರಿಯಂತೆ ಓಡಾಡಿಕೊಂಡು ಕೆಲಸ ಮಾಡುವ ನನಗೆ ಯಾವುದರಲ್ಲಿಯೂ ಆಸಕ್ತಿ ಇಲ್ಲ. ಕುಳಿತಲ್ಲೆ ಕುಳಿತು. ನಿಂತರೆ ನಿಂತೇ ಯೋಚನೆಯಲ್ಲಿ ಮುಳುಗಿಬಿಡುತ್ತಿದ್ದೆ.

ಪುಸ್ತಕಗಳನ್ನು ಮತ್ತೆ ಮೇಜಿನ ಮೇಲಿಟ್ಟು, ಡಿಪಾರ್ಟ್‌ಮೆಂಟ ಕೋಣೆಯ ಕಿಡಕಿಯ ತೆರೆದ ಒಂದು ಫಡಕನ್ನು ಥಡ್ ಎಂದು ಮುಚ್ಚಿ ಈರಪ್ಪ ಮತ್ತೊಮ್ಮೆ ನನ್ನನ್ನೆಚ್ಚರಿಸಿದ...ಸುತ್ತಲೂ ಕತ್ತಲೆ ತುಂಬಿಕೊಳ್ಳುತ್ತಿರುವುದನ್ನು ನೋಡಿ ಗಡಬಡಿಸಿ ಎದ್ದೆ.

ಮನೆಯ ಗೇಟಿನ ಹತ್ತಿರ ಹಾರ್ನ ಬಾರಿಸಿದಾಗ ಕೆಲಸದ ನಿಂಗಿ ಓಡುತ್ತ ಬಂದು ಬಾಗಿಲು ತೆರೆದಳು, ಕಾರನ್ನು ತಿರುಗಿಸಿ ಗೇಟ ಹೊರಗೆ ಬಿಟ್ಟು ಬಂದು ಚಪ್ಪಲು ಕಳಿಯುವಾಗ ಜೊತೆಯಲ್ಲಿ ಇದ್ದ ವಿಲ್ಲಿಯ ಬ್ರೌನ್ ಷೂಜ್‌ಗಳನ್ನು ನೋಡಿ ಖುಷಿಯಾಯ್ತು...ಅವನಿಗೆ ಐದು ಗಂಟೆಗೆ ಬರಲು ಹೇಳಿ ಮರೆತಿದ್ದಕ್ಕೆ ನನ್ನ ಮರವನ್ನು ಶಪಿಸುತ್ತ ತಿರುಗಿದೆ... ಮುಗುಳುನಗುವ ಮೂರ್ತಿಯೊಂದು ಇದುರಾಯ್ತು ಹೊಳೆಯುವ ಆ ಕಣ್ಣುಗಳು...ನನಗೆ ಸೇರುವ ಅದೇ ಬಿಳಿ ಶರ್ಟು....ಅದನ್ನು ತುಂಬಿ ತುಳುಕುವ ಶುಭ್ರವರ್ಣವಾಗಿ ಅವನನ್ನು ಅಪ್ಪಿಬಿಡಲೆ ಎಂಬಾಸೆ ಕ್ಷಿಪಣಿಯಂತೆ ಹೊರಟು ನಿಂತಿತು....ಒಳಗೆ ಅವ್ವನ ಕೆಮ್ಮು...ಆ ದಿಸೆಗೆ ಹೆಜ್ಜೆ ಇಡುತ್ತ.........

"sorry ವಿಲಿ ನಿನಗ ಬರಲಿಕ್ಕೆ ಹೇಳಿ ಮರ್ತS ಬಿಟ್ಟೆ ನನ್ನ ತಲೆಗೇನಾಗೆದೊ ಏನೊ; ಏನೂ ನೆನಪಿರವಲ್ಲದು"... ಎನ್ನುತ್ತ ಅವನು ನಿಂತ ಕೋಣೆಯ ಬಾಗಿಲನ್ನು ದಾಟತೊಡಗಿದೆ.

"ನೀ ಮರೀತೀ ಅಂತ ನೆನಪು ಇಡಲಿಕ್ಕೆ ನನ್ನ oppiont ಮಾಡಿ ಕೊಂಡ್ರು problem ಉಳಿಯೂದಿಲ್ಲ...." ಕಿಡಿಗೇಡಿತನದ ಮಾತುಗಳಿಂದ ಮನಸ್ಸಿನಲ್ಲೆ ಆನಂದಿಸುತ್ತ ನಡೆದಿದೆ.

ದಿಂಬಿಗೆ ಆತುಕೊಂಡು ಅವ್ವ ಕಾಟಿನ ಮೇಲೆ ಕುಳಿತಿದ್ದಳು. "ಎಷ್ಟೊತ್ತವ್ವ ಬರೋದ್ಯು. ವಿಲಿಯಂಗ ಬಾ ಅಂದಿದ್ದೆಂತ....ಒಂದು ತಾಸಾತು....ಮದ್ಲ ಚಹಾ ಮಾಡಿಕೊಡು ಹೋಗು"ಎಂದು ಅಜ್ಞಾಪಿಸಿದಳು

ಮೂವರೂ ಚಹಾ ಕುಡಿದೆವು, ಏಳು ಗಂಟೆಗೆ ಡಾಕ್ಟರ ಮಿಸೆಸ್ ದೇಸಾಯಿಯವರು ಅವ್ವನ್ನನು ಕರೆದುಕೊಂಡು ಬರಲು ಹೇಳಿದ್ದರು. ಅವ್ವನಿಗೆ ತಲೆ ಬಾಚಿ, ಮುಖತೊಳಿಸಿ ಶಾಲು ಹೊದಿಸಿ, ಸಾವಕಾಶ ನಡೆಸಿ ಕೊಂಡು ನನ್ನ ಜೊತೆ ಮುಂದೆ ಕೂಡ್ರಿಸಿದೆ. ನನ್ನ ಥೀಸಿಸ್ ಕೊನೆಯ ಅಧ್ಯಾಯವನ್ನು ಪರಾಮರ್ಶಿಸಲು ವಿಲಿಯ ಕೈಗೆ ಕೊಡುತ್ತ ಅರ್ಧ ಗಂಟೆಯಲ್ಲಿ ತಿರುಗಿ ಬರುವುದಾಗಿ ಹೇಳಿ ಹೊರಟೆ.

ದವಾಖಾನೆಯಿಂದ ಮರಳಿದ ನಂತರ ಕಾಟಿನಲ್ಲಿ ಮಲಗುತ್ತ "ವಿಲಿ ಯುಂನ ತಾಯಿ ನಿನಗ ಊಟಕ್ಕೆ ಬರಲಿಕ್ಕೆ ಹೇಳಿ ಕಳಸ್ಯಾರ. ಲಗೂನ ಹೋಗಿ ಬಾ ಎಂದಳು.

ಅವ್ವ ರಾತ್ರಿ ಊಟಮಾಡುತ್ತಿರಲಿಲ್ಲವಾದ್ದರಿಂದ ಬೌರ್ನವಿಟಾ ಮಾಡಿ ಜೊತೆಗೆ ಬಿಸ್ಕಿಟು ಇಟ್ಟು ಕೊಟ್ಟು ಮುಂದೆ ಕುಳಿತೆ.

"ತಿರಗಿ ಬರಲಿಕ್ಕೆ ಹೊತ್ತಾದೀತು ನೀ ಹೋಗು. ನಿಂಗಿ ನನ್ನ ಹತ್ತರ ಇರತಾಳ...."ಕಪ್ಪ ಬಸಿ ಇಡುತ್ತ ಹೇಳಿದಳು....ನಿಂಗಿಗೆ ಮುಂದಿನ ಲ್ಯಾಟು ಇಟ್ಟು ಬಾಗಿಲು ಹಾಕಿಕೊಳ್ಳಲು ಹೇಳಿದೆ.

ಮನೆಯಲ್ಲಿ ಓದಲು ಥೀಸಿಸಿನ ಕೊನೆಯ ಅಧ್ಯಾಯವನ್ನು ಜಾಗರೂ ಕತೆಯಿಂದ ತನ್ನ ಬ್ರೀಫ್‌ಕೇಸಿನಲ್ಲಿಟ್ಟುಕೊಂಡು ವಿಲಿ ನನ್ನ ಜೊತೆ ನಡೆದ.

ವಿಲಿಯಮ್ ಈಗಿರುವ ಮನೆ ಸೆಂಟ್ ಜೋಸೆಫ್ ಚರ್ಚಿಗೆ ಹತ್ತಿರವಲ್ಲೇ ಇತ್ತು. ತಂದೆ ಜೊಸೆಫ್ ಕಾರ್ಡೋಜೋ ಸಾಯುವದಕ್ಕೂ ಮೊದಲು ಇದೊಂದು ಆಸ್ತಿ ಮಾಡಿಟ್ಟಿದ್ದರು. ಇಂಗ್ಲೀಷ್ ಕಾಟೇಜ್ ಥರದ ಮನೆ, ಮನೆ ಚಿಕ್ಕದಾಗಿದ್ದರೂ ವಿಸ್ತಾರವಾದ ತೋಟ ಸುತ್ತಿಕೊಂಡಿತ್ತು. ಕಾರು ನಿಂತದ್ದನ್ನು ನೋಡಿ ಮಿರಿಯಮ್ ಸಿಲ್ವಿಯಾ ಬಾಗಿಲಿನಿಂದ ಮುಗಳ್ನ ಗುತ್ತ ಮುಂದೆ ಬಂದು ಸ್ವಾಗತಿಸಿದರು. ಅವನ ಆರೋಗ್ಯದ ಬಗ್ಗೆ ಕೇಳುತ್ತ ನನ್ನ ಬೆನ್ನಮೇಲೆ ಕೈಯಾಡಿಸಿ ಧೈರ್ಯದ ಮಾತು ಹೇಳಿದರು.

ನಾಲ್ವರೂ ಊಟ ಮಾಡಿ ಕೈತೊಳೆಯುತ್ತಿರುವಾಗಲೇ ಸಮೀಪದ ಕಾನವೆಂಟಸ್ಕೂಲಿನ ಗೋಪುರದ ಗಂಟೆ ಒಂಬತ್ತು ಬಾರಿಸಿತು. ಅವ್ವನ ಆಸ್ವಸ್ಥಿತಿಗೆ ಚಿಂತಿತಳಾದದ್ದನ್ನು ಗ್ರಹಿಸಿದ ಮಿರಿಯಮ್ ಹೀಗೆ ಅನೇಕ ಸಲ ಊಟಕ್ಕೆ ಕರೆದಿದ್ದರು. ಅವರ ಆತ್ಮೀಯತೆ ಧರ್ಮ, ಮತದ ಗೋಡೆ ಗಳನ್ನು ಕೆಡವಿ ಎರಡೂ ಕುಟುಂಬಗಳ ನಡುವೆ ಸುಂದರ ಸೇತುವೆ ಕಟ್ಟಿತ್ತು.

ಡ್ರೈವ ಮಾಡಲು ವಿಲಿಯಂ ಕುಳಿತ....ನಾನು ಹತ್ತಿರದ ಸೀಟಿನಲ್ಲಿ ಮುಂದೆ ಕುಳಿತೆ. ಕಾರು ಯೂನಿವರ್ಸಿಟಿಯ ದಾರಿಗೆ ಟರ್ನ್ ತೆಗೆದು ಕೊಂಡು ಹೊರಟಿತು........"

"ಇದು ಯೂನಿವ್ಹರ್ಸಿಟಿ ದಾರಿ. ಈ ಕಡೆ ಯಾಕ?"ಎಂದೆ.

ನಿನ್ನ ಹತ್ತರ ಸ್ವಲ್ಪ ಮಾತಡಬೇಕಿತ್ತು...ಒಂದು half an hour ಇಲ್ಲೇ ಗಾರ್ಡನ್‌ದೊಳಗೆ ಕೂಡೋಣs?"

"..........".

ನನ್ನ ಮೌನ ಅವನನ್ನು ಇರಿದಂತಾಯ್ತೋ ಏನೊ ಕಾರನ್ನು ಗಕ್ಕನೇ ರೋಡಿನ ಪಕ್ಕಕ್ಕೇ ನಿಲ್ಲಿಸಿದ .. ನಿಮಿಷ ಕಳೆದಂತೆ ಮೌನದ ಅಲಗು ಹರಿ ತಾಗತೊಡಗಿತು. ಸುತ್ತಲಿನ ಶೀತಲ ನೀರವತೆ ಒಳಗಿಳ ಅಗ್ನಿಯನ್ನು

ಕೆದರುತ್ತಿತ್ತು...ಬೆಳುದಿಂಗಳು ಮಾತ್ರ ನಮ್ಮನ್ನು ನಿರ್ಲಕ್ಷಿಸಿ ಕ್ಷಣಕ್ಷಣಕ್ಕೆ ಜಗಿಯುತ್ತ ಹೊರಟಿತ್ತು....ಇಡೀ ವಿಶ್ವದಲ್ಲಿ ನಾನು–ವಿಲ್ಲಿ ಇಬ್ಬರೇ ಇಬ್ಬರು ಇದ್ದಂತೆ ಭಾಸವಾಯ್ತು. ಸೀಟಿನ ಆ ತುದಿಗೆ ಅವನು, ಈ ತುದಿಗೆ ನಾನು. ಚಿಕ್ಕವಳಿದ್ದಾಗ ಅವನ ಜೊತೆ ಸೀಸೋ ಆಟದ ಹಲಿಗೆ ಯಾಟ ನೆನಪಾಯ್ತು. ಒಬ್ಬರಿಗಾಗಿ ಒಬ್ಬರು ಕಾಯುತ್ತಾ ಕುಳಿತೆವು.

"ಹೇಳು....ಏನೊ ಹೇಳಬೇಕೂ ಅಂದೆಲ್ಲ..."

"ನಿನ್ನೆ ಸಂಜೆಗೆ ಬೆಂಗಳೂರ ಯೂನಿವ್ಹರ್ಸಿಟಿಯ reader ಪೋಸ್ಟಗೆ appointment ಆರ್ಡರ್ ಬಂತು."

"ವಾ ....ವಾ .... congratulations....ಇದನ್ನ ಹೇಳಲಿಕ್ಕೆ ಇಷ್ಟೆಲ್ಲ ನಾಟಕಾ ಯಾಕ ಮಾಡಿದಿ? ಅಲ್ಲೆ ಮನ್ಯಾಗ ಹೇಳಿದ್ದರ ಅವ್ವಗ. ನಿಮ್ಮ ಅವ್ವಗ ಎಲ್ಲರಿಗೂ ಖುಷಿ ಆಗತಿತ್ತಲ್ಲ? ನೀ interview ಕ್ಕ ಹೋಗುವಾಗs ಅಂದಿದ್ದೆ ನಿಂದು ಫೊರೆನ್ P.L.D ಅದ... ಅಲ್ಲದ ಈಗಾಗಲೇ ಹನ್ನೆರಡು ರಿಸರ್ಚ್ ಪೇಪರು ಪಬ್ಲಿಶ್ ಆಗ್ಯಾವ... ನಿಂದs ಕೇಸು select ಆಗತದ ಅಂತ...ಇದನ್ನ ಹಿಂಗ ಅಳಕೋತ ಯಾಕ ಹೇಳಬೇಕಿತ್ತು?"

"......................"

"ನಾ ಆಗಿದ್ದರ ಕುಣಕೋತ ಹೇಳತಿದ್ದೆ........ಊರೆಲ್ಲ ಸುದ್ದಿ ಮಾಡತಿದ್ದೆ"

"......................"

"ಯಾಕ ? ನಿನಗ ಸಂತೋಷಾ ಆಗಿಲ್ಲೇನು ?"

"......................"

"ಅರೆ ನಿನಗೇನಾಗೇದ? ಮಾತಾಡಲ್ಲ?"

"... ......... ......"

"ಎಲ್ಲಿ ಎನ್ನುತ್ತ ಸ್ಟಿಯರ್ ಮೇಲಿದ್ದ ಅವನ ಕೈಮೇಲೆ ಕೈ ಇಟ್ಟೆ. ನನ್ನ ಕೈಯನ್ನು ಹಿಡಿದೆಳೆಯುತ್ತ

"ಮೋನಾ......" ಎಂದ"

"ಹೂಂ..." ಎನ್ನುವಾಗ ಅವನ ಪ್ರಶ್ನೆಯ ನೆರಳು ನನ್ನ ಮೇಲೆ ಬಿದ್ದಿತ್ತು.

"ಮೋನಾ... ಮತ್ತ ಅದs ಪ್ರಶ್ನೆ ಕೇಳತೀನಿ .. ಈ ಎಂಟು ವರ್ಷಗ ಳಿಂದ ನಾವಿಬ್ಬರೂ ಪ್ರೀತಿಯ ಹಾದಿಯೊಳಗ ನಡದs ನಡಿಲಿಕ್ಕೆ ಹತ್ತೇವಿ....ನೀ ಆ ತುದಿಗೆ...ನಾ ಈ ತುದಿಗೆ ಈ ಅಂತರ ತಡದು ಹಾಕಲಿಕ್ಕೆ ಆಗೂದಿಲ್ಲೇನು?"

"............... .."

"ನೀ ಎಷ್ಟ helpless ಇದ್ದಿ ಅಂತ ಗೊತ್ತದ ಮೋನೀ....ಅವ್ವನ ಜವಾಬ್ದಾರಿ paralytic attack ಆದ ಮ್ಯಾಲಂತೂ ಇನ್ನೂ ಹೆಚ್ಚಾಗೇದ...ನನ್ನ ಮದವಿ ಆದ್ರ ಅವ್ವನ್ನ ಹತ್ರ ಇಟಕೊಳ್ಳೋದು ಬ್ಯಾಡಾ ಅಂತೇನಿ ಅಂತ ಸಂಶಯ ಅದ ಏನು?"

"..... ......................"

"ಏ ಹುಡುಗೀ...ನೀ ಎಷ್ಟು ಕ್ರೂರ ಇದ್ದಿ !! ನನ್ನ ಬಗ್ಗೆ ಯಾವ feeling ಇಲ್ಲೇನು?"

ಭಾವೋದ್ವೇಗ ಹೆಚ್ಚಾಗಿ ಕಂಠ ತುಂಬಿಕೊಂಡಿತು...."ಮದ್ಲ ನೀನು

ಬೆಂಗಳೂರ ಯೂನಿವ್ಹರ್ಸಿಟಿಯ ಪೋಸ್ಟ್‌ಗೆ join ಆಗು........ನಿನ್ನ ಈ ಪ್ರಶ್ನೆಗೂ ಅದಕ್ಕೂ ಏನ ಸಂಬಂಧsa ?" ಅದ

"ನನ್ನ ಮೂಲಭೂತ ಪ್ರಶ್ನೆ ನೌಕರಿ ಅಲ್ಲ ನೀ ಮದುವೀ ಆಗಿತೀಯೋ ಇಲ್ಲೋ ಅನ್ನೋದು..."

ಎಲ್ಲಿ ಅಡಗಿತ್ತೊ ದುಃಖದುಬ್ಬರ, ಕಣ್ಣೀರಿನ ಪ್ರಪಾತ ! ತಡೆಯು ಲಾಗದೆ ಧುಮ್ಮಿಕ್ಕುತ್ತಾ ಹೊರಟಿತು.

"ನಿನಗೆ ನಾ ಒತ್ತಾಯ ಮಾಡೂ ಲ್ಲಾ....ಈ ಪ್ರಶ್ನೆಯಿಂದ ನಿನಗೆ ಇಷ್ಟು ದುಃಖ ಆಗತಿದ್ದರೆ ಇನ್ನ ಮುಂದೆ ಅದನ್ನೆಂದೂ ಎತ್ತೂದಿಲ್ಲ. promise ಆದ್ರು ನಿನ್ನ ಮೌನದ ಉತ್ತರದಿಂದ ಇಲ್ಲಿತನಕಾನ ನಿನ್ನಿಂದ ದೂರ ಆಗಲಿಕ್ಕೆ ಪ್ರಯತ್ನಪಟ್ಟೆ. ದೂರಿದ್ದ ನೋಡಿದೆ, ಮಾತುಬಿಟ್ಟು ನೋಡಿದೆ...ಇನ್ನೂ ದೂರ ಅಮೇರಿಕಾಕ್ಕೆ P.L.D. ಅಂತ ನೆವ ಮಾಡಿ ಕೊಂಡು ಹೋದೆ... ಡಿಗ್ರಿ ಸಲುವಾಗಿ ಹೋಗಲಿಲ್ಲ. ಆದ್ರು ಸಂಪೂರ್ಣ ನಿನ್ನ ಮರೀಲಿಕ್ಕೆ ಹೆಣಗಿದೆನೂ ಅಷ್ಟ double speed ನಿಂದ ನಿನ್ನ ಕಡೆ ಧಾವಿಸಿ ಬರತಿದ್ದೆ. ನನ್ನ ಮನಸ್ಸು ನನ್ನ ನಿಯಂತ್ರಣದೊಳಗಿಲ್ಲ.... ನೀ ಇರದಿದ್ದರ ನಾ ಬದಕೂದು ಆಗೂದಿಲ್ಲ ಅಂತ ಅನಸಲಿಕ್ಕೆ ಅತ್ತೇದ ಮೋನೀ....

ಎಲ್ಲಿಯ ಕೈಯಿಂದ ಸಾವಕಾಶ ಕೈಬಿಡಿಸಿಕೊಳ್ಳತ್ತ: "ನಿನ್ನ ಈ ಮಾತು ಕೇಳಿ ನನಗ ಅಪ್ಪನ ನೆನಪು ಚಕ್ಕನೆ ಹೊತ್ತಿ ಸುಡಲಿಕ್ಕೆ ಹತ್ತು-ಡ್ಯಾರಿ ಯೊಳಗ ಅವ್ವ, ಅಪ್ಪನ ಮಾತು ಬರದಿಟ್ಟಾಳ....ಎಷ್ಟು ಆಶ್ಚರ್ಯ ಎಲ್ಲಿ ನೀನೂ ditto ಹಂಗ ಮಾತಾಡಲಿಕ್ಕೆ ಹತ್ತಿ....ಪ್ರೇಮದ ಭಾಷೆ. ಕಾಲ, ಸ್ಥಳಾ, ವ್ಯಕ್ತಿಗಳ ಅಂತರಗಳನ್ನು ಮೀರಿ ಎಷ್ಟು ಒಂದs ಥರಾ ಇರತದೆಲ್ಲಾ ಅಂತ !! ಅವ್ವ, ಅಪ್ಪನ ಕಥಿ ನಿನ್ನ ನನ್ನ ಕಥಿ ಎಷ್ಟು ತಮಾಸ ಆಗಿತಾ ಹೊರಟದ !....ಎಲ್ಲಿ ದಯವಿಟ್ಟು ಈ ಮಡದಿ ಪ್ರಶ್ನೆ ಒಂದು ಕೇಳಬ್ಯಾಡಾ ......" "ಇಂದನನ್ನ ಕ್ರೂರ ಅಂತ ತಿಳಿ .. ಆದ್ರು ನಿನ್ನ ಉತ್ತರ, ಅವರ ಕಾರಣ ಮಾತ್ರ ಸ್ಪಷ್ಟ ಹೇಳಿಬಿಡು...."

ಒಂದೆರಡು ನಿಮಿಷ ನನ್ನಷ್ಟಕ್ಕೆ ನಾನೇ ಅತ್ತೆ.......ದುಃಖದುಬ್ಬರ

ವನ್ನು ಹತ್ತೋಟಿಯೊಳಗೆ ತರುತ್ತ.......

"ಅಪ್ಪ ನಿನ್ನ ಹಾಂಗ ಅವ್ವಗೆ ಬಾಲ್ಯದ ಸಂಗಾತಿ. ಪ್ರೀತಿಸಿ ಮದುವೆಯಾದ ನಾ ಹುಟ್ಟಿದ ಎರಡು ವರ್ಷದೊಳಗೆ ಹೊರಗೆ ಬೇರೊಬ್ಬಳ ಜೊತೆಗೆ ಸಂಬಂಧ ಇಟ್ಟುಕೊಂಡ......ನಾನು ಅಪ್ಪನ್ನ ಭಾಳ ಪ್ರೀತಿಸುತ್ತಿದ್ದೆ...ಆದರೆ ಹತ್ತು ವರ್ಷಗಳಾದ ಮೇಲೆ ತಮ್ಮನ್ನು ಸಂಪೂರ್ಣ ನಿರ್ಲಕ್ಷಿಸಿ ದೂರವಾದ...ಆಮೇಲೆ ನಾ ನಿನ್ನ ಸಮೀಪ ಹೆಚ್ಚು ಬರಲಿಕ್ಕೆ ಹತ್ತಿದೆ ಕಾಲೇಜಿನಲ್ಲಿ ನೀ ತೆಗೆದುಕೊಂಡ ವಿಷಯವನ್ನು ತೆಗೆದುಕೊಂಡೆ, ನೀ ಪ್ರಯತ್ನಿಸಿದ ಊರಲ್ಲೆ ನೌಕರಿಗೆ ಪ್ರಯತ್ನಿಸಿದೆ". ಇದೆಲ್ಲ ನನ್ನ choice ಪ್ರಕಾರ ಅಲ್ಲ ನೀ ಹತ್ತಿರ ಇರಲೀ ಅಂತ ನಿನ್ನಂತೆ ಮಾಡಿದೆ...ಪ್ರೀತಿಸುವದು ಸ್ವಾಭಾವಿಕ ಅದನ್ನ ನಿಯಂತ್ರಿಸಲಿಕ್ಕೆ ಸಾಧ್ಯ ಇಲ್ಲ....ಆದ್ರ ಮದವಿ ಆಗೋದು ಬಿಡೋದು ನಮ್ಮ ಕೈಯೊಳಗದ...ನಾನು ಮದವಿ ಮಾಡಿಕೊಳ್ಳೊದು ಸಾಧ್ಯ ಇಲ್ಲ—ಎಲ್ಲಿ ನಾ ಪ್ರೀತಿಸಿದ ನಿನ್ನೊಳಗೆ ಅಪ್ಪನ ರೂಪ ಕಂಡು ಹೌಹಾರತೀನಿ"

"ನಿನ್ನ ತಂದಿ ಹಾಂಗ ಎಲ್ಲಾರೂ ಯಾಕ ಮೋಸತಾರ ?....ನನ್ನ ಬಗ್ಗೆ ನಿನಗೆ ವಿಶ್ವಾಸ ಇಲ್ಲೇನು ?"

"ಈಗ ಅದ, ಆದ್ರ ಮದುವೆಯಾದ ಮೇಲೆ ಗಂಡಸು ಬದಲಾಗತಾನ ......ತನ್ನ ಪ್ರೇಮಾ ಪ್ರೀತಿ ಅಂತ ಅಪ್ಪ ಅವ್ವನ ಧಿಕ್ಕರಿಸಿ ಒಂದು ಹಾದಿ ಹಿಡದಾ...ನಾನೂ ಹಿಂಗ ಇನ್ನೊಂದ ಹಾದಿ ಹಿಡದ್ರ ಅವ್ವನ ಗತಿ? ಅಂಗೈಯೊಳಗಿನ ಅರಗಿಣಿಹಾಂಗ ಬೆಳಿಸಿ ವಿದ್ಯಾ ಕೊಟ್ಟಳು. ತನ್ನ ದುಃಖ ಮರತು ತನ್ನ ಪ್ರೀತಿ ಮಾಡಿದ್ಲು–" ಮಧ್ಯದಲ್ಲೆ ಮಾತು ಮುರಿಯುತ್ತ...

"ಮದಿವಾದ ಮ್ಯಾಲೆ ನಿನ್ನ ತಾಯಿಯನ್ನು ನಮ್ಮ ಹತ್ತಿರ ಇಟ್ಟುಕೊಳ್ಳೋದಿಲ್ಲ? ನೀ ಅವರನ್ನ ಬಿಟ್ಟುಬರಬೇಕು ಅಂತ ಕನಸಿನೊಳಗಾದರೂ ವಿಚಾರ ನನಗೆ ಮಾಡಲಿಕ್ಕೆ ಸಾಧ್ಯ ಆಗತದನs ಹೇಳು ನೋಡೋಣ ?"

"ಮದುವಿ ಆದಮ್ಯಾಲೆಗೊತ್ತಿಲ್ಲದಾಗ ಪರಿಸ್ಥಿತಿ ಬದಲಾಗತದ,ನಾನೇ

ಆಗಲಿ ನೀನs ಆಗಲಿ ಅವ್ವನ್ನ ಆಲಕ್ಷಿಸಬಹುದು ಬಿರುಸು ಆಡಬಹುದು ಆಕೀ ಈಗಾಗಲೇ ಸಾಕಷ್ಟು ಅನುಭವಿಸ್ಯಾಳ. ಇನ್ನಾದರೂ ಸುಖ ಸಮಾಧಾನ ಆಕಿ ಜೀವನದೊಳಗ ಬ್ಯಾಡs ?– ಅದಕ್ಕ ಮದವಿ ವಿಚಾರ ಬಿಟ್ಟು ಅವ್ವಗ ನಾ ಜೋಡಾಗಿ, ನನಗ ಅವ್ವ ಜೋಡಾಗಿ ಇರಬೇಕು—ಇಬ್ಬರೂ ಮುಂದೆ ಒಬ್ಬರಿಗೊಬ್ಬರು ಸಂಗಾತಿಯಾಗಿ ಇರಬೇಕು ಅಂತ ಯೋಚಿಸ್ತಿನಿ ಜೀವನದೊಳಗ ಗಂಡಸs ಜೋಡಾಗಿ ಇರಬೇಕು ಅಂತ ಏನಿಲ್ಲಲ್ಲ ? ಪ್ರೀತಿಯಿಂದ ಯಾರಾದರೂ ಇಬ್ಬರೂ ಕೂಡಿ ಇರಬಹುದು...ನಾ ಅವ್ವನ್ನ ಬಿಟ್ಟು ನಿನ್ನ ಜೊತೆ ಹೋದರೆ ಆಕೀಗೆ ಜೋಡಿಯಾರಿದ್ದಾರ ? ನೀನು ಇನ್ನೊಬ್ಬ ಹುಡುಗಿನ್ನ ಮದವಿ ಆಗಬಹುದು ಜೀವನಾ ಕಳೀಬಹುದು ಆದ್ರ ಅವ್ವಗ ನನ್ನ ಬಿಟ್ರ ಯಾರಿದ್ದಾರ ? ಪ್ರೀತಿಗಿಂತ ಕರ್ತವ್ಯ ಭಾಳ ದೊಡ್ಡದ್ದು........"

ಮಾತಿನ ಗಾಂಭೀರ್ಯವನ್ನು ಭೇದಿಸುವಂತೆ ಯುನಿವ್ಹರ್ಸಿಟಿ ಟಾವರಿನಲ್ಲಿ ಹನ್ನೊಂದು ಹೊಡೆಯಿತು. ಮಾತಿನ ಮಹಾಪೂರಕ್ಕೆ ಕಾಲ ದೊಡ್ಡ ಅಂತರವೊಡ್ಡಿತು.

"ಹೊತ್ತಾತ್ತು. ಅವ್ವ ನಿನ್ನ ದಾರಿ ನೋಡಿತಿರಬಹುದು. ಇಂದ ನಿನ್ನ ಭಾಳ ನೋಯಿಸೇನಿ ಮೋನಾ ನೀ ಸಮಾಧಾನ ಮಾಡಕೋ— You need rest..." ಎನ್ನುತ್ತ ಕಾರ start ಮಾಡಿದ-ಮತ್ತೆ ಇಬ್ಬರ ನಡುವೆ ಮೌನ ಹೆಪ್ಪುಗೊಂಡಿತು—

* * * * *

ಮಾರನೆ ದಿನ ವಿಲ್ಲಿ departmentಗೆ ಬರಲೇ ಇಲ್ಲ. ಈರಪ್ಪನನ್ನು ಕೇಳಿದಾಗ ರಜೆ ತೆಗೆದುಕೊಂಡನೆಂದು ತಿಳಿದೆ...ಮನಸ್ಸು ತಲ್ಲಣಗೊಂಡಿತು. ಮನೆಗೆ ಹೋಗಿ ವಿಲಿಯಮ್‌ನ ತಂಗಿ ಸಿಲ್ವಿಯನ್ನು ಕೇಳಿದೆ-ಬೆಳಿಗ್ಗೆ ೮ ಗಂಟೆಗೆ ಹೊರಗೆ ಹೋದವ ಊಟಕ್ಕೂ ಬಂದಿಲ್ಲ ಎಂದು ಹೇಳಿದಳು....

ಅವನನ್ನು ನೋಡದೆ ಮನಸ್ಸಿಗೆ ಸಮಾಧಾನವಿಲ್ಲದಾಯ್ತು — ಮನೆಗೆ ಬಂದು ಅವ್ವನ ಕೋಣೆಯ ಚೌಕಟ್ಟಿಗೆ ಆತು ನಿಂತೆ....ಇದುರಿಗೇ ವಿಲ್ಲಿ ! ಸಹನೆಯ ಕಟ್ಟೆಯೊಡೆಯಿತು—ಅಪ್ಪನತ್ತ ಧಾವಿಸಿ ಅವಳನ್ನಪ್ಪಿ ಮೂಕ ವಾಗಿ ರೋದಿಸಿದೆ.

* * * * *

ಮಾರನೆಯ ದಿನ ಸಂಜೆಗೆ ಅವನ ಪತ್ರ-ಹದಿನೈದು ದಿನಗಳ ರಜೆ ತೆಗೆದುಕೊಂಡು ತನ್ನ ಹಳೆಯ ಗೆಳೆಯನನ್ನು ಭೆಟ್ಟಿಯಾಗಲು ಹೋಗಿರುವ ದಾಗಿ ತಿಳಿಸಿ ಬರೆದಿದ್ದ-ತನಗೆ ಯಾವ ಮಾನಸಿಕ ತೊಂದರೆಯಾದರೂ ಅವನು ಆಶ್ರಯಿಸುವದು ಸಿರಸಿಯ ಆ ಗೆಳೆಯನನ್ನು ಎಂಬುದನ್ನು ಅರಿತ ನನಗೆ ತುಸು ಸಮಾಧಾನವಾಯ್ತು. ಮುಂದೆ ನಾಲ್ಕು ದಿನಗಳಲ್ಲಿ ವಿಲಿ ಯಮನಿಗೆ ಜ್ವರ ಬಂದ ಸುದ್ದಿ ತಿಳಿಸಿ ಗೆಳೆಯ ಪ್ರೊಭಟ್ಟ ಬರೆದಿದ್ದ—ಹೋಗಿ ನೋಡಿ ಬರಲೇ ಎನ್ನಿಸಿದರೂ ಸಾಧ್ಯವಿರಲಿಲ್ಲ. ನಾನ ೨ ಫ್ಲೂನಿಂದ ಐದಾ ರುದಿನ ಹಾಸಿಗೆ ಹಿಡಿದು ನರಳತೊಡಗಿದೆ ...ಮತ್ತೆ duty report ಮಾಡಿಕೊಂಡ ದಿನವೇ ಸಂಜೆ ಮಿರಿಯಮ್ ಅವರನ್ನು ಕಂಡು ವಿಲ್ಲಿಯ ಬಗ್ಗೆ ವಿಚಾರಿಸಿದೆ. ಅವನ ಅಸ್ವಸ್ಥತೆ ಅರಿಯದ ಅವರು ಅವನು ಮಾರನೇ ದಿನ ಮಧ್ಯಾಹ್ನ ತಿರುಗಿ ಬರುವದಾಗಿ ತಿಳಿಸಿ ಬರೆದದ್ದನ್ನು ಹೇಳಿದರು........ ನಿಶ್ಯಕ್ತ ದೇಹ ಹೊತ್ತು ಮನೆಗೆ ಬಂದೆ—

ಅವ್ವ ಬಾಗಿಲಲ್ಲೆ ಆತುರದಿಂದ ಕಾಯುತ್ತ ಕುಳಿತಿದ್ದಳು. ನಾನು ಬಂದದ್ದನ್ನು ನೋಡಿ ಬಹಳ ಸಂತೋಷದಿಂದ-ತಾನೇ ಯಾರ ಆಲಂಬನೆ ಇಲ್ಲದೆ ನಡೆಯುತ್ತ ಹತ್ತಿರ ಬಂದಳು, ನಾನು ಬಟ್ಟೆ ಬದಲಿಸುವದರೊಳ ಗಾಗಿ ಚಹಾ ಮಾಡಿ ತಂದುಕೊಟ್ಟಳು-ಅವ್ವನ ಈ ಚೈತನ್ಯ ನೋಡುತ್ತ....

"ಅವ್ವಾ ಈವತ್ತ ನೀನು ಸಂಪೂರ್ಣ ಆರಾಮ ಇದ್ದದ್ದು ನೋಡಿ ನನ್ನ ಚಿಂತೆಲ್ಲ ಮಾಯವಾದವು-ಡಾಕ್ಟರು ಹೇಳ್ಯಾರ....ನಿನ್ನ ಕೈ ಕಾಲಿಗೆ ದಿನಾ

ಚೆನ್ನಾಗಿ ಮಸಾಜ ಮಾಡಿದರ ಕೆಲವು ದಿನದಾಗ ಮೊದಲಿನಾಂಗ ಆಡ್ತಾಡತಿ. ಕೆಲಸ ಮಾಡಲೇ ಅಂತ...... ಆಮೇಲೆ ಆಲ್ ಇಂಡಿಯಾ ಟ್ಯೂರಿಗೆ ಹೋಗೋಣವ್ವ—ಅವ್ವಾ ...... ದಿಲ್ಲಿ ದಿಲ್ಲಿ ಅಂತೀಯಲ್ಲಾ ಆ ದಿಲ್ಲಿಗೆ ಕರಕಂಡು ಹೋಗತೀನಿ....... ಅಪ್ಪನ ಕೂಡ ಹೋಗಬೇಕು ಅಂತ ಆಶಾ ಮಾಡಿದ್ದಿ, ಆದ್ರ ಅವ್ವ ನಿನ್ನ ಮುಂದ ಆ ವಿಷಯಾನss ಎತ್ತಲಿಲ್ಲಾ, ನಿನಗ ಗೊತ್ತಿಲ್ಲಧಾಂಗ "ಅಕಿನ್ನ" ಜೋಡಿ ಕರಕೊಂಡ ಹೋದಿದ್ದು ತಿಳಿದು ಅತ್ತಿದ್ದೆ ಅಂದೆಲ್ಲ—ಆ ದಿಲ್ಲಿ ಆಗ್ರಾ, ಮಥುರಾ, ಕಾಶಿ....ಅಷ್ಟssಯಾಕ ನನ್ನ ಥೀಸಿಸ್ approve ಆಗಿ ಬಂದ ಮ್ಯಾಲೆ ಪರ ದೇಶಕ್ಕೆ ಹೋಗೋ chance ಅದ. ನಿನ್ನ ಏರೋಪ್ಲೆನಿನೊಳಗ ಕರ ಕೊಂಡ ಹೋಗತೇನವ್ವಾ...."

ಮಾತುಗಳ ಸತಮಾಲೆಯಲ್ಲಿ ಉಯ್ಯಾಲೆ ಆಡುತ್ತಿರುವ ಅವಳ ಕಣ್ಣಿಂದ ನೀರು ಹರಿಯತೊಡಗಿತು—ನನ್ನನ್ನು ಹತ್ತಿರ ಕರೆದು ಮಗುವನ್ನು ಮುದ್ದಿಸಿದಂತೆ ಮುದ್ದಿಸಿ, ತೊಡೆಯ ಮೇಲೆ ನನ್ನ ತಲೆಯನ್ನಿಟ್ಟುಕೊಂಡು ನೇವರಿಸತೊಡಗಿದಳು.

ಂ ಂ ಂ ಂ

ಮಾರನೆ ದಿನ ನನ್ನ ವೇಳೆಗೆ ಸರಿಯಾಗಿ ನಾನು ಯೂನಿವ್ಹರ್ಸಿಟಿಗೆ ಹೊರಟು ನಿಂತೆ ನನ್ನ ಹಿಂದೆ ಮಗುವಿನಂತೆ ಅವ್ವ ಹಿಂಬಾಲಿಸಿದಳು ಬಾಗಿಲು ದಾಟುವಾಗ ತನ್ನ ಕೈಯಲ್ಲಿ ನನ್ನ ಕೈ ತೆಗೆದುಕೊಂಡಳು.... ಬಳಿಕ ನನ್ನ ಬೆನ್ನು ಚಪ್ಪರಿಸಿ ಹೋಗಿ ಬರಲು ಸೊನ್ನೆ ಮಾಡಿ ಹೇಳಿದಳು. ಅವಳ ಸ್ಪರ್ಶದಿಂದ ಅವಳದೇ ರಕ್ತ ಹರಿಯುವ ಈ ದೇಹಕ್ಕೆ ಬಹಳ ಹಿತ ವೆನಿಸಿತು .. ತಾಯಿ ಮಕ್ಕಳ ಈ ಸಂಬಂಧ ಎಷ್ಟು ಸಹಜ, ಸುಂದರವಾದ ಸಂಬಂಧ !—ಈ ಸಂಬಂಧದ ಮುಂದೆ ಬೇರೆ ಎಲ್ಲ ಸಂಬಂಧಗಳು ಎಷ್ಟು ಅಸಹಜ, ಎಷ್ಟು ನಶ್ವರ ! ! ಎಂಬ ಯೋಚನೆ ಮನಸ್ಸಿನಲ್ಲಿ ಮಿಂಚಿನಂತೆ ಚಕ್ಕನೆ ಬೆಳಕು ಚೆಲ್ಲಿತು.

ದಿನವೂ ಲಗೂ ಬಾ ಎನ್ನುವವಳು...ಸುಮ್ಮನೆ ನನ್ನನ್ನು ನೋಡುತ್ತ ನಿಂತೇ ಇದ್ದಳು........

೦ ೦ ೦ ೦

ಸಂಜೆ ಬಾಗಿಲಲ್ಲಿ ಕಾಲಿಡುತ್ತಿರುವಾಗಲೇ ನಿಂಗಿ close ಮಾಡಿದ ಒಂದು ಪತ್ರಕೊಟ್ಟಳು; ಮೇಲೆ ಯಾರ ಅಡ್ರಸ್ಸೂ ಇರಲಿಲ್ಲ....ಒಡೆದು ನೋಡು ಅದು ವಿಲಿಯಮ್‌ನ ಪತ್ರವೇನೋ ಎಂದಿದ್ದೆ ಆದರೆ! ! ಅವ್ವ ಅವ್ವನ ಅಕ್ಷರಗಳು....ಮನಸ್ಸು ಕುದಿಯಲಾರಂಭಿಸಿತು.........ನನ್ನ ಮುದ್ದು ಮಗಳೆ.

ನನ್ನ ಈ ಅನಿರೀಕ್ಷಿತ ನಿರ್ಧಾರದಿಂದ ನಿನಗೆ ದುಃಖವಾಗುತ್ತದೆ. ಈ ಆಘಾತ ಕೆಲದಿನಗಳದ್ದು ಆದರೆ ನನ್ನ ನಿರ್ಧಾರ ನಿನಗೆ ಅಂತೆ ನನಗೂ ಸುಖದ ದಾರಿಯನ್ನು ತೊರುತ್ತದೆ. ನೀನು ಸುಖದಿಂದ ಇದ್ದರೆ ಮಾತ್ರ ನಾನು ಸುಖದಲ್ಲಿರಬಲ್ಲೆ—ನೀನು. ವಿಲಿಯಮ್ ಇಬ್ಬರೂ ಮದುವೆ ಮಾಡಿಕೊಳ್ಳಿರಿ....ಜೀವನದುದ್ದಕ್ಕೂ ಅವನೊಬ್ಬ ಸಂಗಾತಿ ನಿನಗಾಗಬಲ್ಲ ಎಂಬ ಭರವಸೆಯ ಮೇಲೆ ಈ ನಿರ್ಧಾರ ಕೈಗೆತ್ತಿಕೊಂಡೆ-ನನ್ನ ಗಂಡ ಎಷ್ಟು ಕ್ರೂರವಾಗಿದ್ದರೇನು? ನಿನ್ನಂಥ ಮುದ್ದು ಮಗಳು ನನಗಿದ್ದಾಳೆ. ತನ್ನ ಸರ್ವಸ್ವ ಪ್ರೀತಿ, ಸುಖ, ಮದುವೆ ಭವಿಷ್ಯವನ್ನು ಗಾಳಿಗೆ ತೂರಿ ತನ್ನ ಸುಖ ಸಮಾಧಾನಕ್ಕೆ ನನ್ನ ಸಂಗಾತಿಯಾಗಿರಲು ಬಯಸಿದಿ. ನೀನಾಗಲಿ. ನಾನಾಗಲಿ ಎಲ್ಲಿದ್ದರೂ ಒಬ್ಬರನ್ನೊಬರು ಪ್ರೀತಿಸುತ್ತೇವೆ...ಎಂದ ಮೇಲೆ ನನಗೆ ಜೀವನದಲ್ಲಿ ಇನ್ನೇನು ಬೇಕು? ನೀನು ನನಗಾಗಿ ಎಲ್ಲಾ ತ್ಯಾಗ ಮಾಡಲು ಸಿದ್ಧಳಿದ್ದಾಗ ನಾನು ನನ್ನ ಒಂದು ಸ್ವಾರ್ಥವನ್ನು ಧಾರೆ ಎರೆದು ಕೊಡಲಾರೆನೆ ? ನನ್ನ ಮಗಳಿಗೆ ತಕ್ಕ ತಾಯಿ ನಾನಾಗಬಾರದೇ ?

ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. ಎಂದು ಗಾಬರಿಯಾಗ ಬೇಡ. ಧೈರ್ಯದಿಂದಿರು ಎಂಥೆಂಥ ಅಪಮಾನ, ಸಾವುಗಳನ್ನು ಎದು

ರಿಸಿದ ನನಗೆ ಜೀವನದ ಬಗ್ಗೆ ತುಂಬ ಗೌರವವಿದೆ-ನಮ್ಮಹಳ್ಳಿಯ ಹೊಲ ದಲ್ಲಿ ಕಟ್ಟಿಸಿದ ಚಿಕ್ಕ ಮನೆಯಲ್ಲಿದ್ದು ಹೊಲ ಮಾಡಿಸುತ್ತೇನೆ. ನೀನು ವಿಲಿಯಂ ಇಬ್ಬರೂ ಮದುವೆಯಾಗಲು ನಿರ್ಧರಿಸಿ ಮದುವೆಯಾಗುವವರೆಗೆ ನೀನು ನನ್ನನ್ನು ಕಾಣಕೂಡದು. ನನ್ನ ಆಸೆ ಆಕಾಂಕ್ಷೆ ಆಶೀರ್ವಾದ ಎಲ್ಲ ನಿನ್ನ ಜೊತೆಗೇ ಇರುತ್ತವೆ-ಮನೆ ನಿನ್ನ ಹೆಸರಿಗೆ ಇದೆ. ಬ್ಯಾಂಕಿನಲ್ಲಿ ನನ್ನ Insurance ಹಣ-೫೦,೦೦೦ ನಿನ್ನ ಹೆಸರಿಗೆ ಇಟ್ಟಿದ್ದೇನೆ ಅದನ್ನು ಬಳಸಿಕೋ.

ನೀನು ಬೇಗನೆ ನಿನ್ನ ಗಂಡನ ಜೊತೆಗೆ ಬಂದು ನನ್ನನ್ನು ಭೇಟಿಯಾಗುತ್ತೀ ಎಂಬ ಬಲವಾದ ಭರವಸೆಯಿಂದಲೇ ನಾನೀಗ ಮನೆಯಿಂದ ಹೊರಟಿರುವೆ. ನಾನು ಯಾವಾಗಲೂ ಎಲ್ಲಿದ್ದರೂ ನಿನ್ನ ಜೊತೆಗೆ, ನಿನ್ನ ಹತ್ತಿರದಲ್ಲೇ ಇರುತ್ತೇನೆ.

ನಿಮ್ಮಿಬ್ಬರ ದಾರಿ ಕಾಯುತ್ತಿರುವೆ, ಬರುವಿಯಾ ಮಗು ? ?
ಶುಭಾಶಯಗಳೊಂದಿಗೆ

ನಿನ್ನ
ಅಪ್ಪ

ಕಣ್ಣು ತುಂಬಿಕೊಂಡು ಮುಂದಿನ ಅಕ್ಷರಗಳು ಕಾಣದಾದವು...ಜಗತ್ತೆಲ್ಲ ಕರಗಿ ಮುಳುಗಿ ಹೋಯ್ತೇನೋ-ಎಂದೆನಿಸಿತು. ದೇಹ ತುಂಬ ನಿಶಕ್ತವಾಯ್ತು...ನಿಂತಲ್ಲೇ ಕುಸಿಯತೊಡಗಿದೆ. ಆದರೆ ನನ್ನ ಕುಸಿತವನ್ನು ನಿಲ್ಲಿಸಿ ಎತ್ತಿ ಹಿಡಿದಿದ್ದವು ಯಾವುವೋ ಎರಡು ತೋಳುಗಳು....

ಸಾವಕಾಶ ಕಣ್ತೆರದು ನೋಡುತ್ತಿರುವಾಗ ವಿಲ್ಲಿಯೇ ತನ್ನನ್ನು ಎತ್ತಿ ಹಿಡಿದಿದ್ದ-ಇದು ಕನಸೊ....ಅಪ್ಪನ ಬಯಕೆಯ ಸಾಕ್ಷಾತ್ಕಾರವೋ ತಿಳಿಯದಾದೆ ಕೊನೆಗೆ ಮೇಲೆತ್ತಿದ್ದ ಮುಖವನ್ನು ಅವನ ಎದೆಗೆ ಆನಿಸಿದೆ... ವಿಲಿಯಂನ ಹೃದಯ ಢಬ್‌ಢಬ್, ಢಬ್‌ಢಬ್,-ಎಂದು ಬಡಿದುಕೊಳ್ಳುತ್ತಿತ್ತು.

# ನದಿ

ಈಚನೂರು ಜಯಲಕ್ಷ್ಮಿ

ರೈಲು ಊರಿನತ್ತ ಧಾವಿಸುತ್ತಿದೆ. ಮಮ್ಮಿ ಆದಂತೆ ಇನ್ನೂ ಕೆಲವೇ ನಿಮಿಷಗಳು ಕಿಟಕಿಯಾಚೆ ಕಾಣುವ ತಲೊಗುತ್ತಿರುವ ಪೈರಿನ ಗದ್ದೆಗಳು ಬಳುಕುತ್ತಾ ಹರಿಯುತ್ತಿರುವ ಕಪ್ಪು ಬಣ್ಣದ ನೀರು, ಹಾರಾಡುತ್ತಿರುವ ಪಕ್ಷಿಗಳನ್ನು ಕಂಡಾಗ ಸಂತಸ ಏರಿ ಮೈ ಪುಲಕಗೊಳ್ಳುತ್ತದೆ. ನದಿಯು ನ್ನೊಮ್ಮೆ ಬಹಳ ಹತ್ತಿರದಿಂದ ನೋಡಬೇಕು ಎಂಬಾಸೆ ಈ ಹದಿನೈದು ವರ್ಷಗಳಿಂದೆ ದೆಳೆದು ಹುತ್ತ ಕಟ್ಟಿತ್ತು. ಮಮ್ಮಿ ತಮ್ಮ ತೌರಿನ ನದಿ, ಗಿಡ, ಮನೆ, ಜನ ಎಲ್ಲರನ್ನೂ ವರ್ಣಿಸುವಾಗ ಅಲ್ಲಿಗೆ ಆ ಕ್ಷಣದಲ್ಲೇ ಓಡುವ ಬಯಕೆ ಪುಟಿದೇಳುತ್ತಿತ್ತು..."ನಿಮ್ಮೂರಿಗೆ ಹೋಗಿ ಬರೋಣ ಮಮ್ಮಿ"...ಎಂದು ಗೋಗಸೆದಿದ್ದರೂ ಮಮ್ಮಿ ದಿಪ್ಪೂರೀ ನನಗೆ ತಿಳು ವಳಿಕೆ ಬಂದಾರಭ್ಯ ಮಮ್ಮಿ ತನ್ನೂರಿಗೆ ಹೊದದ್ದು ಓಂದೇ ಬಾರಿ. ಅದೂ ನಾಲ್ಕೂ ವರ್ಷಗಳ ಹಿಂದೆ ಹಳ್ಳಿಯಿಂದ ಬಂದ "....ತಾತನಿಗೆ ಹುಷಾರಿಲ್ಲ ಎಂಬ ಟೆಲಿಗ್ರಾಂನಿಂದಾಗಿ ಡ್ಯಾಡಿ ಅಸಮ್ಮತಿ ಸೂಚಿಸಿದ್ದರೂ ಮಮ್ಮಿ ಒಬ್ಬರೇ ಬಂದಿದ್ದರು. ಡ್ಯಾಡಿ ಎಂದೂ ಅಷ್ಟೆ. ಯಾವಾಗಲೂ ಯಾವುದೋ ಒಂದು ಬಗೆಯ ಗಹನತೆ. ನನ್ನಬಳಿಯೂ ಸಲಿಗೆಯಿಂದ ಇರರು. ದುಗಳ ಬಳಿಯೂ ಗಂಭೀರವೇ ? ಜೊತೆಗೆ ಮಮ್ಮಿ ತೌರು ಎಂದರೇ ಸಾಕು ಸಿಡುಕುತ್ತಾರೆ. ಏಕೆ ? ನೆರಮನೆಯ ಕಾಂಚಿನ್, ಲಿಲಾ ಕಾಮತ್‌ರೊಡನೆ ಹೇಳುವಂತೆ ಬಹುಷಃ ಡ್ಯಾಡಿ, ತಾತನಿಗೆ ಜಗಳ ವಾಗಿರಬಹುದು.

ಪಾಪ ಎನ್ನಿಸಿ ಮಮ್ಮಿಯತ್ತ ತಿರುಗುತ್ತೇನೆ. ಕಣ್ಮುಚ್ಚಿ ಕುಳಿತಿದ್ದಾಳೆ. ಮಮ್ಮಿ ತುಂಬಾ ಗಂಭೀರ. ಹುಸೆಯೊಳಗೊ ಅಷ್ಟೆ. ಅಷ್ಟೊಂದು

ಐಶ್ವರ್ಯ ಮನೆಯೊಳಗೆ ನರ್ತಿಸುತ್ತಿದ್ದರೂ ಏನೋ ಒಂದು ಬಗೆಯ ಬಿಗಿತ. ಕಾಂತಿಬೆನ್ ಮನೆಯಲ್ಲಿ ಎಲ್ಲರೂ ಎಷ್ಟೊಂದು ಸಂತಸದಿಂದಿರುತ್ತಾರೆ. ನೈನಾಳನ್ನು ಎಲ್ಲರೂ ಎಷ್ಟೊಂದು ಲವ್ ಮಾಡುತ್ತಾರೆ. ನನಗೇಕೆ ಹಾಗಿಲ್ಲ ? ಎನ್ನಿಸುವಾಗ ಎದೆಯೊಳಗೆ ಅತೃಪ್ತತೆಯ ಸರ್ಪ ಈಗಲೂ ಹೆಡೆಯಾಡಿಸುತ್ತದೆ.

ಚಿತ್ರಾ, ನದಿ ಬಂತು ನೋಡು. ಅಷ್ಟೊಂದು ಆಸೆ ಪಡ್ತಿದ್ದೆಯಲ್ಲಾ. ಈ ನದಿ ನಮ್ಮ ಮನೆ ಹಿಂದೆಯೇ ಹರಿಯುತ್ತೆ. ಇನ್ನೂ ನಮ್ಮೂರು ಎರಡೇ ಮೈಲು."

ಮಮ್ಮಿಯ ಮಾತಿನಿಂದ ಗೆಲುವೇರುತ್ತದೆ. ಕಪ್ಪು ಕಲ್ಲು ಬಂಡೆಗಳನ್ನು ಸೀಳಿಕೊಂಡು ನದಿ ಅದೆಷ್ಟು ಗಂಭೀರವಾಗಿ ಸಾಗುತ್ತಿದೆ. ಮುಂಬೈಯಲ್ಲಿನ ಸಾಗರ ಹಾಗಲ್ಲ. ಕುಳಿತಲ್ಲೇ ಮೊದ್ದಾಗಿ ಕುಳಿತಿರುತ್ತಿದೆ. ಆದರೆ ಈ ನದಿ ?

ನಾನು ಇಲ್ಲಿರುವತನಕ ನದಿ ದಂಡೆಯಲ್ಲಿ ಕುಳಿತು ನದಿಯನ್ನು ಮನದೊಳಕ್ಕೆ ತಂದುಕೊಂಡು "ರಜಾ ಮುಗಿದ ನಂತರ ಬರೆದು ತನ್ನಿ" ಎಂದು ಮಿಸ್ ಸುನೀತಿ ಕೊಟ್ಟಿರುವ "ನದಿ" ಪ್ರಬಂಧಕ್ಕೆ ನೈಜತೆ ತುಂಬಿ, ತುಂಬಾ ಅಂಕ ಪಡೆದು ಗೆಳತಿಯರೆದುರು, ಜಂಭಗಾರ ಮನೋಜನೆದುರು ಮೂಗೇರಿಸಿಕೊಂಡು ತಿರುಗಬೇಕು ಎಂದುಕೊಂಡು ನದಿಯನ್ನು ಕಣ್ತುಂಬಾ ನೋಡುವಾಗ ಏಕೋ ಮೈ "ಜುಂ" ಎನ್ನುತ್ತದೆ.

o o o o o

ಕಾಲಿಗೆ ಮೆತ್ತಿದ ಮಣ್ಣು, ಚರಂಡಿಗಳ ವಾಸನೆ, ಅಂಕು ಡೊಂಕಾದ ರಸ್ತೆಗಳನ್ನು ಪ್ರಯತ್ನ ಪೂರ್ವಕವಾಗಿ ದಾಟಿ ಇನ್ನು ನಡೆಯಲಾರದೆ "ಮಮ್ಮಿ ಇನ್ನೆಷ್ಟು ದೂರ....? ಎಂದು ಗೊಣಗಿದರೆ, "ಇನ್ನು ಹತ್ತೇ ಹೆಜ್ಜೆ. ಕತ್ತಲೆಯಾಯ್ತು ಜಾರಿಬಿಟ್ಟೀಯೇ. ನಾವು ಬರ್ತೀವಿ ಅಂತಾ

ಗೊತ್ತಿದ್ದಿದ್ರೆ ಗ್ಡಾಡಿ ಬರ್‍ತಿತ್ತು. ಹಳ್ಳಿ ಹಳ್ಳಿ ಅಂತಿದ್ಯಲ್ಲಾ ಅದರ ಸವೀನ ನೋಡು" ಎನ್ನುತ್ತಾ ನಗುತ್ತಾಳೆ ಮಮ್ಮಿ ಬಲಗೈಲಿದ್ದ ದೊಡ್ಡ ಕಿಟ್ಟನ್ನು ಎಡಗೈಗೆ ಬದಲಿಸುತ್ತಾ.

ಮಿಣುಕು ದೀಪದ ಬೆಳಕು ಕಣ್ಣಿಗೆ ಬಿದ್ದಾಗ ಮಮ್ಮಿ, "ನೋಡು ಅದೇ ನಮ್ಮ ಮನೆ ಚಿತ್ರಾ. ಅರೇ ಯಾಕೆ ಅಷ್ಟು ಜನ? ಅಪ್ಪಯ್ಯ ಏನಾದ್ರೂ ......." ಎನ್ನುತ್ತಾಳೆ ಗಾಬರಿಯಿಂದ. ಅವಳ ಆಂತಕಭರಿತ ಸ್ವರ ಕೇಳಿ ಏನೋ ಒಂದು ರೀತಿ ಅನ್ನಿಸುತ್ತದೆ. ಅತ್ತಿತ್ತ ಓಡಾಡುತ್ತಿ ರುವ ಜನರನ್ನು ಕಂಡಾಗ "ತಾತಾ ಸತ್ತೆ ಹೋದರಾ?" ಎಂದುಕೊಳ್ಳು ವಾಗ ಕಾಲು ಕಂಪಿಸುತ್ತದೆ.

ಮನೆಯ ಮುಂದಿನ ಚರಂಡಿ ದಾಟಿ ಅಡಿಯಿರಿಸುವಾಗ ನಾಲ್ಕಾರು ಕಂಠ.... "ವೇದಾ ಬಂದುಬಿಟ್ಟಳು"...ಎನ್ನುತ್ತವೆ ಆತುರದಿಂದ. ಮಮ್ಮಿ ತಟ್ಟನೆ ನಿಂತು ಸೆರಗಿನಲ್ಲಿ ಮುಖ ಒರೆಸಿಕೊಳ್ಳುತ್ತಾ ಸುತ್ತಲೂ ನೋಡಿ ಕತ್ತು ಬಗ್ಗಿಸಿ ಸರಸರನೆ ಹೆಜ್ಜೆ ಹಾಕುತ್ತಾರೆ.

"ಚಿಕ್ಕಮ್ಮ ಬಂದ್ಲು ಚಿಕ್ಕಮ್ಮ ಬಂದ್ಲು"......ಹುಡುಗನೊಬ್ಬ ಕೂಗುತ್ತಾ ಹತ್ತಿರ ಬಂದಾಗ ಮಮ್ಮಿ ಬಿಕ್ಕಳಿಸಿ ಅಳುತ್ತಾತೆ. ನನಗೂ ಅಳು ಬರುತ್ತದೆ. ಜಗುಲಿಯ ಮೇಲೆ ಮಲಗಿಸಿದ ತಾತನ ಪಕ್ಕದಲ್ಲಿ ಕುಳಿತ ಹೆಂಗಸೊಬ್ಬರು ನಿಧಾನವಾಗಿ ಕಣ್ಣೊರಸಿಕೊಳ್ಳುತ್ತಾ ಮಮ್ಮಿಯತ್ತ ಬರುತ್ತಿದ್ದಾರೆ. ಮಮ್ಮಿಯದೇ ಚಲುವು ಆಕೃತಿ. ಬಹುಶಃ ಆಕೆಯು ಅಕ್ಕನಿರಬೇಕು. ನಾನವರನ್ನು "ದೊಡ್ಡಮ್ಮ" ಎನ್ನಬೇಕು ಎಂದಿದ್ದಳಲ್ಲಾ ಮಮ್ಮಿ....

"ವೇದೂ ತಡವಾಗಿ ಬಂದೆ ಕಣೇ. ಒಂದು ಗಂಟೆ ಹಿಂದೆ ಅಪ್ಪಯ್ಯ ನಮ್ಮನ್ನ ಬಿಟ್ಟು ಹೋಗಿ ಬಿಟ್ರು ಕಣೇ...."

ಕರುಳು ಕೊರೆಯುವ ಶೀತಲ ಸ್ಪರ್ಶ. ಇಬ್ಬರೂ ಗೊಳ್ಳೆಂದು

ಅಳುತ್ತಾರೆ....ಮಮ್ಮಿ ಹೀಗೆ ಅತ್ತಿದ್ದನ್ನು ನಾನು ಕಂಡಿದ್ದು ಇದೇ ಮೊದಲು ನನಗೂ ಕಣ್ಣಲ್ಲಿ ನೀರು ತುಂಬುತ್ತದೆ. ಈಗ ಡ್ಯಾಡಿ ಇದ್ದಿದ್ದರೆ "ಅಳ ಬಾರ್ದು ಡಿಯರ್" ಎಂದು ಮಮ್ಮಿಯ ಕಣ್ಣೊರೆಸುತ್ತಿದ್ದರಲ್ಲವಾ ?

ನನ್ನ ಕೈಹಿಡಿದು ಮಮ್ಮಿ ತಾತನ ಬಳಿ ನಡೆದಳು. ತಾತನನ್ನು ಕಂಡು ಕಿಟ್ಟನೆ ಕಿರುಚುವಂತಾಯ್ತು. ಇದೇ ಮೊದಲ ಬಾರಿಗೆ ಇಷ್ಟು ಹತ್ತಿರದಲ್ಲೇ ಶವ ಕಂಡದ್ದು...ಕಾಯಿಲೆಯಿಂದಲೋ ವೃದ್ಧಾಪ್ಯದಿಂದಲೋ ಜರ್ಜರಿತವಾದ ದೇಹ. ಮುಖದ ತುಂಬಾ ಮಲ್ಲಿಗೆ ಬಣ್ಣದ ಗಡ್ಡ. ತೆರೆದ ಬಾಯಿ ಒಟ್ಟಿನಲ್ಲಿ ವಿಕಾರ.

ಬಿಗಿಯಾಗಿ ಮಮ್ಮಿಯ ಕೈಹಿಡಿದು ಸುತ್ತಲೂ ನೋಡಿದೆ. ಎಲ್ಲರೂ ಮಮ್ಮಿಯೆತ್ತ ವಿಚಿತ್ರವಾಗಿ ನೋಡುತ್ತಿದ್ದಾರೆ. ಯಾಕೆ ಹೀಗೆ ? ತಂದೆ ಸಾಯುವ ವೇಳೆಗೆ ಬರಲಿಲ್ಲವೆಂದೇ ? ಥೂ...ಎಂಥಾ ಜನ ಅನ್ನೀನಿ. ಟೆಲಿಗ್ರಾಂ ಬಂದ ತಕ್ಷಣ ಹೊರಟೇಬಿಟ್ಟೆವು" ಎಂದು ಕೂಗಿ ಹೇಳಬೇಕೆನಿಸಿ ವಿಫಲಳಾಗಿ ತುಂಬಿದ ಕಣ್ಣಿನಿಂದ ಪುನಃ ಅತ್ತ ನೋಡಿದರೆ ನನ್ನತ್ತ ಕ್ರೂರ ದೃಷ್ಟಿ ಬೀರುತ್ತಿದ್ದಾರೆ.

ತಂದೆಯ ಮುಖದ ಮೇಲೆ ಕೈಯಾಡಿಸಿ, ಅವರ ಪಾದದ ಮೇಲೆ ತಲೆಯಿರಿಸಿ ಮಮ್ಮಿ ದೊಡ್ಡಮ್ಮನ ಹಿಂದೆ ಅಳುತ್ತಾ ಬಂದಾಗ ಎಲ್ಲಾ ವಿಚಿತ್ರ ಎನಿಸುತ್ತದೆ. ಹೊಸ ರೀತಿಯ ವಾತಾವರಣ...ಹೊಸಜನ.... ಹೊಸ ರೀತಿ ;

ಎಷ್ಟೋ ಹೊತ್ತು ಮಮ್ಮಿ ಅಳುತ್ತಲೇ ಇದ್ದರು. ದೊಡ್ಡಮ್ಮ ಕೂಡಾ. ನನಗೂ ಅಳಬೇಕೆನಿಸುತ್ತದೆ. ಆದರೆ ಏಕೋ ಅಳಲಾಗುವುದೇ ಇಲ್ಲ. ತೆಪ್ಪಗೆ ಮಮ್ಮಿಯ ಮೈಗೆ ಅಂಟಿಕೊಂಡು ಕೂರುತ್ತೇನೆ.

"ಅಪ್ಪಯ್ಯ ಕೊನೆಗಾಲದಲ್ಲಿ ನನ್ನನ್ನ ನೆನಸ್ಕೊಂಡ್ರಾ ಕಾವೇರಿ ಏನಾದ್ರೂ ಹೇಳಿದ್ರಾ?"

"ಅಗ್ಲೆ ಅತ್ತಣ ಧ್ಯಾನ ವೇದಾ. ಆದ್ರೆ ಅಪ್ಪಯ್ಯಗೆ ಸುಬ್ಬುವಿನವೇ ವ್ಯಾಮೋಹ. ಕೊನೆತನಕ "ಸುಬ್ಬು ನಿಂಗೆ ಅನ್ಯಾಯವಾಯ್ತು" ಅಂತಿದ್ರು ಸುಬ್ಬು ಅಂತಾನೇ ಕನವರಿಸ್ತಿದ್ರು. ಅವನ ಕೊರಗು ಅವರನ್ನ ಕಬಳಿಸಿ ಬಿಡ್ತು ವೇದಾ."

ಸುಬ್ಬು........!! ಯಾರದು ಎನ್ನಿಸಿ ಮನೀಯತ್ತ ತಿರುಗಿದರೆ ಮಮ್ಮಿಯ ಮೋರೆ ಪೆಚ್ಚೇರಿದೆ. ಸುಬ್ಬು ತಾತನ ಮಗನೇ...ಮಮ್ಮಿ ಹೇಳಿರಲೇ ಇಲ್ಲವಲ್ಲಾ.

"ಇಲ್ಲಾ ಕಾವೇರಿ ಅಪ್ಪಯ್ಯ ನನ್ನಿಂದಾಗಿಯೇ ಸತ್ತರು. ಕಳೆದ ಬಾರಿ ಬಂದಿದ್ದಾಗ ನನ್ನನ್ನ ಕಣ್ಣೆತ್ತಿಯೂ ನೋಡಲಿಲ್ಲಾಂದ್ರೆ, ಕ್ಷಮಿಸಲಿಲ್ಲಾಂಥ ಅರ್ಥವಲ್ಲವಾ"?

"ವೇದಾ, ಕಳೆದ ಮಾತು ಬೇಡಾ. ಆಯ್ತು. ಅಮ್ಮ ಸತ್ತ ಮೇಲೆ ಆ ಒಂಟಿ ಜೀವ ಇಪ್ಪತ್ತು ವರ್ಷ ಬಾಳಿತು. ಹೋಗಲಿ ಬಿಡು. ಸುಬ್ಬು ನಿಂತು ಎಲ್ಲಾ ಕಾರ್ಯ ಮಾಡ್ತಾನೆ. ಅಂದ್ಹಾಗೆ ಈಗ್ಲೂ ನಿನ್ನ ಗಂಡ ಬರಲಿಲ್ವೇನೆ"

"ಕಾವೇರಿ ಈಗ ಆ ಮಾತು ಬೇಡಾ ಅಲ್ವೆ ?"

ದೊಡ್ಡಮ್ಮ ನನ್ನತ್ತ ನೋಡಿ ನಿಟ್ಟುಸಿರುಗರೆದಾಗ ಏನೋ ಒಂದು ರೀತಿಯ ಕಳವಳ ಉಂಟಾಗುತ್ತದೆ. ಏಕೆಂದರೆ ಹೀಗೆ ಎಂಬುದು ತಿಳಿಯದು.

"ನಿನ್ನ ಮಗಳು ಅಲ್ವೇನೇ? ಎಷ್ಟೊಂದು ಬೆಳೆದ್ಬಿಟ್ಟಿದ್ದಾಳೆ. ಸುಬ್ಬುಗೆ ಎಷ್ಟು ಸಂತೋಷವಾಗುತ್ತೊ. ಚಿತ್ರಾ ನೀನು ನಮ್ಮ ಮನೆಗೆಹೋಗಿ ಏನಾರ ತಿಂದು ಬಾ. ಗಣೇಶ ಕೊಡ್ತಾನೆ. ಗಣೇಶ ಅವಳನ್ನ ಕರ್ಕೊಂಡ

ಹೋಗಿ ಒಲೆ ಮೇಲೆ ಅನ್ನ ಇದೆ. ಮೊಸರು ಉಪ್ಪಿನಕಾಯಿ ಹಾಕಿ ಕಲಿಸಿ ಕೊಡು" ತಿರುಗುತ್ತೇನೆ. ನಾನು ಗೇಟಿನ ಬಳಿ ಬಂದಾಗ ನೋಡಿದ ಹುಡುಗನೇ, ಅವನೇ ದೊಡ್ಡಮ್ಮನ ಮಗ. "ಬಾರೇ" ಎನ್ನುತ್ತಾ ಅವನು ಕೈ ಹಿಡಿದೆಳೆದಾಗ ನಾಚಿಕೆ ಎನಿಸುತ್ತದೆ. ಮಮ್ಮಿಯ ಅಪ್ಪಣೆ ಪಡೆದು ಗಣೇಶನ ಕೈಹಿಡಿದು ಗೇಟುದಾಟಿ ಕತ್ತಲೆಯಲ್ಲಿ ಮುಳುಗುವಾಗ ಇಡೀ ಶರೀರವೇ ಭಯದಿಂದ ಕಂಪಿಸುತ್ತದೆ.

"ಸ್ವಲ್ಪ ದೂರ"...ಎನ್ನುತ್ತಾ ಹತ್ತು ಬಾರಿ ಹೇಳಿ ಒಂದು ಮೈಲಿ ನಡೆಸುತ್ತಾನೆ. ಕೊಚ್ಚೆ ಕತ್ತಲು....ತಾತನ ಶವ....ಅಪರಿಚಿತ ಗೊಂದಲ ವಾತಾವರಣ ಎಲ್ಲಾ ಕಂಡಾಗ 'ನಾನೊಬ್ಬಳೇ ಒಂಟಿ' ಎನಿಸುವಾಗ ಬಿಗಿಯಾಗಿ ಗಣೇಶಸ ಕೈಹಿಡಿದು "ಹೆದರಿಕೆ ಕಣೋ" ಎಂದರೆ "ನೀನೊಬ್ಬಳು ಪಟ್ಟಣದ ಗುಮ್ಮ" ಹೆದರಿಕೆ ಯಾಕೋ ? ಎನ್ನುತ್ತಾನೆ, ನಗುತ್ತಾ, "ಪಟ್ಟಣದ ಗುಮ್ಮ ಎಂದರೇ ?"

ಮಮ್ಮಿಗಿಂತಾ ಹೆಚ್ಚಾಗಿ ಅನ್ನ ಕಲೆಸಿಕೊಟ್ಟ ಗಣೇಶನನ್ನು ನೋಡಿ ಒಳ್ಳೆಯವನು ಎನಿಸುತ್ತದೆ. ಎಲ್ಲಾ ನನ್ನಂತಯೇ ಇದ್ದಾನೆ. ಆರನೆಯ ಕ್ಲಾಸಂತೆ........"ನಿನಗೆ ಎಷ್ಟು ವರ್ಷ ?" ಎಂದ. ಹೇಳಿದೆ...... "ನಿನಗೆಷ್ಟು"? ಎಂದೆ. 'ಹನ್ನೆರಡು ಎಂದವನು ನಗುತ್ತಾ "ನಮ್ಮೂರು ಚಂದವೋ ನಿಮ್ಮೂರು ಚೆಂದವೋ....ಎಂದು ಸವಾಲು ಹಾಕಿದ. ಕಣ್ಣು ಮಿಟುಕಿಸಿ ದೊಡ್ಡದಾಗಿ ನಕ್ಕ." ಎರಡೂ ಚಂದ. ಆದರೆ ನಮ್ಮೂರಲ್ಲಿ ಸಾಗರ. ಇಲ್ಲಿ ನದಿ. ನದಿ ನೋಡಲಿಕ್ಕೆ ತುಂಬಾ ಚಂದ" ಎನ್ನುತ್ತೇನೆ. "ವ್ಹಾ...ಹಾಗಾದ್ರೆ ನಾಳೆ ಬಾ. ತಾತನ ಮನೆ ಹಿಂದೇ ನದಿ ಹರಿಯುತ್ತೆ. ತುಂಬಾ ಮ್ಯಾಜಿಕ್ ಮಾಡ್ತೀನಿ." ಎನ್ನುತ್ತಾನೆ. ಮುಂದುವರೆದು "ಲೇ ಚಿತ್ರಾ, ಸತ್ತು ಹೋದವರನ್ನ ಯಮ ಎಳ್ಕಂಡು ಹೋಗ್ತಾನಂತೆ. ನುತ್ತೇ, ತಾತ ಇಲ್ಲೇ ಇದ್ದಾರಲ್ಲೇ" ಎಂದಾಗ ನನಗೇನು ಅರ್ಥವಾಗದು. ಯಮ ಎಂದರೆ ಯಾರು? ತಾತನ ವೈರಿಯೇ ? ಎಳೆದುಕೊಂಡು ಹೋದರೆ ದೊಡ್ಡಪ್ಪ ಮಮ್ಮಿ ಸುಮ್ಮನಿರ್ತಾರಾ ?

1038

ಕಕ್ಕಾಪಿಕ್ಕಿಯಾಗಿ ಕತ್ತೆತ್ತುತ್ತೇನೆ. ಜೇಡರ ಬಲೆ, ಬೀಡು ಬಿಟ್ಟು ಹೊಗೆ ಮೆಟ್ಟಿ ಕಪ್ಪಾದ ಮೇಲ್ಛಾವಣಿ. ತಾತನ ವಿಕಾರ ಮೊಗ ಆ ಜೇಡರ ಬಲೆಯೊಳಗೆ ಕಾಣಿಸಿ ಹೆದರಿಕೆ ಏರಿ "ನಿನ್ನ ದಮ್ಮಯ್ಯ ಬಾರೋ, ಮಮ್ಮಿ ಹತ್ತಿರ ಹೋಗ್ಬೇಕು..." ಎಂದರೆ ಮಾಮ್ಮಿಯಂತೆ ಮಮ್ಮಿ ಬಾಯ್ತುಂಬಾ ಅಮ್ಮ ಅನ್ನು ಎಷ್ಟು ಚೆನ್ನಾಗಿರುತ್ತೆ" ಎಂದು ಅವನು ಜೋರು ಮಾಡಿದಾಗ "ಹೌದಲ್ಲವಾ" ಎನ್ನಿಸುತ್ತದೆ."

ಗಣೇಶನ ಕೈಬಿಟ್ಟು ತಾತನ ಸುತ್ತ ಕುಳಿತ ಜನರನ್ನು ನೋಡಲು ಅಂಜಿಕೆಯಾಗಿ ಒಳಗೂಡಿ ಮಮ್ಮಿಯ ಬಳಿ ಕುಳಿತು ಅವಳ ಕೈ ಹಿಡಿದೆ. "ಊಟ ಆಯ್ತಾ?"... ಎಂದಳು ಶುಷ್ಕ ಕಂಠದಲ್ಲಿ. "ಆಯ್ತು ಮಮ್ಮಿ. ನೀನು ಮಾಡೋಲ್ವಾ....?" ಎನ್ನುತ್ತೇನೆ. "ನಿಮ್ಮಮ್ಮ ಊಟ ಮಾಡ್ತಾಳ್ದು ಹೊರಗೆ ತಂದೆಯ ಶವ" ಇದೆ ಎನ್ನುತ್ತಾಳೆ ದೊಡ್ಡಮ್ಮ ಬೆನೆದು ಹಸಿಯಾದ ಸ್ವರದಲ್ಲಿ. ಮಮ್ಮಿಯತ್ತ ನೋಡಿದರೆ ಮಂಡಿಗೆ ಕೈಕಟ್ಟಿ ಕಣ್ಣನ್ನು ಮೇಲ್ಛಾವಣಿಗೆ ನೆಟ್ಟಿದ್ದಾರೆ. ಮಮ್ಮಿ ಅಳ್ತಾ ಇಲ್ಲ ದೀಪಕ್‌ಭಯ್ಯಾ ಬೈಕ್ ಆಕ್ಸಿಡೆಂಟ್‌ನಲ್ಲಿ ಸತ್ತುಹೋದಾಗ ಎಲ್ಲಾ ಎಷ್ಟೊಂದು ಅತ್ತಿದ್ದರು. ಶೋಭಾ ಪ್ರಜ್ಞೆತಪ್ಪಿ ಬಿದ್ದಿದ್ದಳು. ನಾನೂ ಬಿಕ್ಕಳಿಸಿ ಅತ್ತು ಮಮ್ಮಿ ಯನ್ನು ತಬ್ಬಿಕೊಂಡಿದ್ದೆ. ಇವರ್‍ಯಾರೂ ಅಳುತ್ತಲೇ ಇಲ್ಲ ಯಾಕೇ ? ಎಂದು ಗಣೇಶನನ್ನು ಕೇಳೋಣವೆಂದರೆ ಅವನು ನಾಪತ್ತೆ.

ಮನೆಯ ಹಿಂದೆ ನದಿ ಭೋರ್ಗರೆವ ಹರಿವ ಶಬ್ದ. ಹೊರಗೆ ಜನರ ಗಲಾಟೆ. ಎಲ್ಲಾ ಕೇಳುತ್ತಾ ಚಾಪೆಯ ಮೇಲೆ ಅಡ್ಡಾಗುತ್ತೇನೆ. ಹೊರಗೆ ಏಕೋ ಸೌದೆ ಹಾಕಿ ಉರಿಸುತ್ತಿರುವ ಉರಿಯ ಹೊಗೆಯ ಕಮರು ವಾಸನೆ ಮೂಗಿಗೆ ಬಡಿಯುವಾಗ ಉಸಿರು ಕಟ್ಟಿದಂತಾಗುತ್ತದೆ. ಮುಜುಗರ ಎನಿಸುತ್ತದೆ. ಡ್ಯಾಡಿಯಿಂದ ಅದೆಷ್ಟು ದೂರ ಬಂದಿದ್ದೇನೆ ಎಂದುಕೊಂಡಾಗ ಏಕೋ ಎದೆ ಭಾರವಾಗು ತ್ತದೆ. ನನ್ನನ್ನು ಪ್ರೀತಿಸುವುದಕ್ಕಿಂತಾ ಹೆಚ್ಚಾಗಿ ಡ್ಯಾಡಿ, ಮಮ್ಮಿ ಯನ್ನ ಲವ್ ಮಾಡ್ತಾರೆ. ಕಳೆದ ಬಾರಿ ಮಮ್ಮಿ ತೌರಿಗೆ ಹೋಗಿದ್ದಾಗ

ರಾತ್ರಿಯೆಲ್ಲಾ ನಿದ್ರೆ ಮಾಡದೆ ಸೋಫಾದಲ್ಲಿ ಕಾಲುಚಾಚಿ ಕುಳಿತು ಅದೆಷ್ಟೊಂದು ಸಿಗರೇಟು ಸುಟ್ಟಿದ್ದರು...!..!.!ವೇದಾ....ವೇದಾ.......ವೇದಾ...ಮಮ್ಮಿಯ ಹೆಸರಿಲ್ಲದೆ ಅವರ ನಾಲಿಗೆ ಆಡದು.

"ಚಿತ್ರಾ, ನಿದ್ರೆ ಬಂತೇನೇ ?"

ಮಮ್ಮಿಯ ಪ್ರಶ್ನೆಗೆ ಉತ್ತರಿಸುವ ಸಹನೆ ಬಾರದೆ ಡ್ಯಾಡಿಯನ್ನು ನೆನಸುತ್ತೇನೆ. ಡ್ಯಾಡಿ ಈಗ ಏನು ಮಾಡುತ್ತಿರಬಹುದು ? ಟೇಬಲ್ ಲ್ಯಾಂಪಿನ ಬೆಳಕಲ್ಲಿ ಕುಳಿತು ಪಟ್ಟೆಪಟ್ಟೆಯ ನೈಟ್ ಡ್ರೆಸ್ ತೊಟ್ಟು ಯಾವುದಾವರೂ ಥೀಸೀಸ್ ಆರಂಭಿಸಿರಬಹುದು.

"ಕಾವೇರಿ, ಚಿತ್ರಾಗೆ ನಿದ್ರೆ ಬಂದ್ಬಿಡ್ತು. ಇಷ್ಟು ದೂರದ ಪ್ರಯಾಣ ಇವಳಿಗೆ ಇದೇ ಮೊದಲು. ಅವಳನ್ನ ಕರ್‍ಕೊಂಡು ಹೋಗ್ಬೇಡಾಂದ್ರು ಅವರು ತಾಯಿ ಜೊತೆ ಅಲ್ಲದೆ ಮಕ್ಕಳು ಇನ್ನಾರ ಜೊತೆ ಹೋದಾರು ಅಂತಾ ಕರೆತಂದೆ.

"ಒಳ್ಳೇದಾಯ್ತು ಬಿಡು. ಸುಬ್ಬು ನೋಡಿದ ಹಾಗಾಯ್ತು."

"ಕಾವೇರಿ. ಜನ ಈಗ ಏನಂತಾರ್‍ಯೇ ?"

"ವೇದಾ, ಹಳೇ ಮಾತು ಯಾಕೆ ? ಅಯ್ಯೋ ಹದಿಮೂರು ವರ್ಷವಾಯ್ತು. ದಿನಕ್ಕೆ ನೂರು ಹೊಸಾ ಕತೆ ಹುಟ್ಟಿರೂವಾಗ ಜನ ಹಳೆಯುದನ್ನ ಮರೆತುಬಿಡ್ತಾರೆ ಅಲ್ವೇನೇ ? ಯಾರ್‍ಯಾರಲ್ಲಿ ಋಣತಿಂದಿರ್ತೇವೆಯೋ, ಅವರ ಹಿಂದೆ ಹೋಗಲೇ ಬೇಕೂಂತಾ ನಾನು ಹಿಂದೆಯೇ ಹೇಳಿರಲಿಲ್ವೇ ?

"ಕಾವೇರಿ ಸುಬ್ಬು ಏನುತಾರ್‍ಯೇ ?"

"ಲಕ್ಷಕ್ಕೊಬ್ಬರು ಅಂಥಾ ಮಂದಿ ವೇದಾ. ಮದ್ವೆ ಆದ್ಮೇಲೆ ಅವನಿಗೆ ಅಮ್ಮ ಬರುತ್ತೆ. ಬಂದು ಕಣ್ಣನ್ನ ಸೆಳಕೊಂಡು ಹೋಗುತ್ತೇಂತಾ ಯಾರು ಬಲ್ಲರು ? ಏನೋ ಅವನ ಹೀನ ಅದೃಷ್ಟ. ಅಪ್ಪಯ್ಯ ನನ್ನ

ಗರ್ಧ ಅವನ ಹೆಸರಿಗರ್ಧ ಆಸ್ತಿ ಬರೆದ್ಬಿಕಣೇ...'ನನಗ್ಯಾಕೆ ಪೇದಾಗೆ ಬರೆಯಿರಿ' ಎಂದ. 'ಅಂಥಾ ಮಗಳಿಗಿಂತಾ ಸಂಗೆ ಮೈದುನನೇ ಹೆಚ್ಚು' ಅಂದ್ರು...ಗಳಗಳಾಂತ ಅಪ್ಪಯ್ಯನ ಕಾಲು ಹಿಡಿದು ಅತ್ಬಿಟ್ಟ. ಹನ್ನೆರಡು ವರ್ಷವನ್ನು ಅಪ್ಪಯ್ಯನ ಸೇವೆಯಲ್ಲೇ ಕಳೆದ್ಬಿಟ್ಟ...ಅವನ್ನ ಈಗ ನೋಡಿದ್ಯಾ?"

"ನೋಡಿದೆ. ಅವರೂ ನೋಡಿದ್ರು"

ವೇದಾ. ಹೀಗನ್ಬ್ಯಾಳಿ ಅಂದ್ಕಾಬೇಡಾ. ನೀನು ಡಾಕ್ಟರ್ ಆದವಳು ಓದಿದವಳು. ಸುಬ್ಬುವಿನ ಬಗೆಗೆ ನಿಂಗೆ ಏನೂ ಅನ್ನಿಸೋಲ್ಲವೇನೇ ?"

"..............."

"ವೇದಾ. ಅವ್ನಿಗೆ ನಾಕು ಮಾತು ಸಮಾಧಾನ ಆದ್ರೂ ಹೇಳೆ. ಕಳೆದ ಬಾರಿ ಬಂದಾಗ ಮೂಕಿ ಹಾಗೆ ಹೋಗ್ಬಿಟ್ಟೆ. ನೀನು ಹೋದ್ಮೇಲೆ ಅವನು ಅತ್ತಿದ್ದನ್ನ ಕಂಡೇ ಕಣೇ"

"ಕಾವೇರಿ, ಏನ್ಮಾತಾಡ್ತೀ ನೀನು. ಹೆಣ್ಣಾದ ನೀನೇ ಹೀಗೆ ಹೇಳ ಬಹುದೇ ? ಖುಣ ಅಂತೀಯೆ. ಏನೇನೋ ಆಡ್ತಿಯೇ. ನನ್ನನ್ನ ನೀನು ಅರ್ಥ ಮಾಡಿಕೋಬೇಕೆ ? ಕಾವೇರಿ, ಏನ್ ಓದಿದ್ರೇನು, ಬಂಧನ ಅನ್ನೋದು ಇದೆಯಲ್ಲಾ ಅದರಿಂದ ಯಾರು ಮುಕ್ತರು ಹೇಳು ?"

"ರೂಪು ಶಾಶ್ವತ ಅಲ್ಲಾ ಕಣೇ"

"ನಾವು ಶಾಶ್ವತವೇ ಅಕ್ಕಾ. ನನ್ನ ಮೇಲೆ ಛಲ ಸಾಧಿಸಿದ ಅಪ್ಪಯ್ಯ ಹೋದ ದಾರಿಯೇ ನಮ್ಮದೂ ತಾನೇ ? ಬುತ್ತಿ ಮುಗಿದ್ಮೇಲೆ 'ಬರ್ತೀವೇ' ಅನ್ನಿರಬೇಕು"

ಕ್ಷಣಕಾಲ ಮೌನ. ನನಗೇನೂ ತಿಳಿಯದು. ತಾತನಿಗೆ ಸುಬ್ಬು ಮೈದುನ ಅಂತೆ. ಮೈದುನ ಅಂದರೇ ? ಓಹ್ ದೇವರೇ, ನನಗೇನೂ ಗೊತ್ತಾಗದು. ಏಕೋ ಮಮ್ಮಿ ಮುಸು ಮುಸು ಅತ್ತರು. 'ಹೋಗ್ಲಿ ಬಿಡು' ಎಂದರು ದೊಡ್ಡಮ್ಮ. ಯಾಕೇ....?

"ಅತ್ತಿಗೆ ಸ್ವಲ್ಪ ಹೊರಗೆ ಬರ್ತೀರಾ ?"

ಗಂಡಸಿನ ವರ್ಯದರ್ವ ಸ್ವರ ಕೇಳಿ ಮಮ್ಮಿ ತಟ್ಟನೆದ್ದು ಗೋಡೆಗೊರಗಿ ಕುಳಿತರು.

"ಇಲ್ಲಿಗೇ ಬಾ ಸುಬ್ಬು. ಜೊಯಿಸರು ಏನಂತಾರೆ?"

ಆತ ಒಳಗೆ ಬಂದಾಗ ಕಣ್ಬಟ್ಟೆ. ಮೈ 'ಜುಂ' ಎಂದಿತು. ಎಷ್ಟೊಂದು ಕುರೂಪಿ, ಮೊನ್ನೆಯಿನ್ನು ಮಮ್ಮಿ ಕತೆ ಹೇಳಿ "ರೂಪ ದರ್ಶಿ"ಯ ಗರಿಬಾಲ್ಡಿಯಂತೆ ಹೂ ಬಿದ್ದ ಎಡೆಗಣ್ಣು, ಮೈಲಿ ಕಲೆತುಂಬಿದ ಬಾಗಿದ ಸೊಂಟ, ದಪ್ಪನಾದ ಮೂಗು, ಉಟ್ಟ ದಟ್ಟಿ ಪಂಚೆ ಬನಿಯನ್ ಈತನಿಗೆ ತಾತ ಆಸ್ತಿ ಬರೆದರೇ?...? ದೊಡ್ಡಮ್ಮ ಹೊಗಳಿದ ಸುಬ್ಬು ಈತನೇ?

"ಪ್ರಯಾಣ ಮಾಡಿ ಬಂದಾರು ಕಾಫಿನಾದ್ರು ಕುಡೀಲಿ ಅಂದ್ರು ಪುರೋಹಿತರು. ಅಜ್ಜತ್ತೆ ಕಾಫಿ ಕಳಿಸಿದ್ದಾರೆ ತಗಂಡು ಬರಲೇ...?"

"ತಗಂಡು ಬಾಪ್ಪಾ......ಸತ್ತವರ ಜೊತೆ ಸಾಯುಕ್ಕುಂಟೇ?... ಎಂದರು ದೊಡ್ಡಮ್ಮ.ಕಾಫಿ ತಂದರು ಆತ. ನನ್ನ ಕೈಗೆ ಲೋಟ ಕೊಡುವಾಗ "ಅತ್ಗೆ, ಚಿತ್ರಯಲ್ಲವೇ?" ಎಂದುಕೆನ್ನೆ ಸವರಿದರು, ಹಾಗಾ ದರೆ ಅವರಿಗೆ ನಾನು ಗೊತ್ತು. ನನಗೆ ಯೂರೂ ಗೊತ್ತಿಲ್ಲವಲ್ಲಾ....!

"ಬೆಳಗ್ಗೆ ಆರಕ್ಕೆ ಸ್ಮಶಾನಕ್ಕೆ ಹೊರಟುಬಿಡ್ತೀಗೆ ನೀವು ಮಲಗಿ. ನಾನು ಅಲ್ಲಿರ್ತೀನಿ"

ಆತ ಹೊರಟು ಹೋದ ಮೇಲೆ ಮಮ್ಮಿ ಲೋಟಾ ಕೈಗೆತ್ತಿಕೊಂಡು "ಚಿತ್ರಾನ ಗುರ್ತಿಸಿದರು" ಎಂದಳು. "ಗುರ್ತಿಸದೆ? ಎಷ್ಟಾದ್ರೂ ಕರು ಳಲ್ಲವಾ? ಎಂದುದೊಡ್ಡಮ್ಮ ಅನ್ನುವಾಗ ನನಗೇನೂ ತೋಚದು ಎಲ್ಲ ರಿಗೂ ಕರುಳು ಇರುತ್ತದೆಂದುಪ್ರಭಾ ರಾತ್ರಿಕ್ ಪಾಠ ಹೇಳುತ್ತಿದ್ದರಲ್ಲಾ-!

"ಮಮ್ಮಿ, ಅವರು ನನಗೆ ಏನಾಗ್ಬೇಕು?"

ಮಮ್ಮಿ ಅಪ್ರತಿಭಳಾದಂತೆ ತೋರಿತು. ಬಹುಶಃ ಅವರೂ ಈ ಸಂಬಂಧಗಳನ್ನು ಮರೆತಿರಬಹುದು, ಈಗ ದೊಡ್ಡಮ್ಮನೇ ಉತ್ತರಿಸಿದರು.

"ಅವನು ಸುಬ್ಬು ಅಂತಾ. ನಮ್ಮಪ್ಪನ ತಮ್ಮ. ನಮಗೆ ಮಾವ ಆಗ್ಬೇಕು"

"ಹಾಗಾದ್ರೆ ನಾನು ಅಂಕಲ್ ಅಂತಾ ಕೂಗ್ಲಾ?"

"ಏನ್ಬೇಕಾದ್ರೂ ಕೂಗು. ಏನೇ ಕೂಗಿದ್ರೂ ಸಂಬಂಧ ಹೋಗುತ್ತಾ?"

ಸುಬ್ಬು ಯಾರೆಂದು ಗೊತ್ತಾಯ್ತಲ್ಲಾ ಎನಿಸಿ ಹೊದ್ದು ಮಲಗಿದೆ.

ಮುಂಜಾನೆ ಕಣ್ಬಿಟ್ಟಾಗ ತಾತಾ ಆಗಲೇ ಹೊರಟಿದ್ದಾರೆ. ಬಾಯಿ ತುಂಬಾ ಅಕ್ಕಿಕಾಳು, ಮಮ್ಮಿ ನನ್ನ ಕೈಲು ಅಕ್ಕಿ ಹಾಕಿಸಿದಳು. ಎಲ್ಲರೂ ಅಳುತ್ತಿದ್ದರು. ಗಣೇಶ ಗಲ್ಲಕ್ಕೆ ಕೈ ಕೊಟ್ಟು ದೂರ ಕುಳಿತಿದ್ದ, ದೊಡ್ಡಪ್ಪ ಕಣ್ಣೊರೆಸಿಕೊಳ್ಳುತ್ತಿದ್ದರು. ದೊಡ್ಡಮ್ಮನ ಮದುವೆಯಾದ ಹೆಣ್ಣು ಮಕ್ಕಳಲ್ಲಿ ಯಾರೂ ಬಂದಿರಲೇ ಇಲ್ಲ. ಈಗ ನನಗೇನೂ ಅನ್ನಿಸಲೇ ಇಲ್ಲ.

ತಾತಾ ಹೊರಟು ಹೋದರು. ಎಲ್ಲೆಲ್ಲೂ ಗಂಭೀರ ಮೌನ. ಅದನ್ ತಾಳಲಾರದೆ ಗಣೇಶನ ಕೈ ಹಿಡಿದು ಮನೆಯ ಹಿಂದೆ ಹೊರಟೆ. ಹಿದ್ದಲು ದಾಟಿ ಕಾಲುವೆ ಹಾರಿ, ಮಾವಿನ ತೋಪು ಬಳಸಿ ಎರಡು ಹೆಜ್ಜೆ ಇಟ್ಟರೆ ಹರಿಯುತ್ತಿರುವ ನದಿ. ಧಡಧಡನೆ ಮೃದು ಮರಳ ಮೇಲೆ ಓಡಿ ಅಂಗೈ ತುಂಬಾ ನೀರು ತುಂಬಿಕೊಂಡು ಮುಗಿಲಿಗೆ ಎರಚಿ, ಅದು ನನ್ನ ಮೈ ಮೇಲೆ ಬಿದ್ದಾಗ ಮೈ 'ಜುಂ' ಎಂತು ಮತ್ತೊಮ್ಮೆ ಪುಲಕಗೊಂಡಿತ್ತು.

ತುಸು ದೂರ ಬಂದು ಕೈಯೂರಿ ಕುಳಿತೆ. ಏನೆಂದು 'ರಿವರ್' ಸೋಲೆ ಬರೆಯಬಹುದು?

"ಗಣೇಶ, ಇದರಲ್ಲಿ ಏನೇನಿರುತ್ತೆ ?"

"ಎಲ್ಲಾ ಇರುತ್ತೆ. ಕಳೆದ ವರ್ಷ ಎರಡು ಮೊಸಳೆ ಇತ್ತು. ಅಂದ್ಮೇಲೆ ಏನೇನಿದೆ ಊಹಿಸು ?"

"ಆಳ..........ಅಗಲ........ಹ್ಯಾಗೇ ? "

"ಆಳ, ಮುಗಿದ್ರೆ ಮೇಲೆ ಬರುಲ್ಲಾ ಅಂತಿಟ್ಕ. ಇದರಲ್ಲಿ ಸುಳಿ ಬಂದ್ಬಿಡುತ್ತೆ. ಆಗ ಯಾರಾದ್ರೂ ಸಿಕ್ಕರು ಅಂದ್ರೆ ತಳವೇ ಗತಿ. ನದಿ ಗಳಲ್ಲಿ ಸುಳಿ ಹೆಚ್ಚು."

"ಸುಳಿ ಅಂದ್ರೆ ?, ಬಿಡಿಸಿಕೊಳ್ಳೋ ಹಾಗಿಲ್ವಾ ? "

"ಎಲ್ಬಂತು. ಸುಳಿ, ಬಡ್ಡಿಮಗಂದು ಬಲು ಕೆಟ್ಟದು. ಅದಕ್ಕೇ ಯಾರೂ ಇಲ್ಲಿ ಈಜೋಕೆ ಬರೋಲ್ಲ. ಈಗ ನೋಡು, ಒಂದು ಮ್ಯಾಜಿಕ್ ಮಾಡ್ತೀನಿ."

ಗಣೇಶ ಬಾಗಿ ಒಂದು ತೆಳು ಕಲ್ಲನ್ನು ತೆಗೆದು ಬಳುಕಿ ನಿಂತು ನೀರಿನಲ್ಲಿ ತೂರಿ ಒಗೆದ. ಹನ್ನೆರಡು ಕಡೆ ಕುಣಿದು ನೀರನ್ನು ಚುಂಬಿಸಿ ಕಲ್ಲು ಮುಳುಗಿತು. ನಿಜವಾಗಿಯೂ ಮ್ಯಾಜಿಕ್ ಎನಿಸಿತು. ಗಣೇಶ ಎಷ್ಟೊಂದು ಬುದ್ಧಿವಂತ....

ನಾನು ಹತ್ತಾರು ಬಾರಿ 'ಟ್ರೈ' ಮಾಡಿ ನೀರನ್ನು ಕಲ್ಲು, ಹತ್ತಾರು ಬಾರಿ ಚುಂದಿಸದಿದ್ದರೂ ನಾಲ್ಕು ಬಾರಿಯಾದರೂ ಸಂಧಿಸುವಂತೆ ಬೀಸುವು ದನ್ನು ಕಲಿತು ಸೋತು. ಮರಳ ಮೇಲೆ ಕಾಲು ಚಾಚಿ ಕತ್ತೆತ್ತಿದೆ.

"ಚಿತ್ರಾ, ಮೊದ್ಲು ನಿಂಗೆ ಇಲ್ಲಿಗೆ ಬರ್ಬೇಕು ಅನ್ನಿಸ್ತಾ ಇರಲಿಲ್ವಾ?"

"ಅನ್ನಿಸ್ತಿತ್ತು. ಆದ್ರೆ ಮಮ್ಮಿ ಡ್ಯಾಡಿ, ಬರ್‍ತಾ ಇರಲಿಲ್ಲ ಕಣೋ"

"ಚಿಕ್ಕಮ್ಮ ಒಳ್ಳೆಯೋಳಂತೆ. ಆದ್ರೆ ನಿಮ್ಮಪ್ಪಂದೆ ಕೆಟ್ಟೋರಂತೆ ಹೌದಾ....? "

"ಸುಳ್ಳು. ಬರೀ ಹಸಿ ಸುಳ್ಳು. ಡ್ಯಾಡಿ ನನ್ನನ್ನ ಲವ್ ಮಾಡ್ತಾರೆ. ಕಾನ್ಸ್ಟೆಂಟ್ ತನಕ ದಿನಾಲೂ ಡ್ರಾಪ್ ಕೊಡ್ತಾರೆ ಗೊತ್ತಾ ? ಹೀಗೆಲ್ಲಾ, ತಿಳೀದೆ ನೀನು ಮಾತಾಡಿದ್ರೆ ನಿನ್ನ ಸಂಗ 'ಠೂ' ಬಿಡ್ತೀನೆ"

ಏಕೋ ಕೋಪದ ಹಿಂದೆ ಅಳುವೂ ಬಂದಂತೆನಿಸಿ ಮಂಡಿಗೆ ಮುಖ ಹುದುಗಿಸಿದರೆ ಗಣೇಶ ಹತ್ತಿರ ಬಂದು ಬೆನ್ನ ಮೇಲೆ ಕೈಯಿಡುತ್ತಾನೆ.

"ಸಿಟ್ಕೋಬೇಡಾ ತಪ್ಪಾಯ್ತು ಕಣೇ....ನೀನು ನಂಗೆ ಅಕ್ಕ ಅಗ್ಬೇಕು ನಂಗೇನು ಗೊತ್ತು, ಅಮ್ಮ ತಾತಾ ಸುಬ್ಬು ಚಿಕ್ಕಪ್ಪ ಎಲ್ಲಾ ಹಾಗಂತಾರೆ"

"They are all fools"

"ಹೌದಾ ?"

"ನಿನಗೆ ಗೊತ್ತಿಲ್ಲ ಗಣೇಶ–ಓಹ್... ಹೋಗ್ಲಿ ಬಿಡು. ನಿಮ್ಮ ಅಮ್ಮ ಸುಬ್ಬು ಅಂಕಲ್‌ನ ತುಂಬಾ ಪ್ರೀತಿಸ್ತಾರಾ ?"

"ಹೌದು ಮತ್ತೆ. ಸುಬ್ಬು ಚಿಕ್ಕಪ್ಪ ಒಳ್ಳೆಯೋನು. ನಂಗೆ ಸದಾ ಹಣ್ಣು ತರ್‍ತಿರ್‍ತಾನೆ."

"ಯಾಕೇ? ಅವರಿಗೆ ನಿನ್ನಂಥಾ ಮಕ್ಳಿಲ್ವಾ ?"

ಆಚೆ ಮನೆ ರಾಜಕ್ಕ ಹೇಳ್ತಾಳೆ, ಸುಬ್ಬು ಚಿಕ್ಕಪ್ಪನ ಹೆಂಡ್ತಿ ಓಡಿ ಹೋದ್ಲಂತೆ. ಇದ್ನೆಲ್ಲಾ ಅಮ್ಮನ್ನ ಕೇಳಿದ್ರೆ ಬೈತಾಳೆ"

"ಯಾಕೆ ಓಡಿ ಹೋದ್ಲು?"

"ಯಾಕೇಂದ್ರೆ, ಮದ್ವೆ ಆದ್ಮೇಲೆ ಚಿಕ್ಕಪ್ಪಂಗೆ ಈ ಕೊಪ ಬಂತು. ಹೆಂಡ್ತಿ ಓದ್ತೀನಿ ಅಂದ್ಲು–ಕಳಿಸಿದ್ರು. ಹಾಗಿಂದ್ವಾಗೆ ಪುಸ್........"

ಗಣೇಶ ಎರಡೂ ಕೈಯೆತ್ತಿ ಅಭಿನಯ ಮಾಡಿದಾಗ ಸುಬ್ಬು ಅಂಕಲ್ ಬಗೆಗೆ ಕೆಡಕೆನಿಸುತ್ತದೆ. ಎಂಥಾ ಕೆಟ್ಟ ಹೆಂಗಸು ಆಕೆ ಎನಿಸುತ್ತದೆ.

"ಅಂಕಲು ಹೋಗಿ ಅವರನ್ನ ಎಳ್ಕೊಂಡು ಬರ್ಬೇಕಿತ್ತು."

ಏನೋಪ್ಪಾ...ಅವನ್ನ ಅವಳು ಪ್ರೀತಿ ಮಾಡ್ತಾಳೆ. ಹೊದ್ರೇ ಹೋಗ್ಲಿ ಅಂದ್ರಂತೆ ಚಿಕ್ಕಪ್ಪ ಆ ಮೇಲೆ ಅವಳು ಅದ್ಯಾವ್ನೋನ ಹಿಂದೆಯೋ ಓಡಿ ಹೋದ್ಲಂತೆ. ಲೇ ಚಿತ್ರಾ, ಅಂದ್ಹಾಗೆ ಪ್ರೀತಿ ಅಂದ್ರೇನೇ?"

ಗಣೇಶನ ಪ್ರಶ್ನೆಯಿಂದ ಕೆನ್ನೆ ಕೆಂಪೇರುತ್ತದೆ. ನೆರೆಮನೆಯ ಪ್ರಮೋದ ಕಾಲೇಜಿಗೆ ಹೋಗುವವ ಹೀಗೆಯೇ ಒಮ್ಮೆ ಕೇಳಿ, ಅದ್ನ ಮಮ್ಮಿಯ ಕಿವಿ ತಲುಪಿ ಬೈಸಿಕೊಂಡಿದ್ದೆ. ನನಗೂ 'ಛೀ' ಬಿದ್ದಿತ್ತು; ಮೊದಲು ಪ್ರೀತಿ ಎಂದರೇನು ಎಂದು ಗೊತ್ತಿರಲಿಲ್ಲ. ಈಗ?

"ಚಿತ್ರಾ, ಗಣೇಶಾ, ನೀರು ಹಾಕ್ಕೊಂಡು ಕಾಫಿ ಕುಡಿ ಬನ್ನಿ. ನದಿ ಪಕ್ಕದಲ್ಲಿ ಥಂಡಿ ಗಾಳಿ" ಮಮ್ಮಿಯ ಕೂಗಿಗೆ ಸ್ಕರ್ಟ್ ಕೊಡವಿಕೊಂಡು, ಉತ್ತರದಿಂದ ತಪ್ಪಿಸಿಕೊಂಡು ಓಡಿ ಬಂದು ಮಮ್ಮಿಯ ಹಿಂದೆ ಮನೆ ಸೇರಿ ಸ್ನಾನ ಮುಗಿಸಿ, ಕೂದಲನ್ನು ಒಣಗಬಿಟ್ಟು ಕಾಫಿ ಹೀರುವ ತನಕ ಸುಬ್ಬು ಅಂಕಲ್ ಹೆಂಡತಿಯ ಧ್ಯಾನವೇ?

"ಮಮ್ಮಿ, ಸುಬ್ಬು ಅಂಕಲ್ ಹೆಂಡತಿ ಓದಲಿಕ್ಕೆ ಅಂತಾ ಹೋಗಿ ಓಡಿ ಹೋಗಿಬಿಟ್ರಂತೆ ಹೌದಾ"? ಎನ್ನುತ್ತೇನೆ ಕಾಫಿ ಹೀರುತ್ತಾ.

ಮಮ್ಮಿಯ ಕೈಯಲ್ಲಿದ್ದ ಲೋಟ ಅಲುಗಾಡಿ ಕಾಫಿ ತುಳುಕಿ. ಕಾಫಿ ನೆತ್ತಿಗೆ ಸೇರಿದಂತಾಗಿ ಕೆಮ್ಮಿ ಕೆಮ್ಮಿ ಕಣ್ಣ ತುಂಬಾ ನೀರು ತುಂಬಿಕೊಂಡು ಗದರಿಸುತ್ತಾಳೆ.

"ಯಾರು ಹೇಳಿದ್ರು ಈ ಕತೇನಾ ? "

"ಗಣೇಶ ಮಮ್ಮಿ"

"ಬ್ರೂಟ್ ಚಿತ್ರಾ ಇನ್ನೊಮ್ಮೆ ನೀನು ಅವನ ಬಳಿ ಸೇರ್ಬೇಡಾ. ಏನೆಲ್ಲಾ ನಿನ್ನ ಕಿವಿಗೆ ತುಂಬ್ತಾನೆ, ಇನ್ನೇನು ಹೇಳಿದ? ಯಾರು ಅಂತಂದ?

"ಅದೆಲ್ಲಾ ಹೇಳ್ಲಿಲ್ಲಾ ಮಮ್ಮಿ. ಓದಲಿಕ್ಕೆ ಹೋದವಳು ಅಂಕಲ್‌ನ ಬಿಟ್ಟು ಹೋದದ್ದು ಸರಿಯಾ? ಮಮ್ಮಿ ನಾನೇ ಆಗಿದ್ದಿದ್ರೆ 'ಥಂ' ಅನಿಸ್ತಿದೆ"

ಮಮ್ಮಿಯ ಮುಖ ನೋಡಿದ, ಬೆವರಿಡೆ. ಮುಖದ ತುಂಬಾ ಬೆವರು ಕೆಂಪೇರಿದ ಮೋರೆ. ಹಲ್ಗಳಿಂದ ಕಚ್ಚಿದ ಕೆಳದುಟಿ. ಕಾಫಿ ಲೋಟ ಕೆಳಗಿರಿಸಿ ಕಣ್ಣರಳಿಸಿ ಎರಡು ಕೈಗಳಿಂದ ತಲೆ ಹಿಡಿದು ಕುಲುಕಿದಳು.

ಕತ್ತೆ' ಇದು ನಮ್ಮ ಊರಲ್ಲ. ಹಾಗೆಲ್ಲಾ ಇಲ್ಲಿ ಮಾತಾಡ್ಬಾರ್ದು ತಲೆ ಒಡೆದು ಬಿಡ್ತೀನಿ. ದೊಡ್ಡೋರ ವಿಷ್ಯ ನಿನಗ್ಯಾಕೆ? ಗೊತ್ತಾಯ್ತಾ?"

ತಲೆ ನೋವೇರಿ, ಅಕಾಲಿಕ ಭಯ ಮೂಡಿ ಕಣ್ತುಂಬಿ ಬರುತ್ತದೆ. ಮಮ್ಮಿ ಇಂಥಾ ಶಿಕ್ಷೆ ಕೊಡುತ್ತಿರುವುದು ಇದೇ ಮೊದಲು. ಸುಬ್ಬು ಅಂಕಲ್ ಬಗೆಗೆ ಅಮ್ಮನಿಗೇಕೆ ಭಯ?

ಲೋಟವನ್ನು ಕೆಳಗಿಳಿಸಿ ಬಿಕ್ಕಿ ಬಿಕ್ಕಿ ಅಳುವಾಗ ಆ ಸ್ವರದಲ್ಲಿ ಡ್ಯಾಡಿ ಡ್ಯಾಡಿ ಎಂಬ ಬಯಕೆ ಕೂಗು ತುಂಬುತ್ತದೆ. ಕೋಪದಿಂದ ಲೋಟವನ್ನು ರೊಯ್ಯನೆ ಬೀಸಿ ಹೊರಗೋಡಿದಾಗಲೂ ಮಮ್ಮಿಯ ಗೊಣಗಾಟ ಕೇಳುತ್ತಿರುತ್ತದೆ.

* * *

ಮೂರೇ ದಿನಕ್ಕೆ ಮಮ್ಮಿ ಹೊರಡುತ್ತಾಳೆ. ಬೇಸರ ತುಂಬುತ್ತದೆ. ಅವಳಕ್ಕನ ಪ್ರಶ್ನೆಗೆ "ಏನ್ಮಾಡಲಿ ರಜಾ ಲಭ್ಯವಿಲ್ಲ. ಋಣ ಇದ್ರೆ ವರ್ಷದ ತಿಥಿಗೆ ಬರ್ತೀನಿ" ಅನ್ನುತ್ತಾಳೆ. ಈಗ ತಾತನ ಮನೆಗೆ ದೊಡ್ಡಮ್ಮನೇ ಯಜಮಾನಿ. ಮನೆ ಅವರಿಗೇ ಅಂತೆ, ಎಷ್ಟು ದೊಡ್ಡಮನೆ. ಮಮ್ಮಿಗೆ ಏನೂ ಇಲ್ಲ. ಅವಳು ಕೇಳಬಾರದಾ? ಸದಾ ಈ ನದಿ, ಮನೆ, ಮರಳು ನೋಡುತ್ತಿದ್ದರೆ ಅದೆಷ್ಟು ಚಂದ?

"ಅತ್ತಿಗೆ ಗಾಡಿ ಸಿದ್ಧವಾಗಿದೆ" ಎಂದು ಕೂಗಿದವರು ಅಂಕಲ್. ಸುಬ್ಬು ಅಂಕಲ್ ಒಳ್ಳೆಯವರು ಎನ್ನಿಸುತ್ತದೆ. ಈ ಮೂರು ದಿನಗಳಿಂದ ಸುಮಾರು ನೂರು ಬಾರಿಯಾದರೂ ತಲೆ ಸವರಿ "ಚಿತ್ರಾ" ಎಂದು ಉದ್ಗರಿಸಿದ್ದಾರೆ. ಅವರನ್ನು ನೋಡಿದರೆ ಪಾಪಾ ಎನಿಸುತ್ತದೆ."

"ಅಕ್ಕಾ" ನಡೆದೇ ಹೋಗ್ತೀವಿ. ಗಾಡಿ ಯಾಕೆ. ಹಾಗಂತಾ ಹೇಳು" ಎಂದಳು ಮಮ್ಮಿ.

"ನೀನೇ ಹೇಳು ವೇದಾ. ಬಂದ ದಿನದಿಂದ ನೋಡ್ತಿದ್ದೀನಿ. ಸುಬ್ಬು ಹತ್ತಿರ ಮಾತಾಡಿಲ್ಲ. ಅವನಿಗೆರಡು ಸಮಾಧಾನದ ನುಡಿ ಆಡ್ಬಾರ್ದೆ?"

"ಏನ್ಮಾಡಲಿ ಅಕ್ಕಾ. ಅವನಿಗಿಂತಲೂ ನನಗೆ ಅಪ್ಪಯ್ಯನ ದುಃಖ ಹೆಚ್ಚು ಅಲ್ವಾ?"

"ಅದ್ಕಲ್ಲಾ ವೇದಾ. ಅವನಿಗೆ ಮದ್ವೆ ಮಾಡ್ಕೋಂತಾ ಹೇಳಿ ಸೋತೆ ರೂಪ ಹೋದ್ರೇನು, ಮಾನವೀಯತೆ ಇದೆಯಲ್ಲಾ"

"ನಿನ್ನ ಮಾತಿನ ವರಸೆ ಎಲ್ಲಾ ಅರ್ಥವಾಗುತ್ತೆ ಅಕ್ಕಾ ಆಡಿಬಿಡು. ಅನ್ನಿಸ್ಕೋತೀನಿ ನಾನು ಸುಬ್ಬೂಗೆ ಏನೂ ಹೇಳ್ಲಾರೆ ಕಾವೇರಿ ಅವರೆದುರು. ನಾನು ಹೇಡಿಯಾಗ್ತೀನಿ. ಕ್ಷಮಿಸು ನನ್ನನ್ನ."

ಮಮ್ಮಿ ಕಣ್ಣೊರಸಿಕೊಂಡು ಹೊರಗೆ ನಡೆದಾಗ ಆಕೆ ಕಟುಕಿ ಎನಿಸುತ್ತದೆ. ಸುಬ್ಬೂಗೆ ಮದ್ವೆ ಮಾಡ್ಕೋ ಅಂತಾ ಹೇಳಿದ್ರೆ ಏನಾಗುತ್ತೆ ಮಹಾ?

ತಟ್ಟನೆ ಹಿತ್ತಲಿಗೆ ಓಡಿ ತೋಪು ದಾಟಿ. ನದಿಯ ಸನಿಹ ನಿಂತೆ. ನದಿ ಹರಿಯುತ್ತಲೇ ಇದೆ, ಗಣೇಶನ ಕೂಗು ಕೇಳಿ ಓಡಿ ಬಂದು ಅವನ ಕೈ ಹಿಡಿದು ಮುತ್ತಿಕ್ಕುವಾಗ ಅಳು ಚಿಮ್ಮಿತು. ಅತೀ ಹತ್ತಿರದವರು

ದೂರಾದಂತೆ, ಈಗ "ಹೋಗಿ ಬರ್ತೇವೆ" ಎಂದು ಹೇಳಲೂ ಬಾರದಂತೆ ಮೌನವಾಗಿ ಗಾಡಿಯೊಳಗೆ ಕೂತಾಗ ಸುಬ್ಬು ಅಂಕಲ್ ಸಾರಥಿಯಾದರು.

ಎತ್ತಿನ ಕೊರಳಿನ ಗೆಜ್ಜೆಯ ನಾದ. ಪಕ್ಕದಲ್ಲಿ ಹರಿಯುತ್ತಿರುವ ನದಿ. ಅದೆ ಎಷ್ಟೊಂದು ನಿರ್ಲಿಪ್ತತೆಯನ್ನು ಮೈ ಗೂಡಿಸಿಕೊಂಡು ಹರಿಯುತ್ತಿದೆ ಬರೇ ಮೌನ. ಈಗ ಮಮ್ಮಿ ಅಂಕಲ್‌ಗೆ ಆ ಮಾತನ್ನು ಹೇಳಬೇಕಾಗಿದೆ ?

ದೂರದಲ್ಲಿ ರೈಲು ಶಿಳ್ಳೆ ಹಾಕಿದ ಶಬ್ದ. ಆ ರೈಲು ನನ್ನನ್ನು ಇಲ್ಲಿಂದ ಬಹುದೂರ ಸೆಳೆದೊಯ್ದು ಬಿಡುತ್ತದೆ. ಎಲ್ಲರನ್ನೂ ಈ ಅಪರೂಪ ವಾತಾವರಣವನ್ನು ತೊರೆಸುತ್ತದೆ. ಏನಿದೀ ಪ್ರಯಾಣ?

ಸ್ಟೇಷನ್ ಮುಂದೆ ಗಾಡಿ ನಿಂತಾಗ ಧುಮುಕಿದೆ. ಮಮ್ಮಿ ಇಳಿದಳು. ಸುಬ್ಬು ಅಂಕಲ್ ಧಾವಿಸಿ ಹೋಗಿ ಮಮ್ಮಿಯನ್ನು ಹಿಂದೆ ಹಾಕಿ ಎರಡು ಟಿಕೇಟ್ ಕೊಂಡು ತಂದಾಗ ಅವರನ್ನು ತಬ್ಬಿ ಹಿಡಿದು ಅಳಬೇಕೆನಿಸಿತು.

ಮಮ್ಮಿಯ ಪಕ್ಕದಲ್ಲಿ ಕುಳಿತೆ. ಅಂಕಲ್ ಟಿಕೇಟನ್ನು ನನ್ನ ಕೈಲಿತ್ತರು. ಮಮ್ಮಿ ಅವರಿಗೆ ಥ್ಯಾಂಕ್ಸ್ ಹೇಳಬಾರದೇ ?

"ವೇದಾ. ಹನ್ನೊಂದನೆ ದಿನ ಬರ್ತೀಯಾ ?"

"ಉಹ್ಞೂಂ"

"ವೇದಾ ಅಪ್ಪಯ್ಯ ತಪ್ಪು ಮಾಡಿದ್ದಾರೆ. ಆಸ್ತಿಯನ್ನು ನನಗರ್ಧ, ಅತ್ತಿಗೆಗರ್ಧ ಬರೆದಿದ್ದಾರೆ. ಅದು ನ್ಯಾಯವಾಗಿ ನಿನಗೆ ಸೇರಬೇಕಾದದ್ದು. ಅದನ್ನ ನಿನ್ನ ಹೆಸರಿಗೆ ಬರೀತೀನಿ"

"ಅಪ್ಪಯ್ಯ ನ್ಯಾಯವಾಗೇ ಮಾಡಿದ್ದಾರೆ"

"ನನಗೆ ಬೇಡಾ ವೇದಾ. ನಮ್ಮದು ಅಂದ್ಕಂಡಿದ್ದೇ ನಮಗಿಲ್ಲ. ಇನ್ನು ಇದ್ಯಾಕೆ ?"

ಮಮ್ಮಿ ಪಕ್ಕನೆ ಕತ್ತೆತ್ತಿ ಅವರತ್ತ ನೋಡಿ ತಲೆ ತಗ್ಗಿಸುತ್ತಾಳೆ. ಅಂಕಲ್ ಬೇರೆತ್ತಲೋ ನೋಡುತ್ತಾರೆ. ಮಮ್ಮಿ ಅವರೊಡನೆ ಮಾತಾಡಿದಳಲ್ಲಾ ಎಂದು ಸಂತೋಷವಾಗುತ್ತದೆ. ಈಗ ಮಮ್ಮಿ 'ಆ ಮಾತನ್ನು' ಹೇಳಬಾರದೇ ?

"ಚಿತ್ರಾಗೆ ಬರೆದ್ಬಿಡ್ತೀನೆ. ಅದು ಅವಳಿಗೆ ಸೇರಲಿ"

"ಅಪ್ಪಯ್ಯನ ಆಸೆ ಹಾಳು ಮಾಡ್ಬೇಡಿ. ನನಗೆ ಆಸ್ತಿ ಆಸೆ ಇಲ್ಲ. ಒಂದ್ಮಾತು...."

"ಏನು? "

"ನೀವು ಮ...ದ್ವೆ ..ಮಾಡ್ಕೊಳ್ಳಿ. ಆಗ ..."

ರೈಲು ಶಿಳ್ಳೆ ಹಾಕಿ ಸಾವಧಾನವಾಗಿ ಚಲಿಸಿತು. ಸುಬ್ಬು ಅಂಕಲ್ ಜೊತೆಯಲ್ಲೇ ನಡೆದು ಬಂದರು.

"ವೇದಾ. ಪ್ರೇಮ ಪ್ರೀತಿ ಅನ್ನೋದು ಹರಿಯೋ ನದಿ ಇದ್ದಹಾಗೆ. ಅದು ಎಂದೂ ಮುಂದೆ ಮುಂದೆ ಹರಿಯುತ್ತೇ ಹೊರ್ತು ಹಿಂದಿರುಗಲಾರದು ಅಲ್ವೇ...? ಹಾಗೇ ನನ್ನದೂ. ಈ ಜನ್ಮದಲ್ಲಿ ಅದು ಸಾಧ್ಯವಿಲ್ಲ ಮುಂದಿನ ಬಾರಿ ಚಿತ್ರಾನ ಕರೆದು ತಾ. ಅವಳಿಗೆ ಆಸ್ತಿ ಬರೀತೀನಿ"

ರೈಲಿನ ವೇಗ ಅತಿಯಾಯ್ತು. ಮಮ್ಮಿ ಕಣ್ಣೊರಸಿಕೊಂಡಳು; ನನಗೂ ಎದೆ ತುಂಬಿ ಬಂತು. ಅಂಕಲ್ ಬಗೆಗೆ ಮನ ಮಿದುವಾಯ್ತು. ಅಂಕಲ್ ಕೂಡಾ ಕಣ್ಣೊರಸಿಕೊಂಡು ಮೃದುವಾಗಿ ನನ್ನ ಕೆನ್ನೆ ಸವರಿ ತಿರುಗಿ ನಿಂತರು.

* * * * *

ಡ್ಯಾಡಿ ಸ್ಟೇಷನ್‌ಗೆ ಕಾರು ತಂದಿದ್ದರು. ಅದೇ ಗಂಭೀರ ಮೊಗ.

ಮಾತಿಲ್ಲದೆ ಮನೆ ಮುಟ್ಟಿದಾಗ ಹೊಸ ಜಗತ್ತನ್ನು ಪ್ರವೇಶಿಸಿದ ಅಗಂತು ಕನ ರೀತಿ.

ಗಣೇಶ, ದೊಡ್ಡಮ್ಮ, ಅಂಕಲ್, ನದಿ, ಎಲ್ಲವರ ಬಗ್ಗೆ ಡ್ಯಾಡಿ ಯೊಡನೆ ಹೇಳಬೇಕಿತ್ತು. ಆದಿರೆ ಆ ಗಂಭೀರ ಮೋರೆ? ಧೈರ್ಯ ಸಾಲದೆ ರೂಮಿಗೋಡಿ ಡ್ರೆಸ್ ಬದಲಿಸುವಾಗ ಕಣ್ಣು ಶಾಲೆಯ ಪುಸ್ತಕಗಳತ್ತ.

"ವೇದಾ ಇಷ್ಟು ಬೇಗ ಬಂದ್ಬಿಟ್ಟೆ" ಎಂದರು ಡ್ಯಾಡಿ ಮೆಲ್ಲಗೆ.

"ಬಂದ್ಬಿಟ್ಟೆ"

"ವೇದಾ, don't mistake me. ಸುಬ್ಬು ಇದ್ರಾ ?"

ಪುಸ್ತಕ ಹಿಡಿದ ತನ್ನ ಕೈ ಬಿಗಿಯಾಗುತ್ತವೆ. ಹಾಗಾದರೆ ಡ್ಯಾಡಿಗೂ ಅಂಕಲ್ ಗೊತ್ತು. ನನಗೊಬ್ಬಳಿಗೇ ಏನೇನೂ ತಿಳಿಯದು. ಅವರೇಕೆ ನನಗೆ ಆಸ್ತಿ ಬರೆಯುತ್ತಾರೆ ?

"ಇದ್ದರು ಅವರೇ ಅಪ್ಪಯ್ಯನ ಕೆಲ್ಸ ನಡೆಸೋರು"

"ಮಾತಾಡಿಸಿದ್ರ ?"

"..............................."

"ಹೇಳು ವೇದಾ ?"

"ಅಶೋಕ್. ನಾವಿಬ್ಬರು ಸೇರಿ ಹನ್ನೆರಡು ವರ್ಷ ಆಗ್ತಾ ಬಂತು. ಆದ್ರೂ ನಿಮ್ಮ ಅನುಮಾನ ಬಗೆ ಹರಿದಿಲ್ಲ, ಅಶೋಕ್ ಪ್ರೇಮ ಅನ್ನೋದು ನದಿ ಇದ್ದ ಹಾಗೆ, ಅದು ಎಂದೂ ಮುಂದೆ ಮುಂದೆ ಹರಿಯುತ್ತೇ ಹೊರ್ತು ಹಿಂದಿರುಗಲಾರದು."

ಮೈ "ಜುಂ" ಎಂದಿತು ನನಗೆ. ಅಲ್ಲಿ ಅಂಕಲ್ ಅದೇ ಮಾತಾಡಿದ್ದರು. ಇಲ್ಲಿ ಮಮ್ಮಿ. ಹಾಗಾದರೆ ಏನು ? ಅರ್ಥವೇನು ?

ಮೆಲ್ಲಗೆ ಹಾಳೆ ಬಿಡಿಸಿ "ನದಿ" ಎಂಬ ಹಣೆಬರಹ ಗೀಚಿ ಬರೆಯು ತ್ತೇನೆ,

ನದಿ? "ಪವಿತ್ರ ಗಂಗೆ ಕೆಲವರು ಅದನ್ನು ಪವಿತ್ರ ಪ್ರೇಮಕ್ಕೆ ಹೋಲಿ ಸುತ್ತಾರೆ ಅದು ಎಂದೂ ಮುಂದೆ ಮುಂದೆ ಹರಿಯುತ್ತದೆಯೇ ಹೊರತು ಹಿಂತಿರುಗಲಾರದು. ಅದರಲ್ಲಿ ಸುಳಿ ಬಹಳ. ನೀರು ಮೇಲೆ ತಿಳಿಯಾಗಿ ಕಂಡರೂ ಒಡಲೊಳಗೆ ಮೊಸಳೆ, ಮೀನು ತಿಮಿಂಗಿಲ, ಮುಂತಾದ ದುಷ್ಟ ಜಂತುಗಳಿರುತ್ತವೆ."

ಏಕೋ ಕೈ ನಡುಗಿದಾಗ ಪೆನ್ನು ಕಳಚಿ ಬೀಳುತ್ತದೆ. ನನಗರಿವಿಲ್ಲದೆ ಕಣ್ತುಂಬಿ ಬಂದಾಗ ಸುಬ್ಬು ಅಂಕಲ್ ಕಾಣಿಸುತ್ತಾನೆ. ಮುಖ ಮುಚ್ಚಿ ಬಿಕ್ಕಿ ಬಿಕ್ಕಿ ಅಳುತ್ತೇನೆ, ಶಬ್ದವಾಗದಂತೆ,

೦೦೦

# ಹಸಿರು ಸೀರೆ

—ಲಲಿತಾಂಬಾ ವೃಷಭೇಂದ್ರಸ್ವಾಮಿ

ಅಲ್ವೆ ನಿಶಾ, ಹಸಿರು ಸೀರೆಯುಟ್ಟಾಗ ನಿಶಾ ತುಂಬಾ ಚೆನ್ನಾಗಿ ಕಾಣಿಸ್ತಾಳೆ ಎಂದು ಆನಂದ ಹೇಳಿದಾಗಿನಿಂದ, ನೀನು ಅವನ ಕ್ಲಾಸಿದ್ದಾಗ ಲೆಲ್ಲಾ ಆ ಸೀರೆಯನ್ನೇ ಉಡ್ತೀಯಂತೆ. ಇದನ್ನು ಗಮನಿಸಿದ ಉಷೆ ನಿನ್ನ ಮೇಲೆ ಅಸಮಾಧಾನಗೊಂಡಿದ್ದಾಳೆ."

"ಎಲ್ಲಾ ಬಿಟ್ಟು ಆ ಕರಿ ಮುಖಂಡೀನ ಯಾರು ಲೈಕ್ ಮಾಡ್ತಾರ್ಯೇ? ಆ ಬೆಪ್ಪ್ ಕ್ಕೇಗಂತೂ ಬುದ್ಧಿ ಇಲ್ಲಾಂದ್ರೆ ನನ್ಗೂ ಇಲ್ವೆ? ಎಂದು ತಿರಸ್ಕಾರ ದಿಂದ ನುಡಿದಳು ನಿಶಾ.

ಲತಾ, ಉಷೆ ನಿಶೆಯರಿಬ್ಬರಿಗೂ ಆತ್ಮೀಯ ಗೆಳತಿ. ಇಬ್ಬರೂ ಈಕೆಯೊಡನೆ ತಮ್ಮ ವೈಯ್ಯಕ್ತಿಕಗುಟ್ಟು ಮೊದಲ್ಗೊಂಡು ಎಲ್ಲಾ ಹೇಳಿ ಕೊಳ್ಳುತ್ತಿದ್ದರು. ಎಲ್ಲರೊಡನೆಯೂ ಸ್ನೇಹದಿಂದಿರುತ್ತಿದ್ದ ಈಕೆ ಒಬ್ಬರ ಗುಟ್ಟನ್ನು ಬೇರೊಬ್ಬರಿಗೆ ಹೇಳುತ್ತಿರಲಿಲ್ಲ. ಸಾಧ್ಯವಿದ್ದರೆ ಎಲ್ಲಾದರೂ ವಿರಸವುಂಟಾದರೆ, ಅಥವಾ ಭಿನ್ನಾಭಿಪ್ರಾಯ ಬಂದರೆ ಅವುಗಳನ್ನು ಹೋಗ ಲಾಡಿಸಲು ಸಹಾಯಕಳಾಗುತ್ತಿದ್ದಳೇ ವಿನಃ ವಿರೋಧ ಬೆಳೆಯಲು ಎಂದೂ ನೀರೆರೆಯುತ್ತಿರಲಿಲ್ಲ, ಹಾಗಾಗಿ ಎಲ್ಲರಿಗೂ ಈಕೆಯ ಸ್ನೇಹಬೇಕು.

ಉಷೆ, ನಿಶೆಯರಿಬ್ಬರೂ ಒಂದೇ ಕ್ಲಾಸಿನಲ್ಲಿದ್ದರು. ಇಬ್ಬರೂ ಕಾಲೇಜಿನ ಬ್ಯೂಟಿಗಳೆಂದು ಪ್ರಸಿದ್ಧರಾದವರು. ನಿಶೆ ನಿಜವಾಗಿಯೂ

ಸುಂದರಿ, ನೀಟಾದ ಎತ್ತರ, ಮಾಟಾದ ಮೈಕಟ್ಟು. ಆಕರ್ಷಕವಾದ ನಗು ಮುಖ ; ನೀಳವಾದ ಮೂಗು, ಚಂಚಲತೆಯನ್ನು ಸೂಸುವ ಕಣ್ಣುಗಳು, ನಾಗರಿಕವಾದ ನಡೆ ನುಡಿ, ಬಣ್ಣ ಹೇಳಿಕೊಳ್ಳುವಷ್ಟು ಬಿಳುಪಲ್ಲದಿದ್ದರೂ ಅಲ್ಲಗಳೆಯುವಂತಿರಲಿಲ್ಲ. ಆಕರ್ಷಕವಾಗಿಯೇ ಇತ್ತು. ಒಟ್ಟಿನಲ್ಲಿ ಆಕೆ ಎದುರಿಗೆ ಬಂದರೆ, ಸಭ್ಯ ಹುಡುಗರೂ ಸೌಂದರ್ಯ ನೋಡಲೋಸುಗ ಆಕೆಯ ಕಡೆ ಕಣ್ಣು ಹಾಯಿಸದೆ ಇರುತ್ತಿರಲಿಲ್ಲ, ಅಂಥಹ ರೂಪ ಅವಳದು ಆಕೆಗಾದರೂ ಅಷ್ಟೆ. ತನ್ನನ್ನು ಎಲ್ಲರೂ ನೋಡಬೇಕು, ಎಲ್ಲರೂ ಮೆಚ್ಚ ಬೇಕು; ಸುತ್ತ—ಮುತ್ತ ಆರಾಧಕರಿರಬೇಕು ಎನ್ನುವ ಚಪಲ ಆಕೆಗೆ ತಾನು ರೂಪವತಿ ಎಂಬ ಹೆಮ್ಮೆ. ಮೆಚ್ಚುಗರು ಮೆಚ್ಚುಗೆಯಿಂದ ಮಾತಾಡಿಸಿದರೆ ಆಕೆಗೆ ಹುರುಪು ಆಗ ಸ್ನೇಹದಿಂದ ಮಾತನಾಡಿ ಅವರನ್ನು ಪ್ರೋತ್ಸಾಹಿಸಿಯೂ ಪ್ರೋತ್ಸಾಹಿಸುವಳು. ಎಲ್ಲರ ದೃಷ್ಟಿಯೂ ತನ್ನ ಕಡೆಗೇ ಇರಲಿ ಎನ್ನುವಂತೆ ಅತಿ ಮುತುವರ್ಜಿಯಿಂದ ಡ್ರೆಸ್‌ಮಾಡಿಕೊಂಡು ಬರುತ್ತಿದ್ದಳು, ಹೀಗಿದ್ದ ಮಾತ್ರಕ್ಕೆ ಆಕೆ ಹೂವಿಂದ ಹೂವಿಗೆ ಹಾರುವ ಬಣ್ಣದ ಚಿಟ್ಟೆ ಯಾಗಿರಲಿಲ್ಲ. ಒಟ್ಟಿನಲ್ಲಿ ತನ್ನ ರೂಪವನ್ನು ಎಲ್ಲರೂ ಮೆಚ್ಚಬೇಕು; ಹೊಗಳಬೇಕು; ತನಗಾಗಿ ಹುಡುಗರು ಬಾಯ್ಬಿಡಬೇಕು. ಇದಿಷ್ಟೇ ಅವಳ ಇಚ್ಛೆ. ಅವರುಗಳ ಬಗ್ಗೆ ಆಕೆಯ ಅಭಿಪ್ರಾಯವೇನಿಲ್ಲ.

ಉಷೆಯೂ ಸುಂದರಿಯೆ. ಸುಂದರವಾದ ನಸುಗೆಂಪಿನ ಗುಲಾಬಿಯ ಬಣ್ಣ, ಒಳ್ಳೆಯ ಎತ್ತರ, ಎತ್ತರಕ್ಕೆ ತಕ್ಕ ಮೈಕಟ್ಟು. ಬುದ್ಧಿಮಂತ್ತೆಯನ್ನು ಸೂಚಿಸುವ ಹೊಳಪಾದ ಕಣ್ಣುಗಳು. ಸಮುದ್ರದಂತೆ ಗಂಭೀರವಾದ ಮುಖಭಾವ; ದಿಟ್ಟತನದಿಂದ ಕೂಡಿದ ನಡಿಗೆ. ಮಾತು ಹಿತ–ಮಿತ ಮುಖದಲ್ಲಿ ಚಂಚಲತೆಯಿಲ್ಲ. ಮುಗ್ಧ—ಸ್ನಿಗ್ಧ ಮುಗುಳ್ನಗು ಮುಖದ ಮೇಲೆ ಸೌಂದರ್ಯವೇ ಮೂರ್ತಿವೆತ್ತಂತಿದ್ದರೂ. ಅವಳನ್ನು ನೋಡಿದರೆ ಗೌರವದಿಂದ ತಲೆಬಾಗಬೇಕು. ಎನ್ನುವಂತಹ ವ್ಯಕ್ತಿತ್ವ. ಪೋಲಿಗಳಾ ದರೂ ಸಹ ಆಕೆಯ ಕಡೆ ನೋಡುವುದಕ್ಕಾಗಲೀ ಕೀಟಲೆ ಮಾಡುವುದಕ್ಕಾ ಗಲಿ ಧೈರ್ಯಮಾಡುತ್ತಿರಲಿಲ್ಲ, ಎಂತಹವರಿಗೂ ಆಕೆಯ ಬಗ್ಗೆ ಗೌರ ವಾದರಗಳು ಮೂಡುತ್ತಿದ್ದವು.

ಇಂತಹ ಹುಡುಗಿ ಮನಶ್ಶಾಸ್ತ್ರ ಬೋಧಿಸುತ್ತಿದ್ದ ಆನಂದನಿಗ ತಾನೇ, ಮಾರು ಹೋಗಿದ್ದಳು. ಈ ಸಂಗತಿಯನ್ನು ಕೇಳಿದ ಯಾರೂ ಮೊದ ಮೊದಲು ನಂಬಲಿಲ್ಲ. ಏಕೆಂದರೆ, ಈಕೆಯಾದರೋ ಆಗರ್ಭ ಶ್ರೀಮಂತನ ಏಕ ಪುತ್ರಿ ಮಾತ್ರ. ಆಕೆ ಏನು ಬೇಕು ಎಂಬುದನ್ನು ಬಾಯ್ಬಿಡುವ ಮೊದಲೇ ತಿಳಿದುಕೊಂಡು, ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುತ್ತಿದ್ದ ತಂದೆ ತಾಯ್ಗಳು. ಕೊರತೆ ಎನೆಂಬುದನ್ನೇ ಅರಿಯದೆ ಬೆಳೆದಳು. ಮಗಳು ಓದಲೆಂದು ಮೈಸೂರಿಗೆ ಬಂದಾಗ ಹಾಸ್ಟೆಲಿನಲ್ಲಿ ಸರಿಯಾದ ಸೌಕರ್ಯಗಳಿರು ವುದಿಲ್ಲವೆಂದು ಒಂದು ಬಂಗಲೆಯನ್ನು ಬಾಡಿಗೆಗೆ ಹಿಡಿದು ತಾಯಿಯೂ ಆಕೆ ಯೊಂದಿಗಿರತೊಡಗಿದರು. ಐಶ್ವರ್ಯ, ವಿದ್ಯೆ, ಬುದ್ಧಿ, ರೂಪ, ಗುಣ ಗಳೆಲ್ಲವನ್ನು ಪಡೆದ ಈಕಯನ್ನು ವರಿಸಲು ಅತ್ಯಂತ ಶ್ರೇಷ್ಠ ದರ್ಜೆಯ ವರ ಗಳು ತಾಮುಂದು, ನಾಮುಂದು ಎಂದು ಬಂದಿದ್ದರು. ತಂದೆ–ತಾಯ್ಗ ಳಿಗೆ ಯಾರನ್ನು ಆರಿಸಬೇಕೆಂಬುದೇ ಸಮಸ್ಯೆಯಾದರೂ ಬಿಪಿನನ ಜಾಣ್ಮೆ, ಚತುರತೆ, ದಕ್ಷತೆ, ಯೋಗ್ಯತೆ ಐಶ್ವರ್ಯ ಅವರ ಮನವನ್ನು ಸಳೆದಿದ್ದವು. ಆಕೆಯ ತಂದೆ ಇವನಲ್ಲಿ ತನ್ನ ಅಳಿಯನಾಗುವ ಲಕ್ಷಣಗಳಿವೆ. ಎಂದು ಮನ ಸ್ಸಿನಲ್ಲೇ ಅಂದುಕೊಂಡಿದ್ದರು. ಆದರೆ ಯಾವ ನಿರ್ಧಾರಕ್ಕೂ ಬಂದಿರ ಲಿಲ್ಲ. ಉಷೆಗೆ ಲಗ್ನದ ಕಡೆಯೇ ಲಕ್ಷವಿರಲಿಲ್ಲ. ಅವಳಿಗೆ ಮನಶ್ಶಾಸ್ತ್ರ ದಲ್ಲಿ ಆಳವಾದ ಅಭ್ಯಾಸಮಾಡಬೇಕೆಂಬ ಉತ್ಕಟೇಚ್ಛೆ ಇತ್ತು. ಆದುದ ರಿಂದ ಅವರ ತಂದೆ ಮದುವೆಗೆ ಮಗಳನ್ನು ವಿಚಾರಿಸುವ ಗೊಡವೆಗೆ ಹೋಗಿರಲಿಲ್ಲ. ಆಕೆಯ ಬಾಳ ಸಂಗಾತಿಯ ಬಗ್ಗೆ ಮಗಳ ಒಪ್ಪಿಗೆ ಮೆಚ್ಚುಗೆ ಗಳೇ ಮುಖ್ಯವೆಂಬುದು ಅವರ ದೃಷ್ಟಿ ಹಾಗಾಗಿ ಬಿಪಿನನ ಬಗ್ಗೆ ತಮ್ಮ ನಿರ್ಧಾರ ತಿಳಿಸಿರಲಿಲ್ಲ.

ಇಂತಹ ಹಿನ್ನೆಲೆಯ ಉಷೆ ಸಾದಾ ಮನುಷ್ಯನಾದ ಆನಂದದಲ್ಲಿ ಯಾವ ಆಕರ್ಷಣೆ ಕಂಡಳೋ ದೇವರೇ ಬಲ್ಲ. ಅವನದು ಸಾಧಾರಣರೂಪು. ಸಾದಾ ಉಡುಪು. ಬಣ್ಣವೂ ಕಪ್ಪೆಂದೇ ಹೇಳಬೇಕು. ಇಷ್ಟೇ ಸಾಲದೆಂ ಬಂತೆ ಮುಖದ ಮೇಲೆ ಬರೆ ಎಳೆದಂತೆ ಬಾಲ್ಯದಲ್ಲುಂಟಾದ ಕಲೆ. ಕೌಟುಂ ಬಿಕ ಹಿನ್ನೆಲೆಯಂತೂ ತೀರ ಬಡತನದ್ದು. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡಿದ್ದ. ವಿಧವೆಯಾದ ತಾಯಿ ತನ್ನ ಏಕಮಾತ್ರ ಪುತ್ರನನ್ನು

ಬಹಳ ಕಾಳಜಿಯಿಂದ ಬೆಳೆಸಿದರು. ಪರರ ಮನೆಯಲ್ಲಿ ಕೆಲಸ ಮಾಡಿ ಸಂಪಾದಿಸಿ ಮಗನಿಗೆ ವಿದ್ಯೆ ಕಲಿಸಿ, ಕಾಲೇಜಿನಲ್ಲಿ ಪ್ರಾಧ್ಯಾಪಕನಾಗುವ ಮಟ್ಟಕ್ಕೆ ತಂದಿದ್ದಳು. ಆನಂದನು ಐಶ್ವರ್ಯದಲ್ಲಿ ಕಡುಬಡತನವನ್ನನುಭವಿಸಿದರೂ ತಾಯಿಯ ಮಮತೆಯ ಮಹದೈಶ್ವರ್ಯಪಡೆದು ಬಹಳ ಒಳ್ಳೆಯವನಾಗಿ ರೂಪುಗೊಂಡಿದ್ದ. ಸರಳ ಸ್ವಭಾವ ಅಹಂಕಾರವಿಲ್ಲದ ಮನೋಭಾವ. ಈ ಗುಣಗಳೇ ಉಷೆಯನ್ನು ಆಕರ್ಷಿಸಿರಬೇಕು. ಆಕೆ ಆತನ ಬಗ್ಗೆ ಲತೆಯೊಡನೆ ಮಾತನಾಡುವಾಗ "ಆನಂದ" ಬಹಳ ಒಳ್ಳೆಯವನುಕಣೆ ಅವನ ಮುಖದ ಮೇಲಿರುವ ಆ ಪ್ಯಾಚು ಸಹ ಅವನಿಗೆ ಲಕ್ಷಣವಾಗಿಯೇ ಕಾಣುತ್ತೆ," ಎನ್ನುತ್ತಿದ್ದಳು. ಅಲ್ಲದೆ ಬುದ್ಧಿಯೂ ಅಂತಹ ತೀಕ್ಷ್ಣವಲ್ಲದಿದ್ದರೂ ಬಹು ಚುರುಕು ಬುದ್ಧಿ ಎಂದು ಉಷೆ ಮೆಚ್ಚಿದಳು. ಇದನ್ನು ಕೇಳಿದ ಲತಾ ಮೆಚ್ಚಿದವರಿಗೆ ಮರುಳು ಸುಖ, ಹುಚ್ಚುನಾಯಿಗೆ ಅಡವಿ ಸುಖ' ಎಂದು ಮನಸ್ಸಿನಲ್ಲೆ ಅಂದುಕೊಳ್ಳುತ್ತಿದ್ದಳು.

ಉಷೆಯ ಜೀವನದಲ್ಲಿ ಮುಚ್ಚು-ಮರೆ ಇರಲಿಲ್ಲ. ಅವನು ಅವಳಿಗೆ ಮನಸ್ಸಿಗೆ ಬಂದಾದ ಮೇಲೆ. ಆನಂದನಿಗೂ ಇದರ ಅರಿವಾಗದೆ ಉಳಿಯಲಿಲ್ಲ. ಈಕೆಯ ಕೃಪಾದೃಷ್ಟಿ ಬಿದ್ದ ಯಾರಾದರೂ ತಾವು ಪುಣ್ಯವಂತರೆಂದೇ ಎಂದುಕೊಳ್ಳುತ್ತಿದ್ದರು. ಹಾಗಿರುವಾಗ ಆನಂದ ಅದರಿಂದ ಹೊರತಾಗಬಲ್ಲನೆ? ತನ್ನ ಮತ್ತು ಆಕೆಯಮಟ್ಟದಲ್ಲಿ ಅಜಗಜಾಂತರವಿದೆಯೆಂದು ಮೊದಮೊದಲು ಅಳುಕಿದ ತಾಯಿಗೂ ಈ ವಿಚಾರ ತಿಳಿಸಿದ, ಆಗ ಆಕೆ, "ಬೇಡಪ್ಪಾ ನಮ್ಮಂತವರಿಗೆ ಅಂತವರು ಸರಿ ಹೋಗುತ್ತಾರೆಯೆ? ಮುಂದೆ ಆಕೆ ಅಸಮಾಧಾನಗೊಂಡರೆ ನಿನ್ನ ಸಂಸಾರಜೀವನ ಸಮಸ್ಯೆಯಾಗಬಾರದು."

ಇಲ್ಲಮ್ಮಾ ಆಕೆ ಎಲ್ಲ ಶ್ರೀಮಂತರಂತಲ್ಲ. ಆಕೆ ಶ್ರೀಮಂತಳಿದ್ದು ಬಡವರಷ್ಟು ಸರಳವಾಗಿ ಇರುತ್ತಾಳೆ. ಯಾವುದರಲ್ಲೂ ಆಡಂಬರವಿಲ್ಲ ಅಹಂಕಾರವಿಲ್ಲ. ಈ ಬಡತನ ಜೀವನಕ್ಕೆ ಆಕೆಯೇ ಬಯಸಿ ಬಂದಿದ್ದಾಳೆ. ಸಿರಿವಂತಿಕೆಯ ಜೀವನ ಬೇಕೆಂದರೂ ಆಕೆಗೆ ತೊಂದರೆ ಇಲ್ಲ. ಅವರಪ್ಪನಿಗೆ ಆಕೆಯೊಬ್ಬಳೇ ಮಗಳು ಎಂದಾಗ "ಏನೋಪ್ಪ.

ನೀನು ಕಲಿತವನು. ನನಗೆ ಇಂತಹ ವಿಚಾರಗಳೆಲ್ಲಾ ಹೆಚ್ಚು ತಿಳಿಯು ವುದಿಲ್ಲ. ನಿನಗೆ ಸರಿ ಎನ್ನಿಸಿದರೆ ಮಾಡಿಕೊ" ಎಂದಳು.

ಆನಂದನಿಗೆ "ಆಕೆ ತನ್ನೊಂದಿಗೆ ಸುಖವಾಗಿ ಇರಬಲ್ಲಳೆ? ಆಕೆಯ ಜೀವನದ ಮಟ್ಟಕ್ಕೆ ಸಾನೇರಬಲ್ಲೆನೇ? ಎಂದು ಮನಸ್ಸಿನಲ್ಲಿ ಕೊರೆಯು ತ್ತಿದ್ದರೂ ಆಕೆಯ ಪ್ರೇಮ ತನ್ನ ಭಾಗ್ಯವೆಂದೇ ಭಾವಿಸಿದ. ತಾಯಿಯ ಅನುಮತಿಯೂ ದೊರೆಯಿತು. ಮುಂದಿನ ಜವಾಬ್ದಾರಿ ನಿನ್ನದು" ಎಂದ.

ಉಷೆಯದು ಎಲ್ಲದಕ್ಕೂ ನಿರ್ಭಿಡೆಯ ನಡವಳಿಕೆ. ತನ್ನ ತಾಯಿಗೂ ಎಲ್ಲವನ್ನು ನಿಸ್ಸಂಕೋಚವಾಗಿ ತಿಳಿಸಿ ತಾನು ಆನಂದನನ್ನು ವಿವಾಹವಾಗು ವುದಾಗಿ ಹೇಳಿದಳು. ಆಕೆ ಮೊದಲಿನಿಂದಲೂ ಸಂಕೋಚ, ದಾಕ್ಷಿಣ್ಯ ದಿಂದ ಒದ್ದಾಡುತ್ತಿರಲಿಲ್ಲ. ಎಲ್ಲಿಕ್ಕೂ ನೇರವಾದ ನಡೆ ಲೈಬ್ರರಿಗೆ ಹೋದರೂ ಅಷ್ಟೆ. ತಾನೊಬ್ಬಳೇ ನುಗ್ಗಿ ಹುಡುಗರಿದ್ದರೂ ನಿಸ್ಸಂಕೋಚ ವಾಗಿ ತನಗೆ ಬೇಕಾದ ಪುಸ್ತಕಗಳನ್ನು ಆರಿಸಿಕೊಂಡು, ಬಾಗಿಲಲ್ಲಿ ಹೋಗಲು ಜಾಗವಿಲ್ಲವೆಂತೆ ಹುಡುಗರು ನಿಂತಿದ್ದರೆ, ಕಂಬಿ ಇಲ್ಲದ ಕಿಟಕಿ ಯಿಂದಲೇ ಹಾರಿ ಹೊರ ಬರುತ್ತಿದ್ದಳು. ತನಗೆ ಹೊರಲಾರದಷ್ಟು ಪುಸ್ತಕ ಗಳಿದ್ದರೆ ಅಲ್ಲಿದ್ದ ಯಾರಾದರೂ ಒಬ್ಬ ಹುಡುಗನನ್ನು ಕರೆದು "please help me" ಎಂದು ತನ್ನ ಬಾಗಿಲೆಯವರೆಗೂ ಪುಸ್ತಕಗಳನ್ನು ಹೊರಿಸಿ ಕೊಂಡು ಹೋಗುತ್ತಿದ್ದಳು. ಹೀಗಿದ್ದರೂ ಅವಳ ಬಗ್ಗೆ ಯಾರೂ ತುಟಿ ಪಿಟಿಕ್ ಎನ್ನುತ್ತಿರಲಿಲ್ಲ. ಅವಳ ದಿಟ್ಟತನ, ಗೌರವ ಗಾಂಭೀರ್ಯ ಗುಣ ಎಲ್ಲರಿಗೂ ಪರಿಚಯವಿದ್ದದ್ದೆ. ಯಾರಿಗೂ ಲಕ್ಷ್ಯಕೊಡದೆ ತನ್ನ ಪಾಡಿಗೆ ತಾನು ಹೇಗಿರಬೇಕೋ ಹಾಗಿರುತ್ತಿದ್ದಳು. "ಇಂತಹ ಹುಡುಗಿ ಆನಂದನನ್ನು ಪ್ರೇಮಿಸುತ್ತಾಳೆ." ಎಂದಾಗ ಕೇಳಿದವರು ಆಶ್ಚರ್ಯ ಪಟ್ಟರೆ ಆತಿಶಯವೇನಲ್ಲ. ಈ ವಿಷಯವನ್ನು ಎಲ್ಲರೂ ತಿಳಿಯುವ ಮೊದಲೇ ತಾಯಿಗೆ ಹೇಳಿದಾಗ.

"ಬಾಳುವೆ ಮಾಡುವವಳು ನೀನು. ವಿದ್ಯಾವಂತೆ ಹಾಗೂ ವಿಚಾರ ವಂತೆ. ನೀನೊಪ್ಪಿದ ಮೇಲೆ ನನ್ನ ಅಭ್ಯಂತರವೇನಿಲ್ಲ. ಒಟ್ಟಿನಲ್ಲಿ ನೀನು ಸುಖವಾಗಿರಬೇಕು" ಎಂದರು ಮಗಳ ಗುಣ, ಜಾಣ್ಮೆಗಳ ಬಗೆಗೆ ವಿಶ್ವಾಸವಿಟ್ಟಿದ್ದ ಆಕೆ "ಆದರೂ ಒಂದು ಮಾತು, ತಂದೆಯವರ ಕಿವಿಗೂ ಹಾಕಿ, ಅವರ ಸಲಹೆಯನ್ನು ತೆಗೆದುಕೊ" ಎಂದು ಎಚ್ಚರಿಸುವುದನ್ನು ಮರೆಯಲಿಲ್ಲ.

ಪತ್ರ ಬರೆಯುವುದಕ್ಕಿಂತ ಬಂದಾಗಲೇ ಕೇಳಿದರಾಯ್ತೆಂದು. ಅವರ ಬರವಿಗಾಗಿ ಕಾಯತೊಡಗಿದಳು. ಮೊದಲಿಂದಲೂ ತಂದೆ—ಮಗಳಿಗೆ ಸಲುಗೆ ಇತ್ತು. ಸ್ನೇಹಿತರಂತೆ ಒಬ್ಬರಿಗೊಬ್ಬರು ತಮ್ಮೆಲ್ಲಾ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು.

ಉಷೆ ನಿರೀಕ್ಷಿಸಿದಂತೆ ಅದೇ ವಾರದ ಕೊನೆಯಲ್ಲಿ ತಂದೆ ಬಂದರು. ಆನಂದನ ವಿಚಾರ ತಿಳಿಸಿದಾಗ, ಬಿಪಿನನ ಬಗ್ಗೆ ಆಸೆ ಇದ್ದ ಅವರಿಗೆ ನಿರಾಸೆ ಯಾಗದೇ ಇರಲಿಲ್ಲ. ಆದರೂ ಮಗಳ ಮನಸ್ಸಿಗೆ ನೋವಾಗಬಾರದೆಂದು ತಮ್ಮ ಆಸೆಯನ್ನು ಹತ್ತಿಕ್ಕಿದ್ದರು. ಅವಳ ಭವಿಷ್ಯ ಸುಂದರಮಯವಾಗ ಬೇಕೆಂದಿದ್ದ ಅವರಿಗೆ ಅನುಭವಿಯಾಗದ ಮಗಳು ಎಂತಹ ಸಂಗಾತಿಯನ್ನಾರಿಸಿ ದ್ದಾಳೋ ಎಂದು ಆತಂಕವಾಯಿತು. ದುಡುಕಿದ್ದರೆ, ಅವಳು ಅಸುಖಿ ಯಾದುದನ್ನು ಹೇಗೆ ನೋಡುವುದು ? ಆದುದರಿಂದ ಈ ಬಗ್ಗೆ ಸ್ವಲ್ಪ ವಿಚಾರಿಸಿಯೇ ಒಪ್ಪಿಗೆ ಕೊಡಬೇಕೆಂದುಕೊಂಡ ಅವರು, "ನಿನ್ನಿಷ್ಟಕ್ಕೆ ನಾನೇನು ವಿರುದ್ಧವಿಲ್ಲವಮ್ಮ. ಆದರೂ ಈ ವಯಸ್ಸಿನಲ್ಲಿ ಎಲ್ಲಾ ರೀತಿ ಯಿಂದ ವಿಚಾರಮಾಡುವ ಶಕ್ತಿ ಇರುವುದಿಲ್ಲ. ನಿನ್ನ selection ಹೇಗಿದೆ ಎಂಬುದನ್ನು ನೋಡಬೇಕು. ಸಂಜೆ ಮನೆಗೆ ಕರೆದುಕೊಂಡು ಬಾ" ಎಂದರು.

ಈ ಸಂದೇಶ ಉಷೆಯಿಂದ ಆನಂದನಿಗೆ ಮುಟ್ಟಿದಾಗ ಎಲ್ಲಿಲ್ಲದ ಗಾಬರಿ ಅವನಿಗೆ. ಆದರೂ ಪರಿಸ್ಥಿತಿಯನ್ನು ಎದುರಿಸಲೇ ಬೇಕಾಗಿತ್ತು.

ಆ ದಿನ ಕಾಲೇಜಿನ ಡ್ಯೂಟಿ ಮುಗಿಸಿಕೊಂಡು ಉಷೆಯೊಡನೆಯೇ ಆಕೆಯ ಮನೆಗೆ ಬಂದ. ಚಿಕ್ಕದಾಗಿದ್ದರೂ ಚೊಕ್ಕವಾದ ಬಂಗಲೆ. ಪೋರ್ಟಿಕೋದಲ್ಲಿ ಸುಂದರ ಕ್ಯಾಡಿಲಾಕ ಕಾರ ನಿಂತಿತ್ತು. ಒಳಗೆ ಕಾಲಿಡುತ್ತಿದ್ದಂತೆಯೇ ನೆಲಕ್ಕೆ ಹಾಸಿದ ಬೆಲೆಬಾಳುವ ರತ್ನಗಂಬಳಿಗಳು (ನೆಲಹಾಸುಗಳು) ಕಿಟಕಿ-ಬಾಗಿಲುಗಳಿಗೆ ಹಾಕಿದ, ಕೋಣೆಯ ಸೌಂದರ್ಯವನ್ನು ಇಮ್ಮಡಿಸುವಂತಹ ಸುಂದರ ಪರದೆಗಳು. ಕಲಾತ್ಮಕವಾಗಿ ಜೋಡಿಸಿದ ಸುಸಜ್ಜಿತ ಸೋಫಾ ಸೆಟ್‌ಗಳು. ಆನಂದನಿಗೆ ಉಷೆಯ ಐಶ್ವರ್ಯ. ಅಭಿರುಚಿ, ಕಲೆ, ಹಾಗೂ ಸಂಸ್ಕೃತಿಕಗಳ ಮತ್ತಷ್ಟು ಪರಿಚಯ ಮಾಡಿಕೊಟ್ಟವು. ಮನಸ್ಸಿನೊಳಗೆ ಅಂಜಿಕೆ, ಅಳುಕುಗಳುಂಟಾದರೂ ಹೋರಗೆ ತೊರಗೋಡದೆ ಉಷೆ ಸೂಚಿಸಿದಲ್ಲಿ ಕುಳಿತ.

ಮನೆಯ ಉಡುಪಿನಲ್ಲಿದ್ದ ಉಷೆಯ ತಂದೆ ಬಂದಾಗ ಆನಂದ ಎದ್ದು ವಿನಯದಿಂದ ನಮಸ್ಕರಿಸಿದ. ಅವನ ವಿನಯ ಅವನನ್ನು ಒಳ್ಳೆಯವನು ಎಂದು ಗುರುತಿಸಿದರೂ. ಮುದುಡಿ ನಿಂತಿರುವ ಈ ಹುಡುಗ ತನ್ನ ಮಗಳಿಗೆ ಸರಿಯಲ್ಲವೆನ್ನಿಸಿತವರಿಗೆ. ರೂಪದ ವಿಷಯದಲ್ಲೂ ಮಗಳು ತಪ್ಪು ಮಾಡಿರುವಳೆಂದು ಮೊದಲ ನೋಟಕ್ಕೇ ತಂದೆ ತೀರ್ಮಾನಿಸಿದರು. ಉಳಿದ ವಿವರಗಳನ್ನು ತಿಳಿಯಲೋಸುಗ, ಮಾತಿಗೆ ತೊಡಗಿದರು.

"ಉಷೆಯ ಪ್ರಾಧ್ಯಾಪಕ ಆನಂದ ಅಲ್ಲವೆ?" ಎಂಬ ಪ್ರಶ್ನೆಗೆ ಮುಗುಳ್ನಗುವಿನ ಉತ್ತರವಿತ್ತ. ಮಾತಿನ ಸಂದರ್ಭದಲ್ಲಿ. ದೊರೆತ ಉತ್ತರಗಳಿಂದ ಅವನು ಕಡುಬಡತನದಲ್ಲಿ ಬೆಳೆದು ಬಂದವನೆಂದೂ. ವಿಧವೆಯಾದ ತಾಯಿ ಬಹು ಕಷ್ಟದಿಂದ ಮಗನಿಗೆ ವಿದ್ಯಾಭ್ಯಾಸ ಮಾಡಿಸಿರುವಳೆಂದೂ, ವಿಷಯ ಸಂಗ್ರಹಿಸಿದರು. ಚಹಾ ತಿಂಡಿಗಳಾದ ನಂತರ ಡ್ರೈವರನಿಗೆ ಆನಂದನನ್ನು ಮನೆಗೆ ಬಿಟ್ಟುಬರಲು ಕಳಿಸಿಕೊಟ್ಟು, ಮಗಳಿಗೆ.

"ಉಷಾ ನಿನ್ನ ಜಾಣತನದ ಬಗೆಗೆ ನನಗಿದ್ದ ವಿಶ್ವಾಸವನ್ನು ನೀನಿಂದು ಸುಳ್ಳುಮಾಡಿದೆ."

"ಯಾಕಪ್ಪಾಜಿ ನನ್ನ ಸೆಲೆಕ್ಷನ್' ನಿಮ್ಮ ಮನಸ್ಸಿಗೆ ಬರಲಿಲ್ಲವೆ?

"ಇಲ್ಲಮ್ಮಾ, ಯಾವುದರಲ್ಲಿ ನಿನಗೆ ಸರಿಹೊಂದುತ್ತಾನೆ ಆನಂದ? ಸ್ವಭಾವವೊಂದು ಒಳ್ಳೆಯದಿರಬಹುದು ಆದರೆ ಅದೊಂದೇ ನಿನ್ನ ಜೀವನ ವನ್ನು ಸುಖಮಯ ಮಾಡಲಾರದು.

"ಏಕೆ ಅಪ್ಪಾಜಿ? ಗುಣ ಮಹತ್ವವಾದುದಲ್ಲವೆ? ಬಡವನಿಗೆ ಸಮಾ ಜದಲ್ಲಿ ಸ್ಥಾನ ಇರಬಾರದೆ? ಅವನು ನಿಕೃಷ್ಟ ಮಟ್ಟದಲ್ಲಿಯೇ ಇರಬೇಕೆ?"

"ಹಾಗಲ್ಲಮ್ಮಾ, ಎಲ್ಲರ ಸ್ವಭಾವಗಳೂ ಅಭಿರುಚಿಗಳೂ ಅವರಿಗೆ ಬಾಲ್ಯದಲ್ಲಿ ಸಿಕ್ಕಿದ ಅವಕಾಶ ಹಾಗೂ ಅನುಕೂಲಗಳಿಗೆ ತಕ್ಕಂತೆ ಬೆಳೆದಿರು ತ್ತವೆ. ಜೀವನದಲ್ಲ ಬರೀ ಅಸಹಾಯಕತೆಯನ್ನೆ ಅನುಭವಿಸಿದ ಅವನು ನಿನ್ನ ಅಭಿರುಚಿಯ ಮಟ್ಟಕ್ಕೆ ಏರಲಾರ. ನಿಮ್ಮಿಬ್ಬರ ವಿಚಾರ ಧಾರೆಗಳೂ ಬೇರೆಯಾದಾವು. ಅವರಿಂದ ಜೀವನದಲ್ಲ ವಿರಸ ಉಂಟಾಗುವ ಸಾಧ್ಯತೆ ಬಹಳ. ನಿನ್ನ ಜೀವನ ಸಮಸ್ಯಾಮಯಗಿಾಗಿರುವುದನ್ನು ನಾನೆಂದೂ ಸಹಿಸಲಾರೆ. ಈ ಯೋಚನೆ ಇಲ್ಲಿಗೇ ಬಿಟ್ಟು ಬಿಡು.

ಓ! ಅದೆಂದಿಗೂ ಆಗದ ಮಾತು ಅಪ್ಪಾಜಿ. ನಾನು ತುಂಬಾ ಯೋಚಿಸಿದ್ದೇನೆ. ಆನಂದನ ಸ್ವಭಾವ ನನಗೆ ತುಂಬಾ ಸೇರುತ್ತದೆ. ವಿರಸ ಬರುವ ಪ್ರಶ್ನೆಯೇ ಏಳುವುದಿಲ್ಲ. ನನಗೆ ಹಿತವಾದುದನ್ನೇ ಬಯಸುವ ನೀವು ಒಪ್ಪಿಯೇ ಒಪ್ಪುತ್ತೀರೆಂದು ನನ್ನಮನಸ್ಸನ್ನು ಆಬಗ್ಗೆ ತುಂಬಾ ದೂರ ಒಯ್ದು ಬಿಟ್ಟಿದ್ದೇನೆ. ಆನಂದ ಬಡವ; ನೋಡಲು ಚನ್ನಾಗಿಲ್ಲ ಎಂದ ಮಾತ್ರಕ್ಕೆ ನಾವು ಹೊಂದಿಕೊಂಡು ಬಾಳುವುದಿಲ್ಲ-ಎಂದು ಹೇಗೆ ಹೇಳು ತ್ತೀರಿ? ನಾನೇ ಮೆಚ್ಚಿದ ಮೇಲೆ ಆ ಕೊರತೆಗಳು ನನಗೇನು ಬೇಜಾರುಂಟು ಮಾಡುವುದಿಲ್ಲ ಅಪ್ಪಾಜಿ".

"ಈಗ ಹಾಗೆನ್ನಿಸುತ್ತೆ ಉಷಾ. ನೀನು ಬೆಳೆದಿರುವ ರೀತಿ ಅವನು ಬೆಳೆದಿರುವುದ್ದಕ್ಕಿಂತ ಸಂಪೂರ್ಣ ಭಿನ್ನ. ಆ ವಿಭಿನ್ನ ಅಭಿರುಚಿಗಳಿಗೂ

ಜೀವನದಲ್ಲಿ ಹೆಜ್ಜೆ-ಹೆಜ್ಜೆಗೂ ತೊಡಕಾಗಬಹುದು. ಈಗಲೇ ಯೋಚಿಸು ನಂತರ ಪಶ್ಚಾತ್ತಾಪ ಪಡುವುದು ಬೇಡ".

"ಇಲ್ಲಾ ಅಪ್ಪಾಜಿ, ನಾನೆಲ್ಲಾ ಯೋಚಿಸಿಯೇ ನಿರ್ಧಾರಕ್ಕೆ ಬಂದಿದ್ದೇನೆ. ನೀವೆಂದೂ ಪಶ್ಚಾತ್ತಾಪ ಪಡಬೇಕಾಗುವುದಿಲ್ಲ. ನಿಮ ಗೆಂದಿಗೂ ನೋವಾಗುವುದಿಲ್ಲ ಬೇಕಾದರೆ ನೋಡಿ" ಎಂದು ದೈನ್ಯದಿಂದ ಬೇಡಿದಾಗ, ಮಗಳ ಮನಸ್ಸು ನೋಯಿಸುವುದಾಗಲಿಲ್ಲ ತಂದೆಗೆ.

"ನಿನಗಾಗಿ ನಾನೇನು ಬೇಕಾದರೂ ಮಾಡಬಲ್ಲೆ ಮಗು. ನಿನಗೆ ಅಷ್ಟು ಇಷ್ಟವಿದ್ದರೆ ನಾನು ಅಡ್ಡಿ ಬರುವುದಿಲ್ಲ. ಆದರೆ ನಿರ್ಣಯಕ್ಕೆ ಬರುವಮೊದಲು ನಿನಗೆ ಯೋಚಿಸಲುವ ತ್ತೊಂದು ಅವಕಾಶಕೊಡುತ್ತೇನೆ. ಹೇಗೂ ಇನ್ನೆರಡು ವರ್ಷ ನಿನ್ನ ಎಂ. ಎ. ಮುಗಿಯುವ ತನಕ ಮದುವೆ ಮಾಡುವಂತಿಲ್ಲ. ಅಲ್ಲಿಯವರೆಗೆ ನೋಡೋಣ. ಈ ಎರಡು ವರ್ಷಗಳಲ್ಲಿ ನಿನಗೆ ಅವನ ಸ್ವಭಾವದ ಸಂಪೂರ್ಣ ಪರಿಚಯವಾಗಬಹುದು. ಆಗ ನಿನಗೇ ಎಲ್ಲ ವಿಚಾರಗಳು ಅನುಭವಕ್ಕೆ ಬರುತ್ತವೆ. ನಂತರವೂ ನೀನು ಇವನನ್ನೇ ಮಾಡಿಕೊಳ್ಳಬೇಕೆಂದರೆ ನಾನೇನು ಬೇಡವೆನ್ನುವುದಿಲ್ಲ."

ತಂದೆಯಿಂದ ಇಷ್ಟು ಒಪ್ಪಿಗೆ ಸಿಕ್ಕಿದ್ದೇ ಸಾಕಾಯ್ತು ಉಷೆಗೆ. ಅವ ನೊಡನೆ ವಿಶ್ವಾಸ ಹೆಚ್ಚಾಯಿತು. ಸುಧಾರಿಸಿದ ಅವಳ ತಂದೆ ತಾಯ್ಗಳು ಆನಂದ ಮನೆಗೆ ಬರುವುದಕ್ಕಾಗಲೀ. ಅವರಿಬ್ಬರೂ ಅಡ್ಡಾಡಲು ಹೋಗುವು ದಕ್ಕಾಗಲೀ ವಿರೋಧಿಸಲಿಲ್ಲ. ಅದಕ್ಕೆ ಕಾರಣ, ಮಗಳು ಎಂದಿಗೂ ಮಿತಿಯನ್ನು ಮೀರುವವಳಲ್ಲ ಎಂಬ ಭರವಸೆ ಅಷ್ಟು ವರ್ಷ ಬೆಳೆಸಿದ ಅವ ರಿಗೆ ಗೊತ್ತಿತ್ತು.

ದಿನ ದಿನಕ್ಕೆ ಅವರ ಪ್ರೇಮ ಗಾಢವಾಯ್ತೇ ವಿನಃ ತಂದೆ ಭಾವಿಸಿದಂತೆ ವಿರಸ ಬರಲಿಲ್ಲ, ತಾಯಿ ಬಗೆಬಗೆಯ ಊಟ-ತಿಂಡಿ ಒಮ್ಮೊಮ್ಮೆ ಆನಂದನನ್ನೂ ಅವರ ಮನೆಯಲ್ಲಿಯೇ ಊಟಕ್ಕೆ ಇರಿಸಿಕೊಳ್ಳುತ್ತಿದ್ದರು. ಇಬ್ಬರೂ

ಕೂಡಿಯೇ ವಾಕಿಂಗ್ ಹೋಗುವರು, ಸಿನಿಮಾಕ್ಕೆ ಹೋಗುವರು. ಕಾಲೇಜಿನಲ್ಲೂ ತಮ್ಮ ರೂಮಿನಲ್ಲಿ ಕುಳಿತು ಗಂಟೆಗಟ್ಟಲೆ ಮನಶ್ಶಾಸ್ತ್ರದ ಬಗ್ಗೆ ಚರ್ಚಿಸುವರು. ಕಾಲೇಜಿನಲ್ಲಿ ಅಲ್ಪಸ್ವಲ್ಪ ವಿಷಯಗಳಿಗೇ ಹುಡುಗಿಯರನ್ನು ಕಾಡಿಸುವ ಚಟವಿದ್ದ ಹುಡುಗರೂ ಸಹ ಇವರ ಬಗ್ಗೆ ಟೀಕೆ ಮಾಡುತ್ತಿರಲಿಲ್ಲ. ಉಷೆಯ ನಡೆ ಎಂದರೆ ಎಲ್ಲರಿಗೂ ಅಂತಹ ಒಂದು ಗೌರವ. ಅವರನ್ನು ಗಂಡ-ಹೆಂಡಿರಂತೆ ನೋಡುತ್ತಿದ್ದರೆ ವಿನಃ ಉಳಿದ ಪ್ರೇಮಿಗಳನ್ನು ಕಂಡಂತೆ ಕೀಟಲೆಯ ದೃಷ್ಟಿಯಿಂದ ಯಾರೂ ನೋಡುತ್ತಿರಲಿಲ್ಲ.

ಎಂದೂ ತಾನು ಆಕರ್ಷಕಳಾಗಿ ಕಾಣಬೇಕೆಂದು ಪ್ರಯತ್ನಿಸದಿದ್ದ ಉಷಾ ಈಗೀಗ ಉಡುಗೆ–ತೊಡಗೆಯ ಬಗ್ಗೆ ಹೆಚ್ಚು ಗಮನ ಕೊಡತೊಡಗಿದಳು. ಆನಂದನಿಗೆ ಆಕೆಯ ಸೌಂದರ್ಯದ ಬಗ್ಗೆ ಎಂದೂ ಕೊರತೆ ಎನ್ನಿಸದಿದ್ದರೂ, ಈಕೆಗೆ ಮಾತ್ರ ಬೇರೆ ಚನ್ನಾದ ಹುಡುಗಿಯರನ್ನು ಕಂಡಾಗ ಆನಂದನಿಗೆ ತಾನು ಚನ್ನಾಗಿ ಕಾಣಿಸುತ್ತೇನೆಯೋ ಇಲ್ಲವೋ ಎಂದು, ಹೆಚ್ಚಿನ ಆಸ್ಥೆಯಿಂದ ಅಲಂಕರಿಸಿಕೊಳ್ಳತೊಡಗಿದಳು. ಅವನೆಂದಾದರೂ, ನೀನಿಂದು ತುಂಬಾ ಚನ್ನಾಗಿ ಕಾಣಿಸುತ್ತಿ ಎಂದರೆ ಸಾಕು ಅವಳಿಗೆ ಸ್ವರ್ಗ ಮೂರೇ ಗೇಣು ಎನ್ನಿಸುತ್ತಿತ್ತು. ಒಮ್ಮೊಮ್ಮೆ ಅವನು ಸಹಜವಾಗಿ ಬೇರೆ ಹುಡುಗಿಯರನ್ನು ಕುರಿತು, ಆಕೆಯ ಬಣ್ಣ ಚಂದವೆಂದೋ, ನಡಿಗೆಗೆ ಅಂದವೆಂದೋ ಕಣ್ಣು ಆಕರ್ಷಕವೆಂದೂ ಹೇಳಿದರೆ ಈಕೆಗೆ ಮನಸ್ಸಿನಲ್ಲಿಯೇ ಕುದಿಯುತ್ತಿತ್ತು. ಅಂತಹ ಹುಡುಗಿಯರ ಬಗ್ಗೆ ಅಸಹನೆಯೂ ಉಂಟಾಗುತ್ತಿತ್ತು.

ಒಮ್ಮೆ ಇಬ್ಬರೂ ಕಾಲೇಜಿನ ಕ್ಯಾಂಪಸ್‌ನ ಮೇಲೆ ಹರಟುತ್ತಾ ಕುಳಿತಿದ್ದರು. ಆಗ ನಿಶಾ ಕಾಲೇಜಿಗೆ ಅವರ ಮುಂದೆಯೇ ಹಾದು ಹೋದಳು. ಆಗ ಆನಂದ.

'ನೋಡು ಉಷಾ, ನಿಶೆಗೆ ಈ ಹಸಿರು ಬಣ್ಣದ ಸೀರೆ ತುಂಬಾ ಒಪ್ಪುತ್ತೆ ಅಲ್ವೆ? ಮೊದಲೇ ಅವಳು ಚಂದ. ಈ ಸೀರೆ ಉಟ್ಟಾಗ ಇನ್ನೂ ಚನ್ನಾಗಿ ಕಾಣಿಸುತ್ತಾಳೆ.' ನಿಶೆಗೂ ಈ ಮಾತು ಸ್ವಲ್ಪ ಕೇಳಿಸಿತೋ ಏನೋ.

ಹಿಂತಿರುಗಿ ಆನಂದನ ಕಡೆಗೆ ತನ್ನ ನಗುವಿನ ನೋಟ ಬೀರಿ ಮುಂದೆ ಹೋದಳು. ಆನಂದನೂ ನಗುವಿನ ಉತ್ತರವಿತ್ತ.

ಈ ಘಟನೆ ಉಷೆಯ ಹೆಣ್ಣಿನ ಸ್ವಭಾವವನ್ನು ಎಚ್ಚರಿಸಿತು. ಸ್ತ್ರೀ ಗಂಡನಿಗಾಗಿ ಯಾವ ತ್ಯಾಗಕ್ಕೂ ಸಿದ್ಧ. ಯಾವ ಕಷ್ಟವನ್ನಾದರೂ ಗಂಡ ನೊಡನೆ ಒಂದಾಗಿ ಸಹಿಸಿಯಾಳು. ಆದರೆ ಅವನು ಮತ್ತೊಬ್ಬ ಸ್ತ್ರೀಯನ್ನು ಮೆಚ್ಚುವುದನ್ನು ಮಾತ್ರ ಆಕೆ ಸಹಿಸಳು.

ಉಷೆಗೆ ಆನಂದನ ಬಗ್ಗೆ ಅಸಮಧಾನ ಮೂಡಿತು. ನಿಶೆಯ ಬಗ್ಗೆ ದ್ವೇಷ ಮೊಳೆಯಿತು ಅದನ್ನು ಪುಷ್ಟೀಕರಿಸುವಂತೆ ಒಂದು ದಿನ ಉಷೆ ಕಾಲೇಜಿಗೆ ಹೋದಾಗ, ನಿಶೆ, ಆನಂದನೊಡನೆ ಮಾತನಾಡುತ್ತಾ ನಿಂತು ದನ್ನು ನೋಡಿದಳು. ಇದು ಬರುಬರುತ್ತಾ ಸಂಶಯಕ್ಕೆ ಎಡೆಮಾಡಿತು. ಒಂದು ದಿನ ಆಕೆಗೆ ಲೇಡೀಸ್ ರೂಮಿನಲ್ಲಿ ನಿಶೆ ಸಿಕ್ಕಾಗ.

"ನಿಶಾ, ಆನಂದ ನಿನಗೆ ಹಸಿರು ಸೀರೆ ತುಂಬಾ ಒಪ್ಪುತ್ತೆ ಎಂದು" ಹೇಳಿ ಚಿಕಿತ್ಸಕ ದೃಷ್ಟಿಯಿಂದ ಅವಳನ್ನು ನೋಡಿದಳು, ಇವಳಿಗೂ ಅವನ ಮೇಲೆ ಪ್ರೇಮವಿದೆಯೇ? ಎಂಬುದನ್ನು ಪರೀಕ್ಷಿಸಲು ಕೇಳಿದ ಪ್ರಶ್ನೆ ಇದು. ಇವಳು ಹೇಳಿದ ಮಾತಿನಿಂದ ನಿಶೆಗೆ ಮುಜುಗರವಾಯ್ತು. ಏನು ಹೇಳ ಬೇಕೋ ತೋಚಲೇ ಇಲ್ಲ. ಆಂ, ಹೂಂ ಎಂದು ಸಂಕೋಚದಿಂದ ತಡವರಿ ಸುತ್ತಾ ಸುಮ್ಮನಾದಳು. ಉಷೆಗೆ ತನ್ನ ಸಂಶಯ ನಿಜವೆನ್ನಿಸಿತು. ಅದಕ್ಕೆ ಪುಷ್ಟಿಕೊಟ್ಟಂತೆ, ಆನಂದನ ಕ್ಲಾಸಿದ್ದಾಗಲೆಲ್ಲಾ ನಿಶೆ ಹಸಿರು ಸೀರೆಯನ್ನೇ ಉಟ್ಟುಕೊಂಡು ಬರಲಾರಂಭಿಸಿದಳು. ಉಳಿದವರು ಇದನ್ನು ಗಮನಿಸ ದಿದ್ದರೂ ಉಷೆಯ ಗಮನಕ್ಕೆ ಮಾತ್ರ ಇದು ಬರದೆ ಇರಲಿಲ್ಲ. ಇದರಿಂದ ಅವಳ ಮನಸ್ಸು ಹೊಟ್ಟೆಯಕಿಚ್ಚಿನಿಂದ ಕುದಿಯತೊಡಗಿತು. ಒಂದು ದಿನ ನೋಡು ಲತಾ, ಆನಂದ ನಿಶೆಯನ್ನು ಪ್ರೀತಿಸುತ್ತಾನೆ. ಅದೂ ಸಹಜವೆ. ಆಕೆ ಆಕರ್ಷಕ ಹೆಣ್ಣು. ನನ್ನನ್ನಂತೂ ನಮ್ಮ ತಂದೆ ಗಂಡು ಮಗನಂತೆಯೆ ಬೆಳೆಸಿದ್ದಾರೆ. ಸ್ತ್ರೀ ಸಹಜವಾದ ಸೂಕ್ಷ್ಮತೆ, ಚಂಚಲತೆ, ವಯ್ಯಾರಗಳು

ನನ್ನಲ್ಲಿ ಬೆಳೆದು ಬಂದಿಲ್ಲ, I am more like a boy than a girl in attitude ಅದಕ್ಕೆ ಅವನಿಗೆ ಅವಳನ್ನು ಕಂಡರೇ ಇಷ್ಟ?.

'ಹಾಗೇಕೆನ್ನುತ್ತೀ ಉಷಾ. ಅವಳಿಗೆ ಹಸಿರು ಸೀರೆ ಒಪ್ಪುತ್ತೆ ಎಂದ ಮಾತ್ರಕ್ಕೆ ನೀನು ಹೀಗೆಲ್ಲಾ ಅಪಾರ್ಥಮಾಡಿಕೊಳ್ಳಬೇಕೆ ? ಆಕೆ ಸಹ ಅಂತ ಹವಳಲ್ಲ ಬಿಡು. ನಿಮ್ಮಿಬ್ಬರ ಮಧ್ಯೆ ಅವಳೆಂದೂ ಬರುವುದಿಲ್ಲ.'

'ಹಾಗೆನ್ನಬೇಡ ಲತಾ. ಮೊನ್ನೆ ನಾನು ಬೇಕೆಂತಲೇ ಆನಂದನು ಹೀಗಂದ ಎಂದು ಆಕೆ ಹತ್ರ ಹೇಳ್ದಾಗ ನೋಡಬೇಕಿತ್ತು ಅವಳನ್ನು; ಬ್ಲಶ್ ಆಗಿ ಮುಖವೆಲ್ಲಾ ಕೆಂಪಾಗಿಬಿಡ್ತು. ಮಾತಾಡ್ಲೂ ಆಗ್ಲಿಲ್ಲ ಅವ್ಳಿಗೆ."

ಅಂದು ನಿಶೆ ಉಷೆಯು, ತನ್ನ ಬಗ್ಗೆ ಆನಂದನಾಡಿದ ಮಾತನ್ನು ಹೇಳಿದ ರೀತಿ, ತನಗೆ ಒಂದು ಥರಾ ಆದುದು, ತನಗೆ ಮಾತನಾಡಲೇ ತೋಚದಂತಾಗಿ ಉಗುಳು ನುಂಗಿದದು ಎಲ್ಲವನ್ನು ಅದಿನ ಸಂಜೇಯೇ ಬಂದು ಹೇಳಿದುದು ಲತೆಗೆ ನೆನಪಾಗಿ.

'ನೀನು ಮುಖದೆದುರು ಹಾಗೆಂದಾಗ ಅವಳಿಗೆ ಹಾಗಾಗಿರಬೇಕು. ಒಬ್ಬ ಯುವಕ ತನ್ನ ರೂಪದ ಬಗ್ಗೆ ತನ್ನ ಪ್ರೇಮಿಯೊಡನೇ ಹೇಳಿದುದನ್ನು ಕೇಳಿ ಆಕೆ ಬ್ಲಶ್ ಆಗಿರಬಹುದು. ಅದನ್ನೇ ನೀನು ತಪ್ಪಾಗಿ ಅರ್ಥಮಾಡಿ ಕೊಂಡಿದ್ದಿ.'

ಇಲ್ಲಾ ಲತಾ, ಅಂದಿನಿಂದ ಅವಳು ಕ್ಲಾಸಿದ್ದಾಗಲೆಲ್ಲಾ ಹಸಿರು ಸೀರೆಯನ್ನೇ ಉಟ್ಟುಕೊಂಡು ಬರುತ್ತಾಳೆ" ಎಂದು ದುಃಖದಿಂದ ಉಮ ಳಿಸಿದಾಗ ಲತಾಗೆ ಈಗ ತಾನು ಮಧ್ಯಪ್ರವೇಶ ಮಾಡಬೇಕು; ಇಲ್ಲದಿದ್ದರೆ

ಉಷೆ, ನಿಶೆಯರ ಸ್ನೇಹಕ್ಕೆ ಚ್ಯುತಿಬರುವುದಲ್ಲದೆ. ಆನಂದ ಉಷೆಯ ರಲ್ಲೂ ಸಮಸ್ಯೆ ಏಳಬಹುದೆನ್ನಿಸಿತು. ಏಕೆಂದರೆ ನಿಶೆಯ ಸ್ವಭಾವ ಲತೆಗೆ

ಗೊತ್ತಿತ್ತು. ಹಸಿರು ಸೀರೆಯನ್ನೇ ಉಟ್ಟುಕೊಂಡು ಹೋಗುವುದು ಅವನನ್ನು ಪ್ರೇಮಿಸಲಿಕ್ಕಾಗಿಯಲ್ಲ. ಅವಳದೊಂದು ಸ್ವಭಾವ. ತನ್ನನ್ನು ಎಲ್ಲರೂ ಮೆಚ್ಚಬೇಕು, ರೂಪವತಿ ಎನ್ನಬೇಕು ಎನ್ನುವುದೊಂದು ಗೀಳು ಅವಳಿಗೆ. ಅದಕ್ಕಾಗಿಯೇ ಅವನಿಗಿಷ್ಟವಾದ ಸೀರೆ ಉಟ್ಟುಹೋಗುತ್ತಿರ ಬೇಕು ಎಂದು ತರ್ಕಿಸಿದಳು ಸುಮ್ಮನೆ ಅಪಾರ್ಥಕ್ಕೆ ಅವಕಾಶಕೊಡಬಾರ ದೆಂದು ನಿಶೆ ಸಿಕ್ಕಾಗ.

'ಅಲ್ಲೆ ನಿಶಾ, ಆ ದಿನ ಸೀರೆಯ ಬಗ್ಗೆ ಆನಂದನ ಮಾತನ್ನು ಉಷೆ ಹೇಳಿದಾಗ ಬಯ್ದಿದ್ದವಳು, ಆನಂದನ ಕ್ಲಾಸಿದ್ದಾಗಲೆಲ್ಲಾ ಆ ಸೀರೆಯನ್ನೇ ಏಕೆ ಉಡ್ತಿ? ಎಂದು ಟೀಕಿಸುವಂತೆ ಮಾತು ತೆಗೆದಳು.

ನಿಶೆಗೆ ಧ್ವನಿಯಲ್ಲೇ ಎಲ್ಲಾ ಅರ್ಥವಾಗಿ ಸಿಟ್ಟೇ ಬಂದುಬಿಟ್ಟಿತು. ಆಗಲೇ 'ಆ ಕರೀ ಮುಶಂಡೀನ ಯಾರು ಲೈಕ್ ಮಾಡ್ತಾರ್ಯೇ. ಅದೊಂದು ಬೆಪ್ಪುತಕ್ಕಡಿಗಂತೂ ಬುದ್ಧಿ ಇಲ್ಲಾಂದ್ರೆ ನನ್ಗೂ ಇಲ್ವಾ" ಎಂದು ತಾತ್ಸಾರ ದಿಂದ ನುಡಿದದ್ದು, ಅಂತೂ ಅಂದಿನಿಂದ ಹಸಿರು ಸೀರೆ ಉಡುವುದನ್ನೇ ಬಿಟ್ಟಳು.

ಆದರೂ ಇವರೀರ್ವರಲ್ಲಿ ವಿರಸ ಕಡಮೆಯಾಗಲಿಲ್ಲ. ಅವನ ರೀತಿ ಇಲ್ಲದ ನಡೆ-ನುಡಿಗಳು, ಕಡಿಮೆ ಮಟ್ಟದ ಅಭಿರುಚಿಗಳು, **high manners** ಇಲ್ಲದಿರುವಿಕೆ ಯಾವುವೂ ಇವಳಿಗೆ ಇದುವರೆಗೂ ಬೇಸರ ತರುತ್ತಿರಲಿಲ್ಲ. ಅವನ ಮೇಲೆ ಬೇಸರ ಶುರುವಾದಮೇಲೆ ಎಲ್ಲವನ್ನೂ ವಿಮರ್ಶಾತ್ಮಕವಾಗಿ ನೋಡತೊಡಗಿದಳು. ಊಟ, ಉಡುಗೆ. ಮಾತು ಕತೆ ಎಲ್ಲವುಗಳಲ್ಲೂ ತನಗೂ-ಅವನಿಗೂ ಎಷ್ಟು ಅಂತರವಿದೆ ಎನ್ನಿಸ ತೊಡಗಿತು. ಅವನು ಏನೇ ಮಾಡಲಿ, ಏನೇ ಹೇಳಲಿ ಸಿಡಿಮಿಡಿಗೊಳ್ಳು ತ್ತಿದ್ದಳು. ಬರುಬರುತ್ತಾ ಅವನ ಬಗ್ಗೆ ಬಹು ಉದಾಸೀನ ತೋರತೊ ಡಗಿದಳು. ಇದರಿಂದ ಆನಂದನಿಗೂ ಬಹಳ ಅಸಮಾಧಾನವಾಯ್ತು. ಅವನು ಆಕೆಯನ್ನು ಕಾಣಲು ಕಾತರಿಸಿ ಬಂದರೆ ಇವಳಿಗೆ ಅವನೊಡನೆ ಮಾತನಾಡಲೂ ಆಗದಷ್ಟು ಬೇರೇನೋ ಕೆಲಸ. ಆಗ ಅವನಿಗೆ ಬೇಸರ

ವಾದರೂ, ಸಿಟ್ಟನ್ನಾಗಲೀ ಅಸಮಾಧಾನವನ್ನಾಗಲೀ ತೋರಿಸುವ ಧೈರ್ಯ ಸಾಲದೆ ಸಂಕೋಚದಿಂದ ಮುದುಡಿ ಸುಮ್ಮನೆ ಹೋದರೆ ಈಕೆಗೆ ಇನ್ನೂ ತಾತ್ಸಾರ. ಹೀಗೆ ಸಾವಕಾಶವಾಗಿ ಇಬ್ಬರೂ ಒಬ್ಬರಿಂದ ಒಬ್ಬರು ದೂರ ಸರಿಯತೊಡಗಿದರು.

ಈಕೆ ಏಕೆ ಹೀಗಾಗುತ್ತಿದ್ದಾಳೆ. ಎಂಬುದೇ ಆನಂದನಿಗೊಂದು ಒಗಟಾಗಿತ್ತು. ಒಮ್ಮೆ ಆಕೆಯ ಹುಟ್ಟುಹಬ್ಬ ಬಂದಿತು. ಒಂದು ಚನ್ನಾದ ಸೀರೆಯನ್ನು ತಂದು ಈ ಸಂದರ್ಭದಲ್ಲಿ ಆಕೆಯ ಮನಒಲಿಸಬೇಕೆಂದು ಕೊಂಡು ಅಂಗಡಿಗೆ ಹೋದ. ಮೈಸೂರು ಸಿಲ್ಕಿನ ಹಸಿರು ಸೀರೆಯೊಂದು ತುಂಬಾ ಅಂದವಾಗಿ ಕಾಣಿಸಿತು.ಪ್ಯಾಕ್ ಮಾಡಿಸಿಕೊಂಡು ಉಷೆಯ ಮನೆಗೆ ಹೋದ.

"ಉಷಾ ನಿನಗಾಗಿ ಒಂದು ಗಿಫ್ಟ್ ತಂದಿದ್ದೇನೆ. ಏನು ಹೇಳು?"

"ನನಗೆ ಹೇಗೆ ಗೊತ್ತು? ನೀವೇ ಹೇಳಿ" ಪ್ಯಾಕ್ ನೋಡಿದರೆ ಸೀರೆ ಎನ್ನಿಸುತ್ತೆ.

"correct ಯಾವ colour ದಿರಬಹುದು ಹೇಳು,

ಬೇಕಂತಲೇ "ಹಸಿರು" ಎಂದಳು.

"correct, ನಿನಗೆ ಅದೇ ಬಣ್ಣ ಇಷ್ಟಾಂತ?"

ಎಂದು ಪ್ರಶ್ನಿಸಿದ. ಅವನಿಗಾಗಲೇ ತಾನು ನಿಶೆಯ ಹಸಿರು ಸೀರೆಯ ಬಗ್ಗೆ ಹೇಳಿದ್ದು ಮರೆತೇ ಹೋಗಿತ್ತು. ಸಹಜವಾಗಿ ಹೇಳಿದ್ದ ಮಾತದು.

ಆದರೆ ಇದರಿಂದ ಉಷೆಯ ಸಿಟ್ಟು ನೆತ್ತಿಗೇರಿತು.

"ನನಗೆ ಆ ಕಲರ್ ಇಷ್ಟವಿಲ್ಲ. ನಿನಗೆ ಬೇಕಾದವರಿಗೆ ಕೊಡು" ಎಂದು ಹೇಳಿದವಳೇ ಸೀರೆಯ ಪ್ಯಾಕ್‌ನ್ನುಅವನ ಕಡೆಗೆ ಎಸೆದು ಹೋದಳು, ಒಳಗೆ ಆನಂದನಿಗೆ ಅವಳ ನಡತೆ ಅರ್ಥವಾಗದೆ ತಬ್ಬಿಬ್ಬಾಗಿ, ಕೆಲವು ಸಮ ಯದ ತನಕ ಕಾದು, ಮನೆಯ ಕಡೆಗೆ ಕಾಲೆಳೆದುಕೊಂಡು ಹೋದ.

ಸಂಜೆಯಾಯ್ತು. ಉಷೆಯ ತಂದೆ, ಮಗಳ ಹುಟ್ಟಿದ ಹಬ್ಬಕ್ಕಾಗಿ ಬೆಲೆಬಾಳುವ ಒಡವೆ–ವಸ್ತ್ರ ತೆಗೆದುಕೊಂಡು ಊರಿಂದ ಬಂದು "ಉಷಾ, ನೋಡು ಈ ಕೆಂಪಿನ ಸೆಟ್ಟನ್ನು. ಇದನ್ನು ನೋಡಿದ ಕೂಡಲೇ ನಿನಗಾಗಿ ಕೊಳ್ಳಲೇಬೇಕೆನಿಸಿತು. ಹೇಗಿದ್ದರೂ ಈ ವರ್ಷ ನಿನ್ನ ಎಂ. ಎ. ಮುಗ್ಯುತ್ತೆ. ಪರೀಕ್ಷೆ ಮುಗಿದಕೂಡಲೇ ಮದುವೆ. ಮದುವೆಗೂ ಆಗುತ್ತದೆಯೆಂದು ಈಗಲೇ ಕೊಂಡುಬಿಟ್ಟೆ."

"ಇಲ್ಲಾ ಅಪ್ಪಾಜಿ. ನೀವು ಹೇಳಿದ ಮಾತು ಸರಿ. ನಾನು ಆನಂದ ವನ್ನು ಮದುವೆ ಆಗೋಲ್ಲ. ಸದ್ಯ ಮದುವೆ ಚಿಂತೆ ಬಿಡಿ" ಎಂದಳು.

೦೦೦೦

# ಚಾಕೋಲೇಟ್ ಅಂಕಲ್

—ಕೆ. ನೀರಜಾಕ್ಷಿ

"ರಾಜೇಶ್...................

ಯಸ್ ಮಮ್ಮಿ...............ಕಮಿಂಗ್...........ಎನ್ನುತ್ತಾ ತನ್ನ ಡ್ರೆಸ್ಸನ್ನು ಸರಿಮಾಡಿಕೊಳ್ಳುತ್ತಾ ಕೆಳಗೆ ಬಂದನು.

"ಗುಡ್ ಮಾರ್ನಿಂಗ್ ಮಮ್ಮಿ........ಗುಡ್ ಮಾರ್ನಿಂಗ್, ಡ್ಯಾಡಿ"
"ಗುಡ್ ಮಾರ್ನಿಂಗ್................ರಾಜೇಶ್ ನಿಂಗೆ ಎಷ್ಟು ಸಲ ಹೇಳಲಿ ಡ್ರೆಸ್ ಮಾಡಿಕೊಂಡ ಮೇಲೆ ಒಂದ್ಸಾರಿ ದೊಡ್ಡ ಕನ್ನಡಿಯಲ್ಲಿ ನೋಡಿಕೊಂಡು ಸರಿ ಮಾಡ್ಕೋಬೇಕು ಅಂತ?"
"ಮಮ್ಮಿ..............ಮತ್ತೆ........"

ನೋ ಕಾಮೆಂಟ್ಸ್.........ಕೂತ್ಕೋ..............ನಿಂಗೆಷ್ಟು ಸಾರಿ ಹೇಳಲ್ಲ ನೀನು ಸಾಧಾರಣ ಮಕ್ಕಳಂತೆ ಬೆಳೆಯ ಬಾರದು. ನೀನು ಒಂದು ವಿಶೇಷ ದರ್ಜೆಯ ಮಗು............ನನ್ನ ಮಗನಾಗಿ ಬೆಳೆಯಬೇಕು.

"ಹೂಂ.........ಮಮ್ಮಿ........"

ರಾಜೇಶ್ ನ್ಯಾಪ್‌ಕೀನ್ ತೆಗೆದು ತನ್ನ ತೊಡೆಯ ಮೇಲೆ ಹಾಕಿ ಕೊಂಡು ಎಡಕೈಲಿ ಫೋರ್ಕ್ ಬಲಕೈಲಿ ಚಾಕು ಹಿಡಿದುಕೊಂಡು ಸಾವಧಾನ ವಾಗಿ ಬ್ರೆಡ್ ಸ್ಯಾಂಡ್ ವಿಚ್ ತಿಂದ,

"ಹಾಲು ಕುಡಿದಮೇಲೆ ಹೊರಡಲು ತಯಾರಾಗು....ಲಿಲ್ಲೀ...."

"ಹಾಂ......ಮೇಮ್ ಸಾಬ್"......?

"ಛೋಟೆ ಸರಕಾರ್ ಕೆ ಕಪಡೇ ಸಬ್ ಪ್ಯಾಕ್ ಕಿಯಾ ಕ್ಯಾ! (ಚಿಕ್ಕ ಧಣೀರ ಬಸ್ಸಗಳನ್ನು ಪ್ಯಾಕ್ ಮಾಡಿದೆಯೊ?)

"ಜೀ....ಹಾಂ...ಮೇಮ್ ಸಾಬ್...."

"ಸರಿ...ಕೆಳಗೆ ತೆಗೆದುಕೊಂಡು ಬಂದು ಕಾರಿನಲ್ಲಿಡು".

"ಅಮ್ಮ... ನಾನು ಗುಡ್ಡುವನ್ನು ಬೋರ್ಡಿಂಗ್‌ನಲ್ಲಿ ಬಿಟ್ಬ್ ಡ್ತೇನೆ ಅಂದಳು ಕುಸುಮ.ಅವಳ ತಾಯಿ ಅನ್ನಪೂರ್ಣಂಗೆ ಮೊಮ್ಮಗಬೋರ್ಡಿಂಗ್ ನಲ್ಲಿರುವುದು ಸ್ವಲ್ಪವೂ ಇಷ್ಟವಿರಲಿಲ್ಲ. ಅನೇಕಬಾರಿ ಮಗಳೊಡನೆ ವಾದ ಮಾಡಿ ಸೋತಿದ್ದರು.

ರೆಡಿಯಾಗಿ ಹೊರಡಲು ನಿಂತಿರುವ ಮೊಮ್ಮಗನ ತಲೆ ಸವರಿದಾಗ ಅವರ ಕಣ್ಣಲ್ಲಿ ನೀರು ತುಂಬಿತು.

ಅಮ್ಮ....ನಿಂಗೆ ಎಷ್ಟು ಸಾರಿ ಹೇಳೋದು, ಗುಡ್ಡುವಿನ ಮುಂದೆ ಕಣ್ಣೀರು ಹಾಕಬೇಡ. ಅವನ ಹೃದಯವನ್ನು ಹೆಂಗಸಿನ ಹೃದಯದ ಹಾಗೆ ಮೃದು ಮಾಡಬಾರದು.

ರಾಜೇಶನಿಗೆ ಓಡಿ ಹೋಗಿ ಅಜ್ಜಿಯ ಮಡಿಲಲ್ಲಿ ಹದುಗಿ ಮನಸಾರೆ ಅಳಬೇಕೆಂದು ಅನ್ನಿಸುತ್ತಿತ್ತು. ಆದರೆ ಅಲ್ಲಿಯೇ ನಿಂತ ಮಮ್ಮಿಯನ್ನು ನೋಡಿ ಧೈರ್ಯ ಬರಲಿಲ್ಲ. ಹಾಗೆಯೇ ತನ್ನ ತುಟಿಯನ್ನು ಕಚ್ಚಿಕೊಂಡು ನಿಂತನು.

ಅದನ್ನು ಗಮನಿಸಿದ ಕುಸುಮ್

"ಏನಿದು .. ರಾಜೇಶ್....ನೀನೆಂದೂ ಅಷ್ಟು ದುರ್ಬಲನಾಗಬಾರದು. ತುಟಿ ಕಚ್ಚಿದರೆ ಹೊರಗಿನವರಿಗೆ ಗೊತ್ತಾಗುತ್ತೆ ನೀನೆಷ್ಟು ಹೇಡಿ ಎಂದು....?"

"ಸಾರಿ .. ಮಮ್ಮಿ..."

"ಸರಿ...ಹೊರಡು....ಅಮ್ಮ....ಬೀರ್‍ತೈನೆ....ನಡೀ, ರಾಜೇಶ್ ಹೋಗಿ ತಾತನ ಮುಂಭಾಗದ ಸೀಟಿನಲ್ಲಿ ಕುಳಿತನು–ಕುಸುಮ್ ಬಲಗಡೆಯ ಬಾಗಿಲು ತೆರೆಯ ಒಳಗೆ ಬಂದು ಕೀ ತಿರುಗಿಸಿ ಸ್ಟೀಯರಿಂಗ್ ಹಿಡಿದಳು. ಕಾರು ಓಡತೊಡಗಿತು.

o o o o o

ರಾಜೇಶ್ ಕುಸುಮ್ ಮತ್ತು ದೀಪಕ್‌ನ ಏಕ ಮಾತ್ರ ಮಗ ದೀಪಕ್ ಮತ್ತು ಕುಸುಮ್ ಕಾಲೇಜಿನಲ್ಲಿ ಓದುತ್ತಿದ್ದಾಗ ಒಬ್ಬೊರನ್ನೊಬ್ಬರು ಪ್ರೇಮಿಸಿ ಮದುವೆಯಾಗಿದ್ದರು ಕುಸುಮ್‌ನತಂದೆ ಏರ್‌ಫೋರ್ಸಿನಲ್ಲಿ ವಿಂಗ್ ಕಮಾಂಡರ್ ಆಗಿದ್ದರು. ಅವರಿಗೆ ಕುಸುಮ್ ಮತ್ತು ಕುಂದನ್ ಇಬ್ಬರೇ ಮಕ್ಕಳು. ಅವರು ಮಕ್ಕಳನ್ನು ಬಹಳ ಶಿಸ್ತಿನಿಂದ ಬೆಳೆಸಿದ್ದರು. ಕುಸುಮ್ ಚಿಕ್ಕ ವಯಸ್ಸಿನಿಂದಲೇ ತಂದೆಯನ್ನು ಆರಾಧಿಸುತ್ತಿದ್ದಳು. ಅವರ ಶಿಸ್ತುಗಾರಿಗೆ ಸಮಯಪಾಲನೆ, ಎಲ್ಲವನ್ನೂ ತನ್ನ ಜೀವನದಲ್ಲಿ ಅನುಸರಿಸಿದ್ದಳು.

ದೀಪಕ್‌ನ ತಂದೆ ಟಾಟಾ ಕಂಪನಿಯಲ್ಲಿ ಸೇಲ್ಸ್ ಮ್ಯಾನೇಜರ್ ಆಗಿದ್ದರು. ದೀಪಕ್ ಒಬ್ಬನೇ ಮಗನಾದ್ದರಿಂದ ಅವನಿಗೆ ಯಾವುದಕ್ಕೂ ಕಡಿಮೆ ಮಾಡಿರಲಿಲ್ಲ. ತಂದೆತಾಯಿಯರ ಮುದ್ದಿನ ಮಗನಾಗಿ ಬೆಳೆದಿದ್ದ. ಅವನು ಬೇಡಿದ್ದೆಲ್ಲಾ ಅವನಿಗೆ ಸಿಗುತ್ತಿತ್ತು.

ದೀಪಕ್ ಮತ್ತು ಕುಸುಮ್ ತಮ್ಮ ತಮ್ಮ ತಂದೆತಾಯಿ ಹತ್ತಿರ

ಅವರುಗಳ ಪ್ರೀತಿಯ ವಿಷಯ ಹೇಳಿದಾಗ, ದೀಪಕ್‌ನ ಮನೆಯಲ್ಲಿ ಯಾವ ತರಹದ ಅಭ್ಯಂತರವೂ ಇಲ್ಲದೇ ಒಪ್ಪಿದ್ದರು. ಆದರೆ ಕುಸುಮ್‌ನ ತಂದೆ ಅವಳಿಗೆ ಹೇಳಿದ್ದರು.

"ಕುಸುಮ್........ದೀಪಕ್ ಒಳ್ಳೇ ಹುಡುಗನೇ ನಿಜ. ಆದರೆ ಎಷ್ಟರಮಟ್ಟಿಗೆ ನೀನು ಅವನೊಡನೆ ಹೊಂದುತ್ತೀಯ? ಏಕೆಂದರೆ ನೀನು ಬೆಳೆದು ಬಂದ ವಾತಾವರಣವೇ ಬೇರೆ ಅವನು ಬೆಳೆದುಬಂದಿರುವ ವಾತಾವರಣವೇ ಬೇರೆ....ಯೋಚಿಸಿ ನೋಡು....ಇಲ್ಲದಿದ್ದರೆ Marry in hurry and renpent later ಆಗಬಾರದು.

ಕುಸುಮ್‌ಗೆ ತನ್ನ ಮೇಲೆ ಅಧಿಕ ವಿಶ್ವಾಸವಿತ್ತು. ಅವನು ಹೇಗೇ ಇರಲಿ ಅವನನ್ನು ತನ್ನ ದಾರಿಗೆ ತರುವುದು ಕಷ್ಟವಿಲ್ಲ. ಮತ್ತೆ ಅವನು ಕೂಡ ತಂದೆಯಂತೆ ಸೇಲ್ಸ್ ಮ್ಯಾನೇಜರ್ ಆಗಲು ಬಹಳ ಸಮಯಬೇಕಿಲ್ಲ ಆ ವಿಶ್ವಾಸದಿಂದ ತನ್ನ ನಿರ್ಧಾರವನ್ನು ಬದಲಾಯಿಸಲಿಲ್ಲ.

ದೀಪಕ್ ಮತ್ತು ಕುಸುಮ್‌ರ ಮದುವೆ ಸಮಾರಂಭಕ್ಕೆ ಅನೇಕ ಅಧಿಕಾರಿಗಳು ಬಂದಿದ್ದರು. ಎಲ್ಲರೂ ಹೊಸ ಸುಂದರ ಜೋಡಿಗೆ ಶುಭ ಹಾರೈಸಿದರು.

ದೀಪಕ್‌ನ ತಂದೆ ಮಗನಿಗಾಗಿ ಬೇರೆ ಮನೆ ಮಾಡಿದ್ದರು. ಮಗ ಆ ವಿಷಯಕ್ಕೆ ಬಹಳ ವಾದ ಮಾಡಿ ಸೋತಿದ್ದ. ಮದುವೆಯಾದ ಮೇಲೆ ಗಂಡನ ಜೊತೆಗೆ ಹೊಸ ಮನೆಗೆ ಬಂದ ಕುಸುಮ್ ಬಹಳ ಸಂತೋಷದಿಂದಿದ್ದಳು. ತಂದೆಯ ಮನೆಯಿಂದ ತನಗೆ ಬೇಕಾದ ಫರ್ನಿಚರ್ ತಂದಿದ್ದಳು. ಅವರಿಬ್ಬರಿಗೂ ಅನೇಕ ಸುಂದರವಾದ ಪ್ರೆಸೆಂಟ್‌ಗಳೂ ಬಂದಿದ್ದವು. ಸುಮಾರು ಹದಿನೈದು ದಿನದಲ್ಲಿ ತನ್ನ ಮನೆ ಅಚ್ಚುಕಟ್ಟಾಗಿ ಸಿಂಗರಿಸಿದಳು.

ದೀಪಕ್‌ನಿಗೆ ತನ್ನ ಹೆಂಡತಿಯಲ್ಲಿದ್ದ ಶಿಸ್ತು ಅಚ್ಚುಕಟ್ಟು ಬಹಳ ಹಿಡಿ

ಸಿತು. ಡ್ರಾಯಿಂಗ್ ರೂಮಿನಲ್ಲಿ ಜೋಡಿಸಿರುವ ಸೋಫಾ, ಸೆಂಟರ್ ಟೇಬಲ್ ಮೇಲೆ ಅಧುನಿಕ ರೀತಿಯಲ್ಲಿ ಜೋಡಿಸಿರುವ ಹೂ ದಾನಿ, ಕಾರ್ನರ್ ಸ್ಟಾಂಡ್, ಅದಳ ಮೇಲಿರುವ ಸುಂದರ ಗ್ರೀಕ್ ವಿಗ್ರಹ, ಟೇಬಲ್ ಲ್ಯಾಪಿನಿಂದ ಬರುವ ಮಂದ ಬೆಳಕಲ್ಲಿ ಎಷ್ಟು ಸುಂದರ ಕಾಣು ತ್ತಿತ್ತು ! ಆ ವಾಲ್ ಹ್ಯಾಂಗಿಗ್ ! ಅದನ್ನು ವಿಶೇಷವಾಗಿ ಕಲಕತ್ತಾ ದಿಂದ ತರಿಸಿದ್ದಳು.

ದೀಪಕ್ ಹೆಂಡತಿಯ ಬಳಿ ಹೇಳಿದ್ದ,

"ಕುಸುಮ್ ನಮ್ಮ ಮನೆ ಒಳ್ಳೇ ಫೈಸ್ಟಾರ್ ಹೋಟೆಲ್ ಇದ್ದ ಹಾಗಿದೆ."

'ನೋಡಿ......ಜೋಡಿಸಿಸೋದು ಮಾತ್ರವಲ್ಲ ಅಷ್ಟೇ ಅಕ್ಕರೆ ಯಿಂದ್ಧ ಅದನ್ನು ಮೈಂಟೈನ್ ಮಾಡಬೇಕು."

"ಹೂಂ........................"

"ನೋಡಿ ದೀಪಕ್ ನನ್ನ ತಂದೆ ಯಾವುದಕ್ಕೂ ಕಡಿಮೆ ಮಾಡಿಲ್ಲ. ನಮ್ಮ ಸ್ಟಾಂಡರ್ಡ್‌ಗಾಗಿಯೇ ಕಾರ್ ಕೂಡ ಕೊಟ್ಟಿದ್ದಾರೆ......

"ಹೂಂ...........ಸರಿ............ಕುಸುಮ್............ನಾನು........."

"ನೋಡಿದ್ರಾ.........ನೀವು........."

ಕುಸುಮ್ ಗಂಡನ ಪ್ರತಿಯೊಂದು ಕೆಲಸವನ್ನು ಸರಿಪಡಿಸುತ್ತಿದ್ದಳು. ಅವನು ಊಟಕ್ಕೆ ಕುಳಿತು ತನಗೆ ಬೇಕಾದ ರೀತಿಯಲ್ಲಿ ಊಟ ಮಾಡಲು. ಶುರು ಮಾಡಿದರೆ,

ನೋ.......ನೋ.......ಡಾರ್ಲಿಂಗ್........ಮೊದಲು ಈ ನ್ಯಾಪ್

ಕೀನನ್ನು ತೊಡೆಯ ಮೇಲೆ ಹಾಕಿಕೊಳ್ಳಿ. ನಂತರ........ಊಟಕ್ಕೆ ಮೊದಲು ಸೂಪ್ ಕುಡೀಬೇಕು......ಮತ್ತೆ...."

"ನೋಡಿ ಕುಸುಮ್...ಊಟದಲ್ಲಿ ಮಾತ್ರ-ನಂಗೇನು ಬೇಕೋ ಅದನ್ನೇ ತಿಂದೇನೋ.......ಊಟ ತಿಂಡಿಯಲ್ಲಿ ಈ ಶಿಸ್ತು ನಿಯಮ ನಂಗೆ ಸರಿ ಹೋಗೋಲ್ಲ........"ಊಟ ತನ್ನಿಚ್ಛೆ ನೋಟ ಪರರಿಚ್ಛೆ" ಅಂತ ಕೇಳಿಲ್ವ."

"ನೋಡಿ ದೀಪಕ್......ಈ ಕಾಲಕ್ಕೆ ಆ ಗಾದೆ ಸರಿಹೋಗೋಲ್ಲ. ಪ್ರತಿಯೊಂದು ಕೆಲಸದಲ್ಲಿಯೂ ಒಂದು ಪ್ರತ್ಯೇಕ ಸ್ಟೈಲ್ ಇದೆ. ಬೇರೆ ಯವರಿಗಾಗಿ ಮಾಡಬೇಕು. ನೋಡಿ ಒಂದ್ವೇಳೆ ನಾವು ಯಾರಾದರೂ ದೊಡ್ಡ ಮನುಷ್ಯರ ಮನೆಗೆ ಡಿನ್ನರ್ ಪಾರ್ಟಿಗೆ ಹೋದೆವು ಅಂದ್ಕೊಳ್ಳಿ. ಆಗ ನಮಗೆ ಈ ಶಿಸ್ತು ನಿಯಮ ಎಲ್ಲಾ ಗೊತ್ತಿರಬೇಕು, ಇಲ್ಲದಿದ್ದರೆ "ಅನ್‌ಸಿವಿಲೈಜ್ಡ್" "ಜಂಗ್ಲಿ" "ಅಂತ ಹೆಸರಿಡ್ತಾರೆ"

ನೋಡು...ನಂಗೆ ಅದೆಲ್ಲಾ ನಾಚಿಕೆ ಅನ್ನಿಸುತ್ತೆ. ಸರಿ ಹೋಗೋಲ್ಲ. ಹೊಟ್ಟೆ ಹಸಿದಾಗ ಮನಸ್ಸಿಗೆ ಬೇಕೆನಿಸಿದ್ದನ್ನು ತೃಪ್ತಿಯಾಗಿ ತಿಂದು ತೇಗು ವುದು ನಮ್ಮ ಪದ್ಧತಿ" ಎಂದು ಟೇಬಲ್ ಮೇಲಿಟ್ಟಿದ್ದ ಸ್ಪೂನ್, ಫೋರ್ಕನ್ನು ಪಕ್ಕದಲ್ಲಿಟ್ಟು ತನಗೆ ಬೇಕಾದ ಪದಾರ್ಥಗಳನ್ನು ತಟ್ಟೆತುಂಬಾ ಬಡಿಸಿಕೊಂಡು ಕಲಸಿ ಕೈನಲ್ಲೇ ಊಟ ಮಾಡಿದ,

ಆದರೆ ಕುಸುಮಳಿಗೆ ಸಹಿಸಲಾಗಲಿಲ್ಲ. ಅಂದು ಅವಳ ದೃಷ್ಟಿ ಯಲ್ಲಿ ಗಂಡ ಕಂಗಾಲರಂತೆ ಕಂಡ ಎಷ್ಟೋ ದಿನಗಳ ಕಾಲ ಊಟ ಕಾಣದವ ನಂತೆ ಗಬಗಬ ತಿಂದು ನೀರು ಕುಡಿದು ತಟ್ಟೆಯಲ್ಲೇ ಕೈ ತೊಳೆದುಕೊಂಡು ಜೋರಾಗಿ "ಗಡರ್..." ಎಂದು ತೇಗಿ ತೃಪ್ತಿಯಿಂದ ಎದ್ದವನನ್ನು ಒಂದು ಪ್ರಾಣಿಗೆ ಹೋಲಿಸಿದಳು.

ಹೀಗೆ ಅವರಿಬ್ಬರಲ್ಲಿ ಚಿಕ್ಕಪುಟ್ಟ ವಿಷಯಗಳಲ್ಲಿ ವೈಮನಸ್ಯ ಶುರುವಾಯಿತು. ಇಬ್ಬರೂ ಸೋಲಲು ತಯಾರಿರಲಿಲ್ಲ. ಅವರ ವೈವಾಹಿಕ ಜೀವನದಲ್ಲಿ ರಾಜೇಶ್ ಹುಟ್ಟಿದ ನಂತರವೂ ಹೊಂದಾಣಿಕೆ ಆಗಲಿಲ್ಲ. ಚಿಕ್ಕದಾಗಿ ಶುರುವಾಗಿದ್ದು ವೈಮನಸ್ಯದಿಂದ ರಾಜೇಶ್ ಒಂದು ವರ್ಷ ಮಗುವಾಗಿದ್ದಾಗ ದೀಪಕ್ ಡೈವೋರ್ಸ್ ಪಡೆದ.

ಕುಸುಮ್ ತನ್ನ ಮಗನನ್ನು ಮಾತ್ರ ತನ್ನ ಇಷ್ಟದಂತೆಯೇ ಬೆಳೆಸಬೇಕೆಂದು ಅಂದುಕೊಂಡಿದ್ದಳು. ತಂದೆಯ ಸಾವಿನ ನಂತರ ತಾಯಿಯೊಡನೆ ತಂದೆಯ ಮನದಲ್ಲೇ ಇರತೊಡಗಿದಳು. ಅವಳ ಅಣ್ಣ ಕುಂದನ್ ಸ್ಟೇಟ್ಸ್‌ನಲ್ಲೇ ಸೆಟ್ಲ್ ಆಗಿಬಿಟ್ಟಿದ್ದ. ಆವನು ತನ್ನ ಪಾಲಿನ ಆಸ್ತಿಯನ್ನೂ ತಂಗಿಗೇ ಕೊಟ್ಟು ಬಿಟ್ಟಿದ್ದ. ಹೀಗೆ ಕುಸುಮ್‌ಗೆ ಜೀವನ ಹೇಗೆ ನಡೆಸಬೇಕೆಂಬ ಚಿಂತೆ ಇರಲಿಲ್ಲ. ಕೈತುಂಬಾ ಹಣವಿತ್ತು.

ಮಗ ಮನೆಯಲ್ಲಿದ್ದರೆ ಶಿಸ್ತು ನಿಯಮ ಕಲಿಯುವುದಿಲ್ಲವೆಂದು ತಿಳಿದು ಅವನನ್ನು ನೈನಿತಾಲ್‌ನಲ್ಲಿರುವ ಬೋರ್ಡಿಂಗ್‌ಗೆ ಸೇರಿಸಿದ್ದಳು. ಆಗ ಅವನ ವಯಸ್ಸು ಏಳು ವರ್ಷ. ಅಷ್ಟರವರೆಗೆ ಪೂನಾದಲ್ಲಿ ಕಾನ್ವೆಂಟಿನಲ್ಲಿ ಓದುತ್ತಿದ್ದ. ಈಗ ಕುಸುಮ್ ಮಗನನ್ನು ಬೋರ್ಡಿಂಗ್ ಸ್ಕೂಲಿನಲ್ಲಿ ಬಿಡಲು ಕರೆದೊಯ್ಯುತ್ತಿದ್ದಳು.

೦ ೦ ೦ ೦

ಅಂದು ರಾಜೇಶ್ ಕ್ಲಾಸಿಗೆ ಹೋಗಲು ತಯಾರಾಗಿ ಇನ್ನೇನು ಹೊರಡಬೇಕು ಅಷ್ಟರಲ್ಲಿ ಪ್ಯೂನ್ ಜೋಸಫ್ ಬಂದು ಕರೆದ. "ರಾಜು ....ಮದರ್ ಸುಪೀರಿಯರ್ ಬುಲಾರಹೀಹೈ" ಅವನ ಹೃದಯ ಹೊಡೆದುಕೊಳ್ಳುವುದಕ್ಕೆ ಶುರುವಾಯಿತು. ನಾನೇನು ತಪ್ಪು ಮಾಡಿದೆ?...ಬೆಳಿಗ್ಗೆ ಸ್ನಾನಮಾಡಿದ ಮೇಲೆ ಬಟ್ಟೆಗಳನ್ನು ಟಬ್‌ನಲ್ಲಿ ಹಾಕಿದ್ದೆನಲ್ಲ. ಮತ್ತೆ ಹಾಸಿಗೆ ಸರಿಯಾಗೇ ಸೆಟ್ ಮಾಡಿದ್ದೆ....ಮತ್ತೆ ಏಕೆ....

ಜವಾನನ್ನ ಜೊತೆಗೆ ಹೋಗುವ ಮುನ್ನ ಇನ್ನೊಂದು ಬಾರಿ ತನ್ನ ಡ್ರೆಸ್ ಸರಿಯಾಗಿದೆಯೋ ಎಂದು ಖಚಿತಪಡಿಸಿಕೊಂಡು ಮದರ್ ಸುಪೀರಿಯರ್ ರೂಮಿನ ಕಡೆ ಹೊರಟ.

"ಮದರ್ ಮೆ . ಐ ಕಮಿನ್...?"

"ಕಮಿನ್ ಚೈಲ್ಡ್ ಎಂದು ಪಕ್ಕದಲ್ಲಿದ್ದ ಕುರ್ಚಿಯನ್ನು ತೋರಿಸಿದರು."

ರಾಜೇಶನ ಮನಸ್ಸಿನಲ್ಲಿ ಅನೇಕ ತರಹದ ಪ್ರಶ್ನೆಗಳಿದ್ದವು. ಹಿಂದಿನ ದಿನ ಅವನು ಆಡುವಾಗ ಒಬ್ಬ ಹುಡುಗನಿಗೆ ಜೋರಾಗಿ ಚೆಂಡಿಂದ ಹೊಡೆದಿದ್ದ. ಏಕೋ ಅವನಿಗೆ ಹಿಂದಿನ ದಿನ ಕೋಪ ಬಂದಿತು. ಆ ಹುಡುಗ ಅಳುತ್ತಾ ಟೀಚರ್ ಬಳಿ ಹೋಗಿದ್ದ. ಒಂದು ವೇಳೆ ಅದರ ಬಗ್ಗೆ ಕೇಳಲು ಕರೆದರೋ.......ಅಥವಾ...........ಹೂಂ.....ನಿನ್ನೆಯ ದಿನ ಮ್ಯಾಥ್ಸ್ ಟೀಚರ್ ಕೊಟ್ಟಿದ್ದ ಲೆಕ್ಕ ಎಲ್ಲಾ ತಪ್ಪು ಮಾಡಿದ್ದೆ....ಏನಾಗಿತ್ತೋ ಅವನಿಗೆ.....ಹಾಂ ಆ ಅಂಕಲ್‌ದೇ ಈ ಕೆಲಸ.......ಆ ಚಾಕೋಲೆಟ್ ಅಂಕಲ್ ಆಗಾಗ್ಗೆ ಬಂದು ಪ್ರೀತಿಯಿಂದ ತನ್ನನ್ನು ಮುದ್ದಿಸಿ ಒಂದು ದೊಡ್ಡ ಕ್ಯಾಡ್‌ಬರೀಸ್ ಚಾಕೋಲೇಟ್‌ಕೊಟ್ಟು ಹೋಗುತ್ತಿದ್ದರು. ಯಾಕೋ ಒಂದು ವಾರದಿಂದ ಬಂದಿರಲಿಲ್ಲ. ಅದಕ್ಕಾಗಿಯೇ ಅಲ್ಲವೇ ಅವನ ದುಃಖಗೊಂಡ ಮನಸ್ಸು ರೊಚ್ಚಿಗೆದ್ದಿತು.

"ಮದರ್..........ಹೇಳಿದರು."

"ಮಗು...ನೀನು ಈಗ ಅರ್ಜೆಂಟಾಗಿ ಮನೆಗೆ ಹೋಗಬೇಕು. ನಿಮ್ಮ ತಾಯಿಯಿಂದ ಕಾಗದ ಬಂದಿದೆ........ತಗೋ ಈ ಏರ್‌ಟಿಕೆಟ್. ಜೋಸೆಫ್ ನಿನ್ನನ್ನು ಏರೋಡ್ರೋಮಿಗೆ ಕರೆದೊಯ್ಯುತ್ತಾನೆ.

ರಾಜೇಶ್ ಮೂಕನಂತೆ ಮದರ್‌ಳನ್ನೇ ನೋಡತೊಡಗಿದ. ಆಗ

ಮದರ್ ಅವನ ಬಳಿಗೆ ಬಂದು ಪ್ರೀತಿಯಿಂದ ತಲೆ ನೇವರಿಸಿ ಹೇಳಿದರು "ಹೋಗು ಮಗು, ದೇವರನ್ನು ಪ್ರಾರ್ಥಿಸು" ರಾಜೇಶ್ ಅವರ ರೂಮಿನಿಂದ ಆಚೆಗೆ ಬಂದ ಮೇಲೆ ಹಾಯಾಗಿ ಉಸಿರಾಡಿದ. ಸಧ್ಯ ಯಾವ ತರಹದ ........ಕಂಪ್ಲೆಂಟು ಇಲ್ಲ, ನಾನು ಯಾವ ತರಹದ ತಪ್ಪೂ ಮಾಡಿಲ್ಲ ಮನೆಗೆ ತಾನೇ ಹೋಗೋದು....ಇದಕ್ಕೆ ಈ ಮದರ್ ಏಕೆ ಇಷ್ಟೊಂದು ಸೀರಿಯಸ್ಸಾಗಿ ಹೇಳಿದರು. ಬಹುಶಃ ಅವರಿಗೆ ಮನೆಗೆ ಹೋಗಲು ರಜೆ ಸಿಕ್ಕಲಿಲ್ಲವೇನೋ ಅದಕ್ಕೆ ಅಷ್ಟೊಂದು ಬೇಜಾರಾಗಿದ್ದಾರೆ" ಎಂದು ಕೊಂಡು ಕುಣಿಯುತ್ತಲೇ ತನ್ನ ರೂಮಿಗೆ ಬಂದ.

ಬಂದವನೇ ತನ್ನ ಸ್ಕೂಲ್ ಯೂನಿಫಾರಂ ತೆಗೆದು ತನಗೆ ಪ್ರಿಯವಾದ ಜೀನ್ಸ್ ಮತ್ತು ಟೀ ಶರ್ಟ್ ಹಾಕಿಕೊಂಡು ಹೊರಟನು.

ಅವನು ಆಚೆಗೆ ಬಂದಾಗ ಸೀನಿಯರ್ ಕ್ಲಾಸಿನ ಸ್ಟೂಡೆಂಟ್ಸ್ ಪರಿತಾಪವಾಗಿ ಇವನ ಕಡೆಗೇ ನೋಡುತ್ತಿದ್ದರು. ಒಂದು ಕ್ಷಣ ರಾಜೇಶ್ ನಿಗೆ ಅನ್ನಿಸಿತು ಅವರಲ್ಲಿ ತನ್ನ ಬಗ್ಗೆ ಏಕೆ ಅಷ್ಟೊಂದು ಅನುಕಂಪ ತೋರಿಸ್ತಿದಾರೆ ?

"ಓಹೋ....ತಿಳೀತು.......ಇವರೆಲ್ಲಾ ಹೀಗೆ ಅಂದುಕೊಂಡಿದ್ದಾರೆ. ರಾಜೇಶ್ ಏನೋ ಮಾಡಬಾರದ ತಪ್ಪನ್ನು ಮಾಡಿದ್ದಾನೆ. ಅದಕ್ಕೆ ಮದರ್ ಕರೆದು ಅವನನ್ನು ಸಸ್ಪೆಂಡ್ ಮಾಡಿದಾರೆ ಹೋ. ....ಹೋ........ ಎಂತಹ ಮೂರ್ಖರು........ಹಾಗೇ ಅಂದುಕೊಳ್ಳಲಿ...ಇರಲಿ ಸಸ್ಪೆನ್ಸ್" ಅಂದುಕೊಂಡು, ತನ್ನ ಮುಖದಲ್ಲಿಯ ನಗುವನ್ನು ಮರೆಸುತ್ತಾ ಬಹಳ ದುಃಖಗೊಂಡವನಂತೆ ಟ್ಯಾಕ್ಸಿಯಲ್ಲಿ ಕುಳಿತ.

ಟ್ಯಾಕ್ಸಿ ತುಸುದೂರ ಹೋದ ಮೇಲೆ ತನ್ನಷ್ಟಕ್ಕೆ ತಾನು ನಗಲು ಶುರುಮಾಡಿದ.

ಜೊತೆಯಲ್ಲಿದ್ದ ಜೋಸೆಫ್ ಗಾಬರಿಗೊಂಡ.

"ರಾಜೇಶ್ ಯಾಕೆ ಹೀಗೆ ನಗ್ತಿದೀಯಾ ?"

"ಏಕೆ ನಗಬಾರದೇ....? ನಂಗೆ ನಗು ಬರ್‍ತಿದೆ ನಗ್ತಿದೀನಿ."

ತನ್ನನ್ನು ಫ್ಲೈಟ್‌ನಲ್ಲಿ ಕೂಡಿಸಿದ ಮೇಲೆ ಜೋಸೆಫ್ ಹೊರಟು ಹೋದನು. ಮಮ್ಮಿ ಯಾವಾಗಲೂ ನನ್ನನ್ನು ಫ್ಲೈಟ್‌ನಲ್ಲೇ ಕಳಿಸೋದು, ಕರೆಸೋದು.

ಫ್ಲೈಟ್ ಪುಣೆ ತಲುಪಿದಾಗ ಮಮ್ಮಿ ನನಗಾಗಿ ಕಾದಿದ್ದಳು, ನನ್ನನ್ನು ನೋಡಿದವಳೇ ನನ್ನ ತಬ್ಬಿ ಮುದ್ದಿಟ್ಟು ಕಾರಿನ ಬಳಿ ಬಂದಳು. ರಸ್ತೆಯಲ್ಲಿ ಕಾನ್ವೆಂಟಿನ ಬಗ್ಗೆ ಕೇಳಿದಳು. ಮತ್ತು ನನ್ನ ಪಾಠಪ್ರವಚನದ ಬಗ್ಗೆ ಕೇಳಿದಳು. ಅಷ್ಟರಲ್ಲಿ ಮನೆ ತಲುಪಿದೆವು.

ಮನೆ ತಲುಪುತ್ತಲೇ ನನಗೆ ಸ್ನಾನ ಮಾಡೆಂದು ಹೇಳಿ ನನ್ನ ರೂಮಿಗೆ ಹೋದಳು. ನಾನು ಸ್ನಾನ ಮಾಡಿ ಆಚೆಗೆ ಬರುವಷ್ಟರಲ್ಲಿ ನನಗಾಗಿ ಬಿಳಿಯ ಪಾಯಿಜಾಮು ಜುಬ್ಬ ತೆಗೆದಿರಿಸಿದ್ದಳು. ಮಾತನಾಡದೇ ಡ್ರಸ್ ಮಾಡಿಕೊಂಡು ಆಚೆಗೆ ಬಂದೆ. ಮತ್ತೆ ಅಮ್ಮ ನನ್ನನ್ನು ಕಾರಿನಲ್ಲಿ ಕೂಡಿಸಿ ಕೊಂಡು ನಮ್ಮ ಮನೆಯಿಂದ ಬಹಳ ದೂರ ಇರುವ ಒಂದು ಮನೆಯ ಮುಂದೆ ಗಾಡಿ ನಿಲ್ಲಿಸಿದಳು. ಆ ಮನೆಯ ಮುಂದೆ ಅನೇಕ ಕಾರುಗಳು ನಿಂತಿದ್ದವು. ಅಲ್ಲಿ ಹೊರಗಡೆ ಗುಂಪು ಗುಂಪಾಗಿ ಹೆಂಗ ಸರು ಗಂಡಸರು ನಿಂತಿದ್ದರು. ನನ್ನನ್ನು ನೋಡುತ್ತಲೇ ಕೆಲವರು ಜೋರಾಗಿ ಅಳಲು ಶುರು ಮಾಡಿದರು. ನಂಗೇಕೊ ಉಸಿರು ಕಟ್ಟಿದ ಹಾಗಿ ಆಗಿತ್ತು.

ಆ ಮನೆಯ ಒಳಗಡೆ ಹೋಗುತ್ತಲೇ ಅಲ್ಲಿ ತುಂಬಾ ಜನ ಇದ್ದರು ; ಒಂದು ಮಂಚದ ಮೇಲೆ ಒಬ್ಬ ಮನುಷ್ಯನನ್ನು ಮಲಗಿಸಿದ್ದರು. ಮುಖ ಮುಚ್ಚುವಂತೆ ಹೂವಿನಿಂದ ತುಂಬಿದ್ದರು. ನನಗೆ ಅದು ಯಾರೆಂದು ತಿಳಿಯಲಿಲ್ಲ. ಅಮ್ಮನ ಹತ್ತಿರ ಸರಿದು ಸುಮ್ಮನೆ ನಿಂತೆ. ಅಷ್ಟರಲ್ಲಿ ನನ್ನ ಅಜ್ಜಿ ಬಂದು ಹೇಳಿದಳು.

"ನಮಸ್ಕಾರ ಮಾಡು . ರಾಜೇಶ್....ಇಗಿರು ನಿನ್ನ ತಂದೆ" ಎಂದಳು

"ಹೂಂ.......ಎಂದು ನಿರ್ವಿಕಾರವಾಗಿ ತಲೆಯಾಡಿಸಿದಳು. ಮಮ್ಮಿ

"ಅಲ್ಲ....ಇವರು....ನನ್ನ....ಡ್ಯಾಡಿ ಅಲ್ಲ" ಎನ್ನುತ್ತಾ ಗಾಬರಿಯಿಂದ ನನ್ನ ಸುತ್ತ ಮುತ್ತ ನೋಡಿದೆ.

"ಹಾಂ...ಆ....ಆ....ಫೋಟೋದಲ್ಲಿ ನಗುತ್ತಾ ನಿಂತಿರೋದು.... ಅಂಕಲ್....ನನ್ನ ಚಾಕೋಲೇಟ್ ಅಂಕಲ್ ಆ ಫೋಟೋಗೆ ದೊಡ್ಡ ಗುಲಾಬಿ ಹಾರ ಹಾಕಿದಾರೆ. ಕುಂಕುಮ ಹಚ್ಚಿದಾರೆ...ಮತ್ತೆ ಹಾರ ಹಾಕಲೇಬೇಕು. ಎಷ್ಟು ಒಳ್ಳೆಯವರು" ಎಂದು.

"ಅಜ್ಜೀ....ಈ ಫೋಟೋದಲ್ಲಿರುವ ಅಂಕಲ್..."

"ಅಂಕಲ್...ಅಲ್ಲ ಮಗು...ಅದು ನಿನ್ನ ಡ್ಯಾಡಿ" ನನ್ನ ಮನಸ್ಸು..... ಕೂಗುತ್ತಿತ್ತು. ತನಗೆ ಯಾವಾಗಲೂ ಚಾಕೋಲೇಟ್ ತಂದುಕೊಡು ತ್ತಿದ್ದ ಅಂಕಲ್, ತನ್ನನ್ನು ಬಾರಿ ಬಾರಿ ಮುದ್ದಿಸಿ ಅನೇಕ ತರಹದ ಆಟದ ಸಾಮಾನುಗಳನ್ನು ತಂದುಕೊಡುತ್ತಿದ್ದವರು, ಮತ್ತೆ....ತನ್ನಿಂದ ಪ್ರಾಮಿಸ್ ತೆಗೆದುಕೊಂಡಿದ್ದರು...

"ಎಂದೆಂದಿಗೂ ಅವರು ನನ್ನನ್ನು ನೋಡಲು ಬರುವುದು ಅಮ್ಮನಿಗೆ ಹೇಳಕೂಡದೆಂದು"....ಹೋ ..ಇಷ್ಟು ದೊಡ್ಡವನಾದ ನನ್ನನ್ನು ಚಿಕ್ಕ ಮಗುವನ್ನು ಎತ್ತಿಕೊಳ್ಳುವಂತೆ ಎತ್ತಿಕೊಂಡು ಮುದ್ದಿಡುತ್ತಿದ್ದರು.

ಆದರೆ.......ಅಮ್ಮ ಏಕೆ ನನಗೆ ಒಂದು ಬಾರಿಯಾದರೂ ಈ ಅಪ್ಪನ ಬಗ್ಗೆ ಹೇಳಿರಲಿಲ್ಲ....ಮತ್ತೆ ಈ ಡ್ಯಾಡಿ ಕೂಡ "ನಾನು ನಿನ್ನ ಅಪ್ಪ ಎಂದು ಹೇಳಿರಲಿಲ್ಲ"

ಏಕೋ ಅವನಿಗೆ ಎಲ್ಲವೂ ಬಹಳ ತೊಡಕಾದಂತೆ ಅನ್ನಿಸತೊಡ ಗಿತು. ತಾಯಿಯ ಬಳಿ ಧೈರ್ಯವಾಗಿ ಕೇಳಬಲ್ಲನೇ "ಹೂಂ ಗಟ್ಟಿಯಾಗಿ ಅಳುವ ಹಾಗಿಲ್ಲ....ಅತ್ತರೆ ತಕ್ಷಣವೇ ಹೇಳುತ್ತಿದ್ದಳು.

"ರಾಜೇಶ್....ಅಳಬೇಡ...ನೀನು ಗಂಡು ಹುಡುಗ .. ನೀನು ಸಾಧಾರಣ ಹುಡುಗನಲ್ಲ...ಅದೇನೋ ಹೇಳ್ತಾರಲ್ಲ ಒಂದು ಮಿಂಚಿನ ಹುಳಕ್ಕೆ ನೀನು ಸೂರ್ಯ...ನೀನು ಸೂರ್ಯ....ಸುಟ್ಟರೂ ಚಿಂತೆಯಿಲ್ಲ...ಕನಲಿ ಕಪ್ಪಾಗಬೇಡ"....ಅಂತ.

"ಹೋ ದೇವರೇ ಇದೆಂತಹ ಕಷ್ಟ. ನನ್ನ ಪ್ರೀತಿಯ ಅಂಕಲ್... ಅಲ್ಲ ನನ್ನ ಡ್ಯಾಡಿ....ನನ್ನಿಂದ ದೂರ ಹೊರಟುಹೋದರೆ - ಅಂದರೆ ಇನ್ನು ನನ್ನನ್ನು ನೋಡಲು ಬರುವುದಿಲ್ಲ. ಮತ್ತೆ ಆ ಪ್ರೀತಿಯ, ಮಮತೆಯ ಬಿಸಿ ಅಪ್ಪುಗೆ ಇನ್ನಿಲ್ಲ. ಅಮ್ಮ ಕಲ್ಲಿನಂತೆ ನಿಂತಿದ್ದಾಳೆ....ಕಲ್ಲಿನಂತೆ ಏನು ಕಲ್ಲೇ ಅವಳು. ಅವಳ ಕಣ್ಣಲ್ಲಿ ಒಂದು ತೊಟ್ಟು ನೀರಿಲ್ಲ, ಬಿಳೀ ಸೀರೆ ಉಟ್ಟು ಸ್ವಲ್ಪವೂ ಅಲುಗಾಡದೇ ಗಂಭೀರವಾಗಿ ನಿಂತಿದಾಳೆ. ಈ ಅಮ್ಮ ನನ್ನು ನೋಡಿದರೆ ಮಂಜಿನಿಂದ ಮುಚ್ಚಿದ್ದ ಹಿಮಾಲಯ ಪರ್ವತವೇ ಜ್ಞಾಪಕಕ್ಕೆ ಬರುತ್ತೆ.

ಅಲ್ಲಿ ನಿಂತಿರುವ ಅನೇಕ ಜನ ಅಮ್ಮನ ಕಡೆ ತಿರುಗಿ ಗುಸುಗುಸು ಮಾತನಾಡುತ್ತಿದ್ದಾರೆ. ಬೇರೆಯವರಿಗಾಗಿ ಅಲ್ಲಾ....ತನಗಾಗಿಯಾದರೂ ಅಮ್ಮ ಅಳಬಾರದೇ...ಅಮ್ಮಂಗೆ ಅಳೋಕೆ ಬರೋಲ್ವೇನೂ....ಅಳದಿದ್ದರೂ ಬೇಡ ಏಕೆ ಹಾಗೆ ಕಲ್ಲಿನಂತೆ ನಿಂತಿದಾಳೆ....ಏಕೋ ಮುಂದೆ ತನಗೆ ಯೋಚಿಸುವ ಶಕ್ತಿಯೂ ಉಳಿಯಲಿಲ್ಲ. ನಿಧಾನವಾಗಿ ಡ್ಯಾಡಿಯ ಬಳಿ ಹೋಗುವಷ್ಟರಲ್ಲಿ ಅಲ್ಲಿರುವ ಪ್ರತಿಯೊಂದು ವಸ್ತುವೂ ಮಂಜಾಗತೊಡಗಿತು.

* * *

ಕಣ್ಣು ಬಿಟ್ಟಾಗ ಮಮ್ಮಿ ನನ್ನ ಬಳಿ ಕುಳಿತಿದ್ದಳು. ಅವಳ ಕೈಲಿ ಇಲ್‌ಸ್ಟ್ರೇಟೆಡ್ ವೀಕ್ಲಿಯಿತ್ತು. ಅದರ ಕವರಿನ ಮೇಲೆ ದುರ್ಗಾಮಾತೆಯ

ರಂಗಿನ ಫೋಟೋ ಇತ್ತು. ಏಕೋ ಅದನ್ನು ನೋಡಲಾಗದೇ ಕಣ್ಣು ಮುಚ್ಚಿಕೊಂಡೆ ನನಗೆ ಅನ್ನಿಸಿತು ಮಮ್ಮಿಯೇ ಆ ದುರ್ಗೆಯ ಡ್ರೆಸ್ಸಿನಲ್ಲಿ ಅಪ್ಪನ ಎದೆಯ ಮೇಲೆ ಈಟಿ ಹಿಡಿದಂತೆ ಅನ್ನಿಸಿತು.

"ರಾಜೇಶ್...ಏಳು ಸ್ವಲ್ಪ ಹಣ್ಣಿನ ರಸ ಕುಡಿ...."

ಆ ಅಧಿಕಾರವಾಣಿ ಕೇಳುತ್ತಲೇ ವಿಧೇಯನಾಗಿ ಎದ್ದು ಹಣ್ಣಿನ ರಸ ಕುಡಿದೆ. ಆ ಮೋಸಂಬಿಯ ರಸ ಕಹಿಯಾಗಿತ್ತು. ಹೇಗೋ ಧೈರ್ಯ ಮಾಡಿ ಕೇಳೀಬಿಡುವ ಎಂದುಕೊಂಡು

"ಮಮ್ಮೀ............ ನನ್ನ ಡ್ಯಾಡಿ..............."

"ರಾಜೇಶ್.......ಅದು ಸತ್ತುಹೋದ ಕತೆ.................ಮತ್ತೆ ಕೇಳಬೇಡ ಈಗ ಸ್ವಲ್ಪ ಹೊತ್ತು ಎದ್ದು ಕೂತ್ಕೋ.................ಈ ಕಾಮಿಕ್ಸ್ ನೋಡು ಎಲ್ಲಾ ಹೊಸದು! ಎಂದು ಕೆಲವು ಸೂಪರ್-ಮ್ಯಾನ್, ಟಾರ್ಜನ್, ಫಾಂಟಮ್ ಕಾಮಿಕ್ಸ್‌ಗಳನ್ನು ನನ್ನ ಮುಂದೆ ಹಾಕಿ ಹೋದಳು.

ಬೇರೆ ಸಮಯದಲ್ಲಾಗಿದ್ದರೆ ಹೊಸ ಕಾಮಿಕ್ಸ್‌ಗಳನ್ನು ನೋಡುತ್ತಲೇ ಕುಣಿಯುತ್ತಿದ್ದೆ. ಆದರೆ ಇಂದೇಕೋ........ಈ ಕಾಮಿಕ್ಸ್ ಎಲ್ಲಾ ಸ್ಟಂಟ್ ಅನ್ಸುತ್ತೆ. ಮೊದಲಬಾರಿಗೆ ಅನ್ನಿಸಿತ್ತು ಈ ಫಾಂಟಮ್ ಟಾರ್ಜಾನ್ ಎಲ್ಲಾ ಕಾಲ್ಪನಿಕ ಪಾತ್ರಗಳು. ಮನುಷ್ಯನ ಕೈಲಾದ್ದನ್ನು ಲೀಲಾಜಾಲವಾಗಿ ಮಾಡ್ತಾರೆ.

ತನಗೆ ಮತ್ತೆ ಮತ್ತೆ ಅಪ್ಪನದೇ ನೆನಪು. ತನ್ನ ಬೋರ್ಡಿಂಗ್, ನಲ್ಲಿರುವ ಸ್ನೇಹಿತರ ಅಪ್ಪಂದಿರು ಬಂದಾಗ ತನ್ನ ಮನಸ್ಸು ಎಷ್ಟು ಖಿನ್ನವಾಗುತ್ತಿತ್ತು. ಅಮ್ಮ ನಂಗೆ ಯಾವ ರೀತಿಯಲ್ಲಿಯೂ ಕೊರತೆ ಮಾಡಿಲ್ಲ ಆದರೆ ಮುಖ್ಯವಾಗಿ ಅಪ್ಪನ ಕೊರತೆ ಮಾಡಿಲ್ವೇ.......?

ಈ ದೊಡ್ಡೋರ ಸ್ವಭಾವವೇ ಅರ್ಥವಾಗೋಲ್ಲ....ನಾವು ಚಿಕ್ಕ

ವರು ಏನಾದರೂ ಜಗಳವಾಡಿದರೆ ಹೇಗೆ ಬುದ್ಧಿವಾದ ಹೇಳ್ತಾರೆ "ಹಾಗೆಲ್ಲಾ ಜಗಳ ಆಡಬಾರದು........ಕೆಟ್ಟ ಮಕ್ಕಳು ಮಾತ್ರ ಜಗಳಾ ಆಡೋದು, ಒಬ್ಬೊಬ್ಬರೊನ್ನೊಬ್ಬರು ಹೊಂದಿಕೊಂಡು ಹೋಗಬೇಕು... ಈ ಉಪದೇಶ ಕೇವಲ ನಮ್ಮಂತಹ ಚಿಕ್ಕ ಮಕ್ಕಳಿಗಾಗಿ ಮಾತ್ರವೇ? ಈ ಅಮ್ಮ ಅಪ್ಪ ಏಕೆ ಜಗಳ ಆಡೋದು.......ಮತ್ತೆ 'ಠೂ' ಬಿಡೋದು, ಅದೂ ಏನು ಇವರ "ಠೂ"ನಲ್ಲಿ ಕೇವಲ 'ಠೂ' ಮಾತ್ರ "ಸೇ" ಇಲ್ಲವೇ ಇಲ್ಲ. ನಾವೇ ಪರವಾಗಿಲ್ಲ. 'ಠೂ' ಬಿಟ್ಟು ಸ್ವಲ್ಪ ಹೋತ್ತಿಗೆಲ್ಲಾ "ಸೇ" ಆಗಿಬಿಡ್ತೀವೆ, ನಾವು ಚಿಕ್ಕ ಮಕ್ಕಳು ಎಷ್ಟು ಶಾಂತವಾಗಿ ಒಳ್ಳೇ ತಿಳಿನೀರಿನ ಕೊಳ ಇದ್ದ ಹಾಗೆ.................. ಈ ದೊಡ್ಡೋರು ಒಳ್ಳೇ ವಾಲ್ಕೆನೋ ಇದ್ದ ಹಾಗೆ.........ಹೀಗೆಯೇ ಎಷ್ಟೋ ಯೋಚನೆಗಳು, ಎಷ್ಟೋ ಪ್ರಶ್ನೆಗಳು. ನನ್ನೆಲ್ಲಾ ಪ್ರಶ್ನೆಗಳಿಗೆ ಮಮ್ಮಿ ಉತ್ತರಿಸಬಲ್ಲಳೇ? ಊ ಹೂಂ........ಉತ್ತರಿಸಲಾಗಳು.

* * *

# ಮುಕ್ತಿ

—ವಿಜಯಶ್ರೀ

ಬೇಸಿಗೆಯ ದಗೆಯಂತೆ ಅಸ್ವಸ್ಥಗೊಳಿಸಿ, ಅಶಾಂತಿ ಹುಟ್ಟಿಸು ತ್ತಿರುವ ಈ ನೆನಪುಗಳನ್ನು ಕೊಲ್ಲುವುದಾದರು ಹೇಗೆ? ಪ್ರಾರಂಭದ ಬೇಸಿಗೆಯೇ ಒಮ್ಮೊಮ್ಮೆ ತೀವ್ರತರವಾಗಿ ತನ್ನ ತೀಕ್ಷ್ಣತೆಯಿಂದ ಮನು ಷ್ಯರನ್ನು ಸುಟ್ಟು ಬಿಡುವಂತಹುದಾಗಿರುತ್ತದೆ. ದಿನಗಳು ಕಳೆದಂತೆ ಆ ತೀವ್ರತೆ ಹೆಚ್ಚಾದಂತೆ, ಅದಕ್ಕೆ ಸಮನಾಗಿ ಸಾಗುವ ಅಸಹ್ಯ ಯಾತ ನೆಯೂ ಮಿಗಿಲಾಗುತ್ತಿದೆ. ಬದುಕಿನ ಇತ್ತೀಚಿನ ದಿನಗಳು ವರ್ಷಗಳಾ ಗುತ್ತಿವೆ. ಹೆಜ್ಜೆ ಹೆಜ್ಜೆಯನ್ನು ಅಣಕಿಸುತ್ತಿವೆ. ಕೂಳಿನ ಒಂದೊಂದು ತುತ್ತೂ ಗಂಟಲು ನೋವನ್ನು ಬಿಗಿಗೊಳಿಸುತ್ತಿದೆ. ಬಲವಂತದಿಂದ ತಿಂದ ಅನ್ನ ಉದರಶೂಲೆಗೆ ನೆವವಾಗುತ್ತದೆ .......

ಉಸಿರು ಎದೆಯನ್ನು ಒತ್ತಿ ಹಿಡಿದಾಗಲಂತೂ ತಾನಾವುದೋ ಕಾಣದ ಗರ್ಭವಾಳಕ್ಕೆ ಇಳಿಯುತ್ತಿರುವ, ಇಳಿದು ಅಲ್ಲೇ ಹುದುಗಿ ಹೋಗುವ ಅನುಭವದಿಂದ ತೀರಾ ತತ್ತರಿಸಿ ಹೋಗುತ್ತಾನೆ ವಿವೇಕ. ಆಕಾಶ—ಪಾತಾಳಗಳನ್ನು ಮೆಟ್ಟಿದ ವಾಮನ ಪಾದ ತನ್ನ ನೆತ್ತಿಯನ್ನೂ ಒತ್ತುತ್ತಿದೆ. ಕಣ್ಣೆತ್ತಿ ನೋಡಲೂ ಆಗದಂತೆ ಆ ಪಾದದ ಹಿಮ್ಮಡಿ, ಬೆರಳುಗಳು ಟೋಪಿಯಂತೆ ಬಾಗಿ ಕಣ್ಣುಗಳನ್ನೂ ಅಂಧವಾಗಿಸುತ್ತಿವೆ. ಅದು ಅಲ್ಲಿಗೇ ನಿಲ್ಲದೆ ಆ ಪಾದ ಬೆಳೆಯುತ್ತಲೇ ಇದೆ ಮೂಗು—ಬಾಯಿ ಗಳನ್ನೂ ಒತ್ತಿ ಒತ್ತಿ ಹಿಡಿಯುತ್ತಿದೆ. ತನ್ನ ಬಲಿಷ್ಠ ಬಾಹುಗಳ ಹಿಡಿ ತಕ್ಕೂ ಸಿಕ್ಕದ ಆ ಪಾದಗಳು ತನ್ನ ಕರಚಲನೆಯನ್ನೂ ನಿಯಂತ್ರಿಸು ತ್ತಿವೆ. ಇಡೀ ದೇಹ ಜಡವಾಗುತ್ತ-ಆಗುತ್ತ ಕಲ್ಲೇ ಆಗುತ್ತದೆ.

ಇದರಿಂದ ಪಾರಾಗುವ ಬಗೆ ಹೇಗೆ? ಯಾಕೆ ಹೀಗಾಗುತ್ತಿದೆ? ಯಾಕೆ ಹೀಗಾಗುತ್ತದೆ ಎನ್ನುವುದಕ್ಕಿಂತ ತನಗೇನಾಗಿದೆ? ಏನಾಗುತ್ತಿದೆ? ನಾನು ಏನಾಗುತ್ತಿದ್ದೇನೆ? ಎನ್ನುವ ಸ್ಪಷ್ಟ ಕಲ್ಪನೆಯೇ ಆತನಿಗಿಲ್ಲ. ಒಟ್ಟಿನಲ್ಲಿ ಇತ್ತೀಚಿಗೆ ತನಗೇನೋ ಆಗುತ್ತಿದೆ. ಅದೂ ಈ ಮೂರು ವರ್ಷಗಳಿಂದ ಏನೋ ಆಗುತ್ತಿದೆ ಎಂಬ ಅನ್ನಿಸಿಕೆ ಒಂದೇ ಸಮನೆ ಕಾಡುತ್ತಿದೆ. ಮೂರುವರ್ಷಗಳ ಹಿಂದೆ ಈ ಸ್ಥಿತಿ ತನಗಿರಲಿಲ್ಲವೇ ? ಬಹುಶಃ ಹುಟ್ಟಿನಿಂದಲೂ ಆ ಸ್ಥಿತಿ ನಿದೆ———ಅಥವಾ ತನ್ನ ಹುಟ್ಟೇ ಆ ಸ್ಥಿತಿಯಲ್ಲಿ ಆಗಿರಬಹುದು. ಆದರೆ ಅವರ ಅರಿವಾದುದು ತೀರಾ ಇತ್ತೀಚಿಗೆ.

ಅಂದರೆ ಆ ಹಿಂದಿನ ಇಪ್ಪತ್ತನಾಲ್ಕು ವರ್ಷಗಳು ನನಗೇಕೆ ಗೊತ್ತಾಗ ಲಿಲ್ಲ? ನನ್ನ ಸ್ಥಿತಿಗತಿಗಳನ್ನು ಅರಿಯಲಾರದಷ್ಟು ನಾನು....ನಾನು.... ಏನಾಗಿದ್ದೆ? ಈಗಲಾದರೂ ನಾನು ಆಗಿರುವುದೇನನ್ನು? ಆಗ ಏನಾಗಿದ್ದೆ? ಈಗ ಏನಾಗಿದ್ದೇನೆ ಎಂಬ ಎರಡರ ಅರಿವೂ ನನಗಿಲ್ಲ. ಆದರೆ ಈ ಮೂರು ವರ್ಷಗಳಿಂದೀಚೆಗೆ ಯಾಕೋ ಅನ್ನಿಸುತ್ತಿದೆ. ಏನೋ ಅನ್ನಿಸು ತ್ತಿದೆ. ಎಲ್ಲಿ ಹೋದರು ಏನೋ ಕಸಿವಿಸಿ, ಜಗತ್ತಿನ ಜನರೆಲ್ಲ ತನ್ನ ಮುಂದೆ ಎದೆಯುಬ್ಬಿಸಿ ತಲೆಯೆತ್ತಿ, ಗಂಭೀರವಾಗಿ ನಡೆದ ಅನುಭವ.... ಆಗೆಲ್ಲ ತಾನು ಬಸವನ ಹುಳ, ಚಿಪ್ಪಿನ ಒಳಗೇ ಸರಿಯುವ ತನಕ, ಅವ ರಂತೆ ಸಾಗಲು ತನಗೇಕೆ ಆಗುತ್ತಿಲ್ಲ? ನಿಜ ಆಗುತ್ತಿಲ್ಲ; ಆದರೆ ಆಗುತ್ತಿಲ್ಲ ಎನ್ನುವುದರ ಅರಿವು ತನಗಾದುದು ಈಗಷ್ಟೆ! ಇಪ್ಪತ್ತನಾಲ್ಕು ವರ್ಷಗಳೂ ಸಾಗಿ ಬಂದದ್ದು ಹೀಗೇ ತಾನೆ? ಹಾಗೆ ಸಾಗಿ ಬಂದಿದ್ದೇನೆ ಎನ್ನುವುದು ಮೂರು ವರ್ಷದ ಅರಿವು ಮಾತ್ರ. ಆ ಅರಿವೇ ನನ್ನ ವ್ಯಕ್ತಿತ್ವದ ಬದಲಾ ವಣೆಯೇ? ನಾನೇನೋ ಆಗುತ್ತಿದ್ದೇನೆ-ಎಲ್ಲರಂತಿಲ್ಲ. ನನ್ನ ನಡೆ-ನುಡಿ ಉಸಿರು-ಊಟ-ಉಡುಗೆ ಎಲ್ಲರಿಗಿಂತ ಭಿನ್ನವಾಗುತ್ತಿವೆ, ಅಲ್ಲ ಆಗಿವೆ ಎನ್ನುವ ಅರಿವೇ, ನಾನೇನೊ ಆಗುತ್ತಿದ್ದೇನೆ ಎಂಬುದರ ಸೂಚನೆ ಯಾಗಿದೆ. ಹಾಗಾದರೆ ನಾನು ಆಗುತ್ತಿರುವುದೇನು? ಹಾಸಿಗೆಯ ತುಂಬಾ ಹೊರಳಾಡುವಂತಾಯಿತು, ಧಗೆ—

ಮೈಮೇಲಿನ ಬಟ್ಟೆಗಳನ್ನು ಕಾಯಿಸುತ್ತಿದೆ–ಕಾದು, ಕಾದು ಅವು ಹೊತ್ತಿ, ಉರಿದು ತನ್ನದೇಹವನ್ನು ಇನ್ನೇನು ಸುಟ್ಟು ಬೂದಿ ಮಾಡಿಬಿಡುತ್ತವೆ. ಬಟ್ಟೆಗಳನ್ನು ಕಿತ್ತೆಸೆದು ದಿಗಂಬರನಾಗಿ ನೆಲದ ಮೇಲೆ ಹೊರಳಾಡಬೇಕು. ಇಲ್ಲ ನೀರಿನ ತೊಟ್ಟಿಯಲ್ಲಿ ಮುಳುಗಬೇಕು. ಇಲ್ಲವೇ ನಿರ್ಜನ ಪ್ರದೇಶದಲ್ಲಿ ಮನಸ್ಸಿಗೆ ಕುಣಿದಾಡಬೇಕು. (ಈ ಜನಗಳ ಮಧ್ಯೆ ಬಟ್ಟೆ ಬರೆ ಮೈತುಂಬ ಇದ್ದರೂ, ಗಂಭೀರವಾಗಿಯೂ ನಾನು ಓಡಾಡಲಾರೆ.)

ವಿವೇಕ ಸಿಗರೇಟು ಹಚ್ಚಿದ—ಇದೆಂತಹ ವಿಚಿತ್ರ ಈ ಉರಿವ ಸಿಗರೇಟು, ತನ್ನ ಉರಿವ ದೇಹ–ಮನಸ್ಸಿಗೆ ತಂಪು ನೀಡಲು ಪ್ರಯತ್ನಿಸುತ್ತಿದೆಯಲ್ಲ? ಹೊಗೆಯನ್ನು ಬಾಯಿಯಿಂದ ಹೊರ ಕಾರಿದ. ಕೋಣೆ ತುಂಬುತ್ತಿರುವ ಆ ಒಂದೊಂದು ಹೊಗೆಯ ಉಂಗುರ, ಅಡ್ಡ—ಉದ್ದ ವಕ್ರ ರೇಖೆಗಳಲ್ಲೂ ಅದೇ ಮುಖಗಳು.

ಭಾರವಾಗುತ್ತಿರುವ ದಿನಗಳಲ್ಲಿ ಕಂಡ, ಕಂಡೆಡೆ ಆ ಮುಖಗಳು. ಮಳೆ ಬಂದು ಸೋರಿ ಸುಣ್ಣ ಕದಡಿದ ತಾರಸಿಯ ಭಾಗದಲ್ಲಿ, ಸ್ನೇಹಿತರು ಗೋಡೆಗೊರಗಿ ಕೂತಾಗ ಅವರ ತಲೆಯ ಎಣ್ಣೆ ತಾಗಿ ಆದ ಕಪ್ಪು ಗುರುತುಗಳಲ್ಲಿ, ಲೋಟದಿಂದ ತುಳುಕಿದ ನೀರಿನಲ್ಲಿ, ಕೊನೆಗೆ ಕಕ್ಕಸಿನ ಗೋಡೆಗಳ ಮೇಲೆ ಚೆಲ್ಲಿದ ನೀರಿನಲ್ಲಿ ಮೂಡಿದ ವಿಚಿತ್ರಾಕಾರಗಳಲ್ಲಿ ಕೂಡ ಅವೇ ಮುಖಗಳು. ಅದೂ ಸ್ಪಷ್ಟವಾಗಿ !

ಆ ಮುಖಗಳು ಎದುರಿನಿಂದ ನೋಡಲು ಸುಂದರವಾಗಿಯೇ ಇವೆ. ಆದರೆ ಈ ಗುರುತುಗಳೆಲ್ಲ ತೀರಾ ವಕ್ರವಾಗಿ ಕಾಣುತ್ತಿದ್ದರೂ ಆ ಮುಖದ ಛಾಯೆ, ಬಾವಗಳೇ ಹೊರ ಹೊಮ್ಮುತ್ತಿವೆ. ಆ ಸುಂದರ ಮುಖಗಳನ್ನೂ ಈ ವಕ್ರ ಮುಖಗಳನ್ನೂ ಒಂದೇ ಆಗಿಸುವ ಭಾವ ಅವುಗಳಲ್ಲಿ ಎದ್ದು ಕಾಣುತ್ತಿದೆ.

ನಿಜ ಅದು ಅಪ್ಪನದೇ ಮುಖ ! ಅದು ಆ ನನ್ನ ಅಮ್ಮನದೇ ಮುಖ, ತಾರಸಿಯ ಆ ಕಲೆಯಲ್ಲಿ ಗಂಟಿನಂತೆ ಕಾಣುವ ಗುರುತು ಅಪ್ಪನ

ಮುಖಭಾವವನ್ನೇ ಪ್ರತಿಬಿಂಬಿಸುವಂತಿದೆ. ಅಮ್ಮನ ಗಂಭೀರ, ಬಿಗಿದ ಸುಂದರವದನ ಕೂಡ ಗೋಡೆ ಮೇಲಿನ ವಕ್ರ ರೇಖೆಗಳಲ್ಲಿ ಎಷ್ಟು ಸ್ಪಷ್ಟ ವಾಗಿ ಮೂಡುತ್ತಿದೆ! ಅವರುಗಳದು ಸುಂದರ ಮುಖ ಎನ್ನುವ ಹಿಂದಿನ ಮಾತುಗಳ ನೆನಪೊಂದನ್ನು ಬಿಟ್ಟರೆ, ಆ ಮುಖ ಹೀಗೆಯೇ ವಕ್ರವಾಗಿಯೇ ಇದೆ ಅನ್ನಿಸುತ್ತೆ. ಅನ್ನಿಸುವುದೇನು ? ದಿನದಿಂದ ದಿನಕ್ಕೆ ಅದು ಹೀಗೆಯೇ ವಕ್ರವಾಗಿದೆ. ಇನ್ನೂ ವಯಸ್ಸಾದಂತೆ ಆ ವಕ್ರ ಹೆಚ್ಚುತ್ತಲೇ ಇದೆ ಅನ್ನುವಂತೆ; ವರ್ಣ ಶೈಲಚಿತ್ರದಂತೆ ಮನದಲ್ಲಿ ಅಚ್ಚೊತ್ತುತ್ತಲೇ ಇದೆ.

ಕೆಲ ದಿನಗಳು ಕಳೆದರೆ ಸುಂದರತೆಯ ಕಲ್ಪನೆಯೇ ಗುರುತು ಸಿಗ ದಂತೆ ಕರಗಿ ಹೋಗುತ್ತಿದೆ. ಅಪ್ಪ-ಅಮ್ಮ ಹೀಗೇಕಾಗುತ್ತಿದ್ದಾರೆ? ಇಡೀ ಊರಿಗೇ ದೊಡ್ಡವರಾದ, ಗೌರವಸ್ಥರೆನಿಸಿದ ಅವರು ನನ್ನಲ್ಲೇಕೆ ವಕ್ರವಾ ಗುತ್ತಿದ್ದಾರೆ. ನಾನೇ ಏನಾದರೂ ವಕ್ರವಾಗಿದ್ದೇನೆಯೋ? (ನನ್ನಅಮ್ಮ ನಿಗಿರುವಂತೆ ದೊಡ್ಡದಾದ ಸುಂದರ ಕಣ್ಣು, ನೀಳವಾದ, ನೇರವಾದ ನಾಸಿಕ, ಆ ಊರಿನಲ್ಲೇ ಯಾರಿಗೂ ಇಲ್ಲ. ಆದರೂ ಆ ಎಡಗಣ್ಣು ತೀರಾ ಸಣ್ಣ, ಬೇಡದಾಗಿ—ಎಲ್ಲರಲ್ಲೂ ಏನನ್ನೋ—ಇಲ್ಲದ್ದನ್ನು ಹುಡುಕುವಂತೆ ಕಾಣುತ್ತದೆ. ನೇರ ಮೂಗು ಯಾರನ್ನೋ ಹಂಗಿಸಲು ತಿರುಗಿದಂತೆ ತೋರುತ್ತೆ.)

ಇವತ್ತೇಕೆ ಇವರು ನನ್ನನ್ನು ಕಾಡುತ್ತಿದ್ದಾರೆ? ಎಲ್ಲಿ ಹೋದರೂ ಬಿಡುತ್ತಿಲ್ಲ. ಜಗತ್ತಿನ ಯಾವ ಮೂಲೆಯೂ—ಕಾಡು, ಗುಹೆ, ಜನನಿಬಿಡ ನಗರ ಯಾವುವೂ ನನ್ನನ್ನ ಅವರ ನೆನಪಿನಿಂದ ಮುಕ್ತಗೊಳಿಸಲಾರವು,ತಂದೆ ತಂದೆ- ತಾಯಿಯರ ನೆನಪು ಯಾರಿಗಾದರೂ ಮಧುರ ಅನುಭವ, —ಮಮತೆ- ವಾತ್ಸಲ್ಯಗಳನ್ನು ನೀಡುವಂತಹುದು. ಆದರೆ ನನ ಗೇಕೆ ಈ ವಿಶಿಷ್ಟ? ಏನೋ ಅರಿವೇ ಆಗದ, ಅಸ್ಪಷ್ಟವಾಗಿ, ಗಲಿಬಲಿ ಗೊಳಿಸಿ ಅಶಾಂತಿ, ಅಸಮಧಾನಗಳನ್ನು ಹೆಚ್ಚಿಸುತ್ತಲೇ ಇದೆ, ಅವರ ನೆನಪು.

ಆ ನೆನಪೇ ಆತಂಕಕಾರಿಯಾಗಿ ನನ್ನನ್ನು ಏನೂ ಮಾಡಲು ತೋಚದೆ ನೇರ ಮಾರ್ಗದಲ್ಲೂ ನಡೆಸದೆ ಎತ್ತೆತ್ತಲೋ ಬಲವಂತವಾಗಿ ತಳ್ಳುತ್ತಿದೆ. ಮೇಲಿಂದ ಮೇಲೆ ಸಿಗರೇಟುಗಳು ಬೂದಿಯಾಗುತ್ತಿವೆ, ಕೋಣೆ ತುಂಬ ಹೊಗೆ–ಈ ಹೊಗೆ ಮೂಡಿಸುವ ಅಸ್ಪಷ್ಟ ಚಿತ್ರಗಳು. ಆ ಚಿತ್ರಗಳು ಹುಟ್ಟಿಸುವ ಅಸ್ಪಷ್ಟ ಆತಂಕ, ಭೀತಿ.

ಬಾಗಿಲಿನ ಮೇಲೆ ಮೃದುವಾಗಿ ತಟ್ಟಿದ ಶಬ್ದ.

"ಒಳಗೆ ಬಾ ಮಂಜು ಬೋಲ್ಟ್ ಹಾಕಿಲ್ಲ" ಮಲಗಿದಲ್ಲಿಂದಲೇ ಹೇಳಿದ. ಬಾಗಿಲು ಮೆಲ್ಲಗೆ ತೆರೆದು, ಮುಚ್ಚಿಕೊಂಡು, ಮತ್ತೆ ಹಿಂದಿನಿಂದಲೇ ತೆರೆದುಕೊಂಡಿತು.

"ಛೀ... ಛೀ ಏನಿದು ವಿವೇಕ್ ? ಕೋಣೆ ತುಂಬ ಹೊಗೆ: ಏನಾಯ್ತು ನಿನಗೆ ? ಒಳ ಬಂದು ಮುಖ ಸೊಟ್ಟ ಮಾಡಿದ, ಮಂಜು ಕಿಟಕಿಯ ಮೇಲಿನ ಬಾಗಿಲನ್ನು ವಿಶಾಲವಾಗಿ ತೆರೆದು ಫ್ಯಾನು ಹಾಕಿ, ಅವನ ಪಕ್ಕದಲ್ಲೆ ಬಂದು ಕುಳಿತ. ಆತನ ಕೈಯಲ್ಲಿ ಉರಿಯುತ್ತಿದ್ದ ಸಿಗರೇಟು ಕಿತ್ತು ಕಿಟಕಿಯಿಂದ ಹೊರಗೆ ಎಸೆದಳು.

"ನೀನು ಬರ್ತ ಬರ್ತ ಸೋಮಾರಿಯಾಗ್ತಿದೀಯ: ಕೊಳಕುತನ ಹೆಚ್ಚಾತ್ತಾ ಇದೆ" ಅವನ ಕೊಳೆಯಾದ ಅಂಗಿಯ ಕಾಲರನ್ನು ಎಳೆದು, ಧೂಳಿನಿಂದ ಕೆಂಪಾಗಿ, ಕೆದರಿದ ಪೊದೆಯಂತಾದ ತಲೆಗೂದಲನ್ನು ಹಿಂದೆ ತಳ್ಳಿದಳು. ಅಡ್ಡಾದಿಡ್ಡಿಯಾಗಿ ಬೆಳೆದಿದ್ದ ಗಡ್ಡವನ್ನು ಬೆರಳುಗಳಿಂದ ನೇವರಿಸಿ "ನಿನಗೆ ನೀಟಾಗಿ ಕ್ಷೌರ ಮಾಡಿಕೊಳ್ಳಲು ಟೈಮ್ ಸಿಗ್ತಾ ಇಲ್ಲೇನು? ಎಂದಳು. ವಿವೇಕ ಅವಳನ್ನೇ ನಿಟ್ಟಿಸಿ ನೋಡುತ್ತಿದ್ದ. ಬಹಳ ಮಾತನಾಡಬೇಕು: ಎದೆಯಲ್ಲಿರುವ ಅಸ್ಪಷ್ಟ ಆತಂಕವನ್ನೆಲ್ಲ ಹೇಗಾದರೂ ಹೊರಹಾಕಿ ಹಗುರವಾಗಬೇಕು. ಅವಳೆದುರಿಗೆ ಏನನ್ನೂ ಉಳಿಸಿಕೊಳ್ಳಬಾರದು. ತನ್ನನ್ನು ಬಿಚ್ಚಿ ತೋರಿಸಬೇಕು. ಅವಳೊಬ್ಬಳೇ ತನ್ನ ತೋರುವಿಕೆಯನ್ನು

ಅರಿಯಬಲ್ಲಳು ಅನ್ನಿಸುತ್ತೆ. ಆ ಅನ್ನಿಸಿಕೆಯನ್ನು ಕಾರ್ಯರೂಪಕ್ಕೆ ತರಲೂ ಏನೋ ಆತಂಕ. ಹೇಳಬೇಕೆಂದುದೆಲ್ಲಾ ಮರತಂತಾಗುತ್ತದೆ. ಅವಳ ಮೋಹದ ನಗೆಯಲ್ಲಿ ಎಲ್ಲದಕ್ಕೂ ಒಂದು ತೀಕ್ಷ್ಣವಾದ ಪೊರೆ ಅಡ್ಡ ಬಂದು ನಿಲ್ಲುತ್ತದೆ. ನಿರಾಶೆಯಿಂದ ಇನ್ನೂ ಅವನು ಒಳ ಸರಿಯುತ್ತಾನೆ.

ಇವಳ ಮುಂದೆಯೂ ಬಿಚ್ಚಿಕೊಳ್ಳಲಾಗದ ಸ್ಥಿತಿಗೆ ಒಂದು ವಿಧದಲ್ಲಿ ಕನಲುತಾನೆ. ಹಠ ಎದ್ದು ನಿಲ್ಲುತ್ತದೆ, ಹೆಡೆಯೆತ್ತಿ ಫೂತ್ಕರಿಸುತ್ತದೆ. 'ಇಲ್ಲ ನಾನಿವತ್ತು ಅವಳ ಮುಂದೆ ಈ ಪೊರೆಯನ್ನು ಕಳಚಿಕೊಳ್ಳಬೇಕು. ಇಷ್ಟು ದಿವಸಗಳ ಜಡತೆಯನ್ನು ಬೆಂಬತ್ತಿ ಓಡಿಸಬೇಕು. ಇವಳಾದರೂ ನನ್ನನ್ನು ತಲೆಯೆತ್ತಿ ನಿಲ್ಲಿಸಬಲ್ಲಳು—ಎಲ್ಲರ ಮುಖವಾಡಗಳನ್ನೂ ಕಿತ್ತೊಗೆಯಬಲ್ಲಳು. ಎಲ್ಲ ಮುಖಗಳನ್ನೂ, ಎಲ್ಲರ ನಗ್ನತೆಯನ್ನು—ಅವಳು ಬಲ್ಲಳು. ಇವಳ ಮುಂದೆಯೂ ಅಭಿವ್ಯಕ್ತವಾಗದ ನನ್ನ ಗೊಂದಲಗಳಿಗೆ ಅರ್ಥವಾದರೂ ಎಲ್ಲಿದೆ? ಥೂ, ಈ ಗೊಂದಲಗಳೂ ಬಿಡಿಸಲಾಗದಂತೆ ಸುತ್ತಿಕೊಳ್ಳುತ್ತಿವೆ, ಹೇಗೆ ಎಲ್ಲಿಂದ ಬಿಡಿಸಬೇಕು ? ಅವುಗಳ ತುದಿ, ಬುಡ ಎಲ್ಲಿವೆ? ಅದಾದರೂ ಅರ್ಥವಾದರೆ ತುದಿಯೋ, ಬುಡವೋ ಸಿಕ್ಕರೆ ಒಂದೇ ಬಾರಿಗೆ ಎಲ್ಲವನ್ನೂ ಅವೂ ಎಳೆದು ಹಾಕಿ ಬಿಡಬಹುದು ಸಿಕ್ಕುತ್ತಿಲ್ಲ.

"ಯಾಕೆ ಹಾಗೆ ನೋಡ್ತಿಯ ವಿವೇಕ್? ಕಣ್ಣು ತುಂಬ ಏನದು ಗೋಜಲು ? ಬರ್‍ತಾ ಬರ್‍ತಾ ನೀನು ನನಗೂ ಅರ್ಥವಾಗದ ರೀತೀಲಿ ಬೆಳೀತಾ ಇದೀಯ" ಮುಜು ನಿರಾಶೆಯಿಂದ ಹೇಳಿದಾಗ, ಅವನಿಗೆ ತನ್ನ ಬಗೆಗಿನ ತಿರಸ್ಕಾರ ಇನ್ನೂ ಹೆಚ್ಚಾಗುತ್ತದೆ.

ಇವಳಿಗೆ ನಾನು ಹೇಗೆ ಅಭಿವ್ಯಕ್ತವಾಗಲಿ? ನನಗೇ ನಾನು ಅರ್ಥವಾಗದಿರುವಾಗ, ಇವಳಿಗೆ ಹೇಗೆ ಅರ್ಥೈಸಲಿ ? ಆದರೂ ಇವಳು ಒಂದು ಎಳೆ ಸಿಕ್ಕರೂ ಅರ್ಥೈಸಿಕೊಳ್ಳಬಲ್ಲಳು, ಆ ಎಳೆಯನ್ನು ಎಲ್ಲಿಂದ ನಾನ ಹಿಡಿಯಲಿ?.

ಅವಳ ಎಳಸಾದ ಬೆರಳುಗಳನ್ನು ಬಾಗಿ ತುಟಿಗೊತ್ತಿಕೊಳ್ಳುತ್ತಾನೆ. ಅವಳು ಅವನ ಕಣ್ಣಲ್ಲಿ ಕಣ್ಣು ಸೇರಿಸುತ್ತಾಳೆ, ಹುಡುಕುವ ಪ್ರಯತ್ನ ನಿರಂತರವಾಗಿ ಸಾಗುತ್ತದೆ. ಅಪ್ರಯತ್ನವಾಗಿ ಅವನ ಕೈಗಳು ಅವಳ ತೆಳು ಸೊಂಟವನ್ನು ಬಳಸುತ್ತವೆ. ಅವಳೆದೆಯಲ್ಲಿ ಮುಖ ಹುದುಗಿಸಿ ಎಲ್ಲವನ್ನೂ ಮುಖ ಮರೆಸಿಕೊಂಡಾದರೂ ಹೇಳಿಬಿಡಬೇಕು, ಅನಂತರ ಅವಳು ನನ್ನ ಮುಖ ಹೊರಬರುವಂತೆ ಮಾಡಬಲ್ಲಳು ಎಂದು ಕೊಂಡು ಅವಳನ್ನು ಇನ್ನೂ ಹತ್ತಿರಕ್ಕೆಳೆದು ಕೊಂಡಾಗ ತೆರೆದ ಬಾಗಿಲು, ಕಿಟಕಿಗಳು ಕುಕ್ಕುತ್ತವೆ. ಯಾರಾದರೂ ದಿಢೀರನೆ ಒಳ ಬಂದರೆ. ಕಿಟಕಿಯಿಂದ ಯಾರಾದರು ಬಗ್ಗಿ ನೋಡಿದರೆ.?

"ಮಂಜು ಬಾಗಿಲು-ಕಿಟಕಿ ತೆರೆದಿವೆ" ಹಾಗೆ ಹೇಳುವಾಗ ಸ್ವರದಲ್ಲಿ ಸ್ವಲ್ಪವಾದರೂ ಜೀವಂತಿಕೆ ?

"ತೆಗೀಲಿ ಬಿಡು, ಅದಕ್ಯಾಕೆ ನಿಂಗೆ ಹೆದರಿಕೆ?" ಮಂಜು ಅವನ ತುಟಿಗಳ ಮೇಲೆ ತನ್ನ ತುಟಿಯೊತ್ತುತ್ತಾಳೆ. ಆ ಸಮಯದಲ್ಲೂ ಏನೋ ಆತಂಕ, ಭೀತಿ. ಮತ್ತೆ ಕೋಣೆತುಂಬ ಅಪ್ಪ–ಅಮ್ಮನ ಅವೇ ವಕ್ರರೇಖೆಯ ಮುಖಗಳು.

'ಇವಳಿಗಿರುವ ಧೈರ್ಯದಲ್ಲಿ ಕಾಲು ಭಾಗ ನನಗಿದ್ದಿದ್ದರೆ ? ಹೆದರಿಕೆಯೆಂಬುದೇ ಇವಳ ನಿಘಂಟಿನಲ್ಲಿಲ್ಲ. ರಸ್ತೆ ಮೇಲೆ ನಡೆವಾಗಲೂ ಅಷ್ಟೆ. ಅಂಜಿಕೆ, ಅಳುಕು ಒಂದೂ ಇಲ್ಲ. ನನಗೋ ಅವಳೊಡನೆ ನಡೆವಾಗ ಎಷ್ಟು ಹೆಮ್ಮೆ, ಆನಂದಗಳಿರುತ್ತವೋ ಅಷ್ಟೇ ಆತಂಕ. ಎದೆಗುದಿಗಳೂ ಇರುತ್ತದೆ. ಯಾರಾದರೂ ನಮ್ಮವರು ನೋಡಿದರೆ ? ಅಪ್ಪ ಅಮ್ಮನಿಗೆ ಸುದ್ದಿ ಮುಟ್ಟಿಸಿದರೆ? ತಲೆ ತನ್ನಿಂದ ತಾನೆ ತಗ್ಗಿಬಿಡುತ್ತೆ. ಪರಿಚಯದವರು ದೂರದಲ್ಲಿ ಕಂಡರೆ ಅವರಿಂದ ಮುಖ ಮರೆಸಿಕೊಳ್ಳಬೇಕು ಅನ್ನಿಸುತ್ತೆ. ಅದು ಕೂಡ ಅವಳಿಗೆ ತಕ್ಷಣ ಅರ್ಥವಾಗಿ ಬಿಡುತ್ತದೆ.

"ಯಾಕಿಷ್ಟು ಹೆದರ್ತೀಯ ? ನನ್ನ ಸ್ನೇಹ ನಿನಗಿಷ್ಟವಿಲ್ಲವಿದ್ದರೆ

ಬಿಟ್ಟುಬಿಡು. ನಿನಗೆ ಯಾವುದೇ ಒತ್ತಾಯವಿಲ್ಲ, ಬಲವಂತದ ಸ್ನೇಹ ಎಷ್ಟುಕಾಲ ನಿಂತೀತು ?" ಎನ್ನುತ್ತಾಳೆ.

ಅವಳ ಸ್ನೇಹವನ್ನು ಕಳೆದುಕೊಳ್ಳುವುದೇ ? ಕಳೆದುಕೊಂಡರೆ ನಾನು ಇಷ್ಟಾದರೂ ಮನುಷ್ಯನಾಗಿರಬಲ್ಲೆನೇ ? ಮಂಜು ನನಗೆ ನಿನ್ನ ಪ್ರೀತಿ ಬೇಕೇ ಬೇಕು. ಅದಿಲ್ಲದೆ ನಡೆಯುವುದೇ ಇಲ್ಲ...ಆದರೆ ನನ್ನ ಆತಂಕದ ಬಗೆಯನ್ನು ನಾನು ನಿನಗೆ ಹೇಳಲಾರೆ ಯಾಕೆಂದರೆ, ಅದು ನನಗೆ ಅರ್ಥ ವಾಗಿಲ್ಲ. ನಿನ್ನೊಡನಾಟ ನನಗೆ ಬಹಳ ಇಷ್ಟ ! ನಿನ್ನೊಡನೆ ಸುಖವಾಗಿ ಕಳೆಯುವ ಕ್ಷಣಗಳನ್ನೂ ನಾನು ಅರಿವಿಲ್ಲದೆ ಆತಂಕಕ್ಕೆ, ಭೀತಿ ಗಾಬರಿಗೊಳ ಗಾಗುತ್ತೇನೆ. ಹಾಗೆಂದು ನಿನ್ನ ಸಖ್ಯ ಕಳೆದುಕೊಳ್ಳಲಾರೆ. ಈ ಭೀತಿ, ಗಾಬರಿಗಳನ್ನು ವ್ಯಕ್ತಪಡಿಸಲೂ ಆದೆ. ನನ್ನ ಸ್ಥಿತಿಯನ್ನು ನಿನ್ನೆದುರಿಗೆ ವ್ಯಕ್ತ ಪಡಿಸಲು ಆಗದೆ ನಾನೆಷ್ಟು ಅವ್ಯಕ್ತ ವೇದನೆ ಪಡುತ್ತೇನೆ ಗೊತ್ತೆ ?' ನನ ಗಾಗುವ ವೇದನೆಯನ್ನೂ ನಾನು ಅವಳಿಗೆ ತಿಳಿಸಲಾರೆ. ಆದರೆ ಅವಳ ಪ್ರೀತಿ ವಾತ್ಸಲ್ಯ ತುಂಬಿದ ನೋಟದಲ್ಲಿ. ತುಂಪೆರಚುವ ನಗೆಯಲ್ಲಿ ನನ್ನ ನಾನು ಕಳೆದುಕೊಂಡು ಬಿಡುತ್ತೇನೆ. ಕರಗಿ ಹೋಗುತ್ತೇನೆ. ಇವಳಲ್ಲಿ ನನ್ನನ್ನು ಕಳೆದು ಕೊಳ್ಳುವದರಲ್ಲಿ ಏನೋ ಸುಖವಿದೆ. ಆಗ ನನಗಾಗಿ ಕೊರಗಬೇಕೆ ನಿಸುವುದೇ ಇಲ್ಲ....ಇನ್ನೂ ನಾನು ಕಳೆದು, ಕರಗಿ ಅವಳೇ ನಾನಾಗಬೇಕು, ಇಲ್ಲ ನಾನೇ ಅವಳಾಗಬೇಕು ಅನ್ನಿಸಿದಾಗಲೂ ಅದನ್ನು ವ್ಯಕ್ತಪಡಿಸಲು ಮತ್ತದೇ ಸಂಕೋಚ, ಆತಂಕ.

"ವಿವೇಕ್ ಏಳು, ಈ ಕೋಣೆ ಸ್ವಲ್ಪ ಕ್ಲೀನ್ ಮಾಡ್ತೀನಿ"

"ಬೇಡ ಮಂಜು, ನನಗೆ ಈ ಕೋಣೆ ಹೀಗೆಯೇ ಇರಲಿ ಅನ್ಸುತ್ತೆ. ಅದು ಒಪ್ಪ–ಓರಣವಾಗಿದ್ದರೆ ನನಗೆ ಸರಿಬರುವುದಿಲ್ಲ, ಆ ಒಪ್ಪಕ್ಕೆ ನಾನೊಂದು ಷೋ ಪೀಸ್ ಆಗಿ ಬಿಡುತ್ತೇನೆ ಅನ್ನೋ ಹೆದರಿಕೆ" ಎಲ್ಲೋ ಒಂದೆಡೆ ಆ ಭೀತಿ ದೂರವಾಗುತ್ತಿದೆ. ಇದೇ ಸರಿಯಾದ ಸಂದರ್ಭ ನನ್ನ ತೆರೆದಿಡಲು ಅನ್ನಿಸುವಾಗಲೇ ಅಮ್ಮನ ಪ್ರತಿಮೆ ಪುಳಕ್ಕೆನ್ನುತ್ತದೆ. ಸದಾ

ದೊಡ್ಡ ಜರಿಯಂಚಿನ ಸೀರೆ ಧರಿಸಿ, ದೊಡ್ಡ ಹೆರಳು ಹಾಕಿಕೊಂಡು, ಮೈ ತುಂಬ ಒಡವೆ ಹೇರಿಕೊಂಡು ಓಡಾಡುತ್ತ ಮನೆಯೊಳಗೆ ಒಂದು ಸಣ್ಣ ಕಾಗದದ ಚೂರು ಬಿದ್ದರೂ ಅದನ್ನ ಎತ್ತಿ ಹಾಕಲು ಅವಳನ್ನು ಕೂಗುವ ಹೊರಗೆಲ್ಲೇ ಹೊರಡಲಿ ಎಷ್ಟೇ ಸೆಕೆಯಿರಲಿ ಶಾಲನ್ನು ಮೈಮೇಲೆ ಹಾಕಿಕೊಂಡು ಹೊರಡುವ ಅವಳೊಡನೆ ಹೋಗಲು ತನಗೆಷ್ಟು ಸಂಕೋಚವಾಗುತ್ತಿತ್ತು. ಸಿನಿಮಾಕ್ಕೆ ಹೋಗಲು ಇಷ್ಟು ಅಲಂಕಾರ ಬೇಕೆ ? 'ಯಾವಾಗಲು ನೀಟಾಗಿರಬೇಕು' ಎನ್ನುವ ಅವಳ ಸೂತ್ರಕ್ಕೆ ಒಗ್ಗದ ನನಗೂ ಅವಳಿಗೂ ಒಂದು ದಿನವಾದರೂ ಮಾಮೂಲಿ ಜಗಳ ತಪ್ಪಿದ್ದಲ್ಲ. ಅಮ್ಮ ಎಲ್ಲಾದರು ತನ್ನ ಕರೆಯುತ್ತಾಳೆಂದರೆ ಆ ದಿನವಿಡೀ ಅವಳಿಂದ ತಪ್ಪಿಸಿಕೊಳ್ಳಲು ಹೊರಗೇ ಕಾಲ ಕಳಿಯಬೇಕಾಗುತ್ತಿತ್ತು. ಅಮ್ಮ ಕ್ಲೀನಾಗಿರಬೇಕು ಅಂತ ಹೇಳೋದರಲ್ಲಿ ತಪ್ಪೇನೂ ಇಲ್ಲ; ಆದರೀಗ ಆ ಕ್ಲೀನ್ ಬಗ್ಗೆ ಅದೇಕೆ ಅಷ್ಟು ತಿರಸ್ಕಾರ.?

"ವಿವೇಕ್ ನೀನು ಇತ್ತೀಚೆಗೆ ತುಂಬಾ ಸೆಂಟಿಮೆಂಟಲ್ ಆಗ್ತಿದೀಯ ದುರ್ಬಲ ಆಗ್ತಿದೀಯ ಯಾಕಿದು ? ಸಂಜೆ ಹೊತ್ತಾದರೂ ಕ್ಲಿನಿಕ್ ಕಡೆ ಬರಬಾರದೇ ? ನಿನ್ನನ್ನು ಹೇಗೆ ಸುಧಾರಿಸಬೇಕು ಅನ್ನೋದು ನನಗರ್ಥವಾಗ್ತಿಲ್ಲ... ಈಗೀಗ ನೀನು ಗೂಢ, ಜಟಿಲವಾಗ್ತಿದೀಯ ಅನ್ನಿಸತ್ತೆ."

ಅವಳ ಕೈ ತಲೆಗೂದಲಲ್ಲಿ ಓಡಾಡುತ್ತಿದೆ. ಅವನ ದೇಹವೆಲ್ಲ ಮಾತನಾಡಲು ಕಾತರಿಸುತ್ತದೆ. ರೋಮ ರೋಮವೂ ಮಾತುಗಳಿಂದ ತುಂಬಿಕೊಂಡು ಅದನ್ನು ಅಭಿವ್ಯಕ್ತಿಸುವ ದಾರಿ ಕಾಣದೆ ಅಸಮಾಧಾನದಿಂದ ಉರಿಯುತ್ತಿದೆ. ಕಳೆಯುತ್ತದೆ ಅನ್ನುವ ಭೀತಿ. ಬೆಳಗಿನ ಪತ್ರ ಕಣ್ಣ ಮುಂದೆ ಬಂದಂತಾಗಿ ಮತ್ತೆ ಬಂದು ಸ್ವಸ್ಥಾನದಲ್ಲಿ ಬಿಗಿಯಾಗಿ ಕೂರುತ್ತಿದೆ. ಎಷ್ಟೋ ಕಷ್ಟ ಪಟ್ಟು ಉಸಿರು ಬಿಡುತ್ತಾನೆ.

"ಮಂಜು ಅಮ್ಮನ ಕಾಗದ ಬಂದಿದೆ"

"ಏನಂತೆ ? ಮಂಜು ಒಮ್ಮೆಲೇ ಗಂಭೀರವಾಗುತ್ತಾಳೆ."

ತಲೆದಿಂಬಿನಡಿಯಿದ್ದ ಕಾಗದ ತೆಗೆದು ಕೊಡುತ್ತಾನೆ. ನಿಧಾನವಾಗಿ ಓದಿಕೊಂಡ ಮಂಜುಳೆಯ ಮುಖದಲ್ಲಿ ಎಳೆನಗು ಅರಳುತ್ತದೆ.

"ಅದೇನು ನಿಮ್ಮಮ್ಮನಿಗೆ ಅಣ್ಣನ ಮಗಳ ಮೇಲೆ ಅಷ್ಟು ಇಷ್ಟ ? ನಿನಗೆ, ನಿನ್ನ ಆಸ್ತಿಗೆ ಅವಳು ಮಾತ್ರ ಹಕ್ಕುದಾರಳೇನು ? ಇಷ್ಟು ಬೆಳೆದ ಮಗನಮೇಲೂ ಅದೆಂತಹ ಹಿಡಿತ ನಿನ್ನ ತಾಯಿ ತಂದೆಯದು ? ಅವರು ಹೇಳಿದ ಹುಡುಗಿಯನ್ನು ಮದುವೆಯಾಗದಿದ್ರೆ ಏನ್ ಮಾಡ್ತಾರೆ : ಆಸ್ತಿ ತಾನೆ ಹೋಗೋದು ? ಅದ್ಯಾರಿಗೆ ಬೇಕಿದೆ ? ನೀನು-ನಾನೂ ಇಬ್ಬರೂ ಮೆಡಿಕಲ್ ಓದಿರೋದು ದಂಡಕ್ಕಾ ? ನೀನು ಸರ್ಜರಿ ಪಾಸುಮಾಡಿ ಬಿಟ್ಟರೆ ಸಾಕು, ನನ್ನ ಕ್ಲಿನಿಕ್ ನಿಂದೂ ತಾನೇ ? ಅದಕ್ಕೆ ಅಲ್ವಾ ವಿವೇಕ್ ಕ್ಲಿನಿಕ್ ಅಂತ ಹೆಸರಿಟ್ಟಿರೋದು."

"ನಾನು ಮೆಡಿಕಲ್ ಪಾಸಾಗೋದು ?? ವಿಚಿತ್ರವಾದ ನಿಟ್ಟುಸಿರು ಅವನಿಂದ ಹೊರಟಿತು, ಅದರ ಅರ್ಥ ಅವನಿಗೂ ತಿಳಿದಿತ್ತೋ ಇಲ್ಲವೋ?

"ಈ ಜನ್ಮದಲ್ಲಿ ಅಸಾಧ್ಯದ ಮಾತು" ಎಂಥಹ ಅಗಾಧವಾದ ನಿರಾಶೆ ಆ ಮಾತುಗಳಲ್ಲಿ.

"ನಂಗಿದಕ್ಕೇ ಸಿಟ್ಟು ಬರೋದು. ತೆಗೆದು ನಾಲ್ಕು ಬಾರಿಸಲಾ ಅನ್ಸುತ್ತೆ. ನಾನಿಷ್ಟು ಗಂಟಲು ಶೋಷಣೆ ಮಾಡ್ಕೋತಾ ಇದ್ದರೂ ನಿನ್ನದು ಒಂದೇ ದಾರಿ. ಹೋಗು ನಿಮ್ಮಪ್ಪ ನೆಟ್ಟಿರೋ ಆಲದ ಮರಕ್ಕೆ ನೇಣು ಹಾಕ್ಕೋ ಹೋಗು ! ಕಷ್ಟ ಪಡುವ ಬದಲು ಸಾಯೋವರೆಗೂ ಕೂತು ತಿನ್ನಬಹುದು. ಬಂಗಾರದ ಅರಮನೆ, ವಜ್ರಖಚಿತ ಸಿಂಹಾಸನ, ಪಕ್ಕದಲ್ಲಿ ಮೈ-ಮನ ಮರೆಸುವ ರಾಜಕುಮಾರಿ...? ಅವಳ ಧ್ವನಿ ತೀಕ್ಷ್ಣವಾಗುತ್ತಾ ನಡೆದಿತ್ತು,

"ಛಿ ನಿನ್ನ ಹೇಡಿತನಕ್ಕೆನಂಗೆ ನಾಚಿಕೆಯಾಗುತ್ತೆ. ಧೈರ್ಯವಿಲ್ಲದವನು ನನ್ನನ್ಯಾಕೆ ಪ್ರೀತಿಸಿದೆ? ಹೋಗಲಿ ನನ್ನ ಬಿಟ್ಟು ಹೋಗಪ್ಪ ನನ್ನ ಪಾಡು ಹೇಗೋ ಆಗುತ್ತೆ ಅಂದರೂ ಅದೂ ಆಗಲ್ಲ. ನಿನ್ನಮ್ಮನ ಮುಂದೆ ನನ್ನ ವಿಚಾರ ಹೇಳೋಕೆ ಹೆದರಿಕೆಯಾಗುತ್ತೆ ಅನ್ನಿಯಾ? ಯಾಕೆ ಹೆದರ್ಬೇಕು ನಿನ್ನ ಮದುವೆ-ಭವಿಷ್ಯದ ಏನು? ಅಂತ ಚಿಂತಿಸೋಕೆ. ನಿಂಗೆ ಹಕ್ಕಿಲ್ಲ ಅಂದ್ರೆ ನಾನೇನು ಮಾಡ್ಲಿ? ಇದನ್ನು ಮೊದಲೇ. ನೀನು ಯೋಚಿಸ ಬೇಕಿತ್ತು. ಹೀಗೆ ಎರಡೂ ಕಡೆಯೂ ಇಲ್ಲದೆ ತ್ರಿಶಂಕು ಸ್ವರ್ಗದಲ್ಲಿ ನರ ಳೋದನ್ನು ನಾನು ನೋಡಲಾರೆ. ನೋಡು ನೀನು ಎರಡರಲ್ಲಿ ಒಂದು ನಿರ್ಧಾರಕ್ಕೆ ಬರಲೇಬೇಕು. ಒಂದು—ಇದ್ಯಾವುದೂ ಬೇಡ ಅಂತ ನಿಮ್ಮ ತಂದೆ–ತಾಯಿ ಬಳಿ ಹೋಗಿ ಅವರು ಹೇಳಿದ ಹುಡುಗಿಯನ್ನು ಮದುವೆಯಾಗಿ, ಅವರು ಹೇಳಿದಂತೆ ಕೇಳಿಕೊಂಡಿರು. ಇಲ್ಲವೇ-ಸರ್ಜರಿ ಪಾಸು ಮಾಡಿಕೊಂಡು ಬಿಡು. ನಾವಿಬ್ಬರೂ ಒಟ್ಟಿಗೆ ಬದುಕಿರುವವರೆಗೂ ದುಡಿಯುತ್ತ, ಅಸಹಾಯಕರ ಸೇವೆ ಮಾಡುತ್ತಾ, ನೆಮ್ಮದಿಯಿಂದ ಬದುಕೋಣ. ನೀನು ನನ್ನ ಬಳಿಗೆ ಬಂದರೆ ನಿನಗೆ ಬಂಗಾರದ ಅರಮನೆ, ಸಿಂಹಾಸನ ಸಿಗದಿರಬಹುದು. ಆದರೆ ಪ್ರೀತಿಗೆ–ನೆಮ್ಮದಿಗೆ ಕೊರತೆಯಾಗ ದಂತೆ ನಿನ್ನನ್ನು ಕಾಪಾಡಿಕೊಳ್ಳಬಲ್ಲೆ ಅನ್ನುವ ಮಾತನ್ನು ಖಂಡಿತಾ ಹೇಳ ಬಲ್ಲೆ. ನಿರ್ಧಾರವನ್ನು ನಿನಗೇ ಬಿಟ್ಟಿರುವೆ. ನಿನ್ನ ತಾಯಿ-ತಂದೆ ಬಳಿ ನೀನು ಸುಖವಾಗಿರಬಲ್ಲೆ ಎಂದರೆ ನಾನು ಸಂತೋಷದಿಂದಲೇ ನಿನ್ನ ಸ್ನೇಹ ದಿಂದ ದೂರವಾಗಬಲ್ಲೆ. ನೀನು ಸುಖವಾಗಿರೋದು ನನಗೆ ಮುಖ್ಯ...."

ಅವಳ ಮಾತು ಮುಂದುವರೆಯುತ್ತಿದ್ದರೆ ಅವನ ಎದೆಯ ಮೇಲೆ ಭಾರವಾದ ವಸ್ತುವೊಂದು ಧಪ್ಪೆಂದು ಬಂದು ಬಿದ್ದಂತಾಗುತ್ತದೆ. 'ಮಂಜು ನಿನ್ನ ಬಿಟ್ಟು ನಾನು ಬದುಕ ಬಲ್ಲೆನೆ? ಅಮ್ಮ ಅಪ್ಪನ್ನ ಬಿಡಬಲ್ಲೆ ಆದರೆ ಅವರ ಭೀತಿಯನ್ನು ನಾನು ಬಿಡಲಾರೆ.' ಎಲ್ಲಿ ಹೋದರೂ ಅದು ನನ್ನನ್ನು ಎಚ್ಚರಿಸುತ್ತದೆ. ಅವರ ಶ್ರೀಮಂತಿಕೆಯ ಗೌರವ ನನ್ನ ಓಡಾಡಲು ಬಿಡು ವುದಿಲ್ಲ. ಸ್ನೇಹಿತರೊಡನೆ ಮನ ಬಿಚ್ಚಿ ಮಾತನಾಡಲೂ ಅವಕಾಶ ಕೊಡು ವುದಿಲ್ಲ. ನಾನು ಇತರರಂತೆ ತಿರುಗಾಡಲು, ಹಗುರಾಗಲು ಅದು ಬಿಡು

ವುದಿಲ್ಲ. ಇದನ್ನು ನಿಂಗೆ ಹೇಗೆ ಬಿಡಿಸಿಲಿ ಹೇಳು ? ಒಂದು ಕಾಲದಲ್ಲಿ ಅಮ್ಮನ ಪ್ರೀತಿ-ಕಾರಿನಲ್ಲಿ ತಿರುಗಾಡುವುದು—ಅವಳೊಟ್ಟಿಗೇ ಸಿನಿಮಾ ಪಾರ್ಕುಗಳಿಗೆ ಹೋಗಿ ಅವಳೊಡನೆಯೇ ಹಿಂತಿರುಗುವುದರಲ್ಲಿ ಸುಖವಿತ್ತು. ದಿನ ಕಳೆದಂತೆ ಅದು ಸುಖವಲ್ಲ ಬಂಧನವೆನ್ನಿಸತೊಡಗಿತ್ತು. ಸಿನಿಮಾಗೆ ಹೋದಾಗ ಗೆಳೆಯರೊಡನೆ ಮಾತನಾಡಿದರೆ ಅಮ್ಮನ ಕಣ್ಣು ಕೆಂಪಾಗುವವು. ಹುಡುಗಿಯರ ಜೊತೆ ಮಾತನಾಡಿದರೆ ಆಕೆ ಮಹಾ ಕಾಳಿಯಾಗುತ್ತಿದ್ದಳು. ಯಾವುದೇ ಸ್ನೇಹಿತರ ಮನೆಗಳಿಗೆ ನಾನು ಹೇಳದೆ ಕೇಳದೆ ಹೋಗುವಂತಿರಲಿಲ್ಲ. ನನ್ನ ಸ್ನೇಹಿತರನ್ನೂ ಆಕೆಯೇ ಆರಿಸಬೇಕು—ಅದೂ ನನಗೆ ಹೊಂದಲಿ, ಹೊಂದದೆ ಇರಲಿ, ನನಗಿಂತ ಕೆಳಗಿನವರೊಂದಿಗೆ ಎಂದೂ ಸ್ನೇಹಕ್ಕೆ ಅವಕಾಶವೇ ಇಲ್ಲ.

"ಏನದು ಅವರೊಡನೆ ನಿನ್ನ ಸ್ನೇಹ ? ಒಳ್ಳೆ ತಿರುಬೋಕಿ ಇದ್ದ ಹಾಗೆ ಇರೋರ ಜೊತೆಗೇ ನಿನ್ನ ಆತ್ಮೀಯತೆಯೇನು ? ಆವೆಲ್ಲ ಬೆಲ್ಲಕ್ಕೆ ಮುತ್ತೋ ನೊಣಗಳು. ನಿನ್ನ ಸ್ನೇಹಕ್ಕೆ ಯೋಗ್ಯರಲ್ಲ" ಎಂದು ಕಣ್ಣು ಕೆಂಪು ಮಾಡಿದರೆ ನನ್ನ ತಲೆ ತಗ್ಗಿಬಿಡುತ್ತಿತ್ತು. ಯಾಕೋ ಪ್ರತಿಭಟಿಸ ಬೇಕೆಂದರೂ ಆಗುತ್ತಿಲ್ಲ. ಹೋಗಲಿ ಅಂದರೆ ನನ್ನ ಊಟ-ಉಡುಗೆ ಯಲ್ಲೂ ನನಗೆ ಸ್ವಾತಂತ್ರ್ಯವಿಲ್ಲ. ನಾನು ಇಂತಹುದನ್ನೇ ತಿನ್ನಬೇಕು. ಇಂತಹ ಬಟ್ಟೆಗಳನ್ನೇ ತೊಡಬೇಕು. ಹೊಟ್ಟೆಹಸಿವಾಗದಿದ್ದರೂ ಅವಳು ಕರೆದ ಹೊತ್ತಿಗೇ ಊಟ ಮಾಡಬೇಕು; ಹಸಿವಾಯಿತೆಂದೂ ಮಧ್ಯೆ ಏನೂ ಕೈಳುವಂತಿಲ್ಲ. ಎಲ್ಲ ಶಿಸ್ತು—ನಿಯಮ. ಮಂಜು ನನ್ನ ತಾಯಿ-ತಂದೆ ನನ್ನನ್ನ ಪ್ರೀತಿಸುತ್ತಾರೆ ಅನ್ನುವುದಕ್ಕಿಂತ—ಅವರ ಗೌರವ ಹೆಚ್ಚಿಸುವ ವಂಶೋದ್ಧಾರಕ ಅಂತ ನನ್ನನ್ನು ನಿಯಮಬದ್ಧವಾಗಿ ಬೆಳೆಸಿದರು. ಅವರ ಮುಂದೆ ನಾನು ಮಗುವಾಗೇ ಇದೀನಿ-ನನಗೆ ಪ್ರಪಂಚಜ್ಞಾನವಿಲ್ಲ. ನನ್ನ ಮೆಡಿಕಲ್ ಓದೂ ಅವರ ಆಸೆಯೇ ಆಗಿದೆ. ಶ್ರೀಮಂತರ ಮಕ್ಕಳು ಮೆಡಿಕಲ್' ಇಂಜನಿಯರಿಂಗ್ ಇಂತಹ ಪರೀಕ್ಷೆಗಳನ್ನು ಮುಗಿಸಿದರೆ ಅವರ ಗೌರವ, ಅಂತಸ್ತು ಇನ್ನೂ ಹೆಚ್ಚಾಗುವಂತೆ. ಇದನ್ನೆಲ್ಲ ನಿನ್ನ ಮುಂದೆ ಹೇಗೆ ಹೇಳಲಿ ಮಂಜು ? ಅಮ್ಮ ನಿನ್ನಂತವಳನ್ನು ಎಂದಿಗೂ ಸೊಸೆಯೆಂದು

ಒಪ್ಪಿಕೊಳ್ಳುವುದಿಲ್ಲ. ಅದು ನನಗೆ ಚೆನ್ನಾಗಿಗೋತ್ತು. ನಾನು ನಿನ್ನ ಮದುವೆಯಾದರೆ–ನನ್ನನ್ನೂ ನಿರ್ದಾಕ್ಷಿಣ್ಯವಾಗಿ ಅವಳು ತೊರೆಯುತ್ತಾಳೆ ಮಂಜು....ಆದರೆ ನಾನೂ ಒಬ್ಬ ಮನುಷ್ಯ ಎಂದು ತೋರಿಸಿಕೊಟ್ಟೆ. ಮೆಡಿಕಲ್‌ನಲ್ಲಿ ಆಸಕ್ತಿ ಹುಟ್ಟಿಸಿದ ನಿನ್ನನ್ನು ಬಿಟ್ಟು ಬದುಕಲು ಸಾಧ್ಯವೇ ಮಂಜು? ಹಾಗೆಂದು ಅಮ್ಮ-ಅಪ್ಪನ ಆ ಪ್ರಭಾವಲಯದಿಂದ ಹೊರ ಬರಲೂ ನಾನು ತೀರಾ ಅಸಮರ್ಥನಾಗುತ್ತಿದ್ದೇನೆ ಏನು ಮಾಡಲಿ ಮಂಜು? ನನಗೆ ನೀನು ಬೇಕು....ನಾನು ಅಪ್ಪ ಅಮ್ಮನ ಗೌರವ ಘನತೆಯ ಬಾವುಟ ಹಾರಿಸಲು ಅವರಿಗೆ ಬೇಕು. ಅವರ ಹತ್ತಿರ ಹೋಗದೆಯೂ ಅವರ ಬಳಿಯೇ ಇರುತ್ತಿದ್ದೇನೆ. ಅವರಿಂದ ದೂರವಾಗಬೇಕು. ಅಂದ ಹಾಗೂ ಅವರು ಬೆನ್ನಿನ ನರಕ್ಕೇ ಕೊಕ್ಕೆ ಹಾಕಿ ಹತ್ತಿರಕ್ಕೆಳೆದುಕೊಳ್ಳುತ್ತಿದ್ದಾರೆ; ನೋವನುಭವಿಸುತ್ತಲೇ ಅವರ ಬಳಿ ಹೋಗುತ್ತಿದ್ದೇನೆ. ನಿನ್ನ ಹತ್ತಿರ ಬರುತ್ತಿದ್ದೇನೆ ಆದರೂ ಯಾಕೋ ದೂರ ದೂರ ಅನ್ನಿಸುತ್ತೆ. ನೀನು ನಿನ್ನೆಲ್ಲತನವನ್ನೂ ನನಗಾಗಿ ಧಾರೆಯೆರೆದು ಹತ್ತಿರ ಹತ್ತಿರ ಬಂದರೂ ದೂರವಾಗುತ್ತಿದ್ದೀಯ ಅನ್ನುತ್ತೆ. ಯಾಕೆ ಹೀಗೆ ಮಂಜು? ಇದರರ್ಥ ನನಗಾಗುತ್ತಿಲ್ಲ. ನಿನ್ನಿಂದ ದೂರ ಹೋಗಲಾರೆ ಮಂಜು ನನ್ನನ್ನು ನಿನ್ನ ಹತ್ತಿರ ಎಳೆದುಕೋ; ಬಿಡ ಬೇಡ ಮಂಜು ಪ್ಲೀಸ್...ಹೇಳಲಾರದೆ ತೊಳಲಾಡುವ ಅವನ ಕಣ್ಣುಗಳಲ್ಲಿ ನೀರು,

"ಹುಚ್ಚ ಇಷ್ಟಕ್ಕೆಲ್ಲ ಅಳ್ತೀಯಾ? ನೋಡು ಮೂರು ವರ್ಷದ ಹಿಂದಿದ್ದ ಆ ಧೈರ್ಯ ಎಲ್ಲಿ ಹೋಯ್ತು. ಆ ಧೈರ್ಯದಿಂದ, ನಿನ್ನ ಹಠಮಾರಿತನದಿಂದ ಅಲ್ಲವೇ ನೀನು ಆ ಸರ್ಜರಿ ಪ್ರೊಫೆಸರರನ್ನು ಎದುರು ಹಾಕಿ ಕೊಂಡದ್ದು ಅಲ್ಲಿಂದಲೇ ನಿನ್ನ ಫೇಲು ಪ್ರಾರಂಭವಾದುದು. ಆ ಹಠ ಎಲ್ಲಿ ವಿವೇಕ್? ಹೀಗೆ ಅಸಹಾಯಕನಂತೆ ಒದ್ದಾಡುವುದರಲ್ಲಿ ಅರ್ಥವಿಲ್ಲ. ಹೋಗಲಿ ನಾನು ಸರ್ಜರಿ ಪ್ರೊಫೆಸರರನ್ನು ಕಂಡು ಬರಲೇ?"

ವಿವೇಕ್ ದಿಢೀರನೆ ಎದ್ದು ಕುಳಿತು.

"ಏನು ಆ ದರಿದ್ರ ನನ್ ಮಗನ್ನ ನೀನು ಕಾಣೋಕೆ ಹೋಗ್ತೀಯಾ? ನಾಚಿಕೆಯಾಗಲ್ವಾ ನಿನಗೆ ?" ಕೆರಳಿ ಕೂಗಾಡಿದ,

ನಿನಗಾಗಿ ಏನು ಮಾಡಲೂ ನನಗೆ ನಾಚಿಕೆಯಿಲ್ಲ ವಿವೇಕ್, ಮೊದಲ ತರಗತಿಗಳನ್ನೆಲ್ಲ ಅಚ್ಚುಕಟ್ಟಾಗಿ ಪಾಸು ಮಾಡಿಕೊಂಡು ಬಂದ ನೀನು ಕೊನೆ ವರ್ಷದಲ್ಲಿ ನನ್ನಿಂದ ಆ ಪ್ರೊಫೆಸರರನ್ನು ಎಲ್ಲರೆದುರಿಗೂ ಎದುರಿಸಿ ಈ ಸ್ಥಿತಿ ತಂದುಕೊಂಡೆ. ಮೂರು ವರ್ಷಗಳಾದರೂ ಪಾಸಾಗ್ತಿಲ್ಲ ನೀನು ಅಲ್ಲಿವರೆಗೆ ಹೇಗೆ ರಾಜಾರೋಷವಾಗಿ ಇದ್ದ ನೀನು ದಿನದಿಂದ ದಿನಕ್ಕೆ ತೀರಾ ಸಂಕುಚಿತಗೊಂಡು ಒಂಟಿತನ ಅನುಭವಿಸ್ತಿದೀಯ. ಇದನ್ನೆಲ್ಲ ನಾನು ಹೇಗೆನೋಡಲಿ. ಪ್ಲೀಸ್ ಹೂಂ ಅನ್ನು, ನಾನು ಇವತ್ತೇ ಅವರನ್ನು ಕಂಡು ಬರ್ತೀನೆ, ನನಗೆ ನಿನ್ನ ಬದುಕು ಬೇಕು...."

"ಹೀಗೆಲ್ಲ ಮಾತಾಡಿ ನನ್ನ ಕೊಲ್ಲಬೇಡ ಮಂಜು" ಅವಳ ಮಡಿಲಲ್ಲಿ ಮುಖವಿರಿಸಿ ಬಿಕ್ಕಿದ. ಅವಳ ಕೈ ಅವನ ತಲೆ ನೇವರಿಸುತ್ತಿತ್ತು. ನೀನಿಷ್ಟು ಆತ್ಮೀಯತೆ ತೋರಿಸಿ ನನ್ನ ಕರಗಿಸಿಬಿಡುತ್ತೀಯ ಮಂಜು; ಆದರೂ ನಾನು ನೀನು ತಿಳಿದಷ್ಟು ಹತ್ತಿರ ಖಂಡಿತಾ ಬರಲಾರೆ ಅನ್ಸುತ್ತೆ ಮಂಜು. ನಾನು ಮನುಷ್ಯನಾಗಿಯೇ ಉಳಿದಿಲ್ಲ; ಎಲ್ಲರಂತೆ ನನ್ನ ಬದುಕಲ್ಲಿ, ನನ್ನ ವರು ಎಂದೂ ನನಗಾದರೂ ಇಲ್ಲ....ಅಪ್ಪ, ಅಮ್ಮನದು ಪ್ರೇಮ-ವಾತ್ಸಲ್ಯ ಗಳಿಗಿಂತ ಮಿಗಿಲಾದ ಇನ್ನೊಂದು ಹಿಡಿತ ನನ್ನನ್ನು ಘಾಸಿಗೊಳಿಸುತ್ತಿದೆ. ಹಿಂಡುತ್ತಿದೆ, ಹಿಂಡಿ ಹಿಂಡಿ ನನ್ನನ್ನು ಸತ್ವಹೀನನನ್ನಾಗಿ ಮಾಡಿಬಿಟ್ಟಿದೆ. ನೀನಿಷ್ಟು ಭರವಸೆ ಕೊಟ್ಟರೂ ನಾನು ಆ ಹಿಡಿತದಿಂದ ಬಿಡಿಸಿಕೊಂಡು ಬರಲಾರೆ. ಆ ಹಿಡಿತವೇ ನನಗೇ ಒಗ್ಗಿಹೋಗಿದೆಯೇನೋ ಎನ್ನುವಂತಾಗಿ ಬಿಟ್ಟಿದೆ. ಆದರೆ ಆ ಹಿಡಿತದಲ್ಲೂ ನಾನು ಇರಲಾರೆ, ನಿನ್ನ ಬಳಿ ಬರುವಾಸೆ ಅಯ್ಯೋ ನಾನೇನು ಮಾಡಲಿ ಮಂಜು? ಎಲ್ಲಿ ನೋಡಿದರೂ ಅದೇ ವಕ್ರರೇಖೆ ಮುಖಗಳು. ನಾನೇನು ಮಾಡಲಿ? ಏನು ಮಾಡಲಿ? ಅವನ ಹೃದಯ ಒಂದೇ ಸಮ ಮೊರೆಯಿಡುತ್ತಿತ್ತು. ಯಾವುದೇ ಗುರಿ ಯತ್ತ ಸಾಗಲಾರದ ಡೋಲಾಯಮಾನ ಸ್ಥಿತಿಯಲ್ಲಿ ಮಾತುಗಳು ಏನೆಂದು ಹೇಗೆ? ಹೊರಬರಲು ಸಾಧ್ಯ? ಅದಕ್ಕೆ ನಿರ್ದಿಷ್ಟ ರೂಪವಿದ್ದರೆ ತಾನೆ!

"ಏಳು ವಿವೇಕ್ ಮುಖ ತೊಳ್ಕೋ. ಊಟ ಮಾಡಿಲ್ಲ ಅನ್ನುತ್ತೆ. ಇಲ್ಲೇ ಯಾವುದಾದರೂ ಹೋಟಲ್ಲಿಗೆ ಹೋಗೋಣ" ಬಲವಂತದಿಂದ ಎಬ್ಬಿಸುತ್ತಾಳೆ. ಮುಖ ತೊಳೆಯಲು ಒತ್ತಾಯಿಸುತ್ತಾಳೆ. ತಾನೇ ಅವನ ಕ್ರಾಪು ತೀಡುತ್ತಾಳೆ. ಒಗೆದಿರಿಸಿದ್ದ ಅಂಗಿ ಹಾಕಿಸಿ "ಈಗ ನೀನು ಒಳ್ಳೇ ಹುಡುಗ, ಜಾಣ" ಎಂದು ಅವನ ಮುಖವನ್ನು ಎರಡೂ ಕೈಗಳಿಂದ ಬಾಗಿಸಿಕೊಂಡು ಹಣೆ ಮೇಲೆ ಚುಂಬಿಸಿ "ನಡೆ ಹೋಗೋಣ" ಎಂದಾಗ ವಿವೇಕ್ ಅವಳನ್ನು ತಬ್ಬಿ ಅವಳಮುಖ-ಕುತ್ತಿಗೆಗಳ ಮೇಲೆ ಮುದ್ದಿನ ಮಳೆ ಗರೆಯುತ್ತಾನೆ. ಬಿಡಲಾರೆ ಎನ್ನುವಂತೆ ಗಟ್ಟಿಯಾಗಿ ತಬ್ಬಿಕೊಂಡು ಎಳೆಯ ಮಗುವಿನಂತೆ ಎದೆಯಲ್ಲಿ ಮುಖ ಹುದುಗಿಸಿ ಸಮಾಧಾನದ ನಿಟ್ಟುಸಿರು ಬಿಡುತ್ತಾನೆ.

"ಅಂತೂ ನನ್ನ ಮಗು ದಾರಿಗೆ ಬಂತು"ಮೃದುವಾಗಿ ನುಡಿದ ಮಂಜು ಅವನ ಬೆನ್ನು ತಟ್ಟುತ್ತ ಇದೇ ಸಮಯವೆಂದು" ಧೈರ್ಯತಂದುಕೋ ಮೈ ಡಿಯರ್ ಬಾಯ್, ಪರೀಕ್ಷೆಯೊಂದೇ ನಮ್ಮ ವ್ಯಕ್ತಿತ್ವದ ಅಳತೆಗೋಲಲ್ಲ. ನಿನಗೆ ಅನ್ಯಾಯವಾಗ್ತದೆ ನಿಜ. ಆದರವನ್ನು ತಡೆಯುವ ಶಕ್ತಿ ನಿನ್ನಲ್ಲೇ ಇದೆ. ನೀನು ಒಂದುಸಾರಿ ಎಕ್ಸ್ಕ್ಯೂಜ್ ಕೇಳಿದರೆ ಸಾಕು ಮುಂದೆ ಎಕ್ಸಾಮ್ ನಲ್ಲೇ ಪಾಸಾಗಿ ಬಿಡ್ತೀಯಾ. ಆ ಮೇಲೆ ನಾವು ಆರಾಮವಾಗಿರಬಹುದು. ನಿನ್ನಪ್ಪ-ಅಮ್ಮ ಎಷ್ಟುದಿನ ಅಂತ ಇರೋ ಒಬ್ಬ ಮಗನನ್ನು ಹೀಗೆಯೇ ಬಂಧಿಸಿಡಲು ಸಾಧ್ಯ ? ಎಲ್ಲ ಅವರಾಸೆಯಂತೆ ನಡೆಯಲು ನೀನೇನು ಸ್ಪ್ರಿಂಗಿನ ಗೊಂಬೆಯೇ ? ಒಂದಲ್ಲ ಒಂದು ದಿನ ನಿನ್ನ ವ್ಯಕ್ತಿತ್ವವನ್ನು ಅರಿತೇ ಅರಿಯುತ್ತಾರೆ. ಅವರು, ತಂದೆ-ತಾಯಿ ಎಂತಹ ಶಿಸ್ತಿನವರಾಗಲಿ ವಂಶಪ್ರಜ್ಞೆ. ಶ್ರೀಮಂತಿಕೆಯ ಘನತೆ, ಗೌರವ ಏನೇ ಇರಲಿ ಕೊನೆಗೂ ಗೆಲ್ಲುವುದು ಅವರ ಮಾತೃ-ಪಿತೃ ಪ್ರಜ್ಞೆ. ನೀನು ಈಗ ಒಂದು ಬಾರಿ ಆ ಪರಿಸರದ ಪ್ರಭಾವದಿಂದ ನಿವೃತ್ತನಾಗಿ ಹೊರಬಂದು ಸ್ವತಂತ್ರ ನಿರ್ಧಾರ ತೆಗೆದುಕೋ. ನಿನ್ನನ್ನು ನೀನು ಅರಿತುಕೊಂಡು ವ್ಯಕ್ತಿಯಾಗಿನಿಲ್ಲು. ಅದೂ ಒಂದೇ ಒಂದು ಬಾರಿ. ಅನಂತರ ನಿನ್ನ ಇಡೀ ಬದುಕು ತಾನೇ ತಾನಾಗಿ ಸ್ವತಂತ್ರವಾಗಿ ರೂಪುಗೊಳ್ಳುತ್ತೆ. ಈ ತಾಕಲಾಟ, ಆತಂಕ, ಭೀತಿ, ನೋವು ಒಂದೂ ಇರುವುದಿಲ್ಲ" ಎಂದಳು.

'ನನ್ನಮ್ಮನನ್ನು ನೋಡಿದರೆ ನೀನೀ ಮಾತನ್ನು ಖಂಡಿತಾ ಹೇಳು ವುದಿಲ್ಲ ಮಂಜು, ಎಲ್ಲರಂಥಲ್ಲ ನನ್ನ ಅಮ್ಮ. ಇಪ್ಪತ್ತೇಳು ವರ್ಷದ ಮಗನಿಗೆ ಒಂದು ಮನಸ್ಸಿದೆ ಎಂದೇ ತಿಳಿದುಕೊಂಡಿಲ್ಲ ಅವಳು, ತನ್ನ ಬಳಿ ಇರುವವರೆಗೂ ಅವಳು ಹಾಕಿದ ಗೆರೆ ದಾಟುವಂತಿಲ್ಲ ನಾನು ; ಅವಳ ಸೆರಗನ್ನು ಹಿಡಿದೇ ಓಡಾಡಬೇಕು ನಾನು. ನಾನು ಗಂಡು ಹುಡುಗ: ವಯಸ್ಸಿಗೆ ಬಂದವನು: ನನಗೂ ಬದುಕಿನಲ್ಲಿ ಆಸೆಗಳಿವೆ ಎಂದು, ಎಂದೂ ಗಮನಕ್ಕೆ ತಂದುಕೊಂಡವಳಲ್ಲ. ಅವಳಾಸೆಯೇ ನನ್ನಾಸೆಗಳಾಗ ಬೇಕು. ನನ್ನಪ್ಪನಂತೆ ನನ್ನನ್ನೂ ಹೆಣ್ಣಿನಂತೆ, ಏನೂ ಅರಿಯದ ಮುಗ್ಧ ನಂತೆ, ಏನನ್ನೂ ಕೈಲಿ ಮಾಡಲಾಗದಂತಹ ಅಸಹಾಯಕನಂತೆ ಮಾಡಿ ಬಿಟ್ಟಿದ್ದಾಳೆ ಮಂಜು. ಇದನ್ನು ಹೇಗೆ ಹೇಳಲಿ ? ನನ್ನ ಸ್ಥಿತಿ ಕೇಳಿದರೆ ನೀನು ನಗುತ್ತೀಯ. ನಿನ್ನೆದುರಿಗೂ ನಾನು ತಲೆಯೆತ್ತಿ ನಡೆಯಲಾರೆ. ಹಾಗೆ ನಡೆಯಬೇಕು ಅನ್ನಿಸಿದಾಗ ಅದೇ ಅಮ್ಮ ನನ್ನನ್ನು ಅದು ಹೇಗೋ ತಡೆಯುತ್ತಾಳೆ. ಇದನ್ನೆಲ್ಲ ನಾನು ನಿನ್ನಲ್ಲಿ ಹೇಳಲಾರೆ ಎಂದಿಗೂ ಹೇಳ ಲಾರೆ. ಆದರೂ ನೀನು ಎಲ್ಲರನ್ನೂ ಸ್ವಲ್ಪ ಸ್ವಲ್ಪ ಅರ್ಥ ಮಾಡುತ್ತಾ, ಒಂದು ದಿನ ಪೂರ್ತಿ ಅರ್ಥ ಮಾಡಿಕೋತೀಯ'

"ಹೋಗೋಣ್ವಾ ವಿವೇಕ್" ಮೃದುವಾಗಿ ಕೇಳುತ್ತಾಳೆ ಅವನ ಮೌನ ಮುರಿಯುಲು.

"ಖಂಡಿತಾ ಹೋಗೋಣ ಮಂಜು, ನೀನು ಹೇಳಿದಹಾಗೆ ನಾನೀ ದಿನ ಖಂಡಿತಾ ನಿರ್ಧಾರಕ್ಕೆ ಬರ್‍ತೀನಿ. ಇಷ್ಟು ವಯಸ್ಸು ಕಳೆದು ಇನ್ನಾ ದರೂ ಸ್ವತಂತ್ರವಾಗಿ ಯೋಚಿಸುವುದು ಬೇಡವೇ ? ಆದಷ್ಟೂ ಧೈರ್ಯ ಮಾಡೇ ಬಿಡ್ತೀನಿ ಮಂಜು. ಎಷ್ಟು ದಿವಸ ಅಂತ ಈ ತಾಕಲಾಟ ಅರಿಯದ ಆತಂಕ ಭೀತಿಗಳು. ಅರ್ಥವೇ ಆಗದ. ನೋವು ತುಂಬಿದ ಬದುಕು ? ಇವಕ್ಕೂ ಅರ್ಥವಿಲ್ಲ ನಾನು ಯಾರಿಗೆ ಯಾಕೆ ಹೆದರಬೇಕು ? ನೀನು ಹೇಳೋ ಹಾಗೆ ಬದುಕಿಗೊಂದು ಅರ್ಥ ಕೊಟ್ಟುಕೊಂಡು ನಾವು ಬದುಕ ಬೇಕು. ಪ್ರೀತಿ ವಿಶ್ವಾಸಗಳಿದ್ದರೆ ಯಾವುದೇ ಸಂಬಂಧಕ್ಕೂ ಅರ್ಥ ಬಂದೀತು ಮಂಜು. ಅವಿಲ್ಲದ ರಕ್ತ ಸಂಬಂಧ, ತಂದೆ–ತಾಯಿ, ಅಕ್ಕ-ತಂಗಿ

ಅಣ್ಣ–ತಮ್ಮ ಮುಂತಾದ ಯಾವ ರಿಲೇಷನ್ಸ್‌ಗಳಿಗೂ ಅರ್ಥವೇ ಇಲ್ಲ. ಎಲ್ಲ ಸುಳ್ಳು ಬಂಧಗಳು. ಅರ್ಥ ಇರುವ ಕಡೆ ಬರಿದಾಗುವ ನಾವು, ಅರ್ಥವೇ ಇಲ್ಲದೆಡೆ ಅದನ್ನು ಹುಡುಕ ಹೋಗುತ್ತೇವೆ. ನೀನು ನನಗೆ, ನನ್ನ ಬದುಕಿಗೆ ಅರ್ಥ ಕೊಟ್ಟೆ, ನನ್ನನ್ನು ನನಗೆ ಅರ್ಥೈಸಿದೆ. ನಮ್ಮ ಈ ಸಂಬಂಧ ಸಾಮಾನ್ಯವಾದುವಲ್ಲ. ಎಲ್ಲ ಅರ್ಥಗಳಿಗೂ ಮೀರಿದುದು ಮೈ ಡಿಯರ್ ಮಂಜು. ಬದುಕಿನ ಎಲ್ಲ ಅರ್ಥಹೀನ ಸಂಬಂಧಗಳಿಗೂ ನಾನೀದಿನ ತಿಲಾಂಜಲಿಯಿತ್ತು ಬಿಡುತ್ತೇನೆ" ವಿವೇಕ ಬಹಳ ಕಾಲದ ನಂತರ ನಗುತ್ತ ದೀರ್ಘ-ವಾಗಿ ಮಾತನಾಡಿದ.

ಮಂಜುಗೆ ಯಾಕೋ ಹರ್ಷವೆನ್ನಿಸಲಿಲ್ಲ.

ಇವನು ಹೀಗೆ ಮಾತನಾಡುವುದಕ್ಕಿಂತ ತೆಪ್ಪಗಿದ್ದರೇ ವಾಸಿಯಾಗು ತ್ತಿತ್ತು. ನಾನೇ ಇವನನ್ನು ಕೆರಳಿಸಿ ಬಿಟ್ಟೆನೇನೋ?

ಬೆಪ್ಪಳಂತಾದ ಅವಳನ್ನು ನೋಡಿ-ಅವನು ನಕ್ಕ.

"ಏನು ಡಾಕ್ಟರಮ್ಮಾರು ಬೆಪ್ಪಾಗಿಬಿಟ್ಟಿರಿ? ನಾನೇನಾದರೂ ತಪ್ಪಾಗಿ ನಡೆದುಕೊಂಡನೇ? ತಪ್ಪು ಬಡಬಡಿಸಿದೆನೆ? ಹುಚ್ಚಿ ನೀನು ನನ್ನ ಎಚ್ಚ ರಿಸಿದೆ. ದಾರಿ ತೋರಿಸಿದೆ ನಡಿ ಇನ್ನು ನೆಮ್ಮದಿಯಾಗಿ ಇರಬಹುದು."

ಮಂಜುಳೆ ಖಿನ್ನಳಾದಳು. ಅವನೆದೆಯ ಮೇಲೆ ತಲೆಯಿರಿಸಿ "ವಿವೇಕ್ ಈ ಆವೇಶದಲ್ಲಿ ನಮ್ಮ ಸಂಬಂಧವನ್ನೂ ಅರ್ಥಹೀನವಾದುದು ಅನ್ನೋಲ್ಲ ತಾನೆ?" ಎದೆಯಲ್ಲಿ ಹುಟ್ಟಿದ ತಳಮಳವನ್ನು ತಡೆದು ಕೇಳಿದಳು.

"ಬಹುಶಃ ನಿನಗೆ ಈಗ ಹುಚ್ಚು ಹಿಡಿಯುತ್ತಿರಬಹುದು ಅನ್ನುತ್ತೆ. ಎಲ್ಲಿ ನನ್ನ ಕಣ್ಣಲ್ಲಿ ನೋಡು" ಅವಳ ತಲೆಯೆತ್ತಿ ಕಣ್ಣಲ್ಲಿ ಕಣ್ಣು ಸೇರಿಸಿದ.

"ನನ್ನ ಕಣ್ಣು ನೋಡಿ ಹೇಳು ನಮ್ಮ ಸಂಬಂಧ ಅರ್ಥಹೀನವಾಗಲು ಸಾಧ್ಯವೇ ಅಂತ? ಅವನ ಧ್ವನಿಯಲ್ಲಿ ಆಗಲೇ ಎಂತಹ ಜೀವ, ಕಣ್ಣುಗಳಲ್ಲಿ ಅದೆಂತಹ ದೃಢತೆ ಮಂಜು ಕಣ್ಣುಮುಚ್ಚಿಕೊಂಡಳು. ರೆಪ್ಪೆಯ ತುದಿಯಲ್ಲಿ ನಿಂತ ಹನಿಗಳನ್ನು ತೊಡೆದು, ಅವಳನ್ನು ಮುದ್ದಿಸಿ.

ಹುಚ್ಚಿ ನಾನೀಗ ದೃಢವಾಗಿದ್ದೇನೆ ನಡಿ. ಖುಷಿಯಿಂದ ಊಟ ಮಾಡೋಣ. ಸಂಜೆ ನಿನ್ನ ಕ್ಲಿನಿಕಿಗೆ ಬರ್‍ತೀನಿ; ನನ್ನ ಕೈ ಚಳಕ ತೋರಿಸ್ತೀನಿ" ಎಂದು ಅವಳನ್ನು ನಗುವಂತೆ ಮಾಡಿದ. ಹೋಟಲಿನಲ್ಲಿ ಸ್ವೀಟ್, ಐಸ್‌ಕ್ರೀಂ ಎಂದು ಏನೇನೋ ತರಿಸಿದ. ತೆಪ್ಪಗೆ ಕೂತ, ಅವಳ ಬಾಯಿಗೆ ತಾನೇ ಸ್ವೀಟ್ ತುರುಕಿದ. ಊಟ ಮುಗಿಯುತ್ತಿದ್ದಂತೆ, ಮನೆಗೆ ಹೋಗುತ್ತೇನೆಂದವಳು ಮನಸ್ಸು ಬದಲಾಯಿಸಿ.

"ವಿವೇಕ್ ನಾನು ನಿನ್ನ ಜೊತೆಗೇ ಅಲ್ಲಿಂದಲೇ ಕ್ಲಿನಿಕಿಗೆ ಹೋಗೋಣ" ಅವಳ ಆತಂಕಕ್ಕೆ ನಕ್ಕ ಆತ ನಡೆ ಎಂದ. ರಸ್ತೆ ಮೇಲೆ ಎಂದಿನಂತೆ ತಲೆ ತಗ್ಗಿಸಿ ಕುಗ್ಗುತ್ತ ನಡೆಯಲಿಲ್ಲ. ಸಿಕ್ಕ ಸ್ನೇಹಿತರಿಗೆ ಹಲೋ ಎಂದ ಅವರು ಬೆರಗಾಗುವಂತೆ. ಕೋಣೆಗೆ ಬಂದ ಮಂಜು ಅವನ ಹಾಸಿಗೆ ಕೊಡವಿ ಅದರ ಮೇಲೆ ಉರುಳಿಕೊಂಡಳು. ವಿವೇಕ ಅವಳ ಪಕ್ಕ ಬಂದು ಕುಳಿತ, ನಂತರ ಅವಳ ಹೊಟ್ಟೆಮೇಲೆ ಮುಖವಿರಿಸಿದ. ಮೌನವಾಗಿ ಎರಡು ಗಂಟೆಗಳು ಉರುಳಿ ಹೋದವು."

ವಿವೇಕ ಖುಷಿಯಿಂದಲೇ ತಯಾರಾದ. ಇಬ್ಬರೂ ಹೋಟೆಲಿನಲ್ಲಿ ಕಾಫಿ ಕುಡಿದು ಕ್ಲಿನಿಕ್ಕಿಗೆ ಬಂದರು. ನಗುತ್ತ ರೋಗಿಗಳನ್ನು ಮಾತನಾಡಿಸುತ್ತಿದ್ದ ಅವನನ್ನು ನೋಡಿ ಅವಳಿಗೆ ಎಷ್ಟೋ ಧೈರ್ಯ ಬಂದಿತು. ರಾತ್ರಿ ಬೀಳ್ಕೊಡುವಾಗ ಅವಳ ಬಲಗೈಯನ್ನೆತ್ತಿ ಚುಂಬಿಸಿ "ಬೆಳಿಗ್ಗೆ ಭೇಟಿಯಾಗೋಣ" ಎಂದ.

* * *     * * *     * * *

ಮಂಜುಳೆಗೆ ರಾತ್ರಿಯೆಲ್ಲ ನಿದ್ದೆಯಿಲ್ಲ. ಒಂದೇ ಸಮ ಶಂಕೆ, ಭೀತಿಗಳು ಕಾಡಿ ರಾತ್ರಿಯಿಡೀ ಅವಳನ್ನು ಎಚ್ಚರವಾಗಿರಿಸಿದ್ದವು. ಕ್ಲಿನಿಕ್ಕಿಗೆ ಅರ್ಧ ಗಂಟೆ ಮುಂಚೆಯೇ ಹೊರಟು ನೇರವಾಗಿ ವಿವೇಕನ ಕೋಣೆ ಬಳಿ ಬಂದಳು. ಕೋಣೆ ಮುಂದೆ ಸೇರಿದ ಜನ ಕಂಡು

ಕೈ, ಕಾಲು ನಡುಗತೊಡಗಿದವು. ಇವಳನ್ನು ನೋಡಿ ಸೇರಿದವರು ದಾರಿ ಬಿಟ್ಟರು. "ಏನೋ ವಿಷಕುಡ್ಡಿದಾರೆ......ಇಲ್ಲ ನಿದ್ದೆ ಮಾತ್ರೆ ನುಂಗಿದ್ದಾರೆ" ಯಾರೋ ಹೇಳಿದರು.

ಮಂಜುಳೆ ಅದು ಹೇಗೋ ಸುಧಾರಿಸಿ ಕೊಳ್ಳಲು ಯತ್ನಿಸಿದಳು. ನಿನ್ನೆರಾತ್ರಿಯವರೆಗೂ ತನ್ನೊಡನಿದ್ದ ಆತ ಗಂಭೀರವಾಗಿ ಹಾಸಿಗೆ ಮೇಲೆ ಮಲಗಿದ್ದಾನೆ. ಕಣ್ಣಲ್ಲಿ ಕತ್ತಲೆ ಹೆಪ್ಪುಗಟ್ಟತೊಡಗಿತು.

"ಮೇಡಂ ಈ ಕಾಗದ ನೋಡಿ" ಯಾರೋ ಕಾಗದ ಕೊಟ್ಟರು. ಅವಳ ಕಣ್ಣುಗಳು ಯಾಂತ್ರಿಕವಾಗಿ ಓಡಾಡಿದವು.

"ಬದುಕಿನಲ್ಲಿ ನಾನಿಂದು ಹುಟ್ಟಿ ಮೊದಲನೆಯದಾಗಿ ಸ್ವತಂತ್ರ ನಿರ್ಧಾರ ತೆಗೆದುಕೊಳ್ಳುವ ಶಕ್ತಿ ಪಡೆದಿರುವೆ. ಇಂತಹ ಒಂದು ವಿವೇಚನಾಶಕ್ತಿಯನ್ನು ನನಗೆ ಕೊಟ್ಟು, ನನ್ನೆಲ್ಲ ಕೋಲಾಹಲ, ಆತಂಕ. ಭೀತಿಗಳಿಂದ ನನ್ನನ್ನು ಪಾರು ಮಾಡಿದ, ನನ್ನಲ್ಲೂ ಒಂದು ವ್ಯಕ್ತಿತ್ವವಿದೆ, ನಾನೂ ಉಪಯೋಗಕ್ಕೆ ಬರುವ ಮನುಷ್ಯ ಎಂದು ನನ್ನನ್ನು, ನನಗೆ ತೋರಿ ಕೊಟ್ಟ, ನನ್ನ ಆತ್ಮೀಯ 'ಶಕ್ತಿ'ಗೆ ನಾನು ಋಣಿ. ಆ 'ಶಕ್ತಿ' ನನ್ನ ಬದುಕಲ್ಲಿ ಬರದಿದ್ದರೆ ನಾನು ಎಂದಿಗೂ ಅರ್ಥವಿಲ್ಲದ ಸಂಬಂಧದಲ್ಲಿ ಸಿಕ್ಕು, ಇನ್ಯಾರವನೋ ಆಗಿ ಇಡೀ ಜೀವಮಾನವೆಲ್ಲ ಸವೆಸುತ್ತ ಹೋಗಬೇಕಾಗುತ್ತಿತ್ತು.

ಈ ಜಗತ್ತಿನ ಹಾಗೂ ನನ್ನ ಸಂಬಂಧಗಳು ತೀರಾ ಅರ್ಥಹೀನವಾಗಿ ತೋರುತ್ತಿರುವುದರಿಂದ ನಾನೀ ಜಗತ್ತನ್ನು ಬಿಟ್ಟಿದ್ದೇನೆ. ನನ್ನ ಸಾವಿಗೆ ನಾನೇ ಹೊಣೆ; ಬೇರಾರೂ ಅಲ್ಲ.

—ವಿವೇಕ್"

"ಅಯ್ಯೋ ವಿವೇಕ್ ನಾನೇನು ಮಾಡಿಬಿಟ್ಟೆ? ನನ್ನ ಕೊಂದು ಬಿಟ್ಟೆ" ಮಂಜು ಕುಸಿದು ಕೆಳಗೆ ಬೀಳುತ್ತಿದ್ದಳು.

೦೦೦

# ಮುಸುಕು

ಕಾಕೋಳು ಸರೋಜ ರಾವ್

ಬೆಂಚಿನಮೇಲೆ ಸಾಲಾಗಿ ಕುಳಿತ ಹುಡುಗ ಹುಡುಗಿಯರನ್ನೆಲ್ಲಾ, ಒಂದು ಬಾರಿ ಮೊದಲಿನಿಂದ ಕೊನೆಯವರೆವಿಗೂ ವೀಕ್ಷಿಸಿದಳು ರುಕ್ಮಿಣಿ. ಎಲ್ಲರ ಮುಖದಲ್ಲೂ ತಮಗೆ ಕೆಲಸ ಸಿಗಬಹುದೇನೋ ಎಂಬ ನಿರೀಕ್ಷೆಯ ಚಿನ್ಹೆಯಿದ್ದು ತಮ್ಮ ಸರದಿ ಯಾವಾಗ ಬರುವುದೋ ಎಂದು ಕ್ಷಣಕ್ಕೊಮ್ಮೆ ಗಾಜಿನ ಬಾಗಿಲ ಕಡೆ ನೋಡುತ್ತಿದ್ದರು. ಗಾಜಿನ ಬಾಗಿಲ ಬಳಿಯೇ ಸಮವಸ್ತ್ರ ಧರಿಸಿ ನಿಂತ ಆಫೀಸಿನ ಪೇದೆ ಕರೆಗಂಟೆ ಬಾರಿಸಿದೊಡನೆ ಒಳಗೋಡುತ್ತಿದ್ದ, ಮತ್ತೆ ಹೊರಬಂದು ಸುದರ್ಶನಕ್ಕಾಗಿ ಬಂದಿದ್ದ ವ್ಯಕ್ತಿಯನ್ನು ನಂಬರಿನ ಮೂಲಕ ಕೂಗಿ ಒಳಗೆ ಕಳುಹಿಸುತ್ತಿದ್ದ. ಐದು ಹುದ್ದೆಗಳಿಗಾಗಿ ಐವತ್ತಕ್ಕೂ ಮಿಗಿಲಾಗಿ ಅಪ್ಲಿಕೇಷನ್‌ಗಳು ಬಂದಿವೆಯಂತೆ ನಾನೂ ವಿಚಾರಿಸಿದೆ. 'ಆದರೂ ಟ್ರೈ ಮಾಡು ನಿನ್ನ ಅದೃಷ್ಟ ಹೇಗಿದೆಯೋ' ಆಶ್ರಮದ ಒಡತಿ ರಾಜಮ್ಮನೆಂದಿದ್ದರು. ಅವರು ಅನುಭವದ ಮಾತೇ ಆಡಿದ್ದಾರೆಂದುಕೊಂಡಳು. ರುಕ್ಮಿಣಿ ಹೆಣ್ಣಾಗಿ ಹುಟ್ಟಬಾರದು ಎಂದವಳು ಅನೇಕ ಬಾರಿ ಯೋಚಿಸುತ್ತಿದ್ದುದುಂಟು. ಆದರೆ ಆ ಯೋಚನೆಯಿಂದ ಯಾವ ಪರಿಹಾರವೂ ದೊರಕಿರಲಿಲ್ಲ.

'ನಂಬರ್ ಇಪ್ಪತ್ತೊಂದು'

ಸಮವಸ್ತ್ರದ ಪೇದೆ ಕೂಗಿದಾಗ ಗುಂಗಿನಲ್ಲಿದ್ದ ರುಕ್ಮಿಣಿ ಗಡಿಬಿಡಿಯಿಂದ ಮೇಲೆದ್ದಳು. ಗಾಜಿನ ಬಾಗಿಲನ್ನು ದೂಡಿ ಆಫೀಸು ರೂಮನ್ನು

ಪ್ರವೇಶಿಸಿದಾಗ ದೊಡ್ಡದಾದ ಕೋಣೆಯಲ್ಲಿ ತಿರುಗುವ ಕುರ್ಚಿಯಲ್ಲಿ ಕುಳಿತಿದ್ದ ಬಾಸ್. ಅವರ ಎದುರಿಗೇ ಕುಳಿತ ಪರ್ಸನಲ್ ಸೆಕ್ರೆಟರಿ.

'ಕೊಡಿ'

ಬಾಸ್ ದೇಶಪಾಂಡೆ ಅವಳಿಗೆ ಕುರ್ಚಿ ತೋರಿಸಿದ.

ರುಕ್ಮಿಣಿ ಕುಳಿತಳು, ಅವನ ಪ್ರಶ್ನೆಗಳಿಗೆ ಅವಳು ಸಮರ್ಪಕವಾಗಿಯೇ ಉತ್ತರಿಸಿದಳು. ಕೋಣೆಯಿಂದಾಚೆ ಅವಳು ಬಂದಾಗ ತನ್ನ ಮಟ್ಟಿಗೆ ಇಲ್ಲಿ ಕೆಲಸ ಸಿಗುವುದು ದುರ್ಲಭವೆಂದು ಗೊತ್ತಾಯಿತು. ಬಲವಂತವಾಗಿ ಕಾಲುಗಳನ್ನು ಎಳೆದುಕೊಂಡು ನಿಧಾನವಾಗಿ ಬೆಂಚಿನ ಸಾಲಿಗೇ ಬಂದು ಮತ್ತೆ ಬೆಂಚಿನ ಕೊನೆಯಲ್ಲಿ ಕುಳಿತಳು. ಎಲ್ಲರ ದೃಷ್ಟಿಗಳೂ ಅವಳತ್ತ ತಿರುಗಿ, ಅದು ಕರುಣೆಯೋ ಕುಹಕವೋ ಎಂದರಿಯಲು ಅಸಮರ್ಥವಾಗಿ ತಲೆ ಬಾಗಿಸಿದಳು. ಯೋಚನೆಯೇ ಕೊನೆಯ ಅಸ್ತ್ರವೆಂದು ಮನ ನಿರ್ಧರಿಸಿತ್ತಾಗಲೇ. ಎಲ್ಲರ ಸರದಿ ಮುಗಿದಾಗ ಕೈಲಿದ್ದ ಚೀಟಿಯನ್ನು ಪೇದೆಗೆ ನೀಡಿದಳು. ಅವನು ಮತ್ತೆ ಒಳಗೆ ಹೋಗಿ ಬಂದು ಅವಳಿಗೆ ಒಳ ಹೋಗಲು ಸೂಚಿಸಿದ. ರುಕ್ಮಿಣಿ ಹೆದರುತ್ತಲೇ ಕೋಣೆಯೊಳಗೆ ಕಾಲಿರಿಸಿದಳು. ಅವಳನ್ನು ನೋಡಿ ಅಸಹನೆಯಿಂದಲೇ ಬಾಸ್ ನುಡಿದರು. ಅವರ ಹುಬ್ಬುಗಳು ಸಂಕುಚಿತಗೊಂಡವು 'ನಿಮ್ಮ ಸರದಿ ಮುಗಿಯಿತಲ್ಲವೆ' 'ಆಯಿತು ಮತ್ತೆ ಒಂದೆರಡು ಮಾತು ಹೇಳುವುದಿತ್ತು' 'ಇಲ್ಲಿ ಯಾವ ಬಗೆಯ ಶಿಫಾರಸಿಗೂ ಅವಕಾಶವಿಲ್ಲ.' ಗಡಸಿನುತ್ತರ ಅವಳ ಕಿವಿಗೆ ಅಪ್ಪಳಿಸಿತು. ದೇಶಪಾಂಡೆ ಅವಳನ್ನು ದಿಟ್ಟಿಸಿದ. ಅವನ ನೋಟ ಅವಳ ಕಣ್ಣುಗಳನ್ನೇ ಶೋಧಿಸುತ್ತಿದ್ದವು, ಎತ್ತರದ ನಿಲುವು, ಮಾಟವಾದ ದೇಹ, ಬೊಗಸೆ ಕಣ್ಣುಗಳು, ತಿದ್ದಿ ಕಡೆದಂತಹ ಮೂಗು; ಮುಖ ಸೌಂದರ್ಯಕ್ಕೆ ಹೊಂದಿಕೊಳ್ಳುವ ಹಣೆ, ಅದನ್ನಲಂಕರಿಸಿದ ಸಾದು ಬೊಟ್ಟು ಸಾದಾ ನೂಲಿನ ಸೀರೆ 'ನಂಗೆ ಯಾರ ಶಿಫಾರಸೂ ಇಲ್ಲ. ತಂದೆ ತಾಯಿಗಳಿಲ್ಲದ ಅನಾಥಳು ನಾನು ಇದಂತೂ ಸುಳ್ಳಲ್ಲ.' ಗಂಟಲು ತುಂಬಿ ಅವಳು ನುಡಿದಾಗ ಅವಳ ಬೊಗಸೆ ಕಣ್ಣುಗಳಲ್ಲಿ ನೀರು ತುಂಬುತ್ತಿದೆಯೇ ಎಂದವನು ಪರೀಕ್ಷಿಸಿದ. ಇಲ್ಲ, ಆದರೆ ಅವು ಯಾವುದೋ

ವೇದನೆಯನ್ನು ತಪೆಗಟ್ಟಲು ಹೋರಾಟವನ್ನೇ ನಡೆಸಿದ್ದುವೆಂದು ಅವನಿಗೆ ಅನ್ನಿಸಿತು.

'ಒಳ್ಳೇದು ಈಗ ಹೋಗಿ, ಮತ್ತೆ ತಿಳಿಸುತ್ತೇನೆ' ದೇಶಪಾಂಡೆ ಮೃದುವಾಗಿ ನುಡಿದ.

'ರುಕ್ಮಿಣೀ' ದೆ ಶಪಾಂಡೆ ಕೂಗಿದಾಗ ಅಡಿಗೆಮನೆಯಲ್ಲಿ ಕೊಬ್ಬರಿ ತುರಿಯುತ್ತಿದ್ದ ರುಕ್ಮಿಣಿ ಎದುರಿಗೆ ನಿಂತು ಹಣೆಗೆ ಕುಂಕುಮ ಹಚ್ಚಿಕೊ ಳ್ಳುತ್ತಿದ್ದ ಅತ್ತೆಯ ಕಡೆ ನೋಡಿದಳು, ಯಾಕೋ ಇವನದು ಅತಿ ಯಾಯ್ತು. ಅಡಿಗೆ ಮನೆಗೆ ಬಂದು ಹೇಳಬಾರದೆ ? ಇನ್ನು ಮುಂದೆ ಅವನು ಆಫೀಸಿಗೆ ಹೋಗೋವರ್ಗೂ ನೀನು ರೂಮಿನಿಂದಾಚೆ ಬರಬೇಡ, ಗಂಡ ಕರೆದರೆ ಅತ್ತೆ ಯಾಕೆ ಈರೀತಿ ಕೋಪ ಮಾಡಿಕೊಳ್ಳುತ್ತಾರೆ? ಮಗ ಸೊಸೆಯರ ಸಂಬಂಧ ಇನ್ನೂ ದೂರವಾಗೇ ಉಳಿದಿದೆಯೆಂದು ಪ್ರಾಯಶಃ ಅತ್ತೆಗೆ ತಿಳಿದಿರಲಾರದೆಂದು ಅವಳು ಯೋಚಿಸಿದಳು. 'ರುಕ್ಕೂ' ಮತ್ತೆ ರೂಮಿನಿಂದ ಕರೆಬಂದಾಗ ರುಕ್ಮಿಣಿ ರೂಮಿಗೆ ಬಂದು ಗಂಡನತ್ತ ನೋಡಿ ಕೇಳಿದಳು.

'ಏನು ಹೇಳಿ?' 'ಇವತ್ತು ಐದೂವರೆಗೆ ಬರ್ತೀನಿ ರೆಡಿಯಾಗಿರು ಎಲ್ಲಾದ್ರೂ ಸುತ್ತಾಡಿ ಬರೋಣ' ಅವಳು ಅವನ ಮಾತಿಗೆ ನಕ್ಕಳು. ಪ್ರತಿದಿನವೂ ಎಂಟರ ಮೇಲೆ ಬರುವುದು ಅನಂತರ ಊಟ ಮುಗಿಸಿ ಜೊತೆಗೆ ತಂದ ಪುಸ್ತಕವನ್ನೋದುವುದು, ಅನಂತರ ನಿದ್ರೆ ಮಾಡುವುದು, ಹೆಂಡತಿ ಯೆಂದರೆ ಜೀವಕ್ಕಿಂತಲೂ ಮಿಗಿಲಾದುದು, ಆದರೆ ಗಂಡನ ಮಹತ್ವಾ ಕಾಂಕ್ಷೆ ಅವಳಿಗೆ ಅಪರಿಚಿತ ಆದರ್ಶವಾಗಿರಲಿಲ್ಲ. ಅಂತೆಯೇ ಅವನಿಗೂ ಅವಳಲ್ಲಿ ಪ್ರೀತಿ ವ್ಯಾಮೋಹ ತಮ್ಮ ದಾಂಪತ್ಯ ಬರೀ ಸ್ಮೃತಿಯಾಗೇ ಉಳಿಯಬಾರದೆಂದು ಅವಳು ಪ್ರತಿಪಾದಿಸಲೂ ಹೊರಟಿದ್ದಳು. ದೇಶ ಪಾಂಡೆಯ ಮಡದಿಯಾಗಿ ಬಂದಾಗ ಬಹಳ ಕಷ್ಟಪಟ್ಟು ಮನೆಯ ವಾತಾ ವರಣಕ್ಕೆ ಹೊಂದಿಕೊಂಡಳು. ರುಕ್ಮಿಣಿ ನೊಂದ ಹೆಣ್ಣೆಂದು ಅವಳನ್ನು

ಕಾಪಾಡಬೇಕೆನ್ನುವ ಧೃಡತೆ ಅವನಲ್ಲಿ ಮನೆಮಾಡಿದಾಗ ಹಿಂದು ಮುಂದು ನೋಡದೆ ಅವಳ ಕೈ ಹಿಡಿದು ಮನೆಗೆ ಕರೆದು ತಂದಿದ್ದ ದೇಶಪಾಂಡೆ.

"ರುಕ್ಕೂ ನನ್ನ ಮಾತ್ನಲ್ಲಿ ನಂಬ್ಕೆ ಇಲ್ಲವೇ? ಖಂಡಿತ ಇವತ್ತು ಐದೂವರೆಗೆ ಬಂದೇ ಬರ್‍ತೀನಿ" ಅವನು ಅವಳ ಗಲ್ಲ ಹಿಂಡಿದ ಒಲುಮೆ ಯಿಂದ. "ಸರಿ ಮತ್ತೆ ನಂದೊಂದು ಮಾತು ಹೇಳುವುದಿದೆ. ನಿನ್ನೆ ರಾತ್ರಿ ಮೋಹನ ಬಂದಿದ್ದ" "ಸರಿ ಸರಸೂ ಜಗಳ ಆಡಿದಳಷ್ಟೇ" ಅವನೂ ನಕ್ಕ "ಇಲ್ಲ ಹಾಗಾಗಬಾರದು ಮೋಹನನಿಗೆ ಮತ್ತೆ ಬರುವಂತೆ ಹೇಳಿ ಕೊನೇವಗರ್ೂ ಸರಸೂ ಹೀಗೇ ಇರೋಕೆ ಸಾಧ್ಯವಿಲ್ಲ. ಗಂಡನಿಂದ ದೂರವೇ ಉಳಿಯಬೇಕಿದ್ರೆ ಮದುವೆ ಯಾಕೆ ಮಾಡಬೇಕಿತ್ತು" ಅವಳೆಂದಾಗ ಅವನ ಮುಖ ಗಂಭೀರವಾಯಿತು. ಅವನು ನಿಧಾನವಾಗಿ ಅಲ್ಲಿಂದ ಕದಲಿದ ನಿಜ ಗಂಡನಿಂದ ದೂರವಾಗೇ ಉಳೀಬೇಕಿದ್ರೆ ಮದುವೆ ಯಾಕೆಮಾಡಬೇಕಿತ್ತು ಇದನ್ನು ರುಕ್ಮಿಣಿ ಯಾರನ್ನು ಕುರಿತು ಹೇಳಿದ್ದಾಳೆನ್ನುವುದು ಅರ್ಥವಾ ಗಿತ್ತು. ಗಂಡ ಅಲ್ಲಿಂದ ತೆರಳಿದ ನಂತರ ರುಕ್ಮಿಣಿ ನಿಂತಲ್ಲೇ ಕುಸಿದಳು.

ಜೀವಕ್ಕಿಂತಲೂ ಅಧಿಕನಾಗಿ ಪ್ರೀತಿಸುವ ಗಂಡ, ಸಂಪತ್ತು, ಸಕಲವೂ ಇದೆ, ಆದರೆ ಯಾವುದೂ ಬೇಡ ಮನದಲ್ಲಿ ಅವ್ಯಕ್ತವಾದ ವೇದನೆ, ನನ್ನ ಜೀವನವನ್ನೇ ಛಿದ್ರಗೊಳಿಸಿದ ಆ ವ್ಯಕ್ತಿ, ಕಾಣದ ವ್ಯಕ್ತಿಯ ಬಗ್ಗೆ ದ್ವೇಷದಿಂದ ನರಗಳು ಸೆಟೆದು ಹಲ್ಲುಮಸೆಯುವಂತಾಯಿತು. ಉದ್ರಿಕ್ತ ಗೊಂಡ ಸಮುದ್ರಕ್ಕಿಂತಲೂ ಭಯಂಕರವಾಗಿತ್ತು ಅವಳ ಜೀವನ. ಹೊಸ ಬಾಳಿಗೆ ಹೊಂದಿಕೋ ರುಕ್ಮಿಣಿ ಬಾಕಿಯದನೆಲ್ಲಾ ನನಗೆ ಬಿಡು ಸಮಾಧಾನ ಹೇಳಿದ್ದರು ಆಶ್ರಮದೊಡತಿ ರಾಜಮ್ಮ. ಆದರೆ ಮನೋವೇದನೆಯನ್ನು ಯಾರಿಗೆ ಹಂಚಲಿ? ಯಾರಿಗೆ ನಿವೇದಿಸಿ ಈ ಹೃದಯದ ಭಾರ ಕಡಿಮೆ ಮಾಡಿಕೊಳ್ಳಲಿ ಆ ಸ್ವಾತಂತ್ರ್ಯ ತನಗಿಲ್ಲ ಗಂಡನೊಬ್ಬನೇ ಆತ್ಮೀಯ ಅವ ನಿಗೆ ತನ್ನಲ್ಲಿ ಅಪಾರ ಪ್ರೇಮವಿರುವುದರಿಂದಲೋ ಏನೋ ಮನ ಒಪ್ಪು ತ್ತಿಲ್ಲ. ಇದಕ್ಕೆ ಕೊನೆಯಂತು? ಭಾರವಾದ ಹೃದಯವನ್ನು ಎರಡು ಕೈಗಳಿಂದಲೂ ಒತ್ತಿ ಬೀರುವಿನ ಬಳಿಬಂದವಳು. ಕೈಗಳು ಯಾಂತ್ರಿಕ

ಕವಾಗಿ ಬಾಗಿಲನ್ನು ತೆರೆದವು. ಬೀರುವಿನಲ್ಲಿಡಲಾಗಿದ್ದ ಡೈರಿಯಲ್ಲಿ ಅವಳ ಹೃದಯವೇದನೆಯ ನಿವೇದನೆಯಾಯ್ತು. ಬೆರಳುಗಳು ಪುಟಗಳನ್ನು ತಿರುವಿದಾಗ ಹೃದಯ ಬಡಿತ ಜೋರಾಗಿ ಡೈರಿಯನ್ನು ಟಪ್ಪನೆಮುಚ್ಚಿ ಬೀರುವಿನೊಳಗಿಟ್ಟು ಬೀಗ ಹಾಕಿದಳು. ದ್ವೇಷದ ಹೊಗೆ ಯಾರಮೇಲೆ?

ಮತ್ತೆ ನಡುಮನೆಯಲ್ಲಿ ನಡೆದಿತ್ತು ನಾದಿನಿಯ ಒಡಕು ಸಂಸಾರದ ಪ್ರದರ್ಶನ. ನಾದಿನೀ ಸರಸು ಮದುವೆಯಾಗಿ ಹದಿನೈದು ದಿನಗಳಲ್ಲೇ ಗಂಡನೊಡನೆ ಜಗಳವಾಡಿ ತವರಿಗೋಡಿ ಬಂದಿದ್ದಳು. ಸರುಸುವಿನ ಗಂಡ ಮೋಹನ ರೂಪವಂತ, ಗುಣವಂತ ಆದರೆ ಸಂಸಾರ ದೊಡ್ಡದು ಒಡಹುಟ್ಟಿದವರು ಏಳೆಂಟುಮಂದಿ ಅವನ ಸಂಸಾರ ದೊಡ್ಡದು ಅದೇ ನನಗೆ ನರಕ ಎನ್ನುವ ಸರಸು. ಬೇರೆ ಮನೆ ಮಾಡಿದರೆ ಗಂಡನೊಡನೆ ಸಂಸಾರ ಮಾಡುವ ಬಯಕೆ. ಎಂದು ಮಗಳ ಕುಣಿತಕ್ಕೆ ತಾಳ ಹಾಕುವ ತಾಯಿ, ಒಡೆದ ಸಂಸಾರ ಒಂದುಗೂಡಿಸುವ ಬಯಕೆ ರುಕ್ಮಿಣಿಗೆ. ದೇಶ ಪಾಂಡೆಯೊಡನೆ ವಿಷಯ ಚರ್ಚಿಸಿದಾಗ ಅವನು ನಗುತ್ತಿದ್ದ. ಮದುವೆಯಾದ ಗಂಡನಲ್ಲಿ ಪ್ರೇಮ ಪ್ರೀತಿಯಿಡದ ತಂಗಿಗೆ ವಿವೇಕ ಹೇಳಲು ಮತ್ತೊಬ್ಬರಿಂದ ಸಾಧ್ಯವೇ? "ಎಡವಿ ಬಿದ್ದವರಿಗೆ ಒಂದೇ ಬಾರಿ ಕೈ ಕೊಟ್ಟು ಎಬ್ಬಿಸಿದರೆ ಮತ್ತೆ ಎಡವಿ ಬಿದ್ದಾರು .. ... ಆಸರೆಯೇ ಅಚಾತುರ್ಯಕ್ಕೆ ಎಡೆ ಮಾಡುವುದುಂಟು" ಅವನ ಮಾತು ಚಾಟಿಯ ಏಟಿನಂತೆ ರುಕ್ಮಿಣಿಯ ಹೃದಯವನ್ನು ಛೇದಿಸಿದಾಗ ಮನದಲ್ಲೇಳುವ ಪ್ರಶ್ನೆ ಅದೊಂದೆ 'ಎಡವಿ ಬಿದ್ದವರಿಗೆ ಒಡಲೇ ಇಲ್ಲವೆ ಸನ್ನಿವೇಶದ ಒತ್ತಡದಿಂದ ಎಡವಿದರೆ ಸಂಸ್ಕಾರ ಗತವಾಗಿ ಬಂದ ವಿಚಾರ ಧಾರೆಗೂ ಕಳಂಕ ಹತ್ತೀತೆ? ಪ್ರತಿಯೊಬ್ಬ ಮನುಷ್ಯನ ಜೀವನದಲ್ಲೊಂದು ಪರಿವರ್ತನೆ ತಿರುವು ಉಂಟಾಗಲೇಬೇಕು. ರುಕ್ಮಿಣಿ ಎದ್ದು ಮನದಲಿ ಮೂಡಿದ ಪರಿಹಾರ ಮಾರ್ಗವನ್ನು ಡೈರಿಯಲ್ಲಿ ಗುರುತಿಸಿದಳು.

ನಡುಮನೆಯಲ್ಲಿ ಮೋಹನನೆನ್ನುತ್ತಿದ್ದ. ಸರಸು ನೀನು ಕಲಿತವಳು. ಹೀಗೆಲ್ಲಾ ಮಾಡಬಾರದು ನೋಡು ಸ್ವಲ್ಪಕಾಲ ನಾವು ಒಟ್ಟು ಸಂಸಾರದಲ್ಲೆ ಇರಬೇಕು. "ಇಲ್ಲ ಸಾಧ್ಯವೇ ಇಲ್ಲ ನಾನು ಮದುವೆಯಾದ್ದು ನಿಮ್ಮನ್ನ

ವಿನಃ ನಿಮ್ಮ ಸಂಸಾರವನ್ನಂತೂ ಅಲ್ಲ." –ಈ ಸತ್ಯ ಮನವರಿಕೆಯಾದರೆ ಬೇಡವಾದ ತರ್ಕಕ್ಕಿಳಿಯುವುದಿಲ್ಲ. ನಾದಿನಿ ಎಂಥಹ ಸ್ವಾರ್ಥಿ. ಸರಸು ವನ್ನು ಮನ ದೂಷಿಸಿದಾಗ ಬುದ್ಧಿ ಮರು ಸವಾಲು ಹಾಕಿತು. "ನೀನು ಸ್ವಾರ್ಥಿಯಲ್ಲವೆ ? ರುಕ್ಮಿಣಿ ಬೆಚ್ಚಿ ಮೇಲೆದ್ದಳು ಈ ಪ್ರಶ್ನೆಗೆ. ಅವಳಲ್ಲಿ ಉತ್ತರವಿಲ್ಲದಾಗ ಏಕಾಂಗಿಯಾಗಿ ಅಲ್ಲಿ ಕುಳಿತುಕೊಳ್ಳಲು ಮನ ಒಡಂಬಡ ಲಿಲ್ಲ. ಮೇಲೆದ್ದು ನಡುಮನೆಗೆ ಬಂದಳು. ಕುರ್ಚಿಯಲ್ಲಿ ಕುಳಿತ ಮೋಹನ ಎದುರಿಗೆ ನಿಂತ ಹೆಂಡತಿಯನ್ನು 'ಯಾಚಿಸುತ್ತಿದ್ದ. - ಮೋಹನ ಹೆಂಡತಿ ಯನ್ನು ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಾನೆ, ಆದರೇನು ಬಂತು ಭಾಗ್ಯ ಅವನನ್ನು ಒಂದು ದಿನವೂ ಸುಖವಾಗಿಡಲು ಅವಳು ಸಿದ್ಧಳಿಲ್ಲ. ಗಂಡನಿಗಾಗಿ ಹೆಂಡತಿ ತನ್ನತನವನ್ನು ತ್ಯಾಗ ಮಾಡಲೇ ಬೇಕು ಅದನ್ನು ಅವಳಿಗೆ ಹೇಳುವ ಬಗೆ ಹೇಗೆ. ಟೇಬಲ್ಲಿನ ಮೇಲಿದ್ದ ಟೆಲಿಫೋನಿನ ಕರೆಗೆ ಓಗೊಟ್ಟು ಸರಸು ರುಕ್ಮಿಣಿಯನ್ನು ನೋಡಿ ನುಡಿದಳು. ನೋಡಿ ನೀವೇ ಮಾತಾಡಬೇಕಂತೆ ರುಕ್ಮಿಣಿ ರಿಸೀವರನ್ನು ಕೈಗೆತ್ತಿಕೊಂಡು ಒಂದು ಕ್ಷಣ ನಿಂತಿದ್ದಳು. ಅನಂತರ ರಿಸೀವರನ್ನು ಯಂತ್ರದ ಮೇಲಿಟ್ಟು ಹಣೆಯಲ್ಲಿ ಮೂಡಿದ ಬೆವರನ್ನು ಒರಸಿಕೊಂಡು ಅಲ್ಲಿಂದ ಕದಲಿದಳು.

"ಯಾರದೇ ಫೋನು ? ಅತ್ತೆಯ ಪ್ರಶ್ನೆಗೆ ನಾದನಿಯ ಉತ್ತರ, ಯಾರೋ ನಂಗೇನು ಗೊತ್ತು? ತಮ್ಮದೇ ಹರಿದು ಹಂಚೋ ಸ್ಥಿತೀಲಿರೋ ವಾಗ ನಮಗೆ ವಿವೇಕ ಹೇಳೋಕೆ ಬರ್‍ತಾರೆ. ರುಕ್ಮಿಣಿಗೆ ನಿಂತಲ್ಲೇ ತತ್ತರಿಸಿ ಬೀಳುವಂತಾಯಿತು. ಅನಂತರ ಮನೆಯ ಮೌನ ಮೋಹನ ಹೊರಟು ಹೋದನೆಂದು ಸಾರಿತು. ಸಂಜೆ ದೇಶಪಾಂಡೆ ಐದೂವರೆಗೆ ಬಾರದಿದ್ದರೂ ರುಕ್ಮಿಣಿಗೆ ಬೇಸರವೆನಿಸಲಿಲ್ಲ, ಮನದ ಬೇಗೆ ಶಾಂತವಾಗಲು ಏಕಾಂತತೆಯ ಅವಶ್ಯಕತೆಯಿತ್ತು. ಬಾಲ್ಕಾನಿಯ ಕುರ್ಚಿಯಲ್ಲಿ ಮೈಚಾಚಿ ಕುಳಿತಳು. ಸಮಸ್ಯೆಗೆ ಪರಿಹಾರ ಮಾರ್ಗವೇ ಇಲ್ಲವೇ? ಜೀವನವೇ ಅರ್ಥವಾಗುತ್ತಿಲ್ಲ ಇದರ ಮೂಲ ಅಂತ್ಯವೇನು? ಅನೇಕ ಬಾರಿ ದೇಶಪಾಂಡೆ ಏಕಾಂಗಿಯಾಗಿ ರಾತ್ರಿ ಬಹಳ ಹೊತ್ತು ಬಾಲ್ಕಾನಿಯಲ್ಲಿ ನಿಂತು ದಿಗಂತದತ್ತ ದೃಷ್ಟಿತೂರಿ ಏನನ್ನೋ ಆಲೋಚಿಸುತ್ತಿದ್ದ ಇಲ್ಲವೇ ಶಥಪಥ ಹಾಕುತ್ತಲಿದ್ದ,

ಅವನ ಚಡಪಡಿಸುವಿಕೆ ಅರ್ಥವಾಗುತ್ತಿರಲಿಲ್ಲ. ಅವಳಿಗೆ ಪ್ರಾಯಶಃ ಗಂಡನಿಗೆ ತನ್ನ ಅಪರಾಧದ ಅರಿವಾಗಿ ಅವನು ತನ್ನ ಕೈ ಹಿಡಿದ ತಪ್ಪಿ ನಿಂದಾಗಿ ನರಳುತ್ತಿರಬಹುದೇ ಎಂಬ ಪ್ರಶ್ನೆಗಳ ಬಾಣಗಳು ಅವಳ ಮೆದುಳನ್ನೇ ಸೀಳತೊಡಗುತ್ತಿದ್ದವು. ದಾಂಪತ್ಯ ಪೂರ್ಣವಾಗಲು ಮನ ಗಳು ಒಂದಾದರೆ ಸಾಕೆ ? ದೇಹಗಳು ದೂರವೇ ಉಳಿದಾಗ ಸಮರಸ ಜೀವನವೆಂದರೇನು. ?

ಮನೆಗೊಂದು ಬಾರಿ ದೇಶಪಾಂಡೆಯ ಗೆಳೆಯರೊಬ್ಬರು ಬಂದಾಗ ಅವರಿಗೆ ಹೆಂಡತಿಯ ಪರಿಚಯ ಮಾಡಿಸಿದ್ದ ದೇಶಪಾಂಡ 'ದಿಸ್ ಈಸ್ ಮಿಸೆಸ್ ರುಕ್ಮಿಣಿ ದೇಶಪಾಂಡೆ ಮೈ ಬೆಟರ್ ಹಾಫ್' ಅವನ ಮಾತು ಅವಳಿಗೆ ವ್ಯಂಗವಾಗಿತ್ತು. ಆದರೆ ಅವನಾಗಿ ಎಂದೂ ಅವಳನ್ನು ದೂಷಿಸಿದ್ದಿಲ್ಲ ವೆಂಬುದು ಅವಳಿಗೆ ಅನುಭವವಾಗಿತ್ತು,

ಅಂದು ರಾತ್ರಿ ಹತ್ತುವರೆಗೆ ಬಂದ ದೇಶಪಾಂಡೆ ತಡವಾಗಿ ಬಂದುದಕ್ಕೆ ಹೆಂಪತಿಯಲ್ಲಿ ಕ್ಷಮೆ ಯಾಚಿಸಿದಾಗ ಅವಳು ಗಂಡ ತನಗೊಂದು ವ್ಯಕ್ತಿತ್ವ ಕೊಟ್ಟಿರುವುದಕ್ಕಾಗಿ ತಲೆದೂಗಿದಳು ಹೆಮ್ಮೆಯಿಂದ. ಅಂದು ದೇಶಪಾಂಡೆಯ ನಡೆನುಡಿಯಲ್ಲಿ ಏನೋ ಬದಲಾವಣೆಯನ್ನು ಕಂಡಂತಾಯಿತವಳಿಗೆ ಊಟ ವಾದ ನಂತರ ರುಕ್ಮಿಣಿ ಬಾಲ್ಕನಿಯಲ್ಲಿ ಅವನು ಕುಳಿತ ಕುರ್ಚಿಯಬಳಿ ಬಂದು ನಿಂತಾಗ ಅವನು ನಸುನಗೆ ಬೀರಿ ನುಡಿದ 'ರುಕ್ಕೂ ಜೀವನದಲ್ಲಿ ಪ್ರತಿಯೊ ಬ್ಬನಿಗೂ ತಿರುವು ಬೇಕೇಬೇಕು ಹೆಚ್ಚುಕಾಲ ನಿನ್ನಿಂದ ದೂರವಿರೋಕೆ ಇಷ್ಟ ಪಡೋದಿಲ್ಲ ಆದ್ರು ಒಂದೆರಡು ದಿನಗಳ ಮಟ್ಟಿಗೆ ಅವಕಾಶ ಕೊಡು ಸಾಕು' ಅವಳು ದಿಗ್ಭ್ರಾಂತಳಾಗಿ ಅವನತ್ತ ನೋಡಿದಳು. ನಡಿಮಲಗು, ಅವನೆಂದಾಗ ಅವಳು ನಿರಾಸೆಯಿಂದ ಮಲಗಲು ಹೊರಟಳು. ರಾತ್ರಿ ದೇಶ ಪಾಂಡೆ ಮಲಗಿದಾಗ ಬಹಳವೇ ಹೊತ್ತಾಗಿತ್ತು.

ಬೆಳಕು ಹರಿಯುತ್ತಿದ್ದಂತೆಯೇ ದೇಶಪಾಂಡೆ ಮನೆಯಿಂದಾಚೆಗೆ ಹೊರಟು ಹೋಗಿದ್ದ. ಮತ್ತೆ ಅವನು ಮನೆಗೆ ಹಿಂತಿರುಗಿದಾಗ ಮನೆಯ ಮುಂದೆ ಜೋಲು ಮೋರೆ ಹಾಕಿಕೊಂಡು ನಿಂತಿದ್ದ ಮೋಹನ ಮನೆಯಲ್ಲೊನೆ

ಗದ್ದಲ ಆಗಿತ್ತು ಏನಾಯಿತೋ ಮೋಹನ? ದೇಶಪಾಂಡೆಯ ಕಾತರದ ಪ್ರಶ್ನೆ, ಭಾವ ಅತ್ತಿಗೆ....ದೇಶಪಾಂಡೆ ಅವನ ತೋಳಿನೊಳಗಿದ್ದ ಮಗುವನ್ನಪ್ಪಿಕೊಂಡು ಒಳಗೋಡಿದ. ನಡುಮನೆಯಲ್ಲಿ ತಾಯಿ ತಂಗಿ, ಆಳು ಸಿದ್ದ, ಎಲ್ಲರೂ ರೂಮಿನ ಬಾಗಿಲ ಬಳಿ ನಿಂತಿದ್ದರು. ಸಾವಿತ್ರಮ್ಮನ ಮುಖ ಕೋಪದಿಂದ ಕೆಂಪಾಗಿತ್ತು. ದೇಶಪಾಂಡೆ ಅಲ್ಲೇ ನಿಂತು ತಂಗಿಯತ್ತ ನೋಡಿದ, ಅವಳು ಮೌನವಾಗಿ ಮೇಜಿನ ಮೇಲಿದ್ದ ಡೈರಿಯತ್ತ ನೋಡಿದಳು. ಚಿತ್ತಚಾಂಚಲ್ಯಕ್ಕೆ ಸಿಕ್ಕಿದವರಿಗೆ ಮತ್ತಷ್ಟು ಹಗರಣ ಮಾಡುವ ಪ್ರೋತ್ಸಾಹ ಅವನು ರೋಷದಿಂದ ಡೈರಿಯನ್ನೆತ್ತಿ ದೂರ ಬಿಸುಟು ಮುಚ್ಚಿದ ಬಾಗಿಲನ್ನು ಕಾಲಿನಿಂದ ಬಲವಾಗಿ ಒದ್ದು ನುಡಿದ. ರುಕ್ಕೂ ಬಾಗಿಲು ತೆಗಿ.

"ಮಗನಿಗೂ ವಿಷಯ ತಿಳಿದಿದೆ ಹಾಗಿದ್ದರೆ" ಎಂದು ಮುಂದಾಗಬಹುದಾದ ಹಗರಣವನ್ನು ಮನದಲ್ಲೇ ನೆನೆದರು ಸಾವಿತ್ರಮ್ಮ. ಈ ಗಲಾಟೆಗೆ ಎದ್ದ ಮಗು ಅಳತೊಡಗಿತು, ರುಕ್ಕೂ ಮಗು ಅಳ್ತಿದೆ ಬಾಗಿಲು ತೆಗಿ. ರೋಷದಿಂದ ಬಾಗಿಲನ್ನು ಮತ್ತೆ ಝಾಡಿಸಿ ಒದ್ದಾಗ ಬಾಗಿಲ ತೆರೆಯಿತು. ಎದುರಿಗೆ ಮೇಲ್ಛಾವಣಿಗೆ ನೇತಾಡುತ್ತಿದ್ದ ಹಗ್ಗದ ಕುಣಿಕೆಗೆ ಆಹುತಿಯಾದ ರುಕ್ಮಿಣಿ ಅವನ ದೃಷ್ಟಿಗೆ ಗೋಚರಿಸಿದಳು.

'ರುಕ್ಕೂ' ದೇಶಪಾಂಡೆ ಕೂಗಿದ.

೦ ೦ ೦ ೦

ಹಿಂದಿನ ರಾತ್ರಿಯೇ ರುಕ್ಮಿಣಿಯ ಡೈರಿಯ ಪುಟಗಳಗನ್ನು ತಿರುವಿಹಾಕಿದ್ದ ಅವನಿಗೆ ಈ ಕೆಳಗಿನ ಸಾಲುಗಳು ಕಣ್ಣಿಗೆ ಬಡಿದವು:

"ಕಾಲೇಜಿನ ಗೆಳತಿಯರೂಡನೆ ಪ್ರವಾಸಕ್ಕೆ ಹೊರಟಾಗ ನಡೆದ ದುರ್ಘಟನೆ. ಅಂದು ರಾತ್ರಿ ಬೆಟ್ಟದ ಇಳಿಜಾರಿನಲ್ಲಿ ದಟ್ಟವಾದ ಕಾಡಿನ ಮಧ್ಯೆ ಬಸ್ಸು ಕೆಟ್ಟಿತು. ದುಷ್ಟ ಮೃಗಗಳ ಬೆದರಿಕೆ ತೋರಿಸಿದ ಡ್ರೈವರ್ ಆದರೂ ಸೆಕೆ ಸೊಳ್ಳೆಕಾಟದಿಂದ ದೂರವಾಗಲು ಗೆಳತಿಯರೊಡನೆ ಹುಲ್ಲು

ಗಾವಲಿನ ಮೇಲೆ ಮಲಗಿದಾಗ ನಡೆಯಬಾರದ ಘಟನೆನಡೆದಿತ್ತು ಅನಿರೀಕ್ಷಿತ
ವಾಗಿ ಮಾನವ ರೂಪದ ದುಷ್ಟ ಮೃಗವೊಂದಕ್ಕೆ ಬಲಿಯಾಗಲೇಬೇಕಾಯ್ತು
ಆ ಘಟನೆಯಿಂದ ಅಸ್ತಿತ್ವವನ್ನೇ ಕಳೆದುಕೊಂಡು ಹೋರಾಡುತ್ತಿದ್ದ ನನಗೆ
ಆಶ್ರಯ ನೀಡಿದರು ದೇಶಪಾಂಡೆ. ಕ್ಷಮಾಯಾಚನೆಗೆ ಅವಕಾಶವಾಗುತ್ತಿಲ್ಲ
ನಾನೇನು ಮಾಡಲಿ.?

ದೇಶಪಾಂಡೆ ಬೆದರಿದ. ಕಾರ್ಗತ್ತಲಿನ ಆ ರಾತ್ರಿ ಕುಡಿತದ ಅಮಲಿ
ನಲ್ಲಿ ಪ್ರವಾಸಕ್ಕೆ ಅದೇ ಬಸ್ಸಿನ ಪಯಣಿಗನಾದ ನಾನು ಎಸಗಿದ ಹೇಯ
ಕೃತ್ಯ..."ರುಕ್ಕೂ ನನ್ನನ್ನು ಕ್ಷಮಿಸು" ಎಂದು ಅವನು ಚೀತ್ಕರಿಸಿದ.

* * *

# ಭೈರವ

—ವಸಂತಾ ದೇವಿ ಅ. ನ. ಕೃ

"ಇವತ್ತಾದರೂ ಆಫೀಸಿನಿಂದ ಬೇಗ ಹೊರಟು ಮನೆಯನ್ನು ಹುಡುಕಿ" ಎಂದು ಶಾಂತಿ, ತಲೆಯನ್ನು ಬಗ್ಗಿಸಿಕೊಂಡು ಬೂಟು ಲೇಸನ್ನು ಕಟ್ಟುತ್ತಿದ್ದ ರಮೇಶನಿಗೆ ಹೇಳಿದಳು,

"ಹೂ, ಅದೇ ಕೆಲ್ಸ ಮಾಡ್ತಿದೀನಿ."

"ಆರು ತಿಂಗಳಿಂದಲೂ ಹೀಗೇ ಹೇಳ್ತಾ ಇದೀರಾ. ನೀವೇನೋ ಬೆಳಿಗ್ಗೆ ಮನೆ ಬಿಟ್ಟು ಹೋದರೆ ಸಾಯಂಕಾಲ ಬರ್‍ತೀರಾ, ಮತ್ತೆ ತಿಂಡೀ ಕಾಫೀ ಮುಗಿಸಿ ಕ್ಲಬ್ಬಿಗೆ ಹೋದರೆ ರಾತ್ರೀನೇ ಮನೆ ಸೇರುವುದು ಈ "ಗಜಾಗುಂಡಲ"ದಲ್ಲಿ ಸಿಕ್ಕೊಂಡು ತಾಪತ್ರಯ ಪಡ್ತಿರೋ ನನ್ನ ಅವಸ್ಥೆ ನಿಮಗ್ಹೇಗೆ ಗೊತ್ತಾಗಬೇಕು.!

"ಅಲ್ಲೇ ಪಮ್ಮಿಚ್ಚಿಕ್ಕಪ್ಪ ನನಗೋಸ್ಕರ ಮನೆ ಕಟ್ಸಿಟ್ಟಿದ್ದಾನೆಯೇ ? ಯಾವುದೋ ಕೊಳಚೇ ಬೀದಿಯಲ್ಲೋ ಇಲ್ಲಾ ನಾನೂರು ಐನೂರು ಬಾಡಿಗೆ ಕೊಡುವ ಮನೆಯನ್ನೋ ತೋರಿಸ್ತಾರೆ. ಒಪ್ಕೊಂಡ್ಬಿಡುಕ್ಕಾಗ ತ್ತೇನು ? ಅದೂ ಅಲ್ಲದೇ ನೀನೊಂದು ದಡ್ಡಿ. ನನಗೆ ಬರುವ ಸಂಬಳ ದಲ್ಲಿ ಮನೆ ಬಾಡಿಗೆ ಕೊಟ್ಟುಕೊಂಡು ಬರು ಹೋಗುವವರನ್ನೂ ಸುಧಾ ರಿಸಿಕೊಂಡು, ಮಕ್ಕಳು ಮರಿಯನ್ನು ಓದಿಸುವುದು ಹುಡುಗಾಟದ

ಮಾತಕಲ್ಲಣೇ. ಈಗಾಂದ್ರೆ, ಇಷ್ಟೋ ಅಷ್ಟೋ ಕೊಟ್ಟು ಬಿಟ್ಟರೆ, ಅಮ್ಮ ಮಾತನಾಡದೇ ಸಂಸಾರಾನ ತೂಗಿಸಿಕೊಂಡು ಹೋಗ್ತಾಳೇ, ನಮ್ಮ ಮೇಲೆ ಯಾವ ಜವಾಬ್ದಾರೀನೂ ಇಲ್ಲ. ನಡೆದಷ್ಟು ದಿವ ನಡೆಯಲಿ ಬಿಡು. ಮನೇ ಸರಿಯಾಗಿ ಸಿಕ್ಕುವರೆಗೂ !"

'ನಾನ್ನಡ್ಕೊ,' ನೀವ್ನಡ್ಕೊ. ಮಾವನವರಿಗೆ ರಿಟೈರಾಯ್ತು. ಎರ ಡನೇ ನಾದಿನಿ ಅನಸೂಯಾ ಬಸುರಿಯೆಂತೆ. ಇನ್ನೂ ಒಳ್ಳೇ ತೊಡಿಸು ಬಾಣಂತನ ಅದು ಮುಗಿಯುವ ವೇಳೆಗೆ ಮೂರನೆಯವಳು ಸೀತನ ಮದುವೆ. ಈ ಖರ್ಚನ್ನೆಲ್ಲಾ ಸುಧಾರಿಸಿಕೊಳ್ಳುವ ವೇಳೆಗೆ ನಾಲ್ಕನೆ ಯೋಳು ಸಾವಿತ್ರೀಗೆ ಬಿ. ಎ. ಮುಗಿದಿರುತ್ತೇ, ಅವಳ ಮದುವೆಯ ಏರ್ಪಾಟು. ಅಷ್ಟೊತ್ತಿಗೆ ಆ ಕಡೆಯೋನು ಜಗದೀಶನ ಓದು ಮುದುವೇ! ದೊಡ್ಡ ಮಗನೆನಸಿಕೊಂಡ ನೀವು ಸುಮ್ಮನೇ ಕೈಕಟ್ಟಿ ಕೂತ್ಕೊಳ್ಳಕಾಗುತ್ಯೆ, ಈ ಕೊಂಬಾರತ್ತೋಟ್ಟೀನ ನೀಜುವ ವೇಳೆಗೆ ನಮ್ಮಿಬ್ಬರ, ಯಾಕೇ ನಮ್ಮಕ್ಕಳ ತಲೇನೂ ನರೆತಿರುತ್ತೇ.'

"ಏನೋನ್ನಿದ್ದೆ, ಪರವಾಗಿಲ್ಲಕಣೇ. ಬಹಳ ಬುದ್ಧಿ ಓಡ್ಸಿದೀಯಾ ಇನ್ನೂ ಸೀರಿಯಸ್ಸಾಗಿ ಮನೆ ಹುಡುಕ್ತೀನಿ ಸುಮ್ನಿರು" ಎಂದ ರಮೇಶ.

* * *

ನಾರಣಪ್ಪನವರಿಗೆ ಪಿ, ಡಬ್ಲ್ಯು. ಡಿ. ಆಫೀಸಿನಲ್ಲಿ ಕ್ಲರ್ಕ್ ಆಗಿ ಕಲಸ ಮಾಡಿ ರಿಟೈರೂ ಆಯಿತು. ತಾವಾಗಿ ಯಾರಿಗೂ ಮೇಜಿನ ಕೆಳಗೆ ಕೈ ಪಡ್ಡದಿದ್ದರೂ. ಮಾಮೂಲನ್ನು ನಿರಾಕರಿಸುವಷ್ಟು ಶ್ರೀಮಂತರಾಗಿರಲಿಲ್ಲ. ಮಲ್ಲೇಶ್ವರದಲ್ಲಿ ತಮ್ಮ ಒಡನಾಡಿಗಳೊಬ್ಬರು ತಮ್ಮ ಒಬ್ಬನೇ ಮಗ ನನ್ನು ಡಾಕ್ಟರ್‌ರನ್ನಾಗಿ ಮಾಡಬೇಕೆಂದು. ಸ್ವಂತ ಮನೆಯನ್ನು ಅಡ ಮಾನ ಮಾಡಿ, ಹುಡುಗನ ಓದು ಮುಗಿಯುವ ವೇಳೆಗೆ, ಮನೆ ಹರಾ

ಜಿಗೆ ಒಂದು ಮರ್ಯಾದೆಯನ್ನು ಕಾಪಾಡಿಕೊಳ್ಳುವುದಕ್ಕಾಗಿ ನಾರಣಪ್ಪ ನವರಿಗೆ ಕಮ್ಮಿ ಬೆಲೆಗೆ ಮಾರಿ, ಸಂಸಾರವನ್ನು ಮೈಸೂರಿಗೆ ವರ್ಗಾಯಿಸಿ ಕೆ. ಆರ್. ಆಸ್ಪತ್ರೆಯಲ್ಲಿ ಕೆಲಸ ಮಾಡುತ್ತಿದ್ದ ಮಗನ ಜೊತೆಯಲ್ಲಿ ದ್ದರು.

ನಾರಣಪ್ಪನವರಿಗೆ ಮೊದಲನೆಯವ ರಮೇಶ, ನಂತರ ಸಾಲಾಗಿ ನಾಲ್ಕು ಹೆಣ್ಣು ಮಕ್ಕಳು. ಇಬ್ಬರಿಗೆ ಲಗ್ನಮಾಡಿದ್ದರು. ಕಡೆಯವ ಜಗದೀಶ, ಮೊದಲನೆಯ ಪಿ, ಯು. ಸಿ. ಯಲ್ಲಿ ಓದುತ್ತಿದ್ದ, ರಮೇಶ ಬಿ, ಎ. ಬಿ. ಕಾಂ. ಮುಗಿಸಿ ಬ್ಯಾಂಕ್‌ನಲ್ಲಿ ಆಫೀಸರ್ ಆಗಿದ್ದ. ಹೆಂಡತಿ ಶಾಂತಿ ತಂದೆ ಪಿ. ಡಬ್ಲ್ಯು. ಡಿ. ಇಂಜಿನಿಯರಾಗಿ ಕೆಲಸಕ್ಕೆ ಸೇರಿದ ನಾಲ್ಕೈದು ವರ್ಷಗಳಲ್ಲೇ ಬೆಂಗಳೂರಿನಲ್ಲಿ ಎರಡು ಮನೆ ಕಟ್ಟಿ, ಒಂದು ಸೈಟನ್ನುಕೊಂಡರು, ಅಸಿಸ್ಟೆಂಟ್ ಇಂಜಿನಿಯರಾಗೇ ವಿರಾಮ ವೇತನ ಪಡೆ ದಿದ್ದರು. ಶಾಂತಿ ಸ್ವಲ್ಪ ಲೋಕ್ಯಾಚಾರ ಮತ್ತು ಗತ್ತಿನ ಹುಡುಗಿ.

* * *

"ಅಲ್ಲಿ ಕಣೋ ರಮೇಶ, ಬಾಡಿಗೆ ಮನೆಯವರ ಎದುರಿಗೆ ಬೃಂದಾ ವನವಿದೆ. ಎಲ್ಲಾ ಹೊತ್ತಿನಲ್ಲೂ ಅವರ ಮನೆಯಲ್ಲಿ ಗಂಡಸರು ಹೊರಗೆ ಇರುತ್ತಾರೆ. ಅಲ್ಲಿಗೆ ಹೋಗಿ ತುಳಸೀ ಪೂಜೆ ಮಾಡೋಕೆ ಸಂಕೋಚ ವಾಗುತ್ತೆ, ನಮ್ಮ ಮನೆಯ ಬಾಗಿಲ ಎದುರಿಗೆ ಒಂದು ಬೃಂದಾವನ ಕಟ್ಟಿಸಬೇಕೆಂದು ಯೋಚನೆ ಬಂದಾಗಲೆಲ್ಲಾ "ನನ್ನ ಕೈಯ್ಯಾರ ಮನೆ ಎರಡು ಮಾಡುವುದು ಬೇಡವೆಂದು ತಡೆದಿದ್ದೆ, ಈಗ ನಮಗೆ ವಯಸ್ಸಾಗುತ್ತಾ ಬಂದಿರುವಾಗ ಬೇರೆ ಹೋಗುವ ಅಗತ್ಯವೇನಿದೆಯಪ್ಪ. ನಿಮಗೆ ಯಾವ ಜವಾಬ್ದಾರೀನೂ ಬೇಡ, ನಮ್ಮ ಕಣ್ಮುಂದೆ ಮಕ್ಕಳಂತೆ ಆಡಿಕೊಂಡಿರ್ತೀ ವುದಕ್ಕೇನಪ್ಪ. ಮುಂದೆ ಇದ್ದೇ ಇದೆ. ಎಂದು ಲಕ್ಷ್ಮಮ್ಮ ಹೇಳಿದರೂ ಕೇಳದೇ, ಇಂದಿರಾನಗರದಲ್ಲಿ, ಬಾಡಿಗೆ ಮನೆಯನ್ನು ಗೊತ್ತುಮಾಡಿ

ಕೊಂಡು ಹೊರಟು ನಿಂತರು. ಲಕ್ಷ್ಮಮ್ಮ ಅಳುತ್ತಿದ್ದರು. ಮಿಕ್ಕವರೆಲ್ಲಾ ಸಪ್ಪೆ ಮುಖ ಮಾಡಿಕೊಂಡು ನಿಂತಿದ್ದರು. ಲಕ್ಷ್ಮಮ್ಮ ಸೊಸೆಗೆ "ದೇವರ ಮುಂದೆ ಪಂಚಾವಾಳದಿಂದ ಕುಂಕುಮ ಹಚ್ಚಿಕೊಂಡು ನಿನಗೇನು ಪಾತ್ರೆಪರಟಿಬೇಕೋ ತೊಗೊಂಡ್ಹೋಗಮ್ಮ. ಸ್ಟೀಲು, ಬೆಳ್ಳಿ ಪಾತ್ರೆ ಯಾವುದು ಬೇಕಾದರೂ ತಗೋ" ಎಂದರು.

"ನಮ್ಮ ತಂದೇ ಮನೇಲಿ ಪಾಯಸದ ಕಂಚಿನ ತಪ್ಪಲೇ, ಸೌಟು ಕೊಟ್ಟಿದ್ರಲ್ಲಾ, ಅದೆಲ್ಲಿದೆ"? ಶಾಂತಿ ಕೇಳಿದಳು.

"ಕಂಚಿನ ಸಾಮಾನಿನ ಪೆಟಾರಿಯಲ್ಲಿದೆ ತೋಗೋಮ್ಮ.

ಸಾಮಾನು ಸಾಗಿಸಿ ಬಂದಾಯಿತು. ಲಕ್ಷ್ಮಮ್ಮ ಪಾಯಸದ ಅಡಿಗೆ ಮಾಡಿ ಬಡಿಸಿದರು, ಟ್ಯಾಕ್ಸಿ ಬಂದು ನಿಂತಿತು. ಶಾಂತಿ ಒಂದು ದೇವರ ಪಠವನ್ನೂ ಕೆಲವು ವಿಗ್ರಹಗಳನ್ನೂ ಒಂದು ಸಂಪುಟದಲ್ಲಿ ಇರಿಸಿಕೊಂಡು ಹೊರಟು ನಿಂತಳು, ರಮೇಶನು "ಕಂಠಿ" (ಶ್ರೀಕಂಠ) ಎಂಬ ನಾಯಿಯನ್ನು ಸರಪಳಿ ಸಹಿತಾ ಬಿಚ್ಚಿಕೊಳ್ಳಲು ಹೊರಟ. ಅದು ಬೊಗಳಿತು. ಒಳಗಿದ್ದ ಜಗದೀಶ ಹೊರಗೆ ಬಂದು, "ಅಣ್ಣ, ನಾಯಿೂನ ತೊಗೋಡ್ಹೋಗಬೇಡ" ಎಂದ. "ಅದು ನಂದು. ಅವಳೊಬ್ಬಳೇ ಮನೆಯಲ್ಲಿರ್ತಾಳೇ, ನಾತೊಗೊಂಡ್ಹೋಗ್ತೀನಿ" ಎಂದ ರಮೇಶ.

"ನಿನ್ನ ಸ್ನೇಹಿತನ ಮನೆಯಿಂದ ನೀತಂದದ್ದೇನೋ ಉಂಟು. ಆದರೆ ಅದರ ಸ್ನಾನ, ಯೋಗಕ್ಷೇಮ ನೋಡುತ್ತಿದ್ದವನು ನಾನು. ಹೊಟ್ಟೆ ನೋಡುತ್ತಿದ್ದವಳು ಅಮ್ಮ. ಒಂದೇವೊಂದು ದಿನವಾದರೂ ನೀವದನ್ನೂ ಮುಟ್ಟೀ, ಪ್ರೀತಿ ಮಾಡಿದ್ದೀರಾ? ನನ್ನನ್ನು ಬಿಟ್ಟು ಅದಿರಲಾರದು, ಅದನ್ನು ಬಿಟ್ಟು ನಾನಿರಲಾರೆ. ನಿನಗೆ ನಾಯಿೂನ ಸಾಕುವುದಕ್ಕೆ ಬರುವುದಿಲ್ಲಣ್ಣ. ಅದನ್ನು ಬಿಟ್ಟು ಹೋಗು" ಎಂದ ಜಗದೀಶ, ಓಹೋ ಹೋ; ಬೃಹಸ್ಪತಿ ಬಂದ್ಬಿಟ್ಟ, ಮುಚ್ಕೊಂಡ್ಹೋಗಿ ಓದ್ಕೊಳ್ಳೋ ಪರೀಕ್ಷೆ ಹತ್ರ ಬಂತು" ಎಂದವನೇ ನಾಯಿಯನ್ನು ಬಿಚ್ಚಿಕೊಂಡು ಹೊರಟೇಹೋದ.

ಹೊಸ ಮನೆಗೆ ಹೋದಾಗಿನಿಂದ "ಕಂಠಿ" ನಿರಶನ ವ್ರತವನ್ನಾರಂಭಿಸಿದ, ಕರಿಯ ಬಣ್ಣ ಮೈ ಆದ್ಯಂತವೂ ಇತ್ತು. ಕತ್ತಿನ ಸುತ್ತಲೂ ಮಾಸಲು ಬಿಳಿಯ ಬಣ್ಣದ ಒಂದು ಪಟ್ಟಿ, ಬೇಕಂತಲೇ ಕಟ್ಟಿದಂತಿತ್ತು. ಅದಕ್ಕೇ "ಶ್ರೀಕಂಠ" ಎಂದು ಜಗದೀಶನೇ ನಾಮಕರಣ ಮಾಡಿದ್ದ. ಎಂದಾದರೂ ಅಣ್ಣನ ಮನೆಗೆ ಬರುವಾಗ ಬ್ರೆಡ್ಡನ್ನೋ, ಬನ್ನನ್ನೋ, ತಂದು ಹಾಕಿದರೆ ಮಾತ್ರ 'ಕಂಠಿ' ತಿನ್ನುತ್ತಿತ್ತು.

ಈ ಹಟವನ್ನು ಬಿಡಿಸಬೇಕೆಂದು ಒಂದು ದಿನ ಶಾಂತಿ ಹಾಲು ಮತ್ತು ಅನ್ನವನ್ನು ಕಲಸಿ ಮುಂದಿಟ್ಟು, ನಾಯಿ ತಿನ್ನದೇ ಇರಲು, ಒಂದು ಕೋಲನ್ನೂ ತಂದು ಚೆನ್ನಾಗಿ ಥಳಿಸಿದಳು. ಅಂದಿನಿಂದ ಸಂಪೂರ್ಣವಾಗಿ ಆಹಾರವನ್ನು ಮೂಸಿನೋಡಲೂ ನಿಲ್ಲಿಸಿಬಿಟ್ಟಿತು. ಒಂದು ಶನಿವಾರ ರಮೇಶ ಅರ್ಧ ದಿವಸದ ರಜ ತೆಗೆದುಕೊಂಡು, "ಕಂಠಿ"ಯನ್ನು ವೆಟೆರಿನರಿ ಆಸ್ಪತ್ರೆಗೆ ಕರೆದುಕೊಂಡು ಹೋಗಿ ವೈದ್ಯರಿಗೆ ತೋರಿಸಲು, ಅವರು ಪರೀಕ್ಷಿಸಿ, "ಇದಕ್ಕೆ ಹೃದಯಾಘಾತವಾಗಿದೆ ಸಾರ್ ಮತ್ತು ಬಹಳ ನಿತ್ರಾಣವಾಗಿದೆ. ಒಂದು ಇಂಜೆಕ್ಷನ್ ಕೊಡುತ್ತೇನೆ" ಎಂದು ಹೇಳಿ ಇಂಜೆಕ್ಷನ್ ಕೊಟ್ಟು, ಕೆಲವು ಶಕ್ತಿಯುತವಾದ ಔಷಧಗಳನ್ನು ಹಾಲಿನಲ್ಲಿ ಕದರಿ ಕುಡಿಸಲಿಕ್ಕೆ ಕೊಟ್ಟರು. ನಂತರ ಆಟೋದಲ್ಲಿ ಕಾಲಿಸಬಳಿ ಮಲಗಿಸಿಕೊಂಡು ಮನೆಗೆ ಬಂದು, ಆಟೋದವನಿಗೆ ದುಡ್ಡು ಕೊಟ್ಟು, ನಾಯಿಯನ್ನು ಕೈಯ್ಯಲ್ಲೆತ್ತಿದರೆ ಭಾರವಾಗಿತ್ತು. ಒಳಗೆ ತಂದು ಗೋಣೀ ಚೀಲದಮೇಲೆ ಮಲಗಿಸಿದರೆ, ಕೈ ಕಾಲು ಸೆಟೆದು, ಅರೆಕಣ್ಣು ಬಿಟ್ಟಿತ್ತು, ಮೇಶರಿಗೆ ಐದು ರೂಪಾಯಿಗಳು ಸಿಕ್ಕಿತು, ನಿಂಬೆಗಿಡಕ್ಕೆ ಗೊಬ್ಬರವಾಯಿತು.

"ಕಂಠಿಯ ಸಮಾಚಾರ ತಿಳಿದು ಜಗದೀಶ ತಲ್ಲಣಿಸಿ ಹೋದ, ಅದೇ ವೇಳೆಗೆ ಸರಿಯಾಗಿ ಮನೆಯ ಮುಂದೆ ಒಬ್ಬ ಜೊಟ್ಟಿಗಾರ ಬುಟ್ಟಿಯಲ್ಲಿ ಒಂದು "ಆಲ್ಸೇಶಿಯನ್" ಮತ್ತು ಕುರಿಜಾತಿಯ (sheep dog) ನಾಯಿಗಳನ್ನು ಮಾರಲು ತಂದ." ಆ ನಾಯಿಗಳು ಸಾಯುವುದನ್ನು

ನೋಡಲಾರೆ ಕಣೋ. ಬೇಡ "ಎಂದು ಲಕ್ಷ್ಮಮ್ಮನವರು ಮತ್ತು ಮನೆಯವರೆಲ್ಲಾ ಎಷ್ಟು ಹೇಳಿದರೂ ಕೇಳದೆ ವ್ಯಾಪಾರಮಾಡತೊಡಗಿದ. ಜಗದೀಶನ ಗೋಗರೆತವನ್ನು ನೋಡಲಾರದೇ ಐವತ್ತು ರೂಪಾಯಿ ಹೇಳಿದವನು, ಐಷು, ರೂಪಾಯಿಗಳಿಗೆ "ಆಲ್ಸೇಶಿಯನ್" ನಾಯಿಯನ್ನು ಕೊಟ್ಟು ಹೋದ, ಲಕ್ಷ್ಮಮ್ಮನವರು "ಮನೇ ತುಂಬಾ ಪಾರಿವಾಳದ ಸಂಸಾರ, ಬೆಕ್ಕಿನ ಸಂಸಾರವಾಯಿತು. ಇದು ಹೇಳೀ ಕೇಳೀ ರಾಕ್ಷಸಜಾತಿ. ಇವುಗಳನ್ನೆಲ್ಲಾ ಹೇಗೆ ತಡೆಯುತ್ತೀಯೋ" ಎಂದರು

ಮನೆಯ ಸಾಮಾನು ತರುವ ದಿನಸೀ ಅಂಗಡಿಯಲ್ಲಿ ಪಾರಿವಾಳಕ್ಕೆ ಜೋಳ, ತಾನು ಕುಡಿಯುವ ಹಾಲಿನಲ್ಲಿ ಬೆಕ್ಕುಗಳಿಗೆ ಅನ್ನ ಹಾಕುವುದು ಜೊತೆಗೆ ತನ್ನ ಕಾಲೇಜು ಚಟುವಟಿಕೆಗಳಿಗೆ ವ್ಯಯ ಮಾಡುತ್ತಿದ್ದ ದುಡ್ಡಿನಲ್ಲಿ ನಾಯಿಗೆ ಕೋಳಿಮೊಟ್ಟೆ, ವಾರಕ್ಕೊಂದು ದಿನ ಮಿಲಿಟರಿ ಹೋಟಲಿನಲ್ಲಿ ಚೊಕ್ಕ ಭೋಜನ, ಹೀಗಾಗಿ ಒಂದೆರಡು ತಿಂಗಳಲ್ಲೇ ನಾಯಿ "ಭೈರವ" ಸಿಡಿಲಿನ ಮರಿ ಆಯಿತು. ಖೊತಮನಾಗಿ ಬೆಳೆಯಿತು. ಜಗದೀಶ ಹೇಳಿದ ಹಾಗೆ ಕೇಳುತ್ತಿತ್ತು, ಸದಾ ಅವನ ಹಿಂದೆಯೇ ಓದುವಾಗ ಅವನ ಮೇಜಿನ ಕೆಳಗೆ ಕಾಲಹತ್ತಿರವೇ ಇರಬೇಕು. ಅವನು ಮನೆಯಲ್ಲಿದ್ದರೆ ಅವನೇ ಊಟ ಹಾಕಬೇಕು. ಅವನಿಗೆ ಏನಾದರೂ ಹುಷಾರು ತಪ್ಪಿದರೆ ಮಂಚದ ಕೆಳಗಿನಿಂದ ಹೊರಬರುತ್ತಲೇ ಇರಲಿಲ್ಲ. ಮೆಲ್ಲನೆ ಮನೆಯವರಿಗೆಲ್ಲಾ ಒಗ್ಗುತ್ತಾ ಬಂದಿತು. ಇದು ಜಗದೀಶನಿಗೆ ಸಮಾಧಾನ ಕೊಟ್ಟಿತು. ಮನೆಗೆ ಯಾವಾಗಲೂ ಬರುವವರ ತಂಟೆಗೆ ಹೋಗುತ್ತಿರಲಿಲ್ಲ. ಲಕ್ಷ್ಮಮ್ಮನವರ ಹಿಂದೆ ಮುಂದೆ ಸುತ್ತುವುದು. ಅವರು ಹಲವಾರು ರಾಗಗಳಲ್ಲಿ ಭಗವದ್ಗೀತೆಯನ್ನು ಹೇಳುತ್ತಾ ಕುಳಿತುಕೊಂಡರೆ, ಅವರು ಏಳುವವರೆಗೂ ಅವರ ಮುಂದೆಯೇ ಕೂತುಕೇಳುವುದು, ಅವರಿಗೆ ಪೆಟ್ಟಾಗುವಂತೆ ಏನಾದರೂ ಸಂಭವಿಸುವುದಿದ್ದರೆ. ಸರ್ರನೆ ಅವರ ಮುಂದೆ ಹಾರಿ ತಡೆ ಕೊಡುತ್ತಿತ್ತು. "ಇದರ ಸಂಸ್ಕಾರ ನೋಡೀಂದ್ರೆ" ಎಂದು ಲಕ್ಷ್ಮಮ್ಮ ಗಂಡನಿಗೆ ಹೇಳುತ್ತಿದ್ದರು.

ಆದರೆ ಒಂದು ದಿನ ನಾರಣಪ್ಪನವರು ಪತ್ರಿಕೆಯನ್ನು ಓದುತ್ತಾ ಕುಳಿತಿದ್ದಾರೆ. ಲಕ್ಷ್ಮಮ್ಮ ಅಡಿಗೆ ಮಾಡುತ್ತಿದ್ದಾರೆ. ಭೈರವ ಎಲ್ಲಿಂದಲೋ ಒಳಗೆ ಓಡಿ ಬಂತು. ನೋಡಿದರೆ ಬಾಯೆಲ್ಲಾ ರಕ್ತ. ಏನು ಮಾಡಿ ಬಂದಿದೆಯೋ ಎಂದು ಹೊರಗೆ ಹೋಗಿ ನೋಡಿದರೆ, ಒಂದು ಪಾರಿವಾಳವನ್ನು "ಸ್ವಾಹಾ" ಮಾಡಿ ಬಂದಿತ್ತು ಮತ್ತೊಂದು ದಿವಸ ಎದುರು ಮನೆಯಿಂದ ಒಂದು ಕೋಳಿ ಮರಿಯನ್ನು ಕಚ್ಚಿ ತಂದಿತ್ತು. ನಾರಣಪ್ಪನವರು ಜಗದೀಶನಿಗೆ 'ಅದರ ಹುಟ್ಟು ಸ್ವಭಾವ ಎಲ್ಲಿ ಹೋಗುತ್ತಪ್ಪ. ನೀನು ಕಾಲೇಜಿಗೆ ಹೋಗುವ ಮುಂಚೆ ಕಟ್ಟಿ ಹಾಕಿ ಹೋಗು. ದೂರು ಕೇಳೋಕ್ಕಾಗುಲ್ಲ." ಎಂದರು.

ಮತ್ತೊಂದು ದಿನ ನಾರಣಪ್ಪನವರು ಬೆಳಗಿನ ಪೂಜೆ ಮಾಡುತ್ತಿದ್ದಾಗ ಒಂದು ಬೆಕ್ಕಿನ ಮರಿಯನ್ನು ಮುಕ್ಕಾಲು ಮುಗಿಸಿ ಯಾರಾದರೂ ನೋಡಿಯಾರೆಂದು ದೇವರ ಮನೆ ಮರೆ ಹೊಕ್ಕಿತ್ತು. ನಾರಣಪ್ಪನವರಿಗೆ ಮತ್ತು ಲಕ್ಷ್ಮಮ್ಮನವರಿಗೆ ಇದು ಸಹನೆ ಮೀರಿದ ವಿಷಯವಾಯಿತು. ಕಟ್ಟಿಹಾಕಿದ ಭೈರವ ಹೇಗೆ ಒಳಗೆ ಬಂದನೆಂದು ನೋಡಿದರೆ, ಕತ್ತಿನಿರದ ಪಟ್ಟಿಯನ್ನು ಕಳಚಿ ಬಂದಿತ್ತು. ಆದರೆ ಕತ್ತಿಗಿಂತಲೂ ಮುಖ ಸಣ್ಣದಿತ್ತು. ಇದರ ಉಪದ್ರವವನ್ನು ತಡೆಯಲಾರದೇ ನಾರಣಪ್ಪನವರು ತಮ್ಮ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದ, ಮನೆಗೆ ಬಟ್ಟೆ ಒಗೆಯಲು ಬರುತ್ತಿದ್ದ ತಿಮ್ಮಯ್ಯನಿಗೆ "ಈ ಭೈರವನನ್ನು ಏನು ಮಾಡಲೂ ತೋರುತ್ತಿಲ್ಲಪ್ಪ. ಮಡಿವಾಳದಲ್ಲಿ ನಿನ್ನ ಮನೆಯ ಹತ್ತಿರ ಕರ್‍ಕೊಂಡ್ಹೋಗಿ ಬಿಟ್ಟಿಡಪ್ಪ-ಯಾರಾದ್ರೂ ಸಾಕ್ಕೊಳ್ಳೀ. ಇಲ್ಲಾ, ನೀನೆ ಬೇಕಾದ್ರೆ ಇಟ್ಕೋ" ಎಂದು ಹೇಳಿ ಐದು ರೂಪಾಯಿ ಕೊಟ್ಟು ನಾಯಿಯನ್ನು ಅವನ ಜೊತೆ ಕಳಿಸಿದರು. ಜಗದೀಶ ಮುನಿಸಿ ಕೊಂಡು, ಊಟವನ್ನು ಮಾಡದೇ ಮಲಗಿಬಿಟ್ಟ.

ಮರುದಿವಸ ಜಗದೀಶ ಆಫೀಸಿಗೆ ಹೋಗಿದ್ದ. ನಾರಣಪ್ಪನೋರು ಯಾರೋ ಹಳೆಯ ಸ್ನೇಹಿತರನ್ನು ಹುಡುಕಿಕೊಂಡು ಹೋಗಿ

ದ್ದರು. ಲಕ್ಷ್ಮಮ್ಮ ಅಡಿಗೆ ಮಾಡುತ್ತಾ ಸ್ವಗತವನ್ನೇ ಗಟ್ಟಿಯಾಗಿ "ಹಾಳು ಮುಂಡೇದು ಭೈರವ ಇಲ್ಲದ್ದು, ಮನೆಯಲ್ಲಿ ಒಂದು ಮಗು ಇಲ್ಲದಂತಾಗಿದೆ. ಅದರ ಸ್ವಾಭಾವ ಅದಕ್ಕೆ ನಮಗೆ ತಡ್ಕೊಳ್ಳೋಕ್ಕಾಗ್ಲಿಲ್ಲ ಅಷ್ಟೆ "ಅಂದು ಕೊಳ್ಳುವಹೊತ್ತಿಗೆ ಬೀದಿ ಬಾಗಿಲು ನೂಕಿದ ಶಬ್ದ ವಾಯಿತು. ಊಟ ಮಾಡಿಕೊಂಡು ಕೋರ್ಟಿಗೆ ಹೋಗಲು ಜಗದೀಶನೋ ಇಲ್ಲ ಅವನ ತಂದೆಯೋ ಅಂದುಕೊಂಡು, ತಟ್ಟೆ ಮಣೆ, ಇಟ್ಟು ಕತ್ತೆತ್ತುತ್ತಾರೆ! ಭೈರವ! "ಅಯ್ಯೋ ಮುಂಡೇದೇ ಬಂದು ಬಿಟ್ಟೆಯಾ ಅಂದುಕೊಂಡು ಒಂದು ಲೋಟ ಹಾಲನ್ನು ಹಾಕಿದರು. ಆ ವೇಳೆಗೆ ಸರಿಯಾಗಿ ಜಗದೀಶ ಹಿಂದಿನಿಂದ ಬಂದು "ಮನುಷ್ಯರಿಗೆ ಇಲ್ಲದ ನಿಯತ್ತು ಈ ಮೂಕ ನಾಯಿಗಿದೆಯಮ್ಮ. ಎಂಟು ಮೈಲಿಯಿಂದ ಮನೆಹುಡುಕಿ ಕೊಂಡು ಬಂದಿದೆ, ಮತ್ತೆ ಅಟ್ಟಬೇಡಿ. ಸಂಜೆ ನಾನು ಬಂದು ಅದ ಕ್ಕೊಂದು ಬೇರೆ ಏರ್ಪಾಡನ್ನು ಮಾಡುತ್ತೇನೆ." ಎಂದು ಹೇಳಿ ಊಟ ಮುಗಿಸಿಕೊಂಡು ಕೋರ್ಟಿಗೆ ಹೋದ.

ಸಾಯಂಕಾಲ ಮನೆಗೆ ಬರುವಾಗ ಒಬ್ಬ ಗಾರೆಯುವನನ್ನು ಕರೆ ತಂದು, ಮನೆಯಲ್ಲೇ ಇದ್ದ ಇಟ್ಟಿಗೆಗಳನ್ನು ಜೋಡಿಸಿ ಒಂದು ಚಿಕ್ಕ ನಾಯಿ ಮನೆಯನ್ನೇ ಕಟ್ಟಿಸಿದ. ತಾನು ಮನೆಯಲ್ಲಿದ್ದಾಗ, ಮತ್ತು ರಾತ್ರಿ ಹೊತ್ತು ಮಾತ್ರ ಭೈರವನನ್ನು ಹೊರಕ್ಕೆ ಬಿಡುತ್ತಿದ್ದ.

* * *

ಲಾಯರ್ ಸುಂದರ ರಾಯರಿಗೆ ತಮ್ಮ ಇಬ್ಬರು ಗಂಡು ಮಕ್ಕ ಳಿಂದಲೂ ತಮ್ಮ ಆಸೆ ನೆರವೇರಲಿಲ್ಲ. ಒಬ್ಬ ಮಗನಿಗೆ ಹುಟ್ಟಿದಾಗಿ ನಿಂದಲೂ ಬುದ್ಧಿ ಬೆಳೆಯಲೇ ಇಲ್ಲ. ಇನ್ನೊಬ್ಬ ಸರಿಯಾಗಿರುವ ಮಗ ನಿಗೆ ಅತೀ ಮುದ್ದಾಗಿ ಒಂದೊಂದು ಕ್ಲಾಸಿನಲ್ಲಿ ಎರಡೂ ಮೂರು ವರ್ಷ ನಿಲ್ಲುತ್ತಿದ್ದ. ಸುಕನ್ಯ ಎಂಬ ತಮ್ಮ ಮಗಳಿಗಾದರೂ ಒಬ್ಬ ನ್ಯಾಯ

ಶಾಸ್ತ್ರವನ್ನು ಓದಿದ ಹುಡಗನಿಗೆ ಕೊಟ್ಟು ಲಗ್ನಮಾಡಿ ತರಬೇತಿ ಕೊಟ್ಟು ಪ್ರಸಿದ್ಧ ಲಾಯರನ್ನಾಗಿ ಮಾಡಬೇಕೆಂದು ಆಸೆ ಇದ್ದಿತು. ಜಗದೀಶನಲ್ಲಿ ತಮ್ಮ ಆಸೆ ಈಡೇರ ಬಹುದೆಂಬ ಭರವಸೆ ಇಟ್ಟುಕೊಂಡು ಮಗಳನ್ನು ಕೊಟ್ಟು ವಿವಾಹ ಮಾಡಿದ್ದರು.

ತಮ್ಮ ಸಣ್ಣ ಪ್ರಪಂಚದಲ್ಲೇ ತೃಪ್ತಿಯನ್ನು ಕಂಡು ಕೊಂಡಿದ್ದ ಲಕ್ಷ್ಮಮ್ಮನವರಾಗಲೀ, ನಾರಣಪ್ಪ ಮತ್ತು ಹೆಣ್ಣು ಮಕ್ಕಳಾಗಲೀ, ಜಗದೀಶ ಮತ್ತು ಸುಕನ್ಯರ ದಾಂಪತ್ಯ ಜೀವನಕ್ಕೆ ಯಾವ ರೀತಿಯಾದ ತೊಂದರೆಯಾಗಲೀ. ಅಡಚಣೆಯಾಗಲೀ ಇರಲಿಲ್ಲ. ಆದರೆ ಭೈರವನಿಗೆ ಮಾತ್ರ ತನ್ನ ಮತ್ತು ತನ್ನ ಯಜಮಾನನ ವಾತ್ಸಲ್ಯದ ಮಧ್ಯೆ ಮತ್ತೊಂದು ವ್ಯಕ್ತಿ ಪ್ರವೇಶ ಮಾಡಿದ್ದು ಅದರ ಮನಸ್ಸು ಒಪ್ಪಿಕೊಳ್ಳಲಿಲ್ಲ.

ಸುಕನ್ಯ ಮನೆಗೆ ಕಾಲಿಟ್ಟ ಘಳಿಗೆಯಿಂದಲೂ ಅವಳ ಮುಖ ಕಂಡರೆ ಬೊಗುಳುವುದು. "ಏನೋ ಹೊಸ ಮುಖ" ಕ್ರಮೇಣ ಹೊಂದಿ ಕೊಳ್ಳುತ್ತೆ ಎಂದು ಕೊಂಡರು. ದಿನ ಕಳೆಯುತ್ತಾ ಬಂದಂತೆ ಸುಕನ್ಯಾ ಜಗದೀಶನ ಹತ್ತಿರ ನಿಲ್ಲಬಾರದು, ಅವನನ್ನು ಮುಟ್ಟಬಾರದು. ಜೊತೆ ಯಾಗಿ ತಿರುಗಾಡಬಾರದು. ರಾತ್ರಿ ಹೊತ್ತು ಕಾಂಪೌಂಡಿನಲ್ಲಿ ಬಿಚ್ಚಿ ಬಿಟ್ಟಿದ್ದರೆ, ಜಗದೀಶನ ಕೋಣೆಯ ಕಿಟಕಿಯ ಬಳಿ ಬಂದು ಬೆಳಗಾಗುವ ತನಕ ಅಂದರೆ ಜಗದೀಶ ಆಫೀಸಿಗೆ ಹೋಗುವವರೆಗೂ ಬಾಯಿ ಮುಚ್ಚು ತ್ತಿರಲಿಲ್ಲ. ಈ ಕೋಪವನ್ನು ಮನಸ್ಸಿನಲ್ಲಿಟ್ಟುಕೊಂಡು ಸುಕನ್ಯನ ಯಾವುದೇ ಬಟ್ಟೆ ಸೀರೆ ಹೊರಗೆ ಒಣಹಾಕಿದ್ದರೆ, ಹರಿದು ಚಿಂದೀ ಮಾಡಿಬಿಡುತ್ತಿತ್ತು, ಸುಕನ್ಯ ಅದರ ಪ್ರೀತಿಯನ್ನೂ ಸಂಪಾದಿಸಲು, ಸಿಹಿಕೊಟ್ಟು ನೋಡಿದಳು. ಪ್ರೀತಿ ಮಾತನಾಡಿಸುತ್ತಿದ್ದಳು; ಅವಳು ಊಟ ಹಾಕಿದರೆ ಮೂಸಿಯೂ ನೋಡುತ್ತಿರಲಿಲ್ಲ! ಬರಬರುತ್ತಾ ಭೈರವನ ಬಗ್ಗೆ ಅಸಹ್ಯ, ಕೋಪ. ಮತ್ತು ಭಯ ಪ್ರಾರಂಭವಾಯಿತು. ಜಗದೀಶನ ಮುಂದೆ "ಈ ನಾಯಿ ಮುಂದೇದು ನನ್ಕಂಡ್ರೆ ಯಾಕೀಗಾಡತ್ತೇ? ಒಳ್ಳೇ

ಸ್ಥಾತಿಯನ್ನು ಕಂಡ ಹಾಗೆ! ಎಂದಾದರೂ ಆಕಸ್ಮಾತ್ತಾಗಿ ನಾನೊಬ್ಬಳೇ ಮನೆಯಲ್ಲಿದ್ದಾಗ ಇದರ ಕೈಗೆ ಸಿಕ್ಕಾಕಿಕೊಂಡರೆ ನನ್ನೇನ್ಮಾಡಿಬಿಡುತ್ತೋ!" ಎಂದು ಭಯವನ್ನು ವ್ಯಕ್ತಪಡಿಸಿದ್ದಳು.

ಮದುವೆಯಾಗಿ ಒಂದೂವರೇ ವರ್ಷದಲ್ಲೇ ಸುಕನ್ಯ "ಚಿತ್ರಾ" ಎಂಬ ಒಂದು ಹೆಣ್ಣು ಮಗುವನ್ನು ಹೆತ್ತು ಜಗದೀಶನಿಗೆ ಒಪ್ಪಿಸಿದಳು.

ಎಲ್ಲರಿಗೂ ಭೈರವನ ಮೇಲೆಯೇ ಒಂದು ಕಣ್ಣು. ಮಗುವಿನ ಬಗ್ಗೆ ಅವರ ಪ್ರತಿಕ್ರಿಯೆಯನ್ನು ಕಾದು ನೋಡುತ್ತಿದ್ದರು. ಆದರೆ ಭೈರವ ನಿಗೆ "ಚಿತ್ರ"ನನ್ನು ಕಂಡರೆ ಬಹು ಪ್ರೀತಿ ಜಗದೀಶ ಮಗುವನ್ನು ಎತ್ತಿ ಕೊಂಡು ಹತ್ತಿರ ಹೋದರೆ "ಕುಯ್ ಕುಯ್" ಎಂದು ಅದರ ಕಾಲಿಗೆ ತನ್ನ ಬಾಲವನ್ನು ಸವರಿ, ನೆಕ್ಕುತ್ತಿತ್ತು. ಅದರ ಬಟ್ಟೆಗಳೇನಾದರೂ ಗಾಳಿಗೆ ಹಾರಿಬಿದ್ದಿರೆ ಬಾಯಲ್ಲಿ ಕಚ್ಚಿ ಮನೆಯ ಮುಂದೆ ತಂದು ಹಾಕು ವುದು, ಆದರೆ ಸುಕನ್ಯಾ ಮಾತ್ರ ಮಗುವನ್ನು ಎತ್ತಬಾರದು. ಮುಟ್ಟ ಬಾರದು, ಅದರ ಕಣ್ಣಿಗೆ ಬೀಳುವವರೆಗೂ ಕಟ್ಟಿಹಾಕಿದ ಚೈನನ್ನು ಜಗ್ಗಿ ರೋಷದಿಂದ ಸುಕನ್ಯನ ಮೇಲೆ ಹಾರಲು ಹೋಗುವುದು. ಒಂದು ದಿನ ನಾರಣಪ್ಪ ಮತ್ತು ಲಕ್ಷ್ಮಮ್ಮ ರಮೇಶನ ಮನೆಗೆ ಹೋಗಿದ್ದರು. ಜಗದೀಶ ಕೋರ್ಟಿಗೆ ಹೋಗಿದ್ದ. ಹೋಗುವ ಮುನ್ನ ನಾಯಿಯನ್ನು ಕಟ್ಟಿಹಾಕಲು ಮರೆತು, ಸ್ನೇಹಿತನ ಸಂಗಡ ಮಾತನಾ ಡುತ್ತಾ ಹೊರಟು ಹೋಗಿದ್ದ, ಎಲ್ಲೋ ಕೂತಿದ್ದ. ಭೈರವ ಮಧ್ಯಾಹ್ನ ಅಂಚೆಯವನು ಬಂದಾಗ ಕಾಗದವನ್ನು ತೆಗೆದುಕೊಳ್ಳಲು ಸುಕನ್ಯಾ ಬಾಗಿಲು ತೆಗೆದ ಸಮಯದಲ್ಲಿ ಒಳಗೆ ನುಗ್ಗಿಬಿಟ್ಟಿತು, ಸುಕನ್ಯನಿಗೆ ಜಂಘಾಬಲವೇ ಉಡುಗಿ ಹೋಯಿತು. ಏನೂ ತೋರದೆ ಹೊರಗೆ ಬಂದು ಬಾಗಿಲನ್ನು ಭದ್ರವಾಗಿ ಹಾಕಿಕೊಂಡಳು. ಕಿಟಕಿಯಿಂದ ನೋಡಿದರೆ, ಮಗುವಿನ ತೊಟ್ಟಿಲ ಹತ್ತಿರ ಕೂತುಬಿಟ್ಟಿದೆ. ಮಗು ಎದ್ದು ಏನಾದರೂ ಅತ್ತರೆ ನಾಯಿ ಏನು ಮಾಡಿಬಿಡುವುದೋ ಎಂಬ ಭಯ, ಸುತ್ತಿನ ಯಾರ ಮನೆಯವರೂ ಸಹಾಯಕ್ಕೆ ಬರುವಷ್ಟು ಧೈರ್ಯ

ವಾಂತರಲ್ಲ. ಐದು ಘಂಟೆಗೆ ಜಗದೀಶ ಬರುವವರೆಗೂ ಏನು ಮಾಡು ವುದು? ಒಳಗೆ ಮಗು ಎಚ್ಚರಗೊಂಡು ಅಳುತ್ತಿದೆ ! ಹೊರಗೆ ಸುಕನ್ಯ ಅಳಲು ಪ್ರಾರಂಭಿಸಿದಳು ಅವಳ ಸಹನೆ ಮೀರಿತುನಾಯಿ ಮಾತ್ರ ಸುಕನ್ಯನನ್ನು ಕೂಗುವಂತೆ ಕಿಟಕಿಯ ಬಳಿ ಬಂದು ಬೊಗಳು ವುದು ಒಮ್ಮೆ ಹೋಗಿ ಮಗುವಿನ ಹತ್ತಿರಕೂಡವುದು, ಹೀಗೆ ಪರ ದಾಡಹತ್ತಿತು ಆದರೆ ಸುಕನ್ಯಳಿಗೆ ಬಾಗಿಲು ತೆಗೆದು ಒಳಗೆ ಬರುವ ಧೈರ್ಯವಾಗಲಿಲ್ಲ ಎಂದೂ ಇಲ್ಲದೆ ಅವತ್ತು ಅರ್ಧ ಘಂಟೆ ತಡವಾಗಿ ಜಗದೀಶ ಮನೆಗೆ ಬಂದ. ಮನೆಯ ಅವಸ್ಥೆಯನ್ನು ನೋಡಿ ಘಾಬರಿ ಯಾದ "ಏನೇ ಇದೂ" ಎಂದು ಸುಕನ್ಯಳನ್ನು ಕೇಳಿದ ದುಃಖ ಕೋಪ, ಕಟ್ಟೆ ಒಡೆದು ಬಂದಿತು. ಮೂರು ಘಂಟೆಯಿಂದ ಮಗೂಗೆ ಹಾಲಿಲ್ಲದೇ ಅತ್ತು ಸೊರಗಿ ನಿದ್ದೆ ಮಾಡಿದೆ. ಮೊದಲು ನಿಮ್ಮ ನಾಯಿ ಯನ್ನು ಕಟ್ಟಿಹಾಕಿ" ಎಂದು ಗದರಿದಳು, ಜಗದೀಶ ನಾಯಿಯನ್ನು ಕಟ್ಟಿಹಾಕಿದ ಮೇಲೆ ಒಳಗೆ ಬಂದವಳೇ ಒಂದು "ಸಣ್ಣ ಸೂಟ್‌ಕೇಸಿಗೆ" "ತನ್ನ ಮತ್ತು ಮಗುವಿನ ಬಟ್ಟೆಗಳನ್ನು ತುಂಬಲು ಹೊರಟಳು.

"ಇದೇನೆ ನಿನ್ನವಾಂತರ! ಕೂರೇಗ್ನೆದರ್ಕೊಂಡು ಸೀರೇ ಬಿಚ್ಚೆ ದರೂಂತನ್ನೊ ನಾಯಿಗ್ನೆದರ್ಕೊಂಡು ಅಬ್ಬರ ಮಾಡ್ತಿದೀಯಲ್ಲಾ" ಹಾಗೆ ಎಂದ ಜಗದೀಶ.

"ಇನ್ನೇನ್ಮಾಡ್ಬೇಕೊ? ನಾಲ್ಕುದಿನ ಅತ್ತೆಮ್ನೋರು. ಮನೆಬಿಟ್ಟು ಹೋದರೆ, ನಿಮಗೆ ಹೊತ್ತೊತ್ತಿಗೆ ತಿಂಡೀ ಊಟ ಮಾಡುವ ಹಾಗಿಲ್ಲ. ಮಗೂನ್ನೋಡುವಹಾಗಿಲ್ಲ! ಇದು ನಾಚಿಕ್ಕೇಡೇ ಸರಿ! ಈ ಕ್ಷಣ ನನ್ನ ಮಗೂನ ಕರ್ಕೊಂಡ್ಹೋಗಿನನ್ನಾಯಿ ಮನೇಲಿ ಬಿಟ್ಬಿಡಿ. ಆ ನಾಯಿ ಈ ಮನೆಯಲ್ಲಿರುವವರೆಗೂ ನಾನು ಬರುವುದಿಲ್ಲ" ಎಂದಳು ಸುಕನ್ಯ.

ಕೊರ್ಟಿನಲ್ಲೂ ಯಾವುದೋ ಕೇಸಿನ ವಿಷಯವಾಗಿ ಬೇಜಾರಾಗಿತ್ತು. ಹೊಟ್ಟೆಯೂ ಚುರುಗುಟುತ್ತಿತ್ತು. ಹೊಸ ಹೆಂಡತಿಯ ಕೈಯನ ತಿಂಡೀ ರುಚಿಯನ್ನು ಸವಿಯ ಬೇಕೆಂದು ಬಯಸಿ ಬಂದ ಜಗದೀಶನಿಗೆ ಸಿಕ್ಕಸ್ವಾಗತ ಬೇಜಾರಾಗಿ, ಬಟ್ಟೆಯನ್ನೂ ಬದಲಿಸದೆಹೋಗಿ

ಒಂದು ಆಟೋ ತಂದ. ಸುಕನ್ಯ ಪೆಚ್ಚಾದಳು. "ನೀನು ಹೋಗಿರು, ನಾನು ಬೆಳಿಗ್ಗೆ ಬರುತ್ತೇನೆ" ಎಂದು ಹೇಳಿ ತಾಯಿ ಮಗುವನ್ನು ಆಟೋ ಹತ್ತಿಸಿದ.

ರಾತ್ರಿ ಹೋಟಲಿನಲ್ಲಿ ಊಟ ಮಾಡಿ ಬಂದು, ಭೈರವನನ್ನು ಏನು ಮಾಡುವುದೆಂದು ಯೋಚಿಸಿದ. ತನ್ನ ಜೀವಕ್ಕೆ ಆಪ್ತವಾದ ಎರಡು ಜೀವಗಳು ತದ್ವಿರುದ್ಧ. ನಾಳೆ ಅಪ್ಪ ಅಮ್ಮ ಮನೆಗೆ ಬರುವ ವೇಳೆಗೆ ಸುಕನ್ಯ ಮತ್ತು ಮಗು ಮನೆಯಲ್ಲಿರದಿದ್ದರೆ ಇನ್ನೊಂದು ರಂಪವಾಗುತ್ತದೆ: ಬೆಳಗಾಗುವುದರೊಳಗೆ ಈ ಸಮಸ್ಯೆ ಪರಿಹಾರವಾಗಬೇಕು. ಬೆಳಗಾಗುವವರೆಗೂ ಹಾಸಿಗೆಯಲ್ಲಿ ಹೊರಳಾಡಿ. ಆರು ಘಂಟೆಗೆ ಸರಿಯಾಗಿ ಎದ್ದು ಕಾಫೀ ಮಾಡಿ ಕುಡಿದು, ತನ್ನ ಸಹಪಾಠಿಯಾಗಿದ್ದ ಸಬ್‌ಇನ್ಸ್‌ಪೆಕ್ಟರ್ ಅಂಜನೀ ಮನೆಯ ಹತ್ತಿರವಿದ್ದ ಠಾಣೆಯಲ್ಲಿದ್ದದ್ದು ಗೊತ್ತಿತ್ತು. ಭೈರವನಿಗೆ ಕೇಳಿದಷ್ಟು ಹಾಲು ಕುಡಿಸಿದ. ಠಾಣೆಗೆ ಕರೆ ದೊಯ್ದು, ನಾಯಿಯ ಕಥೆಯನ್ನೆಲ್ಲಾ ಅಂಜನಿಗೆ ಹೇಳಿ ಇಪ್ಪತ್ತು, ರೂಪಾಯಿಗಳನ್ನು ಕೈಗೆ ಕೊಟ್ಟು- "ಮಿಲಿಟರಿ ಹೋಟಲಿನಲ್ಲಿ ಇದಕ್ಕೆ ಹೊಟ್ಟೆತುಂಬಾ ಊಟಹಾಕಿಸಿ. ನಿದ್ದೆಮಾಡುತ್ತಿರುವಾಗ ನಿನ್ನ ಬಂದೂಕಿ.................. ..........ನಾಳೆ ನಾನ್ಬಂದ್ನೋಡ್ತೀನಪ್ಪ "ಎಂದು ಕಂಠ ಬಿಗಿದು. ಕಣ್ಣುಗಳನ್ನು ವರೆಸಿಕೊಳ್ಳುತ್ತಾ ನಾಯಿಯನ್ನೊಮ್ಮೆ ಮುದ್ದಾಡಿ ಕಣ್ಣು ತುಂಬಾ ನೋಡಿ, ಮತ್ತೆ ಹಿಂತಿರುಗಿ ನೋಡದೇ ನಡೆದು ಬಿಟ್ಟ.

......

# ಮುತ್ತಿನಂತ ಮಕ್ಕಳು

—ಸರೋಜ ನಾರಾಯಣರಾವ್

ಬಿಸಿಲಿಗೆ ಒಣಗಲು ಹಾಕಿದ್ದ ಕಟ್ಟಿಗೆ ತುಂಡುಗಳನ್ನು ಜೋಡಿಸಿ ಒಳಗಿಟ್ಟರು ಶಾಸ್ತ್ರಿಗಳು. ಆಗಸದ ತುಂಬ ಕಪ್ಪುಮೋಡ ಆವರಿಸಿತ್ತು. ಹೊಂಗೆಯ ಮರದ ಕೊಂಬೆಯ ಮೇಲೆ ಕುಳಿತು 'ಕಾ. ಕಾ.' ಎಂದು ಅರಚಿದ ಕಾಗೆಯನ್ನುದ್ದೇಶಿಸಿ ಶಾಸ್ತ್ರಿಗಳು, "ಯಾಕೆ ಹಾಗೆ ಕೂಗ್ತೀಯ ? ಇವತ್ತು ನಮ್ಮ ಮನೆಗೇನೂ ಯಾವ ನೆಂಟರೂ ಬರುವುದಿಲ್ಲ ಹೋಗು" ಎಂದರು. ಅದನ್ನು ಕೇಳಿಸಿಕೊಂಡ ಅವರ ಮಡದಿ ಅಚ್ಚಮ್ಮ.

"ಸೋಮು ಕಾಗದ ಬಂದು ಶಾನೆ ದಿನವಾಯ್ತು. ಇವತ್ತೇನಾದರೂ ಬರುತ್ತೋ ಏನೋ" ಎಂದರು

"ಬರಬಹುದು ಆಗಲೇ ಒಂದು ತಿಂಗಳ ಮೇಲಾಯ್ತು. ಇಬ್ಬರಿಂದಲೂ ಕಾಗದವಿಲ್ಲ ಏನೋ ಎಲ್ಲಾದರೂ ಸುಖವಾಗಿದ್ದರೆ ಸರಿ". ಎಂದುಕೊಂಡರು ಶಾಸ್ತ್ರಿಗಳು.

ದಪ್ಪದಪ್ಪ ಹನಿಗಳಿಂದ ಪ್ರಾರಂಭವಾದ ಮಳೆ ಹತ್ತೇನಿಮಿಷಗಳಲ್ಲಿ ಜೋರಾಯಿತು. ಹೆಂಚು ಬಿರುಕು ಬಿಟ್ಟಿದ್ದ ಎರಡು ಕಡೆಗಳಲ್ಲಿ ನೀರು ತೊಟ್ಟಿಕ್ಕ ತೊಡಗಿತು. ಶಾಸ್ತ್ರಿಗಳು "ಎರಡು ಪಾತ್ರೆ ತಗೊಂಡ್ಬಾ" ಎಂದರು. ಅಚ್ಚಮ್ಮ ಎರಡು ಡಬರಿಗಳನ್ನು ತಂದು. ನೀರು ಸೋರುತ್ತಿದ್ದ ಸ್ಥಳಗಳಲ್ಲಿಟ್ಟರು "ಉಗ್ರಾಣದಲ್ಲೂ ಎಲ್ಲಾದರೂ ಸೋರುತ್ತೇನೋ ನೋಡು "ಎಂದು ಮಡದಿಗೆ ಹೇಳಿ ಶಾಸ್ತ್ರಿಗಳು ಅಲ್ಲೇ ಕಂಬವನ್ನೊರಗಿ ಕುಳಿತರು

ದೃಷ್ಟಿತೊಟ್‌ತೊಟ್ ಎಂದುಸಪ್ಪಳ ಮಾಡುತ್ತ ಪಾತ್ರೆಯೊಳಕ್ಕೆ ಬೀಳುತ್ತಿದ್ದ ನೀರಿನಹನಿಗಳ ಕಡೆಗೆ ಇದ್ದರೂ ಮನಸ್ಸು ಎಲ್ಲೋ ಹೋಗಿತ್ತು.........

ಮಗ ಸೋಮು ಹಾಸ್ಟೆಲಿನಲ್ಲಿದ್ದುಕೊಂಡು ಇಂಟರಿನಲ್ಲಿ ಓದು ತ್ತಿದ್ದ.ಒಮ್ಮೆ ರಜೆಗೆ ಮನೆಗೆ ಬಂದಿದ್ದಾಗ ಹೀಗೇ ಮಳೆ ಹಿಡಿದು ಸೋರ ತೊಡಗಿದಾಗ,

ಅಪ್ಪಾ ನಾನು ಓದುಮುಗಿಸಿ ಕೆಲಸಕ್ಕೆ ಸೇರ್ಕೊಂಡಮೇಲೆ ಒಂದುಒಳ್ಳೆ ಮನೆ ಕಟ್ಟಿಸಿ ಅಮ್ಮನ್ನ, ನಿನ್ನ ಕರಕೊಂಡುಹೋಗಿ ಇಟ್ಕೋತೀನಿ "ಎಂದಿದ್ದ

ತಾಯಿ ಸಂತೋಷದಿಂದ, "ಕೇಳಿದಿರಾ ಅವನ ಮಾತು!" ಎಂದಿದ್ದರು ಶಾಸ್ತ್ರಿಗಳು ಮಾತ್ರ, "ಇದೂ ಒಳ್ಳೇ ಮನೇನೆ ಮಗೂ" ಎಂದಿದ್ದರು' ಗಾಳಿ ಬೆಳಕಿಗೆ ಸಾಕಷ್ಟು ಪ್ರವೇಶವಿಲ್ಲದ ಹಳೆಯ ಕಾಲದ ಹಳ್ಳಿ ಮನೆ ಯಾವರೇನು? ತಮ್ಮ ಸ್ವಂತ ದುಡಿಮೆ ಶ್ರಮಗಳಿಂದ ರೂಪುಗೊಂಡ ಮನೆ. ವಯಸ್ಸಾದ ಕಾಲಕ್ಕೆ ಯಾರ ಹಂಗೂ ಇಲ್ಲದೆ ನಿಲ್ಲಲು ಒಂದು ನೆಲೆ. ಕಾಳು ಉಣ್ಣಲು ನಾಲ್ಕುಭತ್ತ-ಅಷ್ಟನ್ನು ಮಾಡಿಕೊಂಡಿಲ್ಲವೇ ತಾವು?

"ನಿಮಗೇನು ಮುತ್ತಿನಂತಹ ಇಬ್ಬರು ಗಂಡು ಮಕ್ಕಳಿದ್ದಾರೆ. ವಯ ಸ್ಸಾದ ಕಾಲಕ್ಕೆ ಅವರೇ ನೋಡಿಕೊಳ್ತಾರೆ" ಎಂದು ಹೇಳುತ್ತಿದ್ದವರ ಮುಂದೆ ಶಾಸ್ತ್ರಿಗಳು ಮಾತಾಡದೆ ನಕ್ಕುಬಿಡುತ್ತಿದ್ದರು,

ಗೋಡಿನಲ್ಲಿದ್ದ ಹಳೆಯ ಗಡಿಯಾರ ಹನ್ನೆರಡು ಬಾರಿ 'ಢಣ್ ಢಣ್' ಎಂದು ಬಡಿಯಿತು,

"ಊಟಕ್ಕೇಳಿ ಎಲೆ ಹಾಕಿದೀನಿ" ಎಂದರು ಅಚ್ಚಮ್ಮ ಮಳೆ ಹವೆ. ರುಚಿಕರವಾದ, ಬಿಸಿಬಿಸಿಯಾದ ಸೌತೇಕಾಯಿಹುಳಿ, ನೆಂಚಿಕೊಳ್ಳಲು ಬಾಳಕ ತುಂಬಾ ಹಿತವಾಗಿತ್ತು. ಇರುಚಲಿನ ಕಾಟಕ್ಕೆ ಇದ್ದ ಒಂದು ಕಿಟಕಿಯನ್ನೂ ಓರೆ ಮಾಡಿದ್ದರು ಅಚ್ಚಮ್ಮ. ಸೊಸೆ ಮನೆಗೆಬಂದಿದ್ದಾಗ ಅವಳಿಗೆ, ಈಕತ್ತಲೆ ಮನೆಯಲ್ಲಿ ಕುಳಿತು ಊಟ ಮಾಡುವುದಾದರೂ ಹೇಗೆ? ಮೆಣಸಿನಕಾಯಿ ಆರಿಸಿ ತೆಗೆದಿಡಲು ಬೆಳಕು ಸಾಲದಲ್ಲಾ ಎನಿಸಿತ್ತು. ಆದರೆ ಶಾಸ್ತ್ರಿಗಳಿಗಾಗಲೀ

ಅಚ್ಚಮ್ಮನಿಗಾಗಲೀ ಆ ಸಮಸ್ಯೆ ಇರಲಿಲ್ಲ. ಇಳಿವಯಸ್ಸಿನಲ್ಲೂ ಅವರ ದೃಷ್ಟಿ ಚುರುಕಾಗಿತ್ತು. ಮಬ್ಬು ಬೆಳಕಿನಲ್ಲೂ ಅವರಿಗೆ ಎಲ್ಲವೂ ಸ್ಪಷ್ಟ ವಾಗಿ ಕಾಣುತ್ತಿತ್ತು. ಶಾಸ್ತ್ರಿಗಳ ಎಲೆಗೆ ಮೊಸರು ಬಡಿಸುತ್ತಿದ್ದಾಗ ಆಚೆ ಬಾಗಿಲು ಬಡಿದ ಶಬ್ದವನ್ನು ಆಲಿಸಿ ಅಚ್ಚಮ್ಮ.

"ಯಾರೋ ಬಂದ ಹಾಗಿದೆ" ಎಂದರು.

"ರಾಯ್ರೋ ..." ರಾಮಯ್ಯನ ದನಿ.

ಅಚ್ಚಮ್ಮ ಕೈತೊಳೆದು ಸೀರೆಯ ಸೆರಗಿಗೇ ಒರೆಸಿಕೊಂಡು ಹೋಗಿ ಬಾಗಿಲು ತೆಗೆದರು.

ರಾಮಯ್ಯ ಎರಡು ಕಾಗದಗಳನ್ನು ತೆಗೆದು ಮೇಜಿನ ಮೇಲಿಟ್ಟ. ಮಳೆಯ ರಭಸ ಕಡಿಮೆಯಾಗಿತ್ತು.

"ಊಟ ಮಾಡ್ತಾ ಇದಾರೆ, ಕೂತ್ಕೋ ರಾಮಯ್ಯ" ಎಂದು ಹೇಳಿ ಒಳಗೆ ಬಂದು ಅಚ್ಚಮ್ಮ ಒಂದು ಎಲೆಯಲ್ಲಿ ಅನ್ನ-ಹುಳಿ ಕಲೆಸಿ ತೆಗೆದುಕೊಂಡು ಬಂದು ಅವನ ಮುಂದೆ ಇಟ್ಟರು. "ಯಾವಾಗ ಬಂದರೂ ಅಮ್ಮ ನನ್ನನ್ನು ಹಾಗೇ ಕಳಿಸೋದಿಲ್ಲ". ಎನ್ನುತ್ತ ಎಲೆಯನ್ನು ಕೈಗೆತ್ತಿ ಕೊಂಡ ರಾಮಯ್ಯ. "ಮಕ್ಕಳ ಕಾಗದ ರಾಯ್ರೋ" ಊಟ ಮುಗಿಸಿ ಬಂದ ಶಾಸ್ತ್ರಿಗಳಿಗೆ ಹೇಳಿದ ರಾಮಯ್ಯ.

"ಹೂಂ ತಿಂಗಳಾಗಿತ್ತಪ್ಪ ಆಗಲೆ". ಎನ್ನುತ್ತ ಶಾಸ್ತ್ರಿಗಳು ಕಾಗದ ಗಳನ್ನು ಕೈಗೆತ್ತಿಕೊಂಡರು. ರಾಮಯ್ಯ. "ಬರ್ತೀನಿ ರಾಯ್ರೋ" ಎನ್ನುತ್ತ ಕೊಡೆಯನ್ನು ತೆಗೆದುಕೊಂಡು ಎದ್ದುನಿಂತ, ಶಾಸ್ತ್ರಿಗಳು ಆಚೆ ಜಗುಲಿಯ ವರೆಗೆ ಬಂದರು. ಮಳೆ ಪೂರ್ತಿಯಾಗಿ ನಿಂತಿತ್ತು.

ಕಿರಿಯ ಮಗ ಜಯರಾಮು ಅಮೆರಿಕದಿಂದ ಬರೆದಿದ್ದ. ಅಲ್ಲಿಗೆ ಅವನು ಹೋಗಿ ಆಗಲೆ ಏಳು ವರ್ಷಗಳಾಗಿ ಹೋಗಿದ್ದವು. ಜಯು

ರಾಮು-ಯಾವಾಗಲೂ ತರಗತಿಯಲ್ಲಿ ಮುಂದು. ಪರೀಕ್ಷೆಗಳಲ್ಲೆಲ್ಲ ಮೊದಲದರ್ಜೆಯಲ್ಲೇ ಉತ್ತೀರ್ಣನಾಗುತ್ತ ಬಂದಿದ್ದ. ಹೆಚ್ಚಿನ ವ್ಯಾಸಂಗಕ್ಕೆ ಅಮೆರಿಕೆಗೆ ತೆರಳಿದವನಿಗೆ ವ್ಯಾಸಂಗ ಮುಗಿದಮೇಲೆ ಅಲ್ಲೇ ನೌಕರಿ ದೊರೆತಿದ್ದಿತು, ಮಗನ ಯೋಗ್ಯತೆಗೆ ತಕ್ಕಂತೆ ಮನ್ನಣೆ, ಪುರಸ್ಕಾರ ದೊರೆಯಿತೆಂದು ಹಿಗ್ಗುತ್ತಿದ್ದ ಶಾಸ್ತ್ರಿಗಳಿಗೆ ಮುಂದೆ ಅವನಿಂದ ಬಂದ ಒಂದು ಪತ್ರ ಬಲವಾದ ಪೆಟ್ಟಾಯಿತು. ತಂದೆ ತಾಯಿಯರಲ್ಲಿ ಕ್ಷಮೆ ಯಾಚಿಸಿ ವಿಷಯವನ್ನು ತಿಳಿಸಿದ್ದ-ತಾನು ಅಲ್ಲೇ ಒಂದು ಹುಡುಗಿಯನ್ನು ಮದುವೆಯಾಗಿರುವುದಾಗಿ. ಅಚ್ಚಮ್ಮ ಅದನ್ನು ತುಂಬಾ ಮನಸ್ಸಿಗೆ ಹಚ್ಚಿಕೊಂಡು ಕೊರಗಿ ಕೃಶವಾದರು. ಬಂಧುವರ್ಗದವರಲ್ಲಿ ಇವರ ಅಭಿವೃದ್ಧಿಯನ್ನು ಕಂಡು ಕರುಬುತ್ತಿದ್ದರು ಹಿಂದೆ ಮುಂದೆ ಆಡಿಕೊಂಡು ನಕ್ಕರು. ಶಾಸ್ತ್ರಿಗಳಿಗೂ ಬೇಸರವಾಗಿದ್ದಿತಾದರೂ, "ನಮ್ಮ ಕೈಲೇನಿದೆ. ಎಲ್ಲಾ ಅವನ ಆಟ" ಎಂದು ಹೇಳುತ್ತ ಸಮಾಧಾನವನ್ನು ತಂದುಕೊಳ್ಳ ಲೆತ್ನಿಸುತ್ತಿದ್ದರು. ಜಯರಾಮುವಿಗೆ ಎರಡು ಮಕ್ಕಳಾಗಿದ್ದವು, ಆಗಾಗ ಪತ್ರ ಬರೆಯುತ್ತಿದ್ದ. ಮಡದಿ ಮಕ್ಕಳ ಭಾವಚಿತ್ರಗಳನ್ನು ಕಳಿಸಿದ್ದ. ಆದರೆ ಭಾರತಕ್ಕೆ ಮರಳಿ ಬರುವ ಇಚ್ಛೆಯನ್ನು ವ್ಯಕ್ತಪಡಿಸಲಿಲ್ಲ. ಶಾಸ್ತ್ರಿಗಳೂ 'ಬಾ' ಎಂದು ಬರೆದಿರಲಿಲ್ಲ.

ಸೋಮುವಿನ ಪತ್ರ ನಾಲ್ಕು ಸಾಲಿನದು, ನಾವು ಕ್ಷೇಮ. ನಿಮ್ಮ ಕ್ಷೇಮ ತಿಳಿಸಿ ಮಾತೃಶ್ರೀಯವರಿಗೆ ನಮಸ್ಕಾರಗಳು. ಹೀಗೆ ಲೋಕಾಭಿರಾಮದ ನಾಲ್ಕು ಮಾತು, ಕಾಗದಗಳನ್ನು ಮಾಡಿಸಿ ಕನ್ನಡಿಯ ಹಿಂದೆ ಸಿಕ್ಕಿಸಿ, ಶಾಲು ಹೊದ್ದು ಶಾಸ್ತ್ರಿಗಳು ಮಂಚದ ಮೇಲೆ ಅಡ್ಡಾದರು. ಮಳೆ ನಿಂತಿದ್ದರೂ ಹೆಂಚಿನಿಂದ ನೀರು ತೊಟ್ಟಿಕ್ಕುತ್ತಲೇ ಇತ್ತು.

ಸೋಮುವಿಗೆ ಕೆಲಸವಾದ ಹೊಸದರಲ್ಲಿ ಮೂರು ನಾಲ್ಕು ಜನ ಬ್ರಹ್ಮಚಾರಿಗಳು ಸೇರಿ ಒಂದು ಮನೆ ಮಾಡಿಕೊಂಡು ಒಬ್ಬ ಅಡಿಗೆ ಯವನನ್ನಿಟ್ಟುಕೊಂಡಿದ್ದರು. ಒಂದು ವರ್ಷದ ಮೇಲೆ ಅವನಿಗೆ ಪ್ರತ್ಯೇಕವಾದ ಕ್ವಾರ್ಟರ್ಸ್ ಸಿಕ್ಕಿತ್ತು. ಸೋಮು ಉತ್ಸಾಹದಿಂದ

ತಂದೆಗೆ ಹೇಳಿದ್ದ, "ಮನೆ ಅನುಕೂಲವಾಗಿ ಚೆನ್ನಾಗಿದೆ. ಇಬ್ಬರೇ ಈ ಹಳ್ಳಿ ಕೊಂಪೆಯಲ್ಲಿ ಒದ್ದಾಡುವ ಬದಲು ಹಾಯಾಗಿ ಬಂದು ನನ್ನ ಜೊತೆ ಇರಿ "ಎಂದು.

ಆಗ ಜಯರಾಮು ಇನ್ನೂ ಓದುತ್ತ ಬೆಂಗಳೂರಿನಲ್ಲಿದ್ದ. ಶಾಸ್ತ್ರಿಗಳು ಮನಸ್ಸು ಮಾಡಿದ್ದರೆ ಹೋಗಬಹುದಾಗಿತ್ತು. ಸಾಕಷ್ಟು ಕಷ್ಟ ಸುಖಗಳನ್ನು ಅನುಭವಿಸಿದ್ದವರು ಅವರು. ಪೂರ್ವಾಪರ ಆಲೋಚನೆ ಇಲ್ಲದೆ ತಟ್ಟನೆ ನಿರ್ಣಯಿಸುವ ಸ್ವಭಾವದವರಲ್ಲ. ಅಚ್ಚಮ್ಮನವರಿಗೇನೋ ಆಸೆ, ಉತ್ಸಾಹದಿಂದ ಕರೆಯುತ್ತಿರುವ ಮಗನೊಂದಿಗೆ ಹೊರಟರೂ ಆದೀತು. ಎಲ್ಲೋ ಕಾಡುಮೇಡಿನಲ್ಲಿ, (ಸಾವಿರ ಮನೆಗಳಿದ್ದ ಕಾಲೋನಿ ಅವರ ಪಾಲಿಗೆ ಕಾಡು! ) ಒಬ್ಬನೇ ಇದ್ದಾನೆ. ಇನ್ನೂ ಎರಡು ವರ್ಷ ಮದುವೆ ಬೇಡವೆನ್ನುತ್ತಾನೆ. ನಾವೇ ಹೋಗಿ ಇರಬಹುದು ಎನ್ನಿಸಿತ್ತು.

ಶಾಸ್ತ್ರಿಗಳು ಮಾತ್ರ, "ನೋಡೋಣ. ನೋಡೋಣ," ಆಗಾಗ, ಜಯರಾಮು ಬರ್‍ತಿರ್‍ತಾನೆ ಅವನೂ ಓದುಮುಗಿಸಿ ಒಂದು ದಡ ಸೇರಲಿ. ಆಮೇಲೆ ಯೋಚನೆ ಮಾಡೋಣ "ಎಂದು ನಿಧಾನವಾಗಿ ಉತ್ತರಿಸಿದ್ದರು,

ಮುಂದೆ ಸೋಮುವಿನ ಮದುವೆಯಾಗಿತ್ತು, ವಿಮಲ ಓದಿದ ಹುಡುಗಿ. ದೂರದ ಊರಿಗೆ ಹೋಗಿ ಹೊಂದಿಕೊಂಡು ನಿಭಾಯಿಸುವ ಛಾತ್ಟೀಕವಿದ್ದವಳು.

ಜಯರಾಮುವಿನ ವ್ಯಾಸಂಗ ಮುಗಿದು ಅವನು ವಿದೇಶಕ್ಕೆ ತೆರಳಿದ ಮೇಲೆ ಶಾಸ್ತ್ರಿಗಳಿಗೆ, "ಎಲ್ಲವೂ ಒಂದು ಹದಕ್ಕೆ ಬಂದಿತು. ಈಗ ಸೋಮು ಕರೆದರೆ ಹೋಗಬಹುದು" ಎನಿಸಿತು.
ಅಚ್ಚಮ್ಮ, "ವಯಸ್ಸಾಯ್ತು ಸ್ವಸ್ಥವಾಗಿ ಹೋಗಿ ಮಗನ ಮನೇಲಿ ಇದ್ದು ಬಿಡೋಣ. ನನಗೂ ಈ ನಡುವೆ ಏನೂ ಕೈಲಾಗುವುದಿಲ್ಲ" ಎಂದಿದ್ದರು.

ಆ ಸಲ ಬೇಸಿಗೆಯಲ್ಲಿ ಸೋಮು ಬರಲಿಲ್ಲ. ಶಾಸ್ತ್ರಿಗಳು ತಾವಾಗಿ ಇಚ್ಛೆಯನ್ನು ವ್ಯಕ್ತಪಡಿಸಿ ಪತ್ರ ಬರೆದಾಗ "ಇಲ್ಲಿ ಬೇಸಿಗೆ ಬಲು ತೀಕ್ಷ್ಣ. ಛಳಿಗಾಲದಲ್ಲಿ ವಿಪರೀತ ಛಳಿ. ನಿಮಗೆ ಹವ ಒಗ್ಗುವುದೋ ಇಲ್ಲವೋ ತಿಳಿಯದು. ಅಮ್ಮನಿಗೆ ಮಡಿ ಮೈಲಿಗೆಗೂ ಅನುಕೂಲವಿಲ್ಲ." ಎಂದು ಬರೆದಿದ್ದ. ಕೇವಲ ಎರಡು ವರ್ಷಗಳ ಹಿಂದೆ ಹವೆಯೂ ಚೆನ್ನಾಗಿದ್ದು ಮಡಿಗೂ ಅನುಕೂಲವಾಗಿದ್ದುದು ಈಗ ಎಲ್ಲಾ ಬದಲಾಗಿಹೋಯಿತೇ ಎಂದುಕೊಂಡರು ಅಚ್ಚಮ್ಮ. ಬದಲಾದದ್ದು ಊರಲ್ಲ ನಮ್ಮ ಮಗನ ಮನಸ್ಸು ಎಂದರು ಶಾಸ್ತ್ರಿಗಳು. ಮುಂದೆ ಎಂದೂ ಶಾಸ್ತ್ರಿಗಳು ಹಳ್ಳಿಯನ್ನು ಬಿಡುವ ಯೋಚನೆಯನ್ನು ಮಾಡಲಿಲ್ಲ. ಮಗನ ಮನೆಗೆ ಹೋಗಿ ಇರಬೇಕೆಂದಾಗಲೀ. ಮಗ ತಮಗೆ ಹಣ ಕಳಿಸಲಿ ಎಂದಾಗಲೀ ಅವರು ಬಯಸಲಿಲ್ಲ. ಹಳ್ಳಿಯಲ್ಲೇ ಹಲವರ ಮಕ್ಕಳು ದೂರ ದೂರ ಊರುಗಳಲ್ಲಿ ಕೆಲಸದಲ್ಲಿದ್ದರು. ಕೆಲವರಿಗೆ ತಪ್ಪದೆ ಪ್ರತಿತಿಂಗಳೂ ಹಣ ಬರುತ್ತಿತ್ತು. ಭೀಮಯ್ಯನ ಮಗ ಬೆಂಗಳೂರಿನ ಕಾಲೇಜಿನಲ್ಲಿ ಲೆಕ್ಚರರ್ ಆಗಿದ್ದು ಪ್ರತಿತಿಂಗಳೂ ತಪ್ಪದೆ ಐವತ್ತು ರೂಪಾಯಿ ಕಳಿಸುತ್ತಿದ್ದ.

"ಸೋಮಪ್ಪನಿಗೆ ಸಾವಿರಾರು ರೂಪಾಯಿ ಬರ್‍ತದಂತೆ ಎಷ್ಟು ಕಳಿಸ್ತಾನೆ?" ಎಂದು ಅವನು ಎಷ್ಟೋ ಸಲ ಕೇಳಿದ್ದ. ಸೋಮು ತನ್ನ ಮೊದಲನೆ ತಿಂಗಳ ಸಂಬಳದಲ್ಲಿ ನೂರು ರೂಪಾಯಿ ಕಳಿಸಿದ ಶಾಸ್ತ್ರಿಗಳು ಅದರಲ್ಲಿ ಹಳ್ಳಿಯ ಗಣಪತಿ ದೇವಾಲಯದಲ್ಲಿ ಉತ್ಸವ ಮಾಡಿಸಿದ್ದರು. ಮುಂದೆ ಅವನು ಕಳಿಸಿದ ಹಣವನ್ನು ಹಾಗೇ ಇಟ್ಟು ಅವನ ಮದುವೆಯಲ್ಲಿ ಸೊಸೆಗೆ ಅದರಲ್ಲೇ ಆಭರಣ ಮಾಡಿಸಿ ಹಾಕಿದ್ದರು.

ಆಗೀಗ ಐವತ್ತೋ, ಮೂವತ್ತೋ ಬರುತ್ತಿದ್ದುದು ಇತ್ತೀಚೆಗೆ ಎಲ್ಲವೂ ನಿಂತು ಹೋಗಿತ್ತು. ಇಬ್ಬರ ಸಂಸಾರಕ್ಕಾಗಿ ಶಾಸ್ತ್ರಿಗಳು ಮಗನ ಮುಂದೆ ಕೈಒಡ್ಡುವ ಅಗತ್ಯವಿರಲಿಲ್ಲ.

ಶಾಸ್ತ್ರಿಗಳು ಎದ್ದು ಕುಳಿತರು. ಅಚ್ಚಮ್ಮ ಅದಕ್ಕಾಗಿಯೇ ಕಾದು ಕುಳಿತಿದ್ದವರಂತೆ, "ಏನು ಬರೆದಿದ್ದಾನೆ ಸೋಮು ಹೇಳಲೇ ಇಲ್ವಲ್ಲಾ

ನಾನು ಊಟ ಮಾಡಿ ಬರೋ ಹೊತ್ತಿಗಾಗಲೇ ನಿಮಗೆ ಕಣ್ಣು ಹತ್ತಿತ್ತು." ಎಂದರು.

"ಇನ್ನೇನು ಅದೇ ಮಾಮೂಲು ಕ್ಷೇಮ ಸಮಾಚಾರ"

"ಮಕ್ಕಳು ಹುಷಾರಾಗಿವೆಯಂತೋ?"

"ಎಲ್ಲರೂ ಕ್ಷೇಮ ಅಂತ ಬರೆದಿದ್ದಾನೆ. ಎಲ್ಲರೂ ಅಂದರೆ ಮಕ್ಕಳೂ ಸೇರಿ ಕೊಳ್ಳುತ್ವಲ್ಲ?"

"ಸರಿ" ಎಂದರು ಅಜ್ಜಮ್ಮ. ಮುಂದೆ ಕೇಳುವುದೇನೂ ಉಳಿಯಲಿಲ್ಲ. ಮಳೆ ನೀರು ಸೋರಿನಿಂತಿದ್ದ ಪಾತ್ರೆಗಳನ್ನು ತೆಗೆದಿಟ್ಟು ಸುತ್ತಲೂ ಹಾರಿದ್ದ ನೀರನ್ನು ಬಟ್ಟೆ ತಂದು ಒರೆಸಿದರು.

ಹೋದವರ್ಷ ಹೆಂಚನ್ನು ಕೈ ಆಡಿಸಿ ಮನೆಗೆ ಅಗತ್ಯವಾದ ಕೆಲವು ಕಾಮಗಾರಿ ಕೆಲಸವನ್ನು ಮಾಡಿಸಬೇಕೆಂದು ಹಣವನ್ನು ಕೂಡಿಸಿಟ್ಟು ಕೊಂಡಿದ್ದರು. ಅದೇ ಸಮಯಕ್ಕೆ ಸೋಮುವಿನ ಕಾಗದ ಬಂದಿತ್ತು. "ಬೆಂಗಳೂರಿನಲ್ಲಿ ಸೈಟ್ ಕೊಂಡು ಮನೆ ಕಟ್ಟಿಸುತ್ತಿದ್ದೇನೆ.

ಸರ್ಕಾರದವರು ಕೊಟ್ಟ ಸಾಲ. ಕೈಯಲ್ಲಿದ್ದ ಹಣ ಎಲ್ಲಾ ಕೂಡಿಸಿದರೂ ಕೊನೆಯ ಎರಡು ಸಾವಿರ ಸಾಲದೆ ಬಂದಿದೆ. ಹೇಗಾದರೂ ಮಾಡಿ ಕಳಿಸಿಕೊಡಿ"

ಶಾಸ್ತ್ರಿಗಳು ಪಣ ಕಳಿಸಿಕೊಟ್ಟರು. ಸೋಮುವಿನ ಆಧುನಿಕ ರೀತಿಯ ಮನೆ ಮುಗಿಯಿತು. ಅವನಿಗೆ ಕೈ ತುಂಬಾ ಬಾಡಿಗೆಯೂ ಬರತೊಡಗಿತು.

ಕೈ ಬರಿದಾಯಿತೆಂದು ಶಾಸ್ತ್ರಿಗಳು ಕೊರಗಲಿಲ್ಲ. ಮಕ್ಕಳು ಸುಖ ವಾಗಿದ್ದರೆ ಸರಿ ನಮಗೇನು ಹೇಗೋ ಕಾಲ ಹಾಕಿದರಾಯ್ತು ಎಂಬ ಧೋರಣೆ.

"ಆರೋಗ್ಯವೆ ಮಾವಯ್ಯಾ ? "

ನೇರವಾಗಿ ಒಳಗೆ ಬಂದವನು ನೆರೆಹಳ್ಳಿಯ ಶಾಮಭಟ್ಟರ ಮಗ ಶೀನು. "ಬಾರಯ್ಯ ಶೀನು. ಅಣ್ಣ ಬರಲಿಲ್ವೇ? ಒಬ್ಬನೇ ಬಂದೆಯಾ? ಎಂದರು ಶಾಸ್ತ್ರಿಗಳು.

ಅಚ್ಚಮ್ಮ, 'ಬೆಳಿಗ್ಗೆ ಕಾಗೆ ಕೂಗಿದಾಗಲೇ ನಾನು ಅಂದ್ಕೊಂಡೆ, ಯಾರಾದ್ರೂ ಬಂದೇ ಬರ್ತಾರೆ ಅಂತ" ಎಂದು ಸಂಭ್ರಮದಿಂದ ಹೇಳಿದರು.

ಶೀನು. "ಒಂದು ತಟ್ಟೆಕೊಡಿ ಅತ್ತೆ" ಎಂದ

ಕೈ ಚೀಲದಿಂದ ತೆಂಗಿನಕಾಯಿ ಗಾತ್ರ ಲಾಡು ಉಂಡೆ, ವಡೆ ಕಲ್ಲು ಸಕ್ಕರೆ ಇತ್ಯಾದಿಗಳನ್ನೆಲ್ಲ ತೆಗೆದಿಟ್ಟ.

"ತಿರುಪತಿಗೆ ಹೋಗಿದ್ವಿ. ಪ್ರಸಾದ ಕೊಟ್ಟು ಬಾ ಅಂದರು ಅಣ್ಣ." ಎಂದ ಅಚ್ಚಮ್ಮ ತಟ್ಟೆಯನ್ನೇ ತೆಗೆದು ಕಣ್ಣಿಗೆ ಒತ್ತಿಕೊಂಡು ದೇವರ ಮುಂದೆ ಇಟ್ಟು ಬಂದರು. ಶೀನುವಿಗೆ ಹಾಲು-ಬಾಯಿ, ಅಕ್ಕಿಫೇಣಿಯ ಆತಿಥ್ಯವಾಯಿತು.

"ಇನ್ನು ಬರ್ತೀನಿ" ಎಂದು ಅವನು ಎದ್ದಾಗ ಶಾಸ್ತ್ರಿಗಳು, "ಉಂಟೇ? ಮಳೆ ಬರುವ ಹಾಗೇ ಇದೆ ಕತ್ತಲೆಯಾಗ್ತಾ ಬಂತು ಇಲ್ಲೇ ಇದ್ದು ನಾಳೆ ಬೆಳಿಗ್ಗೆ ಹೊರಡು" ಎಂದು ಹೇಳಿ ಆಗ್ರಹ ಮಾಡಿ ಉಳಿಸಿಕೊಂಡರು.

ಲಾಟೀನು ಮಂಕಾಗಿ ಉರಿಯುತ್ತಿತ್ತು. ಗೋಡೆಯ ಮೇಲೆ ಅಸ್ಪಷ್ಟವಾದ ನೆರಳುಗಳು ಕುಣಿಯುತ್ತಿದ್ದುವು. ಶಾಸ್ತ್ರಿಗಳು ಶೀನುವನ್ನು ಕುರಿತೇ ಯೋಚಿಸುತ್ತಿದ್ದರು.

ಅವನಿಗೆ ಶಾಲೆಯ ಓದು ತಲೆಗೆ ಹತ್ತಲಿಲ್ಲ, ಆದರೇನು ತಂದೆಯ ಜೊತೆಗೂ ದುಡಿಯುತ್ತಿದ್ದ. ವಯಸ್ಸಾದ ಕಾಲವಲ್ಲಿ ತಂದೆಗೆ ಜವಾ

ಬ್ಯಾರಿಗಳನ್ನು ಕಡಿಮೆ ಮಾಡಿದ್ದ. ತೋಟ, ಗದ್ದೆಗಳ ಫಲ ಇತ್ತೀಚಿನ ವರ್ಷಗಳಲ್ಲಿ ಇಮ್ಮಡಿಸಿತ್ತು.

"ಮಾವಾ......"

"ಏನಪ್ಪ ಶೀನು ?"

ಅವನ ದೃಷ್ಟಿ ಗೋಡೆಯ ಕಡೆಗಿತ್ತು. ಅಲ್ಲಿ ದೇವರ ಪಟಗಳ ಜೊತೆಗೇ ತೂಗಾಡುತ್ತಿದ್ದವು ಜಯರಾಮು, ಸೋಮು, ಅವರ ಚಿತ್ರಗಳು. ಕಾನ್ವೊಕೇಶನ್‌ನಲ್ಲಿ ತೆಗೆಸಿದ್ದವು.

ಮಾವ, ಅಣ್ಣ ಹೇಳ್ತಾನೇ ಇರ್ತಾರೆ, ನೀವು ತುಂಬಾ ಪುಣ್ಯವಂತರು. ಎಂಥಾ ಮುತ್ತಿನಂತಹ ಮಕ್ಕಳು. ಒಳ್ಳೇ ವಿದ್ಯಾವಂತರು ದೊಡ್ಡ ದೊಡ್ಡ ಕೆಲಸಗಳು ಅಂತ".

ಹೆಂಚಿನ ಮೇಲೆ ಟಪ್ ಟಪ್ ಎಂದು ಹನಿಗಳು ಸಪ್ಪಳ ಮಾಡಿದವು. ಅಜ್ಜಮ್ಮ ಮಬ್ಬು ಬೆಳಕಿನಲ್ಲಿ ಸ್ವಲ್ಪವೂ ತಡವರಿಸದೆ ಹೋಗಿ ಎರಡು ಪಾತ್ರೆಗಳನ್ನು ತಂದು ಸೋರುವ ಕಡೆ ಇಟ್ಟರು.

ಶಾಸ್ತ್ರಿಗಳು ಶೀನುವನ್ನು ತಿರುಪತಿಯಾತ್ರೆಯ ಬಗ್ಗೆ ವಿಚಾರಿಸಿದರು. ತೋಟ ತೆಂಗಿನಕಾಯಿ ಬೆಲೆಗಳ ಬಗ್ಗೆ ಮಾತಾಡಿದರು. ನಂಜನಗೂಡಿನಲ್ಲಿದ್ದ ಅವನ ಅಕ್ಕನ ಯೋಗಕ್ಷೇಮ ಕೇಳಿದರು.

ಅವರಿಗೆ ನಿದ್ದೆ ಹತ್ತುವ ವೇಳೆಗೆ ಮತ್ತೆ ಮಳೆ ಜೋರಾಗಿತ್ತು. ತೊಟ್ ತೊಟ್ ಎಂದು ಒಂದೊಂದೇ ಹನಿ ಪಾತ್ರೆಯೊಳಕ್ಕೆ ಬೀಳುತ್ತಿತ್ತು.

೦ ೦೦ ೦

## ಅಧ್ಯಾಯ–೫

# ಕಟ್ಟಿಟ್ಟ ವೈಧವ್ಯ

—ಎಸ್. ಮಂಗಳಾ ಸತ್ಯನ್

ಸರಿದು ಹೋದ ಇರುಳಿನ ನೆನಪೆಂಬಂತೆ ಆಗಸದಲ್ಲಿ ಇನ್ನೂ ಅಲ್ಲೊಂದು ಇಲ್ಲೊಂದು ತಾರೆಗಳು ಮಿನುಗುಟ್ಟುತ್ತಿವೆ. ಆಗ ತಾನೆ ಗೂಡು ತೊರೆದ ಹಕ್ಕಿಗಳು ಭಾನುವಪ್ಪಿ ನಡೆದಿದೆ. ಹೆಣ್ಣುಮಕ್ಕಳು ಪೈಪೋಟಿ ಎಂಬಂತೆ ಮನೆಯ ಮುಂದೆ ಸಾರಣೆ, ಕಾರಣೆ ಮಾಡಿ ರಂಗವಲ್ಲಿಗಳನ್ನು ಹಾಕುತ್ತಿದ್ದಾರೆ.

"ಜೈ ಜೈ ವಿಠ್ಠಲ ಪಾಂಡುರಂಗಾ-ಜಯಹರಿ ವಿಠ್ಠಲ ಪಾಂಡು ರಂಗಾ" ಎಂದು ಭಜನೆ ಮಾಡುತ್ತಾ, ಪ್ರೇಮಾನಂದಜೀಯವರು ಗಂಭೀರವಾಗಿ ನಡೆದು ಹೊಳೆಯ ಕಡೆಗೆ ಹೋಗುತ್ತಿದ್ದರು. ಆ ನಿಶಬ್ದ ವಾತಾವರಣದಲ್ಲಿ ದೂರದಲ್ಲಿನ ಅವರ ಬರುವಿಕೆಯನ್ನು ತಿಳಿಸುವಂತೆ ಗಾಳಿಯ ಅಲೆ ಅವರ ಕಂಠನಾದವು ತೇಲಿಬಂದಿತ್ತು.

ಜೈ ಜೈ ವಿಠ್ಠಲ ಪಾಂಡುರಂಗಾ....ಭಜನೆಯ ಸ್ವರ ಹತ್ತಿರವಾದಂತೆ ಸಾರಣೆ-ಕಾರಣೆ ಮಾಡಿ ರಂಗವಲ್ಲಿಗಳನ್ನು ಹಾಕುತ್ತಿದ್ದ ಹೆಂಗಸರು ಅವರತ್ತ ತಿರುಗಿ ಮೌನವಾಗಿ ನಿಂತರು. ಸ್ವಾಮಿಗಳು ತಮ್ಮ ಪಾಡಿಗೆ

ತಾವು ಗಂಭೀರವಾಗಿ ತೆಮ್ಮಿಂದೆ ಮುಂದೆ ಹಾದು ಹೋದಾಗ ಅವರಂತೆಯೇ ಮೌನವಾಗಿದ್ದವರು ಕೆಲವರಾದರೆ ಮತ್ತೆ ಕೆಲವರು ಕುಹಕ ನಗೆಯಾಡಿ ಕೊಂಡು ಮುಗುಳ್ನಕ್ಕರು.

ಪ್ರೇಮಾನಂದಜೀಯವರು ತಿರುಮಕೂಡಲಿಗೆ ಬಂದುದು ಇದು ಎರಡನೆಯ ಬಾರಿಯಾಗಿತ್ತು. ಆದರೆ ಈ ಬಾರಿ ಊರಿನ ಜನತೆಗೆ ಅವರಲ್ಲಿ ಯಾವುದೋ ಅತೃಪ್ತಿ ಅಸಮಾಧಾನವಿದ್ದಂತಿತ್ತು. ಅವರ ಸ್ಥಾನಮಾನಕ್ಕೆ ಬೆಲೆಕೊಟ್ಟ ಕೆಲವು ಹಿರಿಯರು ಯಾವೊಂದಕ್ಕೂ ಗಮನ ಕೊಡದೇ ತಮ್ಮ ಪಾಡಿಗೆ ತಾವು ನಡೆಯುತ್ತಿದ್ದರು.

ಸ್ವಾಮೀಜಿಯವರು ಊರಿಗೆ ಬಂದು ಎರಡು–ಮೂರು ತಿಂಗಳು ಗಳುರುಳಿತ್ತು. ಮೊದಲ ಬಾರಿ ಬಂದಾಗ ಊರಿನವರ ಕೇಳಿಕೆ ಆಗ್ರಹ ದಿಂದಾಗಿ ಒಂದು ತಿಂಗಳು ಮಾತ್ರ ಇದ್ದ ಸ್ವಾಮೀಜಿಯವರಲ್ಲಿ ಈ ಬಾರಿ ಮೂರು ತಿಂಗಳಾದರೂ ಹೊರಡುವ ಸೂಚನೆಯೇ ಕಾಣಬರದಿದ್ದುದು ಜನಗಳಿಗೆ ಸೋಜಿಗವೇ ಆಗಿತ್ತು. ಊರಿಗೆ ಮುಖ್ಯಸ್ಥನೆನಿಸಿಕೊಂಡಿದ್ದ ಪಟೇಲ ರಾಮಪ್ಪನವರು ಪ್ರೇಮಾನಂದರ ವಿಚಾರದಲ್ಲಿ ಪರಿಪೂರ್ಣ ಆತ್ಮೀಯತೆಯನ್ನು ಹೊಂದಿದ್ದುದರಿಂದ ಊರಿನವರಾರಿಗೂ ಗುರುಗಳ ವಿಚಾರದಲ್ಲಿ ತಮಗಿದ್ದ ಅತೃಪ್ತಿ ಅಸಮಾಧಾನಗಳನ್ನು ತೋರ್ಪಡಿಸಿ ಕೊಳ್ಳುವ ಧೈರ್ಯವಿರಲಿಲ್ಲ.

ಗುರುಗಳ ಬಗೆಗೆ ಊರಿನ ಜನರ ಹೊಟ್ಟೆಯಲ್ಲಿ ಭತ್ತ–ಮೊಸರು ಕಲೆಸಿದಂತಾಗಿತ್ತು. ಹೀಗಿರುವಾಗಲೇ ಮತ್ತೆ ಎರಡು ತಿಂಗಳುಗಳು ಉರುಳಿತ್ತು. ನೆರೆ ಹಳ್ಳಿಗೆ ಕಾರ್ಯವಾಸಿಯಾಗಿ ಹೋಗಿದ್ದ ಪಟೇಲ ರಾಮಪ್ಪನವರು ಪೂರ್ವಾಭಿಮುಖವಾಗಿ ಊರಿನ ಕಡೆಗೆ ಹೆಜ್ಜೆ ಹಾಕು ತ್ತಿದ್ದರು. ಇನ್ನೂ ಮೂರು ದಿನಗಳ ನಂತರದಲ್ಲಿ ಬರಲಿದ್ದ ಅಮಾ ವಾಸ್ಯೆಯ ಮುನ್ಸೂಚನೆ ಎಂಬಂತೆ ಎಲ್ಲೆಲ್ಲೂ ಕಾರ್ಗತ್ತಲೆಯೇ ಆವರಿ ಸಿತ್ತು. ಐವತ್ತರ ಸಾಲಿನಲ್ಲಿದ್ದರೂ, ಇನ್ನೂ ನಲವತ್ತನ್ನೂ ಹೇಳಲಾಗ

ದಾತದ ದಷ್ಟಪುಷ್ಟವಾದ ಶರೀರ ರಾಮಪ್ಪನವರದು. ಆಕೃತಿಗೆ ತಕ್ಕಂತಹ ಕೆಚ್ಚಿದೆ. ಗಂಭೀರ ಮುಖವಾಡ, ಉಟ್ಟಿದ್ದ ಕಚ್ಚೆ ಪಂಚೆಯನ್ನು ಮುಚ್ಚುವಂತಿತ್ತು ಮೇಲಿನ ಷರಟು, ಧನುರ್ಮಾಸ ಚಳಿಯ ಸಲುವಾಗಿ ತೊಟ್ಟಿದ್ದ ತುಂಬುತೋಳಿನ ಸ್ವೆಟರು. ಮುಂಡಾಸು, ಹಾದು ಹೆಗಲನ್ನು ತುಂಬಿಕೊಂಡಿದ್ದವಲ್ಲಿ, ಕೈಲೊಂದು ಕೋಲು. ಆ ಕೋಲೇ ಅವರ ಸರ್ವಾಯುಧ, ಕತ್ತಲೆಗೆ ಎಳ್ಳಷ್ಟೂ ಅಳುಕದ ಅವರು ಯಾರ ಯಾವ ವಿಚಾರದಲ್ಲೂ ಕತ್ತಲೆಯನ್ನು ತಂದುಕೊಳ್ಳದೇ ತಮ್ಮ ಬಾಳನ್ನೂ ಬೆಳಕಾಗಿಯೇ ಇಟ್ಟುಕೊಂಡಿದ್ದರು. ಮಕ್ಕಳ ಜವಾಬ್ದಾರಿ ಎಲ್ಲವನ್ನೂ ಕಳೆದುಕೊಂಡಿದ್ದರಿಂದ ದಂಪತಿಗಳನ್ನು ಬಿಟ್ಟರೆ ಆ ಮನೆಯಲ್ಲಿ ಮತ್ತಾರೂ ಇರಲಿಲ್ಲ. ಧನುರ್ಮಾಸದ ಪೂಜೆಗಾಗಿ ಬೆಳಕು ಹರಿಯುವ ಮುನ್ನವೇ ಮನೆಗೆ ಬರುವುದಾಗಿ ತಮ್ಮಾಕೆಯೊಂದಿಗೆ ಹೇಳಿ ಬಂದುದರ ನೆನಪಾಯಿತು. ತಾವು ಕೆಚ್ಚೆದೆಯ ಗಂಡು, ಆದರೆ ಸದಾ ತಮ್ಮ ಆತಂಕದಲ್ಲೇ ಮನೆಯ ಲ್ಲಿರುವ ಜೀವಿ ಕೋಮಲ ಹೃದಯದ ಹೆಣ್ಣು ಮಡದಿಯ ಸೂಕ್ಷ್ಮ ಹೃದಯದ ನೆನಪಾದಂತೆ ಹೆಜ್ಜೆಗಳು ತೀವ್ರಗತಿಯಲ್ಲಿ ಸಾಗತೊಡಗಿದವು. ಹುಂಜದ ಕೂಗು ಕೇಳಿ ಬರತೊಡಗಿತ್ತಾದರೂ ಆ ಹಾದಿಯಲ್ಲಿ ಅವರ ಹೊರತು ಮತ್ತಾರ ಸುಳಿವೂ ಇರಲಿಲ್ಲ. ಹಾದಿಬೀದಿಗಳಲ್ಲಿ ಜನಗಳ ಚಟುವಟಿಕೆ ಶುರುವಾಗಬೇಕಾದರೆ ಇನ್ನೂ ಒಂದು ಗಂಟೆಯಾದರೂ ಬೇಕಿತ್ತು. ಊರ ತೀರ ಮುಟ್ಟಿದ್ದ ಪಟೇಲರು ತಮ್ಮಿಂದ ಎರಡು ಫರ್ಲಾಂಗ್ ದೂರದಲ್ಲಿ ಒಂದು ಮನೆಯಿಂದ ಅವುದೋ ಒಂದು ವ್ಯಕ್ತಿ ಇಳಿದು ಹೋದುದನ್ನು ಕಂಡು ಏಕೋ ಬೆಚ್ಚಿದರು. ಆತ ಯಾರಿರ ಬಹುದು ? ಆ ಮನೆ ಯಾರದಾಗಿರಬಹುದು ?

ಆ ವ್ಯಕ್ತಿ ಆ ಮನೆಯಿಂದ ಇಳಿದಾಗ ನೆಟ್ಟಿದ್ದ ತಮ್ಮ ದೃಷ್ಟಿಯನ್ನು ಬದಲಿಸದೇ ವೇಗವಾಗಿ ನಡೆದು ಬಂದರು. ಮನೆ ಯಾರದೆಂದು ತಿಳಿದ ಮೇಲೆ ಅವರ ಎದೆಗೂಡಿಗೆ ಬಡಿದುಕೊಂಡಿತು. ಮತ್ತೆ ಆ ವ್ಯಕ್ತಿಯತ್ತ ದೃಷ್ಟಿ ಹಾಯಿಸಿದರೂ. ಅವರು ನೋಡುತ್ತಿರುವಂತೆಯೇ ಆ

ವ್ಯಕ್ತಿ ರಸ್ತೆಯ ತಿರುವು ತಿರುಗಿ ಮರೆಯಾಯಿತು, ಅವರಿಗರಿವಿಲ್ಲದಂತೆ ಅವರ ಕಾಲ್ಗಳು ಆ ರಸ್ತೆಯಲ್ಲೇ ನಡೆಯತೊಡಗಿದವು.

ಜೈ ಜೈ ವಿಠ್ಠಲ ಪಾಂಡುರಂಗ! ಜಯ ಹರಿ ವಿಠ್ಠಲ ಪಾಂಡುರಂಗ" ಗಂಭೀರ ಸ್ವರದಿಂದ ಹೊರ ಬರುತ್ತಿದ್ದ ದೇವರನಾಮ ತುಂಗೆಯ ಜುಳು ಜುಳುನಾದ ರಾಮಪ್ಪನವರ ಅನುಮಾನದ ಕಪ್ಪು ಕೊಳೆಯನ್ನು ತೊಳೆದು ಬಿಟ್ಟಿವು.

"ಛೆ! ಛೆ!! ಶಾಂತಂ. ಪಾಪಂ! ಶಾಂತಂ-ಪಾಪಂ!!" ತಮ್ಮಲ್ಲಿ ತಾವೆ ಅಂದುಕೊಳ್ಳುತ್ತಾ ಅವರು ತಮ್ಮ ಕಾಲ್ಗಳನ್ನು ಮನೆಯತ್ತ ತಿರುಗಿಸಿದರು. ಆದರೂ ಯಾವುದೋ ಅವ್ಯಕ್ತತೆಯಿಂದಾಗಿ ಮನಸ್ಸು ಡೋಲಾಯಮಾನವಾಗಿತ್ತು.

ಅಪಾರ ಹೊರೆ ಹೊತ್ತಂತಿದ್ದ ಭಾರವಾದ ಹೆಜ್ಜೆ, ವ್ಯಥಿತವಾದ ಮುಖ, ಬೇಕು ಬೇಡವೆಂಬ ಅಚಲತೆಯಲ್ಲಿ ಏನನ್ನೋ ಕಾಣ ಹೊರಟು ತನ್ನ ನೈಜ ಕಾಂತಿಯನ್ನೇ ಕಳೆದು ಕೊಂಡಿದ್ದ ನೀರವವಾದ ಕಣ್ಣುಗಳು, ಪಾರ್ವತಮ್ಮನವರು ಪತಿಯನ್ನು ಅಪಾದಮಸ್ತಕ ದಿಟ್ಟಿಸಿದರು, ಅವರಿಗೆ ಬಗೆಹರಿಯದಾಯಿತು. ಸ್ನಾನಗೃಹಕ್ಕೆ ತೆರಳಿದ ರಾಮಪ್ಪನವರನ್ನೇ ಹಿಂಬಾಲಿಸಿ ನಡೆದ ಪಾರ್ವತಮ್ಮನವರು ಅವರ ಸ್ನಾನಕ್ಕೆ ನೀರು ಹವಣು ಮಾಡಿ ಕೊಡುತ್ತಾ ಕೇಳಿದರು.

"ಏನೂಂದ್ರೆ ಹೋದ ಕೆಲಸ ಆಗಲಿಲ್ಲವೇನು ?"

ಆಕಸ್ಮಿಕವಾಗಿ ಉದ್ಭವಿಸಿದ್ದ ಸಮಸ್ಯೆ ಅವರು ಹಳ್ಳಿಗೆ ಹೋಗಿದ್ದ ಕೆಲಸದ ನೆಪವನ್ನೇ ಉಳಿಸದಾಗಿತ್ತು, ವಾಸ್ತವಿಕತೆಗೆ ಬಂದ ರಾಮಪ್ಪನವರು ಜನಿವಾರದಿಂದ ಬೆನ್ನು ತಿಕ್ಕಿಕೊಳ್ಳುತ್ತಾ ಕೇಳಿದರು.

"ಏನಂದೆ! ಯಾವ ಕೆಲಸವೇ ?"

"ಬಹಳ ಚೆನ್ನಾಯ್ತು, ಭೀಮೇಗೌಡನ ಜಮೀನಿನ ವಿಷಯಕ್ಕೆ ಅಲ್ಲವೇ ನೀವು-ಹೋಗಿದ್ದು-"

"ಓ! ಹಾಗೆ ಹೇಳು, ಆ ಕೆಲಸವೇ, ಆಗದೆ ಏನು"

"ಮತ್ತೆ ಏಕೆ ನೀವು ಒಂದು ತರಹಾ ಇದ್ದೀರಾ ?" ತಮ್ಮ ಹೃದಯಹೊಕ್ಕಿದ್ದ ಸಂದೇಹ ಮನದ ಆಂದೋಲನಗಳನ್ನು ಅಷ್ಟೊಂದು ಸುಲಭವಾಗಿ ತೋರ್ಪಡಿಸಿಕೊಳ್ಳಲಿಚ್ಛಿಸದ ರಾಮಪ್ಪನವರು ಒತ್ತಾಯದ ನಗೆ ತಂದುಕೊಳ್ಳುತ್ತಾ

"ಎಂಥಾ ತರಹಾ ಇದ್ದೀನ್ಯೇ ನಾಲ್ಕುಮೈಲಿ ಛಳಿಯಲ್ಲಿ ನಡೆದುಕೊಂಡು ಬಂದಿದ್ದಾನೆ ನಿನ್ನ ಗಂಡ ಅನ್ನೋದು ನಿನಗೆ ಮರೆತು ಹೋಯ್ತೇನು? ನಡಿ ನಡಿ ಮೊದಲು ದೇವರಿಗೆ ನೈವೇದ್ಯಕ್ಕೆ ಮಾಡಿಡು ಹೋಗು ಬೇಗಸ್ನಾನ ಮುಗಿಸಿ ಪೂಜೆಗೆ ಬಂದು ಬಿಡ್ತೀನಿ" ಎಂದು ತಂಬಿಗೆ ಇಂದ ತುಂಬಿಕೊಂಡು ಮೈಗೆ ಹಿತವೆನಿಸುವಂತೆ ಬಿಸಿ ಬಿಸಿ ನೀರು ಹುಯ್ದುಕೊಳ್ಳತೊಡಗಿದರು

ಹುಗ್ಗಿ ಪಾಲಿನ ನೈವೇದ್ಯದೊಂದಿಗೆ ಬರಿಯ ಪುರುಷಸೂಕ್ತದಲ್ಲಿ ಪೂಜೆ ಮುಗಿದಿತ್ತಾದರೂ ತುಮುಲ ಹೊಂದಿದ ಮನಸ್ಸಿಗೆ ಯಾವ ಶಾಂತಿಯೂ ದೊರಕದಾಗಿತ್ತು ಅಂದೆಲ್ಲಾ ಪಟೇಲರು ಮನೆ ಬಿಟ್ಟು ಎಲ್ಲಿಯೂ ಹೋಗಲಿಲ್ಲ ತನ್ನನ್ನು ಕಾಣಲು ಬಂದವರೊಂದಿಗೆ ಅಷ್ಟೋ ಇಷ್ಟೋ ಮಾತನಾಡಿ ಕಳುಹಿಸಿ ಬಿಟ್ಟರು ಅವರ ವರ್ತನೆ ಎಲ್ಲರಿಗಿಂತಲೂ ಪಾರ್ವತಮ್ಮನವರಿಗೆ ಅತಿ ವಿಚಿತ್ರವೆನಿಸಿತು.

ಎಂದಿನಂತೆ ರಾತ್ರಿ ದಂಪತಿಗಳಲ್ಲಿ ತಾಂಬೂಲ ಸೇವನೆ ನಡೆಯುತ್ತಿತ್ತು. ಕೆಲಹೊತ್ತು ಮೌನದಿಂದಿದ್ದ ರಾಮಪ್ಪನವರು ತಮ್ಮ ಅನುಮಾನವನ್ನು ಪರಿಹಾರ ಮಾಡಿಕೊಳ್ಳಲೆತ್ನಿಸುತ್ತಾ ಮೆಲುಸ್ವರದಲ್ಲಿ ಕೇಳಿದರು,

"ಏನೇ, ಆ ಶಾರದಮ್ಮನ ನಡವಳಿಕೆ ಹೇಗೆ ?"

"ಅಲ್ಲಾ ಊರಿಗೆಲ್ಲಾ ಗೊತ್ತಿರೋದನ್ನ ಕಿವೀಲಿ ಬಂದು ಹೇಳಿದರು. ಅನ್ನೋ ಹಾಗೆ ಕೇಳ್ತೀರಲ್ಲಾ"

"ಇಲ್ವೆ ನನಗೆ ನಿಜವಾಗಲೂ ಗೊತ್ತಿಲ್ಲ, ಅದಕ್ಕೇ ಕೇಳ್ತಾ ಇದ್ದೀನಿ. ನಿನಗೆ ತಿಳಿದಿದ್ರೆ ಸ್ವಲ್ಪ ಹೇಳು"

"ಊರಿಗೆ ಬಂದಿರೋ ಆ ಸಾಧುವನ್ನೇ ತನ್ನ ಬಲೇನಲ್ಲಿ ಹಾಕಿಕೊಂಡಿರೋ ಅವಳ ವಿಚಾರಾನ ಏನೂ ಅಂತ ಹೇಳಿ ನನ್ನ ನಾಲಿಗೆ ಹೊಲಸು ಏಕೆ ಮಾಡಿಕೊಳ್ಳಲೀಂದ್ರೆ ?"

"ಏನಂದೇ-" ರಾಮಪ್ಪನವರು ಉದ್ಗರಿಸಿದರು.

"ಸರಿ, ಸರಿ, ಮತ್ತೆ ಮತ್ತೆ ನಾನು ಅದೇ ಹೇಳಬೇಕೆ ?"

"ಹಾಗಲ್ವೇ ಪಾರ್ವತಿ, ನೀನು ಹೇಳ್ತಾ ಇರೋದು ನಿಜವೇನೇ?"

"ನಿಜವಲ್ಲದೆ ಸುಳ್ಳಾಗುತ್ತೆ ?"

"ಮತ್ತೆ ನನಗೆ ಈ ವಿಚಾರ ಗೊತ್ತೇ ಇರಲಿಲ್ಲ"

"ಹೇಗೆ ಗೊತ್ತಾಗಬೇಕು ? ಊರಿಗೆ ಮುಖ್ಯಸ್ಥರು ಅನ್ನಿಸಿಕೊಂಡಿರೋ ನಿಮಗೆ ಊರಿನ ವಿಚಾರ ತಿಳಿದುಕೋಬೇಕು ಅನ್ನಿಸಿದ್ರೆ ಅಲ್ವೆ, ಹೋಗ್ಲಿ ಈವತ್ತಾದರೂ ಅನ್ನಿಸ್ತಲ್ಲಾ"—

"ಈವತ್ತು ಅನ್ನಿಸ್ತಾ ಇತ್ತೊ ಇಲ್ವೋ- ಆದರೆ ಅನುಮಾನ ಬರಲಾಗಿ ತಿಳಿದುಕೋ ಬೇಕಾಗಿದೆ".

"ಏನು ! ಈವತ್ತು ನಿಮಗೆ ಅನುಮಾನ ಬಂತೆ ?"

"ಅದೆಲ್ಲಾ ಈಗ ಬೇಡ. ಈ ವಿಚಾರ ಏಕೆ ನನಗೆ ಯಾರೂ ತಿಳಿಸೇ ಇರಲಿಲ್ಲ ?"

ಪಾ...ಪ ! ಅವತ್ತು "ಸ್ವಾಮಿಗಳು ಮೊದಲ ಸಲ ಬಂದಂತೆ ಇಲ್ಲವಲ್ಲಾ" ಅಂತ ಶಾನುಭೋಗರು ಹೇಳೋದಕ್ಕೆ ಬಂದಾಗ ದಬಾಯಿಸಿ ಕಳಿಸಿಬಿಟ್ರಿ. ಈಗ ನಿಮಗೇ ಅನುಮಾನ ಬರೋಹೊತ್ತಿಗೆ ತಾನೆ ಕೇಳ್ತಾ ಇದ್ದೀರಿ"

"ಪಾರ್ವತಿ ಪ್ರತ್ಯಕ್ಷವಾಗಿ ಕಂಡರೂ ಪ್ರಮಾಣಿಸಿ ನೋಡಬೇಡ ವೇನೆ ?"

"ಅದೇನೋ ನಿಜ ಅನ್ನಿ. ಆದರೆ ಇಂತಹ ಅನಾಚಾರಗಳಿಗೆ ಎಷ್ಟು ದಿನ ಅಂತ ತಾನೆ ದಾರಿ ಬಿಟ್ಟಿರೋದು ?"

"ಇಲ್ಲ, ಯಾವ ರೀತಿನಲ್ಲಾದ್ರೂ ಇದನ್ನ ಜನಕ್ಕೆ ಸಾದೃಶಪಡಿಸಿ ಅವರಿಬ್ಬರ ತಪ್ಪನ್ನ ಹೊರಕ್ಕೆ ಹಾಕಲೇಬೇಕು"

"ಯಾವ ರೀತಿನಲ್ಲಿ ಏನು ಬಂತು ? ನಿತ್ಯ ರಾತ್ರಿ ಅವಳ ಮನೆಯಲ್ಲೇ ಅವನಿರೋವಾಗ ಅಲ್ಲಿಗೆ ಹೋದರೆತಾನಂತೆ ತಿಳಿಯುತ್ತೆ. ಆಕೆಯ ಆ ಮಾತು ಕಿವಿಗೆ ಬಿದ್ದೊಡನೆ ಪಟೇಲರಿಗೆ ತಾವು ಇಂದು ಕುಡಿದುದರಲ್ಲಿ ಸುಳ್ಳಿಲ್ಲ ಎನಿಸಿತ್ತು. ದಿಡೀರನೆ ಮಂಚದಿಂದೆದ್ದು ರಾಮ ಪ್ಪನವರು ಹಗ್ಗದ ಮೇಲಿದ್ದ ವಲ್ಲಿಯನ್ನು ಹೆಗಲ ಮೇಲೆ ಹಾಕಿಕೊಂಡು ಕೋಲು ಕೈಗೆ ತೆಗೆದುಕೊಳ್ಳುತ್ತಾ,

"ಬಾಗಿಲು ಹಾಕ್ಕೋ ಪಾರ್ವತಿ" ಎಂದವರೇ ಯಾವ ಯೋಜನೆಗೂ ಅವಕಾಶ ಕೊಡದೆ ನಡೆದೇ ಬಿಟ್ಟರು. ನೇರ ಸ್ವಾಮಿಗಳು ಇದ್ದ ಹೊಳೆಯ ಸಮೀಪದ ಮಂಟಪಕ್ಕೆ ಹೋದ ಅವರು ಸ್ವಾಮಿಗಳನ್ನು ಅಲ್ಲಿ ಕಾಣದೆ ಮತ್ತಷ್ಟು ಅನುಮಾನಿತರಾಗಿ ಅಲ್ಲಿಂದ ತಮ್ಮ ಕಾಲ್ಗಳನ್ನು ಶಾರದಮ್ಮನ ಮನೆಯತ್ತ ಎಳೆದೊಯ್ದರು.

ಅಗುಳಿಯಿಕ್ಕಿ ಭದ್ರವಾಗಿದ್ದ ಬಾಗಿಲಿನ ಮೇಲೆ ಕೋಲಿನಿಂದ ಒಂದೆರಡುಬಾರಿ ಬಡಿದರು. ಒಳಗಿನಿಂದ ಯಾವ ಉತ್ತರವೂ ಬರದಿದ್ದಾಗ ಗಟ್ಟಿಯಾದ ಸ್ವರದಲ್ಲಿ ಕೂಗು ಹಾಕಿದರು.

"ಶಾರದಮ್ಮಾ....ಏ ಶಾರದಮ್ಮಾ....

ಮತ್ತೆರಡು ಬಾರಿ ಅವರು ಬಾಗಿಲನ್ನು ಬಡೆಯುತ್ತಾ ಕೂಗು ಹಾಕಿದಾಗ ಅಗುಳಿ ತೆರೆಯಲ್ಪಟ್ಟಿತು. ಬಾಗಿಲು ತೆರೆದ ಶಾರದ ಪಟೇಲರನ್ನೇ ದಿಟ್ಟಿಸುತ್ತಿದ್ದಳು. ಅವಳ ಮುಖದಲ್ಲಿ ಭಯದ ಚಿನ್ಹೆಯಿತ್ತು. ಪಟೇಲರು ಅವಳನ್ನೇ ಕೆಲ ಹೊತ್ತು ಮೌನದಿಂದ ದಿಟ್ಟಿಸಿದರು. ಮೂವತ್ತೈದರ ಮನೆಯಲ್ಲಿದ್ದ ಸುಂದರಿ ಶಾರದಳಿಗೆ ಒಂದು ವೇಳೆ ಸ್ವಾಮಿಗಳೂ ಮನಸೋತಿದ್ದಾರೆಂದರೆ ಸುಳ್ಳಾಗಲಾರದು ಎಂದುಕೊಂಡರು. ವಯಸ್ಸಿನ ಅಂತರವಿಲ್ಲದೆ ಯಾವ ಪುರುಷನ್ನಾದರೂ ತನ್ನತ್ತ ಆಕರ್ಷಿಸಿಕೊಳ್ಳುವಂತಹ ನಿಮ್ನೋನ್ನತ ಮೈಕಟ್ಟು, ಹಾಗೇ ನೋಡುತ್ತಿದ್ದ ಅವರು ತಮ್ಮ ಚಿತ್ರವೂ ಅವಳಲ್ಲಿ ಭ್ರಮಗೊಂಡಿಲ್ಲವಷ್ಟೆ ಎಂದು ತಮ್ಮಲ್ಲಿ ತಾವೇ ಅಂದು ಕೊಳ್ಳುತ್ತಿರುನಾಗಲೇ ಶಾರದೆ ತಾನಂತೆಯೇ ಕೇಳಿದಳು.

"ಏನು ಪಟೇಲರೆ. ಈ ಅವೇಳೆ ಹೊತ್ತಿನಲ್ಲಿ ಹೀಗೆ ಬಂದಿದ್ದೀರಲ್ಲಾ ?"

"ಅದೆಲ್ಲಾ ಹಾಗಿರ್ಲಿ, ಮನೇನಲ್ಲಿ ಇನ್ನು ಯಾರಿದ್ದಾರೆ ಹೇಳು."

ಎನ್ನುತ್ತಾ ಸುತ್ತೆಡೆಗೂ ದೃಷ್ಟಿ ಹರಿಸಿದರು, ಶಾರದಾಳ ಮುಖ ವಿವರ್ಣವಾಯಿತು. ಅವಳ ನಾಲಿಗೆ ಉಗ್ಗತೊಡಗಿತು.

"ಇ...ಇಲ್ಲ. ನಾನೊಬ್ಬಳಲ್ಲದೇ ಯಾರೂ ಇಲ್ಲ ಪಟೇಲ್ರೆ,"

"ಸುಳ್ಳು ಹೇಳಬೇಡ, ಎಲ್ಲಿ ಬಿಡು" ಎಂದವರೇ ಒಳಕೋಣೆಯನ್ನೆಲ್ಲಾ ನೋಡ ಹೊರಟಾಗ ಶಾರದೆ ಅವರ ಎರಡು ಕಾಲ್ಗಳನ್ನೂ

1038

ಬಿಗಿಯಾಗಿ ಹಿಡಿದು ಅಲವತ್ತುಕೊಂಡಳು.

"ಬೇಡಿ ಪಟೇಲ್ರೇ. ಅಲ್ಲಿ ಯಾರೂ ಇಲ್ಲ ಅಲ್ಲಿಗೆ ಹೋಗಬೇಡಿ." ಅವಳ ಬೇಡಿಕೆ, ಕೇಳಿಕೆಗಳಾವುದಕ್ಕೂ ಕಿವಿ ಕೊಡದೆ ಪಟೇಲರು ಒಳ ಕೋಣೆಗೆ ಧಾವಿಸಿಯೇ ಬಿಟ್ಟರು. ಅವಿತಿಟ್ಟುಕೊಂಡಂತೆ ಕುಳಿತಿದ್ದ ಸಾಧುಗಳನ್ನು ಅಲ್ಲಿ ಕಂಡಾಗ ಪಟೇಲರ ನರನಾಡಿಗಳಲ್ಲೂ ಕೋಪದ ಜ್ವಾಲೆ ಭುಗಿಲ್ಲನೆ ಎದ್ದಿತು.

"ಈ ನಡತೆನಲ್ಲಿರೋ ನೀನು ರತ್ನ-ತಗೊಂಡು ಹೋಗಿ ತಿಪ್ಪೆ ಮೇಲಿಟ್ಟ ಈ ಕಾವಿ ಬಟ್ಟೆ ಧರಿಸಿ ಇದಕ್ಕೆ ಇರೋ ಬೆಲೆ ಗೌರವಾನೂ ಏಕೆ ಕಳೀತಿ ? ಥೂ ಕುಲಟೀ, ಸ್ವರ್ಗಸ್ಥನಾಗಿರೋ ಗಂಡನಿಗೆ ಅನ್ಯಾಯಮಾಡ್ತಾ ಸಾಧು ಸಂತರನ್ನೆಲ್ಲಾ ಕೆಟ್ಟ ಹಾದಿಗೆ ಎಳೀ ತಿದ್ದೀಯಲ್ಲಾ ನಿಮಗೆ ಯಾವ ನರಕ ಕಾದಿದೆಯೋ-ಅವರ ಮಾತು" ಗಳನ್ನು ಕೇಳಿದ ಶಾರದೆ.

"ಅಯ್ಯಯ್ಯೋ ಶಿವ ಶಿವ" ಎನ್ನುತ್ತಾ ಎರಡು ಕೈಗಳಿಂದ ತನ್ನ ಕಿವಿಗಳನ್ನು ಮುಚ್ಚಿಕೊಂಡಳು.

"ಅಹಹಹಾ ಸಾಕು ನಿನ್ನ ನಾಟಕ. ಊರಿನವರು ಅಂದರೆ ಸುಳ್ಳು ಅನ್ನಬಹುದಾಗಿತ್ತು. ಆದರೆ ಪ್ರತ್ಯಕ್ಷವಾಗಿ ಕಾಣ್ತಿರೋ ಈ ನಿನ್ನ ದುರ್ನಡತೆ ಸುಳ್ಳೇನು.?"

ಶಾರದೆಯೂ ದಿಟ್ಟ ಸ್ವರದಲ್ಲೇ ಹೇಳಿದಳು.

"ನೀವು ಈಗ ನೋಡ್ತಾ ಇರೋದು ಸುಳ್ಳಲ್ಲದೆ ಇರಬಹುದು, ಆದರೆ ನೀವು ತಿಳಿದಿರೋದು ಮಾತ್ರ ಶುದ್ಧ ಸುಳ್ಳು"

"ನೋಡೋದು ಬೇರೆ ತಿಳಿಯೋದು ಬೇರೆ ಏನು? ಗಂಡನನ್ನು ಕಳಕೊಂಡ ನೀನು ಊರ ಹೊರಗಿನ ಸಾಧೂನ ಮನೇನಲ್ಲಿ ತಂದಿಟ್ಟು ಕೊಂಡು ವ್ಯಭಿಚಾರಕ್ಕೆ ಇಳಿದಿರೋದನ್ನ ನಾನು ನೋಡ್ತಾ ಇರೋದು

ಸುಳ್ಳೇ ಅಥವಾ ನೀನು ನಡೆಸ್ತಾ ಇರೋದು ಸುಳ್ಳೆ?"

"ಎರಡೂ ಸುಳ್ಳಲ್ಲ ಆದರೆ ಇದರಲ್ಲಿ ಸತ್ಯದ ಮೂಲವನ್ನು ಕಾಣದೇ ನೀವು ತಪ್ಪಾಗಿದ್ದೀರ".

"ಇನ್ನೂ ಈ ಕಣ್ಣೊರೆಸುವ ಮಾತನಾಡಬೇಡ ಶಾರದಮ್ಮ, ನಾನು ಈಗಲೇ ಪಂಚಾಯ್ತಿ ಏರ್ಪಾಡು ಮಾಡ್ತೀನಿ.

"ಪಟೇಲ್ರೆ ನಿಮ್ಮ ದಮ್ಮಯ್ಯ ಅಂತೀನ್ರಿ, ದಯವಿಟ್ಟು ಆ ಕೆಲಸ ಮಾಡಬೇಡಿ. ನಾನೇ ನಿಮಗೆ ನಿಜ ಸಂಗತಿ ತಿಳಿಸಿಬಿಡ್ತೀನಿ ಕೇಳಿ, ಆಸಕ್ತಿಯಿಂದ ಪಟೇಲರು ಅವಳ ಮುಖ ನೋಡಹತ್ತಿದರು. ತಮ್ಮಿಬ್ಬರ ಮಾತನ್ನೇ ಆಲಿಸುತ್ತಾ ಮೌನವಾಗಿ ಕತ್ತು ಕೆಳಗೆಮಾಡಿ ನಿಂತಿದ್ದ ಸ್ವಾಮೀಜಿಯವರ ಮುಖವನ್ನೂ ಮೇಲಕ್ಕೆತ್ತಿ ನುಡಿದಳು ಶಾರದೆ.

"ನೋಡಿ, ಇವರು ಯಾರು ಉತಸರಿಯಾಗಿ ನೋಡಿ ಪಟೇಲ್ರೆ" ಪಟೇಲರು ಅಪಲಕ ನೇತ್ರದಿಂದ ಬಹಳ ಹೊತ್ತು ನೋಡಿದರು ಆದರೆ ಅವರಿಗೆ ನೆನಪು ಬಂದಂತಾಗಲಿಲ್ಲ, ಮತ್ತೆ ಶಾರದಳೇ ಕೇಳಿದಳು

"ಏಕೆ ಪಟೇಲ್ರೆ ಇವರು ಯಾರು ಅಂತ ಗುರುತು ಸಿಗಲಿಲ್ವೆ ?"

"ಇಲ್ಲ"

"ಇವರು ಇವರು ನನ್ನ ಯಜಮಾನ್ರು, ಪಟೇಲ್ರೆ ನನ್ನ ಯಜ ಮಾನರು".

"ಏನಂದೆ ಇವನು ನಿನ್ನ ಗಂಡ ಸುಬ್ಬರಾಯಪ್ಪನೆ ?"

"ಹೌದು, ಏಕೆ ಇನ್ನೂ ಗುರುತು ಸಿಗಲಿಲ್ಲವೊ ಇಲ್ಲವೇ ಅನುಮಾನವೋ ಅವನಲ್ಲಿ ನಾಟಿದ್ದ ಪಟೇಲರ ಕಣ್ಣಗಳು ಅಚಲವಾಗಿದ್ದವು, ನಾಲ್ಕು ಮೊಳದ ಕಾವಿಬಟ್ಟೆಯ ದಟ್ಟಿ, ಬೊಕ್ಕಗಿದ್ದ ಮಂಡೆಯನ್ನೂ ಮುಚ್ಚು ವಂತೆ ಮೇಲು ಮೈಗೆ ಹೊದ್ದಿದ್ದ ನಾಲ್ಕುಮೊಳದ ಅದೇ ಕಾವಿಯ ಪಂಚೆ ಮುಖದ ತುಂಬ ಗಡ್ಡ, ಮೀಸೆಗಳು ಇವೇ ಸಾಲದೆಂಬಂತೆ ಮುಖದಲ್ಲಿ

ಗಂಭೀರತೆ ಯಾರಿಗೂ ಅವನ ಗುರುತೇ ಸಿಗದಂತೆ ಮಾಡಿತ್ತು. ಹಾಗೇ ನೋಡುತ್ತಿದ್ದ ಅವರು ತಮ್ಮಲ್ಲೇ ಅಂದುಕೊಂಡರು.

"ನಿಜ, ಈತ ಸುಬ್ಬರಾಯಪ್ಪ ಅನ್ನೋದರಲ್ಲಿ ಸಂಶಯವಿಲ್ಲ."

ಸುಬ್ಬರಾಯಪ್ಪ ಶಾರದಳ ಗಂಡ. ಕೊಲೆಯ ಆಪಾದನೆಯಿಂದಾಗಿ ತಲೆಮರಿಸಿಕೊಂಡು ಹೊರಟುಹೋಗಿದ್ದ. ಅವನು ಹಾಗೆ ಹೋದ ಒಂದೆರಡು ತಿಂಗಳಿನಲ್ಲೇ ಮಲ್ಪೆಯ ಸಮುದ್ರದ ದಂಡೆಯಲ್ಲಿ ಸುಬ್ಬರಾಯಪ್ಪನ ಶವ ಬಿದ್ದಿರುವುದಾಗಿ ತಿಳಿದು ಬಂದ ಸುದ್ದಿಯು ಅವನು ಆತ್ಮಹತ್ಯೆ ಮಾಡಿಕೊಂಡಿರಬಹುದೆಂಬುದಾಗಿ ಶಂಕಿಸಿದ್ದ ಊರಿನವರಲ್ಲಿ ಅದೇ ನಂಬುಗೆಯನ್ನು ಹುಟ್ಟಿಸಿತ್ತು. ಆದರೀಗ ಅದೇ ಸುಬ್ಬರಾಯಪ್ಪ ತಮ್ಮ ಕಣ್ಣುಮುಂದೆ ನಿಂತಿದ್ದಾನೆ. ಹಾಗಾದರೆ ಸುಬ್ಬರಾಯಪ್ಪ ಸತ್ತನೆಂಬುದು ಸುಳ್ಳೆ ? ತಮ್ಮ ಅನುಮಾನದ ಪರಿಹಾರಾರ್ಥವಾಗಿ ಪಟೇಲರು ಆತನಲ್ಲೇ ಕೇಳಿದರು.

"ನೀನು ಆತ್ಮಹತ್ಯೆ ಮಾಡಿಕೊಂಡಿದ್ದೀಯ. ಮಲ್ಪೇ ಸಮುದ್ರದ ತೀರದಲ್ಲಿ ನಿನ್ನ ಹೆಣ ಸಿಕ್ಕಿತು ಅಂತ ಜನ ಅಂದಿದ್ದೆಲ್ಲಾ ಸುಳ್ಳೇನು?" ಆತ ಗಂಭೀರ ಕಂಠದಲ್ಲಿ ಹೇಳಿದ.

"ಹೆಣ ಬಿದ್ದಿದ್ದು ನಿಜ, ಆದರೆ ಅದು ನನ್ನದಲ್ಲ."

"ಅಂದರೆ?"

"ಅಂದರೆ ಅದೂ ಒಂದು ಕಥೇನೇ"

"ಏನದು?"

"ಆ ದಿವಸ ಊರು ಬಿಟ್ಟು ಓಡಿ ಹೋದ ನಾನು ಅಲ್ಲಿ ಇಲ್ಲಿ ಅಲೆದು ಅಲೆದು ಮಂಗಳೂರು ಸೇರಿದೆ. ಹಾಗೇ ಒಂದು ದಿವಸ ಮಲ್ಪೆಗೆ ನಡೆದು

ಕೊಡು ಬಂದಾಗ ಸಮುದ್ರದ ದಡದಲ್ಲಿ ಒಂದು ಶವ ಬಿದ್ದಿರೋದನ್ನ ಕಂಡೆ. ಕುತೂಹಲದಿಂದ ಹತ್ತಿರ ಹೋಗಿ ನೋಡಿದಾಗ ಅದು ಒಬ್ಬ ಸಾಧುಗಳದು ಅಂತ ತಿಳಿಯಿತು. ಇಂಥಹವರೇ ಅಂತ ಗುರುತು ಸಿಗದಂತೆ ದೇಹದ ಎಷ್ಟೋ ಭಾಗವನ್ನ ಜಲಚರಗಳು ತಿಂದು ಬಿಟ್ಟಿದ್ದವು. ಆ ಶವ ನೋಡಿದ ಕ್ಷಣದಲ್ಲಿ ನನಗೊಂದು ಆಲೋಚನೆ ಹೊಳೆಯಿತು. ಆ ಕೂಡಲೇ ನಾನು ಕಾವಿ ಬಟ್ಟೆಯನ್ನೂ, ಶವಕ್ಕೆ ನನ್ನ ಉಡುಪನ್ನೂ ಹಾಕಿ ಮಾರ್ಪಾಟು ಮಾಡಿದೆ. ಕೆಲವು ದಿನಗಳಲ್ಲೇ ಚೆನ್ನಾಗಿ ಗಡ್ಡ ಮೀಸೆ ಬೆಳಸಿಕೊಂಡು ಸಂಪೂರ್ಣ ಸಾಧುವಿನ ವೇಷದಲ್ಲಿ ಊರಿಗೆ ಬಂದೆ. ಈಗಾಗಲೇ ಒಂದು ಸಲ ಗುಜರಾತಿನಿಂದ ಬಂದಿದ್ದ ಪ್ರೇಮಾನಂದಜೀ ಯವರನ್ನು ನಾನು ಸಾಕಷ್ಟು ಹೋಲ್ತಾ ಇದ್ದಿದ್ದರಿಂದಲೂ ಮತ್ತು ಸಮುದ್ರದ ದಡದಲ್ಲಿ ಸಿಕ್ಕಿದ್ದು ಗುರುತಿಲ್ಲದ ಶವ ಹಾಗೂ ನನ್ನ ಬಟ್ಟೆ ಗಳಿಂದ ನಾನು ಸತ್ತು ಹೋಗಿದ್ದೀನಿ ಅಂತಲೇ ತಿಳಿದಿದ್ದ ಊರಿನ ಜನ ನನ್ನನ್ನ ಪ್ರೇಮಾನಂದಜೀ ಅಂತಲೇ ಭಾವಿಸಿದರು. ಹಗಲಿನಲ್ಲಿ ಪ್ರೇಮಾ ನಂದನರೆ ಆಗಿರ್ತಿದ್ದ ನಾನು ಈ ಹೊತ್ತಿನಲ್ಲಿ ಸುಬ್ಬರಾಯಪ್ಪನಾಗಿ ಈ ಮನೆಗೆ ಬರ್ತಿದ್ದೆ." ಅದುವರೆವಿಗಿನ ಕಥೆ ಎಲ್ಲವನ್ನೂ ಕೇಳಿದ ಪಟೇಲರು ಶಾರದೆಯತ್ತ ತಿರುಗಿ ಹೇಳಿದರು.

"ಪರವಾಗಿಲ್ಲ ಗಂಡ-ಹೆಂಡತಿ ಇಬ್ಬರೂ ಚೆನ್ನಾಗಿಯೇ ನಾಟಕ ಆಡಿದ್ದೀರಿ ಜನಗಳ ಕಣ್ಣಿಗೆ ವಿಧವೆ ಅಂತ ತೋರಿಸಿಕೊಳ್ತಾನೆ ನಿನ್ನ ಮಾಂಗಲ್ಯವನ್ನು ಕಾಪಾಡಿಕೊಂಡು ಬಂದಿದ್ದೀಯಾ."

ಏನು ಮಾಡಿದರೇನು ಒಂದಲ್ಲಾ ಒಂದು ದಿನ ಸತ್ಯ ಹೊರ ಬೀಳಲೇಬೇಕು. ನಿಜವನ್ನ ತಿಳಿಯದ ಜನ ಸುಳ್ಳನ್ನ ತಪ್ಪಾಗಿ ತಿಳಿದಿದ್ದ ರೆಂದಾಗಿ ಈ ದಿನ ಸುಳ್ಳಿನ ಪರದೆ ತೆಗೆಯಲೇ ಬೇಕಾಯಿತು," ಶಾರದಾಳ ಮಾತು ದುಃಖದಿಂದ ತುಂಬಿ ಕಂಪಿಸುತ್ತಿತ್ತು.

*** *** ***

ಪೋಲಿಸರ ವಶವಾಗಿದ್ದ ಸುಬ್ಬರಾಯಪ್ಪ ಮರಣದಂಡನೆಗೆ ಗುರಿ ಯಾಗಿದ್ದ. ಇದೀಗ ಶಾರದೆ ನಿಜಕ್ಕೂ ವಿಧವೆಯಾಗಿದ್ದಳು. ಇನ್ನೂ

ಅವಳ ಬಾಳಿನಲ್ಲಿ ಬೆಳಕನ್ನು ಕಾಣುವ ಕನಸು ಕೂಡ ಒಸರಲಿಲ್ಲ. ಕತ್ತಲು ಕೂಡಿದ ಜೀವನ. ಗುರಿ ಇಲ್ಲದ ಬದುಕು, ಕಷ್ಟದ ಸೋಗಿನಲ್ಲಿ ಕಳೆದ ಸುಂದರ ದಿನಗಳನ್ನು ನೆನೆಯುತ್ತಾ ಶಾರದೆ ಭಾರವಾದ ದಿನಗಳನ್ನು ಕಳೆಯುತ್ತಿದ್ದಳು.

"ಶಾರದಮ್ಮ...."

ಹೊರಗಿನಿಂದ ಬಲು ಮೃದುವಾಗಿ ಕೇಳಿಬಂತು ಪಟೇಲರ ಧ್ವನಿ. ಇಡೀ ಊರೇ ನಿದ್ರಾದೇವಿಯ ಅಪ್ಪುಗೆಯಲ್ಲಿರುವ ಈ ಹೊತ್ತಿನಲ್ಲಿ ಪಟೇಲರು ತನ್ನಲ್ಲಿಗೆ ಬರುವ ಕಾರಣವಾದರೂ ಏನಿರಬಹುದು ಎಂದು ಕೊಳ್ಳುತ್ತಾ ಬಾಗಿಲು ತೆರೆದ ಶಾರದೆ ಅದೇ ಪ್ರಶ್ನಾರ್ಥಕವಾಗಿ ಪಟೇಲ ರನ್ನೇ ದಿಟ್ಟಿಸಿದಳು.

"ನಿನ್ನ ಕೈಲಿ ಸ್ವಲ್ಪ ಮಾತನಾಡೋದಿತ್ತು ಶಾರದಮ್ಮ"

"ಅದೇನು ಪಟೇಲರೆ?"

ಎನ್ನುತ್ತಾ ಕಿರಿದಾಗಿದ್ದ ಲಾಂದ್ರದ ಬತ್ತಿಯನ್ನು ಮೀಟಿ ಬೆಳಕು ದೊಡ್ಡದು ಮಾಡಿದಳು.

"ಈ ಪಾಪಿ ಮಾಡಿರೋ ಘೋರ ಅಪರಾಧಕ್ಕೆ ನೀನು ಕ್ಷಮಿಸಿ ದ್ದೀಯಾ ಶಾರದಮ್ಮಾ ಪಟೇಲರ ಮಾತು ಅವಳಿಗೆ ವಿಚಿತ್ರವಾಗಿ ತೋರಿತು.

"ನಾನು ಕ್ಷಮಿಸೋದಕ್ಕೆ ನೀವು ಮಾಡಿರೋ ತಪ್ಪಾದರೂ ಏನು? ಏನೊ ನನಗೆ ಒಂದೂ ತಿಳೀತಾ ಇಲ್ಲವಲ್ಲಾ"

"ಹೌದು ಏನೂ ತಿಳಿಯದ ನಿನಗೆ ಇಷ್ಟೊಂದು ಅನ್ಯಾಯ ಮಾಡಿದೆ ನಲ್ಲಾ ಅಂತ ನಾನು ಪಶ್ಚಾತ್ತಾಪ ಪಡ್ತಿದ್ದೀನಮ್ಮ"

"ಪಟೇಲರೆ ವಿಷಯ ಏನಿದ್ದರೂ ದಯವಿಟ್ಟು ಬಿಡಿಸಿ ಹೇಳಿ"

"ಈ ವೈಧವ್ಯ ಅನುಭವಿಸಬೇಕಾದವಳು ನೀನಲ್ಲ. ನನ್ನ ಹೆಂಡತಿ"
"ಪಟೇಲರೇ ನಿಮ್ಮ ಮಾತಿನ ಅರ್ಥ?"

"ನನ್ನ ಮಾತಿನ ಅರ್ಥ, ಆ ಹುಡುಗಿ ಕೊಲೆ ಮಾಡಿದವನು ನಿನ್ನ ಗಂಡ ಸುಬ್ಬರಾಯನಲ್ಲ ನಾನು ಶಾರದಮ್ಮ-ನಾನು?"

"ಪಟೇಲರೆ ನೀವು ಹೇಳ್ತಾ ಇರೋದು ನಿಜ ಏನು"

"ನೂರಕ್ಕೆ ನೂರು ನಿಜ"

"ಹಾಗಾದರೆ ತಾವೇ ಕೊಲೆಗಾರರು ಅಂತ ಅವರು ಒಪ್ಪಿಕೊಂಡ ಕಾರಣ?"

"ಕಾರಣ ಏನು ಬಂತು, ಸನ್ನಿವೇಶ ಹಾಗೆ ಮಾಡಿಸಿತು ಅಷ್ಟೆ. ನಡೆದದ್ದನ್ನು ಹೆಳ್ತೀನಿ ಕೇಳು.

"ಆ ದಿವಸ ಕಣದಲ್ಲಿ ಕೆಲಸ ಇದ್ದಿದ್ದರಿಂದ ಆಳುಗಳನ್ನೆಲ್ಲಾ ಕಳಿಸಿ ನಾನು ಮನೆಗೆ ಹೊರಡೋ ಹೊತ್ತಿಗೆ ರಾತ್ರಿ ಒಂಭತ್ತು ಗಂಟೆ ಮೀರಿತ್ತು. ರಂಗನ ಹೊಲ ಹಾದು ಬರ್‍ತಾ ಇರಬೇಕಾದರೆ ಭೈರನ ಮಗಳು ಚೆನ್ನಿ ಒಬ್ಬಳೇ ನನ್ನ ಮುಂದೆ ಹೋಗ್ತಾ ಇದ್ಲು. ಮೈ ನಡುಗಿಸುವಂತಹ ಛಳಿ, ನಿರ್ಜನವಾದ ಪ್ರದೇಶ ಒಂಟಿಯಾಗಿ ಕಂಡು ಬಂದ ಪ್ರಾಯದ ಹೆಣ್ಣು ಇವು ಮೂರು ಸೇರಿ ನನ್ನನ್ನ ಮೃಗನನ್ನಾಗಿ ಸಿತು, ನನ್ನ ಬಲತ್ಕಾರಕ್ಕೆ ಚೆನ್ನಿ ಒಪ್ಪದೆ ಕೂಗಿ ಕೊಂಡಳು, ಆಗ ಯಾರೋ ಬೀರಿದ ಕವಣೆಯ ಕಲ್ಲು ಬಲವಾಗಿ ನನ್ನ ತಲೆಗೆ ಹೊಡೆಯಿತು, ಅಷ್ಟರಲ್ಲಿ ಚೆನ್ನಿ,

"ಇರು, ಇರು ಊರೊಳಗೆ ಹೋಗಿ ನಿನ್ನ ಯೋಗ್ಯತೇ ಏನು ಅಂತ ಹೇಳ್ತೀನಿ" ಎನ್ನುತ್ತಾ ಓಡೋದಕ್ಕೆ ಪ್ರಯತ್ನಿಸಿದಳು. ಏಕೊ ನನ್ನ ಎದೆ ಗುಂಡಿಗೆ ಬಡಿದು ಕೊಳ್ಳ ತೊಡಗಿತು.

ಕೈಲಿದ್ದ ಕೋಲಿನಿಂದ ಬಲವಾಗಿ ಅವಳ ತಲೆಯ ಮೇಲೆ ಹೊಡೆದೆ, ಆ ಏಟಿಗೆ ಚೆನ್ನಿ ಅಯ್ಯೋ ಅಂತ ಚೀರಿ ಕೆಳಗೆ ಉರುಳಿದಳು, ಸುತ್ತಾ ನೋಡಿದರೆ ಕಲ್ಲು ಬೀರಿದ ವ್ಯಕ್ತಿ ಕೈಲಿ ಕವಣೆ ಹಿಡಿದು ನಮ್ಮ ಕಡೆಗೇ ಬರ್ತಾ ಇರೋದು ನೆರಳು ನೆರಳಾಗಿ ಕಾಣಿಸಿತು. ಹೆದರಿದ ನಾನು ಅವನ ಕಣ್ಣಿಗೆ ತಪ್ಪಿಸಿಕೊಂಡು ಆ ವ್ಯಕ್ತಿಯಾರು ಅಂತ ತಿಳಿಯೋದಕ್ಕೆ ಹುಲ್ಲುಗಡ್ಡೆಯ ಮರೆಯಲ್ಲಿ ನಿಂತೆ. ಅವನು ಬೇರೆ ಯಾರೂ ಆಗಿರದೆ ನಿನ್ನ ಗಂಡ ಸುಬ್ಬರಾಯಪ್ಪನೇ ಆಗಿದ್ದ. ಪಾಪ, ಸತ್ತುಬಿದ್ದಿದ್ದ ಚೆನ್ನಿ ನೋಡಿ ತನ್ನ ಕವಣೆ ಏಟಿನಿಂದಲೇ ಅವಳು ಸತ್ತುಬಿದ್ದಿದ್ದಾಳೆ. ಅಂತ ಅವನು ಭಾವಿಸಿದ, ಸ್ವಲ್ಪ ಹೊತ್ತಿನಲ್ಲೇ ಅಲ್ಲಿಗೆ ಮೂರು ನಾಲ್ಕು ಜನ ಬಂದು ಸೇರಿದರು. ಅವರೊಂದಿಗೆ ಏನೂ ತಿಳಿಯ ದವನಂತೆ ನಾನು ಬಂದು ನಿಂತೆ. ಸುಬ್ಬರಾಯಪ್ಪನೇ ಕೊಂದಿದ್ದಾನೆ. ಅಂತ ಜನ ತಿಳಿದರು. ಜನ ನೋಡ್ತಿದ್ದ ಹಾಗೆ ಸುಬ್ಬರಾಯಪ್ಪ ತಪ್ಪಿಸಿ ಕೊಂಡು ಓಡಿಬಿಟ್ಟ. ತಲೆಮರಸಿಕೊಂಡೇ ಇದುವರೆಗೂ ಬದುಕಿದ್ದು ಈಗ ಅವನು ಇಲ್ಲವಾಗಿದ್ದಾನೆ. ಆದರೆ ನಾನು ಎಲ್ಲರ ಎದುರಿನಲ್ಲಿ ಬದುಕಿ ದ್ದರೂ ನನ್ನ ಆತ್ಮನಿಂದ ಮರೆಸಿಕೊಳ್ಳಲಾರದೆ ಬದುಕಿದ್ದೂ ಸತ್ತವನಾಗಿ ದ್ದೇನೆ, ಶಾರದಮ್ಮ".

"ಈಗ ನೀವು ಇಷ್ಟೊಂದು ಪಶ್ಚಾತ್ತಾಪ ಪಡೋದಕ್ಕಿಂತ ನಿಜಾಂಶ ತಿಳಿಸಿ ನನ್ನ ಮಾಂಗಲ್ಯಾನೂ ಉಳಿಸಿಕೊಡಬಾರದಿತ್ತೆ ಪಟೇಲರೆ"?

"ಅದೂ ಆಗ್ತಾ ಇತ್ತು. ಆದರೆ ನಿರಪರಾಧಿ ಒಬ್ಬ ತಾನೇ ಅಪರಾಧಿ ಅಂತ ಒಪ್ಪಿಕೊಂಡಾಗ ನಾನು ನನ್ನ ಸ್ಥಾನಮಾನಗಳಿಗಾಗಿ ಸುಮ್ಮನಾಗಿ ಬಿಟ್ಟೆ"

"ತಪ್ಪು ಮಾಡೋವಾಗ ಬರದಿದ್ದ ಸ್ಥಾನಮಾನಗಳ ಯೋಚನೆ ಅದರ ಪ್ರತಿಫಲ ಅನುಭವಿಸಬೇಕಾಗಿ ಬಂದಾಗ ಬರೋದು ಸಹಜತಾನೆ?. ಹೋಂಹೋಗಲಿ ಬಿಡಿ ಒಬ್ಬಗಣ್ಯವ್ಯಕ್ತಿಗಳ ಗೌರವ ಉಳಿಸೋದಕ್ಕೋಸ್ಕರ,

ನನ್ನವರು ದೊಡ್ಡ ತ್ಯಾಗವನ್ನೇ ಮಾಡಿದ್ದಾರೆ ಅಂತ ನಾನು ಹೆಮ್ಮೆ ಪಡಬೇಕಾಗಿದೆ."

"ಅವಳ ಒಂದೊಂದು ಮಾತುಗಳು ಪಟೇಲರಿಗೆ ಶೂಲಹಾಕಿ ಇರಿದಂತೆ ಆಗುತ್ತಿತ್ತು.

"ಶಾರದಮ್ಮ ನನ್ನನ್ನ ಮಾತನಾಡಿ ಕೊಲ್ಲಬೇಡ ತಾಯಿ. ದಯವಿಟ್ಟು ಕ್ಷಮಿಸಿದ್ದೀನಿ ಅಂತ ಒಂದು ಸಲ ಹೇಳಿ ಬಿಡು ಅಷ್ಟೆ ಸಾಕು"

ವೈಧವ್ಯ ಅನುಭವಿಸಬೇಕಾದ್ದು ನನಗೆ ಹೇಗೆ ಕಟ್ಟಿಟ್ಟ ಬುತ್ತಿ ಆಯಿತೋ ಅದೇರೀತಿ ಒಂದುವೇಳೆ ನಾನು ಕ್ಷಮಿಸಿದ್ದೀನಿ ಅಂತ ಹೇಳಿದರೂ ನೀವು ಮಾಡಿದ ತಪ್ಪನ್ನು ನೆನಸಿ ಕೊಳ್ತಾ ಕ್ಷಣ ಕ್ಷಣಕ್ಕೂ ಪಶ್ಚಾತ್ತಾಪ ಪಡ್ತಾ ಕೊರಗೋದು ನಿಮ್ಮ ಹಣೇಗೆ ಹತ್ತಿದ್ದು" ಎಂದವಳೇ ಕತ್ತೆತ್ತಿ ಒಮ್ಮೆಲೇ ನುಡಿದಳು.

"ಪಟೇಲರೇ ನಾನು ಈಗ ಸಂಪೂರ್ಣ ಆಸರೆ ತಪ್ಪಿದ ಬಳ್ಳಿ. ನೀವು ಹೀಗೆ ಈ ಹೊತ್ತಿನಲ್ಲಿ ಇಲ್ಲಿ ಇರೋದು ಸರಿಯಲ್ಲ . ಏಕೆಂದರೆ ಹೆಜ್ಜೆ ಹೆಜ್ಜೆಗೂ ನಾನು ಹೆದರಬೇಕಾದವಳಾದ್ದರಿಂದ ಹೇಳ್ತಾ ಇದ್ದೀನಿ. ದಯವಿಟ್ಟು ಇಲ್ಲಿಂದ ಹೊರಟು ಹೋಗಿ"

ದುಃಖಾವೇಶದಿಂದ ಅವಳು ಹಾಗೆಂದಾಗ ಕಣ್ಣಾಲಿಗಳು ತುಂಬಿ ಕೋಡಿದ್ದವು. ಮೌನವಾಗಿ ಅಲ್ಲಿಂದ ಕಾಲ್ಕಿತ್ತಗೆದ ಪಟೇಲರ ಹೃದಯವನ್ನು ಪಾಪದ ಅಗ್ನಿ ದಹಿಸುತ್ತಲೇ ಇತ್ತು.

೦ ೦ ೦

# ಊರಿಗೆ ಹೊರಟೇ ಹೋದರು

—ಕಮಲಾ ಹಂಪನಾ

ಡಾಕ್ಟರರ ಬರವಿಗಾಗಿ ಪ್ರಭ ಜಾತಕ ಪಕ್ಷಿಯಂತೆ ಕಾದು ನಿಂತಿದ್ದಳು. ಒಂದೊಂದು ನಿಮಿಷವೂ ಅವಳಿಗೆ ಒಂದೊಂದು ಯುಗವಾಗಿ ಭಾಸ ವಾಗುತ್ತಿತ್ತು. ಒಮ್ಮೆ ಹಾಸಿಗೆಯ ಮೇಲೆ ನಿದ್ರಿಸುತ್ತಾ; ಮಲಗಿರುವ ತನ್ನ ಐದು ವರ್ಷದ ಮಗಳು ಮಾಲಾಳ ಕಡೆಗೆ ಮತ್ತೊಮ್ಮೆ ವಾರ್ಡಿನ ಬಾಗಿಲ ಕಡೆಗೆ, ಅವಳ ಕಣ್ಣು ಹರಿಯುತ್ತಿತ್ತು. ರೋಗಿಗಳನ್ನು ಕಂಡು ಮಾತ ನಾಡಿಸಿಕೊಂಡು ಹೋಗುವ ಸಂಬಂಧಿಕರ ಗುಂಪುಗಳು ಬಂದು ಹೋಗು ತ್ತಿದ್ದವು. ಆದರೆ ಪ್ರಭಳ ಗಮನ ಆ ಕಡೆಗೆಲ್ಲಾ ಹರಿದಿಲ್ಲ. ನೋಡು ವವರಿಗೆ ಅವಳು ಯಾವುದೊ ಗಾಢವಾದ ಆಲೋಚನೆಯಲ್ಲಿ ಮುಳುಗಿರು ವಂತೆ ಒಮ್ಮೆ ಕಂಡರೆ ಮತ್ತೊಮ್ಮೆ ಎಲ್ಲ ಯೋಚನೆಯನ್ನೂ ಕಳೆದುಕೊಂಡ ವಿರಾಗಿಣಿಯಂತೆ ಕಾಣುತ್ತಿದ್ದಳು. ಹೀಗೆ ಅರ್ಧ ಘಂಟೆ ಕಳೆದಿರ ಬಹುದು ಪ್ರಭಳಿಗೆ ಮಾತ್ರ ಇನ್ನೂ ಡಾಕ್ಟರಿಗಾಗಿ ಕಾಯುವ ಮನ ಸ್ಸಾಗಲಿಲ್ಲ. ಮಗುವನ್ನು ಯಾರಿಗೂ ಹೇಳದೆ ಕೇಳದೆ ಎತ್ತಿಕೊಂಡು ಹೊರಟು ಹೋಗೋಣ ಎನ್ನುವ ಮನಸ್ಸಾಯಿತು. ಆದರೆ........ಅಂದು ........ಆರು ತಿಂಗಳ......ಹಿಂದೆ........

ಡಾ॥ ಚಂದ್ರಸೇಖರ್ ಕೇಳಿದರು, "ಏನಮ್ಮ ನೀವು ಸುಧೀಂದ್ರನ ಹೆಂಡತಿ ಪ್ರಭ ಅಲ್ಲವೆ ?" ತಲೆ ಎತ್ತಿ ಅವರ ಮುಖ ನೋಡಿದೆ. ಹೌದು, ಅವರು ನನ್ನ ಯಜಮಾನರ ಸ್ನೇಹಿತರು. ನಮ್ಮ ಮದುವೆಗೆ

ಬಂದಿದ್ದರು. ಅನಂತರ ನಮ್ಮ ಮನೆಗೂ ಮೂರು, ನಾಲ್ಕು ಬಾರಿ ಬಂದಿದ್ದು ಊಟ ತಿಂಡಿ ಮುಗಿಸಿಕೊಂಡುಹೋದ ನೆನಪು ನನಗೆ ಚೆನ್ನಾಗಿದೆ. ಈಗ ನಾನು ಮೌನವಾಗಿ ಅವರ ಪ್ರಶ್ನೆಗೆ ತಲೆಯನ್ನಷ್ಟೆ "ಹೂಂ" ಎನ್ನುವಂತೆ ಬಾಗಿಸಿದೆ. ನನ್ನ ಅವಸ್ಥೆಯನ್ನು ಕಂಡು ಅವರ ಕಣ್ಣಿನಲ್ಲಿಯೂ ನೀರು ಅಡಿದ್ದು ನನಗೆ ಕಾಣದೆ ಇರಲಿಲ್ಲ. ಆದರೆ ಆಗಿ ಹೋದುದನ್ನು ಕುರಿತು, ಮಾತನಾಡುವ ಮನಸ್ಸು ಈಗ ನಮ್ಮಿಬ್ಬರಿಗೂ ಇರಲಿಲ್ಲ. ನಮ್ಮಿಬ್ಬರ ಗಮನವೂ ತಲೆಗೆ ಪೆಟ್ಟುಬಿದ್ದು ಮೂರ್ಛಾವಸ್ಥೆಯಲ್ಲಿದ್ದ ನನ್ನ ಮಗಳು ಮಲಾಳ ಕಡೆ ಹರಿಯಿತು. ಸ್ಟಾಫ್ ನರ್ಸನ್ನು ಅವರು ಏನೇನೋ ಕೇಳಿದರು. ಮಗುವನ್ನು ಆದಿಯಿಂದ ಮುಡಿಯವರೆಗೂ ಮುಟ್ಟಿ ಮತ್ತೊಮ್ಮೆ ಪರೀಕ್ಷಿಸಿದರು. ಮತ್ತೆ ನರ್ಸಿಗೆ ಏನೇನೋ ಹೇಳಿದರು. ಅವರ ಮಾತುಗಳು ನನಗೆ ಒಗಟಿನಂತೆ ಕಂಡವು. ಅನಂತರ ಡಾಕ್ಟರ್ ನನ್ನ ಕಡೆ ತಿರುಗಿ "ಏನೂ ಹೆದರಬೇಡಮ್ಮಾ, ಮಾಲಾಳ ಜೀವಕ್ಕೆ ಏನೂ ಅಪಾಯವಿಲ್ಲ. ಇವತ್ತು ರಾತ್ರಿ ಖಂಡಿತಾ ಪ್ರಜ್ಞೆ ಬರುತ್ತದೆ. ನಾನೂ ಇಲ್ಲೇ ಇರುತ್ತೇನೆ" ಎಂದರು. ನನಗಾದರೋ ಮಾಲಾಳ ಬಗ್ಗೆ ವಿಚಾರಿಸಲು ಬೆಟ್ಟದಷ್ಟು ಪ್ರಶ್ನೆಗಳಿದ್ದುವು. ಆದರೆ ದುಃಖದ ಒತ್ತಡದಿಂದ ಮಾತೂ ಮೌನಗೊಂಡಿತ್ತು. ಬಲವಂತದಿಂದ ಬಾಯಿ ತೆರೆದರೆ, ಬಾಯಿಂದ ಮಾತು ಹೊರ ಬೀಳದೆ ಕಣ್ಣಿಂದ ನೀರು ಹೊರ ಚಿಮ್ಮುತ್ತಿತ್ತು. ನನ್ನ ದುಃಖವನ್ನು ಅರ್ಥ ಮಾಡಿಕೊಂಡಿದ್ದ ಡಾಕ್ಟರ್ ಚಂದ್ರಶೇಖರ್ ನನ್ನ ಮನಸ್ಸಿಗೆ ನೆಮ್ಮದಿ ನೀಡುವ ದನಿಯಲ್ಲಿ "ಅಳಬೇಡಿ ನಿಮ್ಮ ಮಾಲಾಳ ಹೊಣೆ ನನಗಿರಲಿ" ಎಂದು ನುಡಿದು ಹೊರ ನಡೆದರು.

ಅಂದು ರಾತ್ರಿ ಎರಡು ಗಂಟೆಯವರೆಗೂ ಅವರು ಪ್ರತಿ ಅರ್ಧ ಗಂಟೆಗೂ ಬಂದು ಮಾಲಾಳನ್ನು ಪರೀಕ್ಷಿಸಿದರು. ಮೂರು, ನಾಲ್ಕು ಇಂಜಕ್ಷನ್ನು ಅವರೇ ಸ್ವತಃ ಅವಳಿಗೆ ಕೊಟ್ಟರು. ನನಗೆ ಧೈರ್ಯ ಹೇಳುತ್ತಲೂ ಇದ್ದರು. ನಾನು ಆಗಾಗ ಅವರ ಮುಖವನ್ನು ದೀನ

ದೃಷ್ಟಿಯಿಂದ ನೋಡುತ್ತಿದ್ದೆ. ಆಗ ನನಗೆ, ನನಗಿಂತಲೂ ಅವರಿಗೆ ಮಾಲಾಳ ಬಗ್ಗೆ ಆತಂಕ ಜಾಸ್ತಿಯಾದಂತೆ ಕಾಣುತ್ತಿತ್ತು. ನನಗೆ ಅಂದು ಬದುಕುವ ಆಸೆ ಇರಲಿಲ್ಲ. ನನ್ನ ಮನಸ್ಸು "ಮಾಲಾಳೂ ತೀರಿಹೋದರೆ ಇನ್ನೂ ನಿಶ್ಚಿಂತೆಯಾಗಿ ಎಲ್ಲಾದರೂ ಹೋಗಿ ಒಂದು ಕೆರೆಯನ್ನೋ ಬಾವಿಯನ್ನೋ ನೋಡಿಕೋ" ಎಂದು ನುಡಿಯುತ್ತಿತ್ತು.

ಆದರೂ ಆಗಾಗ ಅಂದಿನ, ಅದರ ಹಿಂದಿನ ನೆನಪುಗಳು ಪುನಃ ಪಟಲದ ಮೇಲೆ ತೇಲಿ ಹೋದವು.

ಅಂದಿನ ಬೆಳಿಗ್ಗೆಗೂ ಸಂಜೆಗೂ ಎಂತಹ ಅಂತರ. ಒಂದುಗಳಿಗೆಯಲ್ಲಿ ಎಂಥ ವಿಪರ್ಯಾಸ ನಡೆದು ಹೋಗಿತ್ತು. ಅಂದು ಬೆಳಿಗ್ಗೆಯೂ ಎಂದಿನಂತೆ ದೇವರ ದೀಪ ಹಚ್ಚಿ. ತುಳಸೀ ಪೂಜೆ ಮಾಡಿ, ಮಾಂಗಲ್ಯವನ್ನು ಕಣ್ಣಿಗೊತ್ತಿಕೊಂಡಿದ್ದೆ. ಮಾಲಾಳಿಗಂತೂ ಎಂದು ಇಲ್ಲದ ಸಡಗರ. ಸುಮಾರು ಎಂಟು ದಿನಗಳಿಂದಲೂ ಅವಳು ಒಂದೇ ಸಮನೆ ತನ್ನ ಅಜ್ಜಿ ತಾತನ ಊರಿಗೆ ಹೋಗಬೇಕು ಎಂದು ಹಠ ಹಿಡಿದಿದ್ದಳು. ಈಗ ಐದು ವರುಷಗಳಿಂದ ನಮ್ಮ ಅತ್ತೇ ಮಾವನವರ ಊರಿಗೆ ವರ್ಷಕ್ಕೆ ಎರಡು ಬಾರಿಯಾದರೂ ಹೋಗಿ ಬರುವುದು. ನಮ್ಮ ಮನೆಯ ಒಂದು ಸಂಪ್ರದಾಯದಂತೆ ಆಗಿತ್ತು. ನಮ್ಮ ಮದುವೆಯಾದ ಎರಡು ವರುಷಗಳೂ, ನಮ್ಮ ಅತ್ತೆ ಮಾವನವರು ತಮ್ಮ ಮಗನನ್ನೂ ಸರಿಯಾಗಿ ಮಾತನಾಡಿಸುತ್ತಿರಲಿಲ್ಲ. ಕಾರಣ ಬೇರೆ ಜಾತಿಯ ಹೆಣ್ಣನ್ನು ನನ್ನವರು ಮದುವೆಯಾದದ್ದು. ಸಂಪ್ರದಾಯಸ್ತರಾದ ಅವರ ಮನಸ್ಸಿಗೆ ಬಹಳ ಬೇಸರವನ್ನು ಉಂಟು ಮಾಡಿತ್ತು. ಆದರೆ ಹೆತ್ತ ಕರುಳಿಗೆ ಮಕ್ಕಳ ತಪ್ಪು ಎಷ್ಟು ದಿವಸ ಕಂಡೀತು? ಆದರೆ ಆದರಲ್ಲಿ ನನ್ನ ತಪ್ಪಾದರೂ ಏನಿತ್ತು....

ಹುಟ್ಟುತ್ತಿದ್ದಂತೆಯೇ ತಂದೆ-ತಾಯಿಯನ್ನು ಕಳೆದುಕೊಂಡ ನಾನು ಅಜ್ಜಿಯ ಅಕ್ಕರೆಯ ಆಸರೆಯಲ್ಲಿ ಹದಿನೇಳು ವರುಷದ ಯೌವನೆಯಾಗಿ ಬೆಳೆದೆ, ನಾವು ಬಾಡಿಗೆಗೆ ಇದ್ದ ಮನೆಯಲ್ಲಿಯೇ ಮುಂದಿನ ಒಂದು

ಕೊಠಟಿಗೆ ಒಬ್ಬ ವ್ಯಕ್ತಿ ಬಾಡಿಗೆಗೆ ಬಂದರು, ಆಗ ನಾನೂ ಇನ್ನೂ ಹೈಸ್ಕೂಲಿನಲ್ಲಿ ಓದುತ್ತಿದ್ದೆ. ನಾನು ಶಾಲೆಗೆ ಹೊರಡುತ್ತಿದ್ದಂತೆಯೇ ಅವರೂ ತಮ್ಮ ಆಫೀಸಿಗೋ, ಎಲ್ಲಿಗೋ, ಅಂತು ಹೊರಡುತ್ತಿದ್ದರು. ಸುಮಾರು ಒಂದು ಫರ್ಲಾಂಗ್, ನನ್ನನ್ನು ಹಿಂಬಾಲಿಸಿದಂತೆ ಅವರು ಅಥವಾ ಅವರನ್ನು ಹಿಂಬಾಲಿಸಿದಂತೆ ನಾನು ಹೋಗುತ್ತಿದ್ದೆವು. ನೂರಡಿ ರಸ್ತೆಯನ್ನು ತಲುಪುತ್ತಿದ್ದಂತೆಯೇ ಅವರು ಎಡಗಡೆಗೆ ತಿರುಗುತ್ತಿದ್ದರು. ನಾನು ಬಲಗಡೆ ತಿರುಗುತ್ತಿದ್ದೆ. ಎಷ್ಟೋ ಬಾರಿ ನಾನೂ ಹಾಗೂ ಅವರು ಎಷ್ಟು ಸಮೀಪದಲ್ಲಿ ನಡೆಯುತ್ತಿದ್ದೆವು ಎಂದರೆ ನೋಡಿದವರಿಗೆ ಇವರಿಬ್ಬರೂ ಒಂದೇ ಮನೆಯವರೇನೋ ಎನ್ನುವಂತೆ ಕಾಣುತ್ತಿತ್ತು. ಮೊದಮೊದಲು ಅದು ನನ್ನ ಮನಸ್ಸಿಗೆ ಬಹಳ ಕಸಿ ವಿಸಿಯನ್ನು ಉಂಟು ಮಾಡಿತು. ಆದರೆ ದಾರಿಯುದ್ದಕ್ಕೂ ಅವರು ತುಂಬಾ ಗಂಭೀರ ರೀತಿಯಿಂದ ತಮ್ಮ ಪಾಡಿಗೆ ತಾವು ಹೋಗುತ್ತಿದ್ದುದನ್ನು ಕಂಡು ನನಗೆ ಬರಬರುತ್ತಾ ಅವರ ಬಗ್ಗೆ ಯಾವುದೋ ಗೌರವ ಭಾವನೆ ಮೂಡಿತು ಅನಂತರ ನೂರಡಿ ರಸ್ತೆಗೆ ಬಂದು ಬಲಗಡೆಗೆ ನಾನು ತಿರುಗಿಕೊಂಡು ನಡೆಯುವಾಗ ನನ್ನ ಅರಿವಿಲ್ಲದಂತೆ ಎರಡು ಮೂರು ಬಾರಿ ಹಿಂತಿರುಗಿ ನೋಡುತ್ತಿದ್ದೆ. ಆದರೆ ಆ ವ್ಯಕ್ತಿ ಒಮ್ಮೆಯಾದರೂ ಹಿಂದಕ್ಕೆ ತಿರುಗಿ ನೋಡುತ್ತಿರಲಿಲ್ಲ,

ಅವರ ಬಗ್ಗೆ ನನ್ನ ಕುತೂಹಲ ದಿವಸ ದಿವಸಕ್ಕೂ ಹೆಚ್ಚಾಯಿತು ಒಮ್ಮೊಮ್ಮೆ ನಾನು ಶಾಲೆಯಿಂದ ಹಿಂದಿರೇಗಿ ಬರುವ ವೇಳೆಗೆ, ಅವರೂ ಅತ್ತಕಡೆಯಿಂದ ಅದೇ ವೇಳೆಗೆ ಬರುತ್ತಿದ್ದು, ನಮ್ಮ ಬೀದಿಯಲ್ಲಿ ಒಟ್ಟು ಗೂಡುತ್ತಿದ್ದೆವು. ಅವರನ್ನು ಕಂಡು ನನ್ನ ಮನಸ್ಸು ಹಕ್ಕಿಯಂತೆ ಹಾರುತ್ತಿತ್ತು. ಅವರನ್ನು ಮುಂದೆ ಹೋಗಲು ಬಿಟ್ಟು, ಅವರ ಸೌಂದರ್ಯ ವನ್ನು ಹಿಂದಿನಿಂದ ನೋಡಿ ಸುಖಿಸುತಾ ಅವರ ನೆರಳಿನಂತೆ ಹಿಂಬಾಲಿಸಿ ನಡೆಯುತ್ತಿದ್ದೆ, ಎಷ್ಟೋ ದಿವಸ ಶಾಲೆ ಬಿಡುತ್ತಿದ್ದಂತೆಯೇ ಜಿಂಕೆಯಂತೆ ಹಾರುತ್ತಾ, ಅವರನ್ನು ನೋಡುವ ಆತುರದಿಂದ ಮನೆಗೆ ಓಡಿ ಬರುತ್ತಿದ್ದೆ.

ಒಂದೊಂದು ದಿವಸನನಗಿಂತಲೂ ಅವರೇ ಮೊದಲು ಮನೆಗೆ ಬರುತ್ತಿದ್ದರು. ಇನ್ನು ಕೆಲವು ದಿವಸಗಳಲ್ಲಿ ನಾನು ಮನೆ ಸೇರಿದ ಮೇಲೆ ಬರುತ್ತಿದ್ದರು. ಆ ವೇಳೆಗೆ ನಾನು ಕನ್ನಡಿ ಮುಂದೆ ನಿಂತು, ಬೇಗ ಬೇಗನೆ ಮತ್ತೊಮ್ಮೆ ಸಿಂಗರಿಸಿಕೊಂಡು ಅವರನ್ನು ಸ್ವಾಗತಿಸುವುದಕ್ಕೆ ನಿಂತಂತೆ ನಿಂತಿರುತ್ತಿದ್ದೆ. ದೂರದಲ್ಲಿಯೇ ಅವರ ನಡಿಗೆಯಿಂದ. ಬರುತ್ತಿರುವವರು ಅವರೇ ಎನ್ನುವುದನ್ನು ಖಚಿತ ಪಡಿಸಿಕೊಳ್ಳುತ್ತಿದ್ದೆ, ಅವರು ಮನೆಯ ಸಮೀಪ ಬರುವವರೆಗೂ ನನ್ನ ಕಣ್ಣುಗಳು ಅಪ್ಪಿ ತಪ್ಪಿಯಾದರೂ ಅತ್ತಿತ್ತ ಸುಳಿಯುತ್ತಿರಲಿಲ್ಲ, ಅವರ ಮೂರ್ತಿ ನನ್ನ ಕಣ್ಣು ತುಂಬಿ, ಮನ ತುಂಬುತ್ತಿತ್ತು. ಎಷ್ಟೋ ಬಾರಿ ನನ್ನ ಮನಸ್ಸು ಅವರ ಮುಖವನ್ನು ನನ್ನೆರಡು ಕೈಗಳಲ್ಲಿ ಹಿಡಿದು ಬಹಳ ಹತ್ತಿರದಿಂದ ನೋಡಬೇಕು ಎನ್ನಿಸುತ್ತಿತ್ತು. ಆ ಭಾವನೆ ನನ್ನ ಮನಸ್ಸಿಗೆ ಬರುತ್ತಿದ್ದಂತೆಯೇ ಲಜ್ಜೆಯಿಂದ ಮುಖ ರಂಗೇರಿ ಹೃದಯದ ಬಡಿತ ಹೆಚ್ಚಿ, ಮೈಯೆಲ್ಲಾ ರೋಮಾಂಚನ ಗೊಳ್ಳುತ್ತಿತ್ತು.

ನನಗೇಕೆ ಹೀಗಾಯಿತು ? ಅವರಿಗೆ ನನ್ನ ಬಗ್ಗೆ 'ಏನೂ ಅನ್ನಿಸುವುದಿಲ್ಲವೆ ? ಅದೇ ಒಮ್ಮೊಮ್ಮೆ ನನಗೆ ದೊಡ್ಡ ಸಮಸ್ಯೆಯಾಗಿ ನನ್ನನ್ನು ಕಾಡುತ್ತಿತ್ತು. ಈಗ ನಾನು ನನ್ನ ಉಡಿಗೆ ತೊಡಿಗೆಗಳ ಕಡೆ ಹೆಚ್ಚಿನ ಗಮನವನ್ನು ಕೊಟ್ಟಿದ್ದೆ. ಬಹಳ ಎಚ್ಚರಿಕೆಯಿಂಧ ನನ್ನ ಸೌಂದರ್ಯ ಇಮ್ಮಡಿಸುವಂತೆ ಅಲಂಕರಿಸಿಕೊಳ್ಳುತ್ತಿದ್ದೆ. ಆದರೇನು? ಒಮ್ಮೆಯಾದರೂ ಅವರು ಕಣ್ಣೆತ್ತಿ ನನ್ನ ಕಡೆ ನೋಡುತ್ತಿರಲಿಲ್ಲ.

ಒಂದು ದಿವಸ ಹೀಗೆ ಸಿಂಗರಿಸಿಕೊಂಡು ಅವರು ಕೊಠಡಿಯಿಂದ ಹೊರಬರುವುದನ್ನೇ ಎದುರು ನೋಡುತ್ತಾ ತಲೆಬಾಗಿಲ ಸಮೀಪದಲ್ಲಿ ನಿಂತೆ. ನಿಂತು ನಿಂತು ನನಗೆ ಸಾಕಾಯಿತು. ಆದರೆ ಅವರು ಮಾತ್ರ ಕೊಠಡಿ ಬಿಟ್ಟು ಹೊರಕ್ಕೆ ಬರಲಿಲ್ಲ. ಮನಸ್ಸು ಮುದುಡಿ ಹೋಯಿತು. ನಿಟ್ಟುಸಿರು ಹೊರಹೊಮ್ಮಿತು. ಕಣ್ಣು ನೀರಿನಿಂದ ತುಂಬಿ ಹೋಯಿತು. ಬಲವಂತವಾಗಿ ನನ್ನ ಹೆಜ್ಜೆಯನ್ನು ಆ ಜಾಗದಿಂದ ನಮ್ಮ ಮನೆಯ ಒಳಗೆ ಹೋಗಲು

ಹಿಂತಿರುಗಸಿದೆ, ಎರಡು ಹೆಜ್ಜೆ ಇಟ್ಟೆ, ಅವರ ಕೊಠಡಿಯ ಬಾಗಿಲು ತೆರೆಯಿತು. ನನ್ನ ಅವರ ದೃಷ್ಟಿ ಮೊಟ್ಟ ಮೊದಲ ಬಾರಿಗೆ ಒಟ್ಟಿಗೆ ಸೇರಿತು. ಒಂದು ಕ್ಷಣ ಅವರೂ ಹಾಗೇ ನಿಂತರು. ನಾನು ಮೊದಲೇ ವಿಗ್ರಹವಾಗಿದ್ದ ಅನಂತರ ಲಜ್ಜೆಯ ಹೊನಲು ನನ್ನನ್ನು ಕೊಚ್ಚಿಕೊಂಡು ಒಳಕ್ಕೆ 'ಓಡಿಸಿತು. ಬಾಗಿಲ ಬಳಿ ಹೋದ ನಾನು ಮತ್ತೊಮ್ಮೆ ಹಿಂತಿರುಗಿದೆ. ಅವರೂ ಹಿಂತಿರುಗಿ ನ್ನನನ್ನು ನೋಡಿದರು. ಮುಂದೆ ನಡೆದರು. ನನ್ನ ಅಷ್ಟು ದಿವಸದ ಶ್ರಮ ಸಾರ್ಥಕತೆ ಪಡೆದಂತೆ ನನಗೆ ಅನ್ನಿಸಿತು. ಕನ್ನಡಿಯ ಮುಂದೆ ನಿಂತು, ಅವರು ನನ್ನನ್ನೆ ಹೇಗೆ ನೋಡಿರಬಹುದು ? ಅವರಿಗೆ ನಾನು ಹೇಗೆ ಕಂಡಿರಬಹುದು? ಎಂದು ಯೋಚಿಸುತ್ತಾ ನಿಂತೆ. ಸಮಯ ಸರಿದದ್ದು ನನಗೆ ತಿಳಿಯಲಿಲ್ಲ. ಎಲ್ಲಿಯೋ ಹೋಗಿದ್ದ ನನ್ನ ಅಜ್ಜಿ ನನ್ನ ಹೆಸರಿಡಿದು ಕೂಗುತ್ತಾ ಬರಲು ಇಗ ನಾನು ಭಾವ ಪ್ರಪಂಚದಿಂದ ವಾಸ್ತವ ಪ್ರಪಂಚಕ್ಕೆ ಬಂದಿಳಿದೆ.

ಮಾರನೆ ಬೆಳಿಗ್ಗೆ ಯಥಾ ಪ್ರಕಾರ ನಮ್ಮಿಬ್ಬರ ಪ್ರತಿ ದಿವಸದ ಯಾತ್ರೆ ಪ್ರಾರಂಭವಾಯಿತು. ಅರ್ಧ ದಾರಿ ನಡೆದಿರಬಹುದು. ನಿಮ್ಮ ಹೆಸರೇನು? ಅವರೇ ಪ್ರಶ್ನೆ ಕೇಳುತ್ತಿರುವುದು! ನನ್ನನ್ನೆ! ನನಗೆ ಮೊದಲು ನಂಬಿಕೆ ಬರಲಿಲ್ಲ. ಸುಮ್ಮನೆ ನಡೆದೆ. ಪುನಃ ಅದೇ ಪ್ರಶ್ನೆ. ಅವರ ನೋಟ ನನ್ನ ಕಡೆಗೆ ಸಂಪೂರ್ಣವಾಗಿತ್ತು. ನಡುಗುವ ನಾಲಿಗೆಯಿಂದಲೇ ಉತ್ತರಕೊಟ್ಟೆ."ಯಾವ ತರಗತಿ?" 'ಯಾವ ಶಾಲೆ?' 'ಆಪ್ಷನಲ್ಸ್ ಏನು?' –ಉತ್ತರ ಕೊಟ್ಟೆ. ಆ ವೇಳೆಗೆ ನಾವಿಬ್ಬರೂ ಅಗಲುವ ರಸ್ತೆ ಬಂದಿತು. "ನಾನು ಬರುತ್ತೇನೆ" ಎಂದು ಹೇಳಿ ಅವರು ನಡೆದಿದ್ದರು. ನನಗೆ ಅಂದು ಶಾಲೆಯಲ್ಲಿ ಯಾವ ಪಾಠವೂ ತಲೆಗೆ ಹೋಗಲಿಲ್ಲ. ಇನ್ನೂ ಒಂದು ಗಂಟೆ ಪಾಠ ಇದ್ದಾಗಲೇ "ನನಗೆ ತಲೆ ನೋವೆಂದು" ಮೇಡಂನ ಕೇಳಿಕೊಂಡು ಮನೆಗೆ ಬಂದಿದ್ದೆ. ಅವರು ನನ್ನನ್ನು ಅಷ್ಟೆಲ್ಲ ಪ್ರಶ್ನೆ ಕೇಳಿ ಉತ್ತರವನ್ನು ನನ್ನಿಂದ ಗಿಟ್ಟಿಸಿಕೊಂಡಿದ್ದರು. ಆದರೆ ನಾನು ಮಾತ್ರ ಅವರ ಹೆಸರನ್ನಾದರೂ ಕೇಳಿಕೊಳ್ಳಲಿಲ್ಲವಲ್ಲಾ! ಎಂಥ ಪೆದ್ದು ಕೆಲಸ ಮಾಡಿಕೊಂಡೆ" ಎಂದು ಪರಿತಪಿಸಿದ್ದೆ.

ನರ್ಸಿನ ಸಡಗರ ಪ್ರಭಳ ಆಲೋಚನಾ ಲಹರಿಗೆ ತಡೆಯನ್ನುಂಟುಮಾಡಿತು. ಡಾ॥ ಚಂದ್ರಶೇಖರ್ ಬಂದರು. ಪ್ರಭ ಎದ್ದು ನಿಂತಳು. ಡಾಕ್ಟರ್ ನೇರವಾಗಿ ಮಾಲಾಳ ಬಳಿಗೆ ಬಂದರು. ಅವಳ ಆಸೆಯನ್ನು ಎಂದೋ ಬಿಟ್ಟು ಆಗಿತ್ತು. ಡಾಕ್ಟರರ ನಿರಂತರ ಚಿಕಿತ್ಸೆಯಿಂದ ಮಾಲಾ ಮೃತ್ಯುವಿನ ಬಾಯಿಂದ ಪಾರಾಗಿದ್ದಳು. ಆದರೆ ಬದುಕಿ ಪ್ರಯೋಜನವೇನು? ತಲೆಗೆ ಬಿದ್ದ ಅತಿಯಾದ ಪೆಟ್ಟಿನಿಂದ ಅವಳ ಜ್ಞಾಪಕಶಕ್ತಿ ಉಡುಗಿಹೋಗಿತ್ತು. ಅವಳು ತನ್ನ ತಾಯಿಯನ್ನು ಸಹ ಎಲ್ಲೋ ಒಮ್ಮೊಮ್ಮೆ ಗುರುತಿಸುತ್ತಿದ್ದಳು. ನಾಲ್ಕು ತಿಂಗಳ ನಿರಂತರ ಚಿಕಿತ್ಸೆ ನೀಡಿದ ಡಾಕ್ಟರುಗಳು ಮಾಲಾಳ ಭವಿಷ್ಯವನ್ನು ನಿರ್ಧರಿಸಿದ್ದರು, ಅವಳಿಗೆ ವಾಸಿಯಾಗದ ಖಾಯಿಲೆಯಾಗಿತ್ತು. ಈ ನಿರ್ಧಾರ ತಿಳಿದಿದ್ದು ಎರಡು ತಿಂಗಳ ಹಿಂದೆಯೇ, ಅದು ಪ್ರಭಳನ್ನು ಜೀವಚ್ಛವವನ್ನಾಗಿ ಮಾಡಿತ್ತು. ಪ್ರಭ ಭಾರವಾದ ಹೃದಯದಿಂದ ಆ ದಿವಸ ಮಾಲಾಳನ್ನು ಆಸ್ಪತ್ರೆಯಿಂದ ಮನೆಗೆ ಕರೆದುಕೊಂಡು ಹೋಗಿದ್ದಳು.

ಮನೆ, ಅದು ಮನೆಯೆ? ಪ್ರಭಳ ಪಾಲಿಗೆ ಅದೊಂದು ನರಕವಾಗಿತ್ತು; ಮನೆಯಲ್ಲಿ ಹದಿನೈದು ದಿವಸಗಳು ಮಾಲಾಳನ್ನು ಇರಿಸಿಕೊಳ್ಳಬೇಕಾದರೆ ಸಾಕು ಸಾಕಾಗಿ ಹೋಗಿತ್ತು. ಮನೆ ಮಂದಿಯೆಲ್ಲಾ ಒಂದೊಂದು ಮಾತನಾಡುತ್ತಿದ್ದವರೇ. ಮೊಟ್ಟ ಮೊದಲ ಬಾರಿಗೆ. ಒಂದು ವರುಷದ ಮಾಲಾಳನ್ನು ಎತ್ತಿಕೊಂಡು, ತನ್ನವನ ಜೊತೆಯಲ್ಲಿ ಪ್ರಭ ಅದೇ ಮನೆಯನ್ನು ಪ್ರವೇಶಿಸಿದಾಗ ಮನೆಯವರೆಲ್ಲಾ ಅದೆಷ್ಟು ಪ್ರೀತಿಯಿಂದ ಸ್ವಾಗತಿಸಿದ್ದರು, ಪ್ರಭ, ಅಲ್ಲಿಯವರೆಗೂ ಕಲ್ಪಿಸಿಕೊಂಡಿದ್ದ ಭಾವನೆಗಳನ್ನೆಲ್ಲಾ ಒಂದೇ ಕ್ಷಣದಲ್ಲಿ ಬದಲಾಯಿಸಿ ಬಿಟ್ಟಿದ್ದರು. ಬೇರೆ ಜಾತಿಯ ಹೆಣ್ಣನ್ನು ಅದೆಷ್ಟು ಅಭಿಮಾನದಿಂದ ಕಂಡರು, ಅವರುಗಳ ಅತ್ತೆ, ನಡೆ–ನುಡಿಯಿಂದ ಪ್ರಭ ಬಹಳ ಬೇಗನೆ ಅವರ ಮನೆಯವರಲ್ಲಿ ಅವಳೂ ಒಬ್ಬಳು, ಎನ್ನುವಂತೆ ಆಯಿತು. ಹೇಗಾಗಿ ಪ್ರಭಳ ಮಾವನವರ ಊರಿಗೆ ವರುಷಕ್ಕೆ ಎರಡು ಬಾರಿ ಹೋಗಿ ಬರುವುದರಲ್ಲಿ

ಆವಳ ಮನಸ್ಸಿಗೆ 'ಏನೇನೂ ಕಸಿವಿಸಿಯಾಗುತ್ತಿರಲಿಲ್ಲ. ಆದರಲ್ಲಿಯೂ ಊರಿಗೆ ಹೊರಡುವ ವಿಷಯದಲ್ಲಿ ಪುಟಾಣಿ ಮಾಲಾ ತೋರುತ್ತಿದ್ದ ಸಂಭ್ರಮ ಪ್ರಭ ಹಾಗೂ ಸುಧೀಂದ್ರರ ಮನಸ್ಸಿಗೆ ಇನ್ನೂ ಹೆಚ್ಚಿನ ಸಂತೋಷವನ್ನುಂಟುಮಾಡುತ್ತಿತ್ತು. ಯಾವುದಕ್ಕಾದರೂ ಆವಳು ಹಠ ಮಾಡಿದರೆ "ಅಜ್ಜಿ–ತಾತನ ಊರಿಗೆ ಹೋಗೋಣ, ಸುಮ್ಮನಿರಮ್ಮಾ" ಎಂದರೆ ಸುಮ್ಮನಾಗಿ ಬಿಡುತ್ತಿದ್ದಳು. ಒಮ್ಮೊಮ್ಮೆ ಅವಳು "ಊರಿಗೆ ಹೋಗೋಣ" ಎಂದು ಹಠ ಹಿಡಿಯುತ್ತಿದ್ದುದೂ ಉಂಟು, ಆಗ ಆವಳನ್ನು ಸಮಾಧಾನ ಮಾಡಬೇಕಾದರೆ ಆ ದಂಪತಿಗಳಿಗೆ ಸಾಕು ಸಾಕಾಗಿ ಹೋಗುತ್ತಿತ್ತು. ಐದು ವರುಷಗಳು ಅದೆಷ್ಟು ಬೇಗ ಕಳೆದುಹೋಯಿತು,

ಮಾಲಾಳ ಸಮೀಪಕ್ಕೆ ಬಂದು ನಿಂತ ಡಾಕ್ಟರರನ್ನು ಕುರಿತು ಪ್ರಭ 'ಮಾಲಾಳನ್ನು ಮನೆಗೆ ಕರೆದುಕೊಂಡು ಹೋಗುತ್ತೇನೆ' ಎಂದಳು. ಡಾಕ್ಟರ್ ಚಂದ್ರಶೇಖರ "ಏಕೆ" ? ಎನ್ನುವಂತೆ ಆಕೆಯ ಮುಖವನ್ನು ನೋಡಿದರು. ಅವರಿಗೆ ಪ್ರಭಳ ಅತ್ತೆಯ ಮನೆಯ ವಿಷಯ ತಿಳಿಯ ದಾಗಿರಲಿಲ್ಲ. ಆಸ್ಪತ್ರೆಯಲ್ಲಿ ಮಾಲಾಳನ್ನು ಬಿಟ್ಟಿರಲಾರದೆ ಪ್ರಭ, ಹಿಂದೆ ಒಮ್ಮೆ ಆವಳನ್ನು ಮನೆಗೆ ಕರೆದುಕೊಂಡು ಹೋಗಿದ್ದಳು. ಆದರೆ ಆ ಮನೆಯವರೆಲ್ಲರೂ ಮಾಲಾಳನ್ನು ಒಂದು ಹುಚ್ಚು ನಾಯಿ ಎನ್ನುವಂತೆ ಕಂಡಿದ್ದರು. ಅವಳ ತಾಯಿಯನ್ನೇ ಮನೆಯ ಕೆಲಸದವಳಂತೆ ಕಾಣುತ್ತಿ ದ್ದಾಗ, ಇನ್ನು ಬುದ್ಧಿ ಕೆಟ್ಟ ಮಾಲಾಳ ಬಗೆಗೆ ಅವರ ಪ್ರೀತಿ, ಆದರ ಎಲ್ಲಿ ಕಾಣಬೇಕು ? ಆದ್ದರಿಂದ ಸ್ವಲ್ಪ ದಿವಸಗಳಲ್ಲಿಯೇ ಪ್ರಭ ಮಾಲಾಳನ್ನು ಪುನಃ ಆಸ್ಪತ್ರೆಗೆ ತಂದು ಸೇರಿಸಿದ್ದಳು.

ಚಂದ್ರಶೇಖರನಿಗೆ ಪ್ರಭಳ ಮದುವೆಯ ಸಂಗತಿ ಸಂಪೂರ್ಣವಾಗಿ ತಿಳಿದಿತ್ತು. ಗೆಳೆಯ ಸುಧೀಂದ್ರ ಎಲ್ಲವನ್ನು ವಿವರವಾಗಿ ತಿಳಿಸಿದ್ದ. ಅಜ್ಜಿಯ ಆಶ್ರಯದಲ್ಲಿದ್ದ ಪ್ರಭಳು, ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತುಕೊಳ್ಳುವ ಮೊದಲೇ ಅಜ್ಜಿಯ ವಿಯೋಗವಾಯಿತು. ಒಂದು ದಿನ ಸಂಜೆ ಎಂದಿನಂತೆ ಮಾರುಕಟ್ಟೆಗೆ ಪೋದ ಅಜ್ಜಿ ಹಿಂತಿರುಗಿ ಬರಲಿಲ್ಲ, ದಾರಿಯಲ್ಲಿ ಅಪಘಾತಕ್ಕೆ ಈಡಾಗಿ ಸ್ಥಳದಲ್ಲಿಯೇ ಪ್ರಾಣ ಬಿಟ್ಟಿ

ಸ್ದರು. ಅವರ ಮನೆಯ ಮುಂದಿನ ಕೊಠಡಿಯಲ್ಲಿ ಬಾಡಿಗೆಗೆ ಇದ್ದ ತನ್ನ ಗೆಳೆಯ ಸುಧೀಂದ್ರ ಅಜ್ಜಿಯ ಶವ ಸಂಸ್ಕಾರ ಮಾಡಿ, ದಿಕ್ಕಿಲ್ಲದ ಆ ಹುಡುಗಿಗೆ ಆಧಾರವಾಗಬೇಕಾಯಿತು, ಅದಕ್ಕೆ ಉಳಿದಿದ್ದ ಮಾರ್ಗ ವೆಂದರೆ ಮದುವೆಯೊಂದೆ, ಸುಧೀಂದ್ರ ಸರಳ ರೀತಿಯಿಂದ ಪ್ರಭಳನ್ನು ವಿವಾಹವಾದನು. ವಿಜಾತಿಯ ಹುಡುಗಿಯನ್ನು ಮದುವೆ ಆದದ್ದು ಸುಧೀಂದ್ರನ ಮನೆಯವರಿಗೆ ಸ್ವಲ್ಪವೂ ಇಷ್ಟವಾಗಲಿಲ್ಲ. ಆದರೂ ಪ್ರಭಳ ಗುಣ ಶೀಲಗಳು ಅವರ ಮನೆಯವರೆಲ್ಲರ ಮನಸ್ಸನ್ನು ಬಹಳ ಬೇಗನೆ ಗೆದ್ದುವು. "ಮಾಲಾ" ಹುಟ್ಟಿ ಇನ್ನೂ ಸ್ವಲ್ಪ ಬಿರುಕು ಬಿಟ್ಟಿದ್ದ ಎರಡು ಮನೆಗಳನ್ನು ಒಂದುಗೂಡಿಸಿದ್ದಳು. ಅದುದರಿಂದಲೇ ವರುಷಕ್ಕೆ ಎರಡು ಬಾರಿಯಾದರೂ ಸುಧೀಂದ್ರ ತನ್ನ ತಂದೆ–ತಾಯಿಯ ಮನೆಗೆ, ಹೆಂಡತಿ, ಮಕ್ಕಳೊಡನೆ ಬಂದು ಹೋಗುತ್ತಿದ್ದ. ಹಾಗೆ ಒಮ್ಮೆ ಹೊರಟು ಬರುತ್ತಿದ್ದಾಗ ದಾರಿಯಲ್ಲಿ ಅವರು ಬರುತ್ತಿದ್ದ ರೈಲು ಅಪಘಾತಕ್ಕೆ ಈಡಾಗಿ ಸುಧೀಂದ್ರ ಸ್ಥಳದಲ್ಲಿಯೇ ಮೃತನಾಗಿದ್ದ. ತಲೆಗೆ ಪೆಟ್ಟು ಬಿದ್ದ ಮಾಲಾಳ ಸ್ಥಿತಿ ಹೀಗಾಯಿತು. ದಿಕ್ಕಿನ ಏಕೈಕ ಊರುಗೋಲು ಮುರಿದು ಹೋಗಲು ಪ್ರಭ ತನ್ನ ಅತ್ತೆ ಮಾವನ ಮನೆಯನ್ನೇ ಸೇರಬೇಕಾಯಿತು. ಆದರೆ ಹಿಂದೆ ಆಕೆಗೆ ದೊರೆಯುತ್ತಿದ್ದ ಆದರವೇನು? ಇಂದು ಆಕೆಯ ಸ್ಥಿತಿ ಮನೆಯ ಆಳಿಗಿಂತಲೂ ಕೀಳಾ ಯಿತು. ಅದಕ್ಕಾಗಿಯೇ ಮಾಲಾಳನ್ನು ಆಸ್ಪತ್ರೆಯಲ್ಲಿಯೇ ಕಡೆಯ ವರೆಗೂ ಬಿಡುವ ನಿರ್ಧಾರವನ್ನು ಪ್ರಭ ಕೈಗೊಂಡಿದ್ದಳು.

ಆದರೆ ಇಂದು; ಪ್ರಭ ಡಾಕ್ಟರರ ಉತ್ತರಕ್ಕೂ ಕಾಯದೆ "ಮಾಲಾ"ಳನ್ನು ಹೆಗಲ ಮೇಲೆ ಹಾಕಿಕೊಂಡು ಹೊರಟೇ ನಿಂತಳು ಅವಳನ್ನು ತಡೆಯುವ ಶಕ್ತಿ ಡಾಕ್ಟರಿಗೆ ಉಡುಗಿ ಹೋಗಿತ್ತು, ಆದರೂ "ಎಲ್ಲಿಗೆ ಹೊರಟಿದ್ದೀರಿ" ? ಎಂದ ಅವರ ಪ್ರಶ್ನೆಗೆ "ಊರಿಗೆ ಹೋಗುತ್ತಿದ್ದೇವೆ" ಎಂದು ಉತ್ತರಿಸಿ, ಮರು ಪ್ರಶ್ನೆಗೆ ಅವಕಾಶ ವೀಯದಂತೆ ನಡೆದೇ ಬಿಟ್ಟಳು. ಮಾಲಾ ಕನಸಿನಲ್ಲಿ ಮಾತನಾಡು ತ್ತಿರುವಂತೆ "ಊರಿಗೆ ಹೋಗೋಣ ಅಮ್ಮಾ" ಎಂದಾಗ "ಅಲ್ಲಿಗೇ

ಹೋಗುತ್ತಿರುವುದು ಮಾಲಾ, ಬಾ ಹೋಗೋಣ" ಎಂದು ಅವಳ" ತಲೆಯನ್ನು ಸೇವರಿಸುತ್ತಾ ವಾರ್ಡಿನಿಂದ ಕಣ್ಮರೆಯಾದ ಪ್ರಭಳ ವಿಚಿತ್ರ ವರ್ತನೆ ಒಂದೆರಡು ಕ್ಷಣ ಡಾಕ್ಟರ್ ಚಂದ್ರಶೇಖರರನ್ನು ವಿವಶರನ್ನಾಗಿ ಮಾಡಿತು. ನರ್ಸ್ ಎಚ್ಚರಿಸಿದಾಗ ಅವರು ತಮ್ಮ ಮುಂದಿನ ಕರ್ತವ್ಯ ದತ್ತ ಗಮನಹರಿಸಿದರು

ಅಂದು ರಾತ್ರಿ ಡಾಕ್ಟರರಿಗೆ ನಿದ್ರೆ ಸರಿಯಾಗಿ ಹತ್ತಲಿಲ್ಲ, ಪ್ರಭ ಮಾಲಾಳನ್ನು ಎತ್ತಿಕೊಂಡು, ಸಮಾಧಾನ ಪಡಿಸುತ್ತಾ ನಡೆದ ದೃಶ್ಯ ಕಣ್ಣಿಂದ ದೂರ ಸರಿಯಲಿಲ್ಲ. ಇದೇ ಚಿಂತೆಯಲ್ಲಿ ಮುಳುಗಿದ ಅವರಿಗೆ ನಿದ್ರೆ ಯಾವಾಗ ಬಂದಿತೋ ತಿಳಿಯದು ಎಚ್ಚರವಾದಾಗ ಬೆಳಿಗ್ಗೆ 'ಏಳುಗಂಟೆಯಾಗಿತ್ತು. ಮುಖ ತೊಳೆದು ಕಾಫಿ ಕುಡಿ ಯುತ್ತಾ. ಕೈಗೆ ಪೇಪರನ್ನು ಎತ್ತಿಕೊಂಡರು. ಮೊದಲ ಪುಟ ನೋಡಿ. ಎರಡನೆ ಪುಟದಲ್ಲಿ ಕಣ್ಣಾಡಿಸಿದರು. ಅಲ್ಲಿ ಕಂಡದ್ದೇನು? ಕ್ಷಣ ಕಾಲ ಕಣ್ಣು ಮಂಜಾಯಿತು, ತಲೆ ಸುತ್ತಿತು. "ಅನಾಥೆ ಯೊಬ್ಬಳು, ತನ್ನ ಐದು ವರುಷದ ಹೆಣ್ಣು ಮಗುವಿನೊಡನೆ, ನಿನ್ನೆ ರಾತ್ರಿ ಮದ್ರಾಸ್ ರೈಲಿಗೆ ತಲೆ ಕೊಟ್ಟು ಸತ್ತಿದ್ದಾಳೆ. ಅವರು ಯಾರೆಂದು ಇನ್ನೂ ಪತ್ತೆಯಾಗಿಲ್ಲ".

ತಕ್ಷಣ ತನ್ನ ವಾಹನವನ್ನೇರಿ ಡಾಕ್ಟರ್ ಆ ಸ್ಥಳ ತಲುಪಿದರು, ಆ ದೃಶ್ಯ ಅವರ ಮನಸ್ಸಿಗೆ ಅತೀವ ನೋವನ್ನು ತಂದಿತು. ಎಷ್ಟೋ ಜನ ರೋಗಿಗಳು ತಮ್ಮ ಕೈಯನ್ನು ಹಿಡಿದುಕೊಂಡೇ ಮೃತರಾದು ದನ್ನು ಅವರು ಕಾಣದವರಲ್ಲ. ಆದರೆ ಇಂದು ಮಾತ್ರ, ಅವರಿಗೆ ಈ ಯಾತನೆ ಸಹಿಸದಾಯಿತು. ಆಕೆಯ ಮಾವನ ಮನೆಯವರು ಯಾರಾ ದರೂ ಬಂದಿರಬಹುದೆಂದು. ನಿಂತ ಗುಂಪಿನ ಕಡೆ ಒಮ್ಮೆ ಕಣ್ಣಾಡಿಸಿದರು- ಆದರೆ ಅವರು ಯಾರೂ ಅಲ್ಲಿ ಕಾಣಲಿಲ್ಲ.

ಸುದ್ದಿಯನ್ನು ಅವರಿಗೇ ಮುಟ್ಟಿಸಲು, "ಅವರಿಗೂ ನಮಗೂ ಯಾವ ಸಂಬಂಧವೂ ಇಲ್ಲ ಎಂದು" ಉತ್ತರ ಬಂದಿತು. ಉತ್ತಮ ಜಾತಿಯವರಿಂದ ಬಂದ ಉತ್ತರವನ್ನು ಕಂಡು ಡಾಕ್ಟರಿಗೆ ಮೈಯೆಲ್ಲಾ ಉರಿಯಿತು. ಅವರ ಬಳಿ ಮಾತು ಮುಂದುವರಿಸಲು ಡಾಕ್ಟರಿಗೆ ಸಮಯವಿರಲಿಲ್ಲ. ತನ್ನ ಗೆಳೆಯನ ಹೆಂಡತಿ, ಮಗುವನ್ನು ಅನಾಥಹೆಣವಾಗಿ ಬಿಡಲು ಅವರ ಮನಸ್ಸು ಒಡಂಬಡಲಿಲ್ಲ. ಪೋಸ್ಟ್ ಮಾರ್ಟಂ ಆದ ನಂತರ ಡಾಕ್ಟರೇ ಅವರೀರ್ವರ ಶವಸಂಸ್ಕಾರ ನಡೆಸಿದರು. ಅವರ ಅರಿವಿಲ್ಲದಂತೆ ಕಣ್ಣು ನೀರನ್ನು ಮಿಡಿಯಿತು. ಬಾಯಿ ಉದ್ಗರಿಸಿತು; "ಊರಿಗೆ ಹೋರಟೇ ಹೋದರು" ಎಂದು;

# "ಕಾಯ್ದು ನಿಂತವನು"

ಕಿರುಗತೆ 'ಯಾಮಿನಿ'

(ಯಮುನಾಮೂರ್ತಿ)

ಡೆಲ್ಲಿಯಿಂದ ಮುಂಬೈಗೆ ವೇಗವಾಗಿ ಹೊರಟಿತ್ತು ರೈಲುಗಾಡಿ, ಮೊದಲನೇ ದರ್ಜೆ 'ಕೂಪೆ'ಯಲ್ಲಿ ನಾನೊಬ್ಬಳೇ ಕುಳಿತಿದ್ದೆ. ಓಡು ತ್ತಿದ್ದ ಗಿಡಮರಗಳು, ಕಣ್ಣುಮುಚ್ಚಾಲೆಯಾಡುತ್ತಿದ್ದ ಬೆಳಗಿನ ಸೂರ್ಯ, ಅಲೆ ಅಲೆಯಾಗಿ ಹೊಯ್ದಾಡುತ್ತಿದ್ದ ವಿವಿದ ಹಸುರಿನ ಬೆಳೆಗಳ ಚಾಕೆ ಗಳು, ಬೆಚ್ಚಗಿನ ಮುಖದ ಮೇಲೆ ತಣ್ಣಗೆ ಬೀಸುತ್ತಿದ್ದ ಗಾಳಿ ! ಮೈ ಮರೆತಿದ್ದ ನನ್ನನ್ನು ನಯವಾಗಿ ಎಬ್ಬಿಸಿತು ಒಂದು ದನಿ,

'ಎಕ್ಸ್ಕ್ಯೂಸ್ ಮಿ'

ಓ ! ಎಂಥ ಮಾದಕತೆ ! ತಿರುಗಿ ನೋಡಿದೆ. ಬಾಗಿಲಿನ ಹತ್ತಿರ ಒಬ್ಬ ಯುವಕ ನಿಂತಿದ್ದ. ಆರು ಅಡಿ ಎತ್ತರವಿರಬಹುದು. ಆಕರ್ಷಕ ಮೈಕಟ್ಟು. ದಟ್ಟವಾಗಿ ಕರ್‍ರಗೆ ಮಿಂಚುತ್ತಿದ್ದ ತಲೆಗೂದಲು ಅಷ್ಟೇ ದಟ್ಟವಾದ ಪುಟ್ಟ ಗಡ್ಡ, ಹೊಳಪು ಕಣ್ಣುಗಳು. ನೀಳವಾದ ಮೂಗು. ನಸುನಗುತ್ತಿದ್ದ ತುಟಿಗಳು ! ಎಲ್ಲೋ ನೋಡಿದ ನೆನಪು... ಆದರೆ....?

"ಕ್ಷಮಿಸಿ....ನನ್ನ ರಿಸರ್ವೇಷನ್ನೂ ಈ ಬೋಗಿಲೇ ಕೊಟ್ಟಿದ್ದಾರೆ"

"ಇದು....ಇದು...ಕೂಪೆ" ತಡವರಿಸಿದೆ.

"ಗೊತ್ತು....ಸಾಧಾರಣವಾಗಿ ಒಂದು ಕೂಪೇಲಿ ಬೇರೆ ಬೇರೆ ಯವ್ರಿಗೆ ಕೊಡೊಲ್ಲ....ಆದರೆ, ಬೇರೆ ಎಲ್ಲೂ ಖಾಲೀನೇ ಇಲ್ಲ"

"ಓಹ್! ಕೂತ್ಕೊಳ್ಳಿ"

ಆ ಯುವಕ 'ಥ್ಯಾಂಕ್ಸ್' ಎನ್ನುತ್ತಾ, ನಾನು ಕುಳಿತಿದ್ದ ಬರ್ತಿನ ಇನ್ನೊಂದು ತುದಿಯಲ್ಲಿ ಕುಳಿತ.

ನಾನು ಪುನಃ ಕಿಟಕಿಯ ಕಡೆ ಮುಖ ತಿರುಗಿಸಿದೆ. ತಂಗಾಳಿಯ ಜೊತೆ ಯಾವುದೊ ಸುವಾಸನೆ ನನ್ನ ಸುಪ್ತ ಮನಸ್ಸನ್ನು ಕೆದಕಿತು. "ಇದ್ಯಾವ್ದು ಈ ಫರ್ ಫ್ಯೂಮ್?" ದೀರ್ಘಶ್ವಾಸ ತೆಗೆದುಕೊಂಡೆ. ಮತ್ತೆ ಮತ್ತೆ ಮೂಸ ಬೇಕೆನ್ನಿಸುವಂಥ ಸುವಾಸನೆ, ಜುಳು ಜುಳು ಹರಿಯುತ್ತಿರುವ ನದಿ. ಅದರ ಅಂಚಿಗೆ ಬಾಗಿನಿಂತ ದೊಡ್ಡ ವೃಕ್ಷ, 'ಕುಹೂ ಕುಹೂ' ಎಂದು ಒಂದನ್ನೊಂದು ಕೂಗಿ ಕರೆಯುತ್ತಿದ್ದ ಕೋಗಿಲೆಗಳು ಸೂರ್ಯ ಮುಳುಗುವ ವೇಳೆ, ತಂಪಾದ ಗಾಳಿ, ಇವೆಲ್ಲ ಚಿತ್ರಗಳನ್ನು ಮನಃಪಟಲದ ಮೇಲೆ ಮೂಡಿಸುವ ಸುವಾಸನೆ! ಎಷ್ಟು ಪರಿಚಿತ, ಆದರ ಏನು, ಎಲ್ಲಿ ಒಂದು ನೆನಪಿಗೆಬಾರದು.

"ನೀವು ಬೆಂಗಳೂರಿನವರು ಅಲ್ಲವಾ ?" ಮತ್ತೆ ಅದೇ ಧ್ವನಿ

'ಹೂಂ'....ತಲೆಯಲ್ಲಾಡಿಸಿದೆ.

"ಆ ಮ್ಯಾಗಜೀನ್ ಸ್ವಲ್ಪ ನೋಡ್ಬಹುದಾ?"

ಮಾಸಿಕ ಅವನ ಕಡೆ ಸರಿಸಿದೆ. ಅದನ್ನು ತೆಗೆದುಕೊಂಡ ನೀಳವಾದ ಅವನ ಬೆರಳುಗಳನ್ನು ನೋಡಿ, ಕಲಾವಿದನಿರಬಹುದು ಎಂದು ಕೊಂಡೆ.

ಪುಸ್ತಕ ತೆಗೆದುಕೊಳ್ಳಲು ಸ್ವಲ್ಪ ಬಾಗಿದಾಗ ಅವನ ದಟ್ಟವಾದ ಮುಂಗುಳಿನ ಸ್ವಲ್ಪ ಭಾಗ ಹಣೆಯ ಮೇಲೆ ಜಾರಿತು. ತಕ್ಷಣ ಕೈಚಾಚಿ ಅದನ್ನು ಹಿಂದೆ ಸರಿಸಬೇಕು ಎಂದ. ಮನಸ್ಸಿನಲ್ಲಿ ಹುಟ್ಟಿದ ಭಾವನೆಯಿಂದ ನಾಚಿ ಬೆವರಿದೆ, ಅಪರಿಚಿತ ಯುವಕನ ಬಗ್ಗೆ ನನ್ನ ಪ್ರತಿಕ್ರಿಯೆ ಗುರುತಿಸಿ ವಿಚಿತ್ರವೆನಿಸಿತು, ಇನ್ನು ಅವನ ಕಡೆ ನೋಡ ಬಾರದು ಎಂದು ನಿರ್ಧರಿಸಿ. ಬಲವಂತದಿಂದ ನನ್ನ ಕಣ್ಣುಗಳನ್ನು ಕಿಟಕಿಯ ಕಡೆ ತಿರುಗಿಸಿದೆ.

ಕಣ್ಣುಗಳು ಅವನನ್ನು ನೋಡದಿದ್ದರೂ, ಆ ಸುವಾಸನೆಯಿಂದ ಮೂಗು ಅರಳಿತ್ತು. ಮೈಯಲ್ಲಿ ಏನೋ ಪುಳಕ...ಇಷ್ಟು ದೂರದಿಂದಲ್ಲೇ ಹೀಗೆನಿಸುತ್ತಿದೆಯಲ್ಲಾ, ಅವಳ ತೋಳ ತೆಕ್ಕೆಯಲ್ಲಿ ಹೇಗಿರಬಹುದು?. ಛಿ...ಛಿ....ಏನೆಲ್ಲ ವಿಚಾರಗಳು.

ನನಗೆ ಮೊದಲಿಂದಲೂ ಸುವಾಸನೆ ಎಂದರೆ ಹುಚ್ಚು. ಮೂಗು ಅತಿ ಚುರುಕು...ಮನೆಯ ಬಾಗಿಲು ದಾಟಿ ಒಳಗೆ ಬರುವ ಮೊದಲೆ, ರಸ್ತೆಯಿಂದಲೆ, ಅಡಿಗೆ ಏನು ಮಾಡಿದ್ದಾರೆ ಎಂದು ಹೇಳುತ್ತಿದ್ದೆ. ಬರೇ ವಾಸನೆ ನೋಡಿ ಸಾರಿಗೆ ಉಪ್ಪು ಹಾಕಿದ್ದರೋ ಇಲ್ಲವೊ ಎಂಬುದು ತಿಳಿಯುತ್ತಿತ್ತು. ನನ್ನ ತಮ್ಮ ಒಮ್ಮೆ ಅಕ್ಕ ಹಿಂದಿನ ಜನ್ಮದಲ್ಲಿ ನಾಯಿ ಆಗಿದ್ಳು ಅಂತ್ಕಾಣತ್ತೆ ಎಂದು ಏನೋ ಸಂಶೋಧನೆ ಮಾಡಿದವನಂತೆ ಹೇಳಿ, ಅಮ್ಮನಿಂದ ಏಟುತ್ತಿಂದ್ದ. ನಮ್ಮ ಅಣ್ಣನಂತೂ "ಬೂದಿ ಮಂತ್ರಿಸೋದೇ ಬೇಡ, ಯಾರಾದ್ರೂ ಒಳ್ಳೆ ಪರ್‌ಫ್ಯೂಮ್ ಹಚ್ಕೊಂಡ್ರೆ ಸಾಕು, ಅವರ್ಹಿಂದ್ಹಿಂದೇನೆ ಹೊರಟ್ಬಿಡಾಳಿವಳು" ಅಂತ ಲೇವಡಿ ಮಾಡ್ತಿದ್ದ.

ಅವನ ಚೇಷ್ಟೆಯ ಮಾತು ನೆನಪಿಗೆ ಬಂದು, ನಗು ಉಕ್ಕಿ ಬಂದಿತು. ಬಲವಂತವಾಗಿ ತುಟಿ ಬಿಗಿ ಹಿಡಿದೆ, ಕೈಯಲ್ಲಿ ಮಾಸಪತ್ರಿಕೆಯ ಹಾಳೆಗಳನ್ನು ತಿರುವುತ್ತಿದ್ದರೂ ನನ್ನ ಕಡೆಯೇ ಗಮನವಿಟ್ಟಿದ್ದಿರಬೇಕು ಆ ಯುವಕ,

'ಎ ಪೆನ್ನಿ ಫಾರ್ ಯುವರ್ ಥಾಟ್ಸ್' ಎಂದ

ನಾನು ತಬ್ಬಿಬ್ಬಾಗಿ 'ಏನಿಲ್ಲ' ಎಂದೆ.

'ತುಟಿ ಕಚ್ಕಿ, ಉಕ್ಕಿ ಬಂದ ನಗೆಯನ್ನ ಹತ್ತಿಕ್ಕಿದ್ದು, ನನಗೆ ಕಾಣಿಸ್ತು! ಎಂದ ನಗುತ್ತಾ.

ಅವನ ತುಂಟು ನಗೆಯ ಸೋಂಕಿನಿಂದ ನನ್ನ ತುಟಿಗಳು ಅರಳ ದಂತೆ ನಾನು ಎಚ್ಚರಿಕೆ ವಹಿಸಿದರೂ, ಕಣ್ಣುಗಳಲ್ಲಿ ನನಗೆ ಮರೆ ಮಾಡುವುದು ನನ್ನಿಂದ ಸಾಧ್ಯವಾಗಲಿಲ್ಲ.

'ನಾನು ಇದನ್ನ ಮಾತ್ರ ಎಂದೂ ಮರ್ರ್ಯೊಹಾಗಿಲ್ಲ' ಅವನ ಮಾತಿಗೆ ಏನು? ಎಂಬಂತೆ ಪ್ರಶ್ನಾರ್ಥಕವಾಗಿ ನೋಡಿದೆ.

ನಿನ್ನ ನಗು! ತುಟಿಯಿಂದ ಪ್ರಾರಂಭವಾಗಿ ಕಣ್ಣಲ್ಲಿ ಹೊರ ಸೂಸೊ ನಗು. ಆ ನಗ್ತಾ ಇರೊ ಕಣ್ಣುಗಳನ್ನ ನೋಡಿದ್ರೆ, ಕಾರಣ ಗೊತ್ತಿರದಿದ್ರೂ, ನೋಡೋರ್ಗ್ಗೂ ನಗುತರಿಸೋ ನಗು....!

ಅಪರಿಚಿತ ವ್ಯಕ್ತಿ ಇಂಥಹ ಮಾತುಗಳನ್ನಾಡಿದರೆ, ಯಾರಿಗಾದರೂ ಆಶ್ಚರ್ಯವಾಗಬಹುದು, ತಬ್ಬಿಬ್ಬಾಗಬಹುದು. ಹೆದರಿಕೆಯೂಾಗಬಹುದು ಆದರೆ ನನಗೆ ಮಾತ್ರ ವಿಚಿತ್ರವಾದ ತೃಪ್ತಿ....ವರ್ಷ ವರ್ಷಗಳಿಂದ ಬಾಯಾರಿದವನಿಗೆ ಸೀ ಸೀ ನೀರಿನ ಕೊಳ ಸಿಕ್ಕಂತೆ. ಅವನು ಮಾತನಾಡು ತ್ತಲೇ ಇರಬೇಕು ನಾನು ಕೇಳುತ್ತಲೇ ಇರಬೇಕು ಎಂಬ ಚಪಲ.

ಅವನು ಮುಂದುವರೆಸಿದ, ನಿನಗೆ, ನನ್ನ ಹೆಸರೂ ಮರೆತಿರ ಬಹುದು. ಅಥವಾ, ಹಾಗೆ ಹೇಳೋಕಿಂತ, ನಿನಗೆ ನಿನ್ನ ಹೆಸರೂ ಜ್ಞಾಪಕ ಇರಲಿಲ್ಲ ಅನ್ನಬಹುದು.

"ಏನು? ನನಗೆ ನನ್ನ ಹೆಸ್ರು........?"

"ಹೌದು...ನಾವು ಭೇಟ್ಟಿಯಾಗಿ ಬಹಳ ವರ್ಷಗಳಾಗಿವೆ. ಎಷ್ಟೋ ವರ್ಷಗಳಿಂದ ನಾ ನಿನ್ನನ್ನ ಬಲ್ಲೆ, ಆದ್ರೆ, ಸಧ್ಯದಲ್ಲಿ ನಿನ್ನ ಮಾತಾಡಿಸೊ ಅವಕಾಶ ಸಿಕ್ಕಿರಲಿಲ್ಲ ಅಷ್ಟೆ"

'ಅಂದ್ರೆ, ನೀವು ನಮ್ಮ ಮನೆ ಹತ್ರ ಇದ್ದರೇನು ? ಎಂದು.... ದೊಡ್ಡ ಸಮಸ್ಯೆ ಬಿಡಿಸಿದಂತೆ ಸಂತೋಷದಿಂವ ಕೇಳಿದೆ 'ಪ್ರಾಯಶಃ ಚಿಕ್ಕಮಕ್ಕಳಿದ್ದಾಗ, ಅಕ್ಕಪಕ್ಕದಲ್ಲಿದ್ದು ಜೋತೆಗೆ ಅಡ್ತಿದ್ವೋ ಏನೊ! ಆದಕ್ಕೇ ಇರ್ಬೇಕು, ಇವರು ಇಷ್ಟು ಪರಿಚಿತರು ಅನ್ನಿಸಿದ್ದು, 'ಎಂದು ಕೊಂಡೆ.

ಅವರ ಮುಂದಿನ ಮಾತು ನನ್ನ ಊಹೆಯನ್ನು ತುಂಡುಮಾಡಿತು.

"ಇಲ್ಲ ನಾನು ಹುಟ್ಟಿದ್ದು ಬೆಳೆದದ್ದು ಎಲ್ಲಾ ಡೆಲ್ಲೀಲಿ"

"ಆದ್ರೆ, ನಾನು ಡೆಲ್ಲೀಗೆ ಬಂದಿದ್ದು ಇದೇ ಮೊದಲ್ನೇ ಸಲ"

ಗೊತ್ತು ಆದಕ್ಕೇ ಇಷ್ಟುವರ್ಷಗಳು ಕಾಯಬೇಕಾಯ್ತು"

"ನಿಮ್ಮ ಮಾತು ನನಗರ್ಥವಾಗ್ತಾ ಇಲ್ಲ"

"ಅದು ಸಹಜ... ನಿನಗೆ ಹಿಂದಿಂದು ಏನೂ ಜ್ಞಾಪಕ ಇಲ್ಲ" ನೊಂದಂತೆ ಹೇಳಿದ.

"ಹಿಂದಿಂದು ?" 'ಏನ್ ಹೇಳ್ತಿದ್ದಾನಿವನು ? ನನಗೆ ಹುಚ್ಚು ಹಿಡೀತಿರ್ಬಹುದು....ಇಲ್ಲಾ....ಇವನು ಯಾವನೊ ಮೋಸಗಾರ ಇರ್ಬೇಕು" ಎಂದು ಮನಸ್ಸು ಹೇಳಿದರೂ ಹೃದಯ ಸಮಾಧಾನದಿಂಡ ಹೇಳಿದಂತೆ ಭಾಸವಾಯಿತು. 'ಇಲ್ಲ, ಇವನು ಮೋಸಗಾರ ಅಲ್ಲ. ನಿನಗೆ ಬಹಳ ಹತ್ತಿರದವನು....ನೆನಪು ಮಾಡ್ಕೊ'

ಎವೆ ಇಕ್ಕದೆ ಅವನ ಕಡೆ ನೋಡಿದೆ, ಅವನು ಮುಂದುವರೆಸಿದ,

"ಆಗ ನೀನೂ ಡೆಲ್ಲಿಲೇ ಇದ್ದಿ, ನಾವಿಬ್ಬರೂ ಚಿಕ್ಕ ವಯಸ್ಸಿಂದ ಜೊತೇಲೆ ಬೆಳೆದ್ವಿ. ಆಗ್ಲೂ ನಿನು ಹೀಗೇ ಇದ್ದಿ, ಇದೇ ಮುದ್ದು

ಮುಗ್ಧರೂಪ. ಹರಕಲು ಫ್ರಾಕ್ ಹಾಕ್ಕೊಂಡಿದ್ರೂ ರಾಜಕುಮಾರಿ ಹಾಗೆ ಕಾಣ್ತಿದ್ದಿ....ಅನೂ' ನಿನಗೆ ನೆನಪಿಲ್ಲವಾ? ನಿಮ್ಮಮ್ಮ ಬೈದಾಗ್ಗೆಲ್ಲಾ ನೀನು ಓಡಿ ನನ್ನ ಹತ್ರಾ ಬರ್ತಿದ್ದಿ. ನಾನು ಸಮಾಧಾನಮಾಡಿ, ನಿನ್ನ ಕಣ್ಣೀರು ಒರೆಸಿ, ಏನಾದ್ರೂ ಕಥೆ ಹೇಳಿ ನಿನ್ನನ್ನ ನಗಿಸ್ತಿದ್ದೆ. ನಿನ್ನ ನಗು ನೋಡೋದೆ ಒಂದು ಛಂದ ಮೊದ್ಲು ತುಟಿಗಳು ಸ್ವಲ್ಪ ಬಿರೀತಿದ್ವು ನಂತರ ನಗು ಉಕ್ಕೇರಿ ನಿನ್ನ ದೊಡ್ಡ ಕಣ್ಣುಗಳಿಂದ ಹೊರ ಚಿಮ್ಮಿತ್ತು. ಮಳೆ ನಿಂತ ಮೇಲೆ ಬಿಸಿಲು ಬಿದ್ದಾಗ ಕಾಣ್ತಿದ್ವು ಅಗ ನಿನ್ನ ಕಣ್ಣುಗಳು"

ಮಂತ್ರ ಮುಗ್ಧಳಾದಂತೆ ಅವನ ಮಾತುಗಳನ್ನು ಕೇಳುತ್ತಾ ಕುಳಿತ್ತಿದ್ದೆ. ನಸುನಕ್ಕು ಮಾತು ಮುಂದುವರೆಸಿದ ಯುವಕ.

ನೆನಪಿಲ್ಲವಾ ಅನೂ ?... ನಾವಿಬ್ಬರೂ ದೊಡ್ಡವರಾದ ಮೇಲೂ ನಮ್ಮ ಸ್ನೇಹ ಮುಂದುವರೀತು.... ನಿನ್ನ ಕಾಲೇಜ್ ಮುಗಿಯೋ ಹೊತ್ಗೆನಾ ಗೇಟ್‌ಹತ್ರ ಕಾದಿರ್ತಿದ್ದೆ... ಇಬ್ರೂ ಹರಟೆ ಹೊಡೀತಾ ಐದಾರು ಮೈಲಿ ದೂರದ ಕಾಲೇಜ್ನಿಂದ ನಡ್ಕೊಂಡೇ ಬರ್ತಿದ್ವಿ ?"

ನಿನಗೆ ಅವನ ಮಾತುಗಳನ್ನು ಕೇಳುತ್ತಿದ್ದಾಗ, ಯಾವುದೋ ಕನಸಿನ ವಿಷಯ ವಿವರಿಸುತ್ತಾ ಇದ್ದಾನೆ ಎನ್ನಿಸಿತು.... ಬೆಂಗಳೂರಿನಲ್ಲೇ ಹುಟ್ಟಿ ಬೆಳೆದ ನಾನು, ಡೆಲ್ಲಿಯ ಈ ಯುವಕನನ್ನು ಹೇಗೆ ಅರಿತಿರಲು ಸಾಧ್ಯ ? ಆದರೆ....ಅದರೆ ಇವನೇಕೆ ಇಷ್ಟು ಆತ್ಮಿಯ ಎನ್ನಿಸುತ್ತಿದೆ?

'ಅನೂ, ನಿನ್ನ ತಂದೆತಾಯಿಗಾಗಲಿ ನನ್ನ ತಂದೆತಾಯಿಗಾಗಲಿ ನಾವಿಬ್ರೂ ಸ್ನೇಹದಿಂದ ಇರೋದು ಇಷ್ಟವಾಗ್ತಾ ಇರಲಿಲ್ಲ. ಆದ್ರೆ ಅವರ ಕಣ್ಣು ತಪ್ಪಿಸಿ ಪ್ರತಿದಿನ ಬೆಟ್ಟಿಯಾಗ್ತಿದ್ವಿ. ನಾವಿಬ್ಬರೂ ಜೊತೇಗಿರೋದನ್ನ ಯಾರಾದ್ರೂ ನೋಡಿ ಮನೇಲಿ ತಿ ಸಿದ್ರೆ ತೊಂದ್ರೆಯಾಗ್ಬಹುದು ಅಂತ. ಕಾಲೇಜಿನಿಂದ ಹೊರಟು ಊರಾಚೆ ರೈಲ್ವೆ ಹಳ್ಳಿ ಗುಂಟ ನಡೆದು ಬರ್ತಿದ್ವಿ....ನೀನು ಹಸಿದು ಬಂದಿರ್ತಿ ಅಂತ ನಾನು ಸನಗೆ ಹಸಿವೆ ಆರ್ಬಹುದು ಅಂತ ನೀನು. ಇಬ್ಬರೂ ಏನಾದ್ರೂ ಹಣ್ಣು, ತಿಂಡಿ ತಂದಿ

ರ್ತಿದ್ವಿ...ಮನೇಲಿ ಪಂಚ ಪರಮಾನ್ನ ಮಾಡಿ, ಉಪಚರಿಸಿ ಬಡಿಸಿದ್ರೂ, ಊಟಾ ಮಾಡೋಕೆ ಬೇಜಾರಾಗ್ತಿದ್ದ ನನಗೆ, ನೀನು ಡಬ್ಬೀಲಿ ತಂದ ಉಪ್ಪಿಟ್ಟು, ಅವಲಕ್ಕಿ ಎಷ್ಟು ರುಚಿ ಅನ್ನಿಸ್ತಿತ್ತು !"

"ಹೌದು.ಒಂದು ಚೂರೂ ಬಿಡದೆ ನಾನು ತಂದ ತಿಂಡೀನ ಚಪ್ಪರಿಸಿ ತಿನ್ತಾ ಇದ್ದ ನಿಜ........ಆದರೆ........ಆದರೆ ಯಾವಾಗ.... ? ....ಎಲ್ಲಿ........? " ನೆನಪಿಗೆ ತಂದು ಕೊಳ್ಳಲು ಬಹಳ ಪ್ರಯತ್ನಿಸಿದೆ,

ನಮ್ಮಿಬ್ಬರ ಸ್ನೇಹ, ಬರೇ ಸ್ನೇಹ ಅಷ್ಟೇ ಅಲ್ಲ,ಪ್ರೀತಿ,ಪ್ರೇಮ ಅಂತ ನಮಗೆ ತಿಳಿದದ್ದು ಯಾವಾಗ, ನೆನಪಿದಿಯಾ ಅನು ?" ಒಂದು ಕ್ಷಣ ನನ್ನ ಕಣ್ಣಲ್ಲಿ ಕಣ್ಣಿಟ್ಟು ದಿಟ್ಟಿಸಿದ....ನಾನು ಉತ್ತರಿಸದೆ ಅವನನ್ನೇ ನೋಡಿದಾಗ ಮುಂದುವರೆಸಿದ.

"ಆವತ್ತು ಸಂಜೆ, ಹರಟೆ ಕೊಚ್ಕೋದ್ರಲ್ಲಿ ಮಗ್ನರಾಗಿದ್ದ ನಮಗೆ ಹೊತ್ತು ಹೋದದ್ದೇ ಗೊತ್ತಾಗಿರಲಿಲ್ಲ. ಪೂರ್ತಿ ಕತ್ತಲಾಗೋದ್ರೊಳಗೆ ರಸ್ತೇ ಸೇರ್ಬೇಕು ಅಂತ ಗಡಿಬಿಡಿಯಿಂದ ಹೊರಟಿದ್ವಿ, ನಿನ್ನಮುದ್ದು ಮುಖ ನೋಡ್ತಾ ಇದ್ದ ನಾನು, ರಸ್ತೇಗೆ ಅಡ್ಡವಾಗಿ ಮಲಗಿದ್ದ ಕತ್ತೇನ ಎಡವಿ ಬೀಳೋದ್ರಲ್ಲಿದ್ದೆ ನೀನು 'ಕತ್ತೆ' ಅಂತ ಚೀರಿದಿ, ನನ್ನ ಗಾಬರಿ ನೋಡಿ ಬಿದ್ದು ಬಿದ್ದು ನಗೋಕೆ ಪ್ರಾರಂಭ ಮಾಡ್ದಿ, ಕತ್ತಲೇಲೂ ಮಿಂಚ್ತಾ ಇದ್ದ ನಿನ್ನ ಕಣ್ಣುಗಳು, ಹೊಳೀತಾ ಇದ್ದ ಹಲ್ಲುಗಳು, ಕುಲುಕ್ತಾ ಇದ್ದ ದೇಹ ನೋಡಿ, " ನಗೋಕೆ ಏನಿದೆ ಇದ್ರಲ್ಲಿ ಕೊಡ್ತೀನಿ ? ನೋಡು ಒಂದು" ಅಂತ ಹುಸಿ ಮುನಿಸ್ನಿಂದ ಜಬರಿಸ್ತಾ, ಸ್ನೇಹದ ಸಲಿಗೇಲಿ ನಿನ್ನ ಭುಜ ಹಿಡಿದೆ, ತಟ್ಟನೆ ನೀನು ನಗು ನಿಲ್ಲಿಸ್ದಿ, "ಹಾ ಅಮ್ಮಾ" ಅಂತ ನೋವ್ನಿಂದ ನರಳ್ದಿ. ನನಗೆ ಗಾಬರಿ ಆಯ್ತು.

"ಯಾಕೆ ಅನು ? "ಏನಾಯ್ತು?" ಅಂತ್ಕೇಳ್ದೆ............ಆಗ ನೀನು

ನಾನು... ....ನಾನು........ಹೌದು ನಿನ್ನ ಕೈ ನನ್ನ ಭುಜಾನ್ನ ಗಟ್ಟಿಯಾಗಿ ಹಿಡ್ದಾಗ ನನಗೆ ನೋವು ತಡ್ಯೋಕೇ ಆಗಲಿಲ್ಲ. ಅಪ್ಪ ಬೆಲ್ಟ್

ನಿಂದ ಹೊಡೆದಿದ್ರು ಭುಜದ ಮೇಲೆ ಬೆನ್ನ ಮೇಲೆ ಬಾಸುಂಡೆ ಮೂಡಿದ್ವು"

ನನಗೆ ಅರಿವಿಲ್ಲದೆಯೆ ಈ ಮಾತುಗಳು ನನ್ನ ಬಾಯಿಂದ ಬಂದವು... ಆ ಯುವಕನ ಮುಖ ಅರಳಿತು,

"ಓಹ್! ಅನೂ.......ಅನೂ.......ನಿನಗೆ ಜ್ಞಾಪಕ ಬರ್‍ತಾ ಇದೆ. ......ಆಮೇಲೆ ? ಆಮೇಲೇನಾಯ್ತು ಹೇಳು" ಎಂದು ಹುರಿ ದುಂಬಿಸಿದ.

ಏನಾಯ್ತು? ನೆನೆಸಿಕೊಂಡರೆ ಲಜ್ಜೆಯಿಂದ ಮುಖ ಕೆಂಪಾಯ್ತು. ಅಂದು, ನಾನು ನೋವಿನಿಂದ ನರಳಿದಾಗ ಅವನು ನನ್ನನ್ನು ಬರಸೆಳೆದು "ಯಾಕೆ ಅನು ? ಏನಾಯ್ತು ?" ಎಂದು ಕಳ ಕಳಿಯಿಂದ ಕೇಳಿ ದ್ದನು, "ಏನಿಲ್ಲ" ಎಂದು ನಾನು ಉಸುರಿದರೂ ಕೇಳದೆ, ನನ್ನ ಭುಜದ ಮೇಲಿದ್ದ ಸೆರಗು ಸರಿಸಿ, ಮೆಲ್ಲಗೆ ಕೈಯಾಡಿಸಿ ಪರೀಕ್ಷಿಸಿದ್ದನ್ನು, ಅಲ್ಲಿ ಕೈಗೆ ಹತ್ತಿದ ಬಾವಿನಿಂದ ಹೌಹಾರಿದನು,

"ಅನೂ........ಅನೂ........ಏನು? ನಿನ್ನ ಭುಜದ ಮೇಲೆ ಬೆನ್ನ ಮೇಲೆ ಬಾಸುಂಡೆ ? ! ಯಾರು, ಯಾರು ನಿನ್ನನ್ನ ಹೊಡೆದವರು ? ಎಂದು ತನಗೇ ಗಾಯವಾದವನಂತೆ ನೋವಿನಿಂದ ಕೇಳಿದನು. ನಾನು "ಅಪ್ಪ" ಎಂದು ಗದ್ಗದವಾಗಿ ಹೇಳುವುದರಲ್ಲಿ, ಹೆಂಗೊ ಏನೊ ನಾನು ಅವನ ತೋಳುಗಳಲ್ಲಿ ಬಂಧಿತಳಾಗಿದ್ದೆನು. ಅವನ ಕೈ ಮೃದುವಾಗಿ ನನ್ನ ಮುಂಗುರಳನ್ನು ನೇವರಿಸಿತು. ನನಗೆ ಅರಿವಿಲ್ಲದೆಯೇ ನನ್ನ ತೋಳುಗಳು ಅವನನ್ನು ಬಳಸಿದ್ದವು......ಮುಖ ಎತ್ತಿದೆ...ಅವನ ಚುಂಬನಕ್ಕಾಗಿ ನನ್ನ ತುಟಿಗಳು ಅರೆಬಿರಿವಿದು ಆಹ್ವಾನಿಸಿದವು, ಆ ಮಧುರ ಕ್ಷಣ, ಅವನ ತುಟಿಗಳು ನನ್ನ ತುಟಿಗಳನ್ನು ಸ್ಪರ್ಶಿಸಿದ ಆ ಕ್ಷಣ, ದೇಹವೆಲ್ಲೆಲ್ಲಾ ವಿದ್ಯುತ್ ಸಂಚಾರವಾದಂತಾಯಿತು. ಎದೆಯ ಏರಿಳಿತ ಜೋರಾಯಿತು; ಏನೋ ವಿಚಿತ್ರವಾದ ಅನುಭವ, ಶೆಕೆ ಚಳಿ ಒಟ್ಟಿಗಾದಂತೆ.

'ಮಧು....ಮಧೂ' ನಾನು ಮೆಲ್ಲನುಸುರಿದೆ.

"ಅನೂ......ನಿನಗೆ ಎಲ್ಲಾ ಜ್ಞಾಪಕಕ್ಕೆ ಬಂತಲ್ಲಾ, ಅವತ್ತು. ನಾವಿಬ್ರೂ ಒಬ್ಬರನ್ನೊಬ್ಬರು ಪ್ರೇಮಿಸ್ತೀವಿ ಅಂತ ಹೊಳೀತು. ಒಬ್ಬರನ್ನ ಬಿಟ್ಟು ಇನ್ನೊಬ್ಬರು ಬದುಕಿರೋಕೆ ಸಾಧ್ಯ ಇಲ್ಲ ಅನ್ನೋದು ತಿಳೀತು"

"ಹೌದು ಮಧು....ನನಗೆ ಎಲ್ಲಾ ನೆನಪಿಗೆ ಬರ್ತಿವೆ. ಆಮೇಲೆ ನಾವು ಹ್ಯಾಗೆ ಮನೆ ತಲುಪಿದೆವೋ ಗೊತ್ತಿಲ್ಲ, ನನ್ನ ಮುಖ ನೋಡಿ ನಮ್ಮ ತಂದೆಗೆ ಅನುಮಾನ ಬಂದಿರ್ಬೇಕು....ಬಾಯಿಗೆ ಬಂದ ಹಾಗೆ ಬೈದರು. ನಾನು ಧೈರ್ಯವಾಗಿ ಹೇಳಿದೆ..."ನಾನು ಮಧೂನ್ನ ಪ್ರೀತಿಸ್ತೀನಿ. ನೀವು ಗೊತ್ಮಾಡಿರೊ ಸಾಹುಕಾರನ್ನ ಮದ್ವೆ ಆಗೊಲ್ಲ" ಅಂತ ಸಿಟ್ಟಿನಿಂದ ಅವರು ರೌದ್ರಾವತಾರ ತಾಳಿದ್ರು. "ನನಗೆ ಎದುರು ಮಾತಾಡ್ತೀಯಾ?" ಅಂತ ರೇಗಿ ಮುಖ ಮೂತಿ ನೋಡ್ದೆ ಹೊಡೆದ್ರು."

"ಮಾರನೆ ದಿನ ನೀನು ಕಾಲೇಜಿಗೆ ಬರಲಿಲ್ಲ....ಅನೂ, ನನಗೆ ದಿಕ್ಕೇ ತೋಚದ ಹಾಗಾಯ್ತು........ಯಾಕಿರಬಹುದು? ಅಂತ ಯೋಚ್ನೆ ಮಾಡಿ ಮಾಡಿ ಹುಚ್ಚು ಹಿಡಿದ ಹಾಗಾಯ್ತು. ನೀವು ಯಾವ್ದಾದ್ರೂ ಕಿಟಕೀಲಿ ಕಾಣಿಸ್ಬಹುದು ಅಂತ, ನಿಮ್ಮ ಸುತ್ತ ಪರದಾಡಿದೆ........ ನಿಮ್ಮಪ್ಪ ಮನೆಬಿಟ್ಟು ಹೊರಗೆ ಹೊರಟ್ಟಿದ್ದು ನೋಡಿದಮೇಲೆ, ಕಳ್ಳನ ಹಾಗೆ ಬಂದು, ಕಿಟಕೀಲಿ ಇಣುಕಿ ನೋಡ್ದೆ. ನೀನು ನೆಲದ ಮೇಲೆ ಜ್ಞಾನತಪ್ಪಿ ಬಿದ್ದಿದ್ದಿ, ಸತ್ತೇ ಹೋಗಿರ್ಬಹುದು ಅಂತ ಹೆದರ್ದೆ. "ಅನೂ ಅನೂ" ಅಂತ ಮೆಲ್ಲನೆ ಕೂಗಿದೆ ಅಬ್ಬ! ನೀನು ಕಣ್ಣು ಬಿಟ್ಟು ಪ್ರಯಾಸದಿಂದ ನೋಡಿದಾಗ, ಆ ಕಣ್ಣುಗಳಲ್ಲಿನ ನೋವು ನನ್ನ ಕರುಳು ಕಿತ್ಕೊಂಡು ಬಂತು !!

ಆ ನೋವಿನ ನೆನಪಿನಿಂದಲೇ ಮಧೂನ ಧ್ವನಿ ಗದ್ಗದವಾಯಿತು.

"ಮಧು ಹೆಣ್ಣು ಅಂದ್ರೆ ಒಂದು ಗೊಂಬೆ, ಅವಳಿಗೆ ಸ್ವಂತ ವ್ಯಕ್ತಿತ್ವ ಇಲ್ಲ, ಹೃದಯ ಇಲ್ಲ. ಮನಸ್ಸಿಲ್ಲ ಅಂತ ಜನರ ನಂಬಿಕೆ. ನಮ್ಮಪ್ಪ ತನ್ನ ಸಾಲ ತೀರಿಸೋದಕ್ಕೆ ಆ ಮುದುಕ ಸಾಹುಕಾರನಿಗೆ ನನ್ನನ್ನ ಮಾರಬೇಕು ಎಂದು ನಿರ್ಧಾರ ಮಾಡಿದ್ದ ನಮ್ಮಮ್ಮನ್ನ ಅವರಪ್ಪನು ಹೀಗೆ ಮಾರಿದ್ದನಂತೆ, ತನ್ನ ಸ್ವಾರ್ಥಕ್ಕೆ ಆಗ ಒಂದು ಹೆಣ್ಣನ್ನ ಕೊಂಡಿದ್ದ ನಮ್ಮ ಅಪ್ಪ, ಈಗ ಇನ್ನೊಂದು ಹೆಣ್ಣನ್ನ ಮಾರೋ ಸಿದ್ಧತೆ ಯಲ್ಲಿದ್ದ ಮಧು, ನನಗೂ ಹೃದಯ ಇದೆ, ನನಗೂ ಪ್ರೀತಿಸೊ ಹಕ್ಕಿದೆ ಅನ್ನೋದು ಅವನಿಗೆ ಹೊಳೀಲೇ ಇಲ್ಲ. ನಾನು ನಿನ್ನನ್ನ ಪ್ರೀತಿಸಿದ್ದು ಅವರ ದೃಷ್ಟೀಲಿ ದೊಡ್ಡ ಅಪರಾಧ."

"ಆದ್ರೆ ಆನೂ, ನಮಗೆ ಗೊತ್ತಿತ್ತು,....ನಾವು ಒಂದು ದೇಹದ ಎರಡು ಭಾಗ, ಒಬ್ಬರನ್ನು ಬಿಟ್ಟು ಇನ್ನೊಬ್ಬರು ಅಪೂರ್ಣರು ಅನ್ನೋದು ದೃಢವಾಗಿ ಹೇಳಿದ ಮಧು.

ಹೌದು...ನಾವು ಎಲ್ಲರನ್ನೂ ಬಿಟ್ಟು ದೂರ ಹೋಗಬೇಕು ಅದಕ್ಕೆ ಅಂತ ನಿರ್ಧಾರ ಮಾಡಿದ್ದು. ಮಧು, ಅವತ್ತು ರಾತ್ರಿ, ನನ್ನ ಮದುವೆಗೆ ಒಂದು ವಾರ ಇದ್ದಾಗ, ನಾನು ಉಟ್ಟ ಬಟ್ಟೇಲಿ ನಿನ್ನ ಹತ್ರ ಓಡಿ ಬಂದೆ. ನನಗಾಗಿ ಚಾಚಿದ್ದ ನಿನ್ನ ತೋಳೊಳಗೆ ಸೇರಿದಾಗಷ್ಟೆ ನಾನು ಹಾಯಾಗಿ ಉಸಿರು ಬಿಟ್ಟಿದ್ದು"

'ನಾನು ಮೊದಲೇ ಟ್ಯಾಕ್ಸಿ ಗೊತ್ತು ಮಾಡಿದ್ದೆ...ಕೈಗೆ ಸಿಕ್ಕಷ್ಟು ಹಣನೂ ತೊಗೊಂಡ್ಬಂದಿದ್ದೆ...ಯಾರ್ಗೂ ಕಾಣಿಸದ ಹಾಗೆ ರೈಲ್ವೆ ಸ್ಟೇಷನ್ ತಲುಪಿದೆವು, ಫಸ್ಟ್‌ಕ್ಲಾಸ್ ಕೂಪೆ ರಿಸರ್ವ್ ಮಾಡಿಸಿದ್ದೆ. ಗಾಡಿ ಹತ್ತಿ, ಕೂಪೇಲಿ ಕೂತು. ರೈಲ್ ಹೊರಟಾಗ ಧೈರ್ಯವಾಗಿ ಉಸಿರಾಡಿದೆ,

ಮುಂದಿನ ಸನ್ನಿವೇಶ ಜ್ಞಾಪಿಸಿಕೊಂಡು ಇಬ್ಬರಿಗೂ....ನಗುಬಂತು ಏನೇನೊ ಮಾತಾಡಬೇಕು, ಮನಸ್ಸಿನಲ್ಲಿರೋದನ್ನೆಲ್ಲಾ ಬಿಚ್ಚಿ ಹೇಳಬೇಕು

ಎಂದು ಇಬ್ಬರಿಗೂ ಆತುರ, ಒಬ್ಬರು ಪ್ರಾರಂಭಿಸಲಿ ಎಂದು ಇನ್ನೊಬ್ಬರು ಕಾದು, ಕೆಲವು ಕ್ಷಣಗಳ ಮೌನದ ನಂತರ. ಒಟ್ಟೊಟ್ಟಿಗೆ ಇಬ್ಬರೂ ಮಾತು ಪ್ರಾರಂಭಿಸುತ್ತಿದ್ದರು. ಒಟ್ಟಿಗೆ ನಿಲ್ಲಿಸಿ ಗೊಳ್ಳನೆ ನಕ್ಕಿದರು. ಹೀಗೇ ಎರಡು, ಮೂರು ಬಾರಿ ಆದಾಗ ಮಧು ಹೇಳಿದ್ದ, ಮೊದಲು ಯಾರು ಮಾತಾಡೋದು ಟಾಸ್ ಮಾಡಿ ನಿರ್ಧರಿಸೋಣ ಆಂ?"

'ಹೂಂ' ಎಂದು ನಾನು ತಲೆಯಾಡಿಸಿದ್ದೆ. ಒಂದು ರೂಪಾಯಿಯ ನಾಣ್ಯಕ್ಕಾಗಿ ಮಧು ಜೇಬು ತಡಕಾಡಿದ. ಕೊನೆಗೆ ತನ್ನ ಸೂಟ್‌ಕೇಸ್ ಕೆಳಗಿಳಿಸಿದ ಆಗ ನಾನು "ಓ! ನಾನು ಏನೂ ತಂದಿಲ್ಲ. ಬಟ್ಟೆ ಬರೆ...."ಎಂದು ಅವನ ಸೂಟ್ ಕೇಸ್ ನೋಡಿದ ಮೇಲೆ, ನೆನಪಾಗಿ ಹೇಳಿದ.

ಮಧು ಬಹಳ ಆತ್ಮ ವಿಶ್ವಾಸದಿಂದ, ಜಂಭದಿಂದ, "ನಿನಗೋಸ್ಕರ ನಾನು ತಂದಿದ್ದೀನಿ ಎಂದು ಪೆಟ್ಟಿಗೆಯಿಂದ ಒಂದು ಸೀರೆ ಹೊರ, ತೆಗೆದ. ಹಸಿರು ರೇಶ್ಮೆಸೀರೆ. ಮೈ ತುಂಬಾ ಬುಟ್ಟಾ.

'ಇ...ಇದು? ಎಂದೆ.

"ಹೂಂ ನಮ್ಮಮ್ಮ, ತನ್ನ ಸೊಸೆಗೆ ಅಂತ ತೆಗೆದಿಟ್ಟಿದ್ಳು. ಅದಕ್ಕೆ ತಂದ್ಬಿಟ್ಟೆ"

'ಆದ್ರೆ...ಇದನ್ನ ಹ್ಯಾಗೆ ಉಟ್ಕೊಳ್ಳೋದು ?' ಅಂಥಾ ಸೀರೆ ನಾನು ಎಂದೂ ಹತ್ತಿರದಿಂದ ನೋಡಿಯೂ ಇರಲಿಲ್ಲ.

"ಹ್ಯಾಗೇಂದ್ರೆ....ಈಗ ಇದನ್ನ ಹ್ಯಾಗೆ ಉಟ್ಕೊಂಡಿದ್ದೀಯೋ ಹಾಗೆ"

"ಅಂದ್ರೆ...ದಿನಾಗ್ಲೂ ಉಡೋಕೆ..." ನನ್ನ ಅನುಮಾನ ಆಗ ಅವನಿಗೆ ಅರ್ಥವಾಯಿತು.

"ಹೌದಲ್ಲಾ....ದಿನಾ ಉಡೋಕೆ ಬೇರೆ ಬೇಕು ಅಲ್ಲವಾ ?" ಎಂದ, ಪೆದ್ದು ಪೆದ್ದಾಗಿ,

ಬರೇ ಸೀರೆ ಕುಪ್ಪಸವಿಲ್ಲ, ಒಳಗಿನ ಲಂಗವಿಲ್ಲ! ನನಗೆ ನಗು ತಡೆಯದಾಯಿತು....

ಆ ಸನ್ನಿವೇಶ ನೆನಪಾಗಿ ಪುನಃ ಜೋರಾಗಿ ನಕ್ಕೆ. ಆದರೆ ಮಧೂನ ಮುಖ ಗಂಭೀರವಾದದ್ದು ನೋಡಿ ತಟ್ಟನೆ ನಗು ನಿಲ್ಲಿಸಿದೆ,

"ಮಧೂ...ಮಧೂ ..." ಎಂದು ಗಾಬರಿಯಿಂದ ಉಸುರಿದೆ,

'ಅನೂ...ಆಮೇಲೇನಾಯ್ತು? ಜ್ಞಾಪಕ ಇಲ್ಲವಾ?' ಎಂದು ಗಂಭೀರವಾಗಿ ಕೇಳಿದ.

'ಏನಾಯ್ತು? ಏನಾಯ್ತು?"ನನಗೆ ನೆನಪಿಗೆ ಬರಲಿಲ್ಲ ಮಧು ಹೇಳಿದ "ಮುಂದಿನ ಸ್ಟೇಶನ್ನಿನಲ್ಲಿ ಟ್ರೈನ್ ನಿಂತಾಗ, ಪೋಲಿಸ್ನೋರು ಬಂದ್ರು, ಬಾಗಿಲು ತೆಗೆಸಿದ್ರು, ನಮ್ಮನ್ನ ಕೆಳಗೆ ಇಳಿಸಿದರು....ಟ್ಯಾಕ್ಸಿ ಹತ್ರ ನಮ್ಮಪ್ಪ ಯಮದೂತನ ಹಾಗೆ ನಿಂತಿದ್ದ ...ನನ್ನ ಕೈಯನ್ನ ಗಟ್ಟಿಯಾಗಿ ಹಿಡಿದಿದ್ದ ನಿನ್ನನ್ನ ದೂರತಳ್ಳಿ' ಬಲವಂತವಾಗಿ ನನ್ನನ್ನ ಟ್ಯಾಕ್ಸೀಲಿ ತುರುಕಿದ್ರು. ನಾನು ಅವರಿಂದ ಬಿಡಿಸ್ಕೊಳ್ಳೊ ಪ್ರಯತ್ನದಲ್ಲಿದ್ದಾಗ, ನೀನು ಕೆಳಗೆ ಬಿದ್ದದ್ದು ಜನ ನಿನ್ನ ಸುತ್ತ ನೆರೆದದ್ದು ಕಾಣಿಸ್ತು. ನನಗೆ ಹ್ಯಾಗೆ ಶಕ್ತಿ ಬಂತೊ ಏನೊ, ಎಲ್ಲರನ್ನೂ ದಬ್ಬಿ 'ಅನೂ' ಅಂತ ಚೀರಿ, ಜೋರಾಗಿ ಹೊರಟಿದ್ದ ಟ್ಯಾಕ್ಸಿಯಿಂದ ಕೆಳಗೆ ಧುಮುಕಿದೆ" ಮಧು ಬೆವತಿದ್ದ.

'ಆಮೇಲೆ?....ಆಮೇಲೇನಾಯ್ತು ಮಧು ?' ನಾನು ಹೌಹಾರಿ ಕೇಳಿದೆ.

ಮಧು ನಿಟ್ಟುಸಿರುಬಿಟ್ಟು ಹೇಳಿದ 'ನನ್ನ ತಲೆಗೆ ಏಟು ಬಿದ್ದಿತ್ತು ಅಂತ್ಕಾಣುತ್ತೆ. ಎಚ್ಚರಾದಾಗ ಆಸ್ಪತ್ರೇಲಿದ್ದೆ'

"ಓಹ್!...ನನಗೆ...ನನಗೇನಾಯ್ತು ಮಧು?"

"ಗೊತ್ತಿಲ್ಲವಾ ಅನೂ? ಮರುದಿನಾನೇ, ಬಲವಂತವಾಗಿ ಓಪಿಯಮ್ ತಿನ್ನಿಸಿ, ಆ ಸಾಹುಕಾರನ ಜೊತೆ ನಿನ್ನ ಮದ್ವೆ ಮಾಡಿದ್ರಂತೆ".

"ಏನು?" ನಾನು ತತ್ತರಿಸಿದೆ.

"ಹೌದು ಅನು, ನನಗೆ ಈ ವಿಷಯ ಗೊತ್ತಾದಾಗ, ಇನ್ನೂ ಆಸ್ಪತ್ರೇಲೇ ಇದ್ದೆ. ನಿನ್ನ ಲಗ್ನ ಆಗಿ ಆರು ದಿನಗಳಾಗಿದ್ವು. ಪಕ್ಕದ ಮೇಜಿನಮೇಲಿದ್ದ ಬಾಟ್ಲಿ ಒಳಗಿನ ಅಷ್ಟು ಗುಳಿಗೇನೂ ನುಂಗ್ಬಿಟ್ಟೆ" ಎಂದು ಸಮಾಧಾನದಿಂದ ಹೇಳಿದ ಮಧು.

"ಮಧೂ..."ಎಂದು ಚೀರಿದೆ. 'ಎದೆ ಒಡೆದು ಚೂರು ಚೂರಾದಂತೆ ಅನ್ನಿಸಿತು,

ಮಧು ಮೃದುವಾದ ದನಿಯಲ್ಲಿ ಹೇಳಿದ—ಅನೂ ಅವತ್ತಿಂದ. ಇದೇ ಟ್ರೇನ್‌ನಲ್ಲಿ ಇದೇ ಕೂಪೇಲಿ ನಿನಗೋಸ್ಕರ ಕಾಯ್ತಾ ಇದ್ದೀನಿ ... ಈ 'ಕೂಪೆ' ನಮ್ಮ ಮಿಲನದ ಸ್ಥಳ, ನಮ್ಮ ಸ್ವರ್ಗ! ಇಲ್ಲಿ ಮಾತ್ರ ನಾವು ಪೂರ್ಣರಾಗಿದ್ವು ಅಲ್ವಾ ಅನು?

"ಮಧೂ....ನನ್ನ ಮಧೂ" ಎಂದು ತೋಳೆರಡನ್ನೂ ಅವನ ಕಡೆ ಚಾಚಿದೆ.

"ಇಲ್ಲ ಅನು....ಈಗ ನೀನು ಬೇರೆಯವರ ಹೆಂಡತಿ....ಈ ಜನ್ಮದಲ್ಲಿ ನೀನು ನನ್ನ ಅನು ಅಲ್ಲ...ಈಗಿನ ನಿನ್ನ ಹೆಸರು ಏನೂ ಅನ್ನೋದೂ ನನಗೊತ್ತಿಲ್ಲ"

ಮೈಲುಗಟ್ಟಲೆ ಬಿಸಿಲಿನಲ್ಲಿ ಬಾಯಾರಿ ನಡದವ ತುಟಿಯಿಂದ ನೀರಿನ ಬಟ್ಟಲು ಕಸಿದುಕೊಂಡಂತೆ ಆಯಿತು ನನ್ನ ಪರಿಸ್ಥಿತಿ. ಪಕ್ಕದಲ್ಲೇ, ಕೈಗೆ ಎಟುಕುವಷ್ಟು ಹತ್ತಿರದಲ್ಲೇ, ನನ್ನ ಜೀವದ ಜೀವ. ನನ್ನ ದೇಹದ ಅರ್ಧ ನನ್ನ ಹೃದಯದ ಪುತ್ಥಳಿ, ನನ್ನ ಮಧು ಕುಳಿತಿದ್ದರೂ, ಅವನನ್ನು ಮುಟ್ಟು ವಂತಿಲ್ಲ, ಅಪ್ಪುವಂತಿಲ್ಲ ಮುದ್ದಿಸುವಂತಿಲ್ಲ. ದುಃಖ ಉಕ್ಕಿ ಬಂದಿತು, ಕೈಯಲ್ಲಿ ಮುಖ ಮುಚ್ಚಿ ಬಿಕ್ಕಿ ಬಿಕ್ಕಿ ಅತ್ತೆ;

ಬಾಗಿಲು ತಟ್ಟಿದಂತಾಯಿತು ಎಕ್ಸ್ಕ್ಯೂಸ್‌ಮಿ! ದನಿ ಕೇಳಿ ಬೆಚ್ಚಿದೆ. ಎದುರಿಗೆ ದಪ್ಪನೆ ಕುಳ್ಳವ್ಯಕ್ತಿಯೊಂದೂ ನಿಂತಿತ್ತು...ಹೆದರಿ ಸುತ್ತಲೂ ಕಣ್ಣು ಹಾಯಿಸಿದೆ. ನನ್ನ ಮಧು ಇರಲಿಲ್ಲ.

ನನ್ನ ಹೆದರಿದ ಮುಖ ನೋಡಿ ಆ ವ್ಯಕ್ತಿ. ಹಲ್ಲು ಬಿಟ್ಟು "ಟಿಕೇಟ್ ಪ್ಲೀಸ್" ಎಂದ.

ದಡಬಡಿಸಿ, ನನ್ನ ಪರ್ಸಿನಿಂದ ಟಿಕೆಟ್ ತೆಗೆದು ಕೊಟ್ಟೆ. ಅದನ್ನು ನೋಡಿ, ತಲೆಯಿಂದ ಕಾಲವರೆಗೆ ಅಳತೆ ಮಾಡುವಂತೆ ನನ್ನ ಕಡೆ ದಿಟ್ಟಿಸಿ, ವಿಚಿತ್ರವಾಗಿ ನಕ್ಕ. ನನಗೆ ದಿಕ್ಕೇ ಮೋಚದಂತಾಯಿತು. ಹಣೆಯ ಮೇಲೆಲ್ಲಾ ಬೆವರು!

ಅವನು ಜೋರಾಗಿ ನಕ್ಕು ನನಗೆ ನಿಮ್ಮ ಟಿಕೇಟ್ ಬೇಕು, ನಿಮ್ಮ ತೂಕವಲ್ಲ" ಎಂದು ಇಂಗ್ಲೀಷಿನಲ್ಲಿ ಹೇಳಿದ,

ನಾನು ಗಡಿಬಿಡಿಯಲ್ಲಿ ರೈಲ್ವೆ ಟಿಕೇಟ್ ಬದಲು ನನ್ನ ತೂಕದ ಕಾರ್ಡ್ ಕೊಟ್ಟಿದ್ದೆ ಎಂಬುದು ಆಗ ತಿಳಿಯಿತು, ಅವಮಾನದಿಂದ ಮುದುಡಿದೆ, "ಸಾರಿ" ಎಂದು ತೊದಲಿ ಸರಿಯಾದ ಟಿಕೆಟ್ ಕೊಟ್ಟೆ, ಅವನು ಹೋದ ಮೇಲೆ ಬೆವರೊರಸಿಕೊಂಡೆ.

ನನ್ನನ್ನ ನನ್ನ ಮಧುವಿನಿಂದ ಬೇರ್ಪಡಿಸಿದ ಸ್ಟೇಷನ್ ಬಂತು. ಪುನಃ ಎರಡನೇ ಬಾರಿ ನಾನು ಏಕಾಕಿಯಾಗಿದ್ದೆ. ಕನಸೊ, ನನಸೊ, ಕಲ್ಪನೆಯೋ ತಿಳಿಯದು, ಆದರೆ ಮದುವೆಯಾಗಿ, ಮಕ್ಕಳಾಗಿ, ನೋಡಿದವರು ಅಸೂಯೆ ಪಡುವಂತಿದ್ದರೂ, ಇಂದಿಗೂ ನನ್ನ ಕಣ್ಣುಗಳು ನನ್ನ ಮಧುಗಾಗಿ ಹುಡುಕುತ್ತೇವೆ, ನನ್ನ ಹೃದಯದ ಆಳದಲ್ಲಿನ ನೋವು ಹಸಿರಾಗೇ ಇದೆ. "ಮಧುವಿಲ್ಲದ ನೀನು ಅಪೂರ್ಣಳು ಅಪೂರ್ಣಳು ಎಂದು ಮೈ ಮನಸ್ಸು ಚೀರುತ್ತಲೇ ಇವೆ,

*** *** ***

# ನಕ್ಷತ್ರದೆಡೆಗೆ

—ಡಾ. ಸರೋಜಿನಿ ಶಿಂತ್ರಿ

ಲಿಲ್ಲಿಯು ತನ್ನ ಅತ್ತೆಯ ಮನೆ ಮುಂಭಾಗವನ್ನು ಮುಟ್ಟಿದಾಗ ಅದೇ ಆಗ ಮಧ್ಯಾಹ್ನ. ಸೂರ್ಯನ ಕಿರಣಗಳು ಚಿಕ್ಕ ಹೂದೋಟದಲ್ಲಿಯ ಅರಳಿದ ಗುಲಾಬಿ ಹೂಗಳನ್ನು ಚುಂಬಿಸುತ್ತಿದ್ದವು. ಕರೆಗಂಟೆಯನು ಒತ್ತುವ ಮೊದಲು ಲಿಲ್ಲಿಯು ತಡೆದು, ತನ್ನ ಮಾಟಾದ ಕೈಚೀಲದೊಳಗಿನ ಚಿಕ್ಕದಾದ ಕನ್ನಡಿಯನ್ನು ಹೊರಕ್ಕೆ ತೆಗೆದು ತನ್ನ ಮುಖವನ್ನು ನೋಡ ತೊಡಗಿದಳು, ತನ್ನ ಮುಖವು ಅತ್ತೆಯನ್ನು ಕಾಣಲು ಹೋಗುವಾಗ ಆ ಹೂದೋಟದಲ್ಲಿ ಅರಳಿರುವ ಗುಲಾಬಿಗಳಂತೆ ಅಹ್ಲಾದಕರವಾಗಿರಲೆಂದೇ ಅವಳ ಆಶೆ. ಸ್ವಲ್ಪ ಪೌಡರ್‌ನ್ನು ಕಣ್ಣಿನ ಕೆಳಗೆ, ದೃಷ್ಟಿಸಿ ನೋಡಿದರೆ ಮಾತ್ರ ಕಾಣುವ ಕಪ್ಪು ಛಾಯೆಯನ್ನು ಮರೆಮಾಚಲು, ಹಚ್ಚಿದಳು. ತನ್ನ ಸಹಜವಾದ ಗುಲಾಬಿ ತುಟಿಗಳಿಗೆ, ಲಿಪ್‌ಸ್ಟಿಕ್‌ನ್ನು ಒರಿಸಿದಳು. ಕಪ್ಪು ಗುಂಗುರ ಕೂದಲಗಳನ್ನು ಹಠವಾದ ಹಣೆಯ ಮೇಲೆ ಅಲೆದಾಡಲು ಬಿಟ್ಟಳು. ಅವುಗಳ ಸೌಂದರ್ಯವೆಂದರೆ—ಗುಲಾಬಿಗಳ ಮೇಲೆ ಬಂದು ಕೂಡ್ರುವ ದುಂಬಿಗಳ ಸೌಂದರ್ಯದಂತೆ. ಪ್ರತಿ ದಿನವೂ ವಯಸ್ಸಾದ ಅತ್ತೆಯನ್ನು ನೋಡಿ ಬರುವುದು ಅವಳ ನಿತ್ಯದ ಕಾರ್ಯಗಳಲ್ಲಿ ಒಂದು. ಆದರೆ ಹತ್ತು ತಿಂಗಳಿಂದ ಮಾತ್ರ. ಅದಕ್ಕೂ ಮೊದಲು ಪತಿ ಆನಂದನ ಜೊತೆಗೆ ವಾರಕ್ಕೊಮ್ಮೆ ಅಂದರೆ ರವಿವಾರ ಸಂಜೆ, ಮಿಲಿಟರಿ Officers Clubಗೆ ಹೋಗುವ ಮೊದಲು ಆಕೆಯನ್ನು ವಿಚಾರಿಸಿಕೊಂಡು ಹೋಗುವುದು ರೂಢಿ. ಒಂದೇ ಊರಿನಲ್ಲಿ ಇದ್ದರೂ, ಅತ್ತೆ–ಸೊಸೆಯಂದಿರ

ಬೇರೆ ಬೇರೆ ಮನೆಯಲ್ಲಿ ಇರುವದು ಯಾರಿಗಾದರೂ ಆಶ್ಚರ್ಯವೆನಿಸ ಬಹುದು. ಆನಂದನು ಮೇಜರನಾಗಿದ್ದನು. ಅವನಿಗೆ ಸೈನ್ಯಖಾತೆಯಿಂದಲೇ ಮನೆಯು ಸಿಕ್ಕಿತ್ತು. ಆದರೆ ಆತನ ತಾಯಿಯು ಮಾತ್ರ ತನ್ನ ಪತಿಯು ಕಟ್ಟಿದ ಮನೆಯನ್ನು ಬಿಟ್ಟುಹೋಗಲು ಒಪ್ಪಲಿಲ್ಲ.

ಲಿಲ್ಲಿಯು ಆ ದಿನ ಕರೆ-ಗಂಟೆಯನ್ನು ಒತ್ತಿದಾಗ ಪಾರೂ ಎಂದಿನಂತೆ ಬಾಗಿಲು ತೆಗೆದಳು; "ಈ ಹೊತ್ತು ಅಮ್ಮನವರು ಎಡಕಾಲಿನ ಆಸರದಿಂದ ಮೇಲಕ್ಕೆದ್ದರು" ಎಂದು ಪಾರೂ ನುಡಿದಳು, ಪಾರೂನನ್ನು ಬೆನ್ನಮೇಲೆ ಅಕ್ಕರೆಯಿಂದ ಚಪ್ಪರಿಸಿ "ಓ ಅಮ್ಮನು ಎದ್ದು ನಿಂತಳೇ ? ಹಾಗಾದರ ಈ ಹೊತ್ತು ಸೂರ್ಯನು ಪಶ್ಚಿಮಕ್ಕೆ ಮುಳುಗದೇ, ಪೂರ್ವಕ್ಕೇ ಮುಳುಗುವ ಹಾಗೆ ಕಾಣಿಸುತ್ತದೆ." ತುಂಬು ಕೆನ್ನೆಯ ಪಾರೂ ಲಿಲ್ಲಿಯ ಮಾತುಗಳನ್ನು ಕೇಳಿ ನಸುನಕ್ಕಳು. ಪಾರೂ ಈ ಮನೆಗೆ ಬಂದಾಗ ತೀರ ಚಿಕ್ಕವಳು. ತನ್ನ ನಯವಿನಯದಿಂದ ಕುಟುಂಬದ ಎಲ್ಲ ಜನರಿಗೂ ಬೇಕಾಗಿದ್ದಳು. ಯಾರೂ ಆಕೆಯನ್ನು ಒಬ್ಬ ಸೇವಕಿಯೆಂದು ನಡೆಸಿಕೊಳ್ಳುತ್ತಿದ್ದಿಲ್ಲ, ಅಮ್ಮನನ್ನು ನೋಡಿಕೊಳ್ಳುವದು, (ಕಳೆದ ವರುಷ ಆಕೆ ಬೇನೆ ಬಿದ್ದಾಗಿ ನಿಂದ) ಅವಳ ಮುಖ್ಯ ಕೆಲಸವಾಗಿತ್ತು. ಅಮ್ಮನಿಗೆ ಈಗ ಸುಮಾರು ಎಪ್ಪತ್ತಾರು ವರುಷಗಳು. ಅವಳಿಗೆ ನಿಃಶಕ್ತಿಯಿಂದ ಹಾಸಿಗೆ ಬಿಟ್ಟೇಳಲು ಆಗುತ್ತಿರಲಿಲ್ಲ, ಕಳೆದ ವರುಷ ಆನಂದನು ನೇಫಾಕ್ಕೆ ಹೋದಾಗನಿಂದಂತೂ ಆಕೆಯ ಅಳಿದುಳಿದ ಶಕ್ತಿಯೂ ಹೋಗಿತ್ತು. ಮೊದ ಮೊದಲು ಪ್ರತಿ ಮುಂಜಾವು ತನ್ನ ಮಲಗುವ ಕೋಣೆಯಲ್ಲಿಯೇ ಐವತ್ತು ಹೆಜ್ಜೆಗಳನ್ನು ನಡೆಯುತ್ತಿದ್ದಳು. ವಾರಗಳು ಗತಿಸಿದಂತೆ ಹೆಜ್ಜೆಗಳು ನಾಲ್ವತ್ತಕ್ಕೂ, ಮೂವತ್ತಕ್ಕೂ ಇಳಿದವು ಆದರೆ ಇಪ್ಪತ್ತಕ್ಕಿಂತ ಕಡಿಮೆ ಎಂದಿಗೂ ಹೋಗಿರಲಿಲ್ಲ. ಕಳೆದವಾರದಿಂದು ಅಮ್ಮನು ಮಾತ್ರತೀರ ಸೋತವಳ ಹಾಗೆ ಕಾಣುತ್ತಿದ್ದಳು.

"ಮುಂಜಾವಿನಿಂದ ಅಮ್ಮನವರು ಏಕೋ ಬಿಗುವಿನಲ್ಲಿಯೇ ಇದ್ದಾರೆ, ಮೊನ್ನೆ ಆ ಗಾಜಿನ ಹೂವಿನ ಪಾಜ ಒಡೆದಿರಲಿಲ್ಲವೇ? ಮತ್ತೊಂದನ್ನು ಏಕೆ ತರಲಿಲ್ಲವೆಂದು ಕೂಗಾಡಿದರು. ಮತ್ತೆ ಈ ಹೊತ್ತು ನೀನು ಅವರಿಗೆ

ಪ್ರಿಯವಾದ ಚೀಜ ಬಿಸ್ಕಿಟ್ಟುಗಳನ್ನು ತಂದಿರುವೆಯಾ?" ಎಂದಳು ಪಾರೂ. "ಒಂದು ಟಿನ್ನಿನಷ್ಟು ತಂದಿದ್ದೇನೆ ನೋಡೇ, ಮತ್ತೆ ಮನೆ ಖರ್ಚಿಗೋಸ್ಕರ ನಿನಗೆ ಮುನ್ನೂರು ರೂಪಾಯಿಗಳನ್ನು ತಂದಿದ್ದೇನೆ." ಲಿಲ್ಲಿಯು ತನ್ನ ಕೈಚೀಲವನ್ನು ಪೂರ್ಣಬಾಗಿಸಿ ಮಡಿಸಿದ ಮೂರು ನೋಟುಗಳನ್ನು ಪಾರೂನ ಕೈಗೆ ಕೊಟ್ಟಳು.

"ಎಲ್ಲ ರೂಪಾಯಿಗಳನ್ನು ನನಗೇ ಕೊಟ್ಟು, ನಿನ್ನ ಖರ್ಚಿಗೆ?"

ನನ್ನ ವಿಷಯಕ್ಕೆ ನಿನಗೆ ಚಿಂತೆಬೇಡ, ಅದಿರಲಿ, ಅಮ್ಮನಿಗೆ ಮತ್ತೇನಾದರೂ ತೊಂದರೆ ಇದೆಯೇ?"

"ಏನಿಲ್ಲ. ನಿನ್ನೆ ರಾತ್ರಿ ಚೆನ್ನಾಗಿಯೇ ನಿದ್ರೆ ಹೋಗಿದ್ದರು,"

ಪೋಸ್ಟಮನ್ನನೇನಾದರೂ ಬಂದು ಹೋದನೇ?"

"ಇನ್ನೂ ಇಲ್ಲವೆಂದು ಕಾಣುತ್ತದೆ" ಎಂದಳು ಪಾರೂ. "ಹಾಗಾದರೆ ಅವನು ಬರುವದನ್ನು ಸ್ವಲ್ಪ ನೋಡುತ್ತಿರು. ಈ ಹೊತ್ತು ನೇಫಾದಿಂದ ಒಂದು ಕಾಗದ ಬರುವುದಿದೆ. ತಿಳಿಯಿತೆ?" ಲಿಲ್ಲಿಯ ಮಾತು ಮುಗಿಯುವದ ರಲ್ಲಿಯೇ ಅಮ್ಮನವರ ಕೋಣೆಯಿಂದ ಕರೆಗಂಟೆಯ ಸಪ್ಪಳ ಸುರುವಾಯಿತು. ಲಿಲ್ಲಿಯು ಪಾರೂನನ್ನು ತಪ್ಪಿಸಿ "ನಾನು ಅಮ್ಮನ ಬಳಿ ಹೋಗುತ್ತೇನೆ" ಎಂದಳು.

ಲಿಲ್ಲಿಯು ಬಾಗಿಲು ತೆರೆದಾಗ ಅದೇ ದೃಶ್ಯ.. ಮುಪ್ಪಾದ ಬಡಕಲು ಶರೀರ. ಹರವಿದ ಬೆಳ್ಳಗಿನ ಕೂದಲು, ತಲೆಯು ಮೆತ್ತನ್ನ ತಲೆದಿಂಬಿನ ನಲ್ಲಿಯೇ ಹುದುಗಿಕೊಂಡಿತ್ತು. ತೊಗಲಿನ ಚೀಲದಲ್ಲಿ ಹಾಕಿದ ಎಲುಬಿ ನಂತಿದ್ದ ಕೈಗಳು ನಿಶಕ್ತಿಯಿಂದ ಎದೆಯ ಮೇಲೆ ಹಾಗೇ ಒರಗಿಕೊಂಡಿದ್ದವು. ಆ ದೃಶ್ಯವನ್ನುಕಂಡು ಲಿಲ್ಲಿಯ ಕಣ್ಣುಗಳು ತೇವವಾದವು. ಬಾಗಿಲಿನ ಸಪ್ಪಳವು ಅಮ್ಮನನ್ನು ಎಚ್ಚರಿಸಲಿಲ್ಲ: ಆಕೆಯ ಕೈಗಳು ಕರೆಗಂಟೆಯೆಡೆಗೆ ಹೋಗುತ್ತಲೇ, ಲಿಲ್ಲಿ ತುಸು ಕೇಕರಿಸಿ ತನಗಾಗುತ್ತಿರುವ ವೇದನೆಯನ್ನು

ನುಂಗಿ. ಎಲ್ಲಿಲ್ಲದ ಉತ್ಸಾಹವನ್ನು ತಂದುಕೊಂಡು "ಅಮ್ಮಾ, ಚೆನ್ನಾಗಿದ್ದಿಯಾ?" ಎಂದಳು. ಅಮ್ಮನು ಬಾಗಿಲ ಕಡೆಗೆ ನೋಡದೆ "ಏನೂ ಪಾರೂ ಎಷ್ಟೊಂದುಸಲ ನಿನ್ನನ್ನು ಕರೆಯಬೇಕು ? ಚಪಾತಿಗಳನ್ನು ಇನ್ನೂ ತಯಾರಿಸಿಲ್ಲವೇ?" "ಪಾರೂ ಅಲ್ಲ. ನಾನು ಲಿಲ್ಲಿ. ಚಪಾತಿಗಳನ್ನು ಪಾರೂ ಬೇಯಿಸುತ್ತಿದ್ದಾಳಮ್ಮಾ" ಅಮ್ಮನು ತನ್ನ ಕಿವಿಗಳನು ತಾನೇ ನಂಬದೇ "ಯಾರೂ ಅದು ?" ಎಂದು ಕೇಳಿದಳು. ಅಮ್ಮನು ತನ್ನ ಹಿಂದಿನ ನೆನಹುಗಳನ್ನು ಸ್ಮರಿಸುತ್ತಿದ್ದಂತೆ ಭಾಸವಾಗುತ್ತಿತ್ತು. ಆ ನೆನಹುನ ಸಾಮ್ರಾಜ್ಯದಲ್ಲಿ ವಿಹರಿಸುತ್ತಿರುವಾಗ, ಈ ಇರುವಿನ ಅರಿವೇ ಇಲ್ಲದಂತಾಗುತ್ತಿತ್ತು. ಅಮ್ಮನು ಭಾಸ್ಕರ ಪಂತರನ್ನು ಮದುವೆಯಾಗಿ ಲಖನೌದಲ್ಲಿ ಇರಲು ಪ್ರಾರಂಭಿಸಿ, ಐವತ್ತು ವರುಷಕ್ಕಿಂತಲೂ ಜಾಸ್ತಿಯಾಗಿತ್ತು. ಆದರೂ ತನ್ನ ತವರುಮನೆಯಾದ ಪುಣೆಯನ್ನು, ಪುಣೆಯ ಸಂಸ್ಕೃತಿಯನ್ನೂ ನೆನೆಸಿಕೊಳ್ಳದ ದಿನಗಳೇ ಇರಲಿಲ್ಲ. ಈಗಲೂ ಸಹ ಅವಳು ಮಾತನಾಡುತ್ತಿದ್ದ ಹಿಂದೀ ಭಾಷೆಯ ಮೇಲೆ ಮರಾಠಿಯ ಛಾಯೆ ಕಾಣಿಸಿಕೊಳ್ಳುತ್ತಿದ್ದಿತು. ಅವಳಿಗೆ ಗೊತ್ತಿಲ್ಲದಂತೆಯೇ ಹಿಂದಿಯಲ್ಲಿ ಅವಳು ಮರಾಠಿ ಶಬ್ದಗಳನ್ನು ಬಳಸಿದಾಗ ಲಿಲ್ಲಿಗೆ ತಡೆಯಲಾರದ ನಗು ಬರುತ್ತಿತ್ತು.

ಭಾಸ್ಕರ ಪಂತರು ಜೀವಂತವಿರುವಾಗಲೂ. ಅವರು ತೀರಿದ ಮೇಲೂ, ಅಮ್ಮನವರಿಗೆ ಮಾಷಾ ಖಟವಡೆಯವರಲ್ಲಿ ತುಂಬಾ ಸ್ನೇಹ ಗೌರವ, ಮರಾಠಿಗರಾದ ಅವರು ಕಳೆದ ಇಪ್ಪತ್ತು ವರುಷಗಳಿಂದ ಲಖನೌದಲ್ಲಿಯೇ ನೆಲೆಸಿದ್ದರು. ಈಗಿನ ಮುಪ್ಪಿನ ವಯಸ್ಸಿನಲ್ಲಿ, ತಿಳಿದುಕೊಂಡವರಿರಲಿಲ್ಲ. ಅಮ್ಮನವರಿಗೆ ಮರಾಠಿ ಸಾಹಿತ್ಯದಲ್ಲಿ ತುಂಬಾ ಅಭಿರುಚಿ, ಜೊತೆಗೆ ಕನ್ನಡ ಸಾಹಿತ್ಯವನ್ನು ಅಲ್ಪ ಸ್ವಲ್ಪ ಅಭ್ಯಸಿದರು. ಅವರು ಬೆಳೆದದ್ದು ಪುಣೆಯಲ್ಲಿಯಾದರೂ ಅವರು ಹುಟ್ಟಿದ್ದು ವೀರ ಚೆನ್ನಮ್ಮನ ಊರಾದ ಕಿತ್ತೂರಿನಲ್ಲಿ ! ಈಗಲೂ ಅಮ್ಮನವರು ಖಟವಡೆರೊಂದಿಗೆ ಮರಾಠಿ. ಹಿಂದೀ, ಮತ್ತು ಕನ್ನಡ ಸಾಹಿತ್ಯವನ್ನು ಕುರಿತು ಚರ್ಚಿಸುತ್ತಿದ್ದರು.

ಆದರೆ ಈಗ ಲಿಲ್ಲಿಯು ವಿಚಾರಿಸುತ್ತಿದ್ದಳು: ಅಮ್ಮನವರು ಯೋಚಿಸುತ್ತಿರುವದು ನೇಫಾಕ್ಕೆ ಹೋದ ತಮ್ಮ ಮಗ ಆನಂದನನ್ನೋ ಅಥವಾ ತಮ್ಮ ಕಳೆದು ಹೋದ ಜೀವನದ ನೆನಹುಗಳನ್ನೊ ಅಥವಾ ತಮ್ಮ ಮುಂದಿರುವ ಅಲ್ಪ ಆಯುಷ್ಯವನ್ನೋ? "ನೀನೋ" ಎಂದು ಅಮ್ಮನವರು ಹತ್ತಿರ ಬಂದು ನಿಂತಿದ್ದ ಸೊಸೆಯನ್ನು ದೃಷ್ಟಿಸಿ ನೋಡಿದರು. "ನನ್ನ ಸಲುವಾಗಿ ನಿನ್ನ ತಾಯಿಯು ಕಳುಹಿಸಿದ ಉಪ್ಪಿನ ಕಾಯಿಯನ್ನು ತಂದಿರುವಿಯಾ ?"

"ಹೌದು" ಎಂದು, ಲಿಲ್ಲಿಯು ನಗುತ್ತ, "ಮತ್ತೇನನ್ನು ನಿಮಗೆ ತಂದಿರುವೆನೆಂಬುದು ಗೊತ್ತೇ ? ನಿಮಗೆ ಪ್ರಿಯವಾದ ಜಾಜಿ, ಮಲ್ಲಿಗೆ, ಸಂಪಿಗೆ".

"ಏನು, ನಿನ್ನ ಕೈತೋಟದಲ್ಲಿ ಬೆಳೆದ ಹೂಗಳೇ ?"

"ಅದು ಹೇಗೆ ಸಾಧ್ಯ? ಇವು ನಿಮ್ಮ ಊರಿನ ಹೂಗಳು. ನಿಮ್ಮನ್ನು ಕಾಣಲು ಬರುವಾಗ್ಗೆ, ದಾರಿಯ ಮೇಲೆ ಕೊಂಡು ಕೊಂಡೆ".

"ಛೀ, ಹುಚ್ಚಿ, ಮಿತವ್ಯಯವನ್ನು ನೀನಿನ್ನೂ ಯಾವಾಗ ಕಲಿಯುವೆ ?"

"ಹೋಗಮ್ಮಾ, ನಿಮಗೆ ಈ ಹೂಗಳು ತುಂಬಾ ಪ್ರಿಯವೆಂದು ಕೊಂಡು ಕೊಂಡೆ. ಪ್ರೇಮ ಪ್ರೀತಿಗಳಿಗಿಂತಲೂ ದುಡ್ಡು ಹೆಚ್ಚಿನದೇ?" "ಅಮ್ಮನು ಘುಸುನಕ್ಕು", ನಿನಗೆ ದುಡ್ಡು ಎಲ್ಲಿಂದ ಬರುತ್ತದೆ ? "ಲಿಲ್ಲಿಯು ತುಂಟ ನಗೆನಕ್ಕು "ಅಯ್ಯೋ ಹೆಣ್ಣಿಗೆ ಕೆಲಸಕ್ಕೇನು ಕಡಿಮೆ? ಅದೂ ಅವಳು ನೋಡಲು ಸುಂದರಳಿದ್ದರೆ ?"

"ಏನೇ, ಆನಂದನು ಬರಲಿ, ಅವನಿಗೆ ಹೇಳಿ ನಿನ್ನ ಕಿವಿಗಳನ್ನು ಹಿಂಡಲು ಹಚ್ಚುವೆನು", ಮುಖವನ್ನು ಬಾಗಿಲೆಡೆಗೆ ತಿರುಗಿಸಿ" ಛೂರು,

ಪಾರೂನೇ ? ಈ ಹುಡುಗಿಗೆ ಯಾವಾಗಲೂ ಬಾಗಿಲ ಮರೆಗೆ ನಿಂತು, ನಾವು ಮಾತಾಡುವುದನ್ನು ಕದ್ದು ಕೇಳುವ ಕೆಟ್ಟ ಅಭ್ಯಾಸ. ಮಾವಾ ಏಟವಡೆಯವರು ಬಂದಾಗಲೂ ಹೀಗೆಯೇ".

"ಹಾಗಲ್ಲಮ್ಮಾ ಅವಳು ನಿಮಗಾಗಿ ಬಿಸಿ ಬಿಸಿ ಚಪಾತಿಗಳನ್ನು

ತರುತ್ತಿದ್ದಾಳೆ ನೋಡಿ". ಲಿಲ್ಲಿಯು ಪಾರೂವಿಗೆ ಕಣ್ಣು ಮಿಟುಕಿಸಿ "ಏನೇ ಬಾಗಿಲ ಮರೆಗೆ ನಿಂತು ಕದ್ದು ಕೇಳುವುದೇನೇ?" ಪಾರೂ ಬೆದರಿ "ಇಲ್ಲಮ್ಮಾ".

ಲಿಲ್ಲಿಯು "ಅಮ್ಮಾ, ನೀವೊಮ್ಮೆ ಆನಂದನು ಏನೋ ಕದ್ದು ಕೇಳಿದ್ದನ್ನೂ, ನೀವು ಆತನನ್ನು ಚೆನ್ನಾಗಿ ದಂಡಿಸಿದ್ದನ್ನು ಕತೆಮಾಡಿ ಹಿಂದೊಮ್ಮೆ ಹೇಳಿದಂತೆ ಇದೆ. ಅದೇನು? ಇನ್ನೊಮ್ಮೆ ಹೇಳುವಿರೊ?" ಅಮ್ಮನ ಸುಕ್ಕುಬಡೆದ ಮುಖದಲ್ಲಿ ತಿಳಿನಗೆಯು ಲಾಸ್ಯವಾಡತೊಡಗಿತು. ತಮ್ಮ ನೆನಹಿನ ಚೀಲದೊಳಗಿಂದ ಬೇಡಾದದ್ದನ್ನು ತೆಗೆದಿಡುವಂತಿತ್ತು. ಕೊನೆಗೊಮ್ಮೆ ಏನೋ ತೋಚಿದಂತೆ "ಓಹೋ ಅದೋ, ಎಷ್ಟೋ ವರ್ಷಗಳ ಹಿಂದಿನ ಮಾತು" ಅಮ್ಮನು ತನ್ನಷ್ಟಕ್ಕೆ ತಾನೇ ಮಾತಾಡುವಂತಿತ್ತು. ನಾವೆಲ್ಲರೂ ಕೂಡಿ ದೂರ ಪ್ರವಾಸವನ್ನು ಕೈಕೊಂಡಿದ್ದೆವು. ಆನಂದನು ಆಗಿನ್ನೂ ಬಹು ಚಿಕ್ಕ ಹುಡುಗ ಜೋಗ ಜಲಪಾತವನ್ನು ನೋಡಲು ಹೋದಾಗ–"

"ಹೌದು. ಅಲ್ಲಿ ನಿಮ್ಮೆಲ್ಲರಿಗೆ ಇರಲು ಒಂದೇ ರೂಡು ದೊಡ್ಡ ಕೋಣೆಯು ಸಿಕ್ಕಿತ್ತೆಂದು ಏನೋ ಹೇಳಿದ್ದಿರಲ್ಲಾ ಅಲ್ಲವೆ ?"

ಎಂದು ಲಿಲ್ಲಿಯು ಹೇಳಿದಾಗ ಅಮ್ಮನಿಗೆ ಆಗಿನ ಒಂದು ಪ್ರಸಂಗವನ್ನು ನೆನಸಿಕೊಂಡು ಹಿಡಿಸಲಾರದ ನಗು ಬಂದಿತು.. ಸುಕ್ಕುಗೊಂಡ ಮುಖವು ಕಳೆದುಂಬಿತು. ಅವಳು ನಗುವುದನ್ನು ಕಂಡು ಲಿಲ್ಲಿಯೂ ನಗಲಾರಂಬಿಸಿದಳು. ನೋಡು; ರಾತ್ರಿಹೊತ್ತು, ಎಲ್ಲರಿಗೂ ಕಣ್ಣುಮುಚ್ಚಿಕೊಳ್ಳಿ ಎಂದು ಹೇಳಿದೆ. ಆನಂದನು ನಿದ್ರೆ ಹೋದವನಂತೆ ನಟಿಸಿದ್ದ. ನಾನು ಬಟ್ಟೆ ಬದಲಿಸುವಾಗ,

ಮೆಲ್ಲಗೆ ಕಣ್ಣು ತೆರೆಯಲು, ನಾನು ಹೋದವಳೇ ಅವರ ಕಿವಿಯನ್ನುಹಿಡಿದೆ. ಆ ಭರದಲ್ಲಿ ಕೈಯಲ್ಲಿದ್ದ ಬಟ್ಟೆಗಳನ್ನು ಮರೆತ."

ಅಮ್ಮನು ಮತ್ತೊಮ್ಮೆ ಆ ಪ್ರಸಂಗವನ್ನು ನೆನಿಸಿಕೊಂಡು ನಕ್ಕಳು.

"ನಿನ್ನ ಆನಂದನು ಬಹಳ ತುಂಟನೇ?" ಇದೇ ಸಮಯಕ್ಕೆ ಪಾರೂ ಒಂದು ಪತ್ರವನ್ನು ತೆಗೆದುಕೊಂಡು ಬಂದು, "ಅಮ್ಮಾ ನಿಮಗೆ ಇದು" ಎಂದಳು. "ಆನಂದನದೇ ಅದು?" ಎಂದು ಗಡಬಡಿಸಿ ಅಮ್ಮನು ಕೇಳಲು, "ನನಗೆ ಹೇಗೆ ಗೊತ್ತಾಗಬೇಕಮ್ಮ" ಎಂದು ಪಾರೂ ಲಿಲ್ಲಿಯ ಕಡೆಗೆನೋಡಿ ಕಣ್ಣು ಮಿಟುಕಿದಳು. ಅಮ್ಮನು ಎಲ್ಲಿಲ್ಲದ ಶಕ್ತಿಯನ್ನು ತಂದುಕೊಂಡು ಎದ್ದು ಕುಳಿತಳು.ಅದನ್ನು ನೋಡಿ ಲಿಲ್ಲಿಯು "ಮಾಮಾ ಖಟವಡೆಯವರು ಮೊನ್ನೆ ಹೇಳಿದ ಮಾತು, ನೀವು ಇನ್ನು ಹತ್ತು ವರುಷ ಬಾಳುವಿರಿ ಎಂಬುದು ನಿಜವೆನಿಸುತ್ತದೆಯಮ್ಮಾ," "ಹಾಗಾದರೆ ಆನಂದನು ನೇಪಾದಿಂದ ತಿರುಗಿ ಬರುವವರೆಗೆ ನಾನು ಜೀವಿಸಿರುವೆನೆ?" ಪತ್ರವನ್ನು ಒಡೆದು "ಓಹೋ ಇದು ಆನಂದನದೇ ಪತ್ರ ಅಲ್ಲವೇ? ಪಾರೂ ಈ ಚಪಾತಿಗಳನ್ನು ಒಯ್ದುಬಿಡಮ್ಮಾ. ನನಗೆ ಈಗಲೇ ಸಂತೋಷದಿಂದ ಹೊಟ್ಟೆ ತುಂಬಿದಂತಾಯಿತು. ತಗೋ" ಎಂದು ಪತ್ರವನ್ನು ಲಿಲ್ಲಿಗ ಕೊಡುತ್ತ"ಗಟ್ಟಿಯಾಗೆ ಓದು. ಕೇಳುತ್ತಲೇ ನಾನು ಸ್ವರ್ಗಸುಖವನ್ನು ಅನುಭವಿಸುವೆನು".

ಅಮ್ಮಾ ನಿನಗೆ ಉದ್ದವಾದ ಕಾಗದವನ್ನು ಬರೆಯಲು ನನಗೆ ವೇಳೆಯೇ ಸಿಕ್ಕುವದಿಲ್ಲ, ನನಗೆ ತುಂಬಾ ಕೆಲಸ. ನಾನು ಎಸಗಿದ್ದ ವೀರಕೃತ್ಯಕ್ಕಾಗಿ ನನಗೆ ಪರಮವೀರ ಚಕ್ರವು ಸಿಕ್ಕಿದೆ. ಸ್ವತಃ ಪ್ರಧಾನ ಮಂತ್ರಿಗಳೇ ನನಗ ಅದನ್ನು ಕೊಡುವವರಿದ್ದಾರೆ ಮತ್ತೆ ಗೊತ್ತೇ? ಈ ಅಲಭ್ಯ ಬಹುಮಾನದೊಂದಿಗೆ ನನಗೆ ಬಡ್ತಿಯೂ ಸಿಕ್ಕುತ್ತದೆ. ಪರಮವೀರ ಚಕ್ರವನ್ನೂ ಭಡ್ತಿಯ ಚುಕ್ಕೆಗಳನ್ನೂ ಧರಿಸಿಕೊಂಡು ನಿಮ್ಮ ಆಶೀರ್ವಾದ ಪಡೆಯಲು ಆತುರನಾಗಿದ್ದೀನೆ."

ಅಮ್ಮನು ಪತ್ರವನ್ನು ಹಲವೊಂದು ಸಲ "ಓದಿಸಿದ್ದೇ' ಓದಿಸಿದ್ದು. ಕೊನೆಗೆ "ಹೋಗು ನಿನಗೆ ತಿರುಗಿ ಮನೆಗೆ ಹೋಗಲು ಕತ್ತಲಾಗುತ್ತದೆ"

ಅಂದಳು ಲಿಲ್ಲಿಯು ಹೊರಗೆ ಚಂದು ಪಾರೂನನ್ನು ಕೂಗಿ "ಅಂತೂ ಅಮ್ಮನಿಗೆ ಈ ಪತ್ರವು ಲಖನೋದಲ್ಲಿಯೇ ಪೋಸ್ಟ್‌ಮಾಡಲ್ಪಟ್ಟಿದೆ ಎಂಬ ವಿಷಯ ತಿಳಿಯಲಿಲ್ಲ" ಎಂದಳು.

ಹಿಂದು ವಾರದನಂತರ ಅಮ್ಮನಿಗೆ ಕಾಯಿಲೆಯು ಜಾಸ್ತಿಯಾಯಿತು. ಮಾಮಾ ಖಡವಡೆಯುವರ ಭವಿಷ್ಯದಲ್ಲಿ ಏಕೋ ಸಂದೇಹವೆನಿಸತೊಡಗಿತು. ಬಂದಕೂಡಲೇ, ಲಿಲ್ಲಿಗೆ ಅಲ್ಲಿಯೇ ಇದ್ದು ಅಮ್ಮನ ಶುಶ್ರೂಷೆ ಮಾಡ ಬೇಕೆಂದು ಆಶೆ. ಆದರೆ ಅಮ್ಮನು ಅದಕ್ಕೆ ಒಪ್ಪಳು. "ಏಕೆ ನನಗೇ ನಾಗಿದೆ? ಇಲ್ಲಿ ಬಂದರೆ ನೀನು, ಸದಾ ಆನಂದನ ವಿಚಾರದಲ್ಲಿಯೇ ಖಿನ್ನಳಾಗುವಿ. ಅಲ್ಲಿಯೋ ಉಳಿದ ಆಫೀಸರರ ಹೆಂಡಂದಿರೊಂದಿಗೆ ಸ್ವಲ್ಪ ವಾದರೂ ಈ ವಿಷಯವನ್ನು ಮರೆಯುವಿ." ಲಿಲ್ಲಿಯು ಬಾಗಿಲುತೆಗೆದಾಗ ಅಮ್ಮನು ಯಾವುದೋ ಸ್ವಪ್ನ ಸಾಮ್ರಾಜ್ಯದಲ್ಲ ವಿಹರಿಸುತ್ತಿರುವಂತಿತ್ತು.

"ಅಮ್ಮಾ, ಆನಂದನಿಗೆ ಭೇಗ ಬಾ ಎಂದು ಕಾಗದ ಬರಯಲೇ?"

"ಛೀ, ಆತನು ದೇಶರಕ್ಷಣೆಯಲ್ಲಿ ನಿರತನಾದಾಗ ಬಾ ಎಂದು ಬರಯುವದೇ?"

"ನಿಮ್ಮ ದೇಹಸ್ಥಿತಿ?"

"ಅವನಿಗೆ ವೀರ ಚಕ್ರವು ಸಿಕ್ಕುವದಿಲ್ಲದೆ ? ಅದನ್ನು ಬಿಟ್ಟು ಬರುವದೇ ? ನನ್ನ ಮಗನು ವೀರಯೋಧನೆಂದು ಹೊಗಳಿಸಿಕೊಳ್ಳಲೆಂಬ ಬಲವಾದ ಆಶೆ, ನೀನೂ ಹಾಗೇ ದೇವರನ್ನು ಪ್ರಾರ್ಥಿಸು."

"ನಿಮ್ಮನ್ನು ನೋಡಿಕೊಂಡು ಹೋಗಬಹುದು. ತಾಯಿಯ ಆರೋಗ್ಯವು ತೀರ ಕೆಟ್ಟಾಗ ಸೈನ್ಯದಲ್ಲಿ ರಜೆ ಸಿಕ್ಕುವುದು ಕಷ್ಟವಲ್ಲ."

"ಹಾಗಾದರೆ ? ಅವನ ಹಾಗೆಯೇ ಎಲ್ಲರೂ ಹೋದರ ಗತಿ?" ಲಿಲ್ಲಿಗೆ ಏನೂ ತೋಚದಂತಾಯಿತು.

ಆ ದಿನ ಸಾಯಂಕಾಲ ಲಿಲ್ಲಿಯು ಬಹು ಆತುರತೆಯಿಂದ ಬಂದಾಗ ಮನೆಯಲ್ಲಿ ಏಕೋ ಸ್ಮಶಾನ ಶಾಂತಿ, "ಪಾರೂ ಪಾರೂ, ಕೊನೆಗೊಮ್ಮೆ ಆನಂದನಿಂದ ನಿಜವಾಗಿಯೂ ಕಾಗದ ಬಂದಿದೆ ನೋಡೇ. ನನ್ನ ಆನಂದನ ಜೀವಂತನಿದ್ದಾನೆ. ಅದೆಷ್ಟೋ ಕಷ್ಟ ನಷ್ಟಗಳನ್ನು ಅನುಭೋಗಿಗೆ, ಕಟ್ಟಾರಣ್ಯವನ್ನು ಭೇಧಿಸಿ ಗುರಿ ತಲುಪಿದ್ದಾನೆ. ಮುಂದಿನ ವಾರ ಇಲ್ಲಿಗೆ ಬರಬಹುದು." ಲಿಲ್ಲಿಯು ತನ್ನ ಸಂತೋಷದ ಭರದಲ್ಲಿ ಪಾರೂ ತಾನೂ ಹೇಳುತ್ತಿರುವುದನ್ನು ಆಲಿಸುತ್ತಿರುವಳೋ ಇಲ್ಲವೋ ಎಂಬುದನ್ನೆ ಅರಿಯಳು. ಕೊನೆಗೆ "ಏಕೆ ಪಾರೂ ಹೀಗೆ ನೋಡುತ್ತಿಯಾ ? ನನ್ನ ಸಂತೋಷದಲ್ಲಿ ನೀನೇಕೆ ಪಾಲುಗಾರಳಾಗಲೊಲ್ಲೆ? ಅಮ್ಮನು ಹೇಗಿದ್ದಾಳೆ? "ಡಾಕ್ಟರ್ ಇದೇ ತಾನೇ ಬಂದು ಹೋದರು, ಪರಿಸ್ಥಿತಿ ಆಶಾದಾಯಕವಿಲ್ಲ ಎಂದು ಹೇಳಿದರು. ಅಮ್ಮನಿಗೆ ನ್ಯೂಮೋನಿಯಾ ಸೇರಿಕೊಂಡಿದೆ. ಅರಿವಿಲ್ಲದೆ ಏನೋ ಬಡಬಡಿಸುತ್ತಿದ್ದಾರೆ. ಪ್ರಜ್ಞೆ ಬಂದಾಗ, ಲಿಲ್ಲಿಯನ್ನು ರೆಯಿಸಿ ದುಃಖಿತಳನ್ನಾಗಿ ಮಾಡಬೇಡ ಎಂದು ಹೇಳಿದರು."

"ಅಯ್ಯೋ ಪಾರೂ, ಮುಂದಿನವಾರ ಆನಂದನು ಮರಳಿ ಬಂದಾಗ ಅಮ್ಮನು ಎಲ್ಲಿದ್ದಾಳೆಂದು ಕೇಳಿದರೆ ನಾನು ಏನು ಹೇಳಲೇ?" ಪಾರೂನ ಗಂಟಲು ತುಂಬಿಬಂದಿತ್ತು. ಲಿಲ್ಲಿಯೇ ಅಳುವನ್ನು ನುಂಗಿ ಚಿಕ್ಕ ನಗುವನು ನಕ್ಕು, ಪಾರೂನ ಬೆನ್ನನ್ನು ಸವರುತ್ತ "ನೋಡು ಪಾರೂ ಆ ನಕ್ಷತ್ರದೆಡೆಗೆ ಅಮ್ಮನ ನೆನಪು ಆ ನಕ್ಷತ್ರದಂತೆ ಸದಾ ಕಾಲವೂ ನಮ್ಮ ಮನಸ್ಸಿನಲ್ಲಿ ಮಿನುಗುವುದಲ್ಲವೇ?"

(೧೯೬೨ರಲ್ಲಿ ನಡೆದ ಭಾರತ-ಚೀನಗಳ ನಡುವಿನ ಯುದ್ಧದ ಸಂದರ್ಭವಲ್ಲಿ ನಡೆದ ಒಂದು ಸಂಗತಿಯನ್ನು ಆಧರಿಸಿ ಬರೆದದ್ದು.)

—

—೦—

# ತೆರೆಸರಿಯಿತು

ಎಚ್. ವಿ. ಸಾವಿತ್ರಮ್ಮ

ಮೂರ್ತಿ ಬಸ್ಸಿಗಾಗಿ ಕಾದು ನಿಂತಿದ್ದ. ಅರ್ಧ ಘಂಟೆಯಾದರೂ ಮಲ್ಲೇಶ್ವರದ ಕಡೆ ಹೋಗುವ ಒಂದು ಬಸ್ಸೂ ಬಂದಿರಲಿಲ್ಲ. ಬ್ಯಾಂಕಿನ ಕೆಲಸವೇ ಬೇಸರ ತಂದಿತ್ತು. ಒಂದು ಲೆಕ್ಕ ತಾಳೆಯಾಗದೆ, ಬ್ಯಾಂಕು ಬಿಟ್ಟು ಹೊರಡುವುದೇ ಹೊತ್ತಾಗಿತ್ತು. ಮನೆ ಸೇರಿ ಸ್ನಾನ ಮಾಡಿ ನಿಶ್ಚಿಂತೆಯಿಂದ ಕಾಲುಚಾಚಿ ಹಾಸಿಗೆಯ ಮೇಲೆ ಮಲಗಿದರೆ ಸಾಕೆನ್ನಿಸಿತ್ತು. ಬಸ್‌ಸ್ಟಾಂಡಿಗೆ ಬರುವ ಮೊದಲೇ ಹನುಮಂತನ ಬಾಲ ಬೆಳೆದಂತೆ ಬೆಳೆದಿದ್ದ ಕ್ಯೂ ಇನ್ನೂ ಬೆಳೆಯುತ್ತಲೇ ಇತ್ತು. ಅದನ್ನು ನೋಡಿದ ಮೂರ್ತಿ ಮೊದಲನೆ ಬಸ್ಸಂತೂ ಇಲ್ಲ; ಎರಡನೆಯದರಲ್ಲಿ ಸಿಕ್ಕಬಹುದು ಎಂದುಕೊಂಡ. ಆಲೋಚನೆಗಳು ಮನೆಯ ಕಡೆ ಓಡಿದವು. ಲಲಿತೆ ಅಡಿಗೆ ಮಾಡಿಟ್ಟು ರೇಡಿಯೋ ಮುಂದೆ ಕುಳಿತಿರಬಹುದು. ರಾಜು ಪಾಠಗಳನ್ನು ಓದುತ್ತಿರಬಹುದು. ಇಂದು ಮನೆ ಸೇರಿದರೆ, ನಾಳೆ ಭಾನುವಾರ: ತಾಪತ್ರಯವಿಲ್ಲ. ಮನೆಯಿಂದ ಕದಲಲೇ ಬೇಕಾಗಿಲ್ಲ. ಆದರೆ ತಂದೆ-ತಾಯಿಗಳನ್ನು ನೋಡಿ ವಾರದ ಮೇಲಾಯಿತು. ನಾಳೆ ಹೋಗಿ ಬರಬೇಕು. ಅವರೇ ಬಂದರೆ ತಂಟೆಯಿಲ್ಲ.

ಕಾಲಿನಬಳಿ ಕುಂಟನೊಬ್ಬ "ಸಾರ್ ಸಾರ್" ಎಂದು ತೆವಳಿಕೊಂಡು ಬಂದಾಗ ಮೂರ್ತಿಯ ಗಮನ ಕ್ಷಣಕಾಲ ಅವನ ಕಡೆ ಹೋಯಿತು. ತೀರ ಸಣ್ಣಗೆ ಮುರುಟಿ ಹೋಗಿರುವ ಕಾಲುಗಳು ರಸ್ತೆಯ ಧೂಳೆಲ್ಲಾ ಅಂಟಿರುವ ಕೊಳೆಬಟ್ಟೆ; ಎಣ್ಣೆ ನೀರನ್ನು ಕಾಣದೆ ಹೆಣೆದು ಕೊಂಡಿರುವ ಕೂದಲು; ದೈನ್ಯ ಕೇಂದ್ರೀಕೃತವಾದ ಕಣ್ಣು, ಅವನ ಡಬ್ಬದಲ್ಲಿ ಮೂರ್ತಿ

ಐದುಪೈಸೆ ಹಾಕಲು ಅವನು ಮುಂದಕ್ಕೆ ಸರಿದ. ದೇಹದ ಭಾರವನ್ನು ಕಾಲಿನಿಂದ ಕಾಲಿಗೆ ಸರಿಸುತ್ತಾ ಪಕ್ಕದಲ್ಲಿ ನಿಂತಿದ್ದ ಮುದುಕರೊಬ್ಬರು "ಇಲ್ಲಿ ಕಾಯೋದೇ ಬೇಸರವೆಂದರೆ ಈ ಬಿಕ್ಷಕರ ಕಾಟ ಬೇರೆ' ಎಂದು ಆಕಳಿಸಿದರು. ಇನ್ನೊಂದು ಕ್ಷಣಕ್ಕೆ ಒಬ್ಬ ಹುಡುಗ, ತೀರ ಚಿಕ್ಕವ ಮೂರ್ತಿಯ ಹಿಂದೆ ನಿಂತು "ಒಂದು ಟಿಕೆಟ್ ತಕೊಳ್ಳಿ ಸಾರ್, ಒಂದೇ ರೂಪಾಯಿ" ಎಂದ,

ಮೂರ್ತಿ ಎಂಥಾ ಟಿಕೆಟ್ಟೋ? ಎಂದು ಕೇಳಿದ

"ನಾಟಕ ಸಾರ್. ಅನಾಥಾಲಯದ ಬೆನಿಫಿಟ್, ಅಲ್ಲಿನ ಮಕ್ಕಳೇ ಆಡ್ತಾರೆ" ಹೋಗೋ, ನಾಟಕಾನೂಬೇಡ; ಎಂಥಾದ್ದೂಬೇಡ. ಎಂದ ಮೂರ್ತಿ ಹುಡುಗ ನೋಡುವುದಕ್ಕೆ ಲಕ್ಷಣವಾಗಿದ್ದ. ಕಾಕಿಚಡ್ಡಿ: ಬಿಳೀ ಷರ್ಟು. ಕೂದಲನ್ನು ಅಂದವಾಗಿ ಬಾಚಿದ್ದ. ಅವನ ಮುಖ ಯಾರದೋ ನೆನಪುಂಟುಮಾಡಿದಂತಾಗಿ "ನೀನು ಯಾರೋ?" ಎಂದ

"ನಾನು ಅನಾಥಾಲಯದಲ್ಲೇ ಇದ್ದೀನಿ ಸಾರ್ ಐದನೇ ಕ್ಲಾಸು ಒಂದೇ ಒಂದು ಟಿಕೆಟ್ ತಕೊಳ್ಳಿ ಸಾರ್, ನಾಟಕ ತುಂಬಾ ಚೆನ್ನಾಗಿದೆ" ಎಂದ. ಇಷ್ಟೊಂದು ಮಾತನಾಡಿ ಸುಮ್ಮನೆ ಕಳುಹಿಸಲಾರದೆ ಒಂದು ಬೇಡಪ್ಪ ನನ್ನ ಹೆಂಡತಿಗೂ ಒಂದು ಕೊಡು, ಎಂದು ಹುಡುಗನ ಕೈಗೆ ಎರಡು ರೂಪಾಯಿ ಕೊಟ್ಟು ಟಿಕೆಟ್ ಪಡೆದ.

ಹಿಂದಿನಿಂದ ಜನ ಸರೀರಿ ಸ್ವಾಮಿ ಎಂದು ನೂಕಲಾರಂಭಿಸಿದರು. ಒಂದು ಬಸ್ ಬಂದು ನಿಂತಿತು. ಕ್ಯೂ ಸರಿಯುತ್ತ ಸರಿಯುತ್ತ ಮೂರ್ತಿಯ ಆಸೆ ಹೆಚ್ಚುತ್ತಾ ಹೋಯಿತು. ಗೆದ್ದೆನೆಂದು ಬಸ್ಸೇರಿದವರಲ್ಲಿ ಮೂರ್ತಿಯೇ ಕಡೆಯವನು,

ಲಲಿತೆ ಬಾಗಿಲಲ್ಲಿ ನಿಂತು ಬೀದಿಯ ಕಡೆ ನೋಡುತ್ತಿದ್ದಳು. ಮೂರ್ತಿಯನ್ನು ಕಾಣುತ್ತಲೇ "ಏನಿಷ್ಟು ಹೊತ್ತು"? ಎಂದಳು.

ಮೂರ್ತಿ ಗಡಿಯಾರ ನೋಡಿಕೊಂಡ. ಮುಳ್ಳು ಒಂಬತ್ತನ್ನು ಸಮೀಪಿಸುತ್ತಿತ್ತು "ಬೇಜಾರಾಗಿ ಹೋಯ್ತು, ಲಲಿತಾ, ಎಷ್ಟು ಹೊತ್ತು ನಿಂತರು ಬಸ್ಸು ಸಿಕ್ಕುವುದಿಲ್ಲ. ಸಧ್ಯ, ನಾಳೆ ಭಾನುವಾರ, ಮನೇಲೇ ಬಿದ್ದಿರಬಹುದು".

"ಈವತ್ತು ನೀವು ಬೇಗ ಬಂದಿದ್ದರೆ, ಒಂದು ಸಿನಿಮಾಗೆ ಹೋಗಿ, ಬರಬಹುದಾಗಿತ್ತು." ಎಂದು ನಿರಾಸೆಯ ದನಿಯಲ್ಲಿ ಲಲಿತ ಹೇಳಿದಳು. ದಿನವೆಲ್ಲಾ ಮನೆಯಲ್ಲಿರುವ ಲಲಿತೆಗೆ ಹೊರಗೆ ಹೊರಡುವ ಆಸೆ, ತನಗೆ ಮನೆ ಸೇರುವ ಆಸೆ.

"ನೀನು ರಾಜು ಹೋಗಿ ಬರಬಹುದಾಗಿತ್ತು. ಹೇಗೊ ನನ್ನ ಹತ್ತಿರ ಮನೆ ಬೀಗದ ಕೈ ಒಂದಿದೆಯಲ್ಲ."

"ರಾಜೂಗೆ ಪರೀಕ್ಷೆ; ಅವನೆಲ್ಲಿ ಬರ್ತಾನೆ?" ಎಂದು ಅಸಮಾಧಾನ ದಿಂದ ಊಟಕ್ಕೆ ಸಿದ್ಧಪಡಿಸಲು ಲಲಿತೆ ಹೋದಳು. ಮೂರ್ತಿ ಕೋಟು ಬಿಚ್ಚಿ ಭುಜದ ಮೇಲೆ ಟವಲ್ ಹಾಕಿಕೊಂಡು ಬಚ್ಚಲು ಮನೆಗೆ ಹೋದು

ಊಟಕ್ಕೆ ಕುಳಿತಾಗ ಮೂರ್ತಿಗೆ ತಾನು ಟಿಕೆಟ್ ಕೊಂಡ ನೆನಪುಂಟಾ ಯಿತು. "ಹೇಳೋದಕ್ಕೆ ಮರೆತೆ ಲಲಿತಾ. ನಾಳೆ ನಾಟಕಕ್ಕೆ ಎರಡು ಟಿಕೆಟ್ ತಂದಿದ್ದೇನೆ"

ಲಲಿತೆ ಉತ್ಸಾಹ ತೋರದೆ "ಯಾವ ನಾಟಕ?" ಎಂದಳು.

"ಅದೇ ಕೇಳಲಿಲ್ಲ, ನೋಡು, ನಾನೆಂತಹ ಪೆದ್ದು ಯಾವುದೋ ಅನಾಥಾಲಯದ ಹುಡುಗ ತಂದು ಕೊಟ್ಟ, ತೆಗೆದುಕೊಂಡೆ."

ರಾಜು "ಕೃಷ್ಣತುಲಾಭಾರ. ಎರಬೇಕಣ್ಣಾ. ಅನಾಥಾಲಯದವರು ಮೂರು ದಿನದಿಂದ ಆಡ್ತಾ ಇದ್ದಾರಂತೆ, ತುಂಬಾ ಚೆನ್ನಾಗಿದೆಯಂತೆ ನನ್ನ ಫ್ರೆಂಡ್ಸ್ ಎಲ್ಲಾ ನೋಡಿ ಬಂದರು."

ಲಲಿತೆ "ಎಲ್ಲಿ?" ಎಂದಳು.

ಮೂರ್ತಿ ಪ್ರಶ್ನಾರ್ಥಕವಾಗಿ ರಾಜುವನ್ನೇ ನೋಡಿದ.

ರಾಜು ನಗುತ್ತಾ "ಈ ಅಣ್ಣನಿಗೆ ನಾಟಕ ಯಾವುದು ಅಂತ ಗೊತ್ತಿಲ್ಲ. ಎಲ್ಲಿ ಅಂತ ಗೊತ್ತಿಲ್ಲ. ಟಿಕೆಟ್ ತಂದುಬಿಟ್ಟ. ರವೀಂದ್ರಕಲಾಕ್ಷೇತ್ರದಲ್ಲಿ ಆಡ್ತಾರಮ್ಮ" ಎಂದ.

ಮೂರ್ತಿ "ಆ ಟಿಕೆಟ್ ಮಾರೋದಕ್ಕೆ ಬಂದ ಹುಡುಗ ತುಂಬಾ ಲಕ್ಷಣವಾಗಿದ್ದ," ಎಂದ.

ರಾಜು "ಆ ನಾಟಕದಲ್ಲಿ ಸತ್ಯಭಾಮೆ ಪಾರ್ಟು ಒಬ್ಬ ಹುಡುಗಿ ತುಂಬಾ ಚೆನ್ನಾಗಿ ಮಾಡ್ತಾಳಂತೆ. ಸಂಗೀತ ತುಂಬಾ ಚೆನ್ನಾಗಿದೆಯಂತೆ" ಎಂದ "ನೀನ್ಯಾಕೆ ನೋಡಿ ಬರಲಿಲ್ಲ. ಇಷ್ಟೆಲ್ಲಾ ಹೇಳೋವ್ನು? ನಾಳೆ ನಮ್ಮ ಜತೇಲಿ ಬರ್ತೀಯೇನು?" ಎಂದು ಮೂರ್ತಿ ಮಗನಕಡೆ ನೋಡಿದ. ಅಷ್ಟೆ! ಪರೀಕ್ಷೆ ಹದಿನೈದು "ದಿನ ಇದೆ, ನಾಟಕ ನೋಡ್ತಾ ಇದ್ದರ ಆ ಮೇಲೆ ನಾನೂ ನಾಟಕದ ಕಂಪನೀನೇ ಸೇರಬೇಕಾಗುತ್ತೆ. ಅದೂ ಅಲ್ದೆ ನೀನು ಅಮ್ಮ ಇಬ್ಬರೇ ಹೋದರೆ ಮಜಾ. ಅಲ್ವೇನಮ್ಮ? ಎಂದು ಲಲಿತೆಯ ಕಡೆ ಕಣ್ಣು ಮಿಟುಕಿಸಿದ.

"ಹೋಗೋ ತಲೆಹರಟೆ," ಎಂದು ಅವನನ್ನು ಗದರಿಸಿದರೂ ಲಲಿತೆಯ ಮುಖದ ಮೇಲೆ ಮೃದುವಾದೊಂದು ನಗೆ ಸುಳಿದುಹೋಯಿತು. ಎಷ್ಟು ವಯಸ್ಸಾದರೂ, ಎಷ್ಟುನಿರುತ್ಸಾಹ ವಾತಾವರಣವಿದ್ದರೂ, ಅನೇಕ ನಿರಾಸೆಗಳನ್ನೆದುರಿಸಿದರೂ, ಹೆಂಗಸು ಭಾವನಾಜೀವಿ.

ಮಾರನೆಯ ದಿನ ಮೂರ್ತಿ ಹಾಸಿಗೆಯ ಮೇಲೆ ಮಲಗಿ ಹಗಲು ಗನಸು ಕಾಣುತ್ತಿದ್ದ. ಲಲಿತೆ "ಎಂಟು ಘಂಟೆ ಹೊಡೀತು. ರೇಡಿಯೋ ವಾರ್ತೆ ಬರ್ತಾ ಇದೆ. ಇನ್ನೂ ಏಳೋಲ್ವೆ?" ಎಂದಳು.

"ಏನವಸರ ಲಲಿತಾ? ಭಾನುವಾರವಲ್ವೆ? ಬಸ್ಸಿಗೆ ಓಡಬೇಕಾಗಿಲ್ಲ" ಎಂದ ಮೂರ್ತಿ.

"ಕಾಫಿ ವಾಸನೆ ಬರಲಿಲ್ಲೇ ?" ಎಂದು ನಕ್ಕು ಲಲಿತೆಯ ಕೈ ಹಿಡಿದು ಪಕ್ಕದಲ್ಲಿ ಕೂಡಿಸಿಕೊಂಡು ಕೇಳಿದ "ಈವತ್ತೇನು ಮಾಡೋಣ ಲಲಿತಾ?"

"ನೀವು ಹಾಸಿಗೆ ಬಿಟ್ಟು ಎದ್ದರೆ ಅಲ್ವೆ?

"ಏಳ್ತೀನಿ. ಎಲ್ಲಿ ಹೋಗೋಣ?"

"ಅಡಿಗೆ ಬೇಗ ಮುಗಿಸ್ತೀನಿ. ಎಲ್ಲಾದರೂ ಹೋಗೋಣ".

"ಅಡಿಗೆ ಬೇಡ, ಏಂಥಾದ್ದೂ ಬೇಡ. ಕಾಮತ್ ಹೋಟಲಿಗೆ ಹೋಗಿ ಊಟ ಮಾಡಿಕೊಂಡು, ತಿರುಗಾಡಿಕೊಂಡು ಬರೋಣ".

"ರಾಜು?"

"ಅವನೂ ಅಲ್ಲೇ ಊಟಮಾಡಲಿ. ದುಡ್ಡು ಕೊಟ್ಟು ಬಿಡ್ತೀನಿ".

"ಸರಿ, ಹಾಗಾದರೆ ಏಳಿ ಈ ಸಲ". ಎಂದು ಲಲಿತೆ ಎದ್ದಳು. ಮೂರ್ತಿ ಬ್ರಷ್ಷಿನ ಮೇಲೆ ಟೂಟ್‌ಪೇಸ್ಟ್ ಹಾಕೊಂಡು ಬಚ್ಚಲು ಮನೆಗೆ ಹೋದ. ಕಾಫಿ ಕುಡಿದು ಹೊರಗೆ ಬರುವ ವೇಳೆಗೆ ಬಾಗಿಲಲ್ಲಿ ನಿಂತ ಆಟೋರಿಕ್ಷಾದಿಂದ ಅವನ ತಂದೆ ತಾಯಿ ಇಳಿದು ಒಳಕ್ಕೆ ಬಂದರು.

"ಬಾಮ್ಮ, ಬಾಪ್ಪ. ಈವತ್ತು ನಾವೇ ಅಲ್ಲಿಗೆ ಬರಬೇಕೂಂತ ಇದ್ವಿ" ಎಂದು ಮೂರ್ತಿ ತಂದೆ ತಾಯಿಗಳನ್ನು ಸ್ವಾಗತಿಸಿದ. ಕಟ್ಟಿಕೊಂಡ ಕನಸಿನ ಗೋಪುರ ಕುಸಿಯಿತೆಂದು ತಿಳಿದು ಲಲಿತೆ ಬೇಸರದಿಂದ. ಕಾಫಿಮಾಡಲು ಅಡಿಗೆ ಮನೆಯೊಳಗೆ ಹೋದಳು.

"ನೀನು ಆಕಡೆ ಬಂದು ಹದಿನೈದು ದಿನವಾಯ್ತು. ಮೂರ್ತಿ; ಮುದುಕಿ ಒದ್ದಾಡಿ ಬಿಟ್ಟಳು, ಹೊತ್ತುಮಾಡಿದರೆ ಎಲ್ಲಾದರೂ ಹೊರಟು ಬಿಡ್ತೀರಿ ಅಂತ ಬೇಗ ಬಂದು ಬಿಟ್ವಿವು". ಎಂದು ಮೂರ್ತಿಯ ತಂದೆ ವಿವರಿಸಿದರು.

ತಾಯಿ ಸುಬ್ಬಮ್ಮ. "ಏನೊ. ಮೂರ್ತಿ. ಹೀಗೆ ಮಾಡ್ತೀ? ಜಯನಗರವೇನು ಸಾವಿರಾರು ಮೈಲಿ ದೂರವೆ? ವಾರಕ್ಕೊಂದು ಸಲ ವಾದರೂ ಬರಬಾರದೆ? ಹೋದ ಭಾನುವಾರ ನೀನು ಬರ್ತೀ ಅಂತ ಕೋಡು ಬಳೆ ಮಾಡಿಟ್ಟು ಸಂಜೆಯವರೆಗೂ ಕಾದುಕೊಂಡಿದ್ದೆ" ಎಂದು ಆಕ್ಷೇಪಿಸಿದಳು.

"ಏನೋ ಹಾಳು ಕೆಲಸ ಬಿಡಮ್ಮ. ಸಾಯಂಕಾಲದ ವೇಳೆಗೆ ಸಾಕು ಸಾಕಾಗಿ ಹೋಗುತ್ತೆ. ಭಾನುವಾರ ಮನೆಬಿಟ್ಟು ಹೋಗೋಕೇ ಬೇಜಾ ರಾಗುತ್ತೆ" ಮೂರ್ತಿ ಕಾರಣ ತಿಳಿಸಿದ.

ಲಲಿತೆ ಎರಡು ಲೋಟಗಳಲ್ಲಿ ಕಾಫಿ ತರಲು "ತಾಳು ತಾಯಿ, ಕೈ ಕಾಲು ತೊಳೆದು ಬರ್ತೇವೆ" ಎಂದು ಅವರಿಬ್ಬರೂ ನಲ್ಲಿಯ ಬಳಿಗೆ ಹೋದರು.

"ಆಯಿತು ಕಾಮತ ಊಟ"ಲಲಿತೆ ಗಂಡನೊಡನೆ ಹೇಳಿದಳು.

"ಏನೋ ಪಾಪ! ಅಷ್ಟು ದೂರದಿಂದ ಒದ್ದಾಡಿಕೊಂಡು ಬಂದಿದ್ದಾರೆ ಮೂರ್ತಿಯೆಂದ.

ಸುಬ್ಬಮ್ಮ "ನೀನೇನೂ ತೊಂದರೆ ಪಡಬೇಡ. ಲಲಿತಾ. ಮಡಿ ಯೇನೂ ಬೇಕಾಗಿಲ್ಲ. ಸ್ನಾನಮಾಡಿ ಒಂದಿಷ್ಟು ಅನ್ನ ಸಾರು ಮಾಡಿಬಿಡು. ಅಥವಾ ನಾನೇ ಮಾಡಿಬಿಡಲೋ?" ಎಂದರು.

ಅತ್ತೆಗೆ ಕಾಫಿಕೊಟ್ಟು ಲಲಿತೆ ಸಮಾಧಾನದಿಂದಲೇ "ಏನೂ ಬೇಡ ಅಮ್ಮ. ಅಡಿಗೆ ಎಷ್ಟು ಹೊತ್ತು ? ಈಗ ಮಾಡಿಬಿಡ್ತೀನಿ" ಎಂದಳು.

"ಜೀವ ನಿಲ್ಲಲಿಲ್ಲ ನೋಡು, ಮೂರ್ತೀನ ನೋಡದೆ! ನಿಮಗೆಲ್ಲಾ ತೊಂದರೆ" ಅನಂತಯ್ಯ ಹೇಳಿದರು.

"ಏನಪ್ಪಾ, ಹೀಗೆ ಮಾತಾಡ್ತೀ? ನೀವೇನು ಬೇರೇನೆ? ಇಲ್ಲೇ ಇರಿ ಅಂದರೆ ನೀವಿರೋದಿಲ್ಲ". ಎಂದು ಮೂರ್ತಿ ಆಕ್ಷೇಪಿಸಿದ.

ಮುದುಕಿಗೆ ತನ್ನ ಕೈ ಅಡಿಗೆ ಅಂದರೇನೇ ರುಚಿ. ಕೈಲಾಗದ ಕಾಲಕ್ಕೆ ಇಲ್ಲೇ ಬರಬೇಕು. ಅಲ್ವೆ ಸುಬ್ಬೂ" ಎಂದು ಹೆಂಡತಿ ಕಡೆ ನೋಡಿದರು. ಅಷ್ಟರಲ್ಲಿ ರಾಜು ಬಂದು "ಕೋಡು ಬಳೆ ಎಲ್ಲಿ ಅಜ್ಜಿ? ಅಪ್ಪ ಬರಲಿಲ್ಲ ಅಂತ ನೀನೇ ತಿಂದು ಹಾಕಿಬಿಟ್ಟೆಯೋ?" ಎಂದು ಕೇಳಿದ, "ಇಷ್ಟು ಹೊತ್ತೂ ಎಲ್ಲಿ ಸೇರಿಕೊಂಡಿದ್ಯೋ? ನಿನ್ನೆ ಸಾಯಂಕಾಲ ಮಾಡಿ ನಿನಗೋಸ್ಕರ ತಂದಿದ್ದೇನೆ", ಎಂದು ಬಟ್ಟೆಯ ಗಂಟಿನಲ್ಲಿದ್ದ ಸ್ಟೀಲ್ ಡಬ್ಬ ತೆಗೆದರು.

"ನೀನೊಂದೆರಡು ತಿನ್ನು ಮೂರ್ತಿ" ಎಂದು ಅವನ ಕೈಗೆರಡು ರಾಜು ಕೈಗೆರಡು ಕೊಟ್ಟು "ಲಲಿತಾ ಇದನ್ನು ಒಳಗಿಡು" ಎಂದು ಡಬ್ಬಿಯನ್ನು ಸೊಸೆಯ ಕೈಗೆ ಕೊಟ್ಟರು.

ಪುನಃ ಒಳಕ್ಕೋಡುತ್ತಿದ್ದ ರಾಜುವನ್ನು ನೋಡಿ "ಕೂತುಕೊ ಬಾರೋ ಒಂದುಗಳಿಗೆ" ಎಂದರು.

"ನಿನ್ನ ಹತ್ತಿರ ಪಟ್ಟಾಂಗ ಹೊಡೀತಿದ್ರೆ. ಪರೀಕ್ಷೇಲಿ ಕೋಡುಬಳೇನೇ ಕೊಡ್ತಾರೆ" ಎಂದು ರಾಜು ಕೋಣೆ ಸೇರಿದ.

"ಅವನಿಗೆ ಪರೀಕ್ಷೆ, ಓದಿಕೊಳ್ಳಿ" ಎಂದು ಅನಂತಯ್ಯನೂ ಸಮರ್ಥಿಸಿದರು. ಹೊರಗೆ ಹೊರಡಲಿಲ್ಲವೆಂದು ಮನಸ್ಸಿಗೆ ಸ್ವಲ್ಪ ಹೊತ್ತು ಬೇಸರವಾದರೂ ಲಲಿತೆ ರುಚಿಯಾದ ಅಡಿಗೆಯನ್ನೇಮಾಡಿ ಅತ್ತೆ ಮಾವನಿಗೆ ಬಡಿಸಿದಳು.

"ಏನಮ್ಮಾ, ಇಷ್ಟೆಲ್ಲಾ ಅಡಿಗೆ ಮಾಡಿಬಿಟ್ಟೆ? ನಾವೇನು ಹೊರಗಿನವರೇ? ಹಬ್ಬದಡಿಗೆ ಮಾಡಿಬಿಟ್ಟೆಯಲ್ಲಾ " ಎಂದು ಅವಳ ಮಾವ ಮೆಚ್ಚಿಕೆಯ ಮಾತನ್ನಾಡಿದಾಗ ಲಲಿತೆಗೆ ಸಂತೋಷವೇ ಆಯಿತು.

"ಚಿತ್ರಾನ್ನ ತುಂಬಾ ಚೆನ್ನಾಗಿದೆ" ಎಂದು ಸುಬ್ಬಮ್ಮ ಎರಡನೆಯಸಲ ಹಾಕಿಸಿಕೊಂಡರು.

"ನಿನ್ನ ಅಡಿಗೇನೇ ತಿಂದು ನಿನಗೆ ಬೇಜಾರಾಗಿದೆ, ಅದರಿಂದಲೇ

ಸೊಸೆ ಅಡಿಗೆ ಬಲುರುಚಿ," ಎಂದು ಅನಂತಯ್ಯ ಹೆಂಡತಿಯನ್ನು ಹಾಸ್ಯ ಮಾಡಿದರು.

"ಅಮ್ಮನ ಅಡಿಗೆಯೂ ತುಂಬಾ ರುಚಿ, ಮುಂದಿನ ಭಾನುವಾರ ಅಲ್ಲಿಗೇ ಊಟಕ್ಕೆ ಬಾಂದ್ಬಿಡ್ತೀವಿ. ರಾಜು ಪರೀಕ್ಷೆನೂ ಮುಗಿದಿರುತ್ತೆ" ಎಂದು ಮೂರ್ತಿ ಹೇಳಿದ.

"ಮರೆತು ಬಿಟ್ಟೀಯೆ! ಅಡಿಗೆಮಾಡಿ ಊಟಕ್ಕೆ ಕಾಯ್ತಾ ಇರ್ತೀವಿ" ಎಂದು ಸುಬ್ಬಮ್ಮ ಎಚ್ಚರಿಸಿದರು.

ಊಟವಾದ ಮೇಲೆ ಅನಂತಯ್ಯ ಸ್ವಲ್ಪ ಹೊತ್ತು ಚಾಪೆಯ ಮೇಲೆ ಮಲಗಿದರು. ಮೂರ್ತಿ ತಾಯಿಯೊಡನೆ ಹರಟುತ್ತಿದ್ದ. ಲಲಿತೆಯೂ ಅಲ್ಲೇ ಕುಳಿತಿದ್ದಳು. ನಾಲ್ಕು ಘಂಟೆಯ ವೇಳೆಗೆ ಅನಂತಯ್ಯ ಹೆಂಡತಿಯ ಕಡೆ ತಿರುಗಿ "ಹೊರಡೋಣವೆ?"ಎಂದರು.

ಮೂರ್ತಿ "ಅದೇಕಪ್ಪ, ರಾತ್ರಿ ಊಟ ಮುಗಿಸಿಕೊಂಡೇ ಹೊರಡ ಬಹುದಲ್ಲ? ಎಂದ.

ಸುಬ್ಬಮ್ಮ "ಮಧ್ಯಾಹ್ನದ ಊಟವೇ ಹೆಚ್ಚಾಯ್ತು. ರಾತ್ರಿ ಒಂದು ಲೋಟ ಹಾಲು ಕುಡಿದು ಮಲಗಿದರೆ ಸಾಕು" ಎಂದರು.

ಅನಂತಯ್ಯನೂ "ಹೌದು, ಹೌದು, ಇನ್ನು ರಾತ್ರಿಯೂ ಊಟ ಮಾಡಿದರೆ ನಿದ್ದೆಗೆ ಸೊನ್ನೆ" ಎಂದರು.

ಮೂರ್ತಿ"ಹಾಗಾದರೆ ಒಂದು ಕೆಲಸ ಮಾಡೋಣ ಲಲಿತಾ. ಎಲ್ಲರೂ ಸಂಜೆ ನಾಟಕಕ್ಕೆ ಹೋಗೋಣ. ಆ ಮೇಲೆ ಅಪ್ಪ ಅಮ್ಮ ಆ ಕಡೆ ಜಯ ನಗರಕ್ಕೆ ಹೋಗಲಿ. ನಾವು ಈ ಕಡೆ ಮಲ್ಲೇಶ್ವರಕ್ಕೆ ಬರೋಣ" ಎಂದು ಹೆಂಡತಿಯಕಡೆ ನೋಡಿದ.

"ನಾಟಕ ಗೀಟಕ, ನೀವು ಹೋಗಿ. ನಾವು ಮನೆಗೆ ಹೋಗ್ತೀವಿ" ಸುಬ್ಬಮ್ಮನೆಂದರು.

"ಕೃಷ್ಣ ತುಲಾಭಾರ ನಾಟಕಾಮ್ಮ. ನೋಡಿದರೆ ಪುಣ್ಯ ಬರುತ್ತೆ" ಮೂರ್ತಿ ನಗೆಯಾಡಿ.

"ನೋಡೇ ಹೋಗೋಣ" ಅನಂತಯ್ಯನೂ ಒಪ್ಪಿದರು.

ಲಲಿತೆ "ರಾತ್ರಿಗೆ ಅಡಿಗೆಯೂ ಇದೆ" ಎಂದು ಹೊರಡುವುದಕ್ಕೆ ಸಿದ್ಧವಾಗಲು ಒಳಕ್ಕೆ ಹೊದಳು.

ಬಸ್ಸಿಗೆ ಕಾಯದೆ ಎರಡು ಆಟೋರಿಕ್ಷಾಗಳಲ್ಲೇಹೊರಟರು.

"ರಾಜು, ಮನೆಕಡೆ ಭದ್ರ" ಎಂದು ಲಲಿತೆ ಎಚ್ಚರಿಸಿದಳು.

"ಏನೂ ಯೋಚನೆ ಮಾಡಬೇಡ. ಖುಷಿಯಾಗಿ ನಾಟಕ ನೋಡಿ ಕೊಂಡು ಬಾ" ಎಂದು ರಾಜು ಆಶ್ವಾಸನೆಯಿತ್ತ.

ತೊಂದರೆಯಿಲ್ಲದೆ, ಮತ್ತೆರಡು ಟಿಕೀಟು ದೊರೆಯಲು ಮೂರ್ತಿ ಹೆಂಡತಿಯನ್ನೂ. ತಂದೆ ತಾಯಿಗಳನ್ನೂ ಒಳಕ್ಕೆ ಕರೆದುಕೊಂಡು ಹೋದ. ಮಂದಿರದಲ್ಲಿ ಅಷ್ಟೇನೂ ಜನ ತುಂಬಿರಲಿಲ್ಲ. ಒಂದೊಂದು ರೂಪಾಯಿನ ಸ್ಥಳಗಳು ಸ್ವಲ್ಪ ಹಿಂದೆ ಆದರೂ ಧ್ವನಿವರ್ಧಕ ಯಂತ್ರಗಳಿದ್ದುದರಿಂದ ಅನಾನುಕೂಲವಿರಲಿಲ್ಲ. ತಂದೆ ತಾಯಿಗಳನ್ನು ಕೂಡಿಸಿ. ಮೂರ್ತಿ, ಹೆಂಡತಿ ತಾಯಿಯ ನಡುವೆ ಕುಳಿತ. ನಾಟಕ ಪ್ರಾರಂಭವಾಗಲು ಇನ್ನೂ ಅರ್ಧ ಘಂಟೆಯಿತ್ತು. ಸ್ವಲ್ಪ ಹೊತ್ತು ಕುಳಿತು ಮೂರ್ತಿ "ಬಂದೆ" ಎಂದು ಹೇಳಿ ಹೊರಗೆ ಹೋದ, ಜನರಿನ್ನೂ ಬರುತ್ತಿದ್ದರೇ.

"ಪರವಾಯಿಲ್ಲ, ಚೆನ್ನಾಗಿ ಟಿಕೇಟು ಖರ್ಚಾಗಿದೆ ಎಂದು ಕೊಂಡ.

ಮುದುಕ ದಂಪತಿಗಳಿಬ್ಬರು ಟಿಕೀಟು ಕೊಳ್ಳುತ್ತಿದ್ದರು. ಮೂರ್ತಿ ಅವರನ್ನೇ ಗಮನಿಸಿ ನೋಡಿದ. ಮುಖದ ಮೇಲೆ ಬೆವರಿನ ಹನಿಗಳು ಮೂಡಿದವು. ಇಲ್ಲಿ ಇಷ್ಟು ವರ್ಷಗಳ ನಂತರ ಶ್ರೀನಿವಾಸಯ್ಯ, ಲಕ್ಷ್ಮಮ್ಮ! ಜೀವನದ ಆ ಒಂದು ಅಧ್ಯಾಯದ ಮೇಲೆ ಎಂದೆಂದಿಗೂ ಪರದೆ ಎಳೆದು ಹೋಗಿತ್ತು ಎಂದು ಮೂರ್ತಿ ಭಾವಿಸಿದ್ದ. ಇಪ್ಪತ್ತು ವರ್ಷಗಳೆಂದರೆ ಜೀವಮಾನದಲ್ಲಿ ಒಂದು ದೊಡ್ಡ ತುಣುಕು, ಆ ಕಾಲದ ಅವಧಿಯಲ್ಲಿ ಎಷ್ಟೋ ವಿಚಾರಗಳನ್ನು ಮರೆಯಲು ಸಾಧ್ಯ. ಆದರೆ ಇದು? ಇಲ್ಲಿ? ಎಂದೆಂದಿಗೂ ಸಾಧ್ಯವಿಲ್ಲ. ಆಮುದುಕರ ಕಣ್ಣು ತಪ್ಪಿಸಿ ಪುನಃ ಬಂದು ತನ್ನ ಸ್ಥಳದಲ್ಲಿ ಕುಳಿತ. ಕಣ್ಣಂಚಿನಿಂದಲೇ ಆ ಮುದುಕರು ತನಗಿಂತ ಮೂರು ಸಾಲು ಹಿಂದೆ ಕುಳಿತುದನ್ನು ನೋಡಿದ. ಅವರೊಮ್ಮೆ ಅವನ ಕಡೆ ನೋಡಿದರೂ ನೆನಪಿನ ತಂತಿ ಮಿಡಿದಂತಿರಲಿಲ್ಲ. ತಾನು ಅಪರಾಧಿ! ಕ್ಷಮೆ ಕೇಳಿ ಪಡೆಯುವ ದಾರಿಯೂ ಮುಚ್ಚಿ ಹೋಗಿತ್ತು. ಮೂರ್ತಿಯ ಮನಸ್ಸೇ ಅವನ ಹಿಡಿತದಲ್ಲಿರಲಿಲ್ಲ! ಲಲಿತೆ ಚೀಟಿ ಹಿಡಿದು ಓದುತ್ತಿದ್ದಳು.

"ಸತ್ಯಭಾಮೆಯ ಪಾರ್ಟು, ಉಮಾ ಅನ್ನೋ ಹುಡುಗಿ ಮಾಡ್ತಾಳಂತೆ, ಅವಳೇ ಚೆನ್ನಾಗಿ ಮಾಡ್ತಾಳೆಂದು ರಾಜು ಹೇಳಿದ್ದ. ಅಲ್ಲವೆ?" ಲಲಿತೆ ಕೇಳಿದಳು. ಯಾಂತ್ರಿಕವಾಗಿ ತಲೆಯಾಡಿಸಿದರೂ ಮೂರ್ತಿಯ ಮನಸ್ಸಿನ್ನೂ ಸ್ವಾಧೀನಕ್ಕೆ ಬಂದಿರಲಿಲ್ಲ.

ಅನಂತಯ್ಯ ಬಗ್ಗಿ ಮಗನೊಡನೆ ಮಾತಾಡುತ್ತಿದ್ದರು.

"ಮನೆ ಸ್ವಲ್ಪ ರೀಪೇರಿ ಮಾಡಿಸಬೇಕು, ಅಡಿಗೆ ಮನೆಗೆ ತಾರಸಿ ಹಾಕಿಸಿ, ಒಂದು ಅಟ್ಟ ಹಾಕಿಸಬೇಕು" ಎಂದರು.

ಮೂರ್ತಿಯ ಗಮನವೆಲ್ಲೋ ಇದ್ದುದನ್ನು ನೋಡಿ ಸುಮ್ಮನಾದರು

"ನಾನು ನಾಟಕ ನೋಡಿ ಯಾವ ಕಾಲವೋ ಆಯ್ತು ಮೂರ್ತಿ." ಸುಬ್ಬಮ್ಮ ತಮ್ಮ ಸಂತಸವನ್ನು ಸೂಚಿಸಿದರು. ಮಗನಿಂದ ಉತ್ತರ ಬರದಿರಲು ಸುಮ್ಮನಾದರು,

ಒಂದೊಂದಾಗಿ ದೀಪಗಳಾರಲಾರಂಭಿಸಿದುವು, ಮುಂದಿನ ಪರದೆ ನಿಧಾನವಾಗಿ ಮೇಲಕ್ಕೆದ್ದಿತು. ಪ್ರಾರ್ಥನೆಯಾದ ನಂತರ ಮೊದಲ ದೃಶ್ಯ ದಲ್ಲೇ ಸತ್ಯಭಾಮೆ ಕೃಷ್ಣರ ಸರಸಾಲಾಪ,

ಸತ್ಯಭಾಮೆ! ಮೂರ್ತಿ ಕಣ್ಣುಜ್ಜಿ ನೋಡಿದ. ಸತ್ಯಭಾಮೆ! ಇವಳೇ ರೋಹಿಣಿಯಲ್ಲವೆ? ತನ್ನ ಹೃದಯವನ್ನು ಮನವನ್ನು ಗೆದ್ದ ಮುದ್ದು ರೋಹಿಣಿಯಲ್ಲವೆ? ಅದೇ ನಿಲುವು ಅದೇ ಗಾಂಭೀರ್ಯ, ಅದೇ ಮುದ್ದಾದ ಅನಂತ ವಿಶ್ವಾಸವನ್ನು ತುಂಬಿಕೊಂಡ ವಿಶಾಲವಾದ ಕಣ್ಣುಗಳು. ಅದೇ ಗುಂಗುರು ಕೂದಲು, ಆ ಮುದ್ದು ಹಣೆಯ ಮೇಲೆ ರೋಹಿಣಿ ಪುನಃ ಬಂದಳೆ ? ಮೂರ್ತಿ ದೀರ್ಘವಾದ ನಿಟ್ಟುಸಿರು ಬಿಟ್ಟ. ಇನ್ನೆಲ್ಲಿಯ ರೋಹಿಣಿ! ಒಂದು ಕ್ಷಣದ ಉದ್ವೇಗದಲ್ಲ ತನ್ನ ಹೃದಯವನ್ನು ಶೂನ್ಯ ಮಾಡಿ ಎಂದೆಂದಿಗೂ ಹೊರಟು ಹೋದಳು. ಈಗ ಅವಳು ಬದುಕಿದ್ದರೆ ತನಗಿಂತ ನಾಲ್ಕು ವರ್ಷ ಚಿಕ್ಕವಳಷ್ಟೆ. ಅವಳೂ ನಲವತ್ತರ ಸಮೀಪ ವಿರಬೇಕು. ಈ ಹುಡುಗಿ ರೋಹಿಣಿಯಾಗಲು ಸಾಧ್ಯವಿಲ್ಲ. ಆದರೆ ಇಷ್ಟು ಹೋಲಿಕೆಯೆ!

ರೋಹಿಣಿ ಶಾಲೆಯಲ್ಲಿ ಓದುತ್ತಿದ್ದಾಗ ತಾನು ಅಲ್ಲಿ ಉಪಾಧ್ಯಾಯ. ರೋಹಿಣಿ ರಾಜಕುಮಾರಿ. ಜಗತ್ತಿನ ಸುಖವನ್ನೆಲ್ಲಾ ಆಸ್ವಾದಿಸಲು ಬೆಳ್ಳಿಯ ತೊಟ್ಟಿಲಲ್ಲಿ ಬೆಳೆದ ಪುಣ್ಯಶಾಲಿ. ತನಗೂ ಅವಳಿಗೂ ಯಾವ ವಿಚಾರದಲ್ಲೂ ಸಮಾನತೆಯಿಲ್ಲವೆಂದು ತಿಳಿದರೂ ಹುಚ್ಚು ಮೋಹ ವಾವರಿಸಿ ಅವನಿಗೆ ವಿಚಿತ್ರ ಧೈರ್ಯ ಕೊಟ್ಟಿತ್ತು. ರೋಹಿಣಿಯನ್ನು ಮದುವೆಯಾದರೆ ತಾನು ಯಾವ ಹಂತಕ್ಕೂ ಏರಿ ಅವಳನ್ನು ಸುಖ ವಾಗಿಟ್ಟುಕೊಳ್ಳಬಲ್ಲೆನೆಂಬ ಹುಚ್ಚು ಧೈರ್ಯ, ತಂದೆಯೊಡನೆ ಆ ಮಾತು

ಹೇಳಿದಾಗ ಶಿತ ಅವನಾಸೆಯ ಮೇಲೆ ತಣ್ಣೀರರಚಿದ್ದರು. "ಶ್ರೀನಿವಾಸನೆಲ್ಲಿ ನಾವೆಲ್ಲಿ! ಅವನ ಮನೆಗ ನಾನು ಹೋದರೆ ಅವನು ಕುರ್ಚಿಕೂಡ ತೋರಿಸೋದಿಲ್ಲ. ಮಗಳನ್ನು ಕೇಳಿದರ ಕೊಡ್ತಾನೆಯೆ ? ಅವನಿಗೆ ಇರೋವಳು ಒಬ್ಬಳೇ ಮಗಳು ಯಾರೋ ದೊಡ್ಡ ಹುದ್ದೆಯಲ್ಲಿರುವ ಹುಡುಗನ್ನ ಗೊತ್ತು ಮಾಡುತ್ತಿದ್ದಾನಂತೆ. ಕೇಶವಯ್ಯ ಹೇಳಿದರು" ಎಂದು ಸುಮ್ಮನಾದರು.

ಮಗನ ಎದೆಯಲ್ಲಿ ಹೊತ್ತಿದ್ದ ಜ್ವಾಲಾಮುಖಿಯ ಅರಿವು ಅವರಿಗಾಗಲಿಲ್ಲ. ಮೂರ್ತಿ ನಿಟ್ಟುಸಿರುಬಿಟ್ಟ. ಆ ಜ್ವಾಲಾಮುಖಿ ಅಂದೇ ತನ್ನನ್ನು ದಗ್ಧಮಾಡಿದ್ದರೆ! ಹಾಲಿನಂತಹ ಅವಳ ಜೀವನದಲ್ಲಿ ವಿಷವನ್ನು ಸುರುತ್ತಾ ತಾನು ಕಾರ್ಕೋಟಕನಾಗಿ ಪ್ರವೇಶಿಸದಿದ್ದಿದ್ದರೆ! ಅವಳೂ ಯಾರೋ ಪುಣ್ಯಾತ್ಮನ ಕೈ ಹಿಡಿದು ಸುಖವಾಗಿರುತ್ತಿದ್ದಳು. ಯೌವ್ವನದ ಹುಚ್ಚು! ಈಗಿನ ತಿಳಿವಳಿಕೆ ಆಗಿದ್ದಿದ್ದರೆ! ಮೂರ್ತಿಯ ಮೈರ್ಝುಮ್ಮೆಂದಿತು ಅವನ ಸವಿನುಡಿಗಳಿಗೆ ಅವಳೆಷ್ಟು ಸುಲಭವಾಗಿ ಸೋತಿದ್ದಳು. ಆ ರತ್ನ ವನ್ನು ಕ್ಷಣಕಾಲ ಕೈಯಲ್ಲಿ ಹಿಡಿಯಲಾರದವನು ಹೃದಯದಲ್ಲಿ ಸದಾಕಾಲ ಧರಿಸುವೆನೆಂದು ಮಾತುಕೊಟ್ಟಿದ್ದ.

ರೋಹಿಣಿ ಜಗತ್ತನ್ನರಿಯದ ಮುಗ್ಧೆ, ತಂದೆ ತಾಯಿಯ ಲಾಲನೆ ಪಾಲನೆಗಳಲ್ಲಿ ಸುಖವಾಗಿ ಬೆಳೆದ ಅವಳಿಗೆ ಜಗತ್ತಿನಲ್ಲಿ ಕೆಡುಕಿರಬಹುದೆಂಬ ಆಲೋಚನೆ ಕೂಡ ಇರಲಿಲ್ಲ. ಮೂರ್ತಿಯನ್ನು ನಂಬಿದಳು. ಸಂಪೂರ್ಣ ವಾಗಿ ನಂಬಿದಳು. ಅದೆಷ್ಟು ಸುಖದ ದಿನಗಳು, ತಂದೆ ತಾಯಿಗಳಿಗೇನೋ ಕಾರಣ ಹೇಳಿ, ಸಿನಿಮಾಕ್ಕೆ ಹೋಗುವೆನೆಂದು, ಗೆಳತಿಯರ ಮನೆಗೆ ಹೋಗುವೆನೆಂದು ಹೇಳಿ ಮೂರ್ತಿಯೊಡನೆ ಅದೆಷ್ಟು ಕಾಲ ಕಳೆದಿದ್ದಳು. ಕಡಗೆ ಆ ದಿನ! ನೆನೆಸಿಕೊಂಡರೆ ಮೂರ್ತಿಗೆ ಹೊಟ್ಟೆಯಲ್ಲಿ ಬೆಂಕಿ ಸುರಿದಂತಾಯಿತು.

"ನನ್ನ ಮದುವೆ ನಿಶ್ಚಯಿಸಿದ್ದಾರೆ ಮೂರ್ತಿ. ನೀನೇನಾದರೂ ಮಾಡು "ಎಂದು ಅಂಗಲಾಚಿದಳು.

ಶ್ರೀನಿವಾಸಯ್ಯ ಮತ್ತೊಂದು ಕುರ್ಚಿ ತರಿಸಿ "ಕೂತುಕೊಳ್ಳಿ, ಏನಾಗಬೇಕಾಗಿತ್ತು?" ಎಂದು ವಿಶ್ವಾಸದಿಂದಲೇ ಕೇಳಿದರು, ಅವರೂ ಶಾಲೆಯ ಸಮಿತಿಯಲ್ಲಿದ್ದುದರಿಂದ. ಪ್ರಮೋಷನ್ನೋ, ಏನೋ ಕೇಳಲು ಬಂದನೆಂದುಕೊಂಡರು

ಮೂರ್ತಿಗೆ ಸುಲಭವಾಗಿ ಮಾತು ಹೊರಡಲಿಲ್ಲ. ಆದರೂ ಧೈರ್ಯಮಾಡಿಕೊಂಡು "ನಿಮ್ಮ ಮಗಳು ನಮ್ಮ ಶಾಲೆಯಲ್ಲಿದ್ದಾಳೆ" ಎಂದ,

ಲಕ್ಷಮ್ಮ "ರೋಹಿಣೀನೇ? ಅವಳಿಗೆ ಮದುವೆ ಗೊತ್ತಾಯಿತು. ಈ ಚೈತ್ರದಲ್ಲಿ ಮದುವೆ" ಎಂದರು,

ಮೂರ್ತಿಯ ಗಂಟಲೊಣಗಿತು. ಆದರೂ ಪ್ರಯತ್ನದಿಂದ "ಆ ವಿಚಾರವೇ ಮಾತಾನಾಡಲು ಬಂದೆ, ರೋಹಿಣಿಯನ್ನು ನಾನು ಪ್ರೀತಿಸುತ್ತೇನೆ, ಅವಳೂ ಹಾಗೇ. ನೀವು ಒಪ್ಪಿದರೆ...."

ಕ್ಷಣಕಾಲ ಜಗತ್ತೇ ಸ್ತಬ್ಧವಾದಂತಾಯಿತು. ತನ್ನ ಮಾತುಗಳನ್ನು ಕೇಳಿ ಮೂರ್ತಿಗೇ ಆಶ್ಚರ್ಯವಾಯಿತು, ತನ್ನ ಬಾಯಿಂದಲೇ ಈ ಮಾತು ಹೊರಟುವೇ ಎಂದು ಅನುಮಾನವಾಯಿತು, ಕ್ಷಣಕಾಲ! ಶ್ರೀನಿವಾಸಯ್ಯ ಎದ್ದು ನಿಂತು "ನೀವು ಹೊರಡಿ" ಎಂದರು, ರೇಗಲಿಲ್ಲ; ಕೂಗಲಿಲ್ಲ; ವಿಚಾರಿಸಲಿಲ್ಲ, ಹಾಸ್ಯಾಸ್ಪದವಾದ ಮಾತು ಎಬಂತೆ ಅಲಕ್ಷ್ಯಮಾಡಿದಂತಿತ್ತು. ಲಕ್ಷ್ಮಮ್ಮ ಮಾತೇ ಆಡಲಿಲ್ಲ. "ಎಂತಹ ಆಸೆ!"...ಎಂದು ಮರುಕದಿಂದ ನಕ್ಕಂತಿತ್ತು' ಅವರ ಮುಖ.

ಏನು ಹೇಳಲೂ ತೋರದೆ ಮೂರ್ತಿ ಎದ್ದು ನಿಂತು "ಒಂದು ಬಾರಿ, ರೋಹಿಣಿಯನ್ನೂ ಕೇಳುವಿರಾ" ಎಂದ,

ಶ್ರೀನಿವಾಸಯ್ಯ ಸ್ವಲ್ಪ ದನಿಯೇರಿಸಿ "ಹೊಡಿರ" ಎಂದರು,

ಏಟುತಿಂದ ನಾಯಿಯಂತೆ ಮೂರ್ತಿ ಹೊರಗೆ ಬಂದಿದ್ದ. ಪುನಃ ಅವನು ರೋಹಿಣಿಯನ್ನು ನೋಡಲಿಲ್ಲ, ಅವಳು ಶಾಲೆಗೂ ಬರಲಿಲ್ಲ. ಬೇರೆ ಎಲ್ಲಿಯೂ ಸಿಕ್ಕಲಿಲ್ಲ. ಮದುವೆಯಿನ್ನೂ ಮೂರುದಿನವಿದೆ ಎನ್ನುವಾಗ ಕೆಲಸಕ್ಕೆ ರಾಜಿನಾಮೆಕೊಟ್ಟು ಹಾಸನದಿಂದ ಬೆಂಗಳೂರಿಗೆ ಬಂದು ಈ ಬ್ಯಾಂಕಿನ ಕೆಲಸಕ್ಕೆ ಸೇರಿದ್ದ.

ಪುನಃ ಅವನಿಗೆ ರೋಹಿಣಿಯ ವಿಚಾರ ತಿಳಿದುದು ವರ್ತಮಾನ ಪತ್ರಿಕೆಯಿಂದ. ಮದುವೆಯ ದಿನ ಅವಳು ಪತ್ತೆಯಾಗದೆ ಮದುವೆ ನಿಂತರಿ ಹೋಯಿತು. “ಎಲ್ಲಿದ್ದರೂ ತಿಳಿಸು, ರೋಹಿಣಿ, ನಿನ್ನ ಇಚ್ಛೆಗೆ ವಿರುದ್ಧವಾಗಿ ನಾನು ನಡೆಯುವುದಿಲ್ಲ”, ಎಂದು ಶ್ರೀನಿವಾಸಯ್ಯ ಜಾಹಿರಾತು ಹಾಕಿಸಿದ್ದರು. ಮೂರ್ತಿಯ ಆಸೆ ಪುನಃ ಕೊನರೊಡೆಯಲು ರಜಾ ತೆಗೆದುಕೊಂಡು ಹಾಸನಕ್ಕೆ ಹೋದ. ಆದರೆ ರೋಹಿಣಿ ಹಿಂದಿರುಗಿರಲಿಲ್ಲ. ಅವರ ಮನೆಯ ಬಳಿ ಹೋದಾಗ ಶ್ರೀನಿವಾಸಯ್ಯ ಎಲ್ಲಿಗೋ ಹೊರಡುತ್ತಿದ್ದರು. ಕ್ಷಣಕಾಲ ಆಸೆಯಿಂದ ಮೂರ್ತಿಯ ಮುಖ ನೋಡಿದರು. “ರೋಹಿಣಿ ಬಂದಳೇ?” ಎಂದು ಅವನು ಉದ್ವೇಗದಿಂದ ಕೇಳಲು ಅವನ ಕಡೆ ತಿರಸ್ಕಾರದ ನೋಟ ಬೀರಿ ಹೊರಟು ಹೋದರು. ಮೂರ್ತಿ ಆಸೆಯಿಂದ ಐದು ದೀರ್ಘವಾದ ವರ್ಷಗಳು ಕಾದು ಕುಳಿತ, ತಾನೂ ಪತ್ರಿಕೆಗಳಲ್ಲಿ ಜಾಹಿರಾತು ಹಾಕಿಸಿದ, ಪ್ರಯೋಜನವಾಗಲಿಲ್ಲ.

ಇನ್ನೆಲ್ಲಿಯ ರೋಹಿ, ನಗುತ್ತಾ, ಕಲೆಯುತ್ತಾ, ನೆಗೆಯುತ್ತಾ ತನ್ನೆ ಬರುತ್ತಿದ್ದ ಮುದ್ದುರೋಹಿ, ಯಾವ ಕೆರೆ ಬಾವಿಯ ಪಾಲಾದಳೋ ! ಎಂತಹ ಸುಂದರ ಭವಿಷ್ಯತ್ತನ್ನು ತಾನು ಹೊಸೆದು ಹಾಕಿದ್ದ ! ಹುಚ್ಚು ಹುಡುಗಿ ! ಮದುವೆಯಾಗಿ ಸುಖವಾಗಿರಬಾರದಾಗಿತ್ತೆ ? ಅಥವಾ ಮೂರ್ತಿಯನ್ನೇ ಮದುವೆಯಾಗುವೆನೆಂದು ಹಠ ಹಿಡಿಯಬಾರದಾಗಿತ್ತೆ? ತನ್ನಬಳಿಗಾದರೂ ಓಡಿ ಬರಬಾರದಾಗಿತ್ತೆ? ತಾನು ಅವಳ ಮದುವೆಯಾಗುವವರೆಗೆ ಹಾಸನದಲ್ಲೇ ಇದ್ದು ಕಾದು ನೋಡಬೇಕಾಗಿತ್ತು. ತಾನೆಲ್ಲಿರುವೆನೆಂದು ಅವಳಿಗೆ ತಿಳಿದು, ಮನೆ ಬಿಟ್ಟು ಹೋಗಿ ಎಷ್ಟು ಕಷ್ಟಪಟ್ಟಳೋ,

ಏನಾದಳೋ ! ಎದೆಯಲ್ಲಾಗುತ್ತಿದ್ದ ತೀವ್ರವಾದನೋವನ್ನು ತಡೆಯ ಲಾರದೆ ಮೂರ್ತಿ ಮಲುಗಿದ. ಲಲಿತೆ "ಏನಾಯಿತು?" ಎಂದಳು.

ರಂಗಸ್ಥಳದ ಮೇಲೆ ಹುಡುಗಿ "ಏರಬಲ್ಲನೇ ನನ್ನಾಣತಿ" ಹಾಡು ತ್ತಿದ್ದಳು. ಎಷ್ಟು ಸುಮಧುರವಾದ ಕಂಠ ! ಕಣ್ಣುಗಳಲ್ಲಿ ಎಷ್ಟು ಆತ್ಮ ವಿಶ್ವಾಸ! ಜಗತ್ತನ್ನೇ ಗೆಲ್ಲ ಬಲ್ಲೆನೆಂಬ ಹೆಮ್ಮೆ. ಅಯ್ಯೋ ನನ್ನ ಮುದ್ದು ರೋಹಿ! ನಿನ್ನನ್ನು ಯಾವ ಕೂಪಕ್ಕೆ ನಾನು ಎಳೆದು ಬಿಟ್ಟೆ! ಆಯಾಸದಿಂದ ಮೂರ್ತಿ ಕಣ್ಣು ಮುಚ್ಚಿದನು.

ಉಮಾ ರಂಗಸ್ಥಳ ಪ್ರವೇಶಿಸುತ್ತಲೇ ಅನಂತಯ್ಯ ನೆಟ್ಟಗೆ ಕುಳಿತು ನೋಡಿದರು. ಹೌದು ! ಎಷ್ಟು ಹೋಲಿಕೆ! ಶ್ರೀನಿವಾಸಯ್ಯನ ಮಗಳ ಹಾಗೆ ಇದ್ದಾಳೆ ಮಗನ ಕಡೆ ನೋಡಿದರು. ಅವನು ಬೆವರು ಒರೆಸಿಕೊಳ್ಳು ತ್ತಿದ್ದ. ಇಪ್ಪತ್ತು ವರ್ಷ! ಮೂರ್ತಿ ಮರೆತಿರಬಹುದು. ಅವನ ಸಂಸಾರ ಸುಖವಾಗಿಯೇ ಇದೆ, ಲಲಿತೆ ಒಳ್ಳೆಯ ಹುಡುಗಿ ಬುದ್ಧಿವಂತನಾದ ರಾಜು. ಹೊಟ್ಟೆ ಬಟ್ಟೆಗಾಗುವಷ್ಟು ಸಂಪಾದನೆ, ವಿಧಿ ಮೂರ್ತಿಗೇನೂ ಅನ್ಯಾಯ ಮಾಡಿಲ್ಲ, ಆದರೂ ಆ ದಿನವನ್ನು ನೆನೆದು ನಡುಗಿದರು. ಶ್ರೀನಿವಾಸಯ್ಯನನ್ನು ಕೇಳುವಂತೆ ಮೂರ್ತಿ ಅಂಗಲಾಚಿ ಹೋಗಿದ್ದ ಅವನ ಆಸೆಗೆ ತಣ್ಣೀರೆರಚಿ ಕಳುಹಿಸಿದರೂ ಅನಂತಯ್ಯ ಪ್ರಯತ್ನ ಮಾಡದೆ ಇರಲಿಲ್ಲ, ಶ್ರೀನಿವಾಸಯ್ಯನನ್ನು ಕೇಳಿ "ಛೀ" ಎನ್ನಿಸಿಕೊಂಡು ಬಂದಿದ್ದರು. ಆ ವಿಚಾರ ಮಗನೊಡನೆ ಅವರೆಂದೂ ಹೇಳಲಿಲ್ಲ. ಹೆಂಡತಿ ಯೊಡನೆ ಮಾತ್ರ ಹೇಳಿ ಸುಮ್ಮನಾಗಿದ್ದರು.

ಆ ಹುಡುಗಿ ಪತ್ತೆಯಿಲ್ಲದೆ ಹೋದಾಗ ಅವರಿಗೆ ಮಗನ ಮೇಲೆ ಅನುಮಾನ ಬಂದು ಕಿಡಿಯಾಗಿದ್ದರು ಮೂರ್ತಿಯ ಕೈವಾಡ ಇದರಲ್ಲೇನೂ ಇಲ್ಲವೆಂದು ತಿಳಿದ ಮೇಲೆ ನೆಮ್ಮದಿಯ ನಿಟ್ಟುಸಿರು ಬಿಟ್ಟಿದ್ದರು.

ಆದರೂ ಆ ಹುಡುಗಿಯ ದುರಂತದಲ್ಲಿ ಮಗನ ಪಾತ್ರವೂ ಇದೆ ಯೆಂಬುದನ್ನು ಮರೆಯಲು ಅವರಿಗೆ ಸಾಧ್ಯವಾಗಿರಲಿಲ್ಲ. ರಾತ್ರಿ ಎಚ್ಚರ

ವಾದರೆ ಆ ಹುಡುಗಿ ಏನಾದಳೋ ಎಂದು ಬೆವರುವರು. ಆ ದಿನ ಶಾಲೆಯ ವಾರ್ಷಿಕೋತ್ಸವವೆಂದು ಮೂರ್ತಿಯ ಶಾಲೆಗೆ ಹೆಂಡತಿಯೊಡನೆ ಹೋಗಿದ್ದರು. ಆ ನಾಟಕದಲ್ಲಿ ಆ ಹುಡುಗಿ ಪಾರ್ಟು ಮಾಡಿದ್ದಳು. ಮೂರ್ತಿ ಹೆಮ್ಮೆಯಿಂದ ಅವಳನ್ನು ತೋರಿಸಿದ್ದ.

"ಶ್ರೀನಿವಾಸಯ್ಯನವರ ಮಗಳು, ಕ್ಲಾಸಿನಲ್ಲಿ ಫಸ್ಟ್" ಎಂದು ಹೇಳಿದ್ದ. ಹೌದು ಅವಳಿಗೇನು ಕಡಿಮೆಯಾಗಿತ್ತು? ರೂಪ, ವಿದ್ಯೆ, ಐಶ್ವರ್ಯ ಎಲ್ಲವೂ ಇತ್ತೆಂದೇ ವಿಧಿಗೆ ಸರಿಬರಲಿಲ್ಲ. ಯಾವುದೋ ಹುಚ್ಚಿಗೆ ಸಿಕ್ಕಿಸಿ ಅವಳ ಜೀವನವನ್ನು ನಾಶಮಾಡಿತ್ತು.

ರೋಹಿಣಿ ಮನೆ ಬಿಟ್ಟು ಹೊರಟು ಹೋದ ಮೇಲೆ ಶ್ರೀನಿವಾಸಯ್ಯ ತಮ್ಮ ಮನೆಗೆ ಬಂದಿದ್ದರು. ಮೂರ್ತಿ ಆ ವೇಳೆಗೆ ಬೆಂಗಳೂರಿಗೆ ಹೋಗಿದ್ದ. ಮೂರ್ತಿಯನ್ನು ವಾಚಮಗೋಚರವಾಗಿ ಬಯ್ದಿದ್ದರು, "ಇವೆಲ್ಲಾ ಕೆಲಸ ನಿಮ್ಮ ಮಗನದೇ," ಅವನನ್ನು ಜೈಲಿಗೆ ಹಾಕಿಸುತ್ತೇನೆ ಎಂದರು. ಅವರ ಮನಸ್ಸಿನಲ್ಲೂ "ಇದು ಮೂರ್ತಿಯ ಕೆಲಸವೇ ಇರೆ ಬಹುದು" ಎಂಬ ಅಳುಕು ಇದ್ದರೂ ತೋರಗೊಡದೆ ಶಾಂತವಾಗಿಯೇ "ಮೂರ್ತಿ ಅಂತ ಹುಡುಗನಲ್ಲ, ನಿಮ್ಮ ಒಪ್ಪಿಗೆಯಿಂದಲೇ ಸಾಧ್ಯವಾದರೆ ಮದುವೆಯಾಗುತ್ತಿದ್ದ. ನಿಮ್ಮ ಇಚ್ಛೆಗೆ ವಿರೋಧವಾಗಿ ಅವನು ಹುಡುಗಿ ಯನ್ನು ಕರೆದುಕೊಂಡು ಹೋಗಿಲ್ಲ" ಎಂದು ಹೇಳಿದ್ದರು.

ಶ್ರೀನಿವಾಸಯ್ಯ ಪೋಲೀಸಿಗೆ ಹೇಳಿ ಮಗನನ್ನು ಪ್ರಶ್ನಿಸಿದ್ದುದೂ ಅವರಿಗೆ ತಿಳಿದಿತ್ತು. ಆ ದಿನಗಳಲ್ಲಿ ಎಷ್ಟು ಗಾಬರಿಪಟ್ಟರೋ, ಅನಂತಯ್ಯ ನಿಗೆ ಮಾತ್ರ ಗೊತ್ತು. ಹೆಂಡಿತಿಯೊಡನೆ ಕೂಡ ಮನ ಬಿಚ್ಚಿ ಮಾತ ನಾಡಿರಲಿಲ್ಲ. ಆ ಸಮಯದಲ್ಲೇ ಅವರೂ ಹಾಸನ ಬಿಟ್ಟು ಬೆಂಗಳೂರು ಸೇರಿದ್ದು ಕಣ್ಣಲ್ಲಿ ಕಣ್ಣಿಟ್ಟು ಮಗನನ್ನು ಕಾಯುತ್ತಿದ್ದರು. ಅವನು ಅರೆಕ್ಷಣ ಮನೆಗೆ ಬರುವುದು ನಿಧಾನವಾದರೂ ಅವರ ಜೀವ ಕುದಿಯುತ್ತಿತ್ತು. "ಮೂರ್ತಿ ಮಾಡಬಾರದ ಕೆಲಸ ಮಾಡಿರಲಾರ, ಅವನಷ್ಟು ಅಯೋಗ್ಯ

ನಲ್ಲ" ಎಂದು ತಾವೇ ಸಮಾಧಾನ ಹೇಳಿಕೊಳ್ಳುತ್ತಿದ್ದರೇ ಹೊರತು ಅವನನ್ನು ಪ್ರಶ್ನಿಸುವ ಎದೆಗಾರಿಕೆ ಯಿರಲಿಲ್ಲ. ಎಷ್ಟು ಘೋರವಾದ ದಿನಗಳು! ನೆನೆದರೆ ಈಗಲೂ ಅವರ ಎದೆ ನಡುಗತ್ತಿತ್ತು. ಹೊದ್ದಿದ್ದ ಶಾಲನ್ನು ಸರಿಸಿ ಕತ್ತಿನ ಮೇಲೆ ಬೆವರೂರೆಸಿಕೊಂಡರು. ಪುನಃ ರಂಗ ಸ್ಥಳದ ಕಡೆ ನೋಡಿದರು, ಆ ಹುಡುಗಿ ಹಾಡುತ್ತಿದ್ದಳು. ನಗುತ್ತಿದ್ದಳು ಬಳುಕುತ್ತಿದ್ದಳು. ನಾಟಕವೆಂಬುದು ಅನಂತಯ್ಯನಿಗೆ ಮರೆತು ಹೋಗಿತ್ತು. ಮ ೂರ್ತಿಯ ನಾಟಕವೇ ಅವರ ಕಣ್ಮುಂದೆ ಕುಣಿಯುತ್ತಿತ್ತು.

ಸುಬ್ಬಮ್ಮನೂ ಹುಡುಗಿಯನ್ನು ನೋಡಿ ತಮ್ಮ ಕಣ್ಣನ್ನೇ ನಂಬ ಲಾರದೆ ಹೋದರು. ಗಂಡನ ಕಡೆ ಮಗನ ಕಡೆ ಹೋಡಲು ಕೂಡ ಆಕೆಗೆ ಧೈರ್ಯ ಬರಲಿಲ್ಲ. ರೋಹಿಣಿಯೇ ಪುನಃ ವಾರ್ಷಿಕೋತ್ಸವದ ರಂಗಸ್ಥಳ ದಲ್ಲಿ ನಿಂತಂತಿತ್ತು. ಆ ದಿನ ಮೂರ್ತಿ ಅವಳ ಪರಿಚಯಮಾಡಿಕೊಟ್ಟಾಗ ಎಷ್ಟು ಸಂತೋಷಪಟ್ಟಿದ್ದರು! ಮುದ್ದಾದ ಹುಡುಗಿ, ಬುದ್ಧಿವಂತಳು, ಧನ್ನಿಕನಾದ ತಂದೆ ವಿಧಿ ಬೊಗಸೆಯೆತ್ತಿ ಹರಸಿತ್ತು. ಯಾವ ಪುಣ್ಯಾತ್ಮನ ಕೈಯ್ಯಾದರೂ ಹಿಡಿದು ಸುಖವಾಗಿರಬಹುದಾಗಿತ್ತು. ಅವಳ ಹಾದಿಗೆ ಭಗವಂತ ತನ್ನ ಮಗನನ್ನು ಯಾವ ಅನಿಷ್ಟದ ಗಳಿಗೆಯಲ್ಲಿ ಕರೆದೊಯ್ದಿದ್ದ!

ಆ ದಿನ ಅವನು ಬಂದು ತಂದೆಯ ಬಳಿ ಅಂಗಲಾಚಿದಾಗ ತನ್ನ ಕರುಳೆಷ್ಟುನೊಂದಿತ್ತು. ಎಂತಹವಳುದರೂ ಮೂರ್ತಿಯ ಕೈಹಿಡಿಯಲು ಪುಣ್ಯಮಾಡಿರಬೇಕು. ಅಂತಹ ಒಳ್ಳೆಯ ಹುಡುಗ. ಹೆಂಡತಿಯೆಂದೂ ಬಿಸಿಯುಸಿರು ಬಿಡದಂತೆ ನೋಡಿಕೊಳ್ಳುತ್ತಿದ್ದ. ಅಷ್ಟು ಮಾತ್ರ ಅವಳ ತಾಯಿ ತಂದೆಗಳಿಗೆ ತಿಳಿಯದೆ ಹೋಗಿ ಅನರ್ಥ ತಂದುಕೊಂಡರಲ್ಲಾ. ಅವಳ ತಂದೆಯಿಂದ ಹೀನಾಮಾನವಾಗಿ ಗಂಡ ಬಯ್ಯಿಸಿಕೊಂಡು ಬಂದ ದಿನ, ಈ ಸಂಬಾಧ ತಪ್ಪಿದ್ದೇ ಒಳ್ಳೆಯದೆಂದುಕೊಂಡಿದ್ದಳು. ಆದರೆ ಮೂರ್ತಿಯ ಮುಖ ನೋಡಿ ಆಕೆಯ ಕರುಳು ಕಿವಿಚಿತ್ತು, ಎಷ್ಟು ಸಂಕಟ ಪಡುತ್ತಿದ್ದ. ಊಟದ ಶಾಸ್ತ್ರಮಾಡಿ ನವೆಯುತ್ತಿದ್ದ. ಅವನ ಆಗಿನ ದುಃಖವನ್ನು ನೆನೆದು ಸುಬ್ಬಮ್ಮನ ಕಣ್ಣಲ್ಲಿ ಈಗ ನೀರೂರಿತು. ಯಾರೂ ಕಾಣದಂತೆ ಕಣ್ಣೊರೆಸಿಕೊಂಡು ಮೆಲ್ಲಗೆ ಮಗನ ಕಡೆ ನೋಡಿದರು.

ಮೂರ್ತಿ ಹೆಣಿಗೆ ಕೈಕೊಟ್ಟು ಕಣ್ಣು ಮುಚ್ಚಿದಂತಿಳ್ತು. ಕತ್ತಲಲ್ಲಿ ಸರಿಯಾಗಿ ಕಾಣಲಿಲ್ಲ. ಇನ್ನು ಆ ಹುಡುಗಿ ಮರೆಯಾದ ದಿನಗಳಲ್ಲಿ ಎಷ್ಟು ಗಾಬರಿ! ಎಲ್ಲರ ಅನುಮಾನವೂ ತನ್ನ ಮಗನ ಮೇಲೆ. ಪುನಃ ಅವನನ್ನು ಬಸಿರಲ್ಲಿ ಹುಗಿಸಿಕೊಳ್ಳಲು ಸಾಧ್ಯವಿದ್ದಿದ್ದರೆ ಸುಬ್ಬಮ್ಮ ಹಿಂಜರಿಯುತ್ತಿರಲಿಲ್ಲ. ಶ್ರೀನಿವಾಸಯ್ಯನ ಆರೋಪಣೆ. ಪೋಲೀಸರ ತನಿಖೆ; ಆ ದಿನಗಳನ್ನು ಕಳೆದು ಎಲ್ಲರೂ ಹೇಗೆ ಬದುಕಿದರೆ ೋ ಎನ್ನಿಸಿತು.

ಇಪ್ಪತ್ತು ವರ್ಷಗಳ ಮಾತು. ಆ ಪರದೆಯನ್ನು ಇಂದು ಈ ಹುಡುಗಿ ಏಕೆ ಸರಿಸಬೇಕಾಗಿತ್ತು? ಅದೇ ರೂಪ. ಅದೇ ಕಂಠ. ಇವಳಾದರೂ ಸುಖವಾಗಿರಲಿ, ಅನಾಥಾಲಯದ ಹುಡುಗಿ. ಆದರೇನು? ಯಾರಾದರೊಬ್ಬ ಮೂರ್ತಿಯಂತಹ ಒಳ್ಳೆಯ ಹುಡುಗ ಅವಳ ಕೈಹಿಡಿದು ಅವಳನ್ನು ಸುಖವಾಗಿಟ್ಟುಕೊಂಡಿರಲಿ, ಅನಂತಯ್ಯನ ಕಡೆ ನೋಡಿದರು, ಆತ ಅರ್ಥವಾದಂತೆ ಆಕೆಯ ಭುಜ ನೇವರಿಸಿದರು.

ಶ್ರೀನಿವಾಸಯ್ಯ ಬೆಚ್ಚಿದರು, ಇಪ್ಪತ್ತು ವರ್ಷಗಳಿಂದ ಹೊಗೆಯಾಡುತ್ತಿದ್ದ ಹೊಟ್ಟೆಯ ಸಂಕಟ ಭುಗಿಲ್ಲೆಂದು ಹೊತ್ತಿಕೊಂಡಿತು. ಹುಡುಗಿಯನ್ನು ನೋಡುತ್ತಲೇ "ರೋಹೀ" ಎಂದು ಕಿರುಚಬೇಕೆನ್ನಿಸಿತು. ಎದೆಯನ್ನು ಬಿಗಿಯಾಗಿ ಅಮುಕಿ ಹಿಡಿದುಕೊಂಡರು, ತಮ್ಮ ಒಬ್ಬಳೇ ಒಬ್ಬ ಮಗಳು ಜೀವನದ ಗುರಿಯೆಲ್ಲಾ ಅವಳ ಸುಖ ಸಂತೋಷ, ನಿಮಿಷದಲ್ಲಿ, ಹೆತ್ತವರ ಹೊಟ್ಟೆಗೆ ಬೆಂಕಿ ಸುರಿದು ಹೊರಟು ಹೋದಳು, ಎಷ್ಟು ಕನಸುಗಳು! ಎಂತಹ ಭವ್ಯವಾದ ಆಶಾಗೋಪುರಗಳು! ಎಲ್ಲವನ್ನೂ ಮಣ್ಣುಗೂಡಿಸಿ ಹೊರಟು ಹೋದಳು, ಹೊರಟೇ ಹೋದಳು,

ಅವಳು ಹುಟ್ಟಿದಾಗ ಪಟ್ಟ ಸಂತೋಷವೆಷ್ಟು! ಬೋರಲಾದಾಗ, ಸರಿದಾಗ, ಎದ್ದುನಿಂತಾಗ, ತಾಯಿಯ ಬಳಿಯಿಂದ ತನ್ನ ಬಳಿಗೆ ತಪ್ಪು ಹೆಜ್ಜೆ ಇಟ್ಟು ನಡೆದಾಗ, ಭುಜದ ಮೇಲೆ ಕುಳಿತು, ಕುದುರೆ ಸವಾರಿ ಮಾಡಿದಾಗ, ಬಿದ್ದು ಮೊಣಕಾಲು ತರಚಿಕೊಂಡಾಗ, ಶಾಲೆಗೆ ಮೊದಲ ಬಾರಿ ಹೋದಾಗ "ಅ" ಅಕ್ಷರವನ್ನು ತಲೆಕೆಳಗಾಗಿ ಬರೆದಾಗ, ಒಂದೇ ಎರಡೇ. ಎಷ್ಟು ದೃಶ್ಯ

ಗಳು! ಹೃದಯವನ್ನು ಹಿಂಡಿ ಹಿಪ್ಪೆಮಾಡುವ ನೆನಪುಗಳು. ಅವಳನ್ನು ಯೋಗ್ಯ ವರನಿಗೆಕೊಟ್ಟು ಮದುವೆಮಾಡಿ, ಮಗಳ ಹಿಗ್ಗಿನಲ್ಲಿ ಭಾಗಿಯಾಗಿ, ಇಳಿವಯಸ್ಸನ್ನ ಮೊಮ್ಮಕ್ಕಳೊಡನೆ ಆಡುತ್ತಾ ಕಳೆಯಬೇಕೆಂದಿದ್ದ ಆಸೆಯೆಲ್ಲಾ ಬರಿದಾಯಿತು. ಶನಿಯಂತೆ ಈ ಹುಡುಗ ಅದೃಷ್ಟರೇಖೆಗೆ ವಕ್ರಿಸಿದ. ಆ ಭಯಂಕರ ದಿನದ ನೋವನ್ನು ಮರೆಯಲು ಸಾಧ್ಯವೆ? ಕಾಯಿಲೆಯಾಗಿ ಎದುರಿಗೇ ಸತ್ತಿದ್ದರೆ ಆ ಸಂಕಟ ತೀವ್ರವಾದರೂ ಕ್ರಮೇಣ ಮರೆಯ ಬಹುದಾಗಿತ್ತೇನೋ. ಆದರೆ ಈ ಅನಿಶ್ಚಯ? ಬದುಕಿರುವಳೋ ಸತ್ತಳೋ! ಬದುಕಿದ್ದರೆ ಎಲ್ಲಿ ಯಾವ ಕಷ್ಟ ಪಡುತ್ತಿದ್ದಾಳೋ! ಹೃದಯ ನಡುಗಿತು.

ಕಷ್ಟವನ್ನೇ ಕಾಣದ ಮಗು—ಎಲ್ಲಿದ್ದಾಳೋ ಹೇಗಿದ್ದಾಳೋ, ಇದ್ದಾಳೋ! ಅವಳಿಗಿಷ್ಟು ಹಠವೆಂದು ತಿಳಿದಿದ್ದರೆ ತಾವಾದರೂ ಬಗ್ಗ ಬಹುದಾಗಿತ್ತು. ಅವಳ ಸುಖಕ್ಕಿಂತ ತನ್ನ ಪ್ರತಿಷ್ಠೆ ಹೆಚ್ಚೆ? ಅವಳಿಲ್ಲದ ಲೋಕದಲ್ಲಿ ತನಗೇನಿದೆ? ಅದಾದರೂ ಅವಳಿಗೆ ತಿಳಿಯಬೇಡವೇ? ಚಿಕ್ಕವರಿಗೆ ಹಿರಿಯರ ಸುಖ ದುಃಖಗಳ ಕಡೆ ಗಮನವಿರುವುದಿಲ್ಲ. ಸ್ವಾರ್ಥ ಸುಖಕ್ಕೆ ಏನಾದರೂ ಮಾಡುವರು. ಜೀವವನ್ನೇಕೊಡಲು ಸಿದ್ಧರಾಗಿರುವ ತಂದೆ ತಾಯಿಯರ ಪಾಡು ದೃಷ್ಟಿಗೆ ಬರುವುದಿಲ್ಲ. ನಿಟ್ಟುಸಿರು ಬಿಟ್ಟರು.

ರೋಹಿ, ರೋಹಿ,—ಇನ್ನೆಲ್ಲಿಯ ರೋಹಿ? ತಾನು ಮಾಡಿದು ದಾದರೂ ಏನು ಅಪರಾದ? ಅವಳು ಸುಖವಾಗಿರಲೆಂದಲ್ಲವೇ ತನ್ನ ಎಲ್ಲಾ ಪ್ರಯತ್ನ? ಬಾಯಿಬಿಟ್ಟು ಹೇಳಬಹುದಾಗಿತ್ತು. ತನ್ನನ್ನು ಬಯ್ಯ ಬಹುದಾಗಿತ್ತು, ತನ್ನ ಇಚ್ಚೆಗೆ ಎದುರಾಗಿ ಆ ಬಡ ಮಾಸ್ತರನನ್ನೇ ಮದುವೆಯಾಗಬಹುದಾಗಿತ್ತು. ಎಲ್ಲಿಯಾದರೂ ಭೂಮಿಯ ಮೇಲೆ ಅವಳಿದ್ದರೆ! ಇಲ್ಲ. ಇಪ್ಪತ್ತು ವರ್ಷವೆಂದರೆ ಅಲ್ಪ ಅವಧಿಯಲ್ಲ. ನಿರಾಸೆಯ ಭವಿಷ್ಯದಲ್ಲೇ ಕಣ್ಣಿಟ್ಟು ತಾನೂ ಲಕ್ಷಮ್ಮನೂ ಜೀವನ ನೂಕಬೇಕಾಗಿದೆ. ಎಷ್ಟು ಆಸ್ತಿ ಇದ್ದರೇನು? ಎಲ್ಲಾ ಒಂದು ದಿನ ಇಂತಹ ಅನಾಥಾಲಯಗಳಿಗೆ ಸೇರಬೇಕಾದ್ದುದೆ, ಲಕ್ಷ್ಮಮ್ಮ ಕಣ್ಣೊರೆಸಿ

ಕೊಂಡಂತಿತ್ತು. ಹೆಂಡತಿಯ ಕಡೆ ನೋಡಿದರು. ರಂಗಸ್ಥಳದಲ್ಲಿ ಆ ಹುಡುಗಿಯೇ ನಿಂತಿದ್ದಳು. ಶ್ರೀನಿವಾಸಯ್ಯನಿಗೆ ತಲೆ ಸುತ್ತಿದಂತಾಯಿತು. ಹಾಗೇ ಹಿಂದಕ್ಕೊರಗಿದರು.

ಲಕ್ಷ್ಮಮ್ಮನಿಗೆ ತಾನೆಲ್ಲಿರುವೆನೆಂಬ ಪರಿವೆಯೇ ಹೋಗಿತ್ತು. ಇಪ್ಪತ್ತು ವರ್ಷ ಕಾಲಕ್ಕೂ ತನ್ನ ನೋವನ್ನಳಿಸುವ ಸಾಮರ್ಥ್ಯವಿರಲಿಲ್ಲ. ಪುನಃ ಅದೇ ತನ್ನ ಮುದ್ದು ರೋಹಿ ಕಣ್ಣಿಗೆ ಕಟ್ಟಿದಂತೆ ರಂಗಸ್ಥಳದ ಮೇಲೆ ನಿಂತಿದ್ದಾಳೆ. ತಲೆಬಾಚಿ, ಅಂದವಾಗಿ ಸೀರೆಯುಟ್ಟು "ಅಮ್ಮಾ ಸ್ಕೂಲಿಗೆ ಹೋಗಿ ಬರ್‍ತೇನೆ" ಎಂದು ಕೂಗಿ ಹೊರಡುತ್ತಿದ್ದಾಳೆ. ತನ್ನ ಎಲ್ಲಾ ಕಾರ್ಯಗಳಿಗೆ, ಆಸೆಗಳಿಗೆ ಕೇಂದ್ರ. ರೋಹಿಗೆ ಸರ ಮಾಡಿಸಬೇಕು. ಬಳೆ ಮಾಡಿಸಬೇಕು. ಗಂಡನ ಅತುಲೈಶ್ವರ್ಯ ಸಾರ್ಥಕವಾಗುತ್ತಿತ್ತು.

ಮದುವೆ ಬೇಡವೆಂದು ಅವಳು ಅಂಗಲಾಚಿದಾಗ ಭಗವಂತ ತನಗೆ ಶ್ರೀನಿವಾಸಯ್ಯನಿಗೆ ತಿಳಿವಳಿಕೆ ಕೊಟ್ಟಿದ್ದರೆ! ಈ ಅನರ್ಥವಾಗದಂತೆ ತಡೆದಿದ್ದರೆ! ಅವಳ ಅಳು ಗೋಳು, ಅರಿಯದ ಹುಡುಗಿಯ ಭಾವೋನ್ಮಾದವೆಂದೂ, ಅವಳ ಭವಿಷ್ಯತ್ತಿನ ಹಿತ ತಮಗೇ ಸೇರಿದುದೆಂದೂ ನಂಬಿ ಮೋಸಹೋದರು. ಅವಳ ಭವಿಷ್ಯದಲ್ಲಿ ಇಂತಹ ಕಾರಿರುಳು ಇರುವುದೆಂದು ಕನಸು ಮನಸಿನಲ್ಲೂ ನೆನೆಸಿರಲಿಲ್ಲ.

ಇಪ್ಪತ್ತು ವರ್ಷವನ್ನು ಹಿಂದಿಡಬಹುದಾಗಿದ್ದರೆ! ಅವಳೇನು ಗಂಡನ ಗಳಿಕೆಯನ್ನವಲಂಬಿಸಬೇಕಾಗಿತ್ತೆ? ಬಡವನಾದರೇನು? ತಮ್ಮ ಸಕಲೈಶ್ವರ್ಯವೂ ಅವಳದೇ ಆಗಿರಲಿಲ್ಲವೇ? ಈ ವಿವೇಕ ತಮ್ಮಿಬ್ಬರಿಗೂ ಮೊದಲೇ ಬಂದಿದ್ದರೆ! ಇಲ್ಲಿ, ಕಾಲ ಮಿಂಚಿಹೋಯಿತು. ಆ ವಿದ್ಯುತ್ ರೇಖೆ ತಮ್ಮ ಜೀವನದಿಂದ ಎಂದೆಂದಿಗೂ ಮಾಯವಾಗಿ ಹೋಗಿ, ಕಾರಿರುಳಿನಲ್ಲಿ ಇಬ್ಬರೂ ತಡವರಿಸುತ್ತಾ, ಮುಗ್ಗರಿಸುತ್ತಾ ಸಾಗಬೇಕಾಗಿ ಬಂತು. ಈ ಮುದುಕರಿಗೆ ತನ್ನ ಅವಶ್ಯಕತೆ ಎಷ್ಟೆಂದ, ಅವಳಿಗೆ ತಿಳಿಯದೆ? ನಿಷ್ಕರುಣೆಯಿಂದ ದುಃಖಕೂಪಕ್ಕೆ ತಳ್ಳಿ ಹೋದಳು. ತುಂಬೆಗೆ ಹೇಳಲು ಧೈರ್ಯವಿಲ್ಲದಿದ್ದರೆ ತನಗೆ ಹೇಳಬಾರದಾಗಿತ್ತೆ? ಇಂತಹ

ಜೀವಾವಧಿ ಶಿಕ್ಷೆ ಕೊಡುವುದೇ? ಲಕ್ಷ್ಮಮ್ಮನ ಕಣ್ಣುಗಳಲ್ಲಿ ನೀರು ಧಾರಾಳವಾಗಿ ಸುರಿಯಲಾರಂಭಿಸಿತು.

ರಂಗಸ್ಥಳದ ಮೇಲೆ ಸತ್ಯಭಾಮೆ ನಿಂತು ಕಷ್ಣನನ್ನು ತೂಗಿಸುತ್ತಿದ್ದಾಳೆ ತಮ್ಮ ರೋಹಿಣಿ ತನ್ನ ಕೃಷ್ಣನಿಗಾಗಿ ಸಕಲೈಶ್ವರ್ಯವನ್ನೂ ಕಡೆಗಣಿಸಿ ಹೊರಟು ಹೋದಳು. ಅವನ ಬಳಿಗಾದರೂ ಹೋಗಿದ್ದರೆ! ಲಕ್ಷ್ಮಮ್ಮನಿಗೆ ತಡೆಯಲಾಗಲಿಲ್ಲ. "ಮನೆಗೆ ಹೋಗೋಣ" ಎಂದು ಎದ್ದರು ಮರುಮಾತನಾಡದೆ ಶ್ರೀನಿವಾಸಯ್ಯ ಆಕೆಯನ್ನು ಹಿಂಬಾಲಿಸಿದರು. ಅವರು ಹೊರಟುದನ್ನು ಮೂರ್ತಿ ಕಣ್ಣಂಚಿನಿಂದ ನೋಡಿದ. ಅದಕ್ಕೆ ಕಾರಣ ವನ್ನೂ ಗ್ರಹಿಸಿದ.

ನಾಟಕ ಮುಗಿಯುವವರೆಗೂ ಮೂರ್ತಿ ಸತ್ಯಭಾಮೆಯ ಸುಂದರಾಕೃತಿಯನ್ನು ಎರಡು ಕಣ್ಣುಗಳಿಂದಲೂ ಹೀರಿದ. ತಂದೆ ತಾಯಿ ಗಳ ಮನಸ್ಸಿನಲ್ಲಾಗುತ್ತಿದ್ದ ಆಂದೋಳನವೂ ಅವನಿಗೆ ತಿಳಿದಿತ್ತು. ಯಾವ ಶಂಕೆಯೂ ಇಲ್ಲದೆ ನಾಟಕದ ರಸಾನುಭವ ಮಾಡಿದವಳು ಲಲಿತೆಯೊಬ್ಬಳೇ, ತಂದೆ ತಾಯಿಗಳನ್ನು ಜಯನಗರಕ್ಕೆ ಕಳುಹಿಸಿದ, ಮೂರ್ತಿ ಲಲಿತೆ ಮಲ್ಲೇಶ್ವರದ ಕಡೆ ಹೊರಟರು. "ಭಾನುವಾರ' ಮರೆಯಬೇಡಿ" ಎಂದು ಸುಬ್ಬಮ್ಮ ಜ್ಞಾಪಕ ಮಾಡಿದರು.

"ನಾಳೆಯಿಂದ ಬಸ್ಸಿಗೆ ಕಾಯುವುದಿದ್ದೇ ಇದೆ. ಆಟೋರಿಕ್ಷಾದಲ್ಲಿ ಹೋಗೋಣ" ಎಂದು ಮೂರ್ತಿ ಒಂದು ರಿಕ್ಷಾ ನಿಲ್ಲಿಸಿದ. ಅದರಲ್ಲಿ ಹೋಗುತ್ತಾ ಕಿವಿ ಕಿವುಡಾಗಿಸುವ ಅದರ ಶಬ್ದಕ್ಕಿಂತದನಿಯೆತ್ತರಿಸಿ ಮೂರ್ತಿ "ಹೇಗಿತ್ತು ನಾಟಕ?" ಎಂದ

ನಾಟಕ! ತನ್ನದೇ ನಾಟಕ; ಹಿಂದೆ ನಡೆದ ನಾಟಕ. ಈಗ ಅದನ್ನು ಮರೆಸಿ, ಮರೆಯಲು ಪ್ರಯತ್ನಿಸುತ್ತಿರುವ ನಾಟಕ.

ಲಲಿತೆಯೂ ಗಟ್ಟಿಯಾಗಿ "ಆ ಹುಡುಗಿ ತುಂಬಾ ಚೆನ್ನಾಗಿ ಪಾರ್ಟು ಮಾಡಿದಳು. ನಿಮ್ಮ ಹತ್ತಿರ ಒಂದು ಸ್ಕೂಲು ಫೋಟೋ ಇದೆಯಲ್ಲಾ ಅದರಲ್ಲಿ ಒಂದು ಹುಡುಗಿ ಹೀಗೇ ಇದ್ದಾಳೆ" ಎಂದಳು.

ಮೂರ್ತಿ ಮೊಟಕಾಗಿ "ಇರಬಹುದು" ಎಂದ.

"ಇದ್ದಾಳೆ, ಮನೇಲಿ ತೋರಿಸ್ತೀನಿ".

ಮನೆಯಲ್ಲಿ ರಾಜುವಿನ ಓದು ಇನ್ನೂ ಸಾಗಿಯೇ ಇತ್ತು. ರಿಕ್ಷಾ ಸದ್ದು ಕೇಳಿ ಬಾಗಿಲು ತೆಗೆದು "ಹೇಗಿತ್ತಣ್ಣಾ ನಾಟಕ, ಸತ್ಯಭಾಮೆ ಪಾರ್ಟು ?" ಎಂದು ಕೇಳಿದ.

ಮೂರ್ತಿ ರಿಕ್ಷಾನವನಿಗೆ ದುಡ್ಡೆಣಿಸಿ ಕೊಡುತ್ತಿದ್ದ.

ಲಲಿತೆ "ತುಂಬಾ ಚೆನ್ನಾಗಿತ್ತು ರಾಜು" ಎಂದು ಊಟಕ್ಕೆ ತಟ್ಟೆ ಹಾಕಲು ಪ್ರಾರಂಭಿಸಿದಳು.

ರಾತ್ರಿ ಎಷ್ಟು ಹೊತ್ತಾದರೂ ಮೂರ್ತಿಗೆ ನಿದ್ರೆ ಹಿಡಿಯಲಿಲ್ಲ ಲಲಿತೆ ಮಲಗಿ ನಿದ್ರಿಸುತ್ತಿದ್ದಳು. ಮೂರ್ತಿ ಎದ್ದು ಪುಸ್ತಕಗಳ ನಡುವೆ ಇದ್ದ ಸ್ಕೂಲಿನ ಸಾಮೂಹಿಕ ಫೋಟೋವನ್ನು ಕೈಗೆತ್ತಿಕೊಂಡ. ರೋಹಿಣಿ ನಗುನಗುತ್ತಾ ತನ್ನ ಕುರ್ಚಿಯನ್ನೇ ಹಿಡಿದು ನಿಂತಿದ್ದಳು. ಜೀವಮಾನವೆಲ್ಲಾ ತನ್ನನ್ನು ಹಾಗೆಯೇ ಹಿಡಿದಿರಬಾರದಾಗಿತ್ತೆ ?

ಫೋಟೋ ಹಿಂದಕ್ಕಿಟ್ಟು ಹಾಸಿಗೆಯ ಮೇಲೆ ಹೊರಳಾಡಲಾರಂಭಿಸಿದ..

ನೆನಪುಗಳು ತಲೆಯನ್ನು ಕಿತ್ತು ತಿನ್ನುತ್ತಿದ್ದುವು. ತಾನು ಅವಳಿಗೆ ಕೊಟ್ಟ ಮಾತುಗಳೇನು, ನೀಡಿದ ಭಾಷೆಗಳೇನು? ಯಾವುದಕ್ಕೂ ಧೈರ್ಯ ವಿಲ್ಲದೆ ಅವಳ ತಂದೆಯ ಕಟುನುಡಿಗಳಿಗೆ ಹೆದರಿ ಓಡಿಬಂದಿದ್ದ. ಕಡೆಯವರೆಗೆ ಆಸರೆಯಾಗಿ ನಿಲ್ಲುವ ಎದೆಗಾರಿಕೆಯೂ ಇಲ್ಲದೆ ಊರು ಬಿಟ್ಟು ಓಡಿ ಬಂದಿದ್ದ ತಾನು ಅಲ್ಲಿಯೇ ಇದ್ದಿದ್ದರೆ ಅವಳು ಖಂಡಿತವಾಗಿ ತನ್ನ ಬಳಿಗೇ ಬರು ತ್ತಿದ್ದಳು. ವಿಳಾಸ ಕೂಡ ಅವಳಿಗೆ ಕೊಡಲಿಲ್ಲ ಎಂತಹ ಬೆಂಕಿಯನ್ನು ಮಗುವಿನಂತೆ ಮುಟ್ಟಿ ಕೈಸುಟ್ಟು ಕೊಂಡಿದ್ದು ಕಡೆಗೆಲ್ಲಿ ಹೋದಳೋ. ಏನಾದಳೋ ! ಬೋರ್ಗರೆಯುವ ಆಲೋಚನೆಗಳಿಂದ ತಲೆ ಸಿಡಿಯು ವಂತಾಗಿತ್ತು.

ಮಾರನೆಯ ದಿನ ಸೋಮವಾರ. ಆಫೀಸು, ದುಡಿತ. ಮೂರ್ತಿಯ ಮನಸ್ಸು ಹಿಡಿತದಲ್ಲಿರಲಿಲ್ಲ. ಎಂದಿನಂತೆ ಊಟ ಮಾಡಿ ಮನೆಬಿಟ್ಟು ಹೊರಟರೂ ಆ ದಿನ ಕೆಲಸ ಮಾಡುವ ಶಕ್ತಿ ತನಗಿಲ್ಲವೆಂದರಿತು, ರಜಾಗೆ ಬರೆದುಹಾಕಿ ನೇರವಾಗಿ ಅನಾಥಾಲಯಕ್ಕೆ ಹೋದ. ಅಲ್ಲಿ ಕಾರ್ಯಕರ್ತರನ್ನು ನೋಡಬೇಕೆಂದು ಕೇಳಲು ಅವರು ಬರುವುದು ಇನ್ನೂ ಸ್ವಲ್ಪ ತಡವೆಂದು ತಿಳಿಯಿತು. ಮಕ್ಕಳೆಲ್ಲಾ ಊಟ ಮಾಡಿ ಪುಸ್ತಕಗಳನ್ನು ಹಿಡಿದು ಶಾಲೆಗಳಿಗೆ ನಡೆಯುತ್ತಿದ್ದರು. ಅವರಲ್ಲಿ ಉಮೆ ಇರುವಳೇನೋ ಎಂದು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಾನಿಂತ; ಅವಳು ಕಾಣಿಸಲಿಲ್ಲ, ಬಾಗಿಲಲ್ಲಿ ನಿಂತಿರುವಾಗಲೇ ಕಾರ್ಯಕರ್ತೆ ರಾಜಮ್ಮ ಬಂದಳು. ಸ್ವಲ್ಪ ಹೊತ್ತಿಗೆಲ್ಲಾ ಮೂರ್ತಿಗೆ ಕರೆ ಬಂದಿತು.

"ಬನ್ನಿ, ಏನಾಗಬೇಕಾಗಿತ್ತು ?"

"ನಾನು ಮೂರ್ತಿ ಅಂತ. ಇಲ್ಲೇ ಬ್ಯಾಂಕಿನಲ್ಲಿ ಕೆಲಸದಲ್ಲಿದ್ದೇನೆ".

"ಏನಾಗ ಬೇಕಾಗಿತ್ತು ?"

"ನೆನ್ನೆ ನಿಮ್ಮ ಮಕ್ಕಳ ನಾಟಕ ನೋಡಲು ಹೋಗಿದ್ದೆ. ತುಂಬಾ ಚೆನ್ನಾಗಿತ್ತು, ಸಾಕಾದಷ್ಟು ಕಲೆಕ್ಷನ್ ಆಯಿತೋ ?"

"ಪರವಾಯಿಲ್ಲ; ಜನ ತುಂಬಾ ಮೆಚ್ಚಿಕೊಂಡರು. ನಾವು ಕಟ್ಟಡ ಸ್ವಲ್ಪ ದೊಡ್ಡದು ಮಾಡಬೇಕಾಗಿದೆ. ಸ್ಥಳ ಸಾಲದು".

ಮೂರ್ತಿ ತಾನೇನು ಮಾಡಬೇಕೆಂದು, ಕೇಳಬೇಕೆಂದು ಆಲೋಚನೆ ಮಾಡದೆಯೇ ಅಲ್ಲಿಗೆ ಬಂದಿದ್ದನು. ಇಷ್ಟು ಮಾತು ಆದ ಮೇಲೆ ಏನು ಹೇಳಬೇಕೆಂದೇ ತೋರಲಿಲ್ಲ.

ರಾಜಮ್ಮ ಒಂದು ಕ್ಷಣ ಕಾದು ನೋಡಿದಳು. ಮೂರ್ತಿಗೆ ಮೈಯ್ಯೆಲ್ಲಾ ಬೆವರುತ್ತಿತ್ತು.

"ನಿನ್ನೆ ಸತ್ಯಭಾಮೆ ಪಾರ್ಟು ಆ ಹುಡುಗಿ ಚೆನ್ನಾಗಿ ಮಾಡಿದಳು. ಅವಳು ಯಾರೆಂದು ಕೇಳಬಹುದೆ?"

"ಹಾಗೆ ಕೇಳುವುದಕ್ಕೆ ನೀಮ್ಮ ಉದ್ದೇಶ?"

"ಮತ್ತೇನೂ ಇಲ್ಲ. ನನಗೆ ಹೆಣ್ಣು ಮಕ್ಕಳಿಲ್ಲ. ಒಬ್ಬ ಗಂಡು ಮಗನಿದ್ದಾನೆ. ಆ ಹುಡುಗಿಯನ್ನು ದತ್ತು ಮಾಡಿಕೊಳ್ಳಬಹುದೆ?"

"ಹಾಗೆ ಏಕಾಏಕಿ ಹೇಳಲು ಆಗುವುದಿಲ್ಲ, ನಿಮ್ಮ ಸ್ಥಿತಿಗತಿ ಮನೆಯ ವಾತಾವರಣ ಎಲ್ಲಾ ವಿಚಾರಿಸಬೇಕಾಗುತ್ತೆ, ನೀವು ಅಪ್ಲಿಕೇಷನ್ ಕೊಡ ಬೇಕಾಗುತ್ತೆ."

"ಆ ಹುಡುಗಿಯ ವಿಚಾರ ಸ್ವಲ್ಪ ತಿಳಿಸಿದರೆ ಮನೆಯವರನ್ನು ಕೇಳಿ ಕರೆದುಕೊಂಡು ಬರುತ್ತೇನೆ. ನೀವು ವಿಚಾರಿಸಬಹುದು."

"ಆಗಬಹುದು ಎಂದು ರಾಜಮ್ಮ ಶಶೀ ಎಂದು ಕೂಗಿದಳು. ಗಿಡ್ಡನಾಗಿ ದಪ್ಪನಾಗಿದ್ದ ಒಂದು ಹುಡುಗಿ ಬಂದಳು.

"ಮೇಟ್ರನ್‌ನ್ನ ಕೇಳಿ ಉಮೆಯ ಕಾಗದ ಪತ್ರ ತಾ"

ಅವಳು ಬರುವವರೆಗೆ ಮೂರ್ತಿ ಕಿಟಕಿಯಾಚೆ ನೋಡುತ್ತಿದ್ದ,

ಶಶಿ ಕಾಗದಗಳನ್ನು ತರಲು ರಾಜಮ್ಮ ಕನ್ನಡಕವನ್ನು ಮೂಗಿಗೇರಿಸಿ ಅವುಗಳನ್ನು ತಿರುವಿ ಹಾಕುತ್ತಾ, "ಹೆಚ್ಚೇನೂ ತಿಳಿದಿಲ್ಲ. ಆ ಹುಡುಗಿ ಹುಟ್ಟಿದ್ದು ೧೯೪೪ರನೇ ಇಸವಿ ಡಿಸೆಂಬರ್ ತಿಂಗಳು"

ಮೂರ್ತಿ ಬೆಚ್ಚಿದ, ರೋಹಿಣಿಯ ಮದುವೆ ಮೇ ತಿಂಗಳ ಕೊನೆಯಲ್ಲಿ ಆಗಬೇಕಾಗಿತ್ತು. ತನ್ನಿಂದ ನಡೆದ ಅಚಾತುರ್ಯದಿಂದಲೇ ರೋಹಿಣಿ ದಿಕ್ಕೆಟ್ಟು ಓಡಿರಬಹುದೇ? ಆ ಕ್ಷಣದಲ್ಲಿ ಅವಳಿಗೆಷ್ಟು ಗಾಬರಿಯಾಯಿತೋ ಮುಖದಿಂದ ಅವನಿಗೆ ಬೆವರು ಸೋರಿ ಹೋಗುತ್ತಿತ್ತು.

"ಅವಳ ತಾಯಿ ಇಲ್ಲಿಯೇ ಇದ್ದರೆ"?

"ಇಲ್ಲ, ಮಗು ಹುಟ್ಟುವುದಕ್ಕೆ ಮೂರು ದಿನ ಮುಂಚೆ ಆ ಅಭಾಗಿನಿ ಇಲ್ಲಿಗೆ ಬಂದಳು, ಸರಿಯಾದ ಆಹಾರವಿಲ್ಲದೆ ತುಂಬ ಕೃಶಳಾಗಿದ್ದಳು ಆಕೆಯ ಹೆಸರು ಉಮೆಯೆಂದು ಹೇಳಿದಳು.

ಮೂರ್ತಿ ನೆಮ್ಮದಿಯ ನಿಟ್ಟುಸಿರು ಬಿಟ್ಟ. ಹಾಗಾದರೆ ಅವಳು ರೋಹಿಣಿ ಇರಲಾರಳು–ಕಲ್ಪಿತ ದುಃಖದಿಂದ ತಾನು ಮರುಗುತ್ತಿದ್ದೇನೆ. ಜಗತ್ತಿನಲ್ಲಿ ರೋಹಿಣಿಯನ್ನು ಹೋಲುವವರು ಎಷ್ಟೊಮಂದಿ ಇರಬಹುದು

"ಆಕೆ ಯಾರೆಂದು ತಿಳಿಯಲಿಲ್ಲವೆ?"

"ಆಕೆ ಎಷ್ಟು ಕೇಳಿದರೂ ಹೇಳಲಿಲ್ಲ. ಇನ್ನೂ ತೀರ ಚಿಕ್ಕ ಹುಡುಗಿ ತನ್ನ ಬಂಧುಗಳಾರೂ ಬದುಕಿಲ್ಲವೆಂದು ಹೇಳಿದಳು, ಕತ್ತಿನಲ್ಲಿ ಕರಿಮಣಿ ಕಟ್ಟಿಕೊಂಡಿದ್ದರೂ ಆಕೆ ಮದುವೆಯಾದ ತಾಯಲ್ಲವೆನ್ನಿಸಿತು,.
ಆಕೆಯ ಬಳಿ ಏನೂ ಇರಲಿಲ್ಲ. ಉಟ್ಟ ಬಟ್ಟೆಯಲ್ಲಿ ಬಂದಿದ್ದಳು. ಇದೊಂದು ಫೋಟೋ ಮಾತ್ರ ಇತ್ತು. "ಎಂದು ಅದನ್ನು ಮೂರ್ತಿಯ ಕೈಗೆ ಕೊಟ್ಟಳು,

ಯಾವ ವಿಧವಾದ ಸಂದೇಹವೂ ಉಳಿಯಲಿಲ್ಲ. ಅದು ತನ್ನದೇ ಫೋಟೋ ಎಂದು ಈಗ ನೋಡಿದವರ್ಯಾರೂ ಗುರುತಿಸಲಾರದಾದರೂ ಅದು ತನ್ನದೇ. ಶಾಲೆಯ ಆಟಗಳಲ್ಲಿ ಭಾಗವಹಿಸಿ ತಾನು ಗೆದ್ದ ಬಟ್ಟಲಿನೊಡನೆ ತೆಗೆಸಿಕೊಂಡ ಫೋಟೋ; ಆಗ ತಲೆ ತುಂಬಾ ಮಿರುಗುವ ಕೂದಲಿತ್ತು. ಈಗ ಸ್ವಲ್ಪ ಸ್ವಲ್ಪವಾಗಿ ಬಟ್ಟತಲೆಯಾಗಿ, ಇದ್ದ ನಾಲ್ಕು ಕೂದಲು ನರೆತಿತ್ತು.

ಆಗಿನ್ನೂ ತನಗೆ 23-24 ವರ್ಷ, ಜಗತ್ತನ್ನೇ ಗೆಲ್ಲಬಲ್ಲೆನೆಂಬ ಆತ್ಮ ವಿಶ್ವಾಸ ತಾನು ಆ ಫೋಟೋ ಅವಳಿಗೆ ಕೊಟ್ಟಾಗ ಅದನ್ನು ಈ ಅನಾಥಾಲಯದಲ್ಲಿ ಕಾಣುವೆನೆಂದು ತಿಳಿದಿದ್ದನೆ! ಎಷ್ಟು ಆಸೆಯ ಭವ್ಯ ಸೌಧಗಳು!

ಜಗತ್ತಿನ ಸುಖಸಾರವನ್ನೆಲ್ಲಾ ಹೀರಲೆಂದೇ ತಾವು ಹುಟ್ಟಿದ್ದೆವೆಂದು ಕೊಂಡಿದ್ದರು. ಆ ನಡುವಿನ ದಿನಗಳನ್ನು, ತಂದೆಯ ಮನೆಯನ್ನು ಬಿಟ್ಟು ಹೋಗಿ ಈ ಭಯವನ್ನು ಸೆರಗಿನಲ್ಲಿ ಕಟ್ಟಿಕೊಂಡ ರೋಹಿಣಿ ಎಷ್ಟು ಹೆದರಿದಳೋ! ತನ್ನನ್ನೇ ಸೀಳಿ ಹಾಕಬೇಕೆಂಬಷ್ಟು ಆಕ್ರೋಶ ಮೂರ್ತಿ ಯಲ್ಲುಂಟಾಯಿತು. ಆ ಕಷ್ಟಸಮಯದಲ್ಲಿ ಅವಳು ತನಗೆ ಸಿಕ್ಕಿದ್ದರೆ! ಹೃದಯ ಸಿಂಹಾಸನದಲ್ಲಿ ಕುಳಿಸಿಕೊಳ್ಳುತ್ತಿರಲಿಲ್ಲವೆ! ವಿಧಿಯ ಕೈಯ ಬೊಂಬೆಗಳು. ಬೆಳಗುತ್ತಿದ್ದ ಬಾಳು ಅಂಧಕಾರದಲ್ಲಿ ಲೀನವಾಗಿ ಹೋಯಿತು.

ರಾಜಮ್ಮ ಅವನ ಉತ್ತರಕ್ಕಾಗಿ ಕಾಯುತ್ತಾ ಕುಳಿತಿದ್ದಳು.

ಮೂರ್ತಿ ಎದ್ದು "ಮನೆಯಲ್ಲಿ ಹೇಳಿ ನಾಳೆ ಬಂದು ನನ್ನ ವಿಳಾಸ ವಿವರ ಕೊಡುತ್ತೇನೆ" ಎಂದು ಹೇಳಿ ಹೊರಬಂದ.

ಮನೆಗೆ ಬೇಗ .ಬಂದ ಮೂರ್ತಿಯನ್ನು ನೋಡಿ ಲಲಿತೆ ಆಶ್ಚರ್ಯ ದಿಂದ "ಇದೇನು, ರಜಾನೇ ?" ಎಂದು ಕೇಳಿದಳು.

"ಹೌದು. ತೆಗೆದುಕೊಂಡೆ, ರಾಜು ಎಲ್ಲಿ ?".

"ಪುಸ್ತಕ ತರುತ್ತೇನೆಂದು ಯಾರೋ ಸ್ನೇಹಿತನ ಮನೆಗೆ ಹೋದ."

ಮೂರ್ತಿ ಮಂಚದ ಮೇಲೆ ಕುಳಿತು ಮೃದುವಾಗಿ "ಲಲಿತಾ"ಎಂದು ಕರೆದ.

ಲಲಿತೆ ಬಂದು "ಏನು ?" ಎಂದಳು.

"ಕೂತುಕೋ, ನಿನ್ನನ್ನೊಂದು ಮಾತು ಕೇಳಬೇಕು."

ಲಲಿತೆ ಕುಳಿತಳು.

"ನಿನ್ನೆ ನಾಟಕದಲಿ ಸತ್ಯಭಾಮೆಯ ಪಾರ್ಟು ಮಾಡಿದಳಲ್ಲಾ, ಉಮೆ ಎನ್ನುವ ಹುಡುಗಿ......"

"ಹೌದು ಚೆನ್ನಾಗಿದ್ದಾಳೆ"

"ಅವಳನ್ನು ನಾವು ಕರೆದುಕೊಂಡು ಬರೋಣವೇ?"

"ಏಕೆ ?" ಆಶ್ಚರ್ಯದಿಂದ ಲಲಿತೆ ಕೇಳಿದಳು.

"ನಮಗೆ ಹೆಣ್ಣುಮಕ್ಕಳಿಲ್ಲ. ಮಗಳಾಗಿ ಇರುತ್ತಾಳೆ."

"ಸರಿ ಸರಿ. ನಿಮಗೇಕೋ ಹುಚ್ಚುಹಿಡೀತಾ ಇದೆ, ನಾಳೆ ರಾಜೂಗೆ ಮದುವೆಯಾದರೆ ಸೊಸೆ ಬರೋಲ್ವೆ ? ಅವಳೇ ಹೆಣ್ಣುಮಗಳು," ಕಾರಣವನ್ನು ಲಲಿತೆಗೆ ಹೇಳುವಂತಿಲ್ಲ.

"ಏನು ಹೇಳ್ತೀರೋ ಅಂದ್ಕೊಂಡೆ. ತಡೀರಿ ಕಾಫಿ ತರ್ತೀನಿ" ಎಂದು ಲಲಿತೆ ಎದ್ದು ಹೋದಳು.

ಅದೂ ನಿಜ ! ಉಮೆ ಅನಾಥಾಲಯದಲ್ಲಿ ಇಪ್ಪತ್ತು ವರ್ಷ ಕಳೆದಿದ್ದಾಳೆ. ಯಾವ ಪುಣ್ಯಾತ್ಮನೋ ಮದುವೆಯಾಗಿ ಸುಖವಾಗಿಟ್ಟುಕೊಳ್ಳುತ್ತಾನೆ. ಅವಳ ಜೀವನದಲ್ಲಿ ಈಗ ತಾನು ಪ್ರವೇಶಿಸಿ ಅದನ್ನೇಕೆ ಹದಗೆಡಿಸಬೇಕು. ತಾಯಿಯ ಜೀವನವನ್ನು ನಾಶಮಾಡಿದ ನೋವು ಈ ಹುಡುಗಿಯನ್ನು ಮನೆಗೆ ಕರೆತಂದರೆ ಆರುವುದೆ ? ಭಗವಂತ ಮಗಳಿಗಾದರೂ ತನಗಿಂತ ಯೊಗ್ಯನಾದ ಪತಿಯನ್ನು ದೊರಕಿಸಿ ಕೊಡಲಿ.

ಲಲಿತೆ ಕಾಫಿ ಹಿಡಿದು ಬಂದಾಗ ಮೂರ್ತಿ ಕಿಟಕಿಯಾಚೆ ದಿಗಂತದ ಕಡೆ ನೋಡುತ್ತಿದ್ದ.

* * * * * * * * *

# ನಿಮಿತ್ತ ಮಾತ್ರರು

ಜಯಶ್ರೀ ರಾಜಾರಾಂ

ಆಸ್ಪತ್ರೆಯೊಳಗೆ ಬಂದ ಜಾರ್ಜ್ ತಲೆತಗ್ಗಿಸಿ, ಏನೋ ಕಳ್ಳತನ ಮಾಡಿದವರಂತೆ ಹೆಜ್ಜೆಯನ್ನು ನಿಧಾನವಾಗಿಡುತ್ತಾ ತಮ್ಮ ಪತ್ನಿ ಜೂಲ್ಯಿ ಇದ್ದ ವಾರ್ಡಿನತ್ತ ತಿರುಗಿದರು.

ನಿಧಾನವಾಗಿ ತಲೆ ಎತ್ತಿ ಜ್ಯೂಲಿಯನ್ನು ಅರಸಿದರು. ಗಂಡನನ್ನು ಕಂಡು ಜ್ಯೂಲಿಯ ಕಣ್ಣುಗಳು ಮಿಂಚಿದವು. ಗಂಡನನ್ನು ಆದರದಿಂದ ಹತ್ತಿರಕ್ಕೆ ಕರೆದಳು.

ಭಾರವಾದ ಹೆಜ್ಜೆಗಳನ್ನು ಮತ್ತೂ ಭಾರವಾದಂತೆ ಕಿತ್ತೂ ಕಿತ್ತೂ ಹತ್ತಿರಕ್ಕೆ ಬಂದರು. ಆದರೂ ಅವಳ ಪಕ್ಕದಲ್ಲೇ ಮಲಗಿದ ಕೂಸನ್ನು ನೋಡುವ ಧೈರ್ಯ ಬರಲಿಲ್ಲ,

"ಹೇಗಿದ್ದಿ ಜ್ಯೂಲಿ? ನಾನು ಆಗ಼್ೇ ಬರ್ಲಿಲ್ಲಾಂತ ಏನೂ ಬೇಜಾರಿಲ್ಲಷ್ಟೇ ?" ಅವರು ನುಡಿದರು. ಆದರೆ ಈಗ ಬಂದದ್ದು ತಮಗೆ ಹೇಗೆ ಹೇಗೋ ಆಗುತ್ತಿದೆ ಎಂಬಂತಿತ್ತು ಆ ನುಡಿ.

"ಹ್ಞೂಂ, ಅನ್ನಿಸ್ತು. ನನ್ನ ಸುಖ ದುಃಖಗಳಲ್ಲಿ ನಿಮ್ಗೆ ಸಮಪಾಲಿದ್ದರೂ, ನನ್ನ ನೋವೂ, ಆನಂದ ಹಂಚಿಕೊಳ್ಳಲು ಹತ್ರ ನನ್ನವ್ರು ಯಾರೂ ಇಲ್ವಲ್ಲಾಂತ, ಹೋಗ್ಲಿ ಈಗ ಜ್ಯೂನಿಯರ್ ಹೇಗಿದ್ದಾನೊ

ಹೇಳಿ" ಎಂದು ಲಗುಬಗೆಯಿಂದ ಜ್ಯೂಲಿ ನುಡಿದಳು, ಅವಳು ಆನಂದದ ತುದಿಯ ಮೆಟ್ಟಿಲಿನಲ್ಲಿದ್ದಳು.

ಜಾರ್ಜ್‌ರ ಕಣ್ಣು ನಿಧಾನವಾಗಿ ಪಕ್ಕದಲ್ಲಿ ಮಲಗಿದ್ದ ಮಗುವನ್ನು ನೋಡಿತು. ಆಸ್ಪತ್ರೆಯ ಮಕ್ಕಳು ಯಾವ ಜನಾಂಗ, ಜಾತಿ ಆದರೂ ಹುಟ್ಟಿದ ದಿನ ಒಂದೇ ಬಣ್ಣ, ಒಂದೇ ರೂಪವಾಗಿ ಕಾಣುತ್ತವೆ. ದಿನ ಕಳೆದಂತೆ ಜನಾಂಗದ ಮೈ ಬಣ್ಣ, ರೂಪಕ್ಕೆ ತಿರುಗುವುದು ಹಿರಿಯ ಡಾಕ್ಟರಾದ ಜಾರ್ಜ್ ಬಲ್ಲವರಾಗಿ, ಮಗುವನ್ನು ನಿರ್ವಿಕಾರವಾಗಿ ನೋಡಿದರು,

ಎಡಿನ್‌ಬರೋ ಮೆಡಿಕಲ್ ಕಾಲೇಜಿನ ಪ್ರಾಧ್ಯಾಪಕರಾಗಿಯೂ, ಪಕ್ಕದ ಆಸ್ಪತ್ರೆಯ ಸರ್ಜರಿಯ ಮುಖಂಡರಾಗಿಯೂ ಜಾರ್ಜ್ ಕೆಲಸ ಮಾಡುತ್ತಿದ್ದರು.

ಮೊದಲಿನಿಂದಲೂ, ಮಾನವನ ನಡತೆ, ನುಡಿ, ನೀತಿಗೆ ತುಂಬಾ ಬೆಲೆ ಕೊಡುತ್ತಿದ್ದ ಜಾರ್ಜ್ ತಾವೆಂದೂ ಜಾರದಂತೆ ತಮ್ಮ ಮೂವತ್ತು ವರ್ಷಗಳನ್ನು ಕಳೆದಿದ್ದರು. ತಮ್ಮ ಗೆಳೆಯರಿಗೆ ಬಿಡಿಸಲಾರದ ಕಗ್ಗಂಟಾಗಿದ್ದರೂ, ಜಾರ್ಜ್ ಎಂದೂ ಸನ್ಯಾಸಿಯಾಗ ಬಯಸಿರಲಿಲ್ಲ,

ಸ್ಕಾಟ್‌ಲೆಂಡಿನ ಹಳ್ಳಿಯೊಂದರಲ್ಲಿ ವಾರಾಂತ್ಯವನ್ನು ಕಳೆಯಲು ಹೋಗಿದ್ದಾಗ, ಅಕಸ್ಮಾತ್ ಭೇಟಿಯಾದ ಜ್ಯೂಲಿ ಅವರ ಗಮನ ಸೆಳೆದಳು. ಇಪ್ಪತ್ತು ವರ್ಷದ ಹುಡುಗಿ ನಾಚುತ್ತಾ, ಕದದ ಹಿಂದೆ ನಿಂತು ಬಂದವರನ್ನು ನೋಡಿ, ತಾಯಿಯ ಕೈಗೆ ಟ್ರೇ ಕೊಡುವುದನ್ನು ಕಂಡು ಜಾರ್ಜ್ ವಿಸ್ಮಿತರಾದರು. ಹುಡುಕಿದ್ದರೂ ಇಂತಹ ಲಜ್ಜೆಯ ಮುದ್ದೆ ಇಡೀ ಇಂಗ್ಲಿಷ್ ದ್ವೀಪದಲ್ಲೇ ಅಪರೂಪವೆನ್ನಿಸಿತು.

ತಾವಾಗಿ ಹಿರಿಯರ ಅನುಜ್ಞೆ ಪಡೆದು, ಜ್ಯೂಲಿಯನ್ನು ಮದುವೆ ಆಗಿ ಎಡಿನ್‌ಬರೋಗೆ ಮರಳಿದರು. ಗೆಳೆಯರಿಗೆಲ್ಲಾ ವಿಸ್ಮಯ, ಆನಂದ

ಎರಡೂ ಆದವು, ಜ್ಯೂಲಿ ಎಷ್ಟಾದರೂ ಹಳ್ಳಿಯ ಹುಡುಗಿ. ಕೆಲಸ ಕಾರ್ಯದಲ್ಲಿ ಅತಿ ನಿಪುಣೆ. ಯಾರ ಕೆಲಸದ ಮೇಲೂ ಅವಳಿಗೆ ನಂಬಿಕೆ ಸಾಲದಾಗಿ ಎಲ್ಲಾ ಕೆಲಸದವರೂ ಅವರ ಮನೆಗಳಿಗೆ ಮರುಳಬೇಕಾಯಿತು. ಎಲ್ಲವನ್ನೂ ತಾನೇ ಸುಸಜ್ಜಿತವಾಗಿ ಮಾಡಿ, ಗಂಡನಿಗೆ ಹೊತ್ತು ಹೊತ್ತಿಗೆ. ಊಟ ತಿಂಡಿ. ಬೇಕು ಬೇಕಾದುದನ್ನೆಲ್ಲಾ ಮಾಡಿಕೊಡುತ್ತಿದ್ದಳು, ಕೆಲಸಕ್ಕೆ ಜಾರ್ಜ್ ಹೊರಡುವ ವೇಳೆಗೆ, ಸರಿಯಾಗಿ ಇಸ್ತ್ರಿಯಾದ ಬಟ್ಟೆ, ಒಗೆದ ಕಾಲುಚೀಲ, ಕರ್ಚಿಫ್, ಟೈ ಪ್ರತಿಯೊಂದನ್ನೂ ತಾನೇ ನೋಡಿ ಕೊಡುತ್ತಿದ್ದಳು, ಅವಳಿಗೆ ಆಲಸ್ಯವೇ ಕಾಣುತ್ತಿರಲಿಲ್ಲ.

ಜಾರ್ಜ್ ನಗುತ್ತಿದ್ದರು, "ಗಂಡನನ್ನು ಶುದ್ಧ ಶೋಂಭೇರಿ ಮಾಡಿ ಬಿಡುತ್ತಿದ್ದಿ. ಹೀಗಾದ್ರೆ ನಲ್ವತ್ತು ವರ್ಷಕ್ಕೆ ನಾನು ನಾಲ್ಕು ಟನ್ ತೂಗುತ್ತೀನಿ" ಎನ್ನುತ್ತಿದ್ದರು, ಜೂಲಿ ನವವಧುವಿನಂತೆ ಕೆಂಪಾಗಿ ನಗುತ್ತಿದ್ದಳು,

ಹತ್ತು ವರ್ಷ ಮದುವೆ ಜೀವನ ನಡೆಸಿದರೂ ಜೂಲಿ ಮಕ್ಕಳ ತಾಯಿ ಆಗಲಿಲ್ಲ, ಜಾರ್ಜ್ ಅದರ ಬಗ್ಗೆ ಯೋಚಿಸದಿದ್ದರೂ ಜ್ಯೂಲಿ ಹತ್ತಾರು ಸಲ ಗಂಡನಿಗೆ, "ಮಕ್ಳು ಬೇಡವೇನ್ರಿ?" ಅನ್ನುವುದು ಬಿಡಲಿಲ್ಲವಾಗಿ, "ಹ್ಞೂಂ ಬೇಕು, ದೇವ್ರು ಕೊಟ್ಟಾಗ ಆಗ್ಲಿ ಬಿಡು, ಯಾಕೆ ಯೋಚನೆ?" ಎಂದು ಲೋಕಾಭಿರಾಮವಾಗಿ ನುಡಿದು ಬಿಡುತ್ತಿದ್ದರು. ಆದರೆ ಜ್ಯೂಲಿಗೆ ಆ ಮಾತು ಹಿತ ಕಾಣುತ್ತಿರಲಿಲ್ಲ. ಗಂಡ ಆಸ್ಪತ್ರೆಗೆ ಕೆಲಸಕ್ಕೆ ಹೋದ ಮೇಲೆ, ತಾನೇ ತನಗೆ ತಿಳಿದ ಹೆಣ್ಣು ಡಾಕ್ಟರ ಬಳಿ ಹೋಗಿ ತನ್ನನ್ನು ಪರೀಕ್ಷಿಸಿ ಕೊಂಡಳು ಅವಳಲ್ಲಿ ಯಾವ ವಿಧವಾದ ಕೊರತೆಯೂ ಇಲ್ಲವೆಂದು ತಿಳಿದಮೇಲೆ ಮತ್ತೆ ಮುಗ್ಧತೆಯಿಂದ ಗಂಡನಿಗೆ ಹೆಣ್ಣು ಡಾಕ್ಟರು ಹೇಳಿದ್ದನ್ನು ತಿಳಿಸಿ, "ಮತ್ಯಾಕೆ ಮಕ್ಳಾಗಲಿಲ್ಲ?" ಎಂದಳು.

ಮೊದಲ ಸಲ ಜಾರ್ಜ್ ಬೆಚ್ಚಿದರು. ತಮ್ಮ ಹೆಂಡತಿಯ ಬಯಕೆ ತಮ್ಮಿಂದಾಗಿ ಈಡೇರಲಾರದೆ? ಎಂದು ಅನ್ನಿಸಿ ತಮ್ಮನ್ನು

ತಾವೇ ಪರೀಕ್ಷಿಸಿಕೊಂಡರು. ಅವರ ಅನುಮಾನ ನಿಜವಾಗಿಯೂ ಪ್ರತ್ಯಕ್ಷವಾಗಿತ್ತು. ಆದರೆ ಅರಿಯದ ಹಳ್ಳಿಯ ಹುಡುಗಿ ಜ್ಯೂಲಿಗೆ ಹೇಳದಾದರು.

ಅಷ್ಟರಲ್ಲಿ ಜಾರ್ಜರಿಗೆ ಭಾರತಕ್ಕೆ ಬರುವ ಅವಕಾಶ ಸಿಕ್ಕಿ ಇಬ್ಬರೂ ಮದ್ರಾಸಿಗೆ ಬಂದು ಇಳಿದರು. ಬಂದ ಕೆಲವಾರು ತಿಂಗಳು ಜ್ಯೂಲಿ ತನ್ನ ಹಂಬಲ ಮರೆತಳು.

ಹೊಸ ಜಾಗ, ಹೊಸ ಜನರ ಪರಿಚಯುವಾಗತೊಡಗಿತು. ಒಂದು ದಿನ ಮದ್ರಾಸ್ ಬೀಚಿನಲ್ಲಿ ತಮಾಷೆಗೆ ಜಾರ್ಜ್ ಹಸ್ತ ಸಾಮುದ್ರಿಕೆಯವನ ಮುಂದೆ ಕೈ ನೀಡಿದ್ದರು. ಆತ ಹೇಳುವುದೆಲ್ಲಾ ಸಮರ್ಪಕವಾಗಿ ತೋರಿತು.

"ಮಕ್ಕಳಾಗ್ತಾರೆಯ್ಯೆ?" ಜ್ಯೂಲಿ ಪಕ್ಕದಿಂದ ಕೇಳಿದಳು. ಜಾರ್ಜ್ ಚೇಳು ಕಚ್ಚಿದವನಂತೆ ಕೈ ಎಳೆದುಕೊಳ್ಳ ಹೋದರು. ಆದರೆ ಶಾಸ್ತ್ರದವನು ಕೈಯನ್ನು ಬಿಗಿಯಾಗಿ ಹಿಡಿದಿದ್ದ, "ಮೂರು ಮಕ್ಕಳ ಯೋಗವಿದೆ" ಎಂದ.

ಜಾರ್ಜ್ ಅವನ ಮುಂದೆ ಕಾಸು ಹಾಕಿ ಮಡದಿಯೊಂದಿಗೆ ಬೀಚ್ ಕಡೆ ಕಾಲು ಬೆಳೆಸಿಸರು. ಮನಸ್ಸಿನಲ್ಲಿ ಒಂದು ವಿಧವಾದ ನೋವಿನ ಅಲೆ ಎದ್ದಿತ್ತು.

೦ ೦ ೦

ಅಂದು ಬೆಳಿಗ್ಗೆ ಮಹಾಭಾರತದ ಇಂಗ್ಲೀಷ್ ತರ್ಜುಮೆ ಓದುತ್ತಿದ್ದಾಗ ಧೃತರಾಷ್ಟ್ರ, ಪಾಂಡು, ವಿದುರರ, ಜನ್ಮ ವೃತ್ತಾಂತವನ್ನು ತಿಳಿದಾಗ ಅವರ ಮೈಯಲ್ಲ ನವಿರೆದ್ದಿತು. ಮಕ್ಕಳಿಲ್ಲದೆ ಸತ್ತ ವಿಚಿತ್ರವೀರ್ಯನ

ಮಡಿದಿಯರಿಗೆ, ಸಂಯಮ ಶೀಲ ವ್ಯಾಸಮಹರ್ಷಿಗಳು ತಾಯಿ ಆಜ್ಞೆ ಯಂತೆ ಮಕ್ಕಳ ದಾನ ನೀಡಿದ್ದರು. ಮತ್ತೆ ಪಾಂಡವರು....ಪರಪುರುಷರ ಸಂಘದಿಂದ ಹುಟ್ಟಿದರು ಎಂದು ಓದಿದಾಗ ಅವರಿಗೆ ಹೇಗೆ ಹೇಗೋ ಆಯಿತು.

ನಾಲ್ಕಾರು ದಿನ ಕಳೆದ ಮೇಲೆ ಒಂದು ದಿನ ಮಡದಿಯ ಬಳಿ ಕುಳಿತರು. ಗಂಡನ ಮೌನದ ಅರ್ಥ ತಿಳಿಯದ ಜ್ಯೂಲಿ "ಯಾಕೆ ತಲೆ ನೋವೇ?" ಎಂದಳು.

"ಹ್ಞಾಂ....ಇಲ್ಲ...ಜ್ಯೂಲಿ....ನಾನು ಹೇಳಿದ ಹಾಗೆ ಕೇಳ್ತೀಯಾ?" ಜಾರ್ಜ್ ಪೀಠಿಕೆ ಹಾಕಿದರು. ಜ್ಯೂಲಿಗೆ ಗಂಡನ ರೀತಿ ಹೊಸದಾಯಿತು. "ಮತ್ತೆ ಇನ್ಯಾರು ಹೇಳಿದ ಹಾಗೆ ಕೇಳ್ತಿದ್ದೀನಿ ?" ಎಂದಳು.

ಅವರೂ ಉಗುಳು ನುಂಗಿ ಕೊನೆಗೆ ನುಡಿದರು. "ಆದಲ್ಲ... ಇವತ್ತು ರಾತ್ರಿ......ನಾನು ಬೇರೆ ರೂಮ್ನಲ್ಲಿ ಮಲಗ್ತೀನಿ, ಅರ್ಧ ರಾತ್ರೀಲಿ ನಿನ್ನ ಬಳಿ ಬರ್ತೀನಿ. ದೀಪ ಹಾಕ್ಬೇಡಾ, ಮುಟ್ಟಬಾರದು. ನಾನು ಏನು ಮಾಡಿದ್ರೂ ಸುಮ್ನೆ ಕಟ್ಟಿಗೆ ಹಾಗಿರ್ಬೇಕು ಹಾಗಿರ್ತೀಯಾ ಚಿನ್ನ"?

ಜ್ಯೂಲಿಗೆ ಕತ್ತಲಲ್ಲಿ ಮಲಗುವುದೇನೂ ಹೊಸದಾಗಿರಲಿಲ್ಲ. ಆದರೆ ಗಂಡ ಎಂದೂ ಹತ್ತು ವರ್ಷದಿಂದ ಬೇರೆ ಮಲಗಿರಲಿಲ್ಲ. ಹೀಗೆ ಕಡ್ಡಾಯ ವನ್ನೂ ವಿಧಿಸಿರಲಿಲ್ಲ "ಆಗ್ಬಹುದು.... ...ಯಾಕೇಂತ ಹೇಳಿ, ಮತ್ತೆ ನಾನು......ಇವತ್ತು ಒಂದು ಪುಸ್ತಕ ಓದಿದೆ, ಕಾಮಶಾಸ್ತ್ರ ಅಂತ.... ಅದ್ರಲ್ಲಿ ಕತ್ಲಲ್ಲಿ ಗಂಡನ ಜೊತೆ ಮಲಗಬಾರ್ದು ಅಂತ ಬರ್ದಿದ್ದಾರೆ....ಹಾಗೆ ಮಲಗಿದ್ದಾಗ ಮಕ್ಳಾದ್ರೆ ರಿಟಾರ್ಡ್ಡ್, ಆಗೋ ಸಂಭವದ ಜೊತೆ, ವ ನಸ್ನಲ್ಲಿ ಯಾರ ರೂಪು ಮೂಡುತ್ತೋ ಹಾಗೇ ಹುಟ್ಟುತ್ತವಂತೆ ಮತ್ತೆ ನನ್ಗೆ ಹಾಗಿದ್ದಾಗ ಮಗು ಆದ್ರೆ ಇನ್ಯಾರ ತರಹ ಇರೋದು ಬ್ಯಾಡಾಂತ ಅನ್ನಿಸ್ತದೆ ಡಾರ್ಲಿಂಗ್. ನಿಮ್ಮ ಹಾಗೇ ನೀಲಿ ಕಣ್ಣು, ಸಿಲ್ವರೀಕ್ರೀಮ್ ಕೂದಲು ನನ್ನ ಮಗೂಗೆ ಇರ್ಬೇಕು. ಮತ್ತೆ....

ಜಾರ್ಜ್ ಅವಳ ಬಾಯನ್ನು ಅಲ್ಲೇ ಅದುಮಿದರು, ಅವಳ ಮಾತು ಅವರ ಹೃದಯವನ್ನೇ ಛೇದಿಸಿದಂತಾಯಿತು. ಬಲವಂತದ ನಗೆ ಅವರ ಮುಖದಲ್ಲಿ ಮಿಂಚಿತು, "ಇದು......ಒಂಥರ ಔಷಧ ಅಂತ ಯಾರೋ ಏನೋ ಕೊಟ್ಟಿದ್ದಾರೆ ಡಾರ್ಲಿಂಗ್. ನೋಡೋಣಾಂತ.. ...ನಿನ್ನ ಆಸೆ ಫಲಿಸಬಹುದು ಜ್ಯೂಲಿ......"

* * *

ಜ್ಯೂಲಿ ಗರ್ಭಿಣಿಯೆಂದು ತಿಳಿದ ಮೇಲಂತೂ ಜಾರ್ಜ್ ಒಂದು ವಿಧವಾದ ನೋವು–ನಲಿವಿನ ಮಿಶ್ರಣವಾದರು. ಜ್ಯೂಲಿಯ ಪೂರ್ಣ ಆನಂದ ಅವರ ಪಾಲಿಗಿರಲಿಲ್ಲ. ಮಿತ್ರ ಕೇಶವನನ್ನು ಕಂಡಾಗಲೆಲ್ಲಾ ಏನೋ ಸಂಕೋಚ. ಆದರೆ ಕೇಶವ ಮಿತ್ರನ ಸಂಕೋಚವನ್ನು ಅರ್ಥ ಮಾಡಿಕೊಂಡಿದ್ದರಾಗಿ. "ನಾವು ನಿಮಿತ್ತ ಮಾತ್ರರು ಜಾರ್ಜ್, ಕೊಡುವ ದಾನಿ ಬೇರೆ, ಎಲ್ಲಾ ಅವನ ಇಚ್ಛೆ. ಸಂಕೋಚಕ್ಕೆ ಎಡೆಯೇ ಇಲ್ಲ" ಎಂದು ಗೀತೆಯ ಒಂದು ಪ್ರತಿಯನ್ನು ಜಾರ್ಜ್ ಕೈಗೆ ಕೊಟ್ಟು. ಅನೇಕ ಸಲ ಸಂತೈಸಿದ್ದರು. ಜಾರ್ಜ್ ಮಾತನಾಡದಿದ್ದರೂ, ಸ್ವಲ್ಪ ಮಟ್ಟಿಗೆ ಸ್ಥಿರಚಿತ್ತ ರಾಗಲು ಗೀತೆ ಕಾರಣವಾಯಿತು.

ಆದರೂ ಜ್ಯೂಲಿಯ ಹೆರಿಗೆ ದಿನ ಅವರ ಸ್ಥಿರ ಪ್ರಕೃತಿ ಕಾಣದ ಭಯಕ್ಕೆ ಕೈಕಾಲು ಕೊಟ್ಟು ಕುಣಿಸಿತು. ಹೆರಿಗೆ ಆಗಿ ಗಂಡು ಕೂಸೆಂದು ತಿಳಿದಾಗಲೂ ಜಾರ್ಜ್ ಆಸ್ಪತ್ರೆಗೆ ಬರಲು ಹಿಂದೇಟು ಹಾಕಿದರು.

"ಕಂಗ್ರಾಟ್ಸ್, ಮಗುವನ್ನು ನೋಡಿದಿರಾ? ಕೇಶವ ಕೇಳಿದಾಗ ಆ ಧೈರ್ಯ ಬಂದಿಲ್ಲಪ್ಪ. ಹೋಗಿ ನೋಡ್ತೀನಿ. ಜ್ಯೂಲಿ ಕಾದಿರ್ತಾಳೆ... ನಿಮಗೆ ಥ್ಯಾಂಕ್ಸ್ ಹೇಳಬೇಕಾಗಿತ್ತು. ವರದಾನ ಪುರುಷರು....ಬರ್ತಿರಾ ಜೊತೆ?" ಎಂದರು,

ಕೇಶವ್ ಮಿತ್ರನ ಕೈಯನ್ನು ಗಡುಸಾಗಿ ಅದುಮಿ. "ಛೇ ಎಂಥಾ ಮಾತು ಆಡ್ತೀರಿ ಜಾರ್ಜ್ "ಬಿಡ್ತು ಅನ್ನಿ. ಭಗವಂತನನ್ನು ಅಷ್ಟು ಬೇಗ

ನಾವು ಡಾಕ್ಟರುಗಳೇ ಮರೆತರೆ ಮತ್ಯಾರು ನೆನಸ್ತಾರೆ? ನಾವು ನೆನಪಿನ ಹಾಗೆ ಎಷ್ಟು ಸಲ ಆಗುತ್ತೆ ಹೇಳಿ? ಎಂತೆಂತಹ ವಿಚಿತ್ರಗಳನ್ನು ನೋಡ್ತೀವಲ್ಲ" ಎಂದರು.

ಅಂತೂ ಆಸ್ಪತ್ರೆಗೆ ಬಂದು, ವಾರ್ಡಿನ ಒಳಹೊಕ್ಕು ಜ್ಯೂಲಿಯ ಹತ್ತಿರ ಬಂದು, ಮಗುವಿನ ಕಡೆ ದೃಷ್ಟಿ ಹಾಯಿಸಿದ್ದೂ ಆಗಿತ್ತು.

ಮಗು ಬಿಳುಪಾಗಿಯೇನೋ ಇತ್ತು. ಕೇಶವ್ ಸಹ.......ಹಾಲು ಬಿಳುಪಿನ ಮನುಷ್ಯ .. ....ಆದರೆ........

"ಯಾಕ್ರಿ? ಮಗೂನ ಎತ್ಕೊಳ್ಳೋಕೆ ಡಾಕ್ಟರಿಗೆ ಬರದೇನು? ಅಪರೂಪಕ್ಕೆ ಹುಟ್ಟಿದೋನ್ನ ಎತ್ಕೊಳ್ಳಿ, "ಜ್ಯೂಲಿ ಆಜ್ಞಾಪಿಸಿದಳು, ಇಂದು ತಾಯಿ ಆಗಿ ಬಾಜೆತನಕ್ಕೆ ಮೋಕ್ಷಕೊಟ್ಟು, ಜ್ಯೂಲಿ ಗೆಲುವಿನ ಹಂತ ಹತ್ತಿದ್ದಳು,

ನಿಧಾನವಾಗಿ ಜಾರ್ಜ್ ಕೂಸನ್ನು ನಡುಗುವ ಕೈಗಳಿಂದ ಕೈಗೆತ್ತಿಕೊಂಡರು. ಹೃದಯ ಜೋರು ಜೋರಾಗಿ ಬಡಿದುಕೊಂಡಿತು. ಕಣ್ಣಿನ ರೆಪ್ಪೆ ಮುಚ್ಚಿತ್ತಾಗಿ, ಕಣ್ಣು ಕಾಣಲಿಲ್ಲ. ರೆಪ್ಪೆಗೆ ಹುಬ್ಬಿಗೆ ಇನ್ನೂ ಕೂದಲು ಬಂದಿರಲಿಲ್ಲ. ನಿಧಾನವಾಗಿ ಅವರ ಕೈ ತಲೆಯನ್ನು ಮುಚ್ಚಿದ ಕುಲಾವಿಯನ್ನು ಸರಿಸಿತು, ಯಾವುದೋ ಕುರುಡು ಆಸೆ...ಆದರೆ... ಆದರೆ...ಅವರ ಕಣ್ಣು ಎಳೆ ತಲೆ ಬುರುಡೆ ನೋಡುವ ಬದಲು ಅತ್ತಕಡೆ ನಗುತ್ತಾ ನಿಂತಿದ್ದ ಕೇಶವನನ್ನು ನೋಡಿತು,

"ನಿಮ್ಮ ಹಾಗೇನೇ ಸಿಲ್ವರೀಕ್ರೀಮ್ ಕೂದ್ಲು ಡಾರ್ಲಿಂಗ್. ಕಣ್ಣು ಕೂಡಾ...ನಿಮ್ಮ ಹಾಗೇನೇ....ಇಂಗ್ಲಿಷ್ ಛಾನೆಲ್ ತರಹ ಬ್ಲೂ ... ಜ್ಯೂಲಿ ಒಂದೇ ಸಮ ಸಂತೋಷದಿಂದ ಒದರಿದಳು.

ಜಾರ್ಜ್ ಬೆಚ್ಚಿ ಮಗುವನ್ನು ಬಿಗಿಯಾಗಿ ಹಿಡಿದು ಕೊಂಡರು, ಅವರ ಬಿಗಿತ ನೋವಾಗಿ ಮಗು ಅಳುತ್ತಾ ಕಣ್ಣು ಬಿಟ್ಟಿತು....ಅದೇ ನೀಲಿಕಣ್ಣು!! ....ಕೇಶವನಂತೆ ಕಪ್ಪು ಅಲ್ಲ!....ಜ್ಯೂಲಿಯಂತೆ ಬ್ರೌನೂ ಅಲ್ಲ!

ಅವರ ಕಣ್ಣು ಕೇಶವನನ್ನು ಸಾವಿರ ಪ್ರಶ್ನೆಮಾಡಿ ಹಿಂದೆಯೇ ಭಕ್ತಿಯಿಂದ ಜ್ವಾಜ್ವಲ್ಯವಾಗಿ ಕಂಡಿತು. ಕೇಶವ, ಕೊಳಲು ಹಿಡಿದ ಕೇಶವನಾಗಿದ್ದ. "ನಾನು ಋತುಗಳಲ್ಲಿ ವಸಂತ, ತಿಂಗಳುಗಳಲ್ಲಿ ಮಾರ್ಗಶಿರ್ಷ....ಪ್ರಜನಶ್ಚಾಸ್ಮಿ ಕಂದರ್ಪಃ....ಮಯ್ಯೈವೈತೆ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯ ಸಾಚಿನ್"

ಎಂದಂತಾಗಿ ಜಾರ್ಜ್ ಭಾವಪರವಶರಾಗಿ ಕಣ್ಣು ಮುಚ್ಚಿ ಕಣ್ಣು ತೆಗೆದಾಗ. ಅವರ ಕಣ್ಣಲ್ಲಿ ನೀರು ತುಂಬಿತ್ತು. ಕೇಶವ ಹೊರಟು ಹೋಗಿದ್ದರು.

"ಯಾಕೆ ಡಾರ್ಲಿಂಗ್ ಅಳ್ತೀರಾ....ಮತ್ತೆ ಒಂದ್ಮಾತು ಕೇಳ್ಬೇಕೆಂದು ಅಷ್ಟು ದಿನದಿಂದ ಅಂದ್ಕೊಂತೀನಿ ಮರ್ತ್ರೇ ಹೋಗುತ್ತೆ ಡಾರ್ಲಿಂಗ್" ಜ್ಯೂಲಿ ನುಡಿದಾಗ, ಜಾರ್ಜ್ ವಾಸ್ತವಕ್ಕೆ ಇಳಿದು. ಅಳುತ್ತಿರುವ ಮಗುವನ್ನು ಭಾಮೆಯ ಕೈಗಿತ್ತು. ಮಂಡಿಯೂರಿ, ಅವಳ ತಲೆ ಬಳಿ ತನ್ನ ತಲೆ ತಂದು, "ಏನು ಜ್ಯೂಲಿ ಹೇಳು" ಎಂದರು. ಜ್ಯೂಲಿ ತನ್ನ ಕೈಗಳಿಂದ ಗಂಡನ ಕೂದಲು ಸವರಿ, "ಎಂದಿನ .ನೀವು ಏನೇನೋ ಹೇಳಿದ್ರಲ್ಲಾ...ನಾನು ಕತ್ಲಲ್ಲಿ ಕಾಯ್ತಾನೇ ಇದ್ದೆ....ನೀವು ಬರ್ಲೇ ಇಲ್ವಲ್ಲ ಬೆಳಕಾದ ಮೇಲೆ ಬಂದ್ರಿ" ಎಂದಳು.

ಜಾರ್ಜ್ ತಟಕ್ಕನೆ ಮೇಲೆದ್ದರು. ಅವರಿಗೆ ವಿಶ್ವ ಸುತ್ತಿದ ಹಾಗಾಯಿತು. ಮಿತ್ರ ವಿತ್ರನಾಗಿಯೇ ಉಳಿದಿದ್ದ. ಪ್ರಕೃತಿಯನ್ನು ಗೆಲ್ಲಲು ಹೊರಟ ಮಾನವ ಸಣ್ಣ ಕ್ರಿಮಿ ಎನ್ನಿಸಿತು.

"ಎಲ್ಲಾ ಅವನ ಇಚ್ಛೆ" ಎಂದು ಜಾರ್ಜರ ಹೃದಯ ನುಡಿಯಿತು.

—೦೦೦—

# ಆ ಚೈತ್ಯಾಕ್ಷಿಗಳು

ಮಲ್ಲಿಕಾ

ಸದ್ಭಿಸ್ತು ಲೀಲಯಾ ಪ್ರೋಕ್ತಂ ಶಿಲಾಲಿಖಿತಮಕ್ಷರಂ।

ಅಸದ್ಭಿಃ ತಪಥೇ ನೋಕ್ತಂ ಜಲೇಲಿಶಿತಮಕ್ಷರಂ॥

ಈ ಊರಿಗೆ ನನಗೆ ವರ್ಗವಾದಾಗ ನಿಜಕ್ಕೂ ತೀರಾ ಬೇಸರ-ನಿರುತ್ಸಾಹ ಇನ್ನೂ ಏನೇನೋ.... ಹೇಳಿಕೊಳ್ಳಲಾರದಷ್ಟು ಕಿಸಿಗೆ-ಮುಜುಗರ.

ಆದರೂ ಕರ್ತವ್ಯಚ್ಯುತನಾಗಲು ಇಷ್ಟಪಡದೆ ಇಲ್ಲಿಗೆ ಬಂದು ನಿನ್ನೆಯಷ್ಟೆ ಛಾರ್ಜ್‌ತೆಗೆದುಕೊಂಡೆ. ನಾನು ಯಾವತ್ತೂ ಹೊತ್ತಿಗೆ ಮುಂಚೆ ಎದ್ದು ವಾಯು ವಿಹಾರಾರ್ಥ ತಿರುಗಾಡಿ ಬರುವುದು ವಾಡಿಕೆ. ನಿನ್ನೆಯಷ್ಟೆ ಬಂದದ್ದು, ನಾಳೆ ನಾಡಿದ್ದು ಹೊರಹೊರಟರಾಯ್ತು ಎಂಬ ಭಾವ ಮನದಲ್ಲಿ. ಮುಂಜಾವಿನಲ್ಲೇ ಏಳುವ ರೂಢಿಯಿಂದ ಹಾಸಿಗೆಯಲ್ಲಿ ಮಲಗಿರಲಾಗಲಿಲ್ಲ. ಎದ್ದು ಹೊರ ಹೊರಟೆ.

ಪ್ರಾತಃಕಾಲವೂ ಹಿತಕರ; ವಾತಾವರಣವೂ ಹಿತಕರ; ವಿವಿಧ ಪಕ್ಷಿಗಳ ರಾಗಾಲಾಪವಂತೂ ಸುರಮ್ಯ, ಅಂದಮೇಲೆ, ಕಂಡರಿಯದ ಹಾದಿಯಲ್ಲಿ ಬುದ್ಧಿ, ಆದೇಶವೀಯದಿದ್ದರೂ ಕಾಲುಗಳು ಸರಾಗವಾಗಿ ನಡೆದುವು. ಮುಂದೆ ದೂರದಲ್ಲಿ ಭವ್ಯದೇವಾಲಯದ ಗೋಪುರ. ಇಲ್ಲಿಂದ ಅಲ್ಲಿಯವರೆಗೂ ಬಯಲು ಪ್ರದೇಶ. ಅಲ್ಲಲ್ಲಿ ಕೆಲವು ಗಿಡಗಂಟೆಗಳು, ಹೆಮ್ಮರಗಳು

ವಿನಾ ಮನೆ ಮಠಗಳೇನೂ ಕಂಡು ಬರಲಿಲ್ಲ, ನಿರ್ಜನ ಪ್ರದೇಶವಾದ್ದರಿಂದ ಬಲುದೂರ ನಡೆಯುವ ಇಚ್ಛೆ ಮೂಡಿತು ಮನದಲ್ಲಿ. ದೇವಾಲಯದ ವರೆಗೂ ಹಾದಿ ಸಾಗಿದುದೇ ತಿಳಿಯಲಿಲ್ಲ. ದೇವಾಲಯದ ಸನಿಹದಲ್ಲೇ ನಾಲ್ಕೂಕಡೆ ಕಲ್ಲಿನ ಸೋಪಾನಗಳಿರುವ ಸುಂದರ ಪುಷ್ಕರಣಿ. ಮತ್ಸ್ಯ ಸಮೂಹ ಮೆಟ್ಟಿಲಿನ ಅಂಚಿನಲ್ಲೇ ಸುಳಿಯುತ್ತಿದೆ. ಯಾರೋ ಅವುಗಳಿಗೆ ಪುರಿ ಚೆಲ್ಲಿದಾಗ ತೀರದ ಮೇಲೆ ಚೆಲ್ಲಿದ ಸ್ವಲ್ಪ ಕಾಳುಗಳು ದೃಷ್ಟಿಗೆ ಬಿದ್ದುವು ಅವನ್ನು ಹೆಕ್ಕಿ ನೀರಿಗೆಸೆದೆ, ಆ ಕೆಲವೇ ಕಾಳುಗಳಿಗೆ ಬಂಡೆದ್ದು ಬಂದ ಮೀನುಗಳನ್ನು ನೋಡಿ ಕರುಳು ಕರುಣೆಯಿಂದ ಮಿಡಿಯಿತು.

ಅಲ್ಲಿಂದ ಮುಂದಕ್ಕೆ ಸಣ್ಣ–ದೊಡ್ಡ ಮನೆಗಳಿಂದ ಕೂಡಿದ ಊರು.

ಹಿಂದಿಲಿಂದ ಲರಕ್ ಲರಕ್ ಪಾದ ಸಪ್ಪಳ ಕೇಳಿಬಂತು, ಸುಮ್ಮನೆ ಸಹಜವಾಗಿ ಸದ್ದು ಬಂದ ಕಡೆಗೆ ದೃಷ್ಟಿಯನ್ನು ಹೊರಳಿಸಿದರೆ ಸುಂದರ ತರುಣನೊಬ್ಬ ಸನಿಹಕ್ಕೈತರುತಿದ್ದುದು ಕಂಡು ಬಂತು. ಅವನು ನನ್ನ ಮುಖವನ್ನು ನೋಡುತ್ತಲೂ ವಿನಮ್ರತೆಯಿಂದ ಕರಗಳನ್ನು ಜೋಡಿಸಿ "ನಮಸ್ಕಾರ ಡಾಕ್ಟರ್!" ಎಂದ. ತುಟಿಗಳಲ್ಲಿ ಸ್ವಾಗತದ ಕುರುಹಾದ ಮುಗುಳು ನಗೆ ಅರಳಿತು.

ನಾನು ಪ್ರತಿವಂದಿಸಿದೆ "ನಮಸ್ಕಾರ"

"ನೀವು ಈ ಊರಿಗೆ ಹೊಸಬರು. ಇನ್ನೂ ಹೊಸದಾಗಿ ನಮ್ಮ

ಪರಿಚಯವಾಗಬೇಕು. ನನ್ನ ಹೆಸರು ಮಹೇಶ. ನಾನು ಮೈಸೂರು ಯೂನಿವರ್ಸಿಟಿಯ ಪದವೀಧರ. ಪಿ, ಹೆಚ್. ಡಿ. ಮಾಡಿ ಅಲ್ಲೇ ಕೆಲಸ ಮಾಡುತ್ತಿರುವೆ," ಎಂದ ನವಾಗತ ತರುಣ.

"ಓ ತುಂಬಾ ಸಂತೋಷ! ನಾನು ಹಾರ್ದಿಕವಾಗಿ ಕೈ ಕುಲುಕಿದೆ.

"ನಾನು ಇದೇ ಊರಿನವ. ನಿಮಗೆ ನಮ್ಮ ಊರಿನ ಹೊಂದಿಕೆ,..."
ಮಾತು ಅಷ್ಟಕ್ಕೆ ತುಂಡುಗಡಿಯಿತು,

"ಕಾಲಕ್ರಮೇಣ ಆಗಲೇಬೇಕು; ಆಗುತ್ತೆ ಬಿಡಿ. ಲೋಕಾಭಿರಾಮವಾಗಿ ನುಡಿದೆ.

"ಪ್ರಕೃತಿದೇವಿ ವರದಹಸ್ತಗಳಿಂದ ಸಕಲ ಸೌಭಾಗ್ಯವನ್ನೂ ನೀಡಿ ನಮ್ಮನ್ನು ಪೂರ್ಣ ಮನಸ್ಸಿನಿಂದ ಆಶೀರ್ವದಿಸಿದ್ದಾಳೆ. ಪ್ರಕೃತಿದತ್ತವಾದ ಎಲ್ಲವನ್ನೂ ಜನ ಉಪಯೋಗಿಸಿಕೊಳ್ಳಬಲ್ಲರಾದರೆ ಸುಖ ಸಂತೋಷಗಳಿಗೆ ಖಂಡಿತ ಕೊರತೆಯಿಲ್ಲ. ವಿದ್ಯಾದಾರಿದ್ರ್ಯ-ಜ್ಞಾನದಾರಿದ್ರ್ಯಗಳಿಂದ ಪ್ರಗತಿ ತೀರಾ ಕುಂಠಿತ ಅದೇ ವ್ಯಸನ".

"ಕಾಲ ಪಕ್ವವಾಗಬೇಕು".

"ಅಂದರೆ ಯಾವ ತಲೆಮಾರಿಗೋ........ಅಲ್ಲಿಯತನಕ ನಮ್ಮ ಕತೆ?"

"ನಿಮ್ಮಂತಹ ವಿದ್ಯಾವಂತರು ಸುಧಾರಣೆಗಾಗಿ ಪ್ರಯತ್ನಿಸಬೇಕು".

"ನಮ್ಮ ಮಾತಿಗೆ ಬೆಲೆಯಿದ್ದರೆ......"ಮುಂದೇನೋ ಹೇಳ ಬಯಸಿದ್ದರೂ ಮಾತ್ರ ಹೊರಡದೆ ತರುಣ ಉಗುಳು ನುಂಗಿದ; ಮುಖಬಿಂಬ ಮ್ಲಾನವಾಯಿತು,

ಇಬ್ಬರೂ ಒಂಮುಗೂಡಿ ಹೆಜ್ಜೆಹಾಕಿದೆವು. ಹಾದಿ ಬಲುದೂರ ಸಾಗಿತು,

"ಮನುಷ್ಯರಾಗಿ ಹುಟ್ಟಿ ಮಾನವೀಯತೆ ಇಲ್ಲದೆ ಹೋದರೆ ಕಷ್ಟ;

"ಇಲ್ಲಿ ಸ್ಕೂಲು-ಕಾಲೇಜುಗಳಿಲ್ಲವೇ ?"

"ಇವೆ........ಎಲ್ಲವೂ ಇವೆ. ಆದರೆ ಮುಖ್ಯವಾಗಿ ಬುದ್ಧಿಯೇ ಇಲ್ಲ. ಪರಸ್ಪರ ದ್ವೇಷ ಹೊಡೆದಾಟ ಸದಾ ಕಟ್ಟಿಟ್ಟಬುತ್ತಿ. ಅದೇ ಮನಸ್ಸಿಗೆ ಬೇಸರ-ಜಿಗುಪ್ಸೆ".

ಮಹೇಶ ನನ್ನೊಡನೆ ಹಿಂದಿರುಗಿ ಆಸ್ಪತ್ರೆಯವರೆಗೂ ಬಂದು ವಾಯುವಿಹಾರವನ್ನು ಕೊನೆಗಾಣಿಸಿದ. ಅವನು ಉತ್ತಮ ವಾಗ್ಮಿಯೂ ಹೌದು; ವಿಚಾರಶೀಲನೂ ಹೌದು. ನಯ-ವಿನಯಗಳ ಅಭಿವ್ಯಕ್ತಿಯೂ ಹೌದು.

ಊರಿನಲ್ಲೆಲ್ಲಾ ಡಿಂಗೂ ಜ್ವರದ ಪಿಡುಗು ಭಯಂಕರವಾಗಿ ವ್ಯಾಪಿಸಿದುದರಿಂದ ಇನಿತೂ ಬಿಡುವು ದೊರೆಯದಷ್ಟು ಕೆಲಸ. ಆಸ್ಪತ್ರೆಯಲ್ಲಲ್ಲದೆ ಮನೆಮನೆಗಳಿಗೂ ಹೋಗಿ ಬರುವ ಸಂಕಷ್ಟವೂ ಅಂಟಿತು. ಅಪರಾತ್ರಿಯ ಕರೆಗಳಿಗೂ ಕೊರತೆ ಇರಲಿಲ್ಲ. ಊಟ-ನಿದ್ರೆಗಳಿಗೆ ಸಮಯ ಒದಗಿಸಿಕೊಳ್ಳುವುದು ಕಷ್ಟ. ಊರು ಸಣ್ಣದೇನೂ ಅಲ್ಲ. ದಿನವೂ ಹತ್ತಾರು ಮೈಲಿಯ ನಡಿಗೆ ಮತ್ತು ಚಿಕಿತ್ಸೆ. ಈ ಆಸ್ಪತ್ರೆಯಲ್ಲಿದ್ದ ಇನ್ನೊಬ್ಬ ಸಹಾಯಕ ವೈದ್ಯ ವರ್ಗವಾಗಿ ಎಂದೋ ...ಸಧ್ಯ, ನಾನೊಬ್ಬನೇ ವೈದ್ಯ, ಸರಕಾರಕ್ಕೆ ನನ್ನ ತೊಂದರೆಯನ್ನು ನಿವೇದಿಸಿ ಇನ್ನೊಬ್ಬ ಸಹಾಯಕ ವೈದ್ಯನನ್ನು ಕಳುಹಿಸಿಕೊಡಬೇಕೆಂದು ತೀರಾ ಆಗ್ರಹಪೂರ್ವಕವಾಗಿ ಬರೆದುಕೊಂಡೆ. ಆ ಕಿವುಡು ಸರಕಾರ ವೈದ್ಯರನ್ನು ಕಳುಹಿಸುವುದರಲಿ. ಉತ್ತರಿಸುವ ತೊಂದರೆಯನ್ನೂ ತೆಗೆದುಕೊಳ್ಳಲಿಲ್ಲ.

ಕ್ರಮಕ್ರಮೇಣ ಊರೊಳಗೆ ವಿಷಮಶೀತ ಜ್ವರವು ಕಾಣಿಸಿಕೊಳ್ಳತೊಡಗಿತು. ಈಗ ಇದ್ದದ್ದೂ ಹೆಚ್ಚು ಕೆಲಸ. ರೋಗ ನಿರೋಧಕ ಚುಚ್ಚುಮದ್ದು ಕೊಡುವುದೊಂದಾದರೆ ರೋಗ ನಿವಾರಕ ಚಿಕಿತ್ಸೆ ಇನ್ನೊಂದು. ಈ ಎಣೆಯಿಲ್ಲದ ವ್ಯವಹಾರದಲ್ಲಿ ನಾನು ಬಳಲಿ ಬೆಂಡಾದೆ.

ಬೆಳಗಿನ ಒಂಭತ್ತರ ಸಮಯ, ಒಳಹೊರಗೆ ರೋಗಿಗಳು ತುಂಬಿ ಹೋಗಿದ್ದಾರೆ.

ಬರೆಯುತ್ತಿದ್ದ ಚೀಟಿಯನ್ನು ಪೂರ್ತಿಗೊಳಿಸುವ ಮುನ್ನ ಮಾದಕ ದನಿಯೊಂದು ಕಿವಿಯನ್ನು ಮೃದುವಾಗಿ ಮುಟ್ಟಿತು—"ಡಾಕ್ಟರೇ !"

ಒಂದೆರಡು ಗಳಿಗೆಯಲ್ಲಿ ಚೀಟಿಯನ್ನು ಬರೆದು ಮುಗಿಸಿ ತಲೆಯೆತ್ತಿ ನೋಡಿದೆ. ತುಂಬಿದ ಜನಸಂದಣಿಯನ್ನು ದಾಟಿ ಸನಿಹಕ್ಕೆ ಬಂದಿದ್ದಾಳೆ ಹದಿಹರಯದ ಹುಡುಗಿ. ಆ ದುಂಡು ಮುಖಬಿಂಬದಲ್ಲಿ ಅರಳಿದ ಸುಂದರ ಚೈತ್ರಾಕ್ಷಿಗಳು!

ಅಹಾ! ಭಗವಂತನ ಸೃಷ್ಟಿ ಎಷ್ಟು ಅಮೋಘ? ಅವು ಯಾವುದೋ ವಿಶಿಷ್ಟ ಸಂಧರ್ಭಕ್ಕಾಗಿ ಹೇಳಿ ಮಾಡಿಸಿದಂತಹ ಉಜ್ವಲ ಕಾಂತಿಯ ಕಣ್ಣುಗಳು! ಒಂದುಗಳಿಗೆ ಅವುಗಳಿಂದ ದೃಷ್ಟಿಯನ್ನು ಕೀಳ ಲಾಗಲಿಲ್ಲ; ಆ ಮುಹೂರ್ತದಲ್ಲಿ ನಾನು ನಿಜವಾಗಿಯೂ ಮೈ ಮರೆತೆ

"ಡಾಕ್ಟರೇ ಮನೆಯಲ್ಲಿ ಎಲ್ಲರೂ ಜ್ವರದಿಂದ ಮಲಗಿದ್ದಾರೆ. ನಿಮ್ಮನ್ನು ಮನೆಗೆ ಬಂದು ನೋಡಿ ಹೋಗಲು ಹೇಳಿದ್ದಾರೆ ಅಪ್ಪ

ಅದೇ ಮೃದುಮಧುರ ಧ್ವನಿ ಪುನಃ ಮೊಳಗಿತು.

"ಈಗ ಸಾಧ್ಯವಾಗದು ಮಗೂ! ಕೆಲಸ ಮುಗಿದನಂತರ ಬರುವೆ."

ಹೋಗುವಷ್ಟು ಜ್ವರ ಬಂದಿದೆ ಅಪ್ಪನಿಗೆ,ಅಣ್ಣಂದಿರಿಬ್ಬರಿಗೊ

ಮೈ ಸೀ ದು

ಜ್ವರ. ತುಂಬಾ ಭಯವಾಗುತ್ತೆ. ಅಮಾಯಕ ಧ್ವನಿಯಲ್ಲಿ ದೈನ್ಯತೆಯ ಝರಿ ಹರಿದು ಬಂದಾಗ ಕಣ್ಣುಗಳಲ್ಲಿ ಭಾವುಕತೆಯ ಛಾಯೆ ಇಣಕಿಣಕಿ ಮಾಯವಾಯಿತು.

"ಕೆಲಸವಾದನಂತರ ಬಂದು ನೋಡುವೆ.

"ಬೇಗ......ಮುಂದೆ ಮಾತು ಹೊರಡದೆ ತುಟಿಕಚ್ಚಿದಳು ಹುಡುಗಿ.

"ಆಗಲಮ್ಮಾ- ಆಗಲಿ"

ಅವಳು ಕೊನೆಯ ನೋಟ ಬೀರಿದಾಗ ನಿಜವಾಗಿಯೂ ಆ ಮಿಂಚುಗಣ್ಣಿನ ಹೊಳಪಿನಲ್ಲಿ ಎಂತಹ ಸತ್ಯ ಸೌಂದರ್ಯವಿತ್ತು? ಬಹುಶ;

ನಾನು ಇದುವರೆವಿಗೂ ಇಂತಹ ಸುಂದರ ಕಣ್ಣುಗಳನ್ನು ನೋಡಿಯೇ ಇರಲಿಲ್ಲ ಅಂತರಂಗಿಕವಾಗಿ ಎಷ್ಟು ಅಪರೂಪದ ಕಣ್ಣುಗಳು ಎಂದು ಕೊಂಡೆ ಯಾರಾದರೂ ಆಶುಕವಿಗಳು ಪ್ರತ್ಯಕ್ಷವಾಗಿ ಗಮನಿಸಿದ್ದ ಪಕ್ಷದಲ್ಲಿ ಎಂತಹ ಕಾವ್ಯಮಯ ವರ್ಣನೆ ಹೊರಬೀಳುತ್ತಿತ್ತೋ .... ಏನೋ.

ಅವಳು ಹಿಂದಿರುಗುವ ವೇಳೆಗೆ ತಲೆಬಾಗಿಲಲ್ಲಿ ಮಹೇಶ ಎದುರಾದ. ಒಂದೇ ಬಾರಿಗೆ ಇಬ್ಬರ ಮುಖಗಳೂ ಮಂದಾರ ಪುಷ್ಪದಂತೆ ಅರಳಿ ಪ್ರಸನ್ನವಾದುವು

"ನೀನೇಕೆ ಬಂದೆ? ಮನೆಯಲ್ಲಿ ಇನ್ನಾರೂ ಇಲ್ಲವೇ?" ಎಂದು ಅಚ್ಚರಿಯಿಂದ ಹುಬ್ಬೇರಿಸಿ ಕೇಳಿದ. ಮಹೇಶ.

"ಅಪ್ಪನಿಗೂ ಜ್ವರ" ಅಣ್ಣಂದಿರಿಗೂ ಜ್ವರ ಅದಕ್ಕೇ ಬಂದೆ."

"ಹಾಗಾದರೆ ಡಾಕ್ಟರಿಗೆ ಹೇಳಿದೆಯಾ ಲಲೀ?."

"ಹ್ಞೂ..." ಪ್ರಸನ್ನಮಯಿಯಾಗಿ ನುಡಿದಳು ಅವಳು ಆಗ... ಆಗ...ಆ ಮುಹೂರ್ತದಲ್ಲಿ ಆನಂದವನ್ನು ಪರಮಾನಂದಿತಗೊಳಿಸುವಂತಹ ಅಪೂರ್ವ ಸನ್ನಿವೇಶವನ್ನು ನಾನು ಕಂಡೆ.

ಅವಳು ಮಿಂಚಿನಂತಹ ಕುಡಿನೋಟ ಬೀರಿ ಹೊರಟಳು.

ಮಹೇಶ್ ಅಂತರತವೆಲ್ಲಾ ಹಚ್ಚ ಹಸುರಾಗಿ ಉಕ್ಕೇರಿ ಬಂದಂತೆ ಹಸನ್ಮುಖಿಯಾಗಿ ಅಂದ

"ನೆನ್ನೆಯಿಂದ ನನಗೂ ಜ್ವರ ಸಾರ್! ಮೈಕೈ ನೋವು ತಲೆ ನೋವು ...."

"ಓ! ನಿಮಗೂ ಅಂಟಿತೇ ಈ ಪಿಡುಗು?"

"ಹೌದು....ಅಂಟು ರೋಗ. ಅಂದಮೇಲೆ..."

ಹೊರರೋಗಿಗಳ ಚಿಕಿತ್ಸೆ ಮುಗಿಸುವಾಗ ಮಧ್ಯಾಹ್ನ ಮೂರು ಗಂಟೆಯಾಗಿತ್ತು.

* * *

ದೇವಸ್ಥಾನದ ಮಗ್ಗುಲಿಗೇ ಭೀಮಣ್ಣನ ಮನೆ. ಹುರಿಮೀಸೆಯ ಹಿರಿಯ ಕಟ್ಟಾಳುಗಳು ಜ್ವರದ ಕಾವಿನಿಂದ ಬೇಯುತ್ತಿದ್ದರು. ಹಳೆಯ ಕಾಲದ ಮನೆ. ಗಾಳಿ ಬೆಳಕುಗಳಿಗೆ ತೀವ್ರ ಅಭಾವ. ಒತ್ತಂಕೆಯಲ್ಲಿದ್ದ ಸ್ತ್ರೀಯರು ಅಲ್ಲಲ್ಲೇ ಕಣ್ಮರೆಯಾದರು, ರೋಗಿಗಳಿಗೆ ಸೂಜಿಮದು ಕೊಡುವಾಗ ನನಗೆ ಸಹಾಯಕಳಾಗಿ ಓಡಾಡುತಿದ್ದುದು ನಿಡುಗಣ್ಣಿನ ಹುಡುಗಿ ಒಬ್ಬಳೇ. ಔಷಧಿ-ಪಥ್ಯ ಪಾನಾದಿಗಳನ್ನು ಕುರಿತು ತಿಳಿಯ ಹೇಳಿದೆ. ಏನೋ ಒಂದು ರೀತಿಯಲ್ಲಿ 'ಹ್ಞೂ' ಗುಟ್ಟಿದಳು ಲಲಿತ.

"ಮತ್ತೆ ಬರುವಿರಾ ಡಾಕ್ಟರ್?" ಕೇಳಿದ ಭೀಮಣ್ಣ.

"ಮೂರು ದಿನ ಈ ಔಷಧಿ ತೆಗೆದುಕೊಳ್ಳಿ, ನೋಡೋಣ. ಅಷ್ಟರಲ್ಲೇ ಗುಣವಾಗಬಹುದು".

ನಾನು ಹೊರಟೆ. ಆ ಸುಂದರ ಚುರುಕು ನೋಟ ಬೀಳ್ಕೊಟ್ಟಿತು. ಹಾ! ದೈವಸೃಷ್ಟಿಯ ವಿಜಯ ಘೋಷಣೆ!

ಅಲ್ಲಿಂದ ಹಿಮ್ಮರಳುವಾಗ ಇನ್ನೂ ಕೆಲವು ಕಡೆಗಳಲ್ಲಿ ರೋಗಿಗಳನ್ನು ನೋಡಿದ ನಂತರ ಮನೆ ಸೇರಿದೆ. ಸ್ವಲ್ಪಹೊತ್ತು ಉರುಳಿರಲಿಕ್ಕಿಲ್ಲ ಬಾಗಿಲಲ್ಲಿ ಕಟ ಕಟ ಸದ್ದು. ಒಮ್ಮೆಗೇ ಜುಗುಪ್ಸೆಯಿಂದ ಮನಸ್ಸು ಮುದುಡಿತು. ಏಳಲಾರದೇ ಎದ್ದು ಕದ ತೆರೆದೆ. ಮಹೇಶ ಇಬ್ಬರು ಗಾಯಾಳುಗಳ ಸಮೇತ ಕಾದಿದ್ದ. ಮುಖಬಿಂಬ ಬಾಡಿ ತುಂತುರು

ತುಂತುರಾಗಿ ಸ್ವೇದ ಬಿಂದುಗಳು ಮೂಡಿದ್ದುವು. ಆತ್ಮ ವಿಸ್ಮೃತನಂತೆ, ಭ್ರಮಿತನಂತೆ ಅವನು ಕಂಡುಬಂದ.

"ಏನಪ್ಪಾ, ಇದು ಹೇಗಾಯಿತು?"

ಅವನು ಹೇಳಲಾರದೆ ಹೇಳಿದ "ಡಾಕ್ಟರ್! ಭೀಮಣ್ಣನ ಮಕ್ಕಳ ಗದ್ದೆಗೆ, ನುಗ್ಗಿ ಹಿಗ್ಗಾಮುಗ್ಗಾ ಹೊಡೆದು ಬಡಿದು ಪ್ರಾಣಹಿಂಸೆ ಪಡಿಸಿದ ರೀತಿ ಇದು, ಎರಡು ವರ್ಷಗಳಿಂದ ಇದೇ ಗೋಳು ನೋಡಿ. ನಾವು ನಮ್ಮಭೂಮಿಯಲ್ಲಿ ಅವರ ಒಕ್ಕಲಾಗಿ ಇಪ್ಪತ್ತು ವರ್ಷಗಳಿಂದ ದುಡಿದು ಅವರಿಗೆ ಹೇಳಿ-ದೇಣಿಗೆ ಕೊಟ್ಟವರು. ಇತ್ತೀಚಿನ ಭೂಮಿ ಕಾಯಿದೆಯಿಂದ ಜಮೀನು ನಮ್ಮ ಪಾಲಾದುದೇ ದ್ವೇಷಾಸೂಯೆಗಳಿಗೆ ಕಾರಣ. ಈ ರಾಣಾರಂಪ ಸಾಃಾಗಿದೆ. ಇದೇ ತೀರಾ ದುರದೃಷ್ಟಕರ. ಈ ಪ್ರಸಂಗ ಹೇಳಿಕೊಳ್ಳಲು ನಾಚಿಕೆಯಾಗುತ್ತೆ....." ತುಂಬಾ ಕಳಕಳಿಯಿಂದ ವಿಜಾತೀಯ ವಾಗಿ ಹೊರಟಿದ್ದ ದನಿಯನ್ನು ಗುರುತಿಸಿ ಅತ್ಯಾಶ್ಚರ್ಯದಿಂದ ನಾನೆಂದೆ.

"ಅರೆ ! ಆಗಲೇ ಇಬ್ಬರೂ ಹಾಸಿಗೆ ಹಿಡಿದು ಮಲಗಿದ್ದರು ! ಔಷಧಿ ಕೊಟ್ಟು ಬಂದಿದ್ದೆ, ಈಗಾಗಲೇ ದೊಂಬಿ ಚೆನ್ನಾಗಿದೆ !"

"ಮಹಾ ಧೂರ್ತರು !. ಈ ಕಾಯಿಲೆ ಅವರನ್ನೇನು ಮಾಡೀತು ? ನಮ್ಮವರು ಭೂಮಿಗಿಳಿಯುವುದೇ ಕಷ್ಟ. ನಾನು ಕಳೆದ ತಿಂಗಳೇ ಮೈಸೂರಿಗೆ ಹೊರಡಬೇಕಿತ್ತು, ಈ ಹಗರಣದಿಂದಾಗಿ ಉಳಿದೆ. ಇವರಿಗೆ ಕಟ್ಟಬೇಕಾದ ಪರಿಹಾರಧನವನ್ನು ಆಗಲೇ ಸರಕಾರಕ್ಕೆ ಕಟ್ಟಲಾಗಿದೆ. ಆದರೂ ಜಿದ್ದು ಬಿಡುವವರಲ್ಲ. ದ್ವೇಷಸಾಧನೆಯಲ್ಲಿ ನಿಸ್ಸೀಮರು !"

"ತುಂಬಾ ವಿಶಾದಕರ".

"ಇದುವರೆಗೆ ಕುಳಿತು ಉಂಡವರು. ಈಗ ಹೊಲದಲ್ಲಿ ಮೈಬಾಗಿ ದುಡಿಯುವುದು ಕಷ್ಟ .......ಅದರಿಂದಾಗಿಯೇ ರೋಷ—ಜಿದ್ದು".

ಗಾಯಾಳುಗಳ ಚಿಕಿತ್ಸೆ ಕೈಕೊಂಡೆ. ಮುಖ, ತಲೆ. ಬೆನ್ನುಗಳ ಗಾಯಗಳಲ್ಲಿ ನೆತ್ತರು ಜಿನುಗುತ್ತಿತ್ತು. ಚಿಕಿತ್ಸೆ ಮುಗಿಸಿ ಕೇಳಿದೆ "ಇದು ನಡೆದುದು ಯಾವಾಗ ?"

"ಈಗಷ್ಟೆ........ಗದ್ದೆಯಿಂದ ಹೀಗೆಯೇ ಕರೆತಂದೆ."

ನಾನು ಮಾತಾಡದೆ ಮುಗುಳು ನಕ್ಕೆ.

೦ ೦ ೦

ಇತ್ತೀಚಿನ ದಿನಗಳಲ್ಲಿ ರೋಗದ ಪಿಡುಗು ಸ್ವಲ್ಪ ಹತೋಟಿಗೆ ಬಂದುದರಿಂದ ನನ್ನ ಕೈಗಳಿಗೆ ಸ್ವಲ್ಪ ಬಿಡುವು, ದಿನವೂ ಬೆಳಗ್ಗೆ ವಾಯುವಿಹಾರಾರ್ಥ ತಿರುಗಾಡಲು ಹೋದಾಗ ಮಹೇಶನೂ ಕೂಡಿ ಕೊಳ್ಳುತ್ತಿದ್ದ. ಅವನ ಸಹಕೂಟದಿಂದ ಊರಿನ ವಿದ್ಯಮಾನಗಳು ತಿಳಿಯುತಿದ್ದುವು. ನಮ್ಮ ನಮ್ಮ ಸ್ನೇಹಬಂಧವೂ ಬಲಿಯ ತೊಡಗಿತು.

ಈ ದಿನ ಮಹೇಶ "ನಾನು ನಾಲ್ಕಾರು ದಿನಗಳಲ್ಲಿ ಮೈಸೂರಿಗೆ ಹೊರಡುವ ಯೋಜನೆಯುಲ್ಲಿರುವೆ, ಪುನಃ ನಮ್ಮ ನಮ್ಮ ಭೇಟಿ ಇನ್ನಾವಾಗಲೋ......."ಎಂದ.

"ಇನ್ನೂ ನಾಲ್ಕಾರು ದಿನ ಇರುತ್ತೀರಷ್ಟೆ?"

"ಇಲ್ಲ.......ಇಂದು ಅಕ್ಕನ ಮನೆಗೆ ಹೊರಡುವೆ. ಇಲ್ಲಿಂದ ಮುವ್ವತ್ತು ಮೈಲಿ ದೂರದಲ್ಲಿರುವ ರಾಯಪುರದಲ್ಲಿದ್ದಾಳೆ. ಅಲ್ಲಿ ಮೂರು ನಾಲ್ಕು ದಿನ ಕಳೆದು ಬಂದರೆ ಇಲ್ಲಿ ಪೆಟ್ಟಿಗೆ ಕಟ್ಟಿ ಹೊರಡುವುದಷ್ಟೆ......"

"ನಿಮ್ಮ ಸಹಕೂಟ ನನಗೆ ಹಿತವೆನಿಸುತ್ತಿತ್ತು. ಈ ಊರಿನಲ್ಲಿ ಇನ್ನಾರಿದ್ದಾರೆ ಹೀಗೆ?"

"ನನಗೂ ಈ ಕೊರತೆ ಕರುಳು ಮಿಡಿಸುತ್ತಿದೆ."

ಇಬ್ಬರ ಮುಖದಲ್ಲೂ ಮುಗುಳು ನಗೆ ಮೂಡಿತು. ಸ್ವಲ್ಪ ದೂರ ಮೌನಗತಿಯಲ್ಲಿ ಸಾಗಿತು ಹಾದಿ. ಅನಂತರ ಅವನೇ ಮೌನಮುರಿದೆ

"ಡಾಕ್ಟರ್! ಇನ್ನೊಂದು ಮಾತು, ನಾವು ಭೀಮಣ್ಣನವರಲ್ಲಿ ಸಖ್ಯ ಭಾವದಿಂದಿದ್ದಾಗ ಅವರಲ್ಲಿಗೆ ಆಗಾಗ ಹೋಗಿ ಬರುತಿದ್ದುದುಂಟು. ಆಗಿ ನಿಂದಲೂ ಅವರ ಮಗಳು ಲಲಿತಳಿಗೂ ನನಗೂ ಎಲ್ಲಿಲ್ಲದ ಸ್ನೇಹ. ಇಬ್ಬ ರಿಗೂ ದಂಪತಿಗಳಾಗುವ ಇಚ್ಛೆ. ಈಗಿನ ಸಂದರ್ಭದಲ್ಲಿ ಇದು ಸಾಧ್ಯ ವಾಗದ ಮಾತು. ನಮಗಿದು ತುಂಬಾ ಸಂಕಟಪ್ರದ. ಅವಳು ತಾಳ ಲಾಗದ ದುಃಖಕ್ಕೀಡಾಗಿದ್ದಾಳೆ. ಮುಂದೆ ಇದು ಯಾವ ರೂಪ ತಳೆಯುತ್ತೋ ತಿಳಿಯದು. ದೇವರೇ ದಾರಿ ತೋರಬೇಕು."

"ಸಧ್ಯ. ಈವಿಚಾರ ನಿಮ್ಮಗಳ ಪರಸ್ಪರ ಸ್ನೇಹ ಸಂಬಂಧಕ್ಕೆ ಸುಗಮ ದಾರಿ. ನಾಲ್ಕು ಮಂದಿ ಕೂಡಿ ಆಗ ಮಾಡಿಸಿದರೆ ಒಳ್ಳೆಯದು."

ಅವನು ಅತ್ಯಂತ ಖಿನ್ನಮುಖಿಯಾಗಿ ಗೋಣು ಆಡಿಸುತ್ತ "ಯಾರ ಮಾತಿಗೂ ಮಣಿಯುವವರಲ್ಲ ಭೀಮಣ್ಣ" ಎಂದ. ದನಿ ದುಃಖಗದ್ಗದ ವಾಗಿತ್ತು.

ಹಾಗಾದರೆ....ನಾನೇಕೆ ಈ ವಿಚಾರದಲ್ಲಿ ಪ್ರವೇಶಿಸಬಾರದು ಎಂಬ ವಿಚಾರ ತಲೆಯನ್ನು ಹೊಕ್ಕಿದುದರಿಂದ ಅಲ್ಲಿಗೇ ಸುಮ್ಮನಾದೆ.

"ಅವಳಿಗೆ ಇಂದಿಗೆ ಹದಿನೆಂಟು ತುಂಬುತ್ತದೆ. ನಾನು ರಾಯಪುರಕ್ಕೆ ಹೋದ ನಂತರ ಅವಳು ನನ್ನನ್ನು ಮದುವೆಯಾಗುವುದಾಗಿ ಘೋಷಿಸು ತ್ತಾಳೆ. ಅವರೊಪ್ಪದಿದ್ದರೆ ಮನೆ ಬಿಟ್ಟು ಹೊರಡಲು ಸಿದ್ಧ. ಇದು ನಮ್ಮ ನಮ್ಮ ನಿರ್ಧಾರ."

"ಹಾಗೋ....?" ಎಂದು ಸ್ವಲ್ಪಯೋಚಿಸಿ ನಾನೆಂದೆ"ಅದು ಸುಲಭ ಮಾರ್ಗ."

"ಅದು ಹೊರತು ಅನ್ಯಮಾರ್ಗವಿಲ್ಲ." ತೀರಾ ವಿಷಣ್ಣಭಾವದಿಂದ ನುಡಿದ ಮಹೇಶ್. ಒಣಗಿ ಶುಷ್ಕವಾದ ತುಟಿಗಳನ್ನು ನಾಲಿಗೆಯಿಂದ ಒರಿಸಿಕೊಂಡು ಪುನಃ ಅಂದ ಭಗವಂತನ ಕೃಪೆಯಿಂದ ಕೈಗೂಡಿ ಬರಬೇಕು ಅಷ್ಟೆ,"

"whish you best of luck!" ಅತ್ಯಂತ ಹಾರ್ದಿಕವಾಗಿ ನಾನು ಕೈಕುಲುಕಿದೆ.

"Thank you doctor!"

* * *

ಲಲಿತ ಒಳ ಹೆಜ್ಜೆಯಿಟ್ಟಳು. ಕಂದಿ ಕುಂದಿ ಬಾಡಿ ವಿವರ್ಣವಾದ ಮುಖಬಿಂಬ, ಮಿಂಚು ಗಣ್ಣುಗಳಲ್ಲಿ ಅತೀವ ಶೋಕ ಛಾಯೆ, ಭಾರವಾದ ಹೆಜ್ಜೆಗಳನ್ನು ಇಡಲಾರದೆ ಇಡುತ್ತಿದ್ದಾಳೆ. ಮನಃ ಪ್ರಾಣಗಳು ನೋವಿನ ಆಗರವಾಗಿವೆ, ನಾನು ಮುಹೂರ್ತದಲ್ಲೇ ಅವಳ ಸಂಕಷ್ಟವೇನೆಂಬುದನ್ನು ಅರಿತುಕೊಂಡೆ, ಚಿಗರಿಯಂತಹ ಹುಡುಗಿಯಸ್ಥಿತಿಗತಿ ಕರುಣಾಜನಕವಾದುದು ಮನವನ್ನು ಇರಿಯಿತು.

"ಏನಮ್ಮಾ? ಏಕೆ ಹೀಗಿದ್ದಿ?

"ಕೈ ಗಾಯವಾಗಿತ್ತು. ತುಂಬಾ ನೋವು. ಮದ್ದಿಗಾಗಿ ಬಂದೆ."

ನೋವಿನ ಆಗರವಾಗಿಯೂ ತೋರಿಕೊಳ್ಳಲಿಚ್ಛಿಸದೆ ಸಹಜವೆಂಬಂತೆ ನುಡಿದುದನ್ನು ನಾನು ಸೂಕ್ಷ್ಮವಾಗಿ ಗಮನಿಸಿದೆ. ಅವಳು ಬಲಗೈಯನ್ನು ಮುಂದೆ ಮಾಡಿದಳು. ಮುಂಗೈ ಮೇಲೆ ಒಂದೂವರೆ ಇಂಚಿನಷ್ಟು ಕಡಿದ ಗಾಯ. ನಾನು ಗಾಯವನ್ನು ಪರೀಕ್ಷಿಸಿ ಕೇಳಿದೆ "ಇದು ಹೇಗಾಯ್ತು"

ಹುಡುಗಿ ಏನೋ ಹೇಳಲು ತೊದಲಿ ಸುಮ್ಮನಾದಳು. ಅಂತ ರಂಗದ ನೋವು ಮುಖಬಿಂಬದಲ್ಲಿ ಮಿನುಗಿ ಮಾಯವಾಯಿತು.

"ನೀನು ಎಡಚಳೇ?"

"ಅಲ್ಲ" ಮೆಲ್ಲನೆ ತಲೆಯಾಡಿಸಿದಳು ಹುಡುಗಿ, ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಳ್ಳುತ್ತ,

"ಹಾಗಾದರೆ ಬಲಗೈಗೆ ಪೆಟ್ಟು ಬೀಳಲು ಕಾರಣ?"

ಅವಳು ಒಂದೆರಡುಗಳಿಗೆ ಮನದಲ್ಲೇ ಯೋಚಿಸಿ ಒಂದು ಕಲ್ಪನೆಯ ಕತೆಯನ್ನು ಕಟ್ಟಿ ಸಹಜವಾದ ದನಿಯಲ್ಲಿ ಬಿತ್ತರಿಸಿದಳು. "ಮನೆಯಲ್ಲಿ ಮೇಗಳ ಹಲಿಗೆಯ ಮೇಲೆ ಕತ್ತಿಯಿತ್ತು. ಸಾಮಾನು ತೆಗೆಯಲು ಕೈ ಹಾಕಿದಾಗ ಅದು ಕೆಳಗೆ ಬಿತ್ತು.

"ಅದು ಕಾಲಿನ ಮೇಲೆ ಬೀಳಬೇಕಿತ್ತು, ಕೈಗೆ ಬಿದ್ದುದು ಹೇಗೆ"?

"ಕೆಳಗೆ ಬೀಳುವುದನ್ನು ತಡೆ ಹಿಡಿಯಲು ಕೈ ಅಡ್ಡ ಹಿಡಿದುದು ತಪ್ಪಾಯ್ತು."

ಕತೆಯನ್ನು ಸೃಷ್ಟಿಸುಲ್ಲಿಯೂ ಆಕೆ ತೋರಿದ ಜಾಣ್ಮೆಯನ್ನು ಮೆಚ್ಚಿ ಕೇಳಿದೆ "ಗಾಯ ನೋಡಿದರೆ ಆಕಸ್ಮಿಕ ಎನಿಸುವುದಿಲ್ಲ. ನಿಜ ಹೇಳು, ಹೇಗೆ ಪೆಟ್ಟಾಯ್ತು."

"ಹೋಗಲಿ ಬಿಡಿ; ಏನೋ ಗ್ರಹಚಾರ ಕೆಟ್ಟಿತು. ಆಗಬೇಕಾದುದು ಆಯ್ತು."

ಅವಳನ್ನು ಒಳಕೋಣೆಗೆ ಕರೆದೊಯ್ದು ಗಾಯಕ್ಕೆ ಹೊಲಿಗೆ ಹಾಕುವ ಮುನ್ನ ಕೇಳಿದೆ,

"ಇದು ನಿನ್ನೆ ಮೊನ್ನೆ ಆದ ಗಾಯ, ಈ ವರೆಗೆ ಏಕೆ ಸುಮ್ಮನಿದ್ದೆ?"

"ಬರಲಿಕ್ಕಾಗಲ್ಲ. ವಿಪರೀತ ತಲೆನೋವಿತ್ತು. ಮಲಗಿಬಿಟ್ಟೆ."

ಬ್ಯಾಂಡೇಜು ಬಿಗಿದನಂತರ ಅವಳು ಕೇಳಿದಳು. ನೋವಿಗೆ ಹಚ್ಚುವ ಮುಲಾಮು ಬೇಕಾಗಿದೆ," ದನಿ ಬಾವಿಯಾಳದಿಂದ ಹೊರಬಿದ್ದಂತೆ ಹರಿದು ಬಂತು.

"ಏಕೆ, ಇನ್ನೂ ಬೇರೆ ಕಡೆ ಪೆಟ್ಟಾಗಿದೆಯೇ?"

"ಹೌದು......ನಾನು ಮನೆಯಲ್ಲಿಯೇ ಹಚ್ಚಿಕೊಳ್ಳುವೆ."

"ಪೆಟ್ಟಾದ ಭಾಗ ತೋರಿಸು. ನಾನು ನೋಡದೆ ಔಷಧ ಕೊಡಲಾರೆ."

ಅವಳು ಸಂಕೋಚಿಸುತ್ತಲೇ ಕಾಲು-ತೊಡೆಗಳಲ್ಲಿ ಮೂಡಿದ ಹಸುರು ಬಾಸುಂಡೆಗಳನ್ನು ತೋರಲಾರದೇ ತೋರಿದಳು. ಒಡನೆ ಮಹೇಶನ ವಿಚಾರಧಾರೆ ತಲೆಯಲ್ಲಿ ಸುಳಿದಳಿಯಿತು. ಇಂತಹ ಕುಸುಮ ಕೋಮಲೆಗೆ ಈ ಉಗ್ರ ಶಿಕ್ಷೆ ? ಧೂರ್ತರು........ ಪಿಶಾಚಿಗಳು ........ಅಧಮಾಧಮರು! ಇನ್ನೂ ಏನೇನೋ ಶಬ್ದ ಕೋಟಿ ಮನಃ ಪಥದಲ್ಲಿ ಹಾದು ಹೋದುವು. ಅಬೋಧ ಬಾಲೆಗಾಗಿ ಮನಸ್ಸು ಮರ್ಮರ ಮರುಗಿತ್ತು. ನಾನು ಬಾಯಿ ಬಿಡುವುದರೊಳಗಾಗಿ ಅವಳು ಆತುರ ಕಾತರಗಳಿಂದ "ದಯವಿಟ್ಟು ಬೇಗನೆ ಕೊಡಿ; ಹೋಗಬೇಕು" ಎಂದಳು. ಮಿಂಚುಗಣ್ಣಿನ ಕಾತರಭಾವ ನನ್ನ ಅಂತರಾಳವನ್ನು ಈಟಿಯಂತೆ ಇರಿಯಿತು. ಬಾಸುಂಡೆಗಳಿಗೂ ಮದ್ದು ಬಳಿದು ಹೇಳಿದೆ.

"ಎರಡು ಮೂರು ದಿನಗಳ ಹಿಂದೆಯೇ ಆದ ನೋವು, ಈ ವರೆಗೆ ನೀನು ಸುಮ್ಮನಿದ್ದುದು ತಪ್ಪು;"

"ಹಾಗೆಯೇ ಗುಣವಾಗಬಹುದು ಎಂದುಕೊಂಡೆ. ನೋವು ದಿನದಿನಕ್ಕೂ ಹೆಚ್ಚುತ್ತಲಿದ್ದುದರಿಂದ ಬರಬೇಕಾಯ್ತು ಬಂದೆ." ಒಣಗಿದ ತುಟಿಗಳನ್ನು ಬಾರಿಬಾರಿಗೂ ನಾಲಿಗೆಯಿಂದ ಒರಸಿಕೊಳ್ಳುತ್ತ ನುಡಿದಳು. ಒಡಲ ಸಂಕಟವೆಲ್ಲಾ ಮುಖ ಮುದ್ರೆಯಲ್ಲಿ ದಪ್ಪದಪ್ಪ ಅಕ್ಷರಗಳಲ್ಲಿ ಮೂಡಿತ್ತು.

ನಂಜುಹಾರಿ ಇಂಜಕ್ಷನ್ ಮತ್ತು ನೋವು ಶಮನಕಾರಿ ಮಾತ್ರೆಗಳನ್ನು ಕೊಟ್ಟೆ. ಮಾತ್ರೆಯನ್ನು ಇಲ್ಲೇ ನುಂಗಿ ನೀರು ಕುಡಿದು "ನಮಸ್ಕಾರ ಡಾಕ್ಟರೇ ! ತುಂಬ ಉಪಕಾರವಾಯ್ತು" ಆ ತಕ್ಷಣ ಕಂಠಾವರೋಧವಾಗಿ ಮಾತು ನಿಂತಿತು, ಹುಡುಗಿ ಹೊರಟೇ ಬಿಟ್ಟಳು.

ನನ್ನ ಒಡಲ ಬಳ್ಳಿ ಬಿಸಿಲಿಟ್ಟಿದ ಮಂಜಿನಂತೆ ಕರಗಿ ದ್ರವೀಭೂತ ವಾಯಿತು.

"ಮಗೂ ! ನಿನಗೆ ನನ್ನಿಂದೇನಾದರೂ ಸಹಾಯಬೇಕೆ?" ಎಂದೆ, ಸಹಾನುಭೂತಿಯಿಂದ.

ಅವಳು ಹಿಂತಿರುಗಿ ಹುಬ್ಬೆತ್ತಿನೋಡಿದಳು. ಮುಖ ಕಣ್ಣುಗಳಲ್ಲಿ ಭಾವವಿಭಾವದ ತೇಜ ತಳಕ್ಕನೆ ಸುಳಿದು ಮಾಯವಾಯಿತು. ತಾನು ಬಂದು ಹೋದದು ಗೋಪ್ಯ ಎಂಬುದು ರೋಮ ರೋಮಗಳಲ್ಲೂ ಸ್ಫುರಿಸುತಿದ್ದುದನ್ನು ಗಮನಿಸಿದೆ.

"ತುಂಬಾ ವಂದನೆಗಳು !" ಎಂದು ಹೇಳಿ ನೋವು ತುಂಬಿದ ಹೆಜ್ಜೆ ಗಳನ್ನು ಮುಂದಿಡುವುದು ಕಷ್ಟವಾದರೂ ನಿಲ್ಲದೆ ಹೋಗಿ ಬಿಟ್ಟಳು. ಕರುಳು ಕೊರೈಸುವಂತಹ ಘೋರ ಪ್ರಸಂಗಾವಧಾನದಿಂದ ನನ್ನ ಹೃದಯ ಕಲ್ಲು ಹೊತ್ತಂತೆ ಭಾರವಾಯಿತು. ಚಿತ್ತ ಭಕ್ತಿಯಲ್ಲಿ ಮಹೇಶ್ ಸುಳಿದಳಿದ.

* * *

ಕೈಗಳ ಕಾರ್ಯಶೀಲವಾಗಿದ್ದರೂ ದಿನವೆಲ್ಲಾ ಅವಳ ದುರ್ಭರ ಸ್ಥಿತಿಗಾಗಿ ಮರುಗುತ್ತಿತ್ತು ಮನಸ್ಸು. ಬಹುಶಃ, ಹೊಡೆದು-ಬಡಿದು ಕಡಿದು ಶಿಕ್ಷೆ ನೀಡಿದ ಭೀಮಣ್ಣ ಅವಳಿಗೆ ಸರ್ಪಕಾವಲು ಹಾಕಿದ್ದು, ಇಂದು ಹೇಗೋ ಅವನ ಕಣ್ಣು ತಪ್ಪಿಸಿಕೊಂಡು ಬಂದು ಚಿಕಿತ್ಸೆ ಪಡೆದಿರಬಹುದು. ಮಹೇಶ ನೊಟ್ಟಿಗೆ ಪಯಣಿಸಲಾದರೂ ಸಾಕಷ್ಟು ಶಕ್ತಿ ಬೇಕಲ್ಲ, ಅದರಿಂದಾಗಿಯೇ ಇಲ್ಲಿಯತನಕ ಬರುವ ಧೈರ್ಯಮಾಡಿದ್ದಾಳೆ. ಈ ಧೂರ್ತರ ಕೈಯಿಂದ ಪಾರಾಗಲು ಭಗವಂತ ಸಹಾಯ ಮಾಡಲಿ ಎಂದು ಹೃತ್ಪೂರ್ವಕವಾಗಿ ಹಾರೈಸಿದೆ, ಈಗ ಡಾಕ್ಟರಾಗಿ ನನ್ನ ಪಾತ್ರ? ಪೋಲೀಸರಿಗೆ ದೂರು ಕೊಡಲೇ ? ಅವಳು ಏನೊಂದೂ ಹೇಳಿಕೊಳ್ಳದಿರುವಾಗ ದೂರು ಕೊಡು ವುದು ಹೇಗೆ? ಸಾಧಕ-ಬಾಧಕಗಳು ಏನೇನಿದೆಯೋ...ಮಹೇಶ ರಾಯ ಪುರದಲ್ಲಿ; ಇಲ್ಲಿ ಈ ಗಂಡಾಂತರದಲ್ಲಿ ಇವಳು! ರಾಯಪುರದ ವಿಳಾಸ

ತಿಳಿತಿದ್ದರೆ ಟೆಲಿಗ್ರಾಂ ಕೊಡಬಹುದಿತ್ತು— ಈಗ ಏನೂ ಮಾಡುವಂತಿಲ್ಲ. ಆ ಆಲೋಚನೆಯಲೆಯಲ್ಲಿ ಸಿಕ್ಕಿದ ನಾನು ನಿಸ್ಸಾಯಕತೆಯಿಂದ ಉಸಿರಾಡಿದೆ.

ಮಹೇಶ ನಿಜವಾಗಿಯೂ ಅವಳಿಗೆ ಸೂಕ್ತವರ. ಅದನ್ನು ತಿಳಿದು ಕೊಳ್ಳಲಾರದ ಜನ ಹುಡುಗಿಯನ್ನು ದಂಡಿಸಿದ್ದಾರೆ. ಎಂತಹ ಧೂರ್ತತನ? ಆಕೆ ಎಷ್ಟೆಂದರೂ ಹೆಣ್ಣು...ಅಬಲೆ, ಹೇಗೆ ಇದರ ಪರಿಹಾರ? ಇಂದು ಮಹೇಶ ಊರಿಗೆ ಹಿಮ್ಮರಳಿದರೆ ನಾಳೆ ಬೆಳಿಗ್ಗೆ ವಾಯುವಿಹಾರದಲ್ಲಿ ಸಿಕ್ಕಿಯೇ ಸಿಕ್ಕುತ್ತಾನೆ, ವಿಷಯ ತಿಳಿದು ಅವನು ಏನು ಕ್ರಮ ಕೈ ಕೊಳ್ಳು ತ್ತಾನೋ ಕೈಕೊಳ್ಳಲಿ. ಅವನಿಂದು ಹಿಮ್ಮರಳದಿದ್ದರೆ ನಾಳೆ ಪೋಲೀಸಿಗೆ ದೂರುಕೊಡುವುದು ಒಳ್ಳೆಯದು ಎಂಬ ಅಂತ್ಯ ತೀರ್ಮಾನಕ್ಕೆ ಬಂದೆ. ಎದೆಯ ಹಕ್ಕಿ ಹಲವಾರು ದೇವರುಗಳನ್ನು ನೆನೆಯಿತು.

ಹಗಲು ಉರುಳಿತು, ಸಂಜೆ ಅಡರುತ್ತಿದೆ.

ಕೆಲಸ ಮುಗಿದಿತ್ತು. ವರಾಂಡದ ಮೇಜಿನ ಮೇಲಿದ್ದ ಪತ್ರಿಕೆ ಮತ್ತು ಮಾಸಿಕಗಳನ್ನು ತೆಗೆದುಕೊಂಡು ಪುಟಪುಟಗಳನ್ನು ತಿರುವಿ ಹಾಕಿದರೂ ಮನಸ್ಸು ವಿಷಯ ಗ್ರಹಣೆ ಮಾಡಲಿಲ್ಲ. ಮನದ ತುಂಬೆಲ್ಲಾ ಅದೇ ಚಿಂತೆ; ಅದೇ ಯೋಚನೆ; ಅದೇ ಹುಡುಗಿಯ ಚಿತ್ತಾರ ಅದೇ ಸ್ವಚ್ಛ ಸಾತ್ವಿಕ ಭಾವದ ಕಗ್ಗೊಲೆ! ಅಹೋ ರೂಪಂ! ಅಹೋ ಪಥಂ! ಅಹೋ ಧ್ವನಿ!

ಕೃಷ್ಣಪಕ್ಷದ ಕಾಳ ರಾತ್ರಿ. ನಕ್ಷತ್ರ ಖಚಿತವಾದ ನೀಲಾಕಾಶ. ಬಹುಶ: ಹೊತ್ತು ಉರುಳಿದರ ಪರಿವೆಯೇ ಇರಲಿಲ್ಲ. ಕಣ್ಣಿಗೆ ಜೋಂಪು ಹತ್ತಿದಾಗ ನೋಟ ಗಡಿಯಾರದ ಕಡೆ ಹೊರಳಿತು. ಹೊತ್ತು ಹನ್ನೊಂದರ ಸಂಖ್ಯೆಯ ಗಡಿಯನ್ನು ದಾಟತತ್ತಿದೆ. ಪತ್ರಿಕೆ ಗಳನ್ನು ಜೋಡಿಸಿಟ್ಟು ಒಳಕೋಣೆಗೆ ಹೋಗಿ ಕದ ಮುಚ್ಚಿಕೊಂಡೆ. ಸ್ವಚ್ಛ ನಿರ್ಮಲವಾದ ಸೊಳ್ಳೆಪರದೆಯಿಂದ ಸುತ್ತುವರಿದ ಸಜ್ಜೆ ಸಜ್ಜು ಗೊಂಡಿತ್ತು. ಹಾಗೇ ಅಡ್ಡಾಗಿ ಮೈ ಮೇಲೆ ಹೊದ್ದಿಕೆಯನ್ನು ಎಳೆದು ಕೊಂಡು ಸ್ವಿಚ್ ಅದುಮಿ ದೀಪ ನಂದಿಸಿದೆ, ಕಗ್ಗತ್ತಲ

ತೆರೆಯನ್ನು ನಿಟ್ಟಿಸಿತು ದೃಷ್ಟಿ. ಸ್ವಲ್ಪ ಹೊತ್ತು ನಿರಾತಂಕವಾಗಿ ಉರುಳಿ ನಿದ್ದೆಯ ಜೋಂಪು ಹತ್ತಿತು ನಯನದ್ವಯಗಳಿಗೆ.

ಕನಸಿನ ಮಾಯಾಲೋಕದಲ್ಲಿ ಲಲಿತ ಒಳಬಂದಿದ್ದಾಳೆ. ಬಿರುಗಾಳಿ ನುಗ್ಗಿ ಬಂದಂತೆ! ಮುಖಬಿಂಬದಲ್ಲಿ ಬಣ್ಣಿಸಲಾಗದ ಪ್ರೇತಕಳೆ...... ಜ್ಯೋತಿರ್ಲಿಂಗಗಳಂತಿದ್ದ ಆ ನಯನದ್ವಯಗಳು.........ಹಾ, ಏನೆಂದು ಬಣ್ಣಿಸಲಿ? ನಿಷ್ಕ್ರಿಯತೆ? ಅಲ್ಲ, ಅಲ್ಲವೇಅಲ್ಲ. ಪ್ರಕ್ರಿಯತೆ? ಉಹೂ, ಖಂಡಿತವಾಗಿಯೂ ಅಲ್ಲ, ಮತ್ತೇನು? ಅತೀ ದೀನಾದೀನತೆ ಎಂದರೆ ಸಲ್ಲುತ್ತದೇನೋ, ಆದರೂ ಅದನ್ನು ದೃಢೀಕರಿಸಲಾರೆ.

"ಏನು ಲಲೀ? ಈ ಹೊತ್ತಿನಲ್ಲಿ ಏಕೆ ಬಂದೆ?" ನಾನು ಹೌಹಾರಿದೆ,

"ನೀವು ಕರ್ತವ್ಯಚುತರಾಗಬಾರದು! ಇದು ನನ್ನ ಕೋರಿಕೆ ಅಥವಾ ಆದೇಶ ಏನಾದರೂ ಅಂದುಕೊಳ್ಳಿ!"

ಆ ಕ್ಷಣ ನಾನು ಬೆವತು ಹೋದೆ. ನನ್ನ ಅಂತರ ತರವೆಲ್ಲವೂ ವಿವರ್ಣವಾಯಿತು. ನಾನು ಒದ್ದಾಡಿ ಹೊದ್ದಿಕೆಯನ್ನು ಕಿತ್ತು ಹಾಕಿದೆ.

ಆ ಸ್ತ್ರೀ ಮೂರ್ತಿ ಕತ್ತಲ ತೆರೆಯಲ್ಲಿ ಕರಗಿ ಹೋಯಿತು.

* * * *

ಕಟ, ಕಟ, ಕಟ, ಕಟ,

.............

ಕಟ, ಕಟ, ಕಟ, ಕಟ,

ಸಲ್ಪ ಹೊತ್ತಿನೊಳಗಾಗಿ ಮುಂಬಾಗಿಲನ್ನು ತೆರೆದ ಸದ್ದು ಕೇಳಿಸಿತು. ಜವಾನ ಹೊರಹೋಗಿ ಬಂದವರಾರೆಂಬುದನ್ನು ತಿಳಿದುಕೊಂಡ ನಂತರ ಒಳಬಂದು ವರದಿ ಮಾಡಿದ "ಸ್ವಾಮೀ! ನಿಮಗಾಗಿ ಜನ ಬಂದು ಕಾದಿದ್ದಾರೆ!"

ನನಗೆ ಉತ್ಸಾಹಕ್ಕಿಂತ ಜುಗುಪ್ಸೆ ಮೂಡಿತು, ಇನ್ನೂ ನಸುಕು ಹರಿಯಲಿಲ್ಲ. ಆಗಲೇ ಜನ ಒಂದೆರಡು ಗಳಿಗೆ ಯೋಚಿಸಿ ನುಡಿದೆ "ಹೋಗಿ ವಿಚಾರಿಸು, ಏನು ಸಮಾಚಾರ?"

ಅವನು ಹೊರಹೋಗಿ ಅವರೊಂದಿಗೆ ವಿಚಾರ ವಿನಿಮಯ ಮಾಡಿಕೊಂಡನಂತರ ಬಂದು ಹೇಳಿದ "ಹುಡುಗಿಯೊಬ್ಬಳು ಆತ್ಮಹತ್ಯೆ ಮಾಡಿಕೊಂಡಿದ್ದಾಳಂತೆ! ಈಗಲೇ ಪೋಸ್ಟ್‌ಮಾರ್ಟಂ ಮಾಡಿಕೊಡಬೇಕು ಎನ್ನುತಿದ್ದಾರೆ!

ಛೀ! ಎಂತಹ ರಾಕ್ಷಸಜನ ಇವರು? ಈ ಮುಂಜಾನೆಯಲ್ಲಿ, ನಾನು ಏಳುವುದರೊಳಗಾಗಿ ಪೋಸ್ಟ್‌ಮಾರ್ಟಂ–ಗೆ ಅವಸರ. ಹುಡುಗಿ ಸತ್ತದ್ದು ಲೆಕ್ಕವಿಲ್ಲ; ಅಂತ್ಯಕ್ರಿಯೆ ಮುಖ್ಯ...! ಒಡನೆ ಸ್ವಪ್ನ ಸುಂದರಿ ಮನದಲೆಯಲ್ಲಿ ಮೂಡಿನಿಂತಳು. ಬಹುಶಃ ಅವಳೇ ಇರಬಹುದೇ? ಆ ಪ್ರಶ್ನೆ ಏಳುತ್ತಲೂ ದೇಹದಾದ್ಯಂತ ಚಿಲ್ಲನೆ ಹರಿದಾಡಿತು ಶೋಕ ಭಾವನೆಯ ಝುರಿ, ಒಂದೆರಡು ಗಳಿಗೆ ನಿಧಾನಿಸಿ ಅಂದೆ "ಅವರಿಗೆ ಎಂಟು ಗಂಟೆಯ ನಂತರ ಬರಲು ಹೇಳು."

"ಅವರು ಶವ ತಂದಿದ್ದಾರೆ."

"ಆಸ್ಪತ್ರೆಯಲ್ಲಿಡಲು ಹೇಳು."

ಜವಾನ ಹೊರ ಹೋದ. ಅವರೊಂದಿಗೆ ನಡೆಸಿದ ಮಾತುಕತೆ ಸ್ಪಷ್ಟವಾಗಿ ಕಿವಿಗೆ ಬೀಳುತ್ತಿತ್ತು. ಅವರು ಒಪ್ಪುವಂತೆ ತೋರಲಿಲ್ಲ. ಒಂದೇ ಸಮನೆ ಹಲವಾರು ದನಿಗಳು ಅಂಗಲಾಚುತ್ತಿವೆ. ಇವನೂ ನನ್ನ ಪರವಾಗಿ ವಾದಿಸುತ್ತಿದ್ದಾನೆ. ಆದರೂ ಅವರು ಜಗ್ಗುವಂತಿಲ್ಲ. ಮುಂಬಾಗಿಲ ಬಳಿ ಮಾತಿನಮೊರೆತ, ಅಳು-ಗೋಳು ಇತ್ಯಾದಿಗಳು ಮೇಳೈಸಿದ್ದುವು

ನನ್ನ ಮನಸ್ಸು ಕೋಪ–ಜಿಗುಪ್ಸೆಗಳ ಒಕ್ಕೂಟದಿಂದ ನರಳಿತು. ಹೊದಿಕೆಯನ್ನು ಸರಿಸಿ, ಎದ್ದು ಹೊರಬಂದೆ. ಜನರ ಗುಂಪಿನಲ್ಲಿ

ಮುಂಡಾಸುಧಾರಿ ಭೀಮಣ್ಣ ಮತ್ತು ಸಂಗಡಿಗರು, ಕುಟುಂಬಿಗರು ಮತ್ತು ನೆರೆಹೊರೆಯವರು ಎಲ್ಲಿದ್ದಾರೆ. ಆ ಕ್ಷಣವೇ ವಿಷಯವೇನೆಂಬುದು ಅರ್ಥವಾಗಿ ಕೋಪಾಗ್ನಿಯ ಜ್ವಾಲೆ ಜರ್‍ರನೆ ಹರಿದಾಡಿತು ಮನದಲ್ಲಿ.

"ಏನ್ರೀ? ಈ ಮುಂಜಾನೆಯಲ್ಲಿ ಗಲಾಟೆ?"

ಭೀಮಣ್ಣ ಕೈ ಮುಗಿದುಕೊಂಡು "ಸಾಮಿ!, ಗಲಾಟೆಯಲ್ಲ, ಪ್ರಾಣ ಸಂಕಟ, ಮಗಳು ಕೈಕೊಟ್ಟಿದ್ದಾಳೆ. ಶವ ಸಂಸ್ಕಾರ ಮಾಡದೆ ಕೇರಿಯ ಜನ ನೀರು ಮುಟ್ಟುವುದಿಲ್ಲ...ಕೈಮುಗಿಯುವೆ. ಉಪಕಾರ ಮಾಡಿರಿ."

"ಈಗ ಸಾಧ್ಯವಿಲ್ಲ, ಎಂಟು ಗಂಟೆಯ ನಂತರ ಬನ್ನಿ."

"ಸ್ವಾಮಿಾ! ಇದು ಆತ್ಮಹತ್ಯೆ ಕೇಸು. ಸುದ್ದಿ ಪೋಲೀಸರಿಗೆ ಮುಟ್ಟಿದರೆ ರಾಣಾರಂಪವಾಗುತ್ತದೆ. ಅಷ್ಟಕ್ಕೆ ಅವಕಾಶವಾಗದಂತೆ ದಯ ವಿಟ್ಟು ಉಪಕರಿಸಿರಿ."

ಆ ಮುಹೂರ್ತದಲ್ಲಿ ನನ್ನ ಭಾವನೆಗಳು ಬಂಡೆದ್ದು ರೋಮ ರೋಮ ಗಳೂ ನಿಮಿರಿದವು. ಕೋಪ-ಕ್ಲೇಷ-ಅನುತಾಪ-ತಿರಸ್ಕಾರಗಳಿಂದ ಹೃದಯ ಕುಂಡಲಿ ತುಂಬಿ ಜೀವ ತಳಮಳಿಸಿತು. ಆದರೂ ಅದೃಷ್ಟ ವಶಾತ್ ಚಿತ್ರಪ್ರವೃತ್ತಿ ಉದ್ವೇಗಗೊಳ್ಳದಷ್ಟು ಅಚಲವಾಗಿತ್ತು. ಅದು ನನ್ನ ಪುಣ್ಯ.

* * * *

ಲಲಿತೆಗೆ ನಿಜವಾಗಿಯೂ ಆಯುಸ್ಸು ತೀರಿತ್ತೇ? ಆಯುಸ್ಸು ತೀರದೆ ಸಾವು ಸನ್ನಿಹಿತವೇ?? ಆಯುಸ್ಸು ತೀರದಿದ್ದರೆ ಹೇಗಾದರೂ ಈ ಗಂಡಾಂತರದಿಂದ ಪಾರಾಗುತ್ತಿರಲಿಲ್ಲವೇ???

ಇದು ನನ್ನ ಮುಂದಿನ ಪ್ರಶ್ನೆ. ನಾನು ನೆನ್ನೆ ಪೋಲಿಸಿಗೆ ದೂರು ಕೊಟ್ಟಿದ್ದಿರೆ ಆಕೆ ಉಳಿಯುತ್ತಿದ್ದಳು. ನನಗೇಕೆ ಮನಸ್ಸು ಬರಲಿಲ್ಲ?

ನಾನೇಕೆ ಹಿಂಜರಿದೆ? ಇದನ್ನೆಲ್ಲಾ ಸೂಕ್ಷ್ಮವಾಗಿ ಅವಲೋಕಿಸಿದರೆ ಕಂಡು ಬರುವ ಮೊತ್ತ ವಿಧಿ ಉತ್ತೇಜನೆ ನೀಡಲಿಲ್ಲ ಎಂಬುದೇ; ಅಥವಾ ಮುಂದೆ ಎಷ್ಟು ಯೋಚಿಸಿದರೂ ಉತ್ತರ ಹೊಳೆಯಲಿಲ್ಲ. ಅಲ್ಲಿಂದಲ್ಲೇ ಪದಚಾರಣ ಮಾಡುತ್ತ ಶತಪಥ ತಿರುಗಿದೆ. ವಾಯು ಸೇವನೆಗಾಗಿ ಹೊರ ತಲೆಹಾಕಲಿಲ್ಲ; ಹಾಕುವಂತೆಯೂ ಇರಲಿಲ್ಲ. ಅವಳನ್ನು ಕುರಿತು "ಮಗೂ! ನನ್ನಿಂದೇನಾದರೂ ಸಹಾಯ ಬೇಕೆ?" ಎಂದು ಕೇಳಿದಾಗಲೂ "ಅವಳು ತುಂಬಾ ವಂದನೆಗಳು!" ಎನ್ನಬೇಕೆ? ಇದಕ್ಕೇ ಅಲ್ಲವೇ 'ವಿಧಿ' ಎನ್ನುವುದು?

ವಿಷಯ ದುಂಬಿಯಂತೆ ಮನವನ್ನು; ಕೊರೆಯುತಿತ್ತು. ಕಾಲುಗಳು ಯಥಾ ಪ್ರಕಾರ ಶತಪಥ ತಿರುಗಿದುವು. ಶತಪಥ.......ಶತಪಥ....... ತಿರುಗುತ್ತಲೇ ಇದ್ದುವು.

ಹೆತ್ತಮಗುವನ್ನು ಕೊಲ್ಲಲು ಹೇಗೆ ಮನಸ್ಸು ಬಂತು ? ಹಾ ! ಕ್ರೂರತನದ ಪರಾಕಾಷ್ಠೆ...."ಬುದ್ಧಿ ಹೀನ ಪಿಶಾಚದನನ್ಯ: ಛೇಃ !ಛೇಃ ! ಆಕೆ ಯಾವ ಬಯಕೆ ಇಟ್ಟುಕೊಂಡಿದ್ದಳೋ....ಈ ಸುಂದರ ಜಗತ್ತಿನಲ್ಲಿ ಭವಿಷ್ಯದ ರೂಪುರೇಖೆಯನ್ನು ಯಾವ ರೀತಿಯಲ್ಲಿ ಹೆಣೆದುಕೊಂಡಿದ್ದಳೋ ಅದೆಲ್ಲಾ ಮಣ್ಣುಪಾಲಾಯ್ತು, ತುಂಬಾ ಅನ್ಯಾಯ...

ಹೊತ್ತು ಎಂಟರ ಸಂಖ್ಯೆಯನ್ನು ಮುಟ್ಟಿತು. ನಾನು ಆಸ್ಪತ್ರೆಗೆ ಹೋಗಲಾರದೇ ಹೋದೆ. ಶವ ಮೇಜಿನ ಮೇಲಿತ್ತು. ಒಳಗಡೆಯಿದ್ದ ಜನ ರೆಲ್ಲಾ ಹೊರಹೋದರು–ಪೋಸ್ಟ್‌ಮಾರ್ಟಂ–ಗೆ ಕೈಹಚ್ಚಿದೆ, ಒಡಲಲ್ಲಿ ರಾತ್ರಿ ಯ ಆಹಾರವಿರಲಿಲ್ಲ, ಮೈಕೈಯಲ್ಲಿ ಇನ್ನೂ ಕೆಲವಾರು ಹೊಸ ಬಾಸುಂಡೆ ಗಳು....ಕೊರಳಲ್ಲಿ ಅಮುಕಿ ಹಿಸುಕಿದ ಗುರುತು !

ನನ್ನ ಅಂತರತರವೆಲ್ಲಾ ಒಮ್ಮೆಗೇ ವಿವರ್ಣವಾಯಿತು.

ಭೀಮಣ್ಣನನ್ನು ಒಳಬರಮಾಡಿಕೊಂಡು ಹೇಳಿದೆ–ಇದು ಕಗ್ಗೊಲೆ! ಕೈಯಾರೆ ಕೊಂದು ಆತ್ಮಹತ್ಯೆ ಎನ್ನುತಿದ್ದೀರಿ !"

'ಸ್ವಾಮಿ ! ಮೆಲ್ಲಗೆ ಮಾತಾಡಿ ! ಹೊರಗಡೆ ಬಹಳ ಮಂದಿ ಇದ್ದಾರೆ, ನಾನು ಅವಳಿಗೆ ಗದರಿಸಿದ್ದು ಹೊಡೆದಿದ್ದು ನಿಜ; ಅಷ್ಟಕ್ಕೇ.... ಅವಳು ಏನೋ ನುಂಗಿದಳು !"

"ಕತ್ತು ಹಿಸುಕಿದ್ದೀರಿ!"

"ಇರಲಿ, ಸ್ವಾಮಿ ! ಏನೋ ಆದುದು ಆಗಿಹೋಯಿತು ! ಮುಂದೇನು ಮಾಡಬೇಕು ಹೇಳಿ ? ಕೈಮುಗಿದು ಕೇಳಿ ಕೊಳ್ಳುವೆ, ನಮ್ಮ ಮರ್ಯಾದೆ ಉಳಿಸಿ."

"ಸಾಧ್ಯವೇ ಇಲ್ಲ. ಪೋಲೀಸಿಗೆ ವರದಿ ಮಾಡುವೆ! ಹೆತ್ತ ಮಗಳನ್ನು ಕೊಲ್ಲುವಾಗ–ಕರುಣೆಯಿಲ್ಲದೆ ಕೊಲ್ಲುವಾಗ ಎಲ್ಲಿ ಹೋಗಿತ್ತು ಮರ್ಯಾದೆ ? ಕೊಲ್ಲಲು ಹೇಗೆ ಕೈ ಬಂತು?"

"ಅವಳು....ಅವಳು ನಮ್ಮ ವೈರಿಯ ಮಗ ಮಹೇಶನನ್ನು ಮದುವೆ ಯಾಗುವ ಹಠ ಹಿಡಿದಳು. ಎಷ್ಟು ಹೇಳಿದರೂ ಕೇಳಲಿಲ್ಲ. ನನಗೆ ಇಬ್ಬರು ಹಿರಿಯ ಹೆಣ್ಣು ಮಕ್ಕಳಿದ್ದಾರೆ. ಇವಳನ್ನು ಆ ದುಷ್ಟನಿಗೆ ಕೊಟ್ಟರೆ ಅವರಿಗೆ ಮದುವೆ ಮಾಡುವ ವಿಚಾರ ಮರೆತು ಬಿಡಬೇಕು" ಸ್ವಾಮಿ! ಅಂದಮೇಲೆ ಬೇರೆ ದಾರಿಯೇ ಇರಲಿಲ್ಲ. ಹುಡುಗಿಗೆ ಪರಾಪರ ಚಿಂತೆ ಬೇಡವೇ ? ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಎಲ್ಲರೂ ಅನುಭವಿಸಬೇಕು. ಬಿಡಿ, ಆಗಬಾರದುದು ಆಗಿ ಹೋಗಿದೆ. ಇನ್ನು ಮಾತಾಡಿ ಪ್ರಯೋಜನ ವಿಲ್ಲ. ಈಗಲೇ ಐದು ಸಾವಿರ ರೂಪಾಯಿಗಳನ್ನು ತಂದು ಎಣಿಸಿ ಬಿಡುವೆ, ದಯವಿಟ್ಟು ಇದು ಆತ್ಮಹತ್ಯೆ ಎಂದು ಬರೆದುಕೊಟ್ಟು ಉಪಕಾರ ಮಾಡಿ!"

ನಾನು ಶುದ್ಧಾಂಗವಾಗಿ ನಿರಾಕರಿಸಿ ರೋಷದಿಂದ ಹೇಳಿದೆ "ಇನ್ನೊಂದು ಸಲ ಈ ಮಾತೆತ್ತೀರಿ, ಜೋಕೆ!"

"ಸ್ವಾಮಿ:......!"

"No....No....!ತೊಲಗಿ ಇಲ್ಲಿಂದ!"

ನನ್ನ ನೋಟ ಶವದತ್ತ ಹರಿಯಿತು, ಅರೆತೆರೆದ ಬಾಯಿ....ಬಿರಿ ಬಿರಿ ಬಿಟ್ಟ ನಿಡುಗಣ್ಣುಗಳು...ಹಾ! ಆ ನೋಟದಲ್ಲಿ ಯಾವ ಸಂವೇದನೆಯಿತ್ತೋ ಊಹಿಸಲಾರದೇ ಹೋದೆ,

# ಪ್ರಶ್ನಾರ್ಥಕ ಚಿಹ್ನೆ

—ಸುನೀತಿ ಉದ್ಯಾವರ

ನಡುಹಗಲಿನ ಸುಡುಬಿಸಿಲಿನ ತೀವ್ರತಾಪ. ಅಂತಹ ಅಸಹನೀಯವಾದ ಸೆಕೆಯು ಬೇಗೆಗೆ ಜನರು ಬಳಲಿ ಬೆಂಡಾದರೂ ಒಂದು ಪಾಳುಗುಡಿಯ ಬಳಿ ಅದಾವ ದೃಶ್ಯವನ್ನು ನೋಡಲು ಜನರ ತಂಡ ಸೇರಿತ್ತೋ ಏನೋ ?

ದಾರಿಹೋಕರು ಗಂಟೆಗಳ ದನಿ ಕೇಳಿ ತಡೆದರೂ ಅವರ ದೃಷ್ಟಿ ಗರ್ಭಗುಡಿಯ ದೇವರತ್ತ ಇರಲಿಲ್ಲ. ಆ ಗುಡಿಯ ಮೆಟ್ಟಲುಗಳ ಮೇಲೆ ಅನ್ಯಮನಸ್ಕಳಾಗಿ ಕುಳಿತ ಒಬ್ಬ ಸ್ತ್ರೀಯ ಕಡೆಗೆ ಎಲ್ಲರೂ ನೋಡುತ್ತಿದ್ದರು. ಆಕೆಯನ್ನು ಕಂಡಾಗ ಮುಂದೆ ಹೋಗಬಯಸಿದ ಜನರ ಕಾಲುಗಳೂ ತಡೆಯುತ್ತಿದ್ದುವು. ಕೆಲವರು ಮರುಗುತ್ತಿದ್ದರು. ಮತ್ತೆ ಕೆಲವರು ಆಶ್ಚರ್ಯಪಡುತ್ತಿದ್ದರು. ಮತ್ತೆ ಉಳಿದವರು ನಕ್ಕು ಹಾಸ್ಯಮಾಡುತ್ತಿದ್ದರು.

ಅವಳು ಯಾರಿರಬಹುದು–ಎಂಬುದು ಕೇಳಬೇಕಾದ ಪ್ರಶ್ನೆಯೇ ಆಗಿರಲಿಲ್ಲ. ದಿನವೂ ಅದೇ ದಾರಿಯಾಗಿ ಹೋಗುವವರು ಆ ಕಡೆ ಅಂದರೆ ಆ ಯುವತಿಯ ಕಡೆಗೆ ದೃಷ್ಟಿ ಹಾಯಿಸಿ ಹೋಗುವುದು ವಾಡಿಕೆಯೇ ಆಗಿತ್ತು. ಹೊಸದಾಗಿ ಆ ಊರಿಗೆ ಬಂದವರಿಗೆ ಮಾತ್ರ ಆಕೆ ಅಪರಿಚಿತಳು. ಇನ್ನುಳಿದವರು ಕೆಲವು ತಿಂಗಳುಗಳಿಂದ ಅದೇ ಯುವತಿಯನ್ನು ಅದೇ ಜಾಗದಲ್ಲಿ, ಅದೇ ಭಂಗಿಯಲ್ಲಿ, ಅದೇ ಹಾವಭಾವಗಳಲ್ಲಿ ನೋಡುತ್ತಿದ್ದರು.

ಆ ಯುವತಿಯೇ ಕುಮುದಿನಿ, ಅವಳು ದೌರ್ಭಾಗ್ಯದ ಪ್ರತೀಕವೇ ಆಗಿದ್ದಳು, ಕೆದರಿದ ಕೂದಲು, ಹರಿದ ಮೈಹೊದಿಕೆ, ಶೂನ್ಯವಾದ

ಕಣ್ಣುಗಳು ಅವಳ ಬಾಳಿನ ಗೋಳಿನ ಬಗ್ಗೆ ತಿಳಿಯಲು ಎಲ್ಲರಿಗೆ ಆಹ್ವಾನ ನೀಯುತ್ತಿದ್ದವು. ತುಂಬುಯೌವನದ ಒಡತಿಯಾಗಿದ್ದ ಆಕೆಯು ಒಂದು ಕಾಲದಲ್ಲಿ ಸೌಂದರ್ಯದ ಗನಿಯಾಗಿದ್ದಿರಬೇಕೆಂದು ಕಂಡವರಿಗೆ ಅನಿಸದೇ ಇರುತ್ತಿರಲಿಲ್ಲ.

ಆಕೆಯ ಕೈಯಲ್ಲಿ ಒಂದು ಸೀಮೆಸುಣ್ಣದ ಕಡ್ಡಿಯಿತ್ತು. ಅದರ ತುಂಡಿನಿಂದ ಗುಡಿಯ ಮೆಟ್ಟಲುಗಳ ಮೇಲೆ, ಗೋಡೆಗಳ ಮೇಲೆ ಪ್ರಶ್ನಾರ್ಥಕ ಚಿಹ್ನೆಗಳನ್ನು ಗೀರುವುದೇ ಅವಳ ಗೀಳಾಗಿತ್ತು, ಆ ಚಿಹ್ನೆಯನ್ನು ಎಷ್ಟು ಅಚ್ಚುಕಟ್ಟಾಗಿ ಆಕೆ ಬರೆಯುತ್ತಿದ್ದಳೆಂದರೆ ಆಕೆಯಲ್ಲಿ ಸುಪ್ತವಾಗಿದ್ದ ಕಲಾತ್ಮಿಕ ಭಾವನೆ, ಕಲಾಕೌಶಲ್ಯಗಳನ್ನು ಮರೆಮಾಡುವಂತಿರಲಿಲ್ಲ. ನಡು ನಡುವೆ ಅವಳ ಅಧರಗಳ ಮೇಲೆ ಉನ್ಮಾದದ ಮಂದಹಾಸವೊಂದು ಮೂಡಿ ಮಾಯವಾಗುತ್ತಿತ್ತು. ಆಗೊಮ್ಮೆ—ಈಗೊಮ್ಮೆ ಅವಳು ಕಿಲ ಕಿಲನೆ ನಗುತ್ತಿದ್ದಳು. ಗಟ್ಟಿಯಾಗಿ ಅರಚುತ್ತಿದ್ದಳು, ಕೆಲವೊಮ್ಮೆ ಅದೋ ಬೆಂಕಿ...ಬೆಂಕಿ ಹ...ಹ್ಹ...ಹ್ಹಾ ! ಓ....ಹ್ಹೊ...ಹ್ಹೋ....ಹಿ....ಹ್ಹಿ ... ಹ್ಹೀ..." ಎಂದು ವಿಕಟವಾಗಿ ನಗುತ್ತಿದ್ದಳು.

ದಾರಿಹೋಕರಲ್ಲಿ ಕೆಲವರು ಆಕೆಯ ಶೋಚನೀಯ ಸ್ಥಿತಿಗಾಗಿ ಮರುಗಿದರೆ ಕೆಲವರು ನಗುತ್ತಿದ್ದರು. ಮತ್ತೆ ಕೆಲವರು ಮನೋರಂಜಕ ನೋಟ ಕಂಡಂತೆ ಹಾಸ್ಯದ ಚಟಾಕಿ ಹಾರಿಸಿ ತೃಪ್ತಿ ಪಡೆಯುತ್ತಿದ್ದರು. ಇನ್ನು ಕೆಲವರು ಅವಳ ಬಳಿಸಾರಿ ಅವಳ ಕೆನ್ನೆ ಸವರಿ, ಸವಿನುಡಿಗಳನ್ನಾಡಿ ಮೈಮರೆಯುತ್ತಿದ್ದರು. ಮತ್ತೆ ಕೆಲವರು ಅವಳ ಚಿಂದಿ ಅರಿವೆಯ ಹಿಂದೆ ಗೋಚರಿಸುತ್ತಿದ್ದ ಸುಂದರವಾದ ಮೈಕಾಂತಿಯನ್ನು ಕಂಡು ಕಾಮೋದ್ರೇಕರಾಗಿ ಬಳಿಗೆ ಹೋಗಿ ಅವಳ ಸ್ಪರ್ಶಸುಖ ಪಡೆದು ಆನಂದ ಪಡೆಯುತ್ತಿದ್ದರು. ಆದರೆ....ಆಕೆಗೆ ಏನೂ ಅರಿಯದಾಗಿತ್ತು. ಈ ಅಂಧ ಸಮಾಜದ, ಮೂಢ ಜನತೆಯ ದುಷ್ಟವಿಚಾರಗಳಿಂದ ಆಕೆ ಅಲಿಪ್ತಳಾಗಿದ್ದಳು. ಅವಳ ವಿಚಾರಧಾರೆ ಎತ್ತ ಹರಿದಿರಬಹುದೆಂಬುದರ ತಿಳಿವು ಯಾರಿಗೂ ಇರಲಿಲ್ಲ. ಆಕೆ ಅದಾವ ಪ್ರಪಂಚದಲ್ಲಿದ್ದಳೋ ಯಾರೂ ತಿಳಿದಿರಲಿಲ್ಲ. ಹಗಲಿರುಳ್ಳೆ

ಗಳೂ ಉರುಳಿದ ಜ್ಞಾನ ಆಕೆಗೆ ಇರಲಿಲ್ಲ. ಹಸಿವು ಬಾಯಾರಿಗಳೂ ಆಕೆಯಿಂದ ದೂರ ಸರಿದಿದ್ದುವೋ ಏನೋ. ಸಮಾಜ ನಕ್ಕರೆ ನಗಬೇಕು, ಜನ ಅತ್ತರೆ ಅಳಬೇಕು ಎಂಬುದೂ ಆಕೆಗೆ ಮರೆತುಹೋದಂತಾಗಿತ್ತು. ಕಾಲಚಕ್ರ ಉರುಳುತ್ತಲೇ ಇದ್ದರೂ ಆಕೆಯ ನಡೆತೆಯ ಪರಿವೆ ಆಕೆಗೇ ತಿಳಿಯುತ್ತಿರಲಿಲ್ಲ. ಬಾಳು ಸವೆಯುತ್ತಲೇ ಇತ್ತು. ಆಕೆಗೆ ಯಾರ ಸಹಾನುಭೂತಿಯ ಅಪೇಕ್ಷೆ ಇದ್ದಿರಲಿಲ್ಲ. ಬಾಹ್ಯಜಗತ್ತಿನ ಗೊಡವೆಯನ್ನು ಮಾಡುವ ಸಹಜ ಪ್ರವೃತ್ತಿಯೇ ಅವಳಲ್ಲಿ ನಷ್ಟವಾಗಿತ್ತು.

"ಅಯ್ಯೋ, ಎಂಥ ಹೆಣ್ಣು ! ಹೀಗಾಯಿತಲ್ಲಾ ಅವಳ ಪಾಡು ! ಎಲ್ಲಾ ದೈವೇಚ್ಛೆ !" ಎಂದು ನೆರೆದ ಜನರಲ್ಲಿ ಒಬ್ಬ ನಡುಹರೆಯುವನ್ನು ಇನ್ನೂ ತುಳಿಯದ ತರುಣನೊಬ್ಬನ ಉದ್ಗಾರ ಆತನ ಜೊತೆಗಿದ್ದ ಮತ್ತೋರ್ವ ವ್ಯಕ್ತಿಯನ್ನು ಅಚ್ಚರಿಗೊಳಿಸದಿರಲಿಲ್ಲ. ಬೆರಗಾದ ಮತ್ತೊಬ್ಬ ವ್ಯಕ್ತಿ ತನ್ನ ಗೆಳೆಯನ ಹೆಗಲ ಮೇಲೆ ಕೈಯಿರಿಸಿ "ನವೀನ್, ನಿನ್ನ ಮಾತು ಒಂದು ಸಮಸ್ಯೆಯಂತಿದೆಯಲ್ಲ. ನೀನು...ನೀನು ಈ ಹುಚ್ಚಿಯನ್ನು ಬಲ್ಲೆಯಾ ?" ಎಂದು ಹೇಳಿದ.

"ರಮೇಶ್, ನಾನು ಈಕೆಯ ಕೈಹಿಡಿದುದೇ ಆದರೆ ಈಕೆಯ ಸ್ಥಿತಿ ಹೀಗೆ ಆಗುತ್ತಿರಲಿಲ್ಲವ್ವೋ ಏನೋ. ರಮೇಶ್.......ಆದರೆ....... ಅದರೆ ಕುಮ್ಮು.......ನನ್ನ ಕುಮ್ಮುವಿನ ಬಾಳ್ವೆ ಹೀಗಾಗಿರಬಾರದಿತ್ತು". ಎಂದು ನವೀನ ಅನ್ನುತ್ತಿರುವಾಗಲೇ ರಮೇಶ ಆತನನ್ನು ತಡೆದು "ಛಿ. ಹೀಗೆಲ್ಲ ಅಬದ್ಧ ಮಾತನಾಡಬೇಡ. ನಿನ್ನ ಹೊನ್ನಿನಂಥ ಸಂಸಾರ ನಾನು ಮೆಚ್ಚಿದ್ದೇನೆ. ನಿನಗೆ ಅನುರೂಪಳಾದ ಪತ್ನಿ, ಮುದ್ದಾದ ಮಗು ಇದ್ದರೂ ಈ ಬೀದಿ ಭಿಕಾರಿಯ ಮೇಲೇಕೆ ನಿನಗೆ ವ್ಯಾಮೋಹವಪ್ಪಾ.? ಈಗ ಈ ಬಗೆಯ ವಿಚಾರ ನೀನು ಕನಸಿನಲ್ಲಿಯೂ ತರಬಾರದು". ಹೇಳಿದ.

"ನೀನು ನಂಬಿದರೆ ನಂಬು: ಇಲ್ಲದಿದ್ದರೆ ಬಿಡು. ನಿನ್ನ ಬಳಿ ಸುಳ್ಳು ಹೇಳಿ ನನಗೇನು ದೊರೆಯುವುದೆಂದುಕೊಂಡೆ ? ಆದರೆ ನೀನು ಮನ ಶಾಸ್ತ್ರಜ್ಞ ಅಲ್ಲವೆ ? ಆದುದರಿಂದಲೇ ನಿನ್ನನ್ನು ಇಲ್ಲಿಗೆ ನಾನು ಕರೆದು ತಂದೆ".

"ಓಹೋ ಹಾಗೋ, ಹಾಗಾದರೆ ಈಕೆ ಯಾರು? ಅವಳ ಪರಿಚಯ ನಿನಗೆ ಹೇಗಾಯಿತು? ಇವಳ ಜೀವನದ ಗತಘಟನೆಗಳು ನಿನಗೆ ತಿಳಿದಿದೆಯೆ? ಹೇಳು. ಆ ಬಳಿಕ ಅವಳನ್ನು ಏನು ಮಾಡೋಣವೆಂದು ವಿಚಾರಮಾಡಿದರಾ ಯಿತು."

"ಅದೊಂದು ದೊಡ್ಡ ಕಥೆ ರಮೇಶ್, ನೀನು ಆಗ್ರಹಮಾಡಿದಾಗ ಹೇಳದೆ ಹೇಗಿರಲಿ,?

"ಆಗ್ರಹವೇ ಇರಲಿ, ಮತ್ತೇನೇ ಇರಲಿ, ಇಂದು ಆಕೆಯ ಕಥೆಯನ್ನು ಕೇಳದೆ ನಾನು ಇಲ್ಲಿಂದ ಕದಲುವುದಿಲ್ಲ, ಇದೇ ಗುಡಿಯ ಹಿಂದಿನ ಚಾವಡಿಯ ಮೇಲೆ ಕುಳಿತುಕೊಂಡು ಆಕೆಯ ಕಥೆಯನ್ನು ಹೇಳುವಿಯಂತೆ"

ಭಾರವಾದ ಹೆಜ್ಜೆಗಳನ್ನಿಡುತ್ತಾ ಗೆಳೆಯರಿಬ್ಬರೂ ಗುಡಿಯ ಹಿಂದಿನ ಚಾವಡಿಯತ್ತ ನಡೆದರು. ನವೀನ ಒಂದು ಕಂಬಕ್ಕೊರಗಿ ಕುಳಿತ ಬಳಿಕ ರಮೇಶ ಆತನಿದಿರಿಗೆ ಇರುವ ಕಲ್ಲು ಮಂಚದ ಮೇಲೆ ಹಾಯಾಗಿ ಕುಳಿತನು ರಮೇಶನ ಮುಖದಲ್ಲಿ ಕುತೂಹಲ ಆತುರಗಳು ಮೂಡಿದ್ದುವು. ಆತ ನವೀನನನ್ನೇ ದಿಟ್ಟಿಸಿ ನೋಡುತ್ತಿದ್ದನಾದರೂ ನವೀನನ ಕಣ್ಣುಗಳು ಆಗಸದತ್ತ ನೋಡುತ್ತಿದ್ದವು.

"ರಮೇಶ್ ಕೇಳು. ನಾನು–ಕುಮುದಿನಿ ನೆರೆಹೊರೆಯವರು ಚಿಕ್ಕನಿಂದಿಂದಲೂ ಒಡನಾಡಿಗಳಾಗಿದ್ದೆವು. ಕೂಡಿ ಓದಿದ್ದೆವು, ಜೊತೆಯಲ್ಲಿ ಆಡುತ್ತಿದ್ದೆವು. ತೀರ ಹತ್ತಿರದಿಂದ ಒಬ್ಬರನ್ನೊಬ್ಬರು ಅರಿತುಕೊಂಡಿದ್ದೆವು

ತಾರುಣ್ಯದ ನೆಳಲಲ್ಲಿ ಮತ್ತೂ ಹತ್ತಿರ ಬಂದೆವು. ನಮ್ಮಿಬ್ಬರ ಅಭಿರುಚಿಗಳು, ಸ್ವಭಾವ ಗುಣಗಳು, ವಿಚಾರಗಳು ಒಂದೇ ತೆರನಾಗಿದ್ದುದರಿಂದಲೋ ಏನೋ ಬೇಗನೆ ಒಬ್ಬರನ್ನೊಬ್ಬರು ಅರಿತುಕೊಂಡೆವು. ವೀಣೆ ಹಿಡಿದು ಗಾನಸರಸ್ವತಿಯಂತೆ ಆಕೆ ನುಡಿಸಿದರೆ ನಾನು ನಾದಬ್ರಹ್ಮನಂತೆ ತಲ್ಲೀನತೆಯಿಂದ ಆಲಿಸುತಿದ್ದೆ. ಕುಂಚ ಹಿಡಿದು ಕಾಗದದಲ್ಲಿ ಕುಮ್ಮ್ರ ಗೆರೆ ಎಳೆದರೂ ಇದು ಅದ್ಭುತ ಕಲಾಕೃತಿಯೆನಿಸುತ್ತಿತ್ತು. ನಾನು ಅವಳನ್ನು ಪ್ರಶಂಸಿಸುತ್ತಿದ್ದೆ. ಶಾಲಾ ಕಾಲೇಜುಗಳಲ್ಲಿ ಆಕೆ ನಟಿಸಿದರೆ ನಾನು

ಮುಂದಿನ ಸಾಲಿನ ಪ್ರೇಕ್ಷಕನಾಗಿ ಅವಳನ್ನು ಹಾಡಿ ಹೊಗಳುತ್ತಿದ್ದೆ. ನಾನು ಉಚ್ಚ ವಿದ್ಯಾಭ್ಯಾಸ ಮುಗಿಸಿ ಯಸಸ್ವಿಯಾದಾಗ ಆಕೆ ತುಂಬು ಹೃದಯ ದಿಂದ ನನ್ನನ್ನು ಅಭಿನಂದಿಸುತ್ತಿದ್ದಳು. ನಾನು ಪೀಟೀಲು ನುಡಿಸಿದಾಗ ಅವಳು ತನ್ನ ಹೃನ್ಮನಗಳನ್ನು ಕಿವಿಯಾಗಿಸಿ ಆಲಿಸಿ 'ಭೇಷ್' ಅನ್ನುತ್ತಿದ್ದಳು ಕಲೆ ಆವಳ ಬಾಳಿನ ಬೆಳಕಾಗಿತ್ತು. ನಾನು ಆಕೆಯ ಮತ್ತು ಆಕೆಯ ಕಲೆಯ ಆರಾಧಕನೇ ಆಗಿದ್ದೇನೆಂದರೆ ತಪ್ಪಲ್ಲ. ಆವಳನ್ನು ವರಿಸಿ ಅವಳ ಕಲಾಪ್ರೌಢಿಮೆ ಮತ್ತೂ ಬೆಳೆಯುವಂತೆ ಮಾಡಬೇಕೆಂದುಕೊಂಡಿದ್ದೆ ಆದರೆ ಅವಳ ಅಂತಸ್ತು ನಮ್ಮ ಅಂತಸ್ತಿಗೆ ಸರಿಯಲ್ಲವೆಂದು ನನ್ನ ಹತ್ತಿರದವರ ಅಭಿಪ್ರಾಯ ಆಗಿತ್ತು. ಅವರ ಅಭಿಪ್ರಾಯ ತಿಳಿದ ಬಳಿಕ ಕುಮುದಿನಿ ಮೃಗಮರೀಚಿಯಂತೆ ನನಗೆ ಕಂಡಳು. ಅದು ಅವಳ ದುರಾದೃಷ್ಟವೋ, ನನ್ನ ದುರ್ದೈವವೋ ನಾನರಿಯೆ" ಎಂದು ನಿಟ್ಟುಸಿರು ಬಿಟ್ಟು ಒಂದು ಕ್ಷಣ ಕಣ್ಣುಗಳನ್ನು ಮುಚ್ಚಿ ಕುಳಿತ ನವೀನ. "ಇನ್ನು ನಾಳೆ ಹೇಳಲೆ? ನನ್ನ ನಾಲಗೆ ಏಕೋ ಮುಂದೆ ಓಡದು" ಎಂದು ಮತ್ತೆ ಹೇಳಿದ.

"ಅಧೀರನಾಗಬೇಡ–ನವೀನ್, ಬಾಳೆಂದರೆ ಸುಖ ದುಃಖಗಳ ಸಮ್ಮಿಲನ. ಸವಿ ಕಹಿಗಳ ಸಮರಸ. ಆಸೆ ನಿರಾಸೆಗಳು ಪ್ರತಿಯೊಬ್ಬನ ಜೀವನದಲ್ಲಿ ಬಂದೇ ಬರುವುವು, ಕಳೆದು ಹೋದುದು ಬರಿಯ ಕನಸ್ಸೆಂದು ತಿಳಿ. ಒಂದು ವರ್ಷವಾಗಿದ್ದರೂ ನಮ್ಮಲ್ಲಿ ಯಾವ ಜನ್ಮದ ಋಣಬಂಧವಿದೆಯೋ ಎಲ್ಲವನ್ನೂ ಮರೆಯಲು ಯತ್ನಿಸು. ನನ್ನ ನಿನ್ನ ಪರಿಚಯವಾಗಿ ಕೇವಲ ಅನಿಸುತ್ತದೆ. ನಿನ್ನ ಗತ ಜೀವನದ ಬಗ್ಗೆ ಕೇಳಿ ನನ್ನ ಸುಖದುಃಖಗಳಲ್ಲಿ ಸಹಭಾಗಿಯಾಗಿ, ನಿನಗೇನಾದರೂ ನೆರವು ನೀಡಲು ಸಾಧ್ಯವಿದೆಯೆಂದಾದರೆ ನಾನು ಧನ್ಯ–ನವೀನ್. ಮರೆಮಾಚದೆ ಎಲ್ಲವನ್ನೂ ಹೇಳು."

"ನೀನಿಷ್ಟು ಒತ್ತಾಯ ಪಡಿಸುವಿಯೆಂದ ಮೇಲೆ ನಾನು ಹೇಗೆ ಸುಮ್ಮನಿರಲಿ?" ಎಂದು ಮತ್ತೆ ನವೀನ ತನ್ನ ಕಥೆಯನ್ನು ಹೇಳತೊಡಗಿದ

"ನನ್ನ ತಾಯ್ತಂದೆ ಅವಳನ್ನು ಸೊಸೆಯನ್ನಾಗಿ ಸ್ವೀಕರಿಸಲು ನಿರಾಕರಿಸಿದರು. ಕುಮುದಿನಿ ಇದರಿಂದ ನೊಂದುಕೊಳ್ಳಲಿಲ್ಲ. ನನ್ನ ತಾಯ್ತಂದೆಯರನ್ನು ನಿಂದಿಸಲಿಲ್ಲ. ನಾವು ಗೆಳೆಯರಂತೆಯೆ ಇರೋಣ, ಬಾಳ

ಸಂಗಾತಿಯಾಗಬೇಕೆಂಬ ಕನಸು ನಾನು ಎಂದೂ ಕಂಡಿಲ್ಲ ನವೀನ್, ನನ್ನನ್ನು ಮರೆತು ನಿನ್ನ ಅಂತಸ್ತಿಗೆ ತಕ್ಕವಳನ್ನು ವರಿಸಿ ಸುಖವಾಗಿರು. ಎಂದು ನನ್ನನ್ನು ಸಂತೈಸಿದಳು. ತಾಯ್ತಂದೆಯರೇ ಆರಿಸಿದ ಮೃದು ಲೆಯ ಕೈ ನಾನು ಹಿಡಿದಾಗ ನನ್ನ ಮದುವೆಯಲ್ಲೂ ಸಡಗರದಿಂದ ಸಹ ಭಾಗಿಯಾಗಿ ಓಡಾಡಿಕೊಂಡಿದ್ದಳು. ಕಲೆಯ ನೆರಳಲ್ಲಿಯೆ ತನ್ನ ಅಸ್ತಿತ್ವ ಕಾಣಬೇಕೆಂಬ ಕನಸು ಕಾಣುತ್ತಾ ಇದ್ದ ಅವಳ ಬಾಳಿಗೆ ವಿಧಿ ಕಿಚ್ಚಿಕ್ಕಿತು. ಅವಳ ತಂದೆಯ ಅನಿರೀಕ್ಷಿತ ಸಾವು ಅವಳನ್ನೂ ಅವಳ ತಾಯಿಯನ್ನೂ ಅಧೀರಗೊಳಿಸಿತು. ಆಕೆಯ ತಾಯಿ ಪಂಕಜಮ್ಮ ತಮ್ಮಣ್ಣನಾದ ಮಾಧವರಾಯರ ಆಸರೆ ಪಡೆದರು. ಮಾಧವರಾಯನ ಹೆಂಡತಿ ನಂಜಿನ ನುಡಿಗಳಿಂದಲೇ ಅವರನ್ನು ಸ್ವಾಗತಿಸಿದಳು, ಆದರೆ ಬೇರೆ ಗತಿಯಿರಲಿಲ್ಲ. ಇಬ್ಬರೂ ಊಳಿಗದವರಂತೆ ಅಲ್ಲಿ ದುಡಿದು ಹಣ್ಣಾದರು. ಕುಮುದಿನಿ ಕಲಾರಾಧನೆಗೆ ಪೂರ್ಣವಿರಾಮ ಹಾಕಿದಳು. ಕುಂಚ ಮುಟ್ಟಿದರೇ ಆಕೆಗೆ ಮಂಗಳಾರತಿಯಾಗುತ್ತಿತ್ತು. ವೀಣೆ ನುಡಿಸಿದರೆ ಹಾದರಗಿತ್ತಿ ಎಂಬ ಬಿರುದು ದೊರೆಯುತ್ತಿತ್ತು.

ಆಗೊಮ್ಮೆ ಈಗೊಮ್ಮೆ ನಮ್ಮಲ್ಲಿಗೆ ಬಂದು ಹೋಗುತ್ತಿದ್ದ ಕುಮುದಿನಿ ಒಮ್ಮೆಯೂ ತನ್ನ ಬೇನೆ ಬೇಸರ ಯಾರಲ್ಲೂ ತೋಡಿಕೊಂಡಿರಲಿಲ್ಲ. ಬೇರೆಯವರ ಮೂಲಕ ಕೇಳಿ ವಿಚಾರಿಸಿದರೆ ನಕ್ಕು ಸುಮ್ಮನಾಗುತ್ತಿದ್ದಳು. ಆದರೂ ಗುಳಿಬಿದ್ದ ಕೆನ್ನೆಗಳು, ಬಾಡಿದ ಮುಖವೇ ಎಲ್ಲದಕ್ಕು ಸಾಕ್ಷಿ ಹೇಳುತ್ತಿದ್ದುವು. ತಾಳ್ಮೆಯೇ ಮೂರ್ತಿ ವೆತ್ತಂತಿದ್ದ ಕುಮುದಿನಿ ನಿಜವಾಗಿಯೂ ದೇವಿ ರಮೇಶ್ "ಎನ್ನುವಾಗ ನವೀನನ ಕಣ್ಣುಗಳು ತೇವವಾಗಿದ್ದುವು,

"ಅದೆಲ್ಲ ಇರಲಿ ಈ ಸ್ಥಿತಿ ಆಕೆಗೆ ಬರಲು ಕಾರಣ ತಿಳಿದಿಲ್ಲವಲ್ಲ" ರಮೇಶ್ ಕುತೂಹಲದಿಂದ ಕೇಳಿದ.

"ರಮೇಶ್, ಕುಮುದಿನಿಯು ಬಾಳಿನ ಪೂರ್ವಾರ್ಧವನ್ನು ಹಿಂದೆ ಬಿಟ್ಟು ಉತ್ತರಾರ್ಧಕ್ಕೆ ಕಾಲಿಟ್ಟಳು. ತನ್ನ ಕಲೆಗೆ ನೀರೆರೆಯುವಂತಹ

ಪತಿಯನ್ನು ಪಡೆಯಬೇಕೆಂದು ಎಣಿಸಿದಾಗಲೇ ಪ್ರಕಾಶನ ಪರಿಚಯ ಆಕೆಗೆ ಆಯಿತು. ಆಕೆಯು ವೀಣೆನುಡಿಸಿದುದನ್ನು ಕೇಳಿ ಮನಸಾರೆ ಮೆಚ್ಚಿ ಆಕೆಯನ್ನು ವರಿಸಿದ

ಪ್ರಕಾಶನ ಮನ ಮನೆಗಳನ್ನು ಕುಮುದಿನಿ ತುಂಬಿದ ಮೂರೇ ತಿಂಗಳುಗಳೊಳಗೆ ಪಂಕಜಮ್ಮ ನೆಮ್ಮದಿಯ ಉಸಿರೆಳೆದು ಈ ಲೋಕದ ಮೋಹ ತ್ಯಜಿಸಿ ಹೋದಳೇನೋ ಎಂಬಂತೆ ದೇಹ ತೊರೆದರು.

ಕೆಲಕಾಲ ಕುಮುದಿನಿಯ ಸಂಸಾರ ಸುಖದ ಸುಪ್ಪತ್ತಿಗೆಯಲ್ಲಿಯೇ ಸಾಗಿತ್ತು, ಕುಮುದಿನಿಯ ಕಲಾರಾಧನೆಗೆ ಪ್ರೋತ್ಸಾಹ ನೀಡುವ ಪ್ರಕಾಶನಂತೂ ಆಕೆಯ ಪಾಲಿಗೆ ಆರಾಧ್ಯದೇವತೆಯೇ ಸರಿ. ಆಕೆಯ ಕನಸು ನನಸಾಯಿತು. ಆಕೆ ಆಕಾಶವಾಣಿಯ ಪ್ರಸಿದ್ಧ ಗಾಯಕಿ ಎನಿಸಿದಳು. ಅನೇಕ ಕಡೆಗಳಲ್ಲಿ ಅವಳ ಚಿತ್ರಕಲಾ ಪ್ರದರ್ಶನಗಳನ್ನು ಪ್ರಕಾಶ ಏರ್ಪಡಿಸಲು ಯತ್ನಿಸಿ ಯಶಸ್ವಿಯಾದ. ಕುಮುದಿನಿಯ ಶ್ರೇಯಸ್ಸು ನಾಲ್ದೆಸೆಗೊ ಹಬ್ಬಿತು. ಈ ನಡುವೆ ಪ್ರದೀಪ ಎಂಬ ಮುದ್ದು ಮಗ್ಗು ಅವಳ ಮಡಿಲಲ್ಲಿ ಆಡ ತೊಡಗಿದ, ಆಕೆ ತನ್ನ ಮನೆ ನಂದನವನ ವೆಂದೇ ಹಿಗ್ಗ ತೊಡಗಿದಳು "ಪ್ರಕಾಶಸುದೈವಿ" ಎಂದು ನಾನು ಹಲವು ಬಾರಿ ಅಂದೆ. ಆದರೆ ನನ್ನ ದೃಷ್ಟಿಯೇ ಅವರ ಬಾಳಿಗೆ ತಗಲಿತೋ ಏನೋ ಪ್ರಕಾಶನಿಗೆ ಹುದ್ದೆಯಲ್ಲಿಪ್ರಗತಿ ದೊರೆತಂತೆ ಕೆಟ್ಟಚಾಳಿಗಳ ಸ್ನೇಹವಾಯಿತು. ದುರ್ಮಾರ್ಗಿಗಳಾದ ಗೆಳೆಯರ ಒಡನಾಟದಿಂದ ಆತ ಮದ್ಯಪಾನಕ್ಕೆ ಶರಣಾದ. ಸಿಗರೇಟಿಲ್ಲದೆ ಒಂದು ಕ್ಷಣವು ಜೀವಿಸಲಾರ ದಂತಾಯಿತು ಆತನ ಪರಿಸ್ಥಿತಿ. ಹೆಂಡತಿ ಮಕ್ಕಳನ್ನು ಆತ ಅಲಕ್ಷಿಸ ತೊಡಗಿದ್ದ. ಆದರೆ ಪಾಲಿಗೆ ಬಂದುದೇ ಪಂಚಾಮೃತವೆಂದು ತಿಳಿದು ಸಾಧ್ವಿ ಯಂತೆ ಕುಮುದಿನಿ ಬಾಳಿದಳು. ಸಂತಸದ ಸುಗ್ಗಿಯ ಸುಖವನ್ನು ಆತ ನೊಡನೆ ಸವಿದ ಆಕೆಗೆ ಕಹಿಯೂಟವೂ ಹಿತವೇ ಅನಿಸಿತು. ಪ್ರಕಾಶನ ಒಡನಾಟದಲ್ಲಿ ಏನನ್ನೂ ಅನುಭವಿಸಲು ಆಕೆ ಸಿದ್ಧಳಿದ್ದಳು

* * * *

ದೀಪಾವಳಿಯ ಶುಭದಿನದಂದು ದೊಡ್ಡ ರಂಗವಲ್ಲಿ ಪ್ರದರ್ಶನ ಏರ್ಪಡಿಸಲಾಗಿತ್ತು. ಊರಕೇರಿಗಳೆಲ್ಲ ದೇದೀಪ್ಯಮಾನವಾಗಿದ್ದಂತೆ ಕುಮುದಿನಿಯ ಹೃದಯವೂ ಬಾಳಿನ ಅತ್ಯುತ್ತಮ ಕ್ಷಣ ಕಂಡು ಹಿಗ್ಗಿ ನಲಿದಿತ್ತು. ಆಕೆಯ ಕಲಾ ಕೃತಿಗೆ ಪ್ರಥಮ ಪಾರಿತೋಷಕ ದೊರೆತಿತ್ತು ಬಹಳ ಕಾಲದ ಆಕೆಯ ಕನಸಿಗೆ ಇಂದು ಕಳೆಕಟ್ಟಿತ್ತು. ಆಕೆಯ ಆನಂದ ಚರಮ ಸೀಮೆಗೆ ತಲುಪಿತ್ತು. ಪ್ರಕಾಶನಂಥ ಬಾಳ ಗೆಳೆಯನ ಒಡನಾಟ ದಿಂದಲೇ ಜೀವನದಲ್ಲಿ ತಾನೀ ಕ್ಷಣ ಕಂಡನೆಂದು ಆಕೆ ಹಿಗ್ಗಿದಳೇ ಹೊರತು ತನ್ನ ಕಲಾ ಕೌಶಲ್ಯಕ್ಕೆ ದೊರೆತ ಪುರಸ್ಕಾರಕ್ಕಾಗಿಯಲ್ಲ. ಅಂದಿನ ದಿನ ತನಗೆ ಸನ್ಮಾನ ಸಿಗುವ ಸಮಾರಂಭ, ಪತಿ ಮುದ್ದು ಮಗ ಬಂದು ನೋಡಬೇಕೆಂಬ ಉತ್ಕಟೇಚ್ಛೆ ಅವಳಿಗಿತ್ತಾದರೂ ಪ್ರದೀಪನಿಗೆ ಹಿಂದಿನ ರಾತ್ರಿಯಿಂದಲೇ ಜ್ವರ ಮಿತಿ ಮೀರಿದ್ದರಿಂದ ಪ್ರಕಾಶ ಮಗನೊಡನೆ ಮನೆಯಲ್ಲೇ ಉಳಿಯ ಬೇಕಾಯಿತು. ಪಕ್ಕದ ಮನೆಯವರು ಪಟಾಕಿ, ಹೂಬಾಣಗಳೊಂದಿಗೆ ನಕ್ಕು ನಲಿಯುವುದನ್ನು ಮನೆಯಲ್ಲಿಯೇ ಕುಳಿತು ಈಕ್ಷಿಸುತ್ತಿದ್ದ. ತನಗಾಗಿ ತಂದ ಎಲ್ಲ ವಸ್ತುಗಳು ತಾಯಿಯ ಎದುರಿಗೆ ಸುಡಬೇಕೆಂಬ ಹಂಬಲ ಆ ಬಾಲಕನಿಗಿತ್ತು, ಆದರೆ.......

ಅತ್ತ ಪಾರಿತೋಷಕ, ಸನ್ಮಾನ ದೊರೆತ ಬಳಿಕ ಕುಮುದಿನಿ ಮನೆ ಯೆಡೆಗೆ ತ್ವರಿತಗತಿಯಿಂದ ಸಾಗಿದಳು. ತನಗೆ ದೊರೆತ ಗೌರವದಲ್ಲಿ ಪತಿಯೂ ಸಹಭಾಗಿಯಾಗಿದ್ದುದರಿಂದ ತನ್ನ ಪಾರಿತೋಷಕವನ್ನು ಆತನಿಗೆ ತೋರಿಸುವವರೆಗೆ ಆಕೆಗೆ ನೆಮ್ಮದಿ ಇರಲಿಲ್ಲ. ಮನೆ ಸಮೀಪಿಸಿದಂತೆಲ್ಲ ಆಕೆಯ ಆನಂದದ ಪರಮಾವಧಿ ಹೆಚ್ಚುತ್ತಲೇ ಇತ್ತು.

ಆದರೆ ಆಕೆ ಕಂಡ ದೃಶ್ಯವೇನು ? ಸಂತೋಷದ ಸಾಗರದಲ್ಲಿ ತೇಲುತ್ತಾ ಬರುತ್ತಿದ್ದ ಹಂಸಿಣಿಗೆ ಅದಾರೋ ಉರಿಯ ಜ್ವಾಲೆಗೆ ತಳ್ಳಿ ದಾಂತಾಗಿತ್ತು. ಅನಿರೀಕ್ಷಿತ, ಭಯಾನಕ ದೃಶ್ಯ ಕಂಡು ಆಕೆಗೆ ಕಣ್ಣು

ಕತ್ತಲೆ ಬಂದಂತಾಯಿತು. ಸಂತಸದ ಎಲ್ಲೇ ಮೀರಿದಾಗ ದುಃಖದ ಆಘಾತ ಆಕೆ ಹೇಗೆ ತಾನೆ ಸಹಿಸಿಯಾಳು ? ಆವಳ ಕಣ್ಣೆದುರಿನಲ್ಲಿಯೇ ನಂದನವನದಂತಿದ್ದ ಅವಳ ಮನೆ ಅಗ್ನಿಗೆ ಆಹುತಿಯಾಗಿತ್ತು. ಆ ಕರಾಳ ಅಗ್ನಿಜ್ವಾಲೆ ಆಕೆಯ ಪತಿಯನ್ನು. ಹೆತ್ತು ಹೊತ್ತ ಕಂದನನ್ನು ಕಬಳಿಸಿಬಿಟ್ಟಿತ್ತು. ಊರೆಲ್ಲ ದೀಪಗಳ ಬೆಳಕಿನಲ್ಲಿ ಕಂಗೊಳಿಸುತ್ತಿದ್ದಾಗ ಅವಳ ಹೃದಯವು ಅಂಧಕಾರದ ಛಾಯೆ ತಳೆದಿತ್ತು. ದೀಪಾವಳಿಯ ಹೂಬಾಣಗಳು, ಸಿಡಿಮದ್ದು ಅವಳ ಬಾಳ್ವೆಗೇ ಬೆಂಕಿಯಿಟ್ಟು ಅವಳನ್ನು ದುಃಖಸಾಗರಕ್ಕೆ ತಳ್ಳಿತ್ತು. ತಾನು ಮನಸಾರೆ ಪ್ರೀತಿಸಿದ, ಮತ್ತೆ ವರಿಸಿದ ಪತಿಯನ್ನು ಬಲಿ ತೆಗೆದುಕೊಂಡ ಆ ಅಗ್ನಿಗೆ ಆಕೆ ಹಿಡಿಶಾಪ ಹಾಕಿದಳು. ಒಂಬತ್ತು ತಿಂಗಳು ಉದರದಲ್ಲಿ ಹೊತ್ತು ಜನ್ಮವಿತ್ತು. ತನ್ನ ಬಾಳಿನ ದೀಪವೆಂದು ಬಗೆದಿದ್ದ ಪ್ರದೀಪನನ್ನು ಕಬಳಿಸಿಕೊಂಡ ಆ ಜ್ವಾಲೆಯಲ್ಲಿ ತಾನೇ ಧುಮುಕುವುದು ಒಳಿತು ಎಂದೆನಿಸಿತಾಕೆಗೆ "ಇಗೋ ಪ್ರಕಾಶ್, ನಾನೂ ಬಂದೆ, ಕಂದಾ ನನ್ನ ಅವಶ್ಯಕತೆ ಈಗ ನಿನಗೆ ಇಲ್ಲವಾಯಿತೆ?" ಎನ್ನುತ್ತಾ ಓಡಿಹೋಗಿ ಪತಿಯ ಚಿತೆಯ ಮೇಲೆ ಏರಬಯಸಿದಾಗ ಜನರೆಲ್ಲ ಆಕೆಯನ್ನು ತಡೆದರು. ಆದರೆ ಈ ಆಘಾತ ಎದುರಿಸಲಾರದೆ ಆಕೆ ಅಲ್ಲಿಯೇ ಮೂರ್ಛಿತಳಾದಳು, ಅವಳು ಅಂದು ಪಡೆದ ಪಾರಿತೋಷಕ ಕೈಯಿಂದ ಉರುಳಿ ನೆಲಕ್ಕೆ ಬಿದ್ದು ಮಣ್ಣು ಮೆತ್ತಿಕೊಂಡಿತ್ತು—ಅಲ್ಲದೆ ತನಗಿನ್ನಾರು ಗತಿ ಎಂಬಂತೆ ಒಂದು ಮೂಲೆ ಕಂಡಿತ್ತು, ನೆರೆದ ಜನರು ಅಂದಿನ ಅನಿರೀಕ್ಷಿತ ಘಟನೆಗಾಗಿ ಮರುಗಿದರು. ಆ ಕುಸಿದು ಬಿದ್ದವಳನ್ನು ಆಸ್ಪತ್ರೆಗೆ ಸಾಗಿಸಲಾಯಿತು. 'ಮನೆಯ ಒಳಗೆ ಇದ್ದ ವ್ಯಕ್ತಿಗಳನ್ನು ಬದುಕಿಸಲು ಆಗಲಿಲ್ಲವಲ್ಲ' ಎಂದು ಜನರು ತಮ್ಮನ್ನು ತಾವೇ ಹಳಿದು ಕೊಳ್ಳುತ್ತಿದ್ದರು. ಈ ಸುದ್ದಿ ಕೇಳಿ ನಾನೂ ಅಲ್ಲಿಗೆ ಧಾವಿಸಿದೆ, ಆದರೆ ಆಸ್ಪತ್ರೆಗೆ ಈಗಾಗಲೇ ಸಾಗಿಸಲ್ಪಟ್ಟ ಕುಮುದಿನಿಗೆ ಪ್ರಜ್ಞೆ ಬರಲು ಒಂಭತ್ತು ದಿನಗಳಾದುವು,"

"ನನಗೆ ಆಗ ತೀರ ದುಃಖವಾಯಿತು. ಪತಿ, ಪುತ್ರರೊಡನೆ ಆಕೆಯ ಕಲಾಕೃತಿಗಳನ್ನು ಸುಟ್ಟ ಬೆಂಕಿಯನ್ನು ನಾನು ಶಪಿಸಿದೆನು. ಆದರೆ ಕಾರ್ಯ

ಮಿಂಚಿ ಹೋಗಿತ್ತಲ್ಲವೆ? ನೆಟ್ಟಗ ಆಸ್ಪತ್ರೆಗೆ ಓಡಿದೆ, ದಿನವೂ ಹೋಗಿ ಬರುತ್ತಿದೆ. ಆದರೆ ಆಕೆಗೆ ಪ್ರಜ್ಞೆ ಬಂದಾಗ ಅವಳ ಕಣ್ಣುಗಳ ಕಾಂತಿ ಮಾಯವಾಗಿತ್ತು. ಶೂನ್ಯತೆ ಅಲ್ಲಿ ನೆಲೆಯಾಗಿತ್ತು. ಎದ್ದು ಕುಳಿತವಳೇ ತಾಸುಗಟ್ಟಲೆ ಆಳತೊಡಗಿದಳು. ಮತ್ತೆ ನಗಲು ತೊಡಗಿದಳು ನಗು ನಿಂತಾಗ ಅಳು, ಅಳು ನಿಂತಾಗ ನಗು—ಇವುಗಳಿಂದ ಆಕೆಯನ್ನು ತಡೆಯಲು ಯಾರಿಗೂ ಆಗಲಿಲ್ಲ. ಆಕೆಗೆ ಮರವೆ ಮುಸುಕಿತ್ತು' ಆಕೆ ಯಾರನ್ನೂ ಗುರುತಿಸಲಾರದಾದಳು. ಏನನ್ನೂ ಸ್ಮರಿಸದಾದಳು. ನಾನು ಹೋದಾ ಗಲೂ ದುರುಗುಟ್ಟಿ ನೋಡಿದ್ದ ಹೊರತು ನನ್ನನ್ನು ಗುರುತಿಸಲು ಆಕೆ ಯಲ್ಲಿ ಚೈತನ್ಯವಿರಲಿಲ್ಲವೆಂದು ನಾನು ತಿಳಿದು ಕೊಂಡೆ. ಆದರೆ ಮಾಡುವು ದೇನು? ವಿಧಿಯ ವೈಚಿತ್ರ್ಯದ ಮುಂದೆ ಮನುಷ್ಯನ ಆಟ ಸಾಗುವುದೆ? ಕಡೆಗೊಮ್ಮೆ ಹೇಗೋ ಆಸ್ಪತ್ರೆಯಿಂದ ತಪ್ಪಿಸಿಕೊಂಡು ಹೋದಳೆಂಬ ಸುದ್ದಿ ಹರಡಿತ್ತು. ಮತ್ತೆರಡು ತಿಂಗಳ ಬಳಿಕ ಅವಳು ದಿನವೂ. ಇದೇ ಗುಡಿಯ ಪಕ್ಕದಲ್ಲಿ, ಇದೇ ರೀತಿ ಕುಳಿತು, ಪ್ರಶ್ನಾರ್ಥಕ ಚಿನ್ನೆಗಳನ್ನು ಬರೆಯ ತೊಡಗಿದಳು. ಯಾರಾದರೂ ಸಮೀಪಕ್ಕೆ ಹೋದರೆ ಕೆಲವೊಮ್ಮೆ ಕಲ್ಲೂ ಎಸೆಯುತ್ತಿದ್ದಳಂತೆ ನಾನೊಮ್ಮೆ ಹೋದಾಗಲೂ ನನ್ನೆಡೆ ಕಲ್ಲು ಎಸೆದು "ಬೆಂಕಿ, ಬೆಂಕಿ" ಎಂದು ಚೀರಿ ಕಿಲಕಿಲನೆ ನಗತೊಡಗಿದಳು. ಮತ್ತೆ ದಿನವೂ ಒಮ್ಮೆ ಇಲ್ಲಿಗೆ ಬಂದು ದೂರದಿಂದ ಅವಳನ್ನು ಕಂಡು, ಅವಳ ಮೇಲೆ ನಡೆಯುತ್ತಿದ್ದ ಅನ್ಯಾಯಗಳನ್ನು ಕಂಡು ಮೂಕವೇದನೆ ಅನುಭವಿಸ ತೊಡಗಿದೆ, ಇನ್ನೂ ಅವಳನ್ನು ನಿನಗೊಪ್ಪಿಸಿದ್ದೇನೆ. ಅವಳ ಭಾರ ನಿನಗೆ. ನೀನು ಹೆಸರಾಂತ ಮನಃಶಾಸ್ತ್ರಜ್ಞ. ಬಾ—ಹೋಗೋಣ. ಅವಳಿದ್ದೆಡೆಗೆ" ಎಂದು ನವೀನ ಗೆಳೆಯನ ಜೊತೆಗೆ ಗುಡಿಯ ಮುಂಭಾಗಕ್ಕೆ ಬಂದ. ಅದೇ ರೀತಿ ಆಕೆ ಸೀಮೆಸುಣ್ಣದಿಂದ ಗೀರುತ್ತಾ ಕುಳಿತ್ತಿದ್ದಳು ಆಕೆ.

ರಮೇಶ್, ಅವಳಿಗೆ ನೀನು ಜೀವನ ಕೊಡಬಲ್ಲೆ ತಾನೆ? ಮನಸ್ಸು ಮಾಡಿದರೆ ನೀನು ಅವಳನ್ನು ಹಿಂದಿನ ಸ್ಥಿತಿಗೆ ತರಬಲ್ಲೆ ಮೃದುಲೆ ನಾನು ನಿನಗೆ ತುಂಬಾ ಅಭಾರಿಯಾಗದಿರೆವು."

"ನವೀನ್, ಪ್ರಯತ್ನಪಟ್ಟರೆ ಆಕೆ ಸುಧಾರಿಸಲೂ ಬಹುದು. ಆದರೆ ಆಜೀವಪರ್ಯಂತ ಆಕೆ ಹೀಗೆ ನರಳಿದರೆ ಒಳಿತು. ಇಲ್ಲದೇ ಹೋದರೆ ಗತ ಜೀವನದ ನೆನಹು ಆಕೆಗಾಯಿತೆಂದರೆ ಮತ್ತೆ ಅವಳನ್ನು ಜೀವಂತ ಕೊಂದಂತೆ -ನವೀನ್, ಯೋಚಿಸಿ ನೋಡು ವಿಧವೆಯ ಬಾಳು ಆಕೆ ಎದುರಿಸಲಾರಳು"

"ರಮೇಶ್, ಈಗಿನ ಅವಳ ಬದುಕೂ ಒಂದು ಬದುಕೆ? ಇದರ ಬದಲು ಆಕೆ ಸತ್ತರೆ ಮೇಲು. ಸಮಾಜದ ದೃಷ್ಟಿ ಅವಳನ್ನು ಹೇಗೆ ಕಾಣುತ್ತಿದೆಯೆಂದು ನೀನೆ ಕಣ್ಣಾರೆ ಕಂಡೆಯಲ್ಲವೆ? ಛೇ, ಹೀಗಾಗ ಬಾರದಿತ್ತು. ಆಗಿ ಹೋಗಿದೆ. ಈಗ ಉಪಚಾರಕ್ಕೆ ಮಾತನಾಡಿದರೆ ಆಯಿತೇನು? ನೀನಾಕೆಯನ್ನು ಗುಣಪಡಿಸುವೆಯಲ್ಲವೆ? ಮೆಂಟಲ್ ಆಸ್ಪತ್ರೆಯಲ್ಲಿಟ್ಟು ಚಿಕಿತ್ಸೆ ಮಾಡಲು ಆಗದೆ?" ಎಂದು ನವೀನ್ ಅಂಗಲಾಚಿ ರಮೇಶನನ್ನು ಬೇಡಿದ.

ಗೆಳೆಯನನ್ನು ಸಂತೈಸುತ್ತಾ ರಮೇಶ ಹೀಗೆಂದ. "ಏಕೆ ಇಷ್ಟು ದುಗುಡ? ದೈವಸಂಕಲ್ಪ ಯಾರೂ ಬದಲಿಸಲಾರರು. ನಾನು ನನ್ನ ಶಕ್ತಿಮೀರಿ ಯತ್ನಿಸುವೆ. ಭರವಸೆ ಈಗಲೇ ಕೊಡಲಾರೆ. ನಿನಗನಿಸ ಬಹುದು ಈ ಪ್ರಶ್ನಾರ್ಥಕ ಚಿಹ್ನೆ ಏಕೆ ಎಂದು ಆದರೆ ನೀನದನ್ನು ತಿಳಿಯಲಾರೆ. ಕೇಳು ಜೀವನದುದ್ದಕ್ಕೂ ಕುಮುದಿನಿ ಅನ್ಯಾಯ ಮಾಡಿಲ್ಲ ತಪ್ಪು ಹೆಜ್ಜೆ ಹಾಕಿಲ್ಲ. ತಾನಿಷ್ಟು ಸಹನೆ, ಧರ್ಮ, ಪಾತಿವ್ರತ್ಯದ ಚೌಕಟ್ಟಿನಲ್ಲಿಯೇ ಇದ್ದು ಕಲಾರಾಧನೆ ಮಾಡುತ್ತಿದ್ದರೂ ತನ್ನನ್ನು ವಿಧಿ ಏಕೆ ಪೀಡಿಸುತ್ತಿದೆ ಎಂದೇ ಆಕೆಗೆ ಅಚ್ಚರಿ. ಎಲ್ಲ ಮರೆತರೂ ಮೂರ್ಛೆ ಹೋಗುವ ವೇಳೆಯಲ್ಲಿ ಆಕೆಯಲ್ಲಿ ಮೂಡಿದ ಈ ಪ್ರಶ್ನೆ ಇಂದು ಸೀಮೆ ಸುಣ್ಣದ ಆಧಾರದಿಂದ ಗುಡಿಯ ಸುತ್ತಮುತ್ತ ಮೂಡುತ್ತಿದೆ, ಆಕೆಯ ಸಮಸ್ಯೆ ಬಗೆಹರಿಸುವವರಾರು?"

"ಈ ಸಮಸ್ಯೆ ಎಂದೆಂದಿಗೂ ಬಗೆಹರಿಸಲಾರದ ಸಮಸ್ಯೆ ಕೇವಲ ನಿನ್ನ ಕುಮುದಿಯದಲ್ಲ. ಜಗತ್ತಿನ ಚರಾಚರ ವಸ್ತುಗಳೆಲ್ಲದರ ಮುಂದೆ ನಿಂತಿರುವ ಗುರುತರವಾದ ಪ್ರಶ್ನೆ ತಾನೆ? ಅದಕ್ಕಾಗಿಯೇ ಜನಕ್ಕೆ ಕಾಣದ

ಭವಿಷ್ಯ ಎಲ್ಲರ ಪಾಡಿಗೂ ಪ್ರಶ್ನಾರ್ಥಕ ಚಿಹ್ನೆಯೇ ಸರಿ" ರಮೇಶನ ಮಾತು ಮುಗಿಯುವ ಹೊತ್ತಿಗೆ ಮತ್ತೆ! ಹ್ಹಹ್ಹಹ್ಹಾ! ಓಹ್ಹೊಹ್ಹೊ. ಎಂಬ ನಗುವಿನ ಸದ್ದು, ಮತ್ತ ಅದನ್ನು ಹಿಂಬಾಲಿಸಿ ಅಳುವ ಸದ್ದೂ ಕೇಳತೊಡಗಿತು.

"ಮತ್ತೆ ನೋಡೋಣ ನವೀನ್, ನನ್ನ ಪ್ರಯತ್ನದಿಂದ ಒಂದು ಹುಡುಗಿಯ ಜನ್ಮ ಸಾರ್ಥಕವಾದರೆ ಸರಿ. ಇಲ್ಲವೆ ಹೆಚ್ಚು ಮನಸ್ಸಿಗೆ ಹಚ್ಚಿಕೊಂಡು ದುಃಖಿಸಬೇಡ. ತಡವೆಷ್ಟೋ ಆಯಿತು. ಹೊರಡೋಣ ಅಲ್ಲವೆ?" ಇಬ್ಬರೂ ಎದ್ದರು. ಬಲುದೂರ ಮುಟ್ಟುವವರೆಗೆ ಕುಮುದಿನಿಯ ಅಳು—ನಗು, ಅಳು–ಗುಡಿಯ ಸುತ್ತ ಮುತ್ತಲಿನ ಆವರಣ ತುಂಬಿತ್ತು.

—o*o—

# ಒಂಟಿ ಪಕ್ಷಿ

—ಛಾಯಾದೇವಿ ನಂಜಪ್ಪ

ಅನಿರೀಕ್ಷಿತವಾಗಿ ನನ್ನ ಮಗ ಚಿದು ತನ್ನ ಗೆಳೆಯರೊಬ್ಬರನ್ನು ಕರೆತಂದು ನನಗೆ ಪರಿಚಯಿಸಿದಾಗ ಬಂದ ಆ ವ್ಯಕ್ತಿಯನ್ನು ಕಂಡು ಸಂತೋಷದ ಜೊತೆಗೆ ಅಚ್ಚರಿಯೂ ಆಗಿತ್ತು.

"ಬನ್ನಿ ನೀವು ಬಂದಿದ್ದು ತುಂಬಾ ಸಂತೋಷ ಆಯ್ತು. ಸೋಫಾದತ್ತ ಕೈ ತೋರಿಸಿ ಸ್ವಾಗತಿಸಿದೆ.

"ಅಮ್ಮ, ಜಯರಾಜು ಅಂತ, ಇವರು ಪ್ರತಿದಿನ ಬೆಂಗಳೂರಿಗೆ ರೈಲಿನಲ್ಲಿ ಬರುತ್ತಾರೆ. ನನಗೆ ಒಳ್ಳೆಯ ಜೊತೆ ಮತ್ತು ತುಂಬಾ ಒಳ್ಳೆಯ ಮನುಷ್ಯರು.

ಆತ ನನಗೆ ಕೈ ಮುಗಿದು ಮುಗುಳ್ನಕ್ಕು ಹೇಳಿದರು..."ನಿಮ್ಮ ಮಗ ನಿಮ್ಮ ವಿಷಯ ಹೇಳಿದರು. ನನಗಂತೂ ತುಂಬಾ ಸಂತೋಷ ಆಯ್ತು ಕಥೆ ಕಾದಂಬರಿ ಬರೆಯುತ್ತಾರೆ. ಸ್ವಲ್ಪ ಪುಸ್ತಕಗಳು ಪ್ರಕಟಣೆ ಆಗಿದೆ ಎನ್ನುವುದನ್ನು ಕೇಳಿದ್ದೆ, ಮೊನ್ನೆ ನಿಮ್ಮ ಪುಸ್ತಕಗಳನ್ನು ಓದಿದ ಮೇಲೆ ನಿಮ್ಮನ್ನು ನೋಡಬೇಕೆಂಬ ಅಭಿಲಾಷೆಯಿಂದಲೇ ಬಂದೆ .."

"ನೀವು ನನ್ನ ಮೇಲೆ ಅಷ್ಟು ವಿಶ್ವಾಸವಿಟ್ಟು ಬಂದು ನಿಮ್ಮ ಅಭಿಮಾನವನ್ನು ವ್ಯಕ್ತಪಡಿಸಿದ್ದಕ್ಕಾಗಿ ನನ್ನ ಕೃತಜ್ಞತೆಗಳು.

—ಹೀಗೆನ್ನುತ್ತಾ ಒಳಗೆ ಹೋಗಿ ತಿಂಡಿ ಕಾಫಿ ತಂದಿತ್ತು ಉಪಚರಿಸಿದೆ ಆತ ಬರ್ತ್ತೀನಿ,

—ಎನ್ನುತ್ತ ಕೈಮುಗಿದರು. ನನ್ನ ಕಥೆ ಕಾದಂಬರಿಗಳ ಬಗ್ಗೆ ಸಾಕಷ್ಟು ಮಾತನಾಡಿ ಮೇಲೆದ್ದು

"ಆಯ್ತು ಆಗಾಗ್ಗೆ ಬರ್‍ತಾ ಇರಿ".–

ಎಂದೆ ಬೀಳ್ಕೊಡುತ್ತ, ಇದೆ ನನ್ನ ಅವರ ಪರಿಚಯ.

ಒಂದು ದಿನ ಜಯರಾಜ್ ವಿಷಯ ಬಂದಿತು. ಅವರು ನಮ್ಮ ಮನೆಗೆ ಸ್ವಲ್ಪ ದೂರದಲ್ಲಿದ್ದರು. ಅವರ ಮನೆಯ ಪಕ್ಕದ ಮನೆಯಾಕೆ ರಾಧಮ್ಮ ಬಂದು ನನ್ನಲ್ಲಿ ಮಾತನಾಡಿದರು.

"ನೋಡಿ ಜಯರಾಜು ತುಂಬ ಒಳ್ಳೆಯ ಮನುಷ್ಯ ಸಾವಿರಾರು ರೂಪಾಯಿಯ ಮೇಲೆ ದುಡಿಯುತ್ತಾನೆ, ಸ್ವಂತ ಮನೆ ಕಟ್ಟಿಸಿದ್ದಾರೆ. ಇಷ್ಟೆಲ್ಲ ಇದ್ದರು, ಆತನಿಗೆ ವಯಸ್ಸಾದರು, ಅವರ ಮನೆಯಲ್ಲಿ ಮದುವೆ ಚಿಂತೆಯೆ ಮಾಡಿಲ್ಲ, ನಮ್ಮಕ್ಕನ ಮಗಳು ಆಶಾ. ಪದವೀಧರೆ ಸಾಕಷ್ಟು ಕೊಟ್ಟುಬಿಟ್ಟು ಮದುವೆ ಮಾಡ್ತಾರೆ, ಹುಡುಗಿ ಕೆಲಸದಲ್ಲು ಇದ್ದಾಳೆ. ನೀವು ಒಂದು ಮಾತುಹೇಳಿ ಜಯರಾಜು ಆದಿನ ನಿಮ್ಮ ಮನೆಗೆ ಬಂದಿದ್ದನ್ನು ನೋಡಿದ್ದೆ, ಅದಕ್ಕೋಸ್ಕರ ಬಂದೆ ಎಂದರು ರಾಧಮ್ಮ.

—ಜಯರಾಜು ಅಚ್ಚ ಬಿಳುಪಿನ ಐದುಮುಕ್ಕಾಲು ಅಡಿ ಎತ್ತರದ ದಷ್ಟಪುಷ್ಟವಾದ ಸುಂದರ ಸುಘಟಿತ ತನುಬಿಂಬವನ್ನು ಪಡೆದಿದ್ದ. ತೇಜಸ್ವೀ ತರುಣ. ಒಮ್ಮೆ ನೋಡಿದರೆ ಮತ್ತೆ ನೋಡ ಬೇಕೆಂಬ ವ್ಯಕ್ತಿ ಎಷ್ಟೇಜನದ ಗುಂಪಿನಲ್ಲಿದ್ದರು, ಓ ಜಯರಾಜು ಅಲ್ಲಿ ದ್ದಾರೆ ಎಂದು ಬೆರಳು ತೋರಿಸುವಂಥ ಮನುಷ್ಯ. ಇಂಥ ಮನುಷ್ಯ ಇನ್ನೂ ಮದುವೆಯಾಗಿಲ್ಲ ಎಂದರೆ ಅಚ್ಚರಿ. ಆಗಲಿ ನಾನು ಒಂದು ಮಾತು ಹೇಳ್ತೀನಿ. ಆದರೆ ಅವರ ಮನೆಯಲ್ಲಿ ಇನ್ನಾರೂ ಇಲ್ಲವೆ,?

"ಎಲ್ಲಾ ಇದ್ದಾರೆ ಇವರು ತಂದು ಹಾಕಿದ್ದನ್ನು ಧ್ವಂಸಮಾಡಲು ತಾಯಿ, ಅಣ್ಣ, ಅತ್ತಿಗೆ, ನಾಲ್ಕು ಮಕ್ಕಳು, ಒಬ್ಬ ಐಲು ಫೈಲಾಗಿರುವ ತಮ್ಮ, ಮದುವೆ ಮಾಡಿದರೆ ಸಂಪಾದನೆ ಸಿಕ್ಕುವುದಿಲ್ಲವಲ್ಲ ಎಂದು ಮಾಡಿಲ್ಲ ಅಂತ ಕಾಣುತ್ತೆ.

"ಆಯ್ತು ನಾನು ಪ್ರಯತ್ನ ಪಡ್ತೀನಿ,"

—ಎಂದೆ ಆಕೆಯನ್ನು ಬೀಳ್ಕೊಟ್ಟು, ಜಯರಾಮು ಮದುವೆಯ ರಾಯಭಾರವನ್ನು ಸಂತೋಷದಿಂದ ಒಪ್ಪಿ ನಾನು ಸ್ವಲ್ಪದಿನ ಬಿಟ್ಟು ನನ್ನ ಚಿದೂಗೆ ಹೇಳಿದೆ.

"ಜಯರಾಜು ಸಿಕ್ತಾರಲ್ಲ ಸ್ವಲ್ಪ ಬರಹೇಳು.

"ಇಲ್ಲಮ್ಮ ಈಗ ಹದಿನೈದು ದಿನದಿಂದ ಅವಕು ಬರುತ್ತಿಲ್ಲ,

"ಏಕೆ?"

"ಅವರಿಗೆ ಹುಷಾರಿಲ್ಲ ತುಂಬ ಚಿಂತಾಜನಕ ಸ್ಥಿತಿಯಲ್ಲಿಯೆ ಇದ್ದಾರೆ. ದೊಡ್ಡದಾದ ಶಸ್ತ್ರ ಚಿಕಿತ್ಸೆ ಆಗಿದೆ. ನಾನು ಹೋಗಿ ನೋಡಿಬರ್ತೀನಿ ಎಂದರು ಅವರ ಸ್ನೇಹಿತರು,

"ಎಂಥ ಕೆಲಸ ಆಯ್ತು, ನನಗೂ ಅವರನ್ನು ನೋಡಬೇಕು ಅನ್ನಿಸಿದೆ ನೀನು ಬರ್ತೀಯ ಹೋಗಿ ಬರೋಣ,

ನನಗೆಲ್ಲಿ ಆಗುತ್ತೆ, ಭಾನುವಾರ ಖಂಡಿತ ಹೋಗ್ತೀನಿ.

—ಎಂದ ನನ್ನ ಮಗ. ನಾನೇ ಹೋಗಲು ಮನಸ್ಸು ಮಾಡಿದೆ.

ಆಸ್ಪತ್ರೆಯಲ್ಲಿ ಜಯರಾಮು ಅವರನ್ನು ನೋಡಿ ನನಗೆ ತುಂಬಾ ಸಂಕಟವಾಯ್ತು. ಶಸ್ತ್ರ ಚಿಕಿತ್ಸೆಯ ಅಘಾತ ಅವರನ್ನು ಬಹಳ ಹಣ್ಣು

ಮಾಡಿತ್ತು. ಅಕ್ಕಪಕ್ಕದ ಮಂಚದವರು ಜಯರಾಜು ವಿಷಯವನ್ನು ಮಾತನಾಡಿ ಆಯಪ್ಪ ಬದುಕುವುದು ಕಷ್ಟ—ಎನ್ನುತ್ತಿದ್ದರು. ಕಣ್ಣು ಮುಚ್ಚಿ ಮಲಗಿದ್ದ. ಆತನನ್ನು ಎಬ್ಬಿಸಿದ.

"ಅಣ್ಣಯ್ಯ ನೋಡು ಯಾರು ಬಂದಿದ್ದಾರೆ ?

—ಆ ಕ್ಷಣ ಆತ ಕಣ್ಣುಬಿಟ್ಟು ಮುಗುಳ್ನಕ್ಕು ಸ್ವಾಗತಿಸಿದರು.

"ಬನ್ನಿ ಬನ್ನಿ ಕೂತ್ಕೊಳ್ಳಿ, ಕುರ್ಚಿಯತ್ತ ಕೈತೋರಿಸಿ ಹೇಳಿದರು.

—ಎಂದರು ದರಳುತ್ತ ಅಪ್ಪು ಚೆನ್ನಾಗಿದ್ದ, ಆತನ ಮುಖ ಬಾಡಿ ಬಕ್ಕಲಾಗಿತ್ತು ತುಂಬುಗೆನ್ನೆ ಬತ್ತಿಹೋಗಿ ಕಣ್ಣುಗಳೆರಡು ತಮ್ಮ ಹೊಳಪನ್ನು ಪ್ರದರ್ಶಿಸಲಾರದೆ ಆಳದಲ್ಲಿ ಸೇರಿದಂತೆ ಭಾಸವಾಗುತ್ತಿತ್ತು. ಆ ಕ್ಷಣ ಅವರನ್ನು ನೋಡಿ ಅನ್ನಿಸಿತು, "ಇವರೇನೆ ಜಯರಾಜು !

ನನ್ನನ್ನೆ ನಾನು ಪ್ರಶ್ನಿಸಿಕೊಳ್ಳುವಂತಾಗಿತ್ತು. ಆತನ ಪರಿಸ್ಥಿತಿ !

ಸ್ವಲ್ಪ ಹೊತ್ತು ಮಾತನಾಡಿ ಹಣ್ಣು ಸುಲಿದಿತ್ತು ಕೇಳಿದೆ.

"ನಿಮ್ಮಲ್ಲಿ ಒಂದು ವಿಷಯ ಮಾತನಾಡೋಣ ಅಂದ್ಕೊಂಡಿದ್ದೆ ಅಷ್ಟರಲ್ಲಿಯೇ ನಿಮಗೆ ಹೀಗಾಯ್ತು.

"ಯಾವ ಸಂಕೋಚವು ಬೇಡಿ, ಹೇಳಿ ಏನು ವಿಷಯ?.

"ಈಗ ಬೇಡ ಬಿಡಿ.

"ಇಲ್ಲ ಹೇಳಿ.

ನಾನು ಸ್ವಲ್ಪ ಹೊತ್ತು ಬಿಟ್ಟು, ನಿಧಾನವಾಗಿ ಹೇಳಿದೆ.

"ಇನ್ನೇನು ಇಲ್ಲ ನಿಮ್ಮ ಮದುವೆ ವಿಷಯ"

—ಎಂದೆ ರಾಧಮ್ಮ ಬಂದು ಹೇಳಿದ ಎಲ್ಲಾ ವಿಷಯವನ್ನು ತಿಳಿಸಿ. ಆಕ್ಷಣ ಆತನ ಮುಖದ ಬಣ್ಣವೆ ಬದಲಾಗಿ ಚಿಮ್ಮಿ ಬಂದ ಕಣ್ಣೀರನ್ನು ಅಲ್ಲೆ ತಡೆಗಟ್ಟಿ ಗದ್ಗದಿಸಿದರು.

"ನನ್ನ ಮದ್ವೆ ಆಗಿಲ್ಲ ಅಂತ ನಿಮ್ಮ ಹತ್ತಿರ ಯಾರು ಹೇಳಿದರು?.

ಈ ಮಾತು ಕೇಳಿದ ಕೂಡಲೆ ಷಾಕ್ ಹೊಡೆದು ತತ್ತರಿಸುವಂತಾಗಿ ಸ್ವಲ್ಪ ಹೊತ್ತು ಚೇತರಿಸಿಕೊಂಡು ಕೇಳಿದೆ.

"ಹಾಗಾದರೆ ನಿಮ್ಮ ಮದುವೆ ಆಗಿದೆಯೆ?.

ಆತ ಮುಖಬಾಡಿಸಿ ದುಃಖದಿಂದ ಹೇಳಿದರು

"ನನ್ನ ಬಾಳೆ ಒಂದು ಕತೆ. ನನ್ನ ಮದುವೆಯದೆ ಒಂದು ಕತೆ. ನಾನು ಇನ್ನು ಜೀವಂತ ಉಳಿದಿರುವುದು ಒಂದು ಕತೆಯೆ?.

"ಓ ನನಗೆ ಗೊತ್ತಿರಲಿಲ್ಲ ......."...........ಎಂದೆ ನಿರಾಸೆಯಿಂದ

"ಹಾಗಾದರೆ........"........ಆತ ಮುಖ ನೋಡಿ ಕೇಳಿದರು.

"ಸರಿ ನಿಮ್ಮ ಬಾಳು ತುಂಬಿ ಬಾರದೆ ಬದುಕು ಬರಿದಾಯಿತೇಕೆ.?"

—ಆತ ಕಂಬನಿಯೊರಸಿಕೊಂಡು ಗದ್ಗದಿಸಿದರು.

"ನಾನು ಸಂಸಾರಸ್ಥನಾಗಿ ಹೆಂಡತಿ ಮಕ್ಕಳೊಂದಿಗೆ ಬಾಳುತ್ತಿದ್ದೆನೇನೊ. ಆದರೆ ನಮ್ಮಣ್ಣ ನಮ್ಮ ಅತ್ತಿಗೆಗೆ ನಾನು ಸುಖ ಸಂತೋಷದಿಂದಿರುವುದು ಸಹಿಸಲಾರದೆ ನನ್ನ ಬಾಳಿಗೆ ಸೂಡು ಒಟ್ಟಿದರು. ಬಾಳೆ ಉರಿದು ಹೋದ ಮೇಲೆ ಬದುಕು ಬರಿದಲ್ಲವೆ?

—ಹಾಗೆಂದವರೆ ದಿಂಬಿನಡಿಯಲ್ಲಿದ್ದ ಒಂದು ಸುಂದರವಾದ ಭಾವಚಿತ್ರವನ್ನು ನನ್ನ ಕೈಲಿಟ್ಟು, ಬಿಕ್ಕಳಿಸಿದರು.

"ನಾನು ಮದುವೆ ಆಗಿದ್ದೆ ಎಂಬ ಗುರುತಿಗೆ ಇದೊಂದಿದೆ. ನನ್ನ ರಜನಿಯ ಜೊತೆಯಲ್ಲಿ ಆರು ತಿಂಗಳು ಸಂಸಾರಮಾಡಿದ್ದೆ. ಎಂಬುವುದಕ್ಕೆ ಇದಿಷ್ಟೆ ಉಳಿದಿರುವುದು.

—ಎಂದರು ಕಣ್ಣೊರಸಿಕೊಳ್ಳುತ್ತ, ಅಯ್ಯೊ ಎಂಥ ಸುಂದರವಾದ ಜೋಡಿ ಯಾವ ಪಾಪಿ ದೃಷ್ಟಿಬಡಿಯಿತೊ ಅನ್ನಿಸಿತು. ಇಂಥ ದಾಂಪತ್ಯ ವನ್ನು ಅಗಲಿಸಿದ ಆ ದುರಾತ್ಮರಿಗೆ ದೇವರು ಎಂದಿಗು ಒಳ್ಳೆಯದು ಮಾಡಲಾರ ಎನ್ನಿಸಿ ತುಂಬಿಬಂದ ಕಣ್ಣೀರನ್ನು ಒರೆಸಿಕೊಂಡೆ.

"ನಿಮಗೂ ಕಣ್ಣೀರು ಬಂದಿತಲ್ಲ ?.

"ನನ್ನದು ಹೃದಯವಲ್ಲವೆ ಇಂಥ ಕೆಲಸವನ್ನು ಯಾರು ಮಾಡುತ್ತಾರೆ.

"ಮಾಡಿದರಲ್ಲ.......ಎಂದರು ತಮ್ಮ ಬಾಳು ಇಬ್ಬಾಗವಾದ ಕಹಿ ನೆನಪುಗಳ ಪುಟಗಳನ್ನು ಒಂದೊಂದಾಗಿ ಮಗುಚಿಹಾಕಿ.

ಜಯರಾಜು ಅಣ್ಣ ನಟೇಶನು ನಿರುದ್ಯೋಗಿ ಅಲ್ಲಿ ಇಲ್ಲಿ ನಾಟಕ ಕಲಿಸುವ ಹವ್ಯಾಸವೊಂದನ್ನು ಬಿಟ್ಟರೆ ಮತ್ತಾವ ಉದ್ಯೋಗವೂ ಇಲ್ಲ. ಅವನ ಸಂಪಾದನೆ ಎಂಟುದಿವಸಕ್ಕೂ ಸಾಲದು. ನಾಲ್ಕು ಜನ ಮಕ್ಕಳ ವಿದ್ಯಾಭ್ಯಾಸ ಸಂಸಾರದಹೊರೆ ತಾಯಿ ತಮ್ಮನ ಜವಾಬ್ದಾರಿ ಎಲ್ಲವು ಜಯರಾಜು ಹೆಗಲನ್ನೇರಿ ಸವಾರಿ ಮಾಡತೊಡಗಿತ್ತು.

ಮೊದಲಿನಿಂದಲು ಕಷ್ಟಪಟ್ಟು ಮೂರು ಡಿಗ್ರಿಗಳನ್ನು ಪಡೆದಿದ್ದ ಜಯರಾಜುವಿಗೆ ಕೆಲಸ ಸಿಕ್ಕುವುದೇನು ಕಷ್ಟವಾಗಿರಲಿಲ್ಲ.

ಆದರೆ ತಾಯಿ ಹೇಳುತ್ತಿದ್ದರು.

"ಆಯ್ತಲ್ಲಪ್ಪ ಓದಿದ್ದು ಕೆಲಸವಿಲ್ಲ ಇನ್ನು ಮದುವೆಮಾಡ್ಕೊ"

"ಸುಮ್ಮನಿರಮ್ಮ ಬಾಡಿಗೆ ಮನೆಗೆ ನನ್ನ ಹೆಂಡ್ತಿ ಕರ್ಕೊಂಬರೋಲ್ಲ ಸ್ವಂತ ಮನೆಕಟ್ಟಿ ಮದ್ವೆಮಾಡ್ಕೊತೇನೆ"

"ಹಾಗೆ ಮಾಡಪ್ಪ"—ಎಂದರು ರುದ್ರಮ್ಮ.

ಆ ವರ್ಷವೇ ಮನೆಗೆ ನಿವೇಶನ ಪಡೆದು ಆಫೀಸ್ ಮೂಲಕ ಸಾಲ ಪಡೆದು ಅಡವತ್ತು ಸಾವಿರ ರೂಪಾಯಿ ಖರ್ಚುಮಾಡಿ, ಸುಂದರವಾದ ಮನೆಯನ್ನು ಕಟ್ಟಿಸಿದ. ಹೊಸ ಮನೆಗೆ ಅಣ್ಣ ಅತ್ತಿಗೆ ತಾಯಿ ತಮ್ಮ ಎಲ್ಲರು ಬಂದು ವಾಸಿಸಲಾರಂಭಿಸಿದರು. ಜಯರಾಜು ಹಿಂದೆ ಬಾಡಿಗೆ ಮನೆಯಲ್ಲಿದ್ದಾಗ ತಮ್ಮ ಪಕ್ಕದ ಮನೆಯಲ್ಲೆ ಬಹಳ ದಿನದಿಂದ ಬಾಡಿಗೆಗಿದ್ದ ಅನಂತಯ್ಯ ಲಲಿತಮ್ಮ ಇವರ ಮಗಳು ರಜನಿ ಕಾಲೇಜಿನಲ್ಲಿ ಜಯರಾಜು ಜೊತೆಯಲ್ಲಿಯೆ ಡಿಗ್ರಿ ಮುಗಿಸಿದಳು.

ಅಂದಿನಿಂದ ಇದ್ದಸ್ನೇಹ ಇಂದು ಬಾಂಧವ್ಯರೂಪಕ್ಕೆ ತಿರುಗಿತು.

ಸುಂದರಿಯಾದ ರಜನಿಯ ರೂಪಿಗೆ ಜಯರಾಜು ಮಾರುಹೋದ ರಜನಿ ತೆಳ್ಳಬೆಳ್ಳಗಿನ ಒತ್ತಾದ ನೀಳ ಜಡೆಯ ಬಗಸೆಗಂಗಳಿನ ಬಟ್ಟ ಮುಖದ ಚಮಕ್ ಹುಡುಗಿ ಕಾಲೇಜಿನ ಪ್ರತಿಯೊಬ್ಬರ ಬಾಯಲ್ಲಿ ನಲಿದ ಹೆಸರು. ಎಂಥ ರೂಪಸಿ, ಎಂಥ ಸುಂದರಿ, ಹೀಗೆಂದು ಅವಳನ್ನು ಮದುವೆಯಾಗಲು ಕಾತರಿಸಿದವರು ಬಹಳ ಜನ ! ಆದರೆ ಅರಳಿ ಪರಿಮಳ ಬೀರುತ್ತಿದ್ದ ಸುಮಧುರ ಹೂವನ್ನು ಜಯರಾಜು ಎಂಬ ದುಂಬಿ, ಹಾರಿ ಬಂದು ತನ್ನ ಪ್ರೇಮ ಸುಧೆಯನ್ನು ಧಾರೆಯೆರೆದು ಆ ಸುಂದರ ವಸ್ತುವನು ತನ್ನದಾಗಿಸಿಕೊಂಡು ತನ್ನ ಹೃದಯ ಮಂದಾಸನದಲ್ಲಿ ಆರಾಧಿಸಿತ್ತು, ಆದರಿಸಿತ್ತು. ನಾನೇ ಮದುವೆಯಾಗುತ್ತೇನೆ ಎಂಬ ಆಶ್ವಾಸನೆಯನ್ನು ನೀಡಿತ್ತು.

ಆದರೆ ಜಯರಾಜು ಲಿಂಗಾಯಿತರವನು ರಜನಿ ಈಡಿಗರ ಜಾತಿಯಲ್ಲಿ ಹುಟ್ಟಿದವಳು. ಇಬ್ಬರ ಜಾತಿಗೂ ಅಂತರವಿತ್ತು. ಆದರೆ ಪ್ರೀತಿಗೆ ಅಂತರವಿರಲಿಲ್ಲ. ಆ ಅಂತರವನ್ನು ದೂರಸರಿಸಿ ತಾಯಿಗೆ ಹೇಳಿದ್ದ.

"ಅಮ್ಮ ನಾನು ಯಾವ ಆಡಂಬರದ ಮದುವೆಗೂ ಒಪ್ಪುವುದಿಲ್ಲ, ನಾನು ರಿಜಿಸ್ಟರ್ ಮದುವೆ ಮಾಡಿಕೊಳ್ಳುವವನು. ನಾನು ಕರೆತಂದ

ಹುಡುಗಿಯನ್ನು ನೀನು ಸೊಸೆ ಎಂದು ಸ್ವೀಕರಿಸಬೇಕು. ಇದಕ್ಕೆ ಒಪ್ಪುವ್ಪ ದಾದರೆ ನಾನು ಮದುವೆಯಾಗುತ್ತೇನೆ. ಇಲ್ಲದಿದ್ದರೆ ಬೇಡವೇ ಬೇಡ.

"ಆಗಲಪ್ಪ ನಿನ್ನಿಷ್ಟ ಒಟ್ಟಿನಲ್ಲಿ ನೀನು ಸಂಸಾರಸ್ಥನಾದರೆ ಸಾಕು,

—ಎಂದರು ಪ್ರೀತಿಯಿಂದ,

ಆದರೆ ರಜನಿಯ ತಾಯಿ ಈ ಮದುವೆಗೆ ಒಪ್ಪಲಿಲ್ಲ. ತನ್ನ ತಮ್ಮ ನಿಗೆ ಕೊಡುವುದಾಗಿ ಹಟ ಹಿಡಿದು ಕುಳಿತಳು, ಆದರೆ ರಜನಿ ಈ ಮದುವೆಗೆ ಒಪ್ಪಲಿಲ್ಲ.

ತಾಯಿ ಸಿಟ್ಟಿನಿಂದ ಕೇಳಿದರು.

"ರಜನಿ ನಾನು ಬದುಕಿರುವ ತನಕ ಈ ಮದುವೆ ನಡೆಯಲಾರದು.

"ಹೋಗಲಿ ಬಿಡಮ್ಮ ನಾನು ಈ ಜನ್ಮದಲ್ಲಿ ಜಯರಾಜು ಬಿಟ್ಟು ಮತ್ತ್ಯಾರನ್ನೂ ಮದುವೆಯಾಗಲಾರೆ. ಕಾಯ ವಾಚ ಮನಸಾ ಅವರನ್ನು ಪ್ರೀತಿಸಿದ್ದೇನೆ. ಆಗದಿದ್ದರೆ ಪ್ರಾಣ ಕಳೆದುಕೊಳ್ಳುತ್ತೇನೆಯೆ ಹೊರತು ಮತ್ತ್ಯಾರನ್ನು ಈ ಜನ್ಮದಲ್ಲಿ ಕಣ್ಣೆತ್ತಿನೋಡಲಾರೆ.

ತಾಯಿಯ ಮನೋ ನಿರ್ಧಾರಕ್ಕೆ ಮಗಳು ಜಗ್ಗಿರಲಿಲ್ಲ. ಲಲಿತಮ್ಮನ ಎದೆ ಭೀತಿಯಿಂದ ಕಂಪಿಸಿತು. ಆದರು ತಾಯಿ ಮಗಳಿಗೆ ಬಿರುಸಾಗಿ ನಾಲ್ಕು ಮಾತು ನಡೆದು ರಜನಿ ಅನ್ನ ನೀರು ಬಿಟ್ಟು ಮಲಗಿದಳು. ಆದರೆ ತಂದೆಯ ಹೃದಯ ಮಗಳ ಬಗ್ಗೆ ಮಮ್ಮಲ ಮರುಗಿತ್ತು. ಮಾರನೆಯ ಬೆಳಿಗ್ಗೆ ಲಲಿತಮ್ಮ ನೆಂಟರ ಮನೆಗೆ ಮದುವೆಗೆ ತೆರಳಿದಳು, ಗಂಡನಿಗೆ ಮಗಳ ಬಗ್ಗೆ ಸಾಕಷ್ಟು ಜೋಪಾನ ಹೇಳಿ ಆದರೆ ಅನಂತಯ್ಯ ರುದ್ರಮ್ಮ ಜಯರಾಜು ಜೊತೆಯಲ್ಲಿ ಮಾತನಾಡಿದರು. ರುದ್ರಮ್ಮ ನಟೇಶ ಒಪ್ಪಲಾರ ಎಂದು ಈಗಲೇ ತಿಳಿಸುವುದು ಬೇಡ ಎಂದು ರಜನಿಯ ಜೊತೆಯಲ್ಲಿ ಬೀಳ್ಕೊಟ್ಟರು. ರಜನಿ ಜಯರಾಜು ಸಂತೋಷದಿಂದ ಬೆಂಗಳೂರಿನತ್ತ ಪ್ರಯಾಣ ಮಾಡಿದರು.

ರುದ್ರಮ್ಮನವರ ತಂಗಿಯ ಮಗ ವಸಂತನಿಗೂ ಜಯರಾಜುವಿಗೂ ಆತ್ಮೀಯತೆ ಬಹಳವಾಗಿ ಬೆಳೆದಿತ್ತು. ವಸಂತ ಜಯರಾಜು ಟೆಲಿಗ್ರಾಂ ಬಂದಕೂಡಲೆ ಆಫೀಸಿಗೆ ರಜಾ ಹಾಕಿ ಧಾವಿಸಿ ಬಂದು ರಿಜಿಸ್ಟರ್ ಮದುವೆಯಲ್ಲಿ ಪಾಲುಗೊಂಡಿದ್ದ.

ರೇಷ್ಮೆ ಸೀರೆಯುಟ್ಟು, ಹೂಮಾಲೆ ಧರಿಸಿ ಕೈ ಕೈ ಹಿಡಿದುನಿಂತ ಜಯರಾಜು ರಜನಿಗೆ ವಸಂತ ಫೋಟೊ ತೆಗೆಸಿದ. ಜಯರಾಜು ತಾಯಿ ಕೊಟ್ಟಿದ್ದ ಒಂದೆಳೆ ಸರಕ್ಕೆ ಮಾಂಗಲ್ಯ ಹಾಕಿಸಿ, ಉಂಗುರ ಓಲೆ ತರಿಸಿ ಕೊಟ್ಟಿದ್ದ. ವಸಂತ ನೂತನ ದಂಪತಿಗಳನ್ನು ಚಿತ್ರದುರ್ಗಕ್ಕೆ ಕರೆದೊಯ್ದ.

ಜಯರಾಜು ಮೂರು ತಿಂಗಳು ರಜೆಪಡೆದ. ರಜನಿಯೊಂದಿಗೆ ಒಂದು ತಿಂಗಳು ಪ್ರವಾಸ ಮಾಡಿಬಂದ. ಸಂತೋಷದಿಂದ, ಒಲಿದು ಒಂದಾದ ದಂಪತಿಗಳಿಗೆ ಬಾಳೆಲ್ಲ ಸ್ವರ್ಗಮಯವೆ ಆಗಿತ್ತು.

ರಜನಿಯ ಆತ್ಮದ ತಿಳಿಗೊಳದಲ್ಲಿ ಜಯರಾಜು ಅವಳ ಸಾನಿಧ್ಯದ ಪ್ರಣಯ ಸರೋವರದಲ್ಲಿ ಒಂದು ಹಂಸಪಕ್ಷಿಯಂತೆ ತೇಲಿದ್ದ. ಅವನ ಎದೆಯ ಪ್ರೀತಿಯ ಜೇನು ರಜನಿಯ ಮೈಮನವನ್ನು ತೋಯಿಸಿ ಗಂಧ ಲೇಪನವಾದಂತಾಗಿತ್ತು.

ಮತ್ತೆ ಎರಡು ತಿಂಗಳು ಚಿತ್ರದುರ್ಗದಲ್ಲೆ ವಾಸಿಸಿದರು. ಅವಕ್ಕೆ ಮುಂಚೆ ಹೊರಟವರನ್ನು ವಸಂತನೆ ತಡೆದು ನಿಲ್ಲಿಸಿದ "ಹೋದರಾಯಿತು ಇರಿ"—ಎಂದು. ಅವರಿಬ್ಬರ ದಾಂಪತ್ಯದ ಬಳ್ಳಿ ಎಲೆ ಎಲೆಯಾಗಿ ಚಿಗುರಿ ಪಲ್ಲೈಸಲು ಇಂಬುಕೊಟ್ಟು, ಅವೇಳೆಗೆ ಜಯರಾಜನ ವಂಶಕುಡಿ ರಜನಿಯ ಗರ್ಭದಲ್ಲಿ ಅರಳಿ ಪರಿಮಳ ಬೀರಿತ್ತು. ಆ ರಾತ್ರಿ ಕೇಳಿದಳು,

"ಪರಿಸ್ಥಿತಿ ಇಲ್ಲಿಗೆ ಬಂದಿದೆ. ಮುಂದೇನು ಮಾಡುವುದು?

"ಜಯರಾಜು ಅವಳನ್ನು ಬಾಚಿ ಅಪ್ಪಿ ಹೇಳಿದ,

"ಇಷ್ಟಕ್ಕಾಗಿ ಚಿಂತಿಸಬೇಕೆ ರಜನಿ. ಒಂದು ಸಾರಿ ಊರಿಗೆ ಹೋಗಿ ಅಮ್ಮನನ್ನು ನೋಡಿ ಬರೋಣ ಇಲ್ಲಿಗೆ ವರ್ಗಕ್ಕೆ ಪ್ರಯತ್ನಪಡುತ್ತೇನೆ.

"ನಿಮ್ಮ ಮನೆಯಲ್ಲಿ ನಿಮ್ಮಣ್ಣ ಅತ್ತಿಗೆ ನನ್ನನ್ನು ಸೇರಿಸಿದರೆ ಸರಿ ಇಲ್ಲದಿದ್ದರೆ ?

"ಆ ಭೀತಿ ನಿನಗೇಕೆ ಅದು ನನ್ನ ಮನೆ. ನಿಮ್ಮ ತಂದೆಯ ಹೃದಯ, ವೈಶಾಲ್ಯಕ್ಕೆ ಇನ್ನೆಷ್ಟು ಹಿರಿದಿರಬಹುದೊ ನಮ್ಮಿಬ್ಬರನ್ನು ಒಂದುಗೂಡಿಸಿದರು ಇನ್ನಾರು ನಮ್ಮಿಬ್ಬರನ್ನು ಈ ಜನ್ಮದಲ್ಲಿ ಆಗಲಿಸಲಾರರು.

ಏನೋ ನಮ್ಮ ತಾಯಿಯನ್ನು ಜ್ಞಾಪಿಸಿಕೊಂಡರೆ ಭಯವಾಗುತ್ತದೆ. ನಾನಿರುವಾಗ ಭಯವೇಕೆ?—ಎಂದು ರಜನಿಯನ್ನು ತನ್ನೆಡೆಗೆ ಬಾಚಿಅಪ್ಪಿ ರಜನಿ ತೃಪ್ತಿಯಿಂದ ನಿಟ್ಟಿಸಿರಿಟ್ಟಳು.

ಆ ಕ್ಷಣವೇನೊ ರಜನಿಯ ಹೃದಯದ ಸಂತೋಷದ ಪಾತ್ರೆ ತುಂಬಿ ತುಳುಕಿ ಹೊರಚೆಲ್ಲಿ ಜಯರಾಜು ಪ್ರೀತಿಯ ಕಾರಂಜಿ ಪುಟಿಪುಟಿದು ರಜನಿಯ ಮೈ ಮನವನ್ನು ತೋಯಿಸಿದಾಗ ತಾನು ಇನ್ನು ಭಯಪಡಬೇಕಾಗಿಲ್ಲ ಎಂದು ಕೊಂಡಳು.

ಆದರೆ ವಿಧಿ ಯಾರ ರೂಪದಲ್ಲಿ ಯಾರಿಂದ ಯಾರಿಗೆ ಸಂಕಟ ಪರಿತಾಪಗಳನ್ನು ಒಡ್ಡುತ್ತದೆಯೋ, ಅದನ್ನು ಯಾರು ಅರಿಯಲು ಸಾಧ್ಯವಿಲ್ಲ ರುಕ್ಮಮ್ಮನವರ, ತಂಗಿ ಗಂಗಮ್ಮ ಮಗಳ ಮನೆಗೆ ಚಿಕ್ಕಮಗನ ಜೊತೆಯಲ್ಲಿ ಹೋಗಿದ್ದವರು, ಅಂದೆ ಧಾವಿಸಿ ಚಿತ್ರದುರ್ಗಕ್ಕೆ ಬಂದವರು, ಜಯರಾಜು ರಜನಿ ಮದುವೆ ವಿಷಯವನ್ನು ಕೇಳಿ ಅಸಮಾಧಾನದಿಂದ ನಟೇಶನಿಗೆ ತಕ್ಷಣ ಬರುವುದೆಂದು ಟೆಲಿಗ್ರಾಂ ಕೊಡಿಸಿದರು.

ಜಯರಾಜು ಮೂರು ತಿಂಗಳಿನಿಂದ ಮನೆಗೆ ಬರಲಿಲ್ಲ. ಹಣವನ್ನು ಕೊಡಲಿಲ್ಲ, ಎಂಬ ಸಿಟ್ಟಿನಿಂದ ಮತ್ತು ಮದುವೆ ಆಗಿದೆ ಎಂದು ಟೆಲಿಗ್ರಾಂ

ನಿಂದ ತಿಳಿದ ಕೂಡಲೆ ಕಾರಿನಲ್ಲಿ ಹೆಂಡತಿಯೊಂದಿಗೆ ಬಂದು. ಜಯರಾಜು ರಜನಿಯನ್ನು "ಇಲ್ಲೇಕೆ ಇರಬೇಕು ಬನ್ನಿ"—ಎಂದು ನಯವಾದ ಮಾತಿನಿಂದ ಕರೆದೊಯ್ದರು. ಜಯರಾಜು ರಜನಿ ವಸಂತುವಿಗೆ ಮತ್ತೇ ಬರುತ್ತೇನೆಂದು ತಿಳಿಸಿ ಪ್ರಯಾಣಮಾಡಿದರು.

ಮಗ ಸೊಸೆಯನ್ನು ರುದ್ರಮ್ಮ ಪ್ರೀತಿಯಿಂದಲೆ ಆಹ್ವಾನಿಸಿದರು. ಆದರೆ ನಟೇಶ ಮಾದೇವಿ ಮನೆಗೆ ಬಂದಕೂಡಲೆ ಜಯರಾಜುವನ್ನು ತರಾಟೆಗೆ ತೆಗೆದುಕೊಂಡರು. ಅವಳನ್ನು ಕೂಡಲೆ ಬಿಟ್ಟು ಬಿಡಬೇಕೆಂದು.

ಆದರೆ ಜಯರಾಜು ಖಡಾಖಂಡಿತವಾಗಿ ಹೇಳಿದ.

"ನನ್ನಿಷ್ಟ ನಾನು ಮದುವೆಯಾಗಿದ್ದೇನೆ. ನಿನಗೆ ಇಷ್ಟವಿಲ್ಲದಿದ್ದರೆ ಹೇಳು ಈ ಮನೆಯಲ್ಲಿ ನೀನೆ ಇರು, ನಾನೆ ಬೇರೆ ಮನೆ ಮಾಡಿಕೊಂಡು ಹೋಗುತ್ತೇನೆ.

"ಅದು ಸಾಧ್ಯವಿಲ್ಲ. ನಾನು ನಮ್ಮ ಜಾತಿ ಹುಡುಗಿಯನ್ನೆ ತಂದು ಮದುವೆ ಮಾಡುತ್ತೇನೆ. ಜಾತಿಗೆಟ್ಟವಳನ್ನು ಈ ಮನೆಗೆ ತುಂಬಿಸಿಕೊಳ್ಳಬೇಕೆ?"

"ಬೇಡ ನಾನೇ ದೂರ ಹೋಗುತ್ತೇನೆ"

—ಎಂದ ಕೋಪದಲ್ಲಿ ಕುದಿಯುತ್ತ. ರಜನಿಯ ಕಷ್ಟ ಕಿರುಕುಳಕ್ಕೆ ಕೊನೆ ಮೊದಲಿಲ್ಲದಂತಾಯ್ತು.

ರುದ್ರಮ್ಮ ಎಷ್ಟೆ ಹಿರಿಮಗ ಸೊಸೆಗೆ ಹೇಳಿದರು. ಪ್ರಯೋಜನವಿಲ್ಲದಾಯ್ತು.

ರಜನಿಗೆ ಊಟ, ಸ್ನಾನ ತಿಂಡಿ ಎಲ್ಲಕ್ಕೂ ಹಿಂಸೆಯೆ. ರುದ್ರಮ್ಮನವರೆ ಹೇಗೊ ಸವರಿಸಿ ಕೊಳ್ಳಲಾರಂಭಿಸಿದರು, ಹಾಗು ಹೀಗೂ ಮೂರು ತಿಂಗಳು ಕಳೆಯಿತು. ಮನೆಯಲ್ಲಿ ಹೆಂಡತಿಗೆ ಅಣ್ಣ ಅತ್ತಿಗೆಯಿಂದ

ಆಗುತ್ತಿದ್ದ ಕಿರುಕುಳವನ್ನೆಲ್ಲ ಬಲ್ಲವನಾದುದರಿಂದ ಥೂ ಈ ಊರೆ ಬೇಡ ಬೇರೆ ಊರಿಗೆ ವರ್ಗಮಾಡಿಸಿಕೊಳ್ಳಲು ಪ್ರಯತ್ನಪಟ್ಟ. ವರ್ಗ ಆದರೆ ತಾಯಿಯನ್ನು ಕರೆದುಕೊಂಡು ಹೋಗಲು ಕೇಳಿದ ಆಕೆ ಒಪ್ಪಿದರು.

ರಜನಿಗೂ ಇದೇ ಮಾತೇ ಹೇಳಿ ಸಂತೈಸಿದ. ವರ್ಗಕ್ಕೆ ಪ್ರಯತ್ನ ಪಟ್ಟ. ಈ ವೇಳೆಗೆ ಸರಿಯಾಗಿ ರಜನಿಗೂ ಆರು ತಿಂಗಳು ತುಂಬವ್ರುದ ರಲ್ಲಿತ್ತು. ಆದರೆ ಆಫೀಸಿನ ಕಾರ್ಯ ನಿಮಿತ್ತವಾಗಿ ಜಯರಾಜು ದೂರ ದೂರಿಗೆ ಹದಿನೈದು ದಿನ ಊರು ಬಿಡಬೇಕಾಯಿತು.

ದುಃಖಿಸುತ್ತಿದ್ದ ರಜನಿಗೆ ಸಾಕಷ್ಟು ಸಮಾಧಾನ ಹೇಳಿ ತಾಯಿಗೆ ರಜನಿಯ ಬಗ್ಗೆ ಜೋಪಾನವೆಂದು ತಿಳಿಸಿ ರಜನಿಗೆ ಪತ್ರ ಬರೆಯುತ್ತೇನೆಂದು ಪ್ರಯಾಣ ಮಾಡಿದ,

ಜಯರಾಜು ಪ್ರಯಾಣ ಮಾಡಿದ ಮೂರನೆಯ ದಿನವೇ ನಟೇಶ ಮಾದೇವಿ ರಜನಿಗೆ ಹಿಂಸಿಸಲಾರಂಭಿಸಿದರು.

"ರಜನಿ ಈ ಕ್ಷಣ ನೀನು ಇಲ್ಲಿಂದ ತೊಲಗಬೇಕು.

ನಟೇಶ ಕೆಂಗಣ್ಣು ತೆರೆದು ಹೇಳಿದ.

"ಇಲ್ಲ, ಇದು ನನ್ನ ಗಂಡ ಕಟ್ಟಿರುವ ಮನೆ ಇಲ್ಲಿ ನಾನಿರಬಹುದು.

ನೀನು ಈಡಿಗರವಳು ನನ್ನ ತಮ್ಮ ಲಿಂಗಾಯಿತರವನು ನಿನಗೂ ನನ್ನ ತಮ್ಮನಿಗೂ ಎಲ್ಲಿಯ ಅಂತರ ಬೇರೆ ಜಾತಿಯವನೊಂದಿಗೆ ಓಡಿ ಹೋಗಲು ನಾಚಿಕೆಯಾಗಲಿಲ್ಲವೆ?

"ನಾಚಿಕೆಯೇಕೆ ನಾನೇನು ಓಡಿ ಹೋಗಲಿಲ್ಲ. ನನ್ನ ತಂದೆ ನೀವಿಬ್ಬರು ಸಂತೋಷವಾಗಿ ಬದುಕಿ ಎಂದು ಆಶೀರ್ವದಿಸಿ ಕಳುಹಿಸಿದರು,"

"ಅದೇನೆ ಆಗಲಿ ಈ ಕ್ಷಣ ಇಲ್ಲಿಂದ ತೊಲಗಿದರೆ ಸರಿ"

"ಇಲ್ಲ ನಾನೇಕೆ ಹೋಗಲಿ"

"ಹೋಗುವುದಿಲ್ಲವೇ?"—ಎನ್ನುತ್ತ ಗರ್ಭಿಣಿಯನ್ನು ತನ್ನ ಸಿಟ್ಟಳಿಯುವ ತನಕ ಥಳಿಸಿದ. ರುದ್ರಮ್ಮ ಓಡಿ ಬಂದವರೆ ಸೊಸೆಯನ್ನು ಬಾಚಿ ಅಪ್ಪಿದರು.

"ಈ ಮಾತನ್ನು ಜಯರಾಜು ಇದ್ದಾಗಲೆ ಹೇಳಿದ್ದರಾಗಿತ್ತು.ಅವನ ಹೆಂಡತಿಯನ್ನು ಹೊಡೆಯಲು ನಿನಗಾವ ಅಧಿಕಾರ?"

"ಅಧಿಕಾರ ಬೇಕೆ ಜಾತಿಗೆಟ್ಟವಳನ್ನು ಆಚೆಗಟ್ಟಲು."

"ಅವಳು ಜಾತಿಕೆಟ್ಟರು ಪರವಾಗಿಲ್ಲ. ನನ್ನ ಮಗ ಹೆಂಡತಿ ಎಂದು ಸ್ವೀಕರಿಸಿದವಳು ನಾನೆ, ಸೊಸೆ ಎಂದು ಮನಸಾರ ಒಪ್ಪಿರುವಾಗ ನಿನಗೇಕೆ ಚೇಷ್ಟೆ,

—ರುದ್ರಮ್ಮ ಹಾಗಂದಕೂಡಲೆ ನಟೇಶ ಆಚೆಗೆ ಹೋದ.

"ಅಮ್ಮ ಏನು ನನ್ನ ಗತಿ"

ರಜನಿ ರುದ್ರಮ್ಮನವರನ್ನ ಎಳೆಯ ಮಗುವಿನಂತೆ ಅಪ್ಪಿ ಕೇಳಿದಳು.

"ನಾನಿರುವಾಗ ನಿನಗಾವ ಚಿಂತೆ ರಜನಿ ನಾಳೆಯೆ ಜಯರಾಜನಿಗೆ ಪತ್ರ ಬರೆಯುತ್ತೇನೆ; ಧೈರ್ಯವಾಗಿರು.

—ಎಂದರು ಸಂತೈಸುತ್ತ. ಮತ್ತೆ ಸ್ವಲ್ಪ ಹೊತ್ತಿನಲ್ಲೇ ಲಲಿತಮ್ಮ ನಟೇಶ ಕಾರಿನಲ್ಲಿ ಬಂದಿಳಿದರು. ಯಾವ ಮಾತು ಕತೆಯು ಇಲ್ಲದ ಲಲಿತಮ್ಮ ಕರೆತಂದಿದ್ದ ಫೈಲ್ವಾನನಂತಿದ್ದ ಆಸಾಮಿಯು ಸೇರಿ ರಜನಿಯನ್ನು ಎಳೆತಂದು ಕಾರಿನಲ್ಲಿ ಹಾಕಿಕೊಂಡರು. ರಜನಿಯ ಚೀತ್ಕಾರ ರುದ್ರಮ್ಮನವರ ಗೋಳನ್ನು ಯಾರೂ ಕೇಳುವವರಿರಲಿಲ್ಲ. ಹದ್ದಿಗೆ ಸಿಕ್ಕಿದ ಹಾವು ಹಾಹಾಕಾರ ಗೈಯವಂತೆ ಗೋಳಾಡುತ್ತ ಆಕ್ರಂದನ ಗೈಯುತ್ತ ರಜನಿ

ತಾಯಿಯ ಬಳಿಗ್ಗೆ ವಿಧಿಯಿಲ್ಲದೆ ಹೊರಟು ಹೋದಳು. ಈ ದಾರುಣ್ಯ ದೃಶ್ಯವನ್ನು ನೋಡಿದ ನೆರೆ ಹೊರೆಯುವರು ನಟೇಶ ಮಾದೇವಿಯನ್ನು ಮನಬಂದಂತೆ ನಿಂದಿಸಿದರು. ರುದ್ರಮ್ಮನವರ ಮಾತನ್ನು ಯಾರೂ ಕೇಳುವಂತಿರಲಿಲ್ಲ.

ರುದ್ರಮ್ಮನವರ ಪತ್ರವನ್ನು ನೋಡಿದ ಜಯರಾಜು ಮೈಮೇಲೆ ಪ್ರಜ್ಞೆ ಇಲ್ಲದವನಂತೆ ಬಂದ. ಪತ್ರತಲುಪಿ ಅವನು ಬರುವಾಗ್ಗೆ ಐದು ದಿನವಾಗಿತ್ತು.

ಮಗನ ಮುಖವನ್ನು ನೋಡಿದ ತಾಯಿ ಹುಚ್ಚಿಯಂತೆ ರೋಧಿಸಿ ಎಲ್ಲವನ್ನು ತಿಳಿಸಿ ಹೇಳಿದರು.

"ನಿಮ್ಮಿಬ್ಬರನ್ನು ಅಗಲಿಸಿದೆ ಕಣಪ್ಪ. ಅಯ್ಯೋ ಜಯರಾಜು ಈ ಸಂಕಟವನ್ನು ಹೇಗೆ ಸಹಿಸಲಿ.

"ಅಣ್ಣಾ ಈ ಕೆಲಸ ನಿನಗೆ ಸರಿಹೋಯ್ತೆ?

"ಜಾತಿ ಕೆಟ್ಟವಳಿಗೆ ಈ ಮನೆಯಲ್ಲಿ ಪ್ರವೇಶವೆಲ್ಲಿ."

"ಇಲ್ಲ ಅವಳನ್ನೆ ಕರೆತಂದು ಸಂಸಾರ ಮಾಡುತ್ತೇನೆ."

—ಎನ್ನುತ್ತ ಮೇಲೆದ್ದ. ಏಷ್ಟು ಹೊತ್ತಿಗೆ ರಜನಿಯನ್ನು ನೋಡಿ ಯೇನೋ ಎಂಬ ಧಾವಂತದಿಂದ, ಆದರೆ ಅವನ ಸ್ನೇಹಿತ ಗೋವಿಂದು ಬಂದು ದುಃಖದಿಂದ ಕೇಳಿದ.

"ಅಯ್ಯೋ ಜಯರಾಜು ಎಲ್ಲ ಮುಗಿದ ಮೇಲೆ ಬಂದೆಯಾ"

"ಹಾಗಂದರೆ? ಜಯರಾಜು ಗಾಬರಿಯಿಂದ ಕೇಳಿದ."

"ರಜನಿ ಸತ್ತು ಹೋದಳು"

"ಅಯ್ಯೊ ನನ್ನ ರಜನಿಗೆ ಏನಾಗಿತ್ತು?"

ಜಯರಾಜು ಗೋಳಿಟ್ಟು ಕೇಳಿದ.

"ನಿಮ್ಮಣ್ಣ ಆ ಜಟ್ಟಿಗೆ ಎರಡು ಸಾವಿರ ಹಣಕೊಟ್ಟು, ರಜನಿಯನ್ನು ಆಚೆಗೆ ಹಾಕಿಸಿದನಂತೆ. ಅಲ್ಲಿಯು ತಾಯಿ ಅದೇ ಟೊಣಪನನ್ನೆ ರೂಮಿನ ಬಾಗಿಲಿನಲ್ಲಿ ಕಾವ್‌ಲು ಹಾಕಿ ರಜನಿಯನ್ನು ಹೊಡೆದು ಬಡಿದು ಕೂಡಿಹಾಕಿದ ರಂತೆ, ನಾಲ್ಕು ದಿನದಿಂದ ಊಟ ತಿಂಡಿಯು ಇಲ್ಲದೆ ಬೇಸರವಾಗಿಯೊ ಏನಾಯಿತೊ ರೂಮಿನಲ್ಲಿದ್ದ ಜಂತೆಗೆ ಉಟ್ಟಿದ್ದ ಸೀರೆಯನ್ನೇ ಕುತ್ತಿಗೆಗೆ ಬಿಗಿದು ನೇಣು ಹಾಕಿಕೊಂಡಳಂತೆ. ಎಲ್ಲ ನಿನ್ನೆಯೆ ಮುಗಿದುಹೋಯ್ತಂತೆ ನಿನ್ನ ರಜನಿಯ ಸ್ಥಿತಿ ಹೇಗಾಯ್ತಪ್ಪ.

"ರಜನಿ; ಪಾಪಿಗಳು ನಮ್ಮನ್ನಗಲಿಸಿದರೆ"

—ಎಂದು ನೆಲದ ಮೇಲೆ ಉರುಳಿದ, ಜ್ಞಾನ ತಪ್ಪಿದ ಜಯರಾಜು ವನ್ನು ಆಸ್ಪತ್ರೆಗೆ ಸೇರಿಸಿದರು. ರಜನಿ ಸತ್ತಿದ್ದು, ನಟೇಶ ಮಾದೇವಿಯ ಸಂತೋಷಕ್ಕೆ ಪಾರವಿರಲಿಲ್ಲ. ಮಾದೇವಿ ತನ್ನ ತಂಗಿ ಶಿವಮ್ಮನನ್ನು ಜಯರಾಜುವಿಗೆ ಕೊಡಿಸಲೆಂದೆ ಈ ಸಂಚು ಹೂಡಿದ್ದು. ಇವಳು ಸತ್ತರೆ ಹೇಗೂ ಮತ್ತೊಂದು ಮದುವೆ ಆಗಿಯೆ ಆಗುತ್ತಾನೆ ಎಂಬ ಭರವಸೆಯ ಮೇಲೆ ಆದರೆ ಜಯರಾಜು ಮತ್ತೆ ಮನುಷ್ಯನಾಗಿ ಮನೆಗೆ ಬರಬೇಕಾದರೆ ಆರು ತಿಂಗಳು ಕಳಿದಿತ್ತು.

ಆಸ್ಪತ್ರೆಯಿಂದ ಬರುವಾಗಲೆ ಜೀವನದ ಆಸೆ ಆಕಾಂಕ್ಷೆಗಳನ್ನೆಲ್ಲ ಗಾಳಿಗೆ ತೂರಿಬಂದಿದ್ದ. ರಜನಿಯನ್ನು ಅಗಲಿದ ಅವನ ಬಾಳ ಹಾಳಾಗಿತ್ತು. ಒಲವಿನ ಬದುಕು ಹರಿದು ಚೂರು ಚೂರಾಗಿತ್ತು. ಸಾಕಷ್ಟು ಕಣ್ಣೀರು ಹರಿಸಿದ್ದರು ತಾಯಿ ಮಗ ರಜನಿಯ ನೆನಪನ್ನು ಎದಿಯಲ್ಲಿ ಹೊತ್ತು. ಈ ಬಗ್ಗೆ ಮನಸ್ಸು ಕೆಟ್ಟ ಜಯರಾಜು ಅಣ್ಣಅತ್ತಿಗೆ ಬೇರೆ ಮದುವೆ ಮಾಡುತ್ತೇವೆಂದು ಎಷ್ಟೇ ಒತ್ತಾಯ ಮಾಡಿದರೂ ತಿರಸ್ಕರಿಸಿದ. ನಟೇಶ ಆಸ್ತಮಾದಿಂದ ಹಾಸಿಗೆ ಹಿಡಿದ. ರಜನಿಯ ಭಾವ

ಚಿತ್ರವನ್ನು. ದೊಡ್ಡದುಮಾಡಿಸಿ ರೂಮಿನಲ್ಲಿ ಹಾಕಿದ ಪ್ರತಿ ಶುಕ್ರವಾರ ನಂದಾದೀಪವನ್ನು ಬೆಳಗಿ ಮಲ್ಲಿಗೆಯ ಹಾರವನ್ನು ಹಾಕಿ ಆ ಭಾವ ಚಿತ್ರ ವನ್ನೇ ಎದೆಗಪ್ಪಿ ಅಳುತ್ತಾನೆ. ರಜನಿ ಭಾವಚಿತ್ರದಲ್ಲಿ ನಗು ನಗುತ್ತಿರು ತ್ತಾಳೆ. ಆದರೆ ಜಯರಾಜು ಹೃದಯ ಮೂಕವಾಗಿ ಅಳುತ್ತದೆ. ಎಷ್ಟೋ ಜನ ಹೆಣ್ಣುಕೊಡಲು ಮುಂದೆ ಬಂದಿದ್ದಾರೆ ಇನ್ನು ಏಕೆ ಮದುವೆ ಮಾಡಿಕೊಳ್ಳುವುದಿಲ್ಲವೆ ಎಂದು ಕೇಳುತ್ತಾರೆ. ಎಲ್ಲರಿಗೂ ಒಂದೇ ಉತ್ತರ.

"ನನಗೇಕೊ ಮದುವೆಯೇ ಇಷ್ಟವಿಲ್ಲ."

ಹಾಗೆಂದರಾಗುತ್ತದೆಯೆ ಮದುವೆಯಾಗಲೇಬೇಕು.
—ಇದು ಮತ್ತೊಬ್ಬರ ಸಲಹೆ 'ತಾಯಿ ಈ ಬಗ್ಗೆ ಬೇಡಿಕಾಡಿ ಗೋಳಾಡಿ ದರು' ಜಯರಾಜು ಒಪ್ಪಲಿಲ್ಲ. ಆದರೆ ರಜನಿ ಕನಸಿನಲ್ಲಿ ಎಷ್ಟೋ ಸಾರಿ ಕಾಣಿಸಿಕೊಂಡು ಹೇಳಿದ್ದುಂಟು.

"ನನ್ನನ್ನು ನಿಮ್ಮಿಂದ ಅಗಲಿಸಿದರು. ಇನ್ನು ನನಗಾಗಿ ಕಣ್ಣೀರ ಹಾಕಬೇಡಿ. ಬೇರೆಯಾರನ್ನಾದರು ನಿಮ್ಮ ಜಾತಿಯಲ್ಲೆ ಮದುವೆಯಾಗಿ ಮನೆ ಬೆಳೆಯಲಿ.

'ಇಲ್ಲ ರಜನಿ ಈ ದೇಹ ನಿನಗೆ ಅರ್ಪಣೆಯಾಯಿತು' ನಿನ್ನದಾದ ಈ ದೇಹದ ಮೇಲೆ ಮತ್ತಾರಿಗು ಅಧಿಕಾರ ಮಾಡಲು ಅವಕಾಶ ಕೊಡಲಾರೆ. ಕೊನೆಗು ಈ ದೇಹ ಮಣ್ಣಿಗೆ ಹೋಗ ಬೇಕೆ ಹೊರತು, ಮತ್ತಾರಿಗು ಈ ದೇಹವನ್ನು ಅರ್ಪಿಸಲಾರೆ. ನೀನು ದೂರವಾದರೇನಂತೆ ನಿನ್ನ ಉಸಿರು ನನ್ನ ಉಸಿರು ನನ್ನ ಉಸಿರಿನಲ್ಲಿ ಎಂದೋ ಬೆರೆತುಹೋಗಿದೆ 'ರಜನಿ' ನಿನ್ನ ಪ್ರೀತಿ, ನಿನ್ನವಾತ್ಸಲ್ಯ, ನಿನ್ನ ಉಸಿರು ಸದಾ ನನ್ನನ್ನು ನಿನ್ನ ಬಾಹುಗಳಿಂದ ಬಂಧಿಸಿ ನನ್ನನ್ನು ಮಾಡನಾಡಿಸುತ್ತಿರುತ್ತದೆ. ಇಹದಲ್ಲೆ ಬೇರೆಯಾದೆವು ಪರದಲ್ಲಿ ಜೊತೆಗೂಡೋಣ. ಅಯ್ಯೋ ಗರ್ಭಿಣಿ ಎಂಥ ಹಿಂಸೆ ಅನುಭವಿಸಿ ಸತ್ತೆ ನೀನು ಗರ್ಭಿಣಿ ಎಂದು ಎಷ್ಟು ಸಂತಸ ಪಟ್ಟಿದ್ದೆ, ನನ್ನಣ್ಣ ನನ್ನತ್ತಿಗೆ ನನ್ನ ರಜನಿಯ ಮಧ್ಯೆ ಖಳನಾಯಕರಾಗಿ ಬಂದು ನನ್ನ ಬಾಳನ್ನೇ ಹಾಳುಮಾಡಿದರು.

ಉಳಿದಿರುವ ದಿನವನ್ನು ರಜನಿಯ ನೆನಪಿನಲ್ಲಿಯೆ ಕಳೆಯುತ್ತಿದ್ದೇನೆ ದೇವರು ನನ್ನನ್ನು ಈ ಪ್ರಪಂಚದಿಂದ ಎಂದು ದೂರಮಾಡುತ್ತಾನೊ ಅದುವರೆವಿಗೂ ಕಾಯಬೇಕಾಗಿದೆ.

"ಹಾಗಾದರೆ ನಿಮ್ಮದುಡಿಮೆ,"

ಜಯರಾಜು ವಿಷಾದದ ನಗೆನಕ್ಕು ಹೇಳಿದರು.

"ಇದ್ದಾರಲ್ಲ ಅಣ್ಣ ಅತ್ತಿಗೆ ನಾಲ್ಕು ಮಕ್ಕಳು ತಮ್ಮ ತಾಯಿ, ಎಲ್ಲರಿಗೂ ಮೀಸಲಾಗಿದೆ,

—ಇಷ್ಟು ಹೇಳಿದವರೆ ಬಿಕ್ಕಿಬಿಕ್ಕಿ ಅಳತೊಡಗಿದರು. ಜಯರಾಜು ಸುಂದರ ವ್ಯಕಿತ್ವದ ಹಿಂದೆ ಅಡೆಗಿದ್ದ ಘೋರ ದುಃಖವನ್ನು ಕಂಡು ನನಗರಿವಿಲ್ಲಎಂತೆ? ಕಂಬನಿಯ ಧಾರೆ ಹರಿದು, ಅವರನ್ನು ಯಾವ ರೀತಿ ಯಲ್ಲಿ ಸಂತೈಸಲು ನನ್ನಲ್ಲಿ ಯಾವ ಶಕ್ತಿಯು ಉಳಿದಿರಲಿಲ್ಲ ಕ್ಷೀಣ ಧ್ವನಿಯಲ್ಲಿ ಹೇಳಿದೆ,

"ನಾನು ಬರ್ತಿನಿ ನಿಮ್ಮ ಬಾಳು ಹೋಳಾದ ಕತೆ ಎಂಥವರ ಕಣ್ಣಿನಲ್ಲೂ ಕಂಬನಿ ತರಿಸುತ್ತದೆ ಈ ವಿಷಯ ಮೊದಲೆ ನನಗೆ ತಿಳಿದಿದ್ದರೆ?, —ಆತ ಕಣ್ಣೊರಸಿಕೊಂಡು ವಿಷಾದದ ನೆಗೆನಕ್ಕು ಕೇಳಿದರು.

"ನನ್ನ ಬಾಳ ಬವಣೆ ಕೇಳಿ ಬೇಸರ ಆಯ್ತೇನೂ"

"ಇಲ್ಲ ತಡೆಯಲಾರದಷ್ಟು ದುಃಖವಾಯ್ತು" ಇಂಥ ದಳ್ಳುರಿಯನ್ನು ಸಹಿಸಿಕೊಂಡು ಎಲ್ಲವನ್ನು ಎದೆಯಲ್ಲಿ ಭರಿಸಿ ಎಲ್ಲರ ಜೊತೆಯಲ್ಲು ಅಷ್ಟು ಚೆನ್ನಾಗಿ ನಗುನಗುತ ಇರುವ ನಿಮ್ಮ ಆತ್ಮ ಧೈರ್ಯವನ್ನು ಮೆಚ್ಚಬೇಕಾದ್ದೆ.

"ಏನು ಮಾಡುವುದು ಸಾವು ನಾವು ಕರೆದಾಗ ಬರುತ್ತದೆಯೆ ?" ನಾನೇನು ಹೇಳಲು ತೋಚದೆ ಬರುತ್ತೇನೆಂದು ಹೇಳಿ ಹೊರಟೆ

"ಅದೆಷ್ಟು ಬೇಗ ಗುಣ ಮುಖವಾಗಲೆಂದು ಹೇಳಿ ಹೋಗುವಾಗ ಇದ್ದ ಉತ್ಸಾಹ ಚೈತನ್ಯ ಬರುವಾಗ ಇರಲಿಲ್ಲ. ದುಃಖದಲ್ಲೆ ಮನೆ ಸೇರಿದ್ದೆ.

ಬೆಳಿಗ್ಗೆ ಇನ್ನು ಹಾಸಿಗೆಯ ಮೇಲಿದ್ದಾಗಲೆ ನನ್ನ ಚಿದು ಬಿಕ್ಕಳಿಸಿ ಅಳುತ್ತಲೆ ಹೇಳಿದ ನನ್ನ ಹತ್ತಿರ ಬಂದು.

"ಅಮ್ಮ ಜಯರಾಜು ನಿನ್ನೆ ರಾತ್ರಿ ಹನ್ನೆರಡು ಗಂಟೆಯಲ್ಲೆ ಹೋಗಿ ಬಿಟ್ಟರಂತೆ".

"ಅಯ್ಯೊ ನಿನ್ನೆ ಸಂಜೆ ನನ್ನಲ್ಲಿ ಅಷ್ಟು ಚೆನ್ನಾಗಿ ಮಾತನಾಡಿದ್ದರು. ಆದರೆ ದುಃಖದಿಂದ ಹೇಳಿದ್ದರು, ಸಾವು ನಾವು ಕರೆದಾಕ್ಷಣ ಬರುತ್ತೆದೆಯೆ ಎಂದು. ಸಾವು ಅವರು ಕರೆದ ಕೂಡಲೆ ಧಾವಿಸಿ ಬಂದು ಅವರನ್ನು ಕೊಂಡೊಯ್ದಿತ್ತು ದುಃಖ ವೆಂಬ ಮಹಾ ಸಾಗರದಿಂದ ಪಾರು ಮಾಡಿ,

ಶವಯಾತ್ರೆ ನಡೆದಾಗ ಅವರಿವರು ಅನುಕಂಪದಿಂದ ಅವರವರ ಮನಸ್ಸಿಗೆ ಬಂದತೆ ಮಾತನಾಡುತ್ತಿದ್ದರು.

ಪಾಪ ಇನ್ನು ಮದುವೆಯೆ ಆಗಿರಲಿಲ್ಲ. ಚಿಕ್ಕವಯಸ್ಸಿನಲ್ಲಿಯೆ ಹೋಗಿಬಿಟ್ಟ, ಯಾವ ಸುಖ ಸಂತೋಷವನ್ನು ಕಾಣಲಿಲ್ಲ.

ಜಯರಾಜು ಮದುವೆಯಾಗಿ ತಂದೆಯಾಗಿ, ರಜನಿ ಗರ್ಭಿಣಿಯಲ್ಲೆ ಗತಿಸಿದ ವಿಷಯ ಆ ಬೀದಿಗೆ ಹೊಸ ಹೊಸದಾಗಿ ವಾಸಕ್ಕೆ ಬಂಧ ಜನತೆಗೆ ಏನು ಗೊತ್ತಿತ್ತು ! ತಾಯಿ ಮಗನನ್ನು ಅರಲಲಾರದೆ ಗೋಳಾಡಿ ಬೀಳ್ಕೊಟ್ಟರು. ಆ ದಿನ ನನ್ನ ಮಗ ನನಗೆ ಎದೆಯಲ್ಲಿ ಅನ್ನ ನೀರು, ಏನು ಇಳಿದಿರಲಿಲ್ಲ. ನಿನ್ನೆ ಇದ್ದ. ಮನುಷ್ಯ ಇಂದು ಇಲ್ಲವಾಗಿದ್ದ, ಜಯರಾಜನ ಮನೆಯ ಸಾಲದ ಬಾಬ್ತು ಹಣವನ್ನು

* * *

ಹಿಡಿದುಕೊಂಡು ಮಿಕ್ಕ ಹಣ ಶ್ರೀನನ ತಾಯಿಯ ಕೈ ಸೇರಿತು, ನಟೇಶ ಹಣವನ್ನು ಕಸಿದು ತನ್ನ ಹೆಸರಿನಲ್ಲಿ ಬ್ಯಾಂಕಿಗೆ ಸೇರಿಸಿದ, ಜಯರಾಜು ತನ್ನ ಬಾಳನ್ನೆ ಹಾಳುಮಾಡಿದ ಅಣ್ಣನಿಗೆ ವಾಸಕ್ಕೆ ಇರಲು ಸಾವಿರಾರು ರೂಪಾಯನ ಮನೆ ಕರ್ಚಿಗೆಂದು ಬ್ಯಾಂಕಿನಲ್ಲಿ ಹಣ ಎಲ್ಲವನ್ನು ಇಟ್ಟು ಎಲ್ಲವನ್ನು ನಟೇಶ ಅವನ ಹೆಂಡತಿಗೆ ಒಪ್ಪಿಸಿ ಈ ಪ್ರಪಂಚದಿಂದ ದೂರವಾಗಿದ್ದ, ಪ್ರೀತಿಯೇ ಮುಖ್ಯ ಜಾನಿ ಮುಖ್ಯ ಅಲ್ಲ ಎಂದು ಒಲಿದು ಒಂದಾದ ಜೀವಿಗಳನ್ನು ಅತ್ತ ಜಯರಾಜನ ಅಣ್ಣ ಅತ್ತಿಗೆ ಇತ್ತ ರಜನಿಯ ತಾಯಿ ದೂರ್ತರಂತೆ ವರ್ತಿಸಿ ಅವರ ಬಾಳನ್ನೇ ತಮ್ಮ ಈರ್ಷ್ಯೆಗೆ ಆಹುತಿಮಾಡಿದ್ದರು. ಎರಡು ಜೀವಿಗಳು ಬೇರೆ ಬೇರೆ ವಿಧದಲ್ಲಿ ಇಹಲೋಕವನ್ನು ತೊರೆದಿದ್ದರು.

ತಾಯಿ ರಜನಿಯ ದೊಡ್ಡದಾದ ಭಾವ ಚಿತ್ರದ ಪಕ್ಕದಲ್ಲಿ ಮಗನ ಭಾವ ಚಿತ್ರವನ್ನು ಹಾಕಿದರು, ಕಣ್ಣೀರು ಕೋಡಿಯಂತೆ ಹರಿದಿತ್ತು.

ನಾನು ಒಂದು ದಿನ ಹೋಗಿ ಆಕೆಯನ್ನು ಸಂತೈಸಿದೆ. ಆಕೆ ಅಳುತ್ತಲೆ ಹೇಳಿದರು.

"ಸನಗೆ ಅವನು ಅವಳು ಪೂಜೆ ಮಾಡಬೇಕಿತ್ತು, ಆದರೆ ಅವನು ದೇವರಂಥಾ ಮನುಷ್ಯ. ನನ್ನ ಕೈಲೆ ಪೂಜೆ ಮಾಡಿಸಿಕೊಂಡೇಬಿಟ್ಟ –ನಿಜ ಕತ್ತೆತ್ತಿನೋಡಿದೆ ಎಂಥ ಘೋರ ಅನ್ಯಾಯ ಇಂಥ ಬೋಡಿ ಹೂವುಗಳು ನಲುಗಿ ಹೋಯ್ತಲ್ಲ ಆ ಭಗವಂತ ಹೀಗೆ ಮಾಡಬಹುದೆ ಎಂದು ಸಂಕಟವಾಗಿ ಕಣ್ಣೀರನ್ನು ವರೆಸಿಕೊಂಡೆ,

ಜಯರಾಜು ಬಾಳ ದುರಂತವನ್ನುಕಣ್ಣಾರ ಕಾಣದಿದ್ದರು ಕಿವಿಯಾರ ಕೇಳಿದ ಬರೆದ ನನ್ನ ಕಣ್ಣಂಚಿನಿಂದ ಕಂಬನಿಯ ಕಾಲುವೆಯೆ ಹರಿದಿತ್ತು, ಜಯರಾಜು ನನ್ನ ಮನಸ್ಸಿನಿಂದ ದೂರವಾಗಿಲ್ಲ. ಅವರಲ್ಲಿ ಮಾತನಾಡಿದ ಕೆಲವೇ ಗಂಟೆಗಳು ಚಿರಸ್ಮರಣೀಯ. ಅವರಲ್ಲಿ ಮಾತನಾಡಿದ ನನಗೆ ಸದಾ ಎದೆಯಲ್ಲಿ ಮರು ಕಳಿಸುತ್ತದೆ ಆ ದಿನವನ್ನು ಮರೆಯುವಂತಿಲ್ಲ,

* * *

# ವಾಣಿ--ವೀಣಾ

---ರಾಜಲಕ್ಷ್ಮಿ ತಿರುನಾರಾಯಣ

ಅವಳೋ ವೀಣಾ ವಾದನ ಚತುರೆ. ಎಲ್ಲೆಲ್ಲಿಯೂ ಅವಳ ಬಗ್ಗೆಯೇ ಮಾತು. ಅವಳ ವೀಣೆಯನ್ನು ಕೇಳದವರೇ ಇಲ್ಲ. ಅವಳಿಗೆ ವೀಣೆಯೇ ಸರ್ವಸ್ವ. ಬಾಲ್ಯದಿಂದಲೇ ವೀಣೆಯಲ್ಲಿ ಆಸಕ್ತಿ. ಗುರುಗಳನ್ನು ಕಂಡರೆ ಅಪಾರ ಭಕ್ತಿ, ಭಯ, ವಿನಯ, ಹಿರಿಯರಲ್ಲಿ ಮರ್ಯಾದೆ, ಇಷ್ಟು ಗುಣಗಳೂ ಮೂರ್ತಿವತ್ತಾಗಿ ಇರುವವಳೇ ಶೀಲಾ. ಅವಳು ಹೆಸರಿಗೆ ತಕ್ಕಂತೆ ಸುಶೀಲೆಯೇ ಆಗಿದ್ದಾಳೆ. ಅವಳ ರಸಿಕರು ಹಲವಾರು ಮಂದಿ, ದೇಶ ವಿದೇಶಗಳಲ್ಲಿ ಇಷ್ಟೊಂದು ಹೆಮ್ಮೆ ಪಡುವಂತಹ ವಿಷಯಗಳಿದ್ದರೂ ಕೂಡ ಗರ್ವಪಡುವವಳಲ್ಲ. ಜನರು ಇವಳ ವೀಣೆಯನ್ನು ಕೇಳಲು ಕಾತುರರಾಗಿರುವರು. ಮನೆಯನ್ನೋ, ಸರಸ್ವತಿಯ ಆಗರವನ್ನಾಗಿಯೇ ಮಾಡಿದ್ದಾಳೆ. ಎದುರಾಳಿಗಳನ್ನೂ ಕೂಡಿ ಮಿತ್ರರಾಗಿಯೇ ಪರಿಗಣಿಸುವಳು.

ಅಂದು ಅವಳಿಗೆ ಎಲ್ಲಿಲ್ಲದ ಉತ್ಸಾಹ. ಅದೇ ಸಮಯದಲ್ಲಿ ಮನದಲ್ಲಿ ತವಕ. ಅವಳನ್ನು ಕಂಡರಾಗದಿದ್ದ ಅವಳ ವೀಣಾವಾದನವನ್ನು ತೆಗಳುತ್ತಿದ್ದ ಸುಶೀಲೆಯು ಈಗಲೋ ಆಗಲೋ ಎನ್ನುವ ಸ್ಥಿತಿಯಲ್ಲಿರುವರು. ಅವರು ಅವಳಲ್ಲಿ ಮನುಷ್ಯತ್ವದಿಂದ ನಡೆಯದಿದ್ದರೂ, ಇವಳ ಒಳ್ಳೆಯ ಮನೋಭಾವಕ್ಕೆ ತಕ್ಕಂತೆ ಅವರಿಗೆ ಹೀಗಾಗಿರುವುದು ಕುರಿತು ಪರಿತಪಿಸುತ್ತಿರುವಳು. ವೈದ್ಯರು ಗಡುವನ್ನು ತಿಳಿಸಿರುವರು. ಹೀಗಿರುವಾಗ ಅವಳಿಗೆ ಮನಸ್ಸಿನಲ್ಲಿ ಉತ್ಸಾಹಪೂರಿತ ಮನೋವೇದನೆ. ಹೀಗೆ

ಎರಡರ ಸಮ್ಮಿಳಿತನಾಗಿದೆ. ಒಂದು ಕಡೆ ರಸಿಕ ಮಹಾಜನ್ನ, ಉತ್ಸಾಹ ಮತ್ತೊಂದೆಡೆ ವೇದಸೆಯ ಸ್ಥಿತಿ. ತನಗೇ ಕೇಡಾದರೂ ಅದನ್ನು ಪರಿಗಣಿಸದೇ ಇರುವವಳೇ ವಿನಃ ಮತ್ತೊಬ್ಬರಿಗೆ ಒಂದು ಸೂಜಿ ಮೊನೆಯಷ್ಟು ನೋವಾದರೂ ಸಹ ಸಹಿಸಲು ಅಶ್‌ಕ್ತಳವಳು. ಈ ರೀತಿಯ ಪರಿಸ್ಥಿತಿಯಲ್ಲಿ ಅವಳು ದೊಡ್ಡ ಮಹಾ ಸಭೆಯನ್ನು ಸಂತೋಷ ಗೊಳಿಸಬೇಕಾಗಿದೆ.

ಅಗೋ, ಬಂದರು. ಸಂಗೀತ ಕಾರ್ಯಕ್ರಮವನ್ನೇರ್ಪಡಿಸಿರುವ ಕಾರ್ಯದರ್ಶಿಗಳು ಹೊರಡಬೇಕಾದ ಸಮಯ. ಆಗ ದೂರವಾಣಿಯ ಕರೆ. ಆ ಮಿತ್ರರ ಮಗಳು ಈ ಆಂಟಿಯನ್ನು ಕರೆದು ತನ್ನ ತಾಯಿಗೆ ಬಹಳ (Serious) ಚಿಂತಾಜನಕವಾಗಿರುವುದೆಂದು ಹೇಳುವಳು. ಅತ್ತಲೂ ಬಿಡುವಂತಿಲ್ಲ. ಇತ್ತಲೂ ಬಿಡುವಂತಿಲ್ಲ. ಏನೂ ಮಾಡಲು ತೋಚದು. ಕಾರ್ಯದರ್ಶಿಯವರ ಅವಸರವೋ ಅವಸರ. ಹೊತ್ತಿಗೆ ಸರಿಯಾಗಿ ಹೋಗದಿದ್ದರೆ ರಸಿಕ ಮಹಾಶಯರಲ್ಲಿ ಗೊಂದಲ ವುಂಟಾಗುವುದು.

"ಸರಿ ಹೊರಟೆ" ಮನಸ್ಸಿನಲ್ಲಿ ಮಹಾ ಪ್ರಳಯ. ರಸಿಕರನ್ನು ತೃಪ್ತಿಪಡಿಸಲೇ, ಸಂತೋಷ ಹೊರ ಹೊಮ್ಮುವ ರಚನೆಗಳನ್ನು ನುಡಿಸಿ! ಅಥವಾ ನನ್ನ ಅಳಲನ್ನು ತೋಡಿಕೊಳ್ಳುತ್ತಲೇ?"

"ಹೇ" ಭಗವಂತ ಎಂತಾ ಇಕ್ಕಟ್ಟಿನಲ್ಲಿ ಸಿಲುಕಿಸಿರುವೆ. ನೀನೇ ನನಗೆ ಇಂದು ಸಹಾಯ ಮಾಡಬೇಕು.

ಕಿಕ್ಕಿರಿದಿದೆ ರಸಿಕ ಸಮೂಹ, ಸಭೆಯಲ್ಲಿ ವೀಣೆಯನ್ನು ಹಿಡಿದು ಕುಳಿತ ಒಡನೆ ಕರತಾಡನ ಮುಗಿಲುಮುಟ್ಟಿತು. ವೀಣೆಯನ್ನು ಕರದಲ್ಲಿ ತೆಗೆದುಕೊಂಡ ಕೂಡಲೇ ತನ್ನನ್ನೇ ಅರಿಯದಂತೆ ಸಂಗೀತದ ಪ್ರವಾಹ, ತನನ್ನೇ ಮರೆತಿದ್ದಾಳೆ ಶೀಲಾ. ರಸಿಕರನ್ನು ತೃಪ್ತಿಪಡಿಸುವುದೊಂದೇ

ಅಲ್ಲ ತನ್ನಗುರಿ. ಅದಕ್ಕೂ ಮಿಗಿಲಾಗಿ ಭಗವಂತನನ್ನು ತೃಪ್ತಿ ಪಡಿಸ ಬೇಕೆಂಬುದನ್ನು ಮುಖ್ಯವಾಗಿ ಹೊಂದಿರುವಂತೆ ಕಾಣುತ್ತಿದೆ.

"ಏಲಾ ನೀ ದಯಾರಾದು" ಕೀರ್ತನೆ ಆರಂಭಿಸಿದ್ದಾಳೆ. ಆ ಕೃತಿ ಯಲ್ಲಿಯೇ ಲೀನಳಾಗಿದ್ದಾಳೆ. ಆ ಕೃತಿಯು ಮೂಲಕ ಭಗವಂತನಲ್ಲಿ ಪ್ರಾರ್ಥಿಸುತ್ತಿದ್ದಾಳೆ. ಕೃತಿ ಮುಗಿಯಿತು.

ಅಲ್ಲಿ ಆ ತಾಯಿಯು ಮೇಲುಸಿರು ಬಿಡುತ್ತಿದ್ದಾಳೆ. ಹೊಟ್ಟೆ ಯಲ್ಲಿ ತಳಮಳ. ಮಕ್ಕಳೂ ಅವುಗಳ ತಂದೆಯೂ ಒಂದೊಂದು ನಿಮಿಷವೂ ಒಂದು ಯುಗದಂತೆ ಕಳೆಯುತ್ತಿದ್ದಾರೆ.

ಮುಂದೆ "ಬ್ರೋಚೇವಾರೆವರುರಾ"–ಶಂಕರಾಭರಣಂ ನಲ್ಲಿ ಪ್ರಸಿದ್ಧ ವಾಗಿರುವ ಶ್ರೀವಾಸುದೇವ ಚಾರ್ಯರ ಕೃತಿಯನ್ನು ನುಡಿಸ ಲಾರಂಬಿಸಿದಳು. ಮನದಲ್ಲೇ ಪೂರ್ತಿ ತನ್ನ ಮಿತ್ರಳ ಸ್ಥಿತಿ ಚಿಂತಾ ಜನಕವಾಗಿರುವುದಲ್ಲಾ, ಅವಳನ್ನೂ ಹೇಗಾದರೂ ಉಳಿಸಿ ಅವಳ ಮಕ್ಕಳಿಗೆ ತಾಯಿಯಾಗಿರಬೇಕೆಂಬುದನ್ನೇ ಭಗವಂತನಲ್ಲಿ ಬೇಡುತ್ತ, ಕಣ್ಮುಚ್ಚಿ ತದೇಕ ಚಿತ್ತಳಾಗಿ ನುಡಿಯಿಸುತ್ತಿರುವಳು. ಆಯಿತು ಅನುಪಲ್ಲವಿ.

ನೀರಿಗಾಗಿ ಬಾಯಿ ತೆರೆದಳು. ಮಕ್ಕಳು ಆತುರದಿಂದ ತಾಯಿಯ ಕಡೆಯಕ್ಷಣಗಳೆಂಬುದನ್ನರಿಯದೆ, "ಅಮ್ಮಾ. ಇಗೋ ನೀರು ಕುಡಿ ಯಮ್ಮ" ಎಂದು ಕುಡಿಸುತ್ತಿರುವರು. ಕಣ್ಣುಗುಡ್ಡೆ ಮೇಲೆ ಸಿಕ್ಕಿಹಾಕಿ ಕೊಳ್ಳುತ್ತಿದೆ.

ಚರಣ ನುಡಿಸುತ್ತಿದ್ದಾಳೆ. ಕಣ್ಣಲ್ಲಿ ಕಣ್ಣೀರು ಸುರಿಯುತ್ತಿದೆ. "ಸೀತಾಪತೀ ನಾ ಪೈ ನೀಕಭಿಮಾನಮು ಲೇದಾ" ನುಡಿಸಿ ಗಜೇಂದ್ರುನನ್ನು ಕಾಪಾಡಿದ್ದು ನುಡಿಸಿ ಕೃತಿಯನ್ನು ಮುಗಿಸಿ ಮೇಲುಸ್ಥಾಯಿಯಲ್ಲಿ ಮುಗಿಸುತ್ತಾ ಇದ್ದಾಳೆ. ರಸಿಕರೂ ಕೂಡಿ ಆಕೃತಿಯ ಭಕ್ತಿ ಭಾವದಲ್ಲಿ

ಲೀನರಾಗಿ ಮೈಮರೆತಿದ್ದಾರೆ. ಆಗ ಇದ್ದಕ್ಕಿದ್ದಂತೆ ಏನೋ ಒಂದು ಜ್ಯೋತಿ ಉದಯವಾದಂತಾಗಿ ಕಣ್ಣು ತೆರೆಯುವಳು.

ಓ ! ಆಗೋ ! ಏ ನೆ ದು......? !! ಓ ಕ....ಪ್ಪ ಗೆ...ವೇದಿಕೆಯ ಮೇಲೇ...... ಹ... ರಿ....ದು....ಬರುತ್ತಿರುವುದು ? !

ಓ...ಓ...ಕೆ....ಪ್ಪ ಗೆ ಉದ್ಭವಾಗಿ...ಅದೇ....ಆಂ ಸರ್ಪ ಹೌದು. ನಾಗರಹಾವು ಓ ಹೆಡೆ ಎತ್ತುತ್ತಿರುವುದು !

ಪ್ರೇಕ್ಷಕರ ಕಣ್ಣು ಬಾಯಿ, ತೆರೆದಂತೆಯೇ ಇರುವುದು. ಅವಳ ಎದುರಿಗೇ ಒಂದು ವಿಷ ಸರ್ಪ. ಅವಳಿಗೆ ಏನೂ ತೋರದು. ಹಾಗೆಯೇ ಕೈ ಮುಗಿಯುವಳು. ಅದು ತಾನೇ ತಾನಾಗಿ ಸುಮ್ಮನೆ ಹೊರಗೆ ಹರಿದು ಹೋಗುತ್ತಿದೆ. ಅವಳ ಗೆಳತಿ ಸುಶೀಲೆಯಲ್ಲಿದ್ದ ವಿಷವು ಹೊರ ಹೋದಂತೆ ಇದರ ಭಾವ.

"ಭಗವಂತಾ!" ಎಂದು ಕಣ್ಣು ಬಿಡುತ್ತಾಳೆ. ಒದ್ದಕ್ಕಿದ್ದಂತೆ ಸುಶೀಲೆಗೆ ಯಾವುದೋ ಒಂದು ವಿಧವಾದ ಶಕ್ತಿ ಉಂಟಾಗಿ ತನ್ನಲ್ಲಿದ್ದ ಯೂವುದೋ ವಿಧವಾದ ದುಶ್ಶಕ್ತಿ ದೂರವಾದಂತಾಗುತ್ತದೆ "ಆಹಾ ! ಏನಿದು ಹೊಸಚೇತನ ಉಂಟಾಗುತ್ತಿರುವುದಲ್ಲ. ಏನೋ ದೈವೀಕ ಶಕ್ತಿ ಉದ್ಭವಿಸುತ್ತಿದೆ ? ಯಾರದೋ ವೀಣಾನಿನಾದ ಕೇಳುತ್ತಿರುವುದಲ್ಲಾ. ಓ.......ಓ... ಶೀಲಾ......ಆ ನಾನೆಂಥ ಅವಿವೇಕಿ ! ನನಗೆ ಜೀವ ಕೊಟ್ಟದೇ ನಿನ್ನ ಪ್ರಾರ್ಥನೆಯ ಪ್ರಭಾವವಿರಬೇಕು."

ಆ ಸರ್ಪವು ಆ ಸಭೆಯಲ್ಲಿ ಹೇಗೆ ಬಂದಿತೆಂಬುದೇ ಒಬ್ಬರಿಗೂ ತಿಳಿಯದಾಗಿದೆ. ಆ ಸರ್ಪದ ನಿಗಮನದಿಂದ ಶೀಲಾಳಿಗೆ ಹೇಗೋ ತನ ಸ್ನೇಹಿತೆಯ ಬಗ್ಗೆ ಇನ್ನೇನೂ ಭಯಪಡಬೇಕಾಗಿಲ್ಲವೆಂಬುದು ಮನವರಿಕೆ ಯಾಗುತ್ತಿದೆ. ಅತಿಶಯವಾದ, ಮನುಷ್ಯರ ಕೈಮೀರಿದ, ದೈವಿಕ ಶಕ್ತಿ ಯೊಂದಿರುವುದೆಂಬ ನಂಬಿಕೆ ಆಳವಾಗಿ ಮೂಡುತ್ತಿದೆ,

ಸರಿ ಮನೆಯಲ್ಲಿ ಶೀಲಾ ಬಂದಾಗ ಏನೋ ಒಂದು ಬಗೆಯ ಉತ್ಸಾಹ. ಮನದಾಳದಲ್ಲಿ ಮೂಡಿ ಬರುತ್ತಿದೆ. ಕರೆಗಂಟೆಯ ಶಬ್ದ. "ಯಾರದು?" ಈ ಹೊತ್ತಿನಲ್ಲಿ ? ಓ...! ತನ್ನ ವೀಣಾವಾದನವನ್ನು ಅವಹೇಳನ ಮಾಡುತ್ತಿದ್ದ ಸುಶೀಲೆಯ ಮಗಳು ವಾಣಿ. "ಏನಮ್ಮ ? ಏನುಬೇಕಮ್ಮ ?" ಎಂದು ಮೆಲುದನಿಯಲ್ಲಿ ಸಾಂತ್ವನಗೊಳಿಸುವ ರೀತಿಯಲ್ಲಿ ಕೇಳಿದಾಗ ಆ ಮುಗ್ಧೆ ತನ್ನ ಮಾತೆಗೆ ಜೀವದಾನವಾದುದು ಶೀಲಾಳ ವೀಣಾನಾದದ ಪ್ರಾರ್ಥನೆಯ ಮೂಲಕವೆಂಬುದು ಮನವರಿಕೆಯಾದುದನ್ನು ವಿವರಿಸುತ್ತಾ, ತಾನೂ ವೀಣೆ ಕಲಿಯಬೇಕೆಂದೂ ಅವತ್ತೇ ತನ್ನನ್ನು ಶಿಷ್ಯಳನ್ನಾಗಿ ಸ್ವೀಕರಿಸಬೇಕೆಂದು ವಿಜ್ಞಾಪಿಸಿಕೊಂಡು ನಮಸ್ಕರಿಸಿದಳು.

ಶೀಲಾ ಹಿರಿಮೆಯಿಂದ ವಾಣಿಯನ್ನು ಹಿಡಿದೆತ್ತಿ ತನ್ನ ಶಿಷ್ಯಳನ್ನಾಗಿ ಸ್ವೀಕರಿಸಿ ಪ್ರೀತಿಯಿಂದ ಆಲಂಗಿಸಿಕೊಂಡಿಳು.

ಅವತ್ತೇ ವಾಣಿ ಶಿಕ್ಷಣ ಆರಂಭವಾಯಿತು. ಶುಕ್ಲಪಕ್ಷದ ಚಂದ್ರನಂತೆ ವಾಣಿಯ ಶಿಕ್ಷಣವು ದಿನೇ ದಿನೇ ಮುಂದುವರೆಯುತ್ತಾ ವಾಣಿ ಪ್ರವರ್ಧಮಾನಳಾಗಿ ವೀಣೆಯಲ್ಲಿ ಪ್ರಾವಿಣ್ಯತೆ ಪಡೆದಳು. ಈಗಿನ್ನೂ ಅವಳಿಗೆ ಹದಿನೈದು ವರ್ಷ. ನಾಳೆ ಚೌಡಯ್ಯ ಮೆಮೋರಿಯಲ್‌ನಲ್ಲಿ ವಾಣಿಯ ರಂಗ ಪ್ರವೇಶ. ಚಿಟ್ಟಿಬಾಬುರವರು ಮುಖ್ಯ ಅತಿಥಿಗಳಾಗಿ ಬರುವವರಿದ್ದಾರೆ. ಹಲವಾರು ಪ್ರಮುಖರು ಆಗಮಿಸಲಿರುವವರಿದ್ದಾರೆ. ವಾಣಿ ಮೈಸೂರಿಗೆ ಹೋಗಿ ದಸರಾ ಮೆರವಣಿಗೆಯನ್ನು ನೋಡುವ ಆಸೆಯಲ್ಲಿ ಹೋಗಿ ನೋಡಿಕೊಂಡು ರೈಲಿನಲ್ಲಿ ಬರುತ್ತಿದ್ದಾಳೆ. ಕಿಟಕಿಯ ಹತ್ತಿರ ಕುಳಿತು ಹೊರಗಿನ ಪ್ರಕೃತಿ ಸೌಂದರ್ಯವನ್ನು ನೋಡಿ ಆನಂದಿಸುತ್ತಿದ್ದಾಳೆ.

ಆಯಿತು "ಓ ಇದೇನಿದು? ಕಿಟಕಿಯ ಬಾಗಿಲು ಸರಿಯಾಗಿ ಹಾಕಿಲ್ಲ? ಓ ಮೇಲಿಂದ ಜಾರಿಬಂತು. ಬಂದೇ ....ಬಂದಿತು, ಓ.... ಓಹ್...ಬಲಗೈ ಬೆರಳುಗಳ ಮೇಲೆ ಬಿದ್ದಿತು. ಆಂ ...

"ಅಯ್ಯೋ; ಅಮ್ಮಾ...." ಎಲ್ಲಾ...ಒಳಗೇ. ಮನಸ್ಸಿನಲ್ಲೇ.... ಹೊರಗೆ ಉಸಿರೆತ್ತಲಿಲ್ಲ. ವಾಣಿ ಪಕ್ಕದಲ್ಲಿದ್ದ ಅಮ್ಮ ತಕ್ಷಣ ಬೆರಳಿಗೆ

ಚಿಕಿತ್ಸೆಮಾಡಲು ತಡಕಾಡುತ್ತಿರುವರು. ಎದುರಿಗೇ ಕುಳಿತ್ತಿದ್ದ ಡಾಕ್ಟರೊಬ್ಬರು ಆ ಕ್ಷಣವೇ ತಮ್ಮ ಪೆಟ್ಟಿಗೆಯನ್ನು ತೆರೆದು ಕೈಬೆರಳಿಗೆ ಕಟ್ಟು ಹಾಕಿದರು. ವಾಣಿಗೆ ಯೋಚನೆ. "ನಾಳೆ ರಂಗಪ್ರವೇಶ...ಮಧ್ಯದ ಬೆರಳಿಗೂ ಉಂಗುರದ–ಬೆರಳಿಗೂ ಏಟು ಬಿದ್ದಿದೆ. ನಾಳೆ ಹೇಗೆ ನುಡಿಸುವುದು,? ಹಾ .. ಭಗವಂತ ನಾಳೆ ಹೇಗೆ ನುಡಿಸಲಿ? ಈ ರೀತಿ ಪರೀಕ್ಷೆ ಮಾಡುತ್ತಿರುವೆಯಲ್ಲಾ?" ಈ ಕಾರ್ಯಕ್ರಮವನ್ನು ಮುಂದೂಡುವಂತಿಲ್ಲ. ಎಲ್ಲರಿಗೂ ಆಮಂತ್ರಣ ಹೋಗಿದೆ. ಭಗವಂತನ ಲೀಲೆ.... ಅವನಿಗೆ ಇದು ಗೊಂಬೆಯಾಟ.

ರಾತ್ರಿಯೆಲ್ಲಾ ವಾಣಿಗೆ ಕೈನೋವು...ನೋವಿಗೆ ಔಷಧಿ, ನಿದ್ದೆಯಿಲ್ಲ, ಬೆಳಗಾಯಿತು. ಇವತ್ತಿನ ಕಛೇರಿ ಹೇಗೆ ನಡೆಯುವುದೋ ಎಂಬ ತವಕ.... ಎಲ್ಲಾ ಸಿದ್ಧರಾದರು. ಹೊರಟರು. ಸಭಾಂಗಣದಲ್ಲಿ ಎಲ್ಲಾ ಆಮಂತ್ರಿಕರೂ ಕುಳಿತಿರುವರು. ಪವಾಡವನ್ನೇ ಮಾಡಿದ ಶೀಲಾಳ ಶಿಷ್ಯೆ ವಾಣಿ ಹೇಗೆ ನುಡಿಸುವಳೆಂಬುದನ್ನು ಕೇಳಲು ಸಭಿಕರೆಲ್ಲಾ ಕಾತುರರಾಗಿದ್ದಾರೆ. ವಾಣಿಗೆ ತಾನು ನುಡಿಸುವ ನಂಬಿಕೆಯೇ ಇಲ್ಲ. ಎಲ್ಲಾ ಗುರುವಿನ ಮೇಲೆ ಭಾರಹಾಕಿ ಗುರುವಿಗೆ ನಮಸ್ಕರಿಸಿ ವೇದಿಕೆಗೆ ಬರುತ್ತಾಳೆ. ಅಂಥಾ ಗುರುವಿನ ಶಿಷ್ಯೆ ಎಂಬ ನಾಮಫಲಕವಿರುವುದರಿಂದ ಸಭಿಕರಿಗೆ ಎಲ್ಲಿಲ್ಲದ ಕುತೂಹಲ. ಕಾರ್ಯಕ್ರಮದಲ್ಲಿ ಹಿಂಜರಿಕೆಯಿಂದಲೇ ವೀಣೆಯನ್ನು ಕೈಗೆತ್ತಿ ನುಡಿಸಲು ಆರಂಭಿಸಿದಳು. ಮೀಟಲು ಸಾಧ್ಯವೇ ಎಂದುಕೊಂಡಿದ್ದಳು, ಯಾವ ನೋವಿನ ಪರಿವೆಯೂ ಇಲ್ಲದೆ ಲೀಲಾಜಾಲವಾಗಿ " ವಾತಾಪಿಗಣಪತಿಂ ಭಜೇಹಂ" ನಿಂದ ಪ್ರಾರಂಭಿಸಿ ನುಡಿಸಲು ಆರಂಭಿಸಿದ್ದಾಳೆ. ಗುರುವಿನಂತೆಯೇ ಅವಳಿಗೂ ಭಗವಂತನಲ್ಲಿ ಪರಮ ಭಕ್ತಿ. ಭಕ್ತಿಪರವಶಳಾಗಿದ್ದಾಳೆ, ಗುರುವನ್ನೆ ಮೀರುಸುವ ರೀತಿಯಲ್ಲಿ ನುಡಿಸುತ್ತಿರುವಳು. ಮುಖ್ಯವಾದ ಭಾಗಗಳನ್ನು ಮುಗಿಸಿ ಒಂದು ಘಟ್ಟಕ್ಕೆ ಬಂದು ನಿಂತಾಗ ಕಾರ್ಯಕ್ರಮವನ್ನು ಇನ್ನೆರಡು ಕೃತಿಗಳನ್ನು ನುಡಿಸಿ ಮಂಗಳ ನುಡಿಸುವ ಮೊದ್ಲು ಶ್ರೀ ಚಿಟ್ಟಿಬಾಬುರವರು ಬಾಲಕಿಗೆ ಆಶೀರ್ವಚನವನ್ನು ಹೇಳಬೇಕೆಂದು ಕಾರ್ಯದರ್ಶಿಗಳವರು ಕೇಳಿದಾಗ ಶ್ರೀಮಾನ್‌ಚಿಟ್ಟಿಬಾಬುರವರು

ಎದ್ದುನಿಂತು ವಾಣಿಯನ್ನು ಇಷ್ಟು ಚಿಕ್ಕವಯಸ್ಸಿನಲ್ಲೇ ಇಷ್ಟು ಪ್ರೌಢರೀತಿಯಲ್ಲಿ ನುಡಿಸುವುದನ್ನು ಕೊಂಡಾಡಿ ಗುರುವನ್ನು ಮೀರಿಸುವವಳಾಗಿರುವಳೆಂದರು.

ಶಿಲಾಗೆ ಬಹಳ ಹೆಮ್ಮೆ ಆಯಿತು. ಪಡೆದರು ಇಂತಹ ಶಿಷ್ಯೆಯನ್ನು ಪಡೆಯಬೇಕೆಂದು ವಾಣಿಗೆ ಬಹಳ ಸಂತೋಷ. ಬೆರಳು ನೋವಾಗಿದ್ದರೂ ತಾನು ಬಹಳ ಚೆನ್ನಾಗಿ ನುಡಿಸಿದನೆಂದು, ಅದರೊಂದಿಗೇ ಎಂದೂ ಇಲ್ಲದ ಗರ್ವ ಉಂಟಾಗಿಬಿಟ್ಟಿತು. ಅದೂ ಶ್ರೀ ಚಿಟ್ಟಿಬಾಬುರವರು ಗುರುವನ್ನು ಮೀರುಸುವವಳೆಂದಾಗ.

ಮುಂದೆ ಗರ್ವದಿಂದ "ಕೃಷ್ಣ ನೀ ಬಾರೋ" ಎಂದು ವಾಣಿ ನುಡಿಸಲಾರಂಬಿಸಿದಳು; "ಬೇಗನೇ ಬಾರೋ ಮುಖವನ್ನು ತೋರೋ" ನುಡಿಸುತ್ತಿದ್ದಾಳೆ.

'ದಡಂಗ್' ಓ...."ಇದೇನಿದು. ನುಡಿಸುತ್ತಿದ್ದ ತಂತಿ ಏನಾಯಿತು?"

ಆಹ್! ಕಿತ್ತು ಹೋಯಿತೇ? ನೆನ್ನೆ ತಾನೇ ಕಟ್ಟಿದ ತಂತಿ? ಹೇಗೆ ಕಾರ್ಯಕ್ರಮವನ್ನು ಮುಗಿಸಲಿ ? ಅಂ....ನಾನರಿತೆ. ನಾನು ಬಂದು ನಿಮಿಷಪಟ್ಟ ಗರ್ವದ ಫಲ....ಓ ದೇವಾ ಭಗವಂತನೇ, ನನಗೇ ಸಕಲವೂ ಗುರುವೇ ಇನ್ನೆಂದಿಗೂ ಗರ್ವ ಪಡುವುದಿಲ್ಲ.

ಅಂತೂ ಪಂಚಮ ತಂತಿಯಲ್ಲೇ ಮಂಗಳವನ್ನು ಮುಗಿಸಿ ಕಾರ್ಯಕ್ರಮವನ್ನು ಪೂರ್ತಿಗೊಳಿಸಿದಳು. ಅಂದು ಕಲಿತಪಾಠ ಮತ್ತೆಂದಿಗೂ ಯಾರು ಮತ್ತೆಷ್ಟು ಹೊಗಳಿದರೂ ಗರ್ವಪಡಬಾರದೆಂಬ ನೀತಿಯನ್ನು ಕಲಿತಳು,

"ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತಿ.

*    *    *    *

# ಬಿಸಿಲ್ಗುದುರೆ

ವಿಮಲಾ ರಾಘವೇಂದ್ರ

ನನಗೆ ಮೊದಲಿನಿಂದಲೂ ಒಂದು ಖಯಾಲಿ.......ಏನೆಂದರೆ "ಪತ್ರ ಸ್ನೇಹ" ಮಾಡುವ ಖಯಾಲಿ, ದೂರ ದೇಶಗಳಲ್ಲಿರುವವರಿಗೆ ಪತ್ರ ಬರೆದು ನಮ್ಮ ವಿಷಯ ಪರಿಚಯ ಮಾಡಿಕೊಟ್ಟು ಅವರ ಪರಿಚಯ ಬೆಳೆದು ಅವರ ದೇಶದ ಸಮಾಚಾರ, ಅಂದರೆ ಅಲ್ಲಿಯ ಜನಜೀವನ, ದೃಶ್ಯ ಗಳೂ, ಎಲ್ಲಾ ತಿಳಿದುಕೊಳ್ಳಬೇಕೆಂಬ ಹಂಬಲ.

ಇದುವರೆಗೂ, ಅನೇಕ ಹೊರದೇಶದವರ ಪರಿಚಯ ನನಸಾಗಿತ್ತು ಕೆಲವು ತಿಂಗಳುಗಳ ಹಿಂದೆ ನಡದ ಪ್ರಸಂಗ. ನನ್ನ ಮನಸ್ಸಿನ ಮೇಲೆ ಬಹಳ ಪರಿಣಾಮ ಮಾಡಿದೆ, ಅದನ್ನು ತಮ್ಮೊಡನೆ ಹಂಚಿಕೊಳ್ಳುವ, ಎಂದು ಹೇಳುತ್ತಿದ್ದೇನೆ.

ನನ್ನ ಸ್ನೇಹಿತೆ, ಅಮೇರಿಕಾದಲ್ಲಿ ನೆಲೆಸಿರುವದವರ ಒಂದು ವಿಳಾಸ ಎತ್ತಿದ್ದಳು. ಅವರ ಹೆಸರು, ಸೀತಾಪತಿ ಎಂದು ಆ ಹೆಸರು ನೋಡಿದ ಒಡನೆ ನನಗೆ ಅನ್ನಿಸಿತು ಅವರು ನಮ್ಮ ದೇಶದವರೇ ಅಲ್ಲಿ ನೆಲೆಸಿರ ಬೇಕೂ, ಎಂದೂ, ಅದಕ್ಕೆ ಕುತೂಹಲದಿಂದ ಪತ್ರ ಬರೆದೆ, ನಾನು ಎಣಿಸಿದಂತೆ ಆತ ಈ ನಮ್ಮ ಬೆಂಗಳೂರಿನವರೇ ಎಂದು ತಿಳಿಯಿತು, ಜೊತೆಗೆ ಅವರು ಬರೆದ ಶೈಲಿ, ನನ್ನನ್ನು ಆಕರ್ಷಿಸಿ ಪದೇ ಪದೇ, ಪತ್ರ ಬರೆಯುವಂತ ಆಯಿತು, ನನಗೂ ಚಿತ್ರ ಕಲೆ, ಕಥೆ, ಕವನ ಬರೆ ಯುವ ಹವ್ಯಾಸವಿರುವಂತೆ ಆತನಿಗೂ ಇರುವುದು ತಿಳಿದೆ. ಎದು

ರಿಗೆ ಬಂದು ನಿಂತು ಮಾತನಾಡುವಂತೆ ಅಚ್ಚ ಕನ್ನಡದಲ್ಲೆ ಬರೆಯುವ ಅವರ ಶೈಲಿಗೆ ಮರುಳಾದೆ. ಅವರ ಅಂದವಾದ ಅಕ್ಷರಗಳನ್ನು ನೋಡಿದಾಗ ಆತನೂ ಮುದ್ದಾಗಿರಬಾರದೆ....?

ಎಂದು ಒಮ್ಮೊಮ್ಮೆ ಯೋಚಿಸುತ್ತಿದ್ದೆ. ಆ ಕುತೂಹಲ ತಡೆಯಲಾರದೆ. ಅವರ ಭಾವಚಿತ್ರವನ್ನು ಕಳಿಸುವಂತೆ ಪತ್ರ ಬರೆದೆ. ಮರು ಸಾಲಿನಲ್ಲಿ ಆ ಭಾವ ಚಿತ್ರ ಬಂದಾಗ ನಾನು ದಂಗಾದೆ. ನಾನೆಣಿಸಿದಂತೆ ಆತ ಮುದ್ದಾಗಿದ್ದಾರೆ. ದುಂಡಾದ ಮುಖ, ಚಿಗುರು ಮೀಸೆ, ಬೊಗಸೆ ಕಂಗಳು ಆ ಕಂಗಳಲ್ಲಿ ತುಂಬ ಖಿರಳೆ, ನೋಡಿದರೆ ಅಜಾನು ಬಾಹುವಿನಂತೆ ಇದ್ದಾರೆ. ಆತನಿಗೆ ಮದುವೆ ಯಾಗಿದೆಯೆ...? ಎಂಬ ಯೋಚನೆ ಬಂದಿತು. ಆಗದಿದ್ದರೆ. ನಾನು ಸೀತ–ಅವರು ಪತಿ...... ನನ್ನ ಯೋಚನೆಗೆ ನಾನೇ ನಕ್ಕುಬಿಟ್ಟೆ, ಎಂತಹ ಹುಚ್ಚ ಯೋಚನೆ ಎಂದು.

ಅವರೂ ನನ್ನ ಭಾವಚಿತ್ರ ಕೇಳಿಬರೆದಿದ್ದರು, ಆದರೆ ಕಳಿಸಲು ನನಗೇ ಸಂಕೋಚ, ನಾನಷ್ಟು ಚೆನ್ನಾಗಿಲ್ಲವಲ್ಲ. ಅದನ್ನು ನೋಡಿ ಪತ್ರದಿಂದ ಸಿಗುತ್ತಿರುವ ತೃಪ್ತಿಯೂ ಸಿಗದಿದ್ದ್ರೇತೆ ಆದರೆ......

ನನ್ನ ಹುಟ್ಟು ಹಬ್ಬಕ್ಕೆ ಅಲ್ಲಿಂದ ಒಂದು ಕೈ ಗಡಿಯಾರ ಕಳಿಸಿದ್ದರು. ಅದು ಪುಟ್ಟದಾಗಿ ಮುದ್ದಾಗಿತ್ತು. ನಾನು ಅವರಿಗೆ ರಾಧಾ–ಕೃಷ್ಣರ ಒಂದು ಗಂಧದ ಪ್ರತಿಮೆ ಕಳಿಸಿದಾಗ ಅವರ ಸಂತಸ ಹೇಳತೀರದು. ನಿಮಗೆ ವಿವಾಹವಾಗದಿದ್ದರೆ ನಾನು ಕ್ರಿಷ್ಣನಾಗಬಹುದೆ......?. ಎಂದು ಕೇಳಿದ್ದರು. ಆ ಪತ್ರಕ್ಕೆ ನಾನು ಚುಂಬಿಸಿದೆ ನನ್ನ ಆಸೆಗಳೆಲ್ಲಾ ಕೈ ಗೂಡುತ್ತಿವೆ, ನನ್ನಂತೆ ಅವರಿಗೂ ಮದುವೆ ಆಗಿಲ್ಲ ಎಂದು ಲಿತಿದು ಅಂದಿನಿಂದ ನನ್ನ ಪತ್ರ ಧೀರ್ಘವಾಗಿತ್ತು.

ಪತ್ರದಲ್ಲೆ ನಮ್ಮ ಪ್ರಣಯ ಮುಂದುವರದಿತ್ತು.

ತಾವು ಬೆಂಗಳೂರಿಗೆ ಮುಂದಿನವಾರ ಬರುವುದಾಗಿ, ಅವರ ಅಕ್ಕನ ಮನೆ ಜಯನಗರದಲ್ಲಿರುವುದು, ಅಲ್ಲಿ ಬಂದು ತಂಗುತ್ತೇನೆ,

ಎಂಟೇದಿನ ಅಲ್ಲಿರಲು ಸಾಧ್ಯ, ಆದಷ್ಟು ಜಾಗ್ರತೆ ನನ್ನ ವಿವಾಹ ಮುಗಿಸಿಕೊಂಡೇ ಬರಬೇಕು ಇಲ್ಲದಿದ್ದರೆ ಅಕ್ಕ ಸುಮ್ಮನೆ ಇರುವುದಿಲ್ಲ. ಆದ್ದರಿಂದ ನೀವು ನನ್ನನ್ನು ಇಂತಹ ದಿನ ವಿಮಾನ ನಿಲ್ದಾಣದಲ್ಲಿ ಸಂಧಿಸಬೇಕು, ಅಷ್ಟರಲ್ಲಿ ನಿಮ್ಮ ಭಾವಚಿತ್ರ ಕಳಿಸಿ ಎಂದು ಪತ್ರ ಬರೆದಿದ್ದರೂ...ನಾನ್ನು ಸುಮ್ಮನಿದ್ದೆ, ಅವರು ನನ್ನನ್ನು ಎದುರಿಗೇ ನೋಡಲಿ...ಭಾವಚಿತ್ರ ಕಳಿಸುವುದು ಬೇಡವೆಂದು ಸುಮ್ಮನಾದೆ.

ನನ್ನ ಸೀತಾಪತಿ ಬರುತ್ತಾರೆಂಬ ಸಂತಸದಲ್ಲಿ. ನನ್ನ ಮನ ಹುಚ್ಚು ಕುದುರೆಯಂತಾಗಿತ್ತು.

ಸೀತಾಪತಿ ಬರುವುದು ಮೂರು ದಿನ ಇರುವಾಗ ನಮ್ಮ ಅಜ್ಜಿ ಧೈವಾಧೀನರಾದ್ದರಿಂದ ನಾನು ಮೈಸೂರಿಗೆ ಹೋಗ ಬೇಕಾದಿ ಬಂತು. ಏನು ಮಾಡಲು ತೋಚದೆ ನಾನು ನನ್ನ ಗೆಳತಿಯ ಮೊರೆ ಹೋಗ ಬೇಕಾಯಿತು. ಆದೇ ವಿಳಾಸವಿತ್ತ ನನ್ನ ಗೆಳತಿ ಲಲಿತಳೊಡನೆ ನನ್ನ ಕಷ್ಟ ತೋಡಿಕೊಂಡು ವಿಮಾನ ನಿಲ್ದಾಣಕ್ಕೆ ನನ್ನ ಪರವಾಗಿ ನೀನೇ ಹೋಗು ಎಂದು ಪ್ರಾರ್ಥಿಸಿದೆ.

"ಮೊದಲು ಏನೂ ನೆಪ ಹೇಳಿದ ಲತ, ನಂತರ ಹೋಗುವು ದಾಗಿ ಹೇಳಿದಳು.

ನಾನು ಊರಿಂದ ಇನ್ನು ನಾಲ್ಕು ದಿನಗದಲ್ಲಿ ಬರುತ್ತೇನೆ ಅಷ್ಟರವರೆಗೆ ಇಲ್ಲಿ ಇರಲು ತಿಳಿಸು, ಆದಷ್ಟು ಜಾಗ್ರತೆ ಬರುತ್ತೇನೆಂದು ಹೇಳಿ ಸೀತಾ ಪತಿಯ ಭಾವಚಿತ್ರ ಹಾಗು ಅವರ ಅಕ್ಕನ ಮನೆಯ ಅಡ್ರಸ್ ಫೋನ್ ನಂ ಎಲ್ಲಾ ಇತ್ತೆ..,

ನಾನು ಮೈಸೂರಿನಿಂದ ಹಿಂತಿರುಗಿ ಬರಲು ಅನೇಕ ಕಾರಣ ಗಳಿಂದ ವಿಳಂಬವಾಯಿತು.

ಮನದಲ್ಲಿ ಸೀತಾಪತಿ ನೆನೆಯುತ್ತಿದ್ದರೂ ಅನ್ಯ ಮಾರ್ಗವಿಲ್ಲದೆ 8-10ದಿನ ಇರಬೇಕಾಗಿ ಬಂತು.

ನಾನು ತಿರುಗಿ ನಮ್ಮ ಮನೆಗೆ ಬಂದ ನಂತರ ಲತಾಳನ್ನು ಹುಡುಕಿಕೊಂಡು ಹೊರಟೆ, ಲತಾ ಮನೆ ಬೀಗ, ಅಲ್ಲಿ ಹಸಿರು ಚಪ್ಪರ ನನ್ನನ್ನು ಸ್ವಾಗತಿಸಿತು. ಏನು .....? ಯಾರ ಮದುವೆ ಲತಾ ಎಲ್ಲಿ ........? ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯಿತು,

ಅಷ್ಟರಲ್ಲಿ ಪಕ್ಕದ ಮನೆಯಾಕೆ ಬಂದು "ಯಾರು ಬೇಕಾಗಿತ್ತು ಎಂದರು" ಲತಾ ಊರಿನಲ್ಲಿ ಇಲ್ಲವೆ.......?

"ಇಲ್ಲ ಅವರೆಲ್ಲಾ ತಿರುಪತಿಗೆ ಲತಾಳ ಮದುವೆಗೆ ಹೋಗಿದ್ದಾರೆ." ಲತಾ ಮದುವೆಯೇ........? ಯಾರ ಜೊತೆ; ಅದೇನೋ ಗೊತ್ತಿಲ್ಲಮ್ಮ ಎಂಟೇ ದಿನದಲ್ಲಿ ಮದುವೆ ಮಾಡಿ ಕೊಡಿ ಅಂದರಂತೆ ಗಂಡಿನವರು ಅದಕ್ಕೆ ಅದೆಷ್ಟು ಬೇಗ ಮುಗಿಸಬೇಕು ಅಂದು ನಾಲ್ಕು ದಿನದಲ್ಲೇ ಎಲ್ಲಾ ಮಾಡಿಬಿಟ್ಟರು, ಎಂದರು.

ನನ್ನ ಎದೆಯಲ್ಲಿ ಹನ್ನೆರಡು ಹೊಡೆದು ಕೊಳ್ಳುತ್ತಿತ್ತು.

ದೇವರೇ ಆ ಗಂಡು ಸೀತಾಪತಿ ಆಗದಿರಲಿ............ಎಂದು ದೇವರಲ್ಲಿ ಮೊರೆ ಇಟ್ಟೆ. ನಮ್ಮ ಮನೆಯವರಿಗೆ ನಮ್ಮ ಪತ್ರ ಪ್ರೇಮದ ವಿಷಯ ತಿಳಿದಿರಲಿಲ್ಲ. ಸೀತಾಪತಿ ಅಕ್ಕನ ಮನೆಗೆ ಫೋನ್ ಮಾಡಿದಾಗ ಅಲ್ಲಿ ನನ್ನ ಕರೆಗೆ ಯಾರೂ ಓಗೊಡಲಿಲ್ಲ.

ಇದಾಗಿ ಎರಡು ಮೂರು ದಿನ ಕಳೆದಿರಬಹುದು. ನಮ್ಮ ಮನೆಯ ಮುಂದೆ ಒಂದು ನೀಲಿ ಕಾರು ಬಂದು ನಿಂತಿತ್ತು, ಯಾರು ಬಂದಿರಬಹುದು. ಎಂದು ಕೆಲಸ ಮಾಡುತ್ತಿದ್ದ ನಾನು ಕುತೂಹಲ ದಿಂದ ಸೆರಗಿನಲ್ಲಿ ಕೈ ಒರೆಸುತ್ತಾ ಬಂದೆ.

ಅಷ್ಟರಲ್ಲಿ ಲತಾ, ಅವಳ ಗಂಡ ಬಂದಿದಾರೆಂದು ಅಮ್ಮ ಹೂ, ಬುಟ್ಟಿ ಹಿಡಿದು ಒಳಬಂದಿಳಿದರು.

ಅಷ್ಟರಲ್ಲೇ ನನಗೆ ಕಣ್ಣು ಕತ್ತಲಿಟ್ಟು ಬಂದು ಕುಸಿಯುತ್ತಿರುವಾಗ ಯಾವುದೊ ಬಲಿಷ್ಟ ಕೈಗಳು ನನ್ನನ್ನು ಹಿಡಿದುದಷ್ಟು ನೆನಪು, ನಂತರ ಏನೂ ನೆನಪಿಲ್ಲ.

ಆಮೇಲೆ ತಿಳಿಯಿತು. ಸೀತಾಪತಿಯೇ ನನ್ನನ್ನು ಹಿಡಿದದ್ದು. ನನ್ನ ಸ್ಥಿತಿಯನ್ನು ನೋಡಿ ಓಡಿ ಬಂದು ಹಿಡಿಯದಿದ್ದರೆ ನನ್ನ ತಲೆ ಒಡೆಯುತ್ತಿತ್ತು. ಎಂದು ಅಮ್ಮ ಹೇಳುತ್ತಿದ್ದಳು. ತಲೆ ಒಡೆಯದಿದ್ದರೂ ನನ್ನ ಹೃದಯ ಒಡೆದು ಚೂರಾಗಿರುವ ವಿಷಯ ಅವರಿಗೆ ಏನು ಗೊತ್ತು.

ಲತಾ ನನ್ನನ್ನು ತಬ್ಬಿ ಅಳುತ್ತಿದ್ದಳು. ನನ್ನ ಕ್ಷಮಿಸು ಸೀತಾ ಸೀತಾಪತಿಗೆ ನೀನಿಲ್ಲದಿರುವ ವಿಷಯ ತಿಳಿಸದೆ ನಾನು ಸೀತೆ ಎಂದು ನಟಿಸಿ ಗೋಳಾಡಿಸಬೇಕೆಂದು, ನಾಟಕವಾಡಿದೆ ಆದರೆ ಅವರನ್ನೂ ಅವರ ಮಾತನ್ನೂ ಕೇಳಿದ ಮೇಲೆ ನನಗೆ ನಿಜಸ್ಥಿತಿ ತಿಳಿಸಲು ಸಮಯವೇ ಇರಲಿಲ್ಲ. ನೀನು ಎಷ್ಟು ದಿನ ಆದರೂ ಬರಲಿಲ್ಲ, ಅವರಿಗೆ ಲೀವ್ ಇಲ್ಲ, ಮದುವೆ ಮುಗಿಸಿಕೊಂಡೇ ಹೋಗಬೇಕೆಂದು ನಮ್ಮ ಮನೆಗೆ ಬಂದು ನಮ್ಮ ತಂದೆ ತಾಯಿಯನ್ನು ಒಪ್ಪಿಸಿ, ಮದುವೆ ಆಗಿಬಿಟ್ಟರು.

ನಂತರ ತಿಳಿಯಿತು ನೀನು ಅವರು ಪತ್ರ ಮುಖೇತ ಪ್ರೀತಿಸಿದ್ದೀರಿ ಎಂದು. ನಿನ್ನ ಮದುವೆ ಆಗಲೆಂದೇ ಅಲ್ಲಿಂದ ಬಂದರೆಂದು. ನಾನು ನಿನ್ನ ವಸ್ತುವನ್ನು ಕದ್ದುಕೊಂಡೆ ಎಂದು ಕೋಪಿಸಬೇಡ ಸೀತಾ. ನನ್ನ ಬಾಳೆಲ್ಲಾ ನಿನ್ನ ಕೈಲಿದೆ, ನೀನೇ ಲತಾ ಎಂದು ಅವರು ತಿಳಿದಿದ್ದಾರೆ........ನಿನಗೆ ಮೋಸ ಮಾಡಿದೆ, ನಿಜ ಸೀತಾ ಆದರೆ ಅದು ನನ್ನ ತಪ್ಪಲ್ಲ ಸೀತಾಪತಿಯ ರೂಪಿನದು ಎಂದು ಅಳುತ್ತಾ ನುಡಿದಳು ಲತಾ.

ಈಗ ಏನು ಮಾಡಲು ಸಾಧ್ಯ ನಾನು ಬಿಸಿಲು ಕುದುರೆಯನು ಹಿಡಿಯಲು ಹೋಗಿ ನಿರಾಶಳಾದೆ.......ನಾನು.

* * *

# ಮಿಲನ

[ಸಣ್ಣ ಕಥೆ]

ಲೇಖಕಿ:–ಕುಮಾರಿ ಭಾರತಿ ಕೆ. ಎಸ್. ಉಡುಪ ಸಾಗರ

ಮಧುರ ನರ್ಸರಿ ಶಾಲೆಗೆ ಬಂದಾಗ, ಗಲಾಟೆಮಾಡುತ್ತಿದ್ದ ಮಕ್ಕಳೆಲ್ಲಾ ಸುಮ್ಮನಾದರು. ಮಧುರ ಬಂದೊಡನೆ ಮಕ್ಕಳನ್ನೆಲ್ಲಾ ನೋಡಿಕೊಳ್ಳುತ್ತಿದ್ದ ಆಯ ಸರಸ ನಿನಾಳವಾದ ಮನಸ್ಸಿನಿಂದ ಕುಳಿತಳು; ಅವಳಿಗೆ ಬಗ್ಗದಿದ್ದ ಮಕ್ಕಳು ಮಧುರ ಏನು ಹೇಳಿದರೂ ಅವಳ ಮಾತನ್ನ ಕೇಳುತ್ತಿದ್ದರು. ಅವಳ ಸೌಮ್ಯವಾದ ದುಂಡು ಮುಖ. ನಗೆಯನ್ನು ಹೊರಚೆಲ್ಲುವ ಕಣ್ಣುಗಳು ಅವಳ ಮೆಲುನುಡಿಗೆ ಮಕ್ಕಳೆಲ್ಲಾ ಮಾರುಹೋಗಿದ್ದರು

ಮಧುರ ಎಲ್ಲಾ ಮಕ್ಕಳ ಆಟೆಂಡೆನ್ಸ್ ಹಾಕತೊಡಗಿದಾಗ ಕೊನೆಯಲ್ಲಿದ್ದ ಹೆಸರು ಅವಳ ಮನಸೆಳೆಯಿತು,

"ದಿವ್ಯಾ"

"ಎಸ್, ಮಿಸ್,"

ಮಧುರ ಕತ್ತೆತ್ತಿ ನೋಡಿದಳು. ನಿನ್ನೆಯ ದಿನ ಆ ಹುಡುಗಿ ಹೊಸದಾಗಿ ಬಂದು ಸೇರಿದ್ದರೂ ಮಧುರ ಅವಳನ್ನ ಸರಿಯಾಗಿ ಗಮನಿಸಿರಲಿಲ್ಲ. ಮುದ್ದಾದ ಹುಡುಗಿ ದಿವ್ಯ ಮಧುರಾಳನ್ನೇ ನೋಡುತ್ತಿದ್ದಳು. ಮಧುರ ಅಂದು ಕಲಿಸಿದ ಆಟ, ಪಾಠ, ಹಾಡುಗಳನ್ನ ಎಲ್ಲರಿಗಿಂತ ಮೊದಲು ದಿವ್ಯ ಕಲಿತಳು. ಚೂಟಿಯಾದ ಹುಡುಗಿ ದಿವ್ಯ ಎಂದು ಮಧುರ ಮನಸ್ಸಿನಲ್ಲೇ ಅಂದುಕೊಂಡರೂ ದಿವ್ಯಾಳ ಕಡೆ ಅವಳ ಮನಸ್ಸು ಸೆಳೆಯಿತು. ಮಧುರ ಸಂಜೆ ಮನೆಗೆ ಹೊರಟಾಗ ಎಲ್ಲಾ ಮಕ್ಕಳು ಹೋದರೂ ದಿವ್ಯ ಒಬ್ಬಳೇ ನಿಂತಿದ್ದಳು, ಮಧುರ ಮೃದುವಾಗಿ ಕೇಳಿದಳು,

"ದಿವ್ಯಾ, ನೀನ್ಯಾಕೆ ಸರಸಳ ಜೊತೆ ಮನೆಗೆ ಹೋಗಲಿಲ್ಲ."

"ಮಿಸ್. ನಮ್ಮ ಅಂಕಲ್ ಕಾರಿನಲ್ಲಿ ಮನೆಗೆ ಕರ್ಕೊಂಡು ಹೋಗ್ತೀನಂತ ಹೇಳಿದ್ದಾರೆ, ಅದಕ್ಕೋಸ್ಕರ ಕಾಯ್ತಿದ್ದೇನೆ."

ಅವಳು ಮುದ್ದು ಮುದ್ದಾಗಿ ಹೇಳಿದಾಗ ಮಧುರ ಅವಳನ್ನೆತ್ತಿಕೊಂಡು ಮುದ್ದಿಟ್ಟಳು. ಆದರೆ ದಿವ್ಯಾಳ ಅಂಕಲ್ ಎಷ್ಟೊತ್ತಾದರೂ ಬರದಿದ್ದಾಗ ಮಧುರ ಅವಳ ಕೈ ಹಿಡಿದಳು.

"ಬಾ ದಿವ್ಯಾ, ನಮ್ಮ ಮನೆಗೆ ಹೋಗೋಣಾ ...."

ಮಧುರ, ದಿವ್ಯ ನಡೆಯುತ್ತಿದ್ದಾಗ ದಿವ್ಯ ಸುಂದರವಾದ ಮನೆಯನ್ನು ತೋರಿಸಿ, "ಮಿಸ್, ಅದೇ ನಮ್ಮ ಮನೆ. ಅಂಕಲ್ ಬಂದಿದ್ದಾರೆ, ನಾನು ಹೋಗ್ತೀನಿ...."

ದಿವ್ಯ ಓಡಿದಾಗ ಮಧುರ ಕತ್ತೆತ್ತಿ ಮನೆಯ ಹೊರಗಿದ್ದ ಹೆಸರನ್ನ ನೋಡಿದಳು. 'ಚೇತನ್'. ಆ ಹೆಸರನ್ನೂ. ಕಾರನ್ನೂ ನೋಡುತ್ತಿದ್ದಂತೆ ಮಧುರಾಳಿಗೆ ತಲೆ ತಿರುಗಿತು, ಬೇಗ ಬೇಗನೆ ನಡೆದು ತನ್ನ ರೂಮಿಗೆ ಬಂದಳು. ಚೇತನ್ ಜೋತೆಗೆ ತಾನು ಓಡಾಡಿದ ದಿನಗಳು ನೆನಪಾದವು.

ಅಂದು ಮಧುರ, ತನ್ನ ಬಳಿ ಇದ್ದ ಒಂದೇ ಒಂದು ಮೆರೂನ್ ಕಲರ್ ರೇಷ್ಮೆ ಸೀರೆ ಉಟ್ಟು, ಮ್ಯಾಚಿಂಗ್ ಬ್ಲೌಸ್‌ನಲ್ಲಿ ಕಾಲೇಜ್ ಯೂನಿಯರ್ ಡೇಯಲ್ಲಿ ಹಾಡಿದಾಗ ಎಲ್ಲರ ಕಣ್ಣು ಅವಳತ್ತ ತಿರುಗಿತು. ಮಧುರ ಫಂಕ್ಷನ್ ಮುಗಿದ ಮೇಲೆ ತನಗೆ ಪರಿಚಯವಿದ್ದ ಸರಿತಾಳ ಹತ್ತಿರ ಮಾತಾಡುತ್ತಿದ್ದಾಗ ಸರಿತಾಳ ಗಂಡ ವೇಣು. ಸುಂದರವಾದ ತರುಣನೊಬ್ಬನ ಜೊತೆ ಬರುತ್ತಾ ಹೇಳಿದ.

"ಮಧುರಾ, ಇವರು ಚೇತನ್ ಅಂತ. ಬಿ. ಇ. ಓದ್ತಿದ್ದಾರೆ."

"ಮಧುರಾ, ಚೇತನ್‌ಗೆ ಸಂಗೀತ ಅಂದ್ರೆ ಪ್ರಾಣ. ನಿನ್ನ ಹಾಡನ್ನು ಬಹುದಿನದಿಂದ ಕೇಳ್ಬೇಕಂತಾ ಆಸೆಪಡ್ತಿದ್ರು."

ಸರಿತ ನಗುತ್ತಾ ಹೇಳಿದಾಗ ಚೇತನ್ ಮಧುರಾಳ ಮುಖವನ್ನೇ ದಿಟ್ಟಿಸಿದ.

"ಆ ಭಾಗ್ಯ ಇಂದು ಒದಗಿತು. ನಿಮ್ಮ ಹಾಡು ತುಂಬಾ ಚೆನ್ನಾಗಿತ್ತು." ಮಧುರ ಏನೂ ಹೇಳದೆ ನಸುನಕ್ಕಳು. ಮನೆಗೆ ಬಂದರೂ ಚೇತನ್‌ನ ನಗುಮುಖ ಅವಳ ಕಣ್ಣಿಗೆ ಕಟ್ಟುತ್ತಿತ್ತು.

ಸರಿತಾಳ ಮನೆಗೆ ಮಧುರ ಹೋದಾಗ ಸರಿತ ಅವಳನ್ನ ಮಾತನಾಡಿಸುತ್ತಾ ಕೆಲಸ ಮಾಡುತ್ತಿದ್ದಳು. ಬಾಗಿಲ ಬಳಿ ನೆರಳು ಬಿದ್ದಾಗ ಮಧುರ ತಲೆಯೆತ್ತಿದ್ದಳು. ಚೇತನ್ ನಗುತ್ತಾ ನಿಂತಿದ್ದ,

"ಬನ್ನಿ ಚೇತನ್. ಮಧುರಾ. ಚೇತನ್ ಹತ್ತಿರ ಮಾತಾಡ್ತ ಇರು, ಈಗ ಬಂದ್ಬಿಡ್ತೀನಿ...."

ಸರಿತ ಒಳಗೆ ಹೋದಾಗ ಮಧುರ ತಲೆತಗ್ಗಿಸಿದಳು. ಚೇತನ್ ಅವಳ ಎದುರಿಗೆ ಕುಳಿತ.

"ಮಧುರಾ... ನಾನು ಬಂದಿದ್ದು ನಿಮ್ಗೆ ಡಿಸ್ಟರ್ಬ್ ಆಯ್ತಾ...."

"........ ....."

"ಹಾಗಾದರೆ ನಾನು ಹೋಗ್ಲಾ."

ಆಗಲೂ ಮಧುರ ಮೌನವಿದ್ದಾಗ ಚೇತನ್ ಎದ್ದುನಿಂತ.

"ನಿಮ್ಮ ಮೌನ ನೋಡಿದ್ರೆ, ನಿಮ್ಗೆ ನಾನು ಬಂದಿದ್ದು ಇಷ್ಟ ವಿಲ್ಲವೇನೂ ? ಸರಿ ಹೋಗ್ತೀನಿ,"

ಚೇತನ್, ಎದ್ದು ಹೊರಟಾಗ ಮಧುರ ಗಾಬರಿಯಿಂದ ತೊದಲಿದಳು.

ಚೇತನ್. ಪ್ಲೀಸ್ ಹೋಗ್ಬೇಡಿ.......;

"ಹಾಗಾದ್ರೆ ನಿನ್ನ ಜೊತೆ ಯಾವಾಗ಼್ೂ ಇರೋಕೆ ಅವಕಾಶ ಕೊಡ್ತೀಯಾ ಮಧೂ........?

ಚೇತನ್ ಮುಂದೆ ಮಾತನಾಡದೆ ತನ್ನ ಗಮನವನ್ನು ಪೇಪರಿನ ಕಡೆ ಹರಿಸಿದ. ಸರಿತ, ಮನದಲ್ಲಿಯೇ ನಗುತ್ತಾ ಕೊಬ್ಬರಿ ಮಿಠಾಯಿ ಯನ್ನು ಅವರ ಮುಂದಿಟ್ಟು ಹೋದರು. ಚೇತನ್ ಗಂಭೀರನಾಗಿ ಹೇಳಿದ.

"ಮಧೂ, ನಾನು ನಿನ್ನ ತುಂಬಾ ಪ್ರೀತಿಸುತ್ತೀನಿ. ನಿನ್ನ ಮದ್ವೆಯಾಗ್ತೀನಿ, ನಿಂಗೆ ಇಷ್ಟವಿದ್ದರೆ, ಕೊಬ್ಬರಿ ಮಿಠಾಯಿಯನ್ನ ನೀನೇ ಫಸ್ಟ್ ತಿನ್ನಬೇಕು...;

ಅವನ ಒಲವಿನ ಕರೆ ಕೇಳಿ ಕೆಂಪಗಾಗಿದ್ದ ಮಧುರ. ಮೆಲ್ಲನೆ ಮಿಠಾಯಿ ಚೂರನ್ನ ಅವನ ಕೈಗಿಟ್ಟು ಬೆಂಕಿಯಂತೆ ಒಳಗೆ ಓಡಿದಳು, ಅಂದಿನಿಂದ ಅವರಿಬ್ಬರ ಪ್ರೇಮ ಚಿಗುರತೊಡಗಿತ್ತು.

ನೆನಪಿನ ಮಾಲೆಯನ್ನು ಬಿಚ್ಚತೊಡಗಿದಾಗ ದಿವ್ಯಾಳ ಮುದ್ದುಮುಖ ನೆನಪಾಯಿತು. ದಿವ್ಯಾಳ ಅಂಕಲ್ ತನ್ನ ಚೇತನ್ ಆಗದೆ ಇರಲಿ ಎಂದು ಮಧುರ ಮನದಲ್ಲಿಯೇ ಹಾರೈಸಿದಳು.

ಮರುದಿನ ದಿವ್ಯ ಮನೆಗೆ ಹೊರಟ ಎಷ್ಟೋ ಹೊತ್ತಿನ ಮೇಲೆ ಮಧುರ ಮನೆಗೆ ಹೊರಟಳು. ಅವಳು ದಿವ್ಯಾಳ ಮನೆ ಹತ್ತಿರ ಬರುತ್ತಿದ್ದಂತೆಯೇ ದಿವ್ಯ ಹೇಳಿದಳು.

"ಅಂಕಲ್. ಅವರೇ ನಮ್ಮ ಮಿಸ್...."

"ಮೇಡಂ, ನಿಮ್ಗೆ ತುಂಬಾ ಥ್ಯಾಂಕ್ಸ್. ದಿವ್ಯಾನ ಮನೆ ತಲುಪಿಸಿದ್ದಕ್ಕೆ."

ಚೇತನ್ ಧ್ವನಿಗೆ ಗಕ್ಕನೆ ತಿರುಗಿದಳು ಮಧುರ. ಅವಳನ್ನಕಂಡು ಚೇತನ್ ದಿಗ್ಭ್ರಮೆಯಿಂದ ನಿಂತ. ಉಕ್ಕಿಬಂದ ದುಃಖವನ್ನು ಅದುಮಿಟ್ಟುಕೊಳ್ಳುತ್ತಾ ಮಧುರ ಬೇಗನೆ ನಡೆದಳು.

ಅಂದು ಮಧುರ ಚೇತನ್ ಜೊತೆಗೆ ಅವರ ಮನೆಗೆ ಹೋದಾಗ ಚೇತನ್ ವಯಸ್ಸಾದ ಹೆಂಗಸನ್ನು ಮಧುರಾಳಿಗೆ ಪರಿಚಯಿಸಿದ.

"ಮಧೂ, ಇವರು ನಮ್ಮ ತಾಯಿ ಅಮ್ಮ ಇವಳು ನಿನ್ನ ಮನೆಗೆ ಸೊಸೆಯಾಗುವಳು..."

ಆಶ್ಚರಿಯಿಂದ ಮಧುರಾಳ ಕಡೆ ನೋಡುತ್ತಿದ್ದ ಅವರ ಮುಖ ಸಿಟ್ಟಿನಿಂದ ಕೆಂಪಾಯಿತು. ಅವರು ಅವಳ ಹತ್ತಿರ ಮಾತನಾಡದೆ ಒಳಗೆ ಹೋದಾಗ ಮಧುರಾಳ ಮುಖ ಪೆಚ್ಚಾಯಿತು.

"ನಿಮ್ಮ ತಾಯಿಗೆ ನಾನು ನಿಮ್ಮನ್ನ ಮದ್ವೆಯಾಗೋದು ಇಷ್ಟವಿಲ್ಲ ವೇನೂ?"

"ಮಧೂ, ನನ್ನ ನಿನ್ನ ಬೇರೆ ಮಾಡೋದು ಯಾರಿಂದಾನೂ ಸಾಧ್ಯವಿಲ್ಲ, ನಾನು ನಿನ್ನನ್ನೇ ಮದ್ವೆಯಾಗೋದು"

ಚೇತನ್ ಅವಳಿಗೆ ಮಾತು ಕೊಟ್ಟಿದ್ದ. ಮಧುರಾಳ ಮನೆಗೆ ಬಂದು ಅವಳ ತಾಯಿಂದ ಮೆಚ್ಚಿಗೆಯ ಮಾತುಗಳನ್ನ ಕೇಳಿ. ಚೇತನ್ ತನ್ನನ್ನ ಪ್ರೀತಿಸುವುದನ್ನು ಕಂಡು ಮಧುರಾಳ ಮನ ಉಬ್ಬಿಹೋಯಿತು.

ಮರು ದಿನ ಚೇತನ್ ಬರದಿದ್ದಾಗ ಮಧುರಾಳಿಗೆ ದಿಗಿಲಾಯತು. ಅವನನ್ನ ಒಂದು ದಿನ ಕಾಣದಿದ್ದರೆ ಅವಳ ಮನ ಚಡಪಡಿಸುತ್ತಿತ್ತು. ಇದರ ಮಧ್ಯೆ ಮಧುರಾಳ ತಾಯಿ ಗೌರಮ್ಮನಿಗೆ ಹಾರ್ಟ್ ಫೇಲ್ ಆಗಿ ತೀರಿ ಹೋದಾಗ ಮಧುರ ಕಂಗೆಟ್ಟಳು. ಹುಚ್ಚಿಯಂತೆ ಚೇತನ್ ಮನೆಗೆ ಓಡಿ ಬಂದಳು. ಕೆದರಿದ್ದ ತಲೆಗೂದಲು. ಕೆಂಪರಡಿದ ಕಣ್ಣುಗಳು' ಈ ಅವಸ್ಥೆಯಲ್ಲಿ ಮಧುರಾಳನ್ನ ಕಂಡು ಚೇತನ್‌ನ್ನ ಅತ್ತಿಗೆ ಅಸಡ್ಡೆಯಿಂದ ಮುಖ ತಿರುವಿದರು.

"ಮಧುರಾ, ಚೇತನ್‌ಗೆ ಮದುವೆ ಫಿಕ್ಸ್ ಆಗಿದೆ .."

"ಯಾರ ಜೊತೆಗೆ ಚೇತನ್ ಮದುವೆ ?"

ಮಧುರಾಳ ತಲೆ ತಿರುಗಿತು.

ಮಧುರಾ, ಚೇತನ್ ನಂಗೆ ಎರಡನೇ ಮಗ. ಅವನ ಮದುವೆ ನನ್ನ ಅಣ್ಣನ ಮಗಳು ನಂದಿನಿಯ ಜೋತಗೇ ಹೊರತು ನಿನ್ನಂತಾ ಬಡ ವಳ ಮನೆಯ ಹೆಣ್ಣಿನ ಜೊತೆಗಲ್ಲ...."

ಅವಮಾನದಿಂದ ಮಧುರ ತತ್ತರಿಸಿದಳು. ಮನೆಗೆ ಬಂದು ಬಿಕ್ಕಿ ಬಿಕ್ಕಿ ಅತ್ತಳು, ಒಂದು ವಾರವಾದರೂ ಚೇತನ್ ಬರದಿದ್ದಾಗ ಮಧುರ ಮನದಲ್ಲೇ ಕೊರಗಿದಳು. ಚೇತನ್‌ನ್ನ ಮರೆಯಲು ತಾನು ಶಿವಮೊಗ್ಗ ವನ್ನು ಬಿಡಬೇಕು ಎಂದು ನಿಶ್ಚಯಿಸಿದಳು.

ಬೆಂಗಳೂರಿನ ಬಸ್ಸು ಹತ್ತಿದಾಗ ಮಧುರಾಳಿಗೆ ಚೇತನ್ ತನಗೆ ಮಾತು ಕೊಟ್ಟು ಮೋಸ ಮಾಡಿದ್ದು ನೆನಪಾಗಿ ಅಳು ಉಕ್ಕಿತು. ಅವಳು ಗಳಿಗೆಗೊಮ್ಮೆ ಕಣ್ಣೊರಸಿಕೊಳ್ಳುತ್ತಿದ್ದುದನ್ನು ಕಂಡು ಅವಳ ಪಕ್ಕದಲ್ಲಿದ್ದ ಶಶಿಕಲಾ ಗಮನಿಸುತ್ತಿ ದ್ದರು. ಮೃದುವಾಗಿ ಅವಳನ್ನ ಕೇಳಿದರು.

"ಯಾಕಮ್ಮ, ಅಳ್ತಿದ್ದೀರಾ... ತಂದೆ ತಾಯಿಯನ್ನು ಬಿಟ್ಟು ಹೊರ ಟಿದ್ದು ಇದೇ ಫಸ್ಟ್ ಟೈಮ್ ಇರಬೇಕು ಅಲ್ವಾ?"

ಮಧುರ ಅವರನ್ನ ನೋಡಿದಳು. ನಡುವಯಸ್ಸಾದರು ಆಕೆ ವಾತ್ಸಲ್ಯಮಯಿಯಾಗಿ ತಾಯಿಯ ಹಾಗೆ ಕಾಣಿಸಿದರು. ಅವರು ಮೃದು ವಾಗಿ ಹೇಳಿದರು.

"ನಾನು ನಿಮ್ಮ ತಾಯಿಯ ಹಾಗೆ. ಸಂಕೋಚ ಪಟ್ಕೋಬೇಡಿ..."

ಮಧುರ ಎಲ್ಲಾ ವಿಷಯವನ್ನೂ ಹೇಳಿದಾಗ ಶಶಿಕಲಾ ಹೇಳಿದರು.

"ನಾನು ಬೆಂಗಳೂರಿನಲ್ಲಿ ಹಾಸ್ಟೆಲ್ ವಾರ್ಡನ್ ಆಗಿದ್ದೀನಿ. ನೀನು ಅಲ್ಲಿ ನರ್ಸರಿ ಟ್ರೈನಿಂಗ್‌ಗೆ ಸೇರಿಕೊಂಡರೆ ಕೆಲ್ಸ ಸಿಗಬಹುದು..."

ಮಧುರ ತಕ್ಷಣ ತನ್ನ ಕೈಯಲ್ಲಿದ್ದ ಚಿನ್ನದ ಬಳೆ. ಸರಗಳನ್ನು, ಕೂಡಿಟ್ಟಿದ್ದ ಮೂರು ಸಾವಿರ ರೂಪಾಯಿಯನ್ನು ಆಕೆಯ ಮುಂದಿಟ್ಟಳು. ಚಿನ್ನದ ಬಳೆ, ಸರಗಳನ್ನು ಅವಳಿಗೇ ಹಿಂದಿರುಗಿಸುತ್ತಾ ಶಶಿಕಲಾ ಹೇಳಿದರು

"ಮಧುರಾ, ಇವೆಲ್ಲಾ ನಿನ್ನ ಬಳಿ ಇರಲಿ. ಆದ್ರೆ ನೀನು ಗ್ರಾಜುಯೇಟ್. ನರ್ಸರಿ ಟ್ರೈನಿಂಗ್‌ಗೆ ಹೇಗೆ ಸೇರ್ತೀಯಾ?"

"ನ್ಯಾಯವಾದ ಕೆಲ್ಸ ಮಾಡ್ಲಿಕ್ಕೆ ನಾನು ಸಿದ್ಧವಾಗಿದ್ದೀನಿ ವಾರ್ಡನ್..."

ಮಧುರ ಹಾಸ್ಟಲ್ ಸೇರಿ ಬೆಳಿಗ್ಗೆ ಟ್ರೈನಿಂಗ್ ಕ್ಲಾಸ್‌ಗೆ ಹೋಗಿ ಸಂಜೆ ಹೈಸ್ಕೂಲ್ ಮಕ್ಕಳಿಗೆ ಟ್ಯೂಷನ್ ಹೇಳುತ್ತಿದ್ದಳು. ಮಧುರಳಿಗೆ ಒಂದು ವರ್ಷದಲ್ಲಿಯೇ ಕೆಲ್ಸ ಸಿಕ್ಕಿತು. ನರ್ಸರಿ ಶಾಲೆಯ ಪಕ್ಕ ಇದ್ದ ಒಂದು ರೂಂನ್ನ ವಾರ್ಡನ್ ಗೊತ್ತುಮಾಡಿದ್ದರು. ಶಶಿಕಲಾರ ಅಕ್ಕ ಹೆಡ್‌ಮೇಡಂ ಮಧುರಾಳ ಪಕ್ಕದ ಮನೆಯಲ್ಲಿದ್ದರು. ಹೆಡ್‌ಮೇಡಂ ಜೋರಾಗಿದ್ದುದರಿಂದ ತುಂಟ ಹುಡುಗರ ಕಾಟ ಮಧುರಾಳಿಗೆ ತಪ್ಪಿತು.

ಚೇತನ್‌ನ್ನ ಮರೆಯಬೇಕೆಂದರೂ ಇಂದು ಚೇತನ್ ಅವಳಿಗೆ ಸಿಕ್ಕಿದ್ದ ಇನ್ನು ಮೇಲೆ ಅವನ ಕಣ್ಣಿಗೆ ಬೀಳಬಾರದು, ಬೇರೆ ಕಡೆ ಕೆಲ್ಸಕ್ಕೆ ಪ್ರಯತ್ನಿಸಬೇಕು ಎಂದುಕೊಂಡಳು ಮಧುರ.

ಮಧ್ಯಾನ್ನ ಊಟದ ಹೊತ್ತಿಗೆ ಎಲ್ಲಾ ಮಕ್ಕಳೂ ತಿಂಡಿ ತಿನ್ನ ತೊಡಗಿದಾಗ ಮಧುರ ಕ್ಯಾರಿಯರ್ ಬಿಚ್ಚಿದಳು. ದಿವ್ಯ ಅವಳ ಹತ್ತಿರ ಬಂದಳು.

"ಮಿಸ್, ನಿಮ್ಮ ಜೊತೆಗ ನಾನು ತಿಂಡಿ ತಿನ್ನಲಾ.?"

"ದಿವ್ಯಾ, ಎಲ್ಲರ ಜೊತೆಗೆ ಬರೆಯಬೇಕು ಅಶಾ. ಸುನೀ ಪಕ್ಕ ಕುತ್ಕೊ...," ಮಧುರ ನಯವಾಗಿ ಹೇಳಿದಾಗ ದಿವ್ಯ ತನ್ನ ತಿಂಡಿಯನ್ನ ಎಲ್ಲರಿಗೂ ಹಂಚಿ ಮಧುರಾಳ ಪಕ್ಕ ಸುಮ್ಮನೇ ನಿಂತಳು.

"ದಿವ್ಯಾ. ನಿಂಗೆ ತಿಂಡಿ ಬೇಡವಾ?"

ಮಧುರ ಕೇಳಿದಾಗ ದಿವ್ಯಾಳ ಪುಟ್ಟ ಕಣ್ಣುಗಳಲ್ಲಿ ನೀರು ತುಂಬಿತ್ತು.

"ಮಿಸ್, ನಿಮ್ಮ ಜೋತೆಗೆ ತಿಂಡಿ ತಿನ್ನಬೇಕೆಂದು ನಂಗೆ ಆಸೆ. ಅದಕ್ಕೋಸ್ಕರ" ಮಧುರ ಅವಳನ್ನ ಬಳಿಗೆ ಎಳೆದು ಕೊಂಡು ಅವಳಿಗೆ ತಿಂಡಿ ತಿನ್ನಿಸಿದಳು.

"ದಿವ್ಯ. ನಿಂಗೆ ಮಮ್ಮಿ ಎಂದರೆ ಆಸೆ ಅಲ್ಲವಾ?"

"ನಂಗೆ ಮಮ್ಮೀನೇ ಇಲ್ಲ ಮಿಸ್, ಅಂಕಲ್ ಒಬ್ಬನೇ ನನ್ನ ಜೊತೆ ಇರುವುದು."

"ಆಂಟಿ"?

ಮಧುರ ತಲೆ ತಗ್ಗಿಸಿ ಕೇಳಿದಳು. ದಿವ್ಯ ಎಂಜಲು ಕೈಯ್ಯಲ್ಲೇ ಮಧುರಾಳ ಕೈ ಹಿಡಿದಳು.

"ಅಂಕಲ್. ಇಷ್ಟು ದಿನವಾದ್ರೂ ಆಂಟೀನ ಮನೆಗೆ ಕರ್ಕೊಂಡು ಬಂದಿಲ್ಲ. ಅಂಕಲ್‌ಗೆ ಇಷ್ಟು ದಿನವಾದ್ರೂ ಮದ್ವೆ ಆಗಿಲ್ಲ ಮಿಸ್." ಮಧುರಾಳ ಕೈಯಲ್ಲಿದ್ದ ಚಮಚ ಕೆಳಗೆ ಬಿತ್ತು. ಚೇತನ್‌ಗೆ ಇಷ್ಟು ದಿನವಾದ್ರೂ ಮದ್ವೆ ಆಗಿಲ್ಲ. ದಿವ್ಯ ಮತ್ತೆ ಹೇಳಿದಳು,

"ನಿನ್ನೆ ನಿಮ್ಮನ್ನ ಅಂಕಲ್‌ಗೆ ತೋರ್ಸಿದ್ದಕ್ಕೆ ಅಂಕಲ್ ತುಂಬಾ ಸಲ 'ಮಧೂ' ಅಂದ್ರು, ಯಾಕೆ ಮಿಸ್?"

ದಿವ್ಯಾಳ ಮುಗ್ಧ ಪ್ರಶ್ನೆಗೆಹೋಗಿ ಮಧುರ ಮೃದುವಾಗಿ ಅವಳ ತಲೆ ಸವರಿದಳು.

"ದಿವ್ಯಾ, ಹಾಗೆಲ್ಲಾ ಪ್ರಶ್ನೆಯನ್ನು ಕೇಳ್ಬಾರ್ದು. ಎಲ್ಲಿ ಎಲ್ಲಾ ಆಟವಾಡಿ." ದಿವ್ಯ ಎಲ್ಲರ ಜೊತೆಗೆ ಆಡತೊಡಗಿದಳು. ಎರಡು ದಿನವಾದರೂ ದಿವ್ಯ ಶಾಲೆಗೆ ಬರದಿದ್ದಾಗ ಮಧುರಾಳಿಗೆ ದಿಗಿಲಾಯಿತು. ಹೆಡ್ ಮೇಡಂ ಊರಲ್ಲಿರಲಿಲ್ಲ. ಅವಳು ಮನೆಗೆ ಹೋಗುತ್ತಿದ್ದಾಗ ಅವಳ ಪಕ್ಕದಲ್ಲಿ ಕಾರು ಬಂದು ನಿಂತಿತು. ಕಾರಿನ ಬಾಗಿಲು ತೆರೆಯುತ್ತಾ ಚೇತನ್ ಮೃದುವಾಗಿ ಹೇಳಿದ,

"ಮಧೂ....ಮನೆಗೆ ಬಾ...." ಮಧುರಾಳಿಗೆ ದಿಗ್ರಮೆಯಾಯಿತು ಅಂದು ಒಲವಿನಿಂದ ಕರೆದ ಹೆಸರನ್ನ ಮತ್ತೆ ಇಂದು ಕರೆಯುತ್ತಿದ್ದಾನೆ. ಮಧುರ ಒರಟಾಗಿ ಹೇಳಿದಳು.

"ಚೇತನ್. ನೀವು ಗಂಡಸು, ನೀವಾಡಿದ ಆಟ ನಡೆಯುತ್ತೆ. ಆದ್ರೆ ನಂಗೂ ಸ್ವಾಭಿಮಾನ ಇದೆ. ಅನ್ನೋದನ್ನ ಮರೆಯಬೇಡಿ."

"ದಿವ್ಯಾಗೆ ಜೋರು ಜ್ವರ. ನಿನ್ನನ್ನೇ ಕರೆಯುತ್ತಿದ್ದಾಳೆ: ಪ್ಲೀಸ್ ಮನೆಗೆ ಬಾ....."

ಚೇತನ್ ಮೃದುವಾಗಿ ಹೇಳಿದಾಗ ಮಧುರ ಸಿಡಿದೆದ್ದಳು.

"ನಿಮ್ಮ ಮನೆಗೆ ನಾನು ಖಂಡಿತಾ ಬರುವುದಿಲ್ಲ. ನಿಮ್ಮ ತಾಯಿ ಅತ್ತಿಗೆ ಹೇಳಿದ ಮಾತು ನಾನು ಇನ್ನೂ ಮರತಿಲ್ಲ,"

"ಮಧೂ....,"

ಚೇತನ್ ಕೂಗುತ್ತಿದ್ದರೂ. ಮಧುರ ಮನೆಗೆ ಬಂದಳು, ಚೇತನ್‌ನ ದೈನ್ಯಮುಖ. ದಿವ್ಯಾಳ ಮುಗ್ಧ ಮುಖ ನೆನಪಿಗೆ ಬಂದರೂ. ಅವರ ತಾಯಿ ಅತ್ತಿಗೆ. ಅವರ ದರ್ಪಕ್ಕೆ ತಾನು ಮಣಿಯಲೇ ಬಾರದು.

"ಮಧುರಾ."

ಜೆಸ್‌ಮೇಡಂ ಬಂದಾಗ ಮಧುರ ಬಲವಂತವಾಗಿ ನಕ್ಕಳು. ಅವಳ ಕೆನ್ನೆಯಲ್ಲಿ ಬಿದ್ದಿದ್ದ ಹನಿಗಳನ್ನ ನೋಡಿ ಮೇಡಂ ಕೇಳಿದರು.

"ಮಧುರಾ ಯಾಕೆ ಅಳ್ತಿದ್ದಿಯಾ ?"

ಅವರ ಮೃದು ಮಾತಿಗೆ ಮಧುರ ಎಲ್ಲವನ್ನೂ ಹೇಳಿದಳು.

"ಮಧುರಾ, ನೀನು ತಿಳಿದ ಹಾಗೆ ಚೇತನ್ ಮೋಸಗಾರರಲ್ಲ,"

"ಮೇಡಂ"

"ಹೌದು ಮಧುರಾ, ಮೊದಲಿನಿಂದಲೂ ಚೇತನ್‌ನ ಸೋದರ ಮಾವನ ಮಗಳಿಗೆ ಚೇತನನ್ನ ಕೊಡಬೇಕು ಅಂತ ಅವರೆಲ್ಲರ ಆಸೆಯಿತ್ತು. ಆದ್ರೆ ಚೇತನ್‌ಗೆ ನಿನ್ನ ಮೇಲೆ ಒಲವು ಇತ್ತು. ಅದನ್ನ ತಿಳಿದ ಅವರ ತಾಯಿ, ಅತ್ತಿಗೆ ನಿಮ್ಮಿಬ್ಬರನ್ನ ಅಗಲಿಸಬೇಕೆಂದೇ ನಿಂಗೆ ಸುಳ್ಳು ಹೇಳಿದ್ರು. ಆಗ ಚೇತನ್ ಟೂರ್ ಹೋಗಿದ್ರು. ವಾರದ ನಂತರ ತಿರುಗಿ ಬಂದಾಗ ಅವರಿಗೆ ಈ ವಿಷಯ ಗೊತ್ತಾಗಿ. ನಿನ್ನ ಮನೆಯ ಬಾಗಿಲಿಗೆ ಓಡಿಬಂದಾಗ ನೀನು ಎಲ್ಲಿ ಹೋದ್ಯೋ ಅಂತ ಗೊತ್ತಾಗದೆ ಒಂದು ತಿಂಗಳು ಮೈಸೂರಿಗೆ ಓದಲಿಕ್ಕೆ ಹೋಗದೆ, ಹುಚ್ಚನಹಾಗೆ ಮನೆಯಲ್ಲಿ ಇದ್ರಂತೆ. ಮದುವೆಗೆ ಎಷ್ಟು ಒತ್ತಾಯ ಮಾಡಿದ್ರೂ ಒಪ್ತಾ ಇರಲಿಲ್ಲ. ಅವರ ಅಣ್ಣ ಅತ್ತಿಗೆಗೆ ಈ ವಿಷಯ ಗೊತ್ತಾಗಿ ನೊಂದುಕೊಂಡ್ರು. ಅವರ ತಾಯಿ ಅತ್ತಿಗೆ ಸರಿತಾ ಹತ್ತಿರ, "ಚೇತನ್‌ಗೆ ಮಧುರಾಳ ಮೇಲೆ ಇಷ್ಟು ಪ್ರೀತಿ ಇದೆ ಅಂತ ಗೊತ್ತಿದ್ರೆ, ಅವರಿಬ್ಬರಿಗೇ ಮದ್ವೆ ಮಾಡ್ತಿದ್ವಿ. ಆದ್ರೆ ಆ ಹುಡ್ಗಿ ನಮ್ಮಿಂದ ಎಷ್ಟು ನೊಂದುಕೊಂಡಳೋ. ಈಗಲೂ ಅವಳು ಸಿಕ್ರೆ ಚೇತನ್‌ಗೆ ಮದ್ವೆ ಮಾಡ್ತೀವಿ" ಅಂತ ಹೇಳ್ಕೊಂಡ್ರು, ಒಂದು ಸಲ ಚೇತನ್‌ನ್ನ ಅಣ್ಣ, ಅತ್ತಿಗೆ ಟೂರ್ ಹೋಗಿದ್ದಾಗ, ಆಕ್ಸಿಡೆಂಟ್‌ನಲ್ಲಿ ಅವರಿಬ್ಬರು ತೀರಿಹೋದಾಗ ಅವರ ತಾಯಿಯೂ ಅದೇ ಕೊರಗಿನಲ್ಲಿ ಸತ್ತರು." ಮಧುರ ಕಲ್ಲಿನಂತೆ ಕುಳಿತಿದ್ದಳು, ಮೇಡಂ ಮತ್ತೆ ಹೇಳಿದರು.

"ಸರಿತಾ, ಚೇತನ್‌ನ್ನ ಸಮಾಧಾನ ಮಾಡಿ ಓದಲಿಕ್ಕೆ ಕಳಿಸಿ, ಅವರ ಅಣ್ಣನ ಮಗಳು ಎರಡು ವರ್ಷದ ದಿವ್ಯಾಳನ್ನ ತಮ್ಮ ಬಳಿ ಯಲ್ಲಿಯೇ ಇಟ್ಟುಕೊಂಡರು. ಚೇತನ್ ಓದು ಮುಗಿಸಿ, ಈಗ ಬೆಂಗಳೂರಿನಲ್ಲಿ ಇಂಜಿನಿಯರಾಗಿದ್ದಾರೆ. ದಿವ್ಯ ಒಬ್ಬಳೇ ಅವರ ಬಾಳಿಗೆ ಬೆಳಗುವ ದೀಪವಾಗಿದ್ದಳು.

"ನಿಮ್ಗೆ ಇದೆಲ್ಲಾ ಹೇಗೆ ಗೊತ್ತಾಯ್ತು ಮೇಡಂ."

"ನಾನೂ, ಸರಿತಾ ಬಾಲ್ಯದ ಸ್ನೇಹಿತೆಯರು. ಸರಿತಾ ಈ ಊರಿಗೆ ಬಂದ ಮೇಲೆ ನಾನು ಚೇತನ್ ಮನೆಗೆ ಹೋಗಿದ್ದೆ, ದಿವ್ಯಾಗೆ ವಿಪರೀತ ಜ್ವರ, ಅವಳು ನಿನ್ನನ್ನೇ ನೆನಸಿಕೊಳ್ತಿದ್ಲು. ಆಗ ಸರಿತ ಎಲ್ಲಾ ವಿಷಯಾನಾ ನನ್ನ ಹತ್ತಿರ ಹೇಳಿದ್ಲು."

ಮಧುರ ತನ್ನ ಕಣ್ಣಲ್ಲಿ ಜಿನುಗಿದ ನೀರನ್ನ ಒರಸಿಕೊಂಡು ಅವರ ಕೈ ಹಿಡಿದಳು,

"ಮೇಡಂ, ಈಗ್ಲೇ ಅವರ ಮನೆಗೆ ಹೋಗೋಣಾ ಬನ್ನಿ ..."

ಹೆಡ್‌ಮೇಡಂ, ಮಧುರ ಚೇತನ್‌ನ ಮನೆಗೆ ಬಂದಾಗ ಚೇತನ್ ದಿವ್ಯಾಳ ಬಳಿಯಲ್ಲಿ ಕುಳಿತು ಅವಳನ್ನ ಸಮಾಧಾನ ಪಡಿಸುತ್ತಿದ್ದ.

ಮಧುರ ಬಂದಾಗ ಸರಿತ ಸಂತಸದಿಂದ ಅವಳ ಕೈ ಹಿಡಿದು ದಿವ್ಯಾಳ ಬಳಿಗೆ ಕರೆತಂದರು. ದಿವ್ಯ 'ಮಿಸ್' ಎಂದಾಗ ಮಧುರ ಅವಳ ಬಳಿಯಲ್ಲಿ ಕುಳಿತು ಅವಳ ಮುಖವನ್ನ ಮೃದುವಾಗಿ ಸವರಿದಳು.

"ದಿವ್ಯಾ, ಇನ್ನು ನಿನ್ನ ಬಿಟ್ಟಿರೋಲ್ಲಾ,"

ಸರಿತ, ಹೆಡ್‌ಮೇಡಂ ಯಾವ ಮಾಯದಲ್ಲೋ ಹೊರಗೆ ಹೋಗಿದ್ದರು. ಚೇತನ್ ಮಧುರಾಳ ಕಡೆ ತಿರುಗಿದಾಗ ಮಧುರ ತಲೆ ತಗ್ಗಿಸಿ ಬಿಕ್ಕಿದಳು.

"ಚೇತನ್, ದಯವಿಟ್ಟು ನನ್ನ ಕ್ಷಮಿಸ್ಬಿಡಿ....,"

ದಿವ್ಯ "ಆಂಟೀ" ಎಂದು ಮೆಲ್ಲನೆ ಕರೆದಾಗ ಚೇತನ್ ಕೇಳಿದ.

"ದಿವ್ಯಾಗೆ ಆಂಟಿಯಾಗಿ ಬರ್ತೀಯ ಮಧು,"

"ನಮ್ಮಿಬ್ಬರನ್ನ ಸೇರಿಸಿದ್ದೋಳೇ ಅವಳು, ಖಂಡಿತಾ ದಿವ್ಯಾಗೆ ಆಂಟಿಯಾಗಿ ನಿಮ್ಗೆ ಹೆಂಡತಿಯಾಗಿ ಬರ್ತೀನಿ..."

ಮಧುರ ನಾಚಿಕೆಯಿಂದ ತಲೆತಗ್ಗಿಸಿದಾಗ ಚೇತನ್ ಮೃದುವಾಗಿ ಅವಳ ಮುಖವನ್ನು ಹಿಡಿದ. ದಿವ್ಯ ಈ ನೋಟವನ್ನ ಕಂಡು ಕಣ್ಣು ಮುಚ್ಚಿಕೊಂಡಳು,



# ರಂಜನಿ

—ಶಾಂತಾದೇವಿ ಮಾಳವಾಡ

## ಭಾಗ ೩

"ಕಿತ್ತೂರಿನ ಮುತ್ತಿನ ಪಾಲಕಿ
ಹತ್ತಿ ಮೆರೆಯುತ್ತಿರುವ ರಾಣಿ
ಮುತ್ತಿನ ವೇಣಿ ಕೋಕಿಲ ವಾಣಿ
ಹತ್ತು ದಿಕ್ಕಿನೊಳು ಕಲ್ಯಾಣಿ"

—ಹೀಗೆಂದು ಪ್ರಸಿದ್ಧಿ ಪಡೆದ ಕಿತ್ತೂರ ಚೆನ್ನಮ್ಮನ ಕೋಟೆಯ ಕೊತ್ತಳದ ತುಂಬ ಹಣತೆಗಳ ಬೆಳಕು ಕಂಗೊಳಿಸಿತು. 1824 ಅಕ್ಟೋಬರ 23ರಂದು ಚೆನ್ನಮ್ಮ ಬ್ರಿಟಿಷರನ್ನು ಸೋಲಿಸಿ ವಿಜಯೋತ್ಸವವನ್ನು ಆಚರಿಸಿದಳು. ಬಲಾಢ್ಯ ಬ್ರಿಟಿಷ್ ಪ್ರಭುತ್ವದ ವಿರುದ್ಧ, ಸ್ವಾತಂತ್ರ್ಯ ಸಂಗ್ರಾಮವನ್ನು ಹೂಡಿದ ಕ್ರಾಂತಿಯ ಕಿಡಿ ಚೆನ್ನಮ್ಮನ ಸವಿನೆನಪಿಗಾಗಿ, ಆ ಯುದ್ಧದಲ್ಲಿ ಮಡಿದ ಸಾವಿರಾರು ಸೈನಿಕರ ಆತ್ಮ ಶಾಂತಿಗಾಗಿ, ಕಿತ್ತೂರ ನಾಗರಿಕರು ಈಗ ಪ್ರತಿ ವರುಷ ದೀಪೋತ್ಸವವನ್ನು, ವಿಜಯೋತ್ಸವವನ್ನು ಆಚರಿಸುತ್ತಾರೆ.

ಅದನ್ನು ಕಂಡು ನಾವೆಲ್ಲ ಆನಂದಪಟ್ಟೆವು. ಕೊತ್ತಳದ ಮೇಲ್ಗಡೆ ನಿಂತು ರಾತ್ರಿಯ ಹೊತ್ತಿನಲ್ಲಿ ನೋಡಿದಾಗ, ಮೇಲೆ ಆಕಾಶದಲ್ಲಿ ಮಿನುಗುವ ನಕ್ಷತ್ರಗಳು, ಕೆಳಗೆ ನೋಡಿದಲ್ಲೆಲ್ಲ ಕಣ್ಣಿಗೆ ಹಬ್ಬವನ್ನುಂಟುಮಾಡುವ ಮಣ್ಣ ಹಣತೆಗಳ ಮಂದಬೆಳಕು, ಸುತ್ತಲೂ ಬಣ್ಣ ಬಣ್ಣದ ವಿದ್ಯು

ದ್ದೀಗಳು ಸರಮಾಲೆಗಳನ್ನು ಕಂಡಾಗ ನಮ್ಮ ಮನ ಕಿತ್ತೂರಿನ ಗತ ಇತಿಹಾಸದತ್ತ ಹೊರಳಿತು. ರಾತ್ರಿ ಕಿತ್ತೂರಿನ ಪ್ರತಿಷ್ಠಿತರ ಮನೆಯಲ್ಲಿ ಸಪಿಯೂಟವನ್ನುಂಡು ಮಲಗಿದೆವು.

ಆ ದಿನ ಕಿತ್ತೂರ ಕೋಟೆಯ ಅವಶೇಷಗಳನ್ನು ನೋಡಲು ತಿರುಗಾಡಿ ದೇಹ ದಣಿದಿತ್ತು. ವಿಜಯೋತ್ಸವದ ಸಂಗೀತ, ಭಾಷಣಗಳಿಂದ ಮನ ದಣಿದಿತ್ತು. ಊಟವಾದೊಡನೆ ಗಾಢನಿದ್ರೆ, ಆವರಿಸಿತ್ತು. ಆಗ ಎಲ್ಲಿಂದಲೋ ಗೆಜ್ಜೆಯ ಘಿಲ್, ಘಿಲ್ ನಾದ ಕೇಳಬಂದಿತು. ತಾಳ, ಮದ್ದಲೆ, ವೀಣೆ. ಮೃದಂಗಗಳ ನಾದ ಹೊರಹೊಮ್ಮಿತು. ನಾಟ್ಯ ಸರಸ್ವತಿಯಂತೆ ತೋರುವ ಸುಂದರ ಯುವತಿ ನರ್ತಿಸಹತ್ತಿದಳು. ಆಕೆಯ ವೇಷ ಭೂಷಣ ಹಿಂದೂ ರಮಣಿಯಂತಿದ್ದರೂ, ಕಿವಿತುಂಬ ಧರಿಸಿದ ಆಭರಣಗಳು, ಆಕೆಯ ನಾಗಾಭರಣಗಳು ಅರಳಿದ ಗುಲಾಭಿಯಂಥ ಮುಖ, ಮುಸ್ಲಿಂ ತರುಣಿಯಂತಿದ್ದವು. ಆ ನೃತ್ಯಗಾತಿ ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ್ತ, ನೃತ್ಯದ ವಿವಿಧ ಭಂಗಿಗಳನ್ನು ತೋರುತ್ತ ನನ್ನ ಬಳಿ ಬಂದು ಕುಳಿತಳು. ಆಗ ನನ್ನ ದೇಹ ಪುಳುಕಿತಗೊಂಡಿತು. ಆಕೆಯನ್ನು ನೋಡುತ್ತಲಿದ್ದೆ. ನೀನಾರು? ಇಲ್ಲಿಗೇಕೆ ಬಂದೆ? ಎಂದು ಕೇಳಿದೊಡನೆ ಆಕೆ ಗಹಗಹಿಸಿ ನಗಹತ್ತಿದಳು.

ನಾನು ಯಾರೆಂಬುದು ನಿಮಗೆ ಗೊತ್ತಿಲ್ಲವೇ? ಒಂದು ಕಾಲದಲ್ಲಿ ನಾನೂ ಚೆನ್ನಮ್ಮನ ಕಿತ್ತೂರಿನಲ್ಲಿದ್ದೆ. ವೀರರಾಣಿ, ಶೂರ ಚೆನ್ನಮ್ಮನ ನೆನಪು ನಾಡಿನ ಪ್ರಜೆಗಳ ಮನದಲ್ಲಿ ನೆಲೆಯೂರಿ ನಿಂತಿದೆ ; ಆದರೆ ನನ್ನ ನೆನಪು ಒಬ್ಬರಿಗೂ ಇಲ್ಲವಲ್ಲ ! ಚೆನ್ನಮ್ಮ ರಾಜ್ಯಕ್ಕಾಗಿ ಸರ್ವಸ್ವ ತ್ಯಾಗಮಾಡಿ ಹೋರಾಡಿದಳು. ಆ ತಾಯಿ ಮೃತ್ಯುವನ್ನಪ್ಪಿದರೂ ಎಲ್ಲರ ನೆನಪಿನಲ್ಲಿ ಚಿರಂಜೀವಿಯಾದಳು. ನಾನು ಕಿತ್ತೂರಿನ ರಾಜನಿಗಾಗಿ ಸರ್ವಸ್ವ ತ್ಯಾಗ ಮಾಡಿದೆ. ಬಂಧು ಬಳಗದ ವಿರೋಧ ಕಟ್ಟಿಕೊಂಡೆ. ಸಮಾಜದಿಂದ ತಿರಸ್ಕೃತಳಾದೆ. ಸ್ವಧರ್ಮದಿಂದ ವಂಚಿತಳಾದೆ. ಆದರೆ ಪ್ರೇಮಿಯಾದೆ. ನನ್ನ ನೆನಪು ಯಾರಿಗೂ ಇದ್ದಂತಿಲ್ಲ.

"ಯಾರಪ್ಪ ನೀನು! ನಿನ್ನ ಅಮರ ಪ್ರೇಮದ ಕಥೆ ರಮ್ಯವಾಗಿರಬೇಕು. ನನ್ನ ಈ ಸೌಂದರ್ಯವನ್ನು ಕಂಡರೆ ದೇವಲೋಕದ ಅಪ್ಸರೆ ಧರೆಗಿಳಿದು ಬಂದಂತಿದೆ."

ಈ ಸೌಂದರ್ಯವೇ ನನ್ನನ್ನು ಪ್ರೇಮಬಂಧನದಲ್ಲಿ ಸಿಲುಕಿಸಿತು. ಅದರಿಂದ ಕಿತ್ತೂರ ದೊರೆ ಫಕೀರರುದ್ರಸರ್ಜರು ರಾಜ್ಯತ್ಯಾಗ ಮಾಡುವಂತೆ ಆಯಿತು.

"ಏನಂದಿ ? ಫಕೀರ ರುದ್ರಸರ್ಜರೇ ! ಯಾರವರು ?"

"ಕಿತ್ತೂರಿನ ಒಂಭತ್ತನೆಯ ದೊರೆಯಾಗಲಿದ್ದರು ಫಕೀರ ರುದ್ರಸರ್ಜರು, ಅವರ ದರ್ಬಾರಿಗೆ ನೃತ್ಯ ಮಾಡಲು ನಾನೊಂದು ಸಲ ಬಂದೆ. ನನ್ನ ತಾಯಿ ಹಾಗೂ ನೃತ್ಯದ ಪರಿವಾರದೊಂದಿಗೆ ಉತ್ತರ ಭಾರತದಿಂದ ದಕ್ಷಿಣದ ನವಾಬರೊಬ್ಬರ ರಾಜನರ್ತಕಿಯಾಗಲು ಹೊರಟಿದ್ದೆ. ಮಾರ್ಗದಲ್ಲಿ ಈ ಕಿತ್ತೂರಿನ ರಾಜವೈಭವವನ್ನು ಕೇಳಿ, ಸೃಷ್ಟಿ ಸೌಂದರ್ಯವನ್ನು ನೋಡಿ. ಗಿಳಿ ಕೋಗಿಲೆಗಳ ಇಂಚರ ಗಾನಕ್ಕೆ ಮನಸೋತು ಕೆಲದಿನ, ಮಾರ್ಗಾಯಾಸ ಪರಿಹರಿಸಿಕೊಳ್ಳಲು ಇಲ್ಲಿ ತಂಗಿದ್ದೆವು. ಆಗ ಈ ಊರ ಮಂತ್ರಿಯೊಬ್ಬರು. ಬಂದರು ನಮ್ಮ ತಂಡದ ಮುಖ್ಯಸ್ಥನನ್ನು ಕಂಡರು. ಕಿತ್ತೂರಿನ ರಾಜದರ್ಬಾರದಲ್ಲಿ ಒಂದು ರಾತ್ರಿ ನೃತ್ಯ ಕಾರ್ಯಕ್ರಮವನ್ನು 'ಏರ್ಪಡಿಸಿದರು' ಆ ರಾಜ ದರ್ಬಾರದಲ್ಲಿ ಮೇಲಿಂದ ಮೇಲೆ ನೃತ್ಯ, ಸಂಗೀತಗಳು ನಡೆಯುತ್ತಿದ್ದವು."

'ನಾನು ಆ ಬೆಡಗಾತಿಯ ಮುಖವನ್ನೇ ದಿಟ್ಟಿಸಿ ನೋಡುತ್ತಲಿದ್ದೆ.'

"ನನಗಾಗ ಹದಿನಾರು ವರುಷ, ಗುಲಾಬಿಹೂವಿನ ಮೈಬಣ್ಣ, ಅಂಗಾಂಗಗಳು ಎದ್ದು ತೋರುವಂತೆ ನವಿಲು ಬಣ್ಣದ ಸೀರೆಯನ್ನುಟ್ಟಿದೆ. ಪಾರದರ್ಶಕವಾದ ಮೇಲು ಹೊದಿಕೆಯನ್ನು ಹೊತ್ತಿದ್ದೆ. ವಿವಿಧ ಪಕ್ಕವಾದ್ಯದವರು ಸಜ್ಜಾಗಿ ಕುಳಿತಿದ್ದರು. ವಂದಿಮಾಗಧರು ಕಿತ್ತೂರಿನ

ಬಿರುದಾವಳಿಗಳನ್ನು ಉಗ್ಘಡಿಸುತ್ತಿರುವಾಗ ತರುಣ ಯುವ ರಾಜರು ರಾಜಗಾಂಭೀರ್ಯದಿಂದ ಬಂದು ತಮ್ಮ ಸಿಂಹಾಸನದ ಮೇಲೆ ಕುಳಿತರು. ಮಂತ್ರಿಗಳ ಆಜ್ಞೆಯಂತೆ ನಾನು ನೃತ್ಯ ಪ್ರಾರಂಭಿಸಿದೆ. ಮೊದಲಿಗೆ ಪೂಜಾನೃತ್ಯ, ನಂತರ ನವಿಲಿನ ನೃತ್ಯವನ್ನಾಡಿದೆ. ಆ ವೈಭವಪೂರ್ಣ ಅರಮನೆ, ರಾಜರ ಚೆಲುವಿಕೆ ನನ್ನ ಮನವನ್ನಾಕರ್ಷಿಸಿದವು. ನನ್ನನು ನಾನೇ ಮರೆತೆ. ಪಕ್ಕ ವಾದ್ಯದ ಗತಿಗೆ, ಹಿನ್ನಲೆ ಸಂಗೀತಕ್ಕೆ ತಕ್ಕಂತೆ ಗರಿಗೆದರಿದ ನವಿಲಿನಂತೆ ನೃತ್ಯಗೈದೆ. ಆ ನೃತ್ಯವನ್ನು ಕಂಡು ಎಲ್ಲರೂ ಸಂತಸಪಟ್ಟರು. ಮಹಾರಾಜರು ಕಾಣಿಕೆಯ ತಟ್ಟೆಯೊಂದಿಗೆ ತಮ್ಮ ಕೊರಳಹಾರವನ್ನೂ ಬಹುಮಾನವಾಗಿ ನನಗೆ ಕೊಟ್ಟರು. ಅವರ ಚೆಲುವಿಕೆಗೆ ಮನಸೋತ ನಾನು, ಅವರ ಪ್ರೇಮದ ನೋಟಕ್ಕೆ ಮಾರು ಹೋದೆ. ಅವರೂ ನನ್ನ ಮಿಂಚುವ ಕಣ್ಣೋಟಕ್ಕೆ ಸೆರೆಯಾದರು. ಮರುದಿನವೂ ನೃತ್ಯಕ್ಕೆ ಆಮಂತ್ರಣ ಬಂದಿತು. ಮೊದಲ ದಿನ ದೊರೆತ ಕನಕಾಭರಣಗಳಿಂದ ಸಂತುಷ್ಟಳಾದ ನನ್ನ ತಾಯಿ ಉತ್ಸಹದಿಂದ ನನ್ನನ್ನು ಅಲಂಕರಿಸಿ ನೃತ್ಯಕ್ಕೆ ಕರೆದೊಯ್ದರು. ಅಂದಿನ ಮಣಿಪುರಿ ನೃತ್ಯ ಮಹಾರಾಜರನ್ನು ಮೋಹ ಪರವಶಗೊಳಿಸಿತು. ಒಂದು ವಿಶ್ರಾಂತಿ ಪಡೆದು ಮುಂದೆ ಪಯಣ ಕೈಗೊಳ್ಳಬೇಕಾದ ನಾವು ಕಿತ್ತೂರ ಅರಸರ ಔದರ್ಯಕ್ಕೆ ಮನಸೋತು ಒಂದೆರಡು ತಿಂಗಳು ಇಲ್ಲಿಯೇ ಉಳಿದೆವು ಅರಮನೆಯಿಂದ ನಮಗೆ ಸಕಲ ಸೌಕರ್ಯ ದೊರೆಯಿತು. ಮಂತ್ರಿಗಳು ಇನ್ನೂ ಕೆಲಕಾಲ ಅಲ್ಲಿರಲು ಒತ್ತಾಯಮಾಡಿದರು. ಫಕೀರಸರ್ಜರಿಗೆ ಮನಸೋತ ನನಗೂ ಅದೇ ಬೇಕಾಗಿತ್ತು. ನನ್ನ ತಾಯಿ ಸಾಕಷ್ಟು ಧನ ಸಂಗ್ರಹವಾದ ಮೇಲೆ ಮುಂದಿನ ಪಯಣ ಕೈಗೊಳ್ಳಬೇಕೆಂದಿದ್ದರು. ಆದರೆ ಏನಾಯಿತು?"

ದಿನಗಳೆದಂತೆ ನನ್ನ ಹಾಗೂ ಫಕೀರರುದ್ರಸರ್ಜರ ಪ್ರೇಮ ಬಂಧನ ಬಲವಾಯಿತು. ಅವರನ್ನಗಲಿ ನಾನಿರಲಾರೆ ಎಂದು ನನಗೆನಿಸಿತು. ನನ್ನನ್ನು ಬಿಟ್ಟು ಬದುಕಿರಲಾರೆ ಎಂದು ಅವರಿಗನಿಸಿತು. ದಿನದ ಬಹು ವೇಳೆಯನ್ನು ನನ್ನೊಂದಿಗೆ ಕಳೆಯಹತ್ತಿದರು. ಅವರ ಪ್ರೀತಿಯ ಹವ್ಯಾಸ ಬೇಟೆ. ರಾಜಕಾರಣ, ಪ್ರಜೆಗಳ ಸುಖ ದುಃಖ ವಿಚಾರಣೆಗಳೆಲ್ಲ ಅವರಿಗೆ

ನೀಲಸಪನಿಸಪತ್ತಿವವು. ಒಮ್ಮೊಮ್ಮೆ ನಮ್ಮ ವಸತಿಗೃಹಕ್ಕೂ ಬರಹತ್ತಿದರು. ಆಗ - ನಮ್ಮಿಬ್ಬರಿಗೆ ಜಗದ ಆಗು–ಹೋಗುಗಳ ಪರಿವೆಯೇ ಇರಲಿಲ್ಲ. ಸದಾ ಜಕ್ಕವಕ್ಕಿಗಳಂತೆ ಜೊತೆಯಾಗಿರಬೇಕೆಂಬ ಹಂಬಲ ಇಬ್ಬರಲ್ಲೂ ಬಲವಾಯಿತು. ನನ್ನ ತಾಯಿಗೆ ಸಾಕಷ್ಟು ಧನಕನಕ ದೊರೆತುದರಿಂದ ದಕ್ಷಿಣ ದೇಶಕ್ಕೆ ಹೋಗುವ ವಿಚಾರವನ್ನು ಮುಂದೆ ಹಾಕಹತ್ತಿದಳು. ನನ್ನನ್ನು ರಾಜನರ್ತಕಿಯನ್ನಾಗಿ ಮಾಡುವ ಮಾತು ಕೇಳಬಂದಿತು.

ಸದಾ ನನ್ನ ಸುತ್ತ ಸುಳಿದಾಡುವ ದೊರೆಗಳನ್ನು ಕಂಡು ರಾಜಮಾತೆ ಚಿಂತಾಮಗ್ನರಾದರು. ರಾಜಕಾರಣದತ್ತ ಗಮನಹರಿಸಿದ ರಾಜರ ಬಗೆಗೆ ಮಂತ್ರಿಮಾನ್ಯರು ಗಾಬರಿಗೊಂಡರು. ಬೇಗನೆ ಯುವರಾಜರಿಗೆ ಮದುವೆ ಮಾಡಿ ಪಟ್ಟಾಭಿಷೇಕ ಮಾಡಲು ನಿರ್ಧರಿಸಿದರು. ಮದುವೆಯಾದರೆ ಮಹಾರಾಜರಿಗೆ ಈ ನರ್ತಕಿಯ ಹುಚ್ಚು ಬಿಡುವುದೆಂದರು. ಸುತ್ತಲಿನ ಹಲವಾರು ದೇಸಾಯರ ಪುತ್ರಿಯರ ಭಾವಚಿತ್ರಗಳನ್ನು ತಂದು ತೋರಿಸಿದರು. ಮದುವೆಗೆ ಒತ್ತಾಯ ಮಾಡಹತ್ತಿದರು.

ಒಂದುದಿನ ಬೆಳದಿಂಗಳ ರಾತ್ರಿ ನಾವೆಲ್ಲ ವಸತಿಗೃಹದ ವಿಶಾಲವಾದ ಬಯಲಿನಲ್ಲಿ ಕುಳಿತು ಸಂಗೀತದಲ್ಲಿ ಮೈಮರೆತಿದ್ದೆವು. ಸುತ್ತಲಿನ ಗುಡ್ಡಬೆಟ್ಟಗಳ ಮೇಲೆ ಬೆಳದಿಂಗಳ ಬೆಳಕು ಹರಡಿತ್ತು. ತಂಗಾಳಿಗೆ ಹಚ್ಚಹಸುರಿನ ಬತ್ತದ ಗದ್ದೆಗಳಲ್ಲಿ ತಲೆದೂಗುವ ಬತ್ತದ ತೆನೆಗಳು ನನ್ನನ್ನು ನೃತ್ಯಕ್ಕೆ ಪ್ರಚೋದಿಸಿದವು, ಬೆಳದಿಂಗಳ ಬೆಳಕಿನಲ್ಲಿ ಬೆಳ್ಳಿಯ ಎರಕವನ್ನು ಹೊಯ್ದಂತೆ ತೋರುವ ಕೆರೆಯ ನೀರನ್ನು ಕಂಡು ನಾನು ಮಂತ್ರಮುಗ್ಧಳಾಗಿ ಕುಳಿತಿದ್ದೆ. ಆಗ ಮಹಾರಾಜರು ದಯಮಾಡಿಸಿದರು. ನಾವಿಬ್ಬರೂ ಬೆಳದಿಂಗಳ ರಾತ್ರಿಯಲ್ಲಿ ತಿರುಗಾಡುತ್ತ ಊರ ಹೊರಗಿನ ಮಾವಿನತೋಪಿನಲ್ಲಿ ಕುಳಿತೆವು. ಅವರ ಸಹವಾಸದಲ್ಲಿ ನಾನು ಆನಂದಭರಿತಳಾದೆ.

ಫಕೀರ ರುದ್ರಸರ್ಜರು ಪ್ರೇಮದಿಂದ ನನ್ನನ್ನು ಬಳಿ ಕುಳ್ಳಿರಿಸಿಕೊಂಡರು. ನನ್ನ ಗಲ್ಲಗಳನ್ನು ಹಿಡಿದೆತ್ತಿ ನನ್ನ ಕಣ್ಣಲ್ಲಿ ತಮ್ಮ ಕಣ್ಣಿನಿಂದ ಪ್ರೇಮದ ಹೊನಲನ್ನೇ ವರಿಸುತ್ತ "ರಂಜನೀ" ಎಂದರು,

"ಏನು ದೊರೆಗಳೇ ? ಸದಾ ನಾವಿಬ್ಬರೂ ಹೀಗೇ ಜೊತೆಯಾಗಿ ಇರಬೇಕಲ್ಲವೇ?" ಎಂದು ಕೇಳಿದ.

"ನೀನು ನನ್ನನ್ನು ಲಗ್ನವಾದರೆ ನಾವಿಬ್ಬರೂ ಬಾಳಿನುದ್ದಕ್ಕೂ ಹೀಗೇ ಇರಬಹುದಲ್ಲ ! ನಿನ್ನ ಅನುಮತಿ ಕೇಳಲೆಂದೇ ಬಂದಿರುವೆ."

"ಅಯ್ಯೋ ದೊರೆಗಳೆ, ಈ ಜನ್ಮದಲ್ಲಿ ಅದೆಲ್ಲಿ ಸಾಧ್ಯ? ನೀವು ವೀರ ಶೈವರು. ನಾನು ಮುಸಲ್ಮಾನರವಳು. ನೀವು ರಾಜಸಿಂಹಾಸನವನ್ನೇರು ವವರು. ನಾನು ಯಃಕಶ್ಚಿತ ನೃತ್ಯಗಾತಿ. ನಮ್ಮಿಬ್ಬರ ವಿವಾಹ ಸಾಧ್ಯ ವಾಗಲಾಗರದು. ಧರ್ಮಸಮ್ಮತವಾಗಲಾರದು, ಅಲ್ಲದೆ ಜನ ನಮ್ಮನ್ನು ಸುಮ್ಮನೆ ಬಿಟ್ಟಾರೆಯೇ ?"

"ನನಗೆ ಜನರ ಸಮ್ಮತಿ ಬೇಕಾಗಿಲ್ಲ 'ರಂಜನಿ' ನಿನ್ನ ಸಮ್ಮತಿ ಮಾತ್ರ ಬೇಕಾಗಿದೆ. ನಿನ್ನ ಹೃದಯದೊಲವು ಮುಖ್ಯ. ಅರಮನೆಯಲ್ಲಿ ನಿತ್ಯವೂ ದೇಸಾಯರ ಪುತ್ರಿಯರ ಭಾವಚಿತ್ರಗಳನ್ನು ತಂದುತೋರಿಸುತ್ತಿದ್ದಾರೆ. ವಿವಾಹಕ್ಕೆ ಅವಸರಪಡಿಸುತ್ತಿದ್ದಾರೆ. ನನ್ನ ತಾಯಿಯಂತೂ ಬೇಗನೆ. ಮದುವೆಮಾಡಿಕೊ ಎಂದು ಅಳುತ್ತ ಕೂಡುತ್ತಿದ್ದಾರೆ. ನಾನು ಬೇರೆ ಹೆಣ್ಣಿನೊಂದಿಗೆ ಮದುವೆಯಾಗಲಾರೆ. ನನಗೆ ನೀನು ಬೇಕು., ರಂಜನೀ ನೀನಿಲ್ಲದೆ ನನ್ನ ಮನ ರಂಜಿಸಲಾರದು."

"ದೊರೆಗಳೇ! ನಾಳೆ ಪಟ್ಟದರಾಣಿ ಬಂದೊಡನೆ ನನ್ನ ನೆನಪಾದರೂ ನಿಮಗೆ ಉಳಿಯುವುದೇ ?"

"ನೀನು ನನ್ನ ಹೃದಯದ ರಾಣಿಯಾಗಿರುವಾಗ ಬೇರೆ ಪಟ್ಟದ ರಾಣಿಯ ವಿಚಾರವೇ ಇಲ್ಲ."

"ದೊರೆಗಳೇ ಅದೆಲ್ಲ ಆಗದ ಮಾತು, ನೀವು ಬೇರೊಬ್ಬ ರಾಜ ಕುಮಾರಿಯನ್ನು ಮದುವೆಯಾಗಿ ಸುಖದಿಂದ ಬಾಳಿರಿ ನನ್ನ ದೊರೆ !" ನಾನು ಬೇಕಾದರೆ ರಾಜನರ್ತಕಿಯಾಗಿ ನಿಮ್ಮ ಬಳಿ ಇರುವೆನು.

"ರಂಜನಿ, ಎಷ್ಟು ಸುಲಭವಾಗಿ ಹೇಳಿಬಿಟ್ಟೆಯಲ್ಲ ! ನೀನು ನನ್ನ ಹೃದಯದರಸಿಯಾಗಿರುವಾಗ ಪಾಪ, ಬೇರೊಂದು ಹೆಣ್ಣನ್ನು ತಂದು ತೋರಿಕೆಯ ರಾಣಿಯನ್ನಾಗಿ ಮಾಡುವದು ಸಾಧ್ಯವಿಲ್ಲ. ಮದುವೆಗೆ ನಿನ್ನ ಒಪ್ಪಿಗೆ ಮುಖ್ಯ. ನಾನು ನಿನ್ನನ್ನೇ ಮದುವೆಯಾಗುವೆ."

"ನಾನೇನು ಹೇಳಲಿ ದೊರೆಗಳೇ ! ನಾನು ಸದಾ ನಿಮ್ಮ ನೆರಳಾಗಿ ಬಾಳುವೆ. ನಮ್ಮಿಬ್ಬರ ದೇಹ ಎರಡಿದ್ದರೂ ಮನ, ಆತ್ಮ ಒಂದೇ. ನನ್ನ ತಾಯಿ ಹಾಗೂ ನಿಮ್ಮ ಜನ ಮದುವೆಗೆ ಒಪ್ಪಬಹುದೇ ?"

"ರಂಜನೀ. ಮನಸ್ಸಿಗೆ ಬಂದದ್ದನ್ನು ಮಾಡಲು ನಾನಾರಿಗೂ ಅಂಜುವವನಲ್ಲ. ನನ್ನೆದುರು ಸಮಾಜ, ರಾಜ್ಯ ಎಲ್ಲವೂ ನನಗೆ ಅಲ್ಪ. ಪ್ರಸಂಗ ಬಂದರೆ ನಿನಗೆ ವೀರಶೈವ ದೀಕ್ಷೆ ಕೊಡಿಸಿ ಮದುವೆಯಾಗುತ್ತೇನೆ. ಅದಕ್ಕಾಗಿ ರಾಜ್ಯ ತ್ಯಾಗ ಮಾಡಲೂ ನಾನು ಸಿದ್ಧ. ನಿನ್ನ ತಾಯಿಗೆ ಸಾಕಷ್ಟು ಹಣ ಕೊಡುವೆ, ಆಕೆ ತನ್ನ ನಾಡಿಗೆ ಹೋಗಲಿ. ನಿನ್ನನ್ನು ಮದುವೆಯಾಗಿಯೇ ಬಿಡುವೆ. ಇದು ನನ್ನ ಕೊನೆಯ ನಿರ್ಧಾರ." ಎಂದು ಹೇಳಿದಾಗ ನನ್ನ ಕಣ್ಣಿನಿಂದ ಆನಂದಬಾಷ್ಪಗಳುರುಳಿದವು. ಚಂದ್ರಮನ ಸಾಕ್ಷಿಯಾಗಿ ನಾವಿಬ್ಬರೂ ದಂಪತಿಗಳಾಗಲು ನಿರ್ಧರಿಸಿದೆವು.

ಈ ಸಮಾಚಾರವು ಬೆಳಗಾಗುವುದರಲ್ಲಿ ಅರಮನೆಯ ತುಂಬ ಹರಡಿತು. ರಾಜಮಾತೆ ನಿದ್ರಾಹಾರಗಳನ್ನು ತೊರೆದು ಅಳುತ್ತ ಮಲಗಿದರು. ಅಂದು ಸಾಯಂಕಾಲ ಮಂತ್ರಿಮಾನ್ಯರು ಸಭೆಗೂಡಿದರು, ಕಲ್ಮಠದ ಸ್ವಾಮಿಗಳು ದಯಮಾಡಿಸಿದರು, ಬಂಧು ಬಳಗದವರು ಬಂದು ಮಹಾರಾಜರ ಮನವನ್ನು ಬದಲಿಸಲು ಪ್ರಯತ್ನಿಸಿದರು. ಸಾಧ್ಯವಾಗಲಿಲ್ಲ. ರಾಜಧಾನಿಯಲ್ಲಿ ಎಲ್ಲೆಡೆ ಮದುವೆಯ ಚರ್ಚೆ ನಡೆಯಿತು. ಮಹಾರಾಜರು ಪರಧರ್ಮದ ನರ್ತಕಿಯನ್ನು ಮದುವೆ ಯಾಗುವರಂತೆ ಇದರಿಂದ ಧರ್ಮ ಹಾಳಾಗುವದು ಎಂದು ಎಲ್ಲರೂ ತಿರಸ್ಕಾರದ ಮಾತುಗಳನ್ನಾಡಹತ್ತಿದರು.

ಮಂತ್ರಿಮಂಡಲದವರೆಲ್ಲರೂ ಕೂಡಿ ಮಾತನಾಡಿಕೊಂಡು ಫಕೀರ ರುದ್ರಸರ್ಜರ ಬಳಿ ಬಂದರು. ಗುರುಗಳ ಸಮ್ಮುಖದಲ್ಲಿ ಮಾತು ಕತೆ ಪ್ರಾರಂಭವಾಯಿತು. ರಾಜಪರಿವಾರದವರೆಲ್ಲ ಆಳುತ್ತಾ ಕುಳಿತರು.

"ದೊರೆಗಳೇ, ಇಲ್ಲಿರುವ 15ಜನ ರಾಜಪುತ್ರಿಯರ ಭಾವಚಿತ್ರ ಗಳನ್ನು ನೋಡಿರಿ. ನಿಮ್ಮ ಮನಸ್ಸಿಗೆ ಒಪ್ಪಿಗೆಯಾದವರನ್ನು ಕರೆತಂದು ಶುಭಸ್ಯ ಶೀಘ್ರಂ ಎನ್ನಿಸಿಬಿಡೋಣ" ಎಂದರು ಮಂತ್ರಿಗಳು.

"ಮಂತ್ರಿಗಳೇ ನನ್ನ ನಿರ್ಧಾರವನ್ನು ಬೆಳಿಗ್ಗೆ ತಿಳಿಸಿದ್ದೇನೆ. ನಾನು ಪ್ರೇಮಿಸಿದ ರಂಜನಿಯೊಂದಿಗೆ ನನ್ನ ವಿವಾಹವಾಗಬೇಕು."

"ದೊರೆಗಳೇ ಅದು ಹೇಗೆ ಸಾಧ್ಯ ? ರಂಜನಿಯ ಮೇಲೆ ನಿಮಗೆ ಅಷ್ಟೊಂದು ಪ್ರೇಮವಿದ್ದರೆ ಅವಳನ್ನು ರಾಜನರ್ತಕಿಯನ್ನಾಗಿ ಮಾಡೋಣ."

"ಅದು ಸಾಧ್ಯವಿಲ್ಲ."

"ಫಕೀರ ರುದ್ರಸರ್ಜರೇ. ಕಿತ್ತೂರ ಅರಸರು ಧರ್ಮಪರಾಯಣರು. ನೀವು ಬೇಕಾದರೆ ರಂಜನಿಗೆ ವೀರಶೈವ ದೀಕ್ಷೆ ಕೊಡಿಸಬಹುದು. ಆದರೆ ಅವಳು ಪಟ್ಟದರಸಿಯಾಗುವುದು ಸಾಧ್ಯವಿಲ್ಲ. ಅವಳ ಸಂತಾನ ಅಟ್ಟಕ್ಕೆ ಬಾಧ್ಯಸ್ಥನಾಗುವುದಿಲ್ಲ. ಓರ್ವ ಕುಲವಧುವನ್ನು ವಿವಾಹ ಮಾಡಿಕೊಳ್ಳಿರಿ, ಆಕೆ ಪಟ್ಟದರಸಿಯಾಗುವರು" ಎಂದು ಗುರುಗಳು, ಮಂತ್ರಿಗಳು ಹೇಳಿದರು.

"ಅಯ್ಯೋ ಧರ್ಮವೇ ! ಸಮಾಜವೇ ! ರಂಜನಿ ರಾಜನರ್ತಕಿ ಯಾಗಿ ನನ್ನ ಬಳಿ ಇರಬಹುದು. ಅದಕ್ಕೆ ನಿಮ್ಮ ಅಭ್ಯಂತರವಿಲ್ಲ. ಆದರೆ ಪತ್ನಿಯಾಗಲು ಸಾಧ್ಯವಿಲ್ಲ ಎಂದು ಹೇಳುವಿರಾದರೆ ಈ ಧರ್ಮ ಸಮಾಜಗಳ ಬಂಧನವೇ ನನಗೆ ಬೇಕಾಗಿಲ್ಲ..."

"ಧರ್ಮ, ಅರ್ಥ, ಕಾಮ. ಮೋಕ್ಷಕ್ಕಾಗಿ ಧರ್ಮಪತ್ನಿ ಬೇಕೇ ಬೇಕು" ಎಂದರು ಗುರುಗಳು,

"ಆಳುವವರಿಗೆ ಅರವತ್ತು ಜನ" ಎಂಬ ನಾಣ್ನುಡಿ ಇದೆ. ದೊರೆಗಳೇ, ಅವಳು ಬೇಕಾದರೆ ನಿಮ್ಮ ಬಳಿ ಇರಲಿ. ನೀವು ಬೇರೆ ವೀರಶೈವ ಕನ್ಯೆಯನ್ನು ವಿವಾಹವಾಗಲೇ ಬೇಕು, ಇಲ್ಲವೆ ರಾಜ್ಯತ್ಯಾಗಕ್ಕೆ ಸಿದ್ಧರಾಗಬೇಕು" ಎಂದು ಮಂತ್ರಿಮಾನ್ಯರೆಲ್ಲ ಒಕ್ಕೊರಲಿನಿಂದ ಹೇಳಿದರು.

"ಧರ್ಮಕ್ಕೊಬ್ಬ ಹೆಂಡತಿ, ಪ್ರೇಮಕ್ಕೊಬ್ಬ ನರ್ತಕಿ" ಎಂಬ ನಿಮ್ಮ ನೀತಿ ನನಗೆ ಒಪ್ಪಿಗೆಯಿಲ್ಲ. ನಾನೊಲಿದ ರಂಜನಿಯೇ ನನ್ನ ಧರ್ಮಪತ್ನಿ, ಪ್ರೇಮದ ಪತ್ನಿ, ಹೃದಯದ ರಾಣಿ. ಈ ಫಕೀರ ರುದ್ರ ಸರ್ಜನ ಹೃದಯ ಸಿಂಹಾಸನದಲ್ಲಿ ಬೇರೊಬ್ಬ ರಾಣಿಗೆ ಸ್ಥಳವಿಲ್ಲ. ಪವಿತ್ರ ಪ್ರೇಮದ ಎದುರು ನನಗೆ ರಾಜವೈಭವ ಅಲ್ಪವೆನಿಸಿದೆ. ಹೃದಯದ ಒಲವಿಗಿಂತ ಈ ಕಿತ್ತೂರ ರಾಜ್ಯ ನನಗೆ ಹಿರಿದೆನಿಸಿಲ್ಲ" ಎಂದು ಹೇಳಿ ರಾಜ್ಯತ್ಯಾಗಕ್ಕೆ ಫಕೀರ ರುದ್ರಸರ್ಜರು ಸಿದ್ಧರಾದರು,

"ಅಬ್ಬಾ! ರಂಜನಿ, ನೀನು ಮಹಾರಾಜರ ಹೃದಯಸಿಂಹಾಸನದಲ್ಲಿ ಭದ್ರವಾಗಿ ಕುಳಿತು ಬಿಟ್ಟೆಯಾ ! ಮುಂದೇನಾಯಿತು ?" ಎಂದು ಕುತೂಹಲದಿಂದ ಕೇಳಿದೆ.

ರಂಜನಿ ಮಂದಹಾಸ ಬೀರುತ್ತ. ಅಭಿಮಾನದಿಂದ ನನ್ನತ್ತ ನೋಡುತ್ತ ಹೇಳಿದಳು;

"ದೊರೆಗಳು ನನಗೆ ವೀರಶೈವ ದೀಕ್ಷೆ ಕೊಡಿಸಿದರು. ವಿವಾಹವಾದರು.

ನಾನು ನಿರಂಜನಿಯಾದೆ, ನನ್ನ ತಾಯಿ ಇದರಿಂದ ಸಿಟ್ಟಿಗೆದ್ದು ಉತ್ತರ ಭಾರತಕ್ಕೆ ಹೋದಳು. ದೊರೆಗಳು ರಾಜ್ಯತ್ಯಾಗ ಮಾಡಿದರು, ಅವರ ತಾಯಿ ನಮ್ಮಿಬ್ಬರನ್ನು ಕಂಡರೆ ಸಿಟ್ಟಿನಿಂದ ಕೆಂಡ ಕಾರಹತ್ತಿದರು. ಅಪ್ತೇಷ್ಟರು—ಪ್ರಜೆಗಳು ನಮ್ಮನ್ನು ಕೀಳು ದೃಷ್ಟಿಯಿಂದ ನೋಡ ಹತ್ತಿದರು. "ಓರ್ವ ನರ್ತಕಿಗಾಗಿ ರಾಜ್ಯತ್ಯಾಗ ಮಾಡಿದ ಹುಚ್ಚ ಫಕೀರ ರುದ್ರಸರ್ಜ, ಎಂದು ಜನ ಹಾಸ್ಯ ಮಾಡಹತ್ತಿದರು.

ನಮ್ಮಿಬ್ಬರ ಸೇವೆಗೆ ಕಿತ್ತೂರ ಜನ ಬರಲು ಒಪ್ಪಲಿಲ್ಲ, ಇವರಿಂದ ಸಿಟ್ಟಿಗೆದ್ದ ಮಹಾರಾಜರು ರಾಜ್ಯ ತ್ಯಾಗದೊಂದಿಗೆ ಕಿತ್ತೂರನ್ನು ತ್ಯಜಿಸಿದರು. ನಾವಿಬ್ಬರೂ ದೇಶನೂರಿಗೆ ಹೋದೆವು. ಅಲ್ಲಿ ದೊರೆಗಳು ಗುಡ್ಡದ ಮೇಲೆ ಮೊಗಲ ಪದ್ಧತಿಯಂತೆ ಅರಮನೆ ಕಟ್ಟಿಸಿದರು. ಉತ್ತರ ಭಾರತದಿಂದ 300 ಜನ ಕೆಲಸದವರನ್ನು ಕರೆಯಿಸಿದರು, ಒಂದು ಮಠವನ್ನು ಕಟ್ಟಿನಿದರು. ನೂರಾರು ಎಕರೆ ಭೂಮಿಯನ್ನು 'ಓರ್ವ ಜಂಗಮರಿಗಿತ್ತರು. ನಮ್ಮ ಅರಮನೆಯ ಸುತ್ತಲೂ ಭವ್ಯವಾದ ಕೋಟೆಯನ್ನು ಕಟ್ಟಿಸಿದರು. ಅದು ರುದ್ರ ಗಡವೆಂದು ಪ್ರಸಿದ್ಧವಾಯಿತ್ತು. ಅರಮನೆಯನ್ನು "ರಂಜನಿ ಮಹಲ್" ಎಂದು ಕರೆಯುಹತ್ತಿದ್ದರು. ಅರಮನೆಯ ಮುಂಭಾಗದಲ್ಲಿ ಸುಂದರವಾದ ಈಜುಗೊಳ ಸಿದ್ಧವಾಯಿತು ಅದರಲ್ಲಿ ಮಲ್ಲಿಗೆ ಗುಲಾಬಿ ಹೂವುಗಳನ್ನೂ,ಮರುಗ ದವನಗಳನ್ನೂ ಹಾಕಿ ನಾವಿಬ್ಬರೂ ಜಲಕ್ರೀಡೆಯಾಡುತ್ತಿದ್ದೆವು, ನನ್ನ ನೃತ್ಯ, ಸಂಗೀತಗಳ ಸವಿಯನ್ನು ಸವಿಯುತ್ತಮಹಾರಾಜರು ಸುಖವಾಗಿದ್ದರು,ನಾವಿಬ್ಬರೂ ಅನೇಕ ವರುಷ ಸುಖದೀಂದ ದೇಶನೂರ ರಂಜನಿಮಹಲಿನಲ್ಲಿ ಕಾಲ ಕಳೆದೆವು. ಈ ಭೂಮಿಯಲ್ಲಿಯೇ ಸ್ವರ್ಗಸುಖವನ್ನನುಭವಿಸಿದೆವು. ಪ್ರೇಮ ಬಂಧನದಲ್ಲಿ ಸಿಲುಕಿದ ನಮ್ಮಿಬ್ಬರಿಗೆ ಬೇರೆ ಯಾವ ಮೋಹವೂ ಇರಲಿಲ್ಲ, ವೃದ್ಧಾಪ್ಯ ನಮ್ಮ ದೇಹಕ್ಕೆ ಬಂದರೂ ನಮ್ಮಿಬ್ಬರ. ಮನಸ್ಸು ಸದಾ ಉಲ್ಲಸಿತವಾಗಿತ್ತು ದೇಶನೂರಲ್ಲಿ ಸಕಲ ಸೌಕರ್ಯಗಳಿದ್ದರೂ, ಹುಟ್ಟಿ ಬೆಳೆದ ಕಿತ್ತೂರಿನ ಮೋಹ ದೊರೆಗಳನ್ನು ಬಿಡಲಿಲ್ಲ. ಒಂದು ದಿನ ದೊರೆಗಳು ಹೇಳಿದರು:

"ರಂಜನಿ ಇಲ್ಲಿ ನಮಗೆ ಸಕಲ ಸೌಲಭ್ಯಗಳಿವೆ. ಆದರೂ ನನ್ನ ಮನ ಕಿತ್ತೂರಿನ ಸೃಷ್ಟಿಸೌಂದರ್ಯದತ್ತ ಹರೆಯುತ್ತಿದೆ, ಆ ಕೆರೆ ಸರೋವರಗಳು ಹಚ್ಚ ಹಸುರಿನ ಬತ್ತದ ಗದ್ದೆಗಳು ಕೈಮಾಡಿ ಕರೆಯುತ್ತಿವೆ. ನಮ್ಮ ಕೊನೆಯ ದಿನಗಳನ್ನು ಅಲ್ಲಿಯೆ ಕಳೆಯಬೇಕು. ನನ್ನ ಪೂರ್ವಜರ ಸಮಾಧಿಗಳಿರುವ ಕಲ್ಮಠದಲ್ಲಿಯೇ ನನ್ನ ಸಮಾಧಿಯಾಗಬೇಕು" ಎಂದರು.

"ದೊರೆಗಳೇ. ಬಂದು ಬಳಗ. ದೇಶಕೋಶ ಬಿಟ್ಟು ಬಂದ ನನಗೆ ನೀವೇ ಸರ್ವಸ್ವ, ನೀವಿದ್ದಲ್ಲಿ ನಾನಿರುವೆ. ನೀವು ನನ್ನ ಬಳಿ ಇದ್ದರೆ ನನಗೆ ಕಿತ್ತೂರೂ ಅಷ್ಟೇ. ದೇಶನೂರೂ ಅಷ್ಟೆ ! ಚಂದ್ರನೊಂದಿಗೆ ಬರುವ ಬೆಳ ದಿಂಗಳಿಗಳಂತೆ. ಹೂವಿನೊಂದಿಗಿರುವ ಪರಿಮಳದಂತೆ ನಿಮ್ಮೊಂದಿಗೆ ನನ್ನ ಬಾಳು ಸಮರಸವಾಗಿದೆ. ನಿಮ್ಮಿಚ್ಛೆಯಂತೆ ಕಿತ್ತೂರಿಗೆ ಹೋಗೋಣ" ಎಂದೆ. ನಾವಿಬ್ಬರೂ ಮರಳಿ ಕಿತ್ತೂರಿಗೆ ಬಂದೆವು, ನಾನು ಅನಾರೋಗ್ಯ ದಿಂದ ಹಾಸಿಗೆ ಹಿಡಿದೆ. ದೊರೆಗಳು ನನ್ನನ್ನುಳಿಸಿಕೊಳ್ಳಲು ಹಲವಾರು ಬಗೆಯಔಷದೋಪಚಾರ ಮಾಡಿಸಿದರು. ಆದರೆ ಮರಣ ಸನ್ನಿಹಿತ ವಾಯಿತು. ಆಗ ನನ್ನ ದೊರೆಗೆ ಹೇಳಿದೆ:

ಏನೆಂದು ಹೇಳಿದೆ ರಂಜನಿ ? ಅಲ್ಲ—ನಿರಂಜನಿ ?"

"ಜೀವನದಲ್ಲಿ ಸದಾ ನಿಮ್ಮ ಬಳಿಯಲ್ಲಿ ಬಾಳಿದೆ, ಕೊನೆಗೆ ನನ್ನ ಈ ನಶ್ವರ ದೇಹದ ಸಮಾಧಿ ನಿಮ್ಮ ಸಮಾಧಿಯ ಸ್ಥಳದ ಬಳಿಯಲ್ಲಿಯೇ ಆಗಬೇಕು. ನನ್ನ ಆತ್ಮವಂತೂ ನಿಮ್ಮ ಅತ್ಮವನ್ನಗಲಿ ಇರಲಾರದು. ನಾನು ನಿಮ್ಮ ಜೊತೆಗಾತಿ" ಎಂದು ಹೇಳುವಷ್ಟರಲ್ಲಿ ಪ್ರಾಣ ಪಕ್ಷಿ ಹಾರಿಬಿಟ್ಟಿತು.

ಫಕೀರರುದ್ರಸರ್ಜರು ಕಿತ್ತೂರ ಕಲ್ಮಠವಲ್ಲಿ ರಾಜ ಮನೆತನದವರ ಸಮಾಧಿಯ ಸ್ಥಳದಲ್ಲಿ ನನ್ನ ಸಮಾಧಿ ಮಾಡಿಸಿದರು. ಆ ಸಮಾಧಿಯ ಮೇಲೆ ನಮ್ಮ ಅಮರ ಪ್ರೇಮದ ಕಥೆಯನ್ನು ಕೆತ್ತಿಸಿದರು. ಕೆಲಕಾಲದ ನಂತರ ನನ್ನವರೂ ಈ ಲೋಕವನ್ನು ತ್ಯಜಿಸಿದರು. ಅವರಿಚ್ಛೆಯಂತೆ ನನ್ನ ಸಮಾಧಿಯ ಪಕ್ಕದಲ್ಲಿ ಅವರ ಸಮಾಧಿ ಸಿದ್ಧವಾಯಿತು. ನಂತರ ಬಂದ ಅರಸರಿಗೆ ತಮ್ಮ ವಂಶಜರ ಸಮಾಧಿಯ ಬಳಿ, ಬೇರೆ ಜಾತಿಯ ಹೆಣ್ಣಿನ ಸಮಾಧಿಯ ಸ್ಮೃತಿ ಚಿತ್ರ ಇರಕೂಡದೆಂದು ತೋರಿತು. ನನ್ನ ಕನ್ನಡ ಸಮಾಧಿಯ ಮೇಲಿನ ಕಲ್ಲನ್ನು ಕೆತ್ತಿಸಿದರು.

"ಹೌದೇ?"

"ಅಹುದಹುದು ! ಆ ಸಮಾಧಿಯ ಆವರಣದಲ್ಲಿ ಬಿದ್ದ ಕಲ್ಲನ್ನು ನೋಡಿ. ಸಹಿಸದ ಧರ್ಮಾಭಿಮಾನಿಗಳು ಆ ಕಲ್ಲನ್ನು ತುಂಡು

ತುಂಡು ಮಾಡಿ ಯಾವುದೋ ಕೆಟ್ಟಡದ ಅಡಿಪಾಯಕ್ಕೆ ಹಾಕಿಸಿದರು."

"ಅಯ್ಯೋ! ರಂಜನಿ ನಿನ್ನ ಅಮರ ಪ್ರೇಮದ ಕಥೆ ಈಗಿನ ಜನರಿಗೆ ತಿಳಿಯದಂತಾಯಿತಲ್ಲ! ಶಹಾಜಹಾನ, ಮಮತಾಜಳ ನೆನಪಿಗಾಗಿ ಕಟ್ಟಿಸಿದ ತಾಜಮಹಲಿನಷ್ಟೆ, ಮಹತ್ವದ್ದು ಆ ಫಕೀರ ರುದ್ರಸರ್ಜರು ಕೆತ್ತಿಸಿದ ನಿನ್ನ ಜೀವನ ಕಥೆಯ ಕಲ್ಲು" ಎಂದೆ.

"ಕಥೆಯೋ! ವ್ಯಥೆಯೋ! ನನಗೆ ಗೊತ್ತಿಲ್ಲ, ಆ ಸಮಾಧಿಯ ಕಲ್ಲು, ಕಿತ್ತೂರ ರಾಜ್ಯ, ಎಲ್ಲ ಇತಿಹಾಸದ ಪುಟಗಳಾಗಿವೆ, ಆದರೆ ನಮ್ಮಿಬ್ಬರ ಪ್ರೇಮ ಅಮರವಾಗಿದೆ. ನಮ್ಮಿಬ್ಬರ ಆತ್ಮಗಳು ಜೊತೆಯಾಗಿ ತಿರುಗಾಡುತ್ತಿವೆ. ರಾಣಿ ಚೆನ್ನಮ್ಮ ರಾಜ್ಯಕ್ಕಾಗಿ ಪ್ರಾಣತೆತ್ತು ಅಮರಳಾದಳು. ನಾನು—ನನ್ನ ದೊರೆ ಅಮರ ಪ್ರೇಮಿಗಳಾಗಿದ್ದೇವೆ" ಎಂದು ಹೇಳುತ್ತಿರುವಾಗಲೆ ಗೆಜ್ಜೆಯ ಘಲ ಘಲ ಧ್ವನಿಯೊಂದಿಗೆ ರಂಜನಿ ಮಾಯವಾದಳು.

—o*o—

# ಗಾಯದ ಕಲೆ

—ಚಂಪಾವತಿ ಮಹಿಷಿ

ಸತ್ಯವಂತರಾಯರ ಮಗಳ ಮದುವೆಯು ಶೀಘ್ರದಲ್ಲಿಯೇ ನಡೆಯುವದಿದ್ದಿತು. ಇನ್ನೂ ಮದುವೆಗೆ ಹತ್ತು ಹದಿನೈದು ದಿನಗಳು ಉಳಿದಿದ್ದವು. ರಾಯರು ಪ್ರಾಂತಸಾಹೇಬರ ಘನವಾದ ಹುದ್ದೆಯಲ್ಲಿದ್ದರು. ಅವರ ಒಬ್ಬಳೇ ಮಗಳ ಮದುವೆ ಎಂದ ಮೇಲ್ಲೆ ಕೇಳಬೇಕೆ? ಆ ಮದುವೆಗೆ ಬಂದವರೆಲ್ಲ ಹೊಗಳಿ ರಾಯರನ್ನೂ ಅವರ ಪತ್ನಿಯನ್ನೂ ಹರಸಿ ಹೋಗಬೇಕು. ಅಂತಹ ಮದುವೆಯ ಸಿದ್ದತೆಗಳು ಸುಮಾರು ಎರಡು ತಿಂಗಳುಗಳಿಂದಲೂ ಭರದಿಂಗ ಸಾಗಿದ್ದವು. ರಾಯರು ಇನ್ನು ಆರು ತಿಂಗಳುಗಳ ಅವಧಿಯಲ್ಲಿಯೇ ನಿವೃತ್ತರಾಗುವವರಿದ್ದರು, ಅಷ್ಟರಲ್ಲಿಯೇ ಈ ಮಹತ್ವದ ಕಾರ್ಯವನ್ನು ಪೂರೈಸಬೇಕೆಂದು ದಂಪತಿಗಳ ಆಸೆ ಇದ್ದಿತು, ಇದೇ ಅವರು ಮಾಡುತ್ತಿದ್ದ ಮೊದಲ ಶುಭಕಾರ್ಯವಾದುದರಿಂದ, ಬೀಗರನ್ನೂ ಅಳಿಯಂದಿರನ್ನೂ ಅತಿಥಿಗಳನ್ನೂ ಯಾವ ರೀತಿ ಸಂತೃಪ್ತಿಪಡಿಸಿ ಕಳಿಸಿ ಕೊಡ ಬೇಕೆಂಬುದೇ ಅವರ ಚಿಂತೆಯಾಗಿದ್ದಿತು, ಸಿದ್ಧತೆಗಳು ನಡೆದಾಗಲೆಲ್ಲ ರಾಯರು ಆಗೀಗ ಅನುಭವಿಕರ ಸಲಹೆಗಳನ್ನು ತೆಗೆದುಕೊಳ್ಳುತ್ತಿದ್ದರು.

ರಾಯರು ಮನೆಯಲ್ಲಿ ಒಂದು ತಿಂಗಳಿನಿಂದಲೇ ಮದುವೆಯ ಮನೆಯ ಚಟುವಟಿಕೆಗಳು ತ್ವರಿತಗತಿಯಿಂದ ನಡೆದಿದ್ದವು ಪೇಟೆಯಿಂದ ಕಿರಾಣಿ ಸಾಮಾನುಗಳನ್ನು ತರುವುದು. ಅವುಗಳನ್ನು ಸ್ವಚ್ಛಗೊಳಿಸಿ ಅಚ್ಚುಕಟ್ಟಾಗಿ ಇಡುವುದು; ಮನೆಗೆ ಸುಣ್ಣ ಬಣ್ಣಗಳನ್ನು ಹಚ್ಚು ಕಾರ್ಯಗಳು ಒಂದು ಕಡೆ ನಡೆದಿವೆ. ಇನ್ನೊಂದು ಕಡೆ ಮದುವೆಯ ಬಟ್ಟೆಗಳನ್ನು ವಧೂವರರಿಗೆ ಕೊಳ್ಳುವದು; ಬೀಗರಿಗೆ ಯೋಗ್ಯವಾದ ಉಡು

ಗೊರೆಗಳನ್ನು ಕೊಳ್ಳುವದು, ಅತಿಥಿಗಳಿಗೆ ಉಡುಗೊರೆಗಳು, ಬಂಗಾರದ, ಬೆಳ್ಳಿಯ ಒಡವೆಗಳನ್ನು ಮಾಡಿಸುವುದು, ಇನ್ನು ಕೆಲವರ ಕೆಲಸವಾಗಿತ್ತು. ರಾಯರ ಮನೆಗೆ ಬಂದ ಬಳಗದವರಿಗೆಲ್ಲ ಒಂದಿಲ್ಲೊಂದು ಕೆಲಸ. ಎಲ್ಲರೂ ಅಷ್ಟೇ ಶ್ರದ್ಧೆಯಿಂದ ಒಡಾಡಿ ಮಾಡುತ್ತಿದ್ದರು. ತಾವು ಬಂದ ಕೆಲಸವನ್ನು ಯಶಸ್ವಿಯಾಗಿ ಮಾಡಬೇಕೆಂಬುದೇ ಎಲ್ಲರ ಉತ್ಕಟ ಇಚ್ಛೆಯಾಗಿದ್ದಿತು.

...

ಇಂದು ರಾಯರ ಮಗಳ ಮದುವೆ. ಆ ವಿಭಾಗದಲ್ಲಿ ಅವರೇ ಹಿರಿಯ ಅಧಿಕಾರಿಗಳೆಂದ ಮೇಲೆ ವೈಭವವನ್ನು ಕೇಳಬೇಕೆ. ಮದುವೆಗಾಗಿ ಮನೆಯ ಎದುರು ದೊಡ್ಡ ಹಂದರವನ್ನು ಹಾಕಿದ್ದರು ಮಖಮಲ್ಲಿನ ಶೋಭೆಯನ್ನು ಹೊತ್ತ ಕೆಂಪು ಬಿಳಿ ಬಟ್ಟೆಗಳಿಂದ ಹಂದರವು ಶೋಭಿಸುತ್ತಿದ್ದಿತು. ವಿದ್ಯುದ್ದೀಪದ ಮಾರಗಳು, ಪ್ರಕಾಶಮಾನವಾದ ಬೆಳಕನ್ನು ಸೂರೆ ಮಾಡುವ ವಿದ್ಯುದ್ದೀಪಗಳು ಹಂದರದ ಶೋಭೆಯನ್ನು ಹೆಚ್ಚಿಸಿದ್ದವು ತಳಿರು, ತೋರಣಗಳಿಂದ ಮನೆಯೂ ಹಂದರವೂ ಅಲಂಕೃತವಾಗಿದ್ದವು ಮನೆಯಲ್ಲಿ ಬೀಗರ ಮತ್ತು ಅತಿಥಿಗಳ ಒಡಾಟವು ನಡೆದಿತ್ತು. ಮಹಿಳೆಯರು ತರತರದ ಬಟ್ಟೆಗಳನ್ನುಟ್ಟು, ಆಭರಣಗಳನ್ನಿಟ್ಟು ಓಡಾಡುತ್ತಿದ್ದರು. ಆ ವರ್ಣಗಳು ಸೇರಿ ಕಾಮನ ಬಿಲ್ಲಿನ ನೆನಪನ್ನು ತಂದುಕೊಡುತ್ತಿದ್ದವು.

ಮದುವೆಯ ಅಕ್ಷತೆಯು ನಡೆಯಿತು, ವಿಶೇಷ ಶ್ರಮ ಪಟ್ಟು ತರಿಸಿದ ಬ್ಯಾಂಡು ಮಂಗಲಗೀತೆಯನ್ನು ನುಡಿಸಿತು, ವರನ ತಾಯಿ ಆಭರಣಗಳನ್ನು ಪೂಜೆಮಾಡಿ ಸೊಸೆಗೆ ಇಡಿಸಲು ತಂದಳು. ಕಣ್ಣು ತೋರೈಸುವ ಆ ಚಿನ್ನ ಮತ್ತು ಹರಳುಗಳ ಆಭರಣಗಳನ್ನು ನೋಡಿದ ರಾಯರು ಚಿಟ್ಟನೆ ಚೀರಿ, ಉಶ್ಶೆಂದು ತಲೆಯ ಮೇಲೆ ಕೈ ಹೊತ್ತು, ದೀರ್ಘವಾದ ಉಸಿರು ಬಿಟ್ಟು, ನಿಂತಲ್ಲಿಯೇ ದಿಕ್ಕುಗಾಣದವರಂತೆ ಕುಳಿತರು. ಅವರ ಮೈದುನ ಬಂದು ಮೈಮೇಲೆ ಕೈಯಾಡಿಸಿ, ಸಾಂತ್ವನಗೊಳಿಸಲು ಪ್ರಯತ್ನಿಸಿದನು. ಅಲ್ಲಿಯೇ ನಿಂತಿದ್ದ ಅವರ ಹೆಂಡತಿ ನೀರನ್ನು ತರಿಸಿನೆತ್ತಿಗೆ ಹಾಕಿದಳು ಗಾಳೀ ಬೀಸಿದಳು. ಸುತ್ತಲೂ ಇದ್ದ ಜನ ಹೀಗೇಕಾಯಿ

ತೆಂದು ಒಬ್ಬರ ಮುಖವನ್ನೊಬ್ಬರು ನೋಡಿದರು ಹತ್ತು, ಹನ್ನೆರಡು ನಿಮಿಷಗಳ ನಂತರ ರಾಯರು ಸಾವಕಾಶವಾಗಿ ಕಣ್ಣುತೆರೆದರು. ಎಲ್ಲರಿಗೂ ಹೋದ ಜೀವ ಬಂದಂತಾಯಿತು ರಾಯರ ಭಾವ ಸಾವಕಾಶವಾಗಿ, ಅವರನ್ನೆಬ್ಬಿಸಿ ಮಲಗುವ ಕೋಣೆಗೆ ಕರೆದೊಯ್ದು ಹಾಸಿಗೆಯ ಮೇಲೆ ಮಲಗಲು ಸಹಾಯಮಾಡಿದರು. ಮದುವೆಯ ಕಾರ್ಯವು ಸಾಂಗವಾಗಿ ನಡೆಯುತ್ತಿದ್ದಿತು. ಮದುವೆಯ ಮನೆಯ ಇತರ ಮಾತು ಕತೆಗಳೊಂದಿಗೆ, ರಾಯರವಿಷಯದ ಮಾತುಕತೆಗಳೂ ಬೆರೆತವು

ಪಾಪ! ರಾಯರು ಹಾರ್ಟ್‌ಪೇಶಂಟರೆ?

"ಚು-ಚು. ಮೆತ್ತಗೆ ಮಾತನಾಡಿರಿ; ಅವೆಲ್ಲ ನಮಗೇಕೆ ಬೇಕು ಸ್ವಾಮಿ"

'ಅದೂ ನಿಜ ನಾವೇನು ವೈದ್ಯರಲ್ಲವಲ್ಲ ರೋಗನಿದಾನಕ್ಕೆ'

ಮತ್ತೊಬ್ಬರು ಮಾತನಾಡಿದರು

ಇಂತಹ ಜನರಿಗೆ ಕಷ್ಟ ಬರಬಾರದು. ಎಂತಹ ಧಾರ್ಮಿಕ ವೃತ್ತಿ ಅವರದು!

ಡೂರದಲ್ಲಿಂದ ಮತ್ತೊಂದು ಧ್ವನಿ ಕೇಳಿಸಿತು

"ಎಲ್ಲರಿಗೂ ಸಹಾಯ ಮಾಡುವವರೇ ಅವರು"

"ಯಾರಿಗೆ ಗೊತ್ತು ಸ್ವಾಮಿ; ಒಳಗೆ ಯಾವ ಮುಳ್ಳು ಇರುತ್ತದೊ?"

"ಸುತ್ತಲೂ ಜನರು ಇರುವರು; ಆ ಮಾತು ನಿಲ್ಲಿಸಿರಿ"

ವಿಧವಿಧವಾದ ತೂತು ಮದುವೆಯ ಮನೆಯಲ್ಲಿ ನಡೆದಿದ್ದವು, ಉಳಿದವರೆಲ್ಲ ತಮ್ಮ ಕೆಲಸಗಳಲ್ಲಿ ತೊಡಗಿದ್ದರು.

ರಾಯರು ಹಾಸಿಗೆಯ ಮೇಲೆ ಎಚ್ಚರವಾಗಿಯೆ ಮಲಗಿದ್ದರು. ಸದ್ಯ ಎದ್ದು ಓಡಾಡುವ ಶಕ್ತಿ ಇಲ್ಲದಿದ್ದರೂ ಮನಸ್ಸು ವಾಯುವೇಗದಿಂದ

ಯೋಚನೆ ಮಾಡುತ್ತಲಿದ್ದಿತು. ಮನಸ್ಸಿನ ಪರದೆಯ ಮೇಲೆ ಹಿಂದಿನ ಘಟನೆಗಳೆಲ್ಲ ಚಿತ್ರಿತವಾಗುತ್ತಲಿದ್ದವು.

ರಾಯರಿಗೆ ಆಗ ಇಪ್ಪತ್ತಾರು ವರುಷಗಳ ಪ್ರಾಯ. ಪದವೀಧರರಾಗಿದ್ದರು. ಎರಡು ಮೂರು ವರುಷಗಳಿಂದ ಅಲ್ಲಲ್ಲಿ ಕೆಲಸಕ್ಕಾಗಿ ಪ್ರಯತ್ನಿಸಿ ಬೇಸತ್ತಿದ್ದರು. ಸದ್ಯ ಅವರ ಮನಸ್ಸು ನೌಕರಿಗಾಗಿ ಅಷ್ಟೊಂದು ಹಾತೊರೆಯುತ್ತಿರಲಿಲ್ಲ, ಅವರ ಸಾಹಸದ ಬುದ್ಧಿಯು, ಒಮ್ಮೆ ವಿದೇಶಕ್ಕೆ ಹೋಗಿ ದುಡಿದು, ಓದಿ, ಹಣಗಳಿಸಿಕೊಂಡು ಭಾರತಕ್ಕೆ ಬರಬೇಕೆಂದು ಎಣಿಕೆ ಹಾಕುತ್ತಲಿದ್ದಿತು. ರಾಯರು ಕಾಣಲು ಸ್ಫುರದ್ರೂಪಿಗಳು, ಆರೋಗ್ಯವಂತರೂ ಆಗಿದ್ದರು, ಆದರೆ ವಿದೇಶಕ್ಕೆ ಹೋಗಲು ಹಣ ಬೇಡವೇ? ಅದಿಲ್ಲದೆ ಸುಮ್ಮನೆ ಕೆಲಸವಾದೀತೆ? ತಂದೆಯನ್ನು ಕೇಳಬೇಕೆಂದು ಎರಡು ಮೂರು ತಿಂಗಳುಗಳವರೆಗೂ ಯೋಚಿಸಿದರು. ಮೊದಲು ಈ ವಿಷಯವನ್ನು ತಾಯಿಗೆ ಹೇಳಿದರು,

"ಅವರನ್ನೇ ಕೇಳು ದುಡ್ಡಿನ ವಿಷಯ. ನನ್ನಿಂದೇನಾಯಿತು ? ಒಮ್ಮೆ ಕೇಳು. ಏನು ಹೇಳುವರೋ ಹೇಳಲಿ"

ತಾಯಿಯ ಮಾತಿನಿಂದ ಪ್ರೋತ್ಸಾಹ ಸಿಕ್ಕನಂತರ ರಾಯರು ತಂದೆಯನ್ನು ಕೇಳಿದರು. ತಂದೆ ಇವರ ಮಾತು, ವಿಚಾರಗಳನ್ನು ಕೇಳುತ್ತಲೇ ಕೋಪಗೊಂಡರು. ಅವರ ಬಾಯಿಂದ ಮಾತು ಹೊರಬಿದ್ದಿತು.

"ಇಷ್ಟು ದಿವಸ ಕಲಿಸಬೇಕಾದರೂ ಎಷ್ಟು ಕಷ್ಟಪಟ್ಟೆನೆಂಬ ವಿಚಾರವು ನಿನಗೇನಾದರೂ ತಿಳಿಯಬೇಕು"

ರಾಯರ ಬಾಯಿಂದ ಮಾತು ಹೊರಡಲಿಲ್ಲ. ಧೈರ್ಯವೆಲ್ಲ ಕುಂದಿತು, ತಡವರಿಸುತ್ತ ಮಾತನಾಡಿದರು.

"ನನಗೆ ಪರದೇಶಕ್ಕೆ ಹೋ-ಗು-ವ ಆ-ಸೆ ಬಲವಾಗಿದೆ"

"ಅದೆಲ್ಲ ಸರಿ; ನಿನಗಿಂತ ಮೂವರು ಚಿಕ್ಕ ತಮ್ಮಂದಿರು ಇರುವರು, ಅವರಿಗೆ ರಕ್ಷಣೆ ಬೇಡವೆ? ನೌಕರಿ ಬೇಡವೇ? ನೀನು ಕೆಲಸವನ್ನು ಹಿಡಿದರೆ ಮನೆಗೆ ಅನುಕೂಲವಾಗುವುದು."

ರಾಯರು ಮರುಮಾತನಾಡಲಿಲ್ಲ. ಆದರೆ ತಂದೆಯ ಮಾತುಗಳಿಂದ ಅವರ ಆಸೆ ಹಿಂಗಲಿಲ್ಲ.

ರಾಯರಿಗೆ ಈ ವಿಷಯವಾಗಿ ಆಸೆ ಹುಟ್ಟಿದ ಸಂದರ್ಭವೇ ಬೇರೆ ಯಾಗಿತ್ತು. ಅವರ ಹಿಂದಿನ ಓಣಿಯಲ್ಲಿದ್ದ ಯುವಕನೊಬ್ಬನ ಮೂರು ನಾಲ್ಕು ಸಲ ಎಸ್.ಎಸ್.ಎಲ್.ಸಿ. ಯಲ್ಲಿ ನಪಾಸಾಗಿ. ಮನೆಯಲಿ ಯಾರಿಗೂ ಹೇಳದೆ,ಪರಿಚಿತರೊಬ್ಬರ ನೆರವಿನಿಂದ ವಿದೇಶಕ್ಕೆ ಹೋಗಿದ್ದನು ಅಲ್ಲಿ ಉದ್ಯೋಗವನ್ನು ಸಂಪಾದಿಸಿ ಹಣಗಳಿಸಿ, ಆಗೀಗ ಮನೆಗೆ ಹಣವನ್ನು ಕಳಿಸುತ್ತಿದ್ದನು, ತಾನೇ ಎರಡು ವರ್ಷಗಳಿಗೊಮ್ಮೆ ಭಾರತಕ್ಕೆ ಬಂದು, ಮನೆಯಲ್ಲಿ ಎಲ್ಲರಿಗೂ ಭೆಟ್ಟಿಯಾಗಿ ಸುಮಾರು ಎರಡು ತಿಂಗಳಿನ ವರೆ ಗಾದರೂ ಇದ್ದು ಹೋಗುತ್ತಿದ್ದನು ಅವನ ವೇಷಭೂಷಣಗಳು ಎಲ್ಲರ ಮೇಲೆ ಒಳ್ಳೆ ಪ್ರಭಾವವನ್ನು ಬೀರಿದ್ದವು. ಚನ್ನಾಗಿ ಇಂಗ್ಲೀಷು ಮಾತ ನಾಡುವ ಅಭ್ಯಾಸವನ್ನೂ ದಿವನು ಮಾಡಿಕೊಂಡಿದ್ದನು, ಅವನ್ನನ್ನು ನೋಡಿದಾಗ ರಾಯರಿಗೆ "ನನಗಿಂತಲೂ ಅವನೇ ಗೆಲುವಾಗಿರುವನಲ್ಲ". ಎಂದು ಎನ್ನಿಸಿತು,

ನನ್ನಂತವರು ಅಲ್ಲಿ ಬಂದರೆ ಕೆಲಸ ಸಿಗುವುದೆ ಗಣು. ರಾಯರು ಅವನನ್ನೊಮ್ಮೆ ಕೇಳಿದರು.

"ಬಿಡಿ; ಅದಕ್ಕೇನು ಚಿಂತೆ, ನನ್ನಂತವನು ಇಲ್ಲಿ ಯಾವ ಕೆಲಸಕ್ಕೂ ಬಾರದವನು ಎಂದಾದ ಮೇಲೆ, ಅಲ್ಲಿಗೆ ಹೋಗಿ ನಾನು ಒಬ್ಬ ಮನುಷ್ಯನಾದೆ.

ರಾಯರ ಆಸೆಗೆ ನೀರೆರೆದಂತಾಯಿತು. ಅದಕ್ಕೆ ಜೀವಕಳೆ ತುಂಬಿತು.

ಗಣೇಶನ ವಿಳಾಸವನ್ನು ತಮ್ಮ ಹತ್ತಿರ ಇಟ್ಟುಕೊಂಡಿದ್ದ ರಾಯರು ಒಮ್ಮೆ ಅವನಿಗೆ ಪತ್ರ ಬರೆದರು. ಸಾರಾಂಶ ಕೆಳಗಿನಂತೆ ಇದ್ದಿತು.

ಪ್ರೀತಿಯ ಗಣು, ತಾ–

ನೀನು ಕಡಿಮೆ ಓದಿದವನಾಗಿದ್ದರೂ ಧೈರ್ಯವಂತನಿರುವಿ. ದೇಶ ಬಿಟ್ಟು ಹೋಗಿ, ದುಡಿದು ಹಣ ಸಂಪಾದಿಸಿ, ಅನುಭವಪಡೆದು ಒಬ್ಬ ಗಣ್ಯ ಮನುಷ್ಯನಾಗಿರುವಿ. ಇಲ್ಲಿ ನಾನು ಪದವೀಧರನಾಗಿದ್ದು ಕೂಡ ಕೆಲಸವಿಲ್ಲದೆ ಸುಮ್ಮನೆ ತಿರುಗಾಡುತ್ತಿರುವೆ. ಎಷ್ಟು ಪ್ರಯತ್ನಮಾಡಿದರೂ ಕೂಡ ಇಲ್ಲಿ ಕೆಲಸ ಸಿಗುವದು ಕಷ್ಟ. ನನ್ನಂತವರಿಗೆ ಸಿಗುವ ಅತಿ ಹೆಚ್ಚಿನ ಕೆಲಸವೆಂದರೆ, ಯಾವುದಾದರೊಂದು ಕಚೇರಿಯಲ್ಲಿ ಕರಣಿಕನ ಕೆಲಸ ಇಲ್ಲವೆ ಹೈಸ್ಕೂಲಿನಲ್ಲಿ ಅಧ್ಯಾಪಕನ ಕೆಲಸ. ಇದರಿಂದ ನನ್ನ ಭವಿಷ್ಯವು ಎಂತು ಉಜ್ವಲವಾದೀತು. ನೀನು ನನ್ನ ಕೆಲಸದ ಸಾಧ್ಯತೆಯ ಬಗ್ಗೆ ಮಾಹಿತಿ ತೆಗೆಯಲು ಪ್ರಯತ್ನಿಸು. ಎಂದರೆ ಜೀವನದಲ್ಲಿಯೇ ನನಗೊಂದು ದೊಡ್ಡ ಉಪಕಾರವನ್ನು ಮಾಡಿದಂತೆ ಆಗುವದು.

ಇತಿ ನಿನ್ನಮಿತ್ರ
ಸತ್ಯವಂತ

ಮುಂದೆ ಒಂದು ತಿಂಗಳಿನ ನಂತರ ಉತ್ತರವು ಗಣೂನಿಂದ ಆಶಾದಾಯಕವಾಗಿಯೇ ಬಂದಿತು.

ರಾಯರೆ, ತಾ–

ನಿಮ್ಮಂತವರು ನನ್ನನ್ನು ಮೆಚ್ಚಿ ಪತ್ರ ಬರೆದದ್ದು ಸಂತೋಷದ

ಸಂಗತಿ. ನಿಮ್ಮ ಪತ್ರವನ್ನು ಎಷ್ಟೋ ಸಲ ಓದಿಕೊಂಡೆ, ಬಹಳವಾಗಿ ಉಬ್ಬಿಹೋದೆ. ನಿಮ್ಮಂತಹ ಬುದ್ಧಿವಂತರು ಸುಸಂಸ್ಕೃತರು ಮೆಚ್ಚುವದು ಸಾಮಾನ್ಯದ ಮಾತೆ. ನೀವು ಇಲ್ಲಿಗೆ ಬರಬೇಕೆಂಬ ಆಸೆಯನ್ನಿಟ್ಟು ಪತ್ರ ಬರೆದದ್ದು ನನಗೂ ಸಂತೋಷವನ್ನುಂಟುಮಾಡಿತು. ನಿಮ್ಮಂತವರು ಇಲ್ಲಿಗೆ ಬಂದರೆ ನನಗೂ ಅನೇಕ ವಿಷಯಗಳನ್ನು ಕಲಿಯಲು ಅನುಕೂಲ ವಾದೀತು. ಎಷ್ಟಾದರೂ ನಾವು ಭಾರತೀಯರಲ್ಲಾ ಒಂದೇ ಅಲ್ಲವೇ. ವಿದೇಶಿಯರು ನಮ್ಮ ಜತೆ ಕೆಲಸಮಾಡಿದರೂ ನಮ್ಮವರ ಆತ್ಮೀಯತೆ ಹೇಗೆ ಬಂದೀತು ! ಇಲ್ಲಿರುವ ಭಾ ರ ತೀ ಯ ರೆ ಲ್ಲ ಕಲೆತಾಗ ನಮ್ಮಲ್ಲಿ ಹಬ್ಬದ ಉತ್ಸಾಹವು ತೋರುವದು. ನಮ್ಮ ಮನೆಯಲ್ಲಿ ನನ್ನ ಕ್ಷೇಮ ಸಮಾಚಾರ ತಿಳಿಸಿರಿ ಮತ್ತೆ ಪತ್ರ ಬರೆಯುವೆ.

ಇತಿ ನಿಮ್ಮವನಾದ

ಗಣು

ರಾಯರ ಮನಸ್ಸು ಸಂತೋಷದ ಗರಿಗೆದರಿ ಕುಣಿದಾಡಿತು ತಮ್ಮ ಆಸೆ ಪೂರೈಸುವದು ಇನ್ನು ಹೆಚ್ಚು ಸಮಯವಿಲ್ಲವೆಂದು ಎನಿಸಿತು. ಬಲವಾದ ಮಹತ್ವಾಕಾಂಕ್ಷೆಯಿಂದ ಮನಸ್ಸು ವಿಚಾರಮಾಡತೊಡಗಿತು, ಮತ್ತೆ ರಾಯರು ಗಣುನಿಗೆ ಪತ್ರ ಬರೆದರು.

ಪ್ರಿಯ ಗಣು,

ತಾ—

ನಿನ್ನ ಪತ್ರ ಮುಟ್ಟಿತು. ವಿಷಯವನ್ನೆಲ್ಲ ಓದಿ ಸಂತೋಷವಾಯಿತು, ನಾನು ಅಲ್ಲಿಗೆ ಬರುವ ಮೊದಲು, ನಿನ್ನ ಕಾರ್ಯಕ್ರಮವೇನೆಂಬುದನ್ನು ಬರೆ. ಎಷ್ಟರ ಮಟ್ಟಿಗೆ ಅಲ್ಲಿಯ ಹವೆ, ಆಹಾರಪದ್ಧತಿ, ಕೆಲಸದ ಪದ್ಧತಿ ನನಗೆ ಹಿಡಿಸೀತು ಎಂಬುದನ್ನ ವಿಚಾರಮಾಡಲಿಕ್ಕೆ ಅನುಕೂಲ ವಾದೀತು,

ನಿನ್ನ ಕ್ಷೇಮಸಮಾಚಾರವನ್ನು ಮನೆಯಲ್ಲಿ ತಿಳಿಸಿದ್ದೇನೆ. ನಿಮ್ಮ ಮನೆಯಲ್ಲಿ ಎಲ್ಲರೂ ಆರೋಗ್ಯವಾಗಿರುವರು.

ಇತಿ ನಿನ್ನ

ಸತ್ಯವಂತ

ಒಂದೂವರೆ ತಿಂಗಳಾದರೂ ಗಣುನಿಂದ ರಾಯರಿಗೆ ಓಲೆ ಬರ ಲಿಲ್ಲ. ರಾಯರು ಚಾತಕಪಕ್ಷಿಯಂತೆ ದಾರೀ ನೋಡೇ ನೋಡಿದರು. 'ಗಣುನ ಮನಸ್ಸು ತಮ್ಮ ವಿಷಯತ್ತವಾಗಿ ಬದಲಾಗಿದೆಯೆ' ಎಂಬ ಸಂದೇಹವೂ ಒಮ್ಮೆ ಬಂದಿತು. ಆದರೆ ಇವೆಲ್ಲವುಗಳೂ ನಿಜವಲ್ಲ ವೆಂಬುದನ್ನ ತೋರಿಸಿ ಗಣುನಿಂದ ದೀರ್ಘವಾದ ಪತ್ರವೊಮ್ಮೆ ಬಂದಿತು. ರಾಯರು ಮನಸ್ಸನ್ನ ಕೇಂದ್ರೀಕರಿಸಿ ಪತ್ರವನ್ನು ಓದಿದರು ಆದರಲ್ಲಿಯ ಒಕ್ಕಣತೆ ಕೆಳಗಿನಂತೆ ಇದ್ದಿತು.

ತಾ...........

ಮಹನೀಯರೆ,

ನಿಮ್ಮ ಓಲೆ ತಲುಪಿತು. ನಮ್ಮ ಮನೆಯಲ್ಲಿ ಎಲ್ಲರ ಕ್ಷೇಮ ಸಮಾಚಾರ, ಇಲ್ಲಿಯ ಜೀವನದ ಬಗ್ಗೆ ನಿಮಗಿರುವ ಕುತೂಹಲ, ಎಲ್ಲವನ್ನೂ ಓದಿ ಸಮಾಧಾನವಾಯಿತು. ನಿತ್ಯದ ಕೆಲಸದಲ್ಲಿ ಮಗ್ನರಾಗಿ ರುವ ನಮಗೆಲ್ಲ ಭಾರತದಿಂದ ಪತ್ರ ಬಂದರೆ ಆದೆಷ್ಟು ಸಂತೋಷ ಊಹಿಸಬಲ್ಲಿರಾ ? ಅದನ್ನು ಅನುಭವಿಸಿಯೇ ತಿಳಿಯಬೇಕು.

ನನ್ನ ನಿತ್ಯದ ಕಾರ್ಯಕ್ರಮ ಯಾವಾಗಲೂ ಒಂದೇ ಬಗೆಯಾಗಿ ರುತ್ತದೆ, ವಿಶೇಷ ಕಾರ್ಯಕ್ರಮವೆಂದರೆ ಭಾರತೀಯರಾದ ನಾವೆಲ್ಲ ಸೇರಿ ಸಂತೋಷಕೂಟವನ್ನು ಏರ್ಪಡಿಸಿದಾಗಲೇ, ನಮಗೆಲ್ಲ ನಾವು ಭಾರತ ದಲ್ಲಿರುವೆವೆಂಬ ಭಾವನೆಯು ಬರುವದು.

ಇಲ್ಲಿ ನಾವೆಲ್ಲ ಏಳುವದು ಸುಮಾರು ಬೆಳಗಿನ ಎಂಟು ಗಂಟೆಗೆ. ಇಲ್ಲಿ ಸೂರ್ಯೋದಯದ ಮೊದಲು ಏಳುವ ಪ್ರಸಂಗವೇ ಇಲ್ಲ, ತಂಪು ಬಹಳವಾಗಿರುವದರಿಂದ ಎಲ್ಲರೂ ತಡವಾಗಿ ಏಳುವ ಅಭ್ಯಾಸ ವನ್ನೇ ಮಾಡಿ ಕೊಳ್ಳುವರು. ಎದ್ದ ಕೂಡಲೆ ಪ್ರಾತರ್ವಿಧಿಗಳನ್ನು ಪೂರೈಸಿ ಬೆಳಗಿನ ಚಹ ತೀರಿಸುವರು. ನಂತರ ಅವಸರವಾಗಿ ಆಫೀ ಸಿಗೆ ಹೊರಡುವ ಸಮಯವೇ ಬರುವುದು. ಹವೆ ಬಹಳ ತಂಪಾಗಿ

ರುವುದರಿಂದ, ನಿತ್ಯ ಸ್ನಾನಮಾಡುವ ಅವಶ್ಯಕತೆಯೂ ಎನಿಸುವುದಿಲ್ಲ. ಕೆಲವರು ಮನೆಯಿಂದ ತಿಂಡಿಯನ್ನು ತೆಗೆದುಕೊಂಡು ಆಫೀಸಿಗೆ ಹೋಗುವರು. ಮಧ್ಯಾಹ್ನದ ತಿಂಡಿ ಅಲ್ಲಿಯೇ ಮುಗಿಯುವುವು. ಮನೆಯಿಂದ ತರಲು ಅನುಕೂಲವಿಲ್ಲದವರಿಗೆ, ಆಫೀಸಿನ ಆವಾರದಲ್ಲಿಯೇ ವಿಧ ವಿಧದ ತಿಂಡಿಗಳೂ ಸಿಗುವವು ವಿವಿಧ ಪೇಯಗಳು ಅಲ್ಲಿಯೆ; ಸಿಗುವವು, ಇಲ್ಲಿ ಮುಂಜಾನೆ ಹೊಟ್ಟೆತುಂಬ ಜಡವಾಗುವಂತೆ ಯಾರೂ ಊಟ ಮಾಡುವುದಿಲ್ಲ, ರಾತ್ರಿಯೇ ಚೆನ್ನಾಗಿ ಊಟ ಮಾಡುವರು. ಕೆಲಸ ಮುಗಿದ ಕೂಡಲೇ ಟ್ರೇನಿನಿಂದ ಮನೆಗೆ ಹೋಗುವರು. ವಾರದಲ್ಲಿ ಐದು ದಿನಗಳ ಕೆಲಸವನ್ನು ಮಾಡುವರು. ಇಲ್ಲಿಯ ಆಫೀಸುಗಳಲ್ಲಿಯ ಪದ್ಧತಿ ಎಂದರೆ. ಸ್ವಲ್ಪ ಸಮಯವೂ ವ್ಯರ್ಥವಾಗಿ ಹೋಗದಂತೆ ಕೆಲಸವನ್ನು ಮಾಡುವರು. ಆದ್ದರಿಂದಲೇ ಸಾಕಷ್ಟು ಕೆಲಸವು ವಾರದಲ್ಲಿ ಆಗುವದು. ಇಲ್ಲಿ ವಾರಕ್ಕೊಮ್ಮೆ ಸಂಬಳವೂ ಸಿಗುವುದು.

ಮನೆ ಒಂದೇ ಕೋಣೆಯದಿರಲಿ, ಇಲ್ಲವೇ ಎರಡು ಕೋಣೆಯ್ದಿರಲಿ, ನಲ್ಲಿ, ಅಡಿಗೆಯ ಒಲೆ ಸಾಮಾನುಗಳನ್ನಿಟ್ಟುಕೊಳ್ಳಲು ಸರಿಯಾದ ಕಪಾಟು ಎಲ್ಲ ವ್ಯವಸ್ಥೆಯೂ ಇರುವದು, ಅಡಿಗೆ ಮಾಡುವದು ಹೆಚ್ಚಿನ ಕಷ್ಟವಿಲ್ಲ. ಪೇಟೆಯಲ್ಲಿ ಸ್ವಚ್ಛಮಾಡಿದ, ಅಚ್ಚುಕಟ್ಟಾಗಿ ವಾಕೀಟುಗಳಲ್ಲಿ ಬಂದು ಮಾಡಿದ, ಎಲ್ಲ ಪದಾರ್ಥಗಳು ಸಿಗುವವು. ಮನೆಗೆ ತಂದ ಕೂಡಲೇ ಬೇಯಿಸಿ ಅಡಿಗೆ ಪೂರೈಸಬಹುದು, ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಹೊರಗೆ ದುಡಿದು, ಮನೆಯಲ್ಲಿ ಅಡಿಗೆ ಮಾಡುವುದರಿಂದಲೇ ಅವರಿಗೆ ಹೆಚ್ಚು ಶ್ರಮವಹಿಸಬೇಕಾಗುವದು

ಸದ್ಯ ಇದಿಷ್ಟು ಬರೆದಿರುವೆ. ಮತ್ತೆ ಬರೆಯುವೆ.

ನಿಮ್ಮ, ಗಣು

ರಾಯರಿಗೆ ವಿದೇಶಕ್ಕೆ ಹೋಗುವ ಆಶೆ ಇನ್ನೂ ಬಲವಾಯಿತು. ಹೋಗವದಕ್ಕೆ ಹಣದ ಬೆಂಬಲ ಸಾಮಾನ್ಯವೆ ? ಅದರ ವಿಚಾರ

ತಂದೆಯೊಡನೆ ಮಾತನಾಡುವಂತಿರಲಿಲ್ಲ, ಸೋದರಮಾವನನ್ನು ಕಾಣಲು ಅವರ ಹಳ್ಳಿಗೆ ಹೋದರು ತನ್ನ ಹಳ್ಳಿಗೆ ಬಂದ ರಾಯರನ್ನ ಸೋದರ ಮಾವನು ಅಗತ್ಯದಿಂದ ಸ್ವಾಗತಿಸಿದರು.

"ಬಹಳ ದಿವಸಕ್ಕೆ ಬಂದಿ ನಮ್ಮ ಹಳ್ಳಿಗೆ ಸತ್ಯವಂತ ! ಏನು ವಿಶೇಷ ಸಮಾಚಾರ ?

"ನೀವೇ ಈಗ ಹೊಸದೇನನ್ನಾದರೂ ಹೇಳಬೇಕು",

"ಮತ್ತೇನು ವಿಶೇಷ ? ಮದುವೆಯ ಆಮಂತ್ರಣ ?" ಮಾವನು ಅದೇ ಇರಬಹುದೆಂಬ ತರ್ಕದಿಂದ ಸೋದರಳಿಯನ ಮುಖ ನೋಡಿದರು.

ರಾಯರು ಮೇಲೆ ದೃಷ್ಟಿಯನ್ನಿಟ್ಟುಮಾವನೊಡನೆ ಮಾತನಾಡಿದರು,

"ಸದ್ಯ ನಾನು ಪರದೇಶಕ್ಕೆ ಎರಡು ಮೂರು ವರ್ಷ ಕೆಲಸಕ್ಕಾಗಿ ಹೋಗಬೇಕೆಂದಿದ್ದೇನೆ. ಹಣದ ಅಗತ್ಯ ಬಹಳವಾಗಿದೆ. ಸಾಲಕೊಟ್ಟರೆ ದುಡಿದು ಅಲ್ಲಿಂದ ಕಳಿಸಿಕೊಡುವೆನು".

"ನಿನ್ನ ಮಾತುಗಳನ್ನು ಕೇಳಿ ನನಗೆ ಆಶ್ಚರ್ಯವೂ ಆಯಿತು, ಆಘಾತವೂ ಆಯಿತು. ಅನಾವಶ್ಯಕವಾಗಿ ಸಾಲದ ಹೊರೆಯನ್ನ ಏಕೆ ಹೊರುವೆ?"

"ಅದರ ವಿಚಾರ ನನಗಿರಲಿ. ನೀವು ಸಹಾಯವನ್ನು ಮಾಡಿದರೆ ಸಾಕು,"

"ಸಂಪ್ರದಾಯದ ಮನೆಯಲ್ಲಿ ಹುಟ್ಟಿ ನಿನಗೆ ಇಂತಹ ವಿಚಾರ ವಾದರೂ ಹೇಗೆ ಬಂದಿತು? ಅಲ್ಲಿಯ ಜೀವನಕ್ಕೆ ನೀನು ಸಂಪೂರ್ಣವಾಗಿ ಹೊಂದಿಕೊಳ್ಳುವಿ," ಮದ್ಯ ಮಾಂಸಗಳು ನಿನ್ನ ಪೇಯ ಆಹಾರದ ಅವಶ್ಯಕ ಭಾಗಗಳೇ ಆಗುವವು"

"ಅದನ್ನು ಸೇವಿಸದೆ ನಾನು ಇರಬಲ್ಲೆ. ನೀವು ನನ್ನ ಮೇಲೆ ವಿಶ್ವಾಸವಿಟ್ಟರೆ ಸಾಕು" ರಾಯರು ನುಡಿದರು.

"ನಿನ್ನ ತಂದೆಯೂ ಇದಕ್ಕೆ ಒಪ್ಪಲಾರರೆಂದು ನನಗೆ ಎನಿಸುತ್ತದೆ ನಿನ್ನ ತಾಯಿಯಂತೂ ಈ ನಿನ್ನ ವಿಚಾರವನ್ನು ಕೇಳಿ ಚಿಂತೆಯನ್ನೇ ಹಚ್ಚಿಕೊಂಡಿರ ಬಹುದು."

"ಅದೇನೇ ಇದ್ದರೂ ನನ್ನ ಆಸೆ ಬಲವಾಗಿರುವುದು,"

ಈ ದುರಾಸೆಯನ್ನ ಬಿಟ್ಟು ನೌಕರಿಯನ್ನು ಹಿಡಿಯಲು ಇಲ್ಲಿಯೇ ಪ್ರಯತ್ನಿಸು. ಮನೆಗೆ ಅನುಕೂಲವಾಗುವುದು."

ಮಾವನ ಇಂಗಿತವು ರಾಯರಿಗೆ ಗೊತ್ತಾಯ್ತಿತ್ತು,

"ಆಗಲಿ" ಎಂದಿಷ್ಟೇ ಮಾತನಾಡಿ. ಎಲ್ಲರ ಅಪ್ಪಣೆಯನ್ನೂ ಪಡೆದು ಅಂದೆ ಊರಿಗೆ ಹೊರಟರು. ರಾಯರ ಪ್ರಶ್ನೆ ಬಗೆಹರಿಯಲಿಲ್ಲ.

ರಾಯರ ದೊಡ್ಡಮ್ಮನ ಮನೆಯಲ್ಲಿ ಮಗಳ ಮದುವೆ ಇದ್ದಿತು. ಎಲ್ಲರೂ ಬರಬೇಕೆಂದು ಅಗತ್ಯವಾದ ಪತ್ರವನ್ನು ಅವರು ಬರೆದಿದ್ದರು. ಮನೆಯಲ್ಲಿ ತಂದೆಯ ಆರೋಗ್ಯ ಸರಿಯಾಗಿರಲಿಲ್ಲ. ಆದ್ದರಿಂದ ತಾಯಿಯು ಮನೆಯಲ್ಲಿ ಉಳಿಯಬೇಕಾಯಿತು. ರಾಯರೊಬ್ಬರೇ ಮದುವೆಗೆ ಹೊರಟರು.

ರಾಯರ ದೊಡ್ಡಮ್ಮನ ಸಾಂಪತ್ತಿಕ ಸ್ಥಿತಿ ಚೆನ್ನಾಗಿಯೇ ಇದ್ದಿತು. ಅದರಲ್ಲಿಯೂ ಮದುವೆಯ ಮನೆ ಎಂದ ಮೇಲೆ ಕೇಳಬೇಕೆ ? ನೆರೆದ ಹೆಂಗಳೆಯರೆಲ್ಲ ಮೈತುಂಬ ಆಭರಣಗಳನ್ನು ಧರಿಸಿದವರೇ, ಸೀರೆಗಳು ಅಂದ ಚೆಂದವಾಗಿದ್ದವು.

ಮುಂಜಾವಿನ ಮುಹೂರ್ತಕ್ಕೆ ಅಕ್ಷತೆ ಮುಗಿದಿದ್ದವು, ತಡವಾಗಿ ಊಟವಾದ್ದರಿಂದ ಎಲ್ಲರೂ ಅವಶ್ಯಕ ಕೆಲಸಗಳನ್ನು ಪೂರೈಸಿ ಮಲಗಿ ಕೊಂಡರು ರಾಯರಿಗೆ ನಿದ್ದೆಯೇ ಇಲ್ಲ, ಅವರ ಮನಸ್ಸು ಯಾವುದೋ ಗಹನ

ವಿಚಾರದಲ್ಲಿ ತೊಡಗಿದ್ದಿತು "ಇಂದು ಅನುಮಾನ ಬೇರೆ, ನಿನ್ನ ಕೆಲಸ ಕೆಟ್ಟೀತು" ಎಂದು ಒಳಮನಸ್ಸು ಹೇಳುತ್ತಿದ್ದಿತು, ಆದರೆ ಅವರಿಗೆ ಒಮ್ಮೆಲೆ ಧೈರ್ಯವಾಗಲಿಲ್ಲ, ವಿಚಾರ ಮಾಡಿಯೇ ಮಾಡಿದರು, ಬೆಳಗಾದರೆ ಮದುವೆಯ ಮನೆಯ ಕೆಲಸಗಳು ಪ್ರಾರಂಭವಾಗುವವು, ಮುಂದೆ ಸಮಯವು ಸಿಗಲಾರದು ಎಂದು ಹಾಸಿಗೆಯಿಂದ ಎದ್ದರು ನಡುಮನೆಯಲ್ಲಿಯ ಕೋಣೆಗೆ ಹೋದರು, ಅಲ್ಲಿ ಹೊರಚಿಲಕವನ್ನು ಮಾತ್ರ ಹಾಕಿದ್ದರು. ಅದು ಹಣ. ಬಂಗಾರದ ಸಾಮಾನುಗಳನ್ನು ಇಡುವ ಕೋಣೆ ಎಂಬುದು ಅವರಿಗೆ ಗೊತ್ತಿದ್ದಿತು. ಎಲ್ಲರೂ ದಣಿದಿದ್ದರಿಂದ ಕೀಲಿಯನ್ನು ಹಾಕಲು ಮರೆತಿದ್ದರು, ರಾಯರು ಮೆಲ್ಲನೆ ಚಿಲಕ ತೆಗೆದರು. ಒಳಗೆ ಕೋಣೆಯಲ್ಲಿ ನೋಡಿದಾಗ ಹೆಚ್ಚು ತ್ತೂಕದ ಬಂಗಾರದ ಆಭರಣಗಳನ್ನು ಒಂದು ಬೆಳ್ಳಿಯ ತಟ್ಟೆಯಲ್ಲಿ ಹಾಕಿ ಇಟ್ಟಿದ್ದರು. ಅದರಲ್ಲಿ ನಾಗಮುರಿಗೆ, ಚಂದ್ರಹಾರ, ಚಿನ್ನದ ಗೋಪು ಮೊದಲಾದವುಗಳು ಇದ್ದವು. ರಾಯರು ಮೆಲ್ಲನೆ ಅವುಗಳನ್ನು ತೆಗೆದುಕೊಂಡು ತಮ್ಮ ಸೂಟ್ ಕೇಸಿನಲ್ಲಿ ತುಂಬಿದರು, ಬಟ್ಟೆಗಳ ಮಧ್ಯದಲ್ಲಿ ಅವು ಅಲ್ಲಲ್ಲಿ ಸೇರಿ ಕುಳಿತವು. ಮತ್ತು ರಾಯರು ದಿಂಬಿಗೆಯ ಮೇಲೆ ಮಲಗಿದರು, ಕಣ್ಣು ಮುಚ್ಚಿ ಕೊಂಡರು ಕೂಡ ರಾಯರು ಎಚ್ಚರವಾಗಿಯೇ ಇದ್ದರು.

ಇನ್ನೂ ಕತ್ತಲು ಹರಿಯುವದರಲ್ಲಿತ್ತು. ರಾಯರಿಗೆ ಅವಸರ, ಎದ್ದು ತಮ್ಮ ಸೂಟ್‌ಕೇಸ್‌ನ್ನು ತೆಗೆದುಕೊಂಡು ಹೊರಟರು. ಹೊರಗಿನ ಪಡಸಾಲೆಯಲ್ಲಿ ಆಳೊಬ್ಬನು ಮಲಗಿದ್ದನು, ಹೊರಟುನಿಂತ ರಾಯರು ಅವನಿಗೆ ಹೇಳಿದರು.

"ನನ್ನ ಸ್ನೇಹಿತರೊಬ್ಬರಿಗೆ ಮೈಯಲ್ಲಿ ನೆಟ್ಟಗಿಲ್ಲ. ಹೋಗಿ ನೋಡಿಕೊಂಡು ಬರುವೆ" ಎಂದು ಹೇಳಿ ಒಂದು ಕ್ಷಣದಲ್ಲಿ ಮನೆಯಿಂದ ಹೊರಟರು.

* * *

ವಿದೇಶಕ್ಕೆ ಹೋದ ರಾಯರು ಕಾಯ್ದೆಯನ್ನು ಓದಿ ಪರೀಕ್ಷೆಯನ್ನು ಪಾಸಾದರು. ಅಲ್ಲಿದ್ದಾಗಲೂ ರಾಯರು ತಮ್ಮ ದೊಡ್ಡಮ್ಮನನ್ನು ಮರೆಯಲಿಲ್ಲ. ಮಿತವ್ಯಯದಿಂದ ಜೀವನವನ್ನು ಸಾಗಿಸಿ ಮತ್ತೆ ಆಭರಣಗಳನ್ನು ಮಾಡಿಸಲು ಅನುಕೂಲವಾಗುವಂತೆ ಹಣವನ್ನೆಲ್ಲ ಕಳುಹಿಸಿಕೊಟ್ಟರು.

ವಿದೇಶದಿಂದ ಮರಳಿಬಂದ ರಾಯರಿಗೆ ದೊಡ್ಡಹುದ್ದೆಯೇ ದೊರಕಿತು. ಸಕಲ ಸಂಪತ್ತನ್ನೂ ರಾಯರು ಉಪಭೋಗಿಸಿದರು, ರಾಯರು ಜೀವನದಲ್ಲಿ ಯಾವುದಕ್ಕೂ ಕೊರತೆ ಇರಲಿಲ್ಲ. ಅವರ ಜೀವನದಲ್ಲಿಯ ದೊಡ್ಡ ಕಾರ್ಯವೆಂದರೆ ಮಗಳ ಮದುವೆ. ದೊಡ್ಡಮ್ಮನಿಗಾಗಿ ಅವರ ಕಣ್ಣುಗಳು ತುಂಬಿದ್ದವು. ಅಷ್ಟರಲ್ಲಿಯೇ ಅವರ ಹೆಂಡತಿ ಲಲಿತಮ್ಮ ಒಳಗೆ ಪ್ರವೇಶಿಸಿದಳು.

"ಈಗ ಆರಾಂ ಅನಿಸ್ತಿದ್ದರೆ ಕೈಹಿಡಿದು ಹೊರಗೆ ಕರೆದುಕೊಂಡು ಹೋಗ್ತೀನಿ. ಮಗಳು, ಅಳಿಯ ನಮಸ್ಕಾರ ಮಾಡಲು ಕಾಯ್ತಿದ್ದಾರೆ."

"ಡಾ....ನೀ...ನು ಹಾಕಿಕೊಂಡಿರುವಳೆ ?"
ರಾಯರು ತೊದಲಿದರು,

"ಅವುಗಳನ್ನೆಲ್ಲ ಯಾವಾಗಲೋ ಬಿಚ್ಚಿ ಇಟ್ಟಿದ್ದಾಳೆ. ಕೈಯಲ್ಲಿ ಹಸಿರು ಗಾಜಿನ ಬಳೆ, ಕೊರಳಲ್ಲಿ ತಾಳಿ ಇಷ್ಟೇ ಇವೆ.

ರಾಯರು ಮೆಲ್ಲಗೆ ಹೊರಗೆ ಬಂದರು. ನಮಸ್ಕಾರಿಸಿದ ಮಗಳು ಅಳಿಯನಿಗೆ ಮನದುಂಬಿ ಆಶೀರ್ವದಿಸಿದರು.

"ನನಗೆ ಬಂಗಾರದ ಮೋಹವಿಲ್ಲ. ನಿಮಗೂ ಅದು ಬೇಡ ಬಂಗಾರದಂತಹ ಬಾಳನ್ನ ಬಾಳಿರಿ,"

ಮದುವೆಯ ಮನೆಯಲ್ಲೆಲ್ಲ ಸುಖಕರವಾದ ವಾತಾವರಣವೇ ಕಂಡುಬಂದಿತು.

*  *  *

# ತೆರೆ ಸರಿದಾಗ

—ಆರ್ಯಾಂಬ ಪಟ್ಟಾಂಭಿ

ಮೈತುಂಬ ನಿಗಿನಿಗಿ ಹೊಳೆಯುವ ಒಡವೆಗಳು. ಕಲೆ ತುಂಬ ಆರಳಿದ ಮಲ್ಲಿಗೆಯ ಮಾಲೆ, ಮಂಡಿ ಮುಟ್ಟುವಂತೆ ತೂಗಾಡುತ್ತಿದ್ದ ಜಡೆಗೆ ಸುತ್ತಿದ ಕನಕಾಂಬರದ ಹೂ, ಹೊಸ ಹಸಿರು ಬಣ್ಣದ ಜರತಾರಿ ಅಂಚಿನ ರೇಷ್ಮೆ ಸೀರೆಯುಟ್ಟು ಕನ್ನಡಿಯಲ್ಲಿ ಮುಖ ನೋಡಿಕೊಂಡು ಸಂಭ್ರಮಪಡುತ್ತಿದ್ದಾಗ ಪಾತಜ್ಜಿ ನನ್ನನ್ನು ಹುಡುಕಿಕೊಂಡು ಬಂದರು. "ಇನ್ನೂ ನಿನ್ನ ಅಲಂಕಾರ ಮುಗಿದಿಲ್ವೇನೆ ಅಂಬ ? ಪೂಜೆಗೆ ಹೊತ್ತಾಯ್ತು ನಡಿ."

ಒಂದಿಬ್ಬರು ನನ್ನ ಕೆನ್ನೆ ಸವರಿ ನೆಟ್ಟಿಗೆ ಮುರಿದರು. ಹಿರಿ ಮುತ್ತೈದೆಯೊಬ್ಬರು ದೃಷ್ಟಿಯಾದೀತೆಂದು ಮೆಣಸಿನಕಾಯಿ ನೀವಳಿಸಿ, ಹಾಕಿದರು. ಗಂಡಿನ ಕಡೆಯ ವೃದ್ಧ ಹೆಂಗಸರೊಬ್ಬರು ಬಿಳಿ ರೇಷ್ಮೆ ಸೀರೆಯನ್ನು ಮೇಲು ಹೊದಿಕೆಯಾಗಿ ಹೊದ್ದಿಸಿದರು. ಬೀಳೀ ಸೀರೆಗೆ ಕುಂಕುಮದ ಕೆಂಪಿನಂಚು, ಅಂಚಿನಲ್ಲಿ ಅತ್ತಿತ್ತ ಕುಣಿದಾಡುತ್ತಿದ್ದ ಜರ ತಾರಿಯ ತುಂಡು ಕುಚ್ಚುಗಳು, ಸೀರೆಯನ್ನು ಸರಿಪಡಿಸಿಕೊಳ್ಳುತ್ತಾ ನಾನು ದೇವರ ಕೊಣೆಗೆ ಬಂದೆ. ಆ ಪುಟ್ಟ ಕೋಣೆಯ ಮೂಲೆ ಯಲ್ಲಿತ್ತು ಸುಂದರವಾದ ಕರಿಮರದ ಮಂದಾಸನ ಅದರೊಳಗೆ ಬೆಳ್ಳಿಯ, ಪೆಟ್ಟಿಗೆಯಲ್ಲಿ ಮುದ್ದಾದ ಮಂಗಳಗೌರಿಯ ವಿಗ್ರಹ, ಅತ್ತಿತ್ತ ನಾಲ್ಕಾರು ಬೆಳ್ಳಿಯ ದೇವರ ವಿಗ್ರಹಗಳು, ಮಂಟಪದ ಸುತ್ತ ಲೆಕ್ಕವಿಲ್ಲದಷ್ಟು ದೇವರ ಪಟಗಳು.

ಮಂಟಪದ ಮುಂದುಗಡೆ ಕೆಲವು ತಟ್ಟೆಗಳಲ್ಲಿ ಪೂಜಾಸಾಮಗ್ರಿಗಳನ್ನು ಅಚ್ಚುಕಟ್ಟಾಗಿ ಜೋಡಿಸಲಾಗಿತ್ತು. ಬೆಳ್ಳಿಯ ತಟ್ಟೆಯಲ್ಲಿ ಅರಿಶಿನ, ಕುಂಕುಮ, ಚಂದ್ರ, ಅಕ್ಷತೆಗಳಿಂದ ತುಂಬಿಕೊಂಡಿದ್ದ ಬಟ್ಟಲುಗಳು. ಬೆಳ್ಳಿಯ ಬುಟ್ಟಿಯ ತುಂಬ ಬಣ್ಣಬಣ್ಣದ ಬಿಡಿ ಹೂಗಳು ನಾನು ಸಂಭ್ರಮದಿಂದ ಎಲ್ಲವನ್ನೂ ನೋಡಿದೆ.

ಹಣ್ಣು, ಕಾಯಿ, ಹೂವು, ಎಲೆ, ಅಡಿಕೆ. ಕುಂಕುಮ, ಅರಿಶಿನ, ಊದುಬತ್ತಿ ದೇವರ ಮಂದಾಸಗೆ ಮುಂಭಾಗದಲ್ಲಿ ಉರಿಯುತ್ತಿದ್ದ ನಾಲ್ಕು ಜೊತೆ ಸೊಡಲುಗಳು ಬಲಭಾಗದಲ್ಲಿ ಅತ್ಯಂತ ಪ್ರಕಾಶಮಾನವಾಗಿ ಉರಿಯುತ್ತಿದ್ದ ನಂದಾದೀಪ.

ಕರಿಮರದ ಮಣೆಯ ಮೇಲೆ ಕುಳಿತುಕೊಂಡೆ, ಪಾತಜ್ಜಿ ಶಾಸ್ತ್ರೋಕ್ತವಾದ ರೀತಿಯಲ್ಲಿ ನನ್ನಿಂದ ಗೌರಿ ಪೂಜೆ ಮಾಡಿಸಲು ಪಕ್ಕದಲ್ಲೇ ಕುಳಿತುಕೊಂಡರು.

ಪಾತಜ್ಜಿ ಎಂಭತ್ತು ತುಂಬಿದ ಹಿರಿ ಮುತ್ತೈದೆ. ನಮ್ಮಮ್ಮನ ಕಡೆಯ ಸಮೀಪ ಬಂದು. ಆಕೆಯನ್ನೊಮ್ಮೆ ಕುತೂಹಲದಿಂದ ಗಮನಿಸಿದೆ. ಆಕೆಯದು ಭಕ್ತಿ, ಗೌರವ ಮೂಡಿಸುವಂತಹ ವ್ಯಕ್ತಿತ್ವ. ಇಳಿವಯಸ್ಸಿನಲ್ಲೂ ಎಳೆ ಮಗುವಿಗಿರುವಂತಹ ದುಂಡಾದ ಮುಗ್ಧ ಮುಖ. ಕೆನ್ನೆ ತುಂಬಾ ಅರಿಶಿನ, ಹಣೆಯ ಮೇಲೆ ಗಅಲವಾದ ಅಡ್ಡ ಕುಂಕುಮ, ಹತ್ತಿಯಂತೆ ಬಿಳುಪಾಗಿದ್ದ ತಲೆ ಕೂದಲು ಮುಚ್ಚುವಂತೆ ಮುಡಿದಿದ್ದ ಹೂವಿನ ದಂಡ ಮೈತುಂಬ ಧರ್ಮಾವರದ ಸೀರೆಯ ಸೆರಗು, ಎರಡು ಕೈಗಳಲ್ಲೂ ಝುಣಗುಟ್ಟುವ ಕೆಂಪು ಹಸಿರು ಗಾಜಿನ ಬಳೆಗಳು, ಕಾಲಂದುಗೆ.

ನಿರ್ಜೀವವಾದ ಬೆಳ್ಳಿಯ ಗೌರಿ ವಿಗ್ರಹಕ್ಕೆ ಪೂಜಿಸುವ ಬದಲು ಜೀವಂತ ಪಾತಜ್ಜಿಯನ್ನೇ ಮಂಟಪದಲ್ಲಿ ಕೂರಿಸಿ ಪೂಜೆಮಾಡುವ ಆಸೆಯಾಯಿತು ನನಗೆ.

ಪಾತಜ್ಜಿ ಎಲ್ಲವನ್ನು ಸಿದ್ಧಮಾಡಿಟ್ಟು ಅಪ್ಪಣೆ ಕೊಡಿಸ್ಸಿದರು. ಗೌರಿ ಪೂಜೆಯನ್ನು ತುಂಬ ಶ್ರದ್ಧೆಯಿಂದ. ಭಕ್ತಿಯಿಂದ ಮಾಡಬೇಕು ನಿನ್ನನ್ನು ಧಾರೆಮಂಟಪಕ್ಕೆ ಕರೆದುಕೊಂಡು ಹೋಗುವವರೆಗೂ ಪೂಜೆ ಮಾಡಿರಬೇಕು ತಿಳೀತಾ ? ಪೂಜಾ ವಿಧಾನವನ್ನು ನಾನು ಹೇಳಿ ಕೊಡ್ತೀನಿ, ನಿಧಾನವಾಗಿ ಮಾಡು..."

ಮುತ್ತೈದೆಯರೆಲ್ಲ ನನ್ನನ್ನು ಸುತ್ತುವರಿದು ಕುಳಿತುಕೊಂಡರು. ಎಳೆ ವಯಸ್ಸಿನ ಹೆಂಗಸರು, ನನ್ನ ಸ್ನೇಹಿತರೂ ಪೂಜೆ ನೋಡುತ್ತಾ ನಿಂತು ಕೊಂಡರು.

"ವಧುವಿನ ಉಡುಪಿನಲ್ಲಿ ನೀನು ಇವತ್ತು ತುಂಬ ಚೆನ್ನಾಗಿ ಕಾಣಿಸ್ತೀಯ...."

"ಸೀರೆ ಸೊಗಸಾಗಿದೆ. ನಿನಗೆ ಈ ಹಸಿರು ಬಣ್ಣ ತುಂಬಾ ಚೆನ್ನಾಗಿ ಒಪ್ಪುತ್ತೇ ..."

"ಕೆಟ್ಟ ಕಣ್ಣು ಯಾರದ್ದಾದರೂ ತಗುಲೀತು ಕೆನ್ನೆಯ ಮೇಲೆ ಒಂದು ಕಪ್ಪು ಚುಕ್ಕಿ ಇಟ್ಕೊಳ್ಳೆ..."

"ಗೌರಮ್ಮನ್ನ ಏನು ಕೊಡೂಂತ ಬೇಡ್ಕೋತೀಯ ?"

"ಅವಳಿಗೆ ಏನು ತಾನೆ ಕಡಿಮೆಯಾಗಿದೆ ? ಮುತ್ತೈದೆ ಭಾಗ್ಯ ಕೊಡು ತಾಯಿ ಅಂತ ಬೇಡ್ಕೊಂಡ್ರೆ ಸಾಕು".

ಪಾತಜ್ಜಿ ವಯಸ್ಸಿಗೆ ಅನುಗುಣವಾದ ಮಾತನ್ನಾಡಿ ಎಳೆಯರ ಬಾಯನ್ನು ಮುಚ್ಚಿಸಿದರು.

"ಹುಂ...ದೀಪ, ಊದುಬತ್ತಿ ಹಚ್ಚಿ ಪೂಜೆಗೆ ಪ್ರಾರಂಭ ಮಾಡು"

ಧಾರೆ ಮಂಟಪದಲ್ಲಿ ಮಂಗಳ ವಾದ್ಯದ ಸದ್ದು....ಕಿಕ್ಕಿರಿದು ತುಂಬಿದ್ದ ಜನರ ಮಾತು....ಮಾಡಲು ಏನು ಕೆಲಸವಿಲ್ಲದಿದ್ದರೂ ಹೊಸ ಸೀರೆಗಳನ್ನುಟ್ಟು ಇದ್ದ ಒಡವೆಗಳನ್ನೆಲ್ಲ ಮೈಮೇಲೆ ಹೇರಿಕೊಂಡು ಸಂಭ್ರಮದಿಂದ ಅತ್ತಿಂದಿತ್ತ ಒಡಾಡುವ ಹೆಂಗಸರು, ಕುಣಿದು ಕೇಕೆಹಾಕಿ ಕುಪ್ಪಳಿಸುವ ಮಕ್ಕಳ ಗುಂಪು ನಡುವೆ ಎಳೆಯ ಮಗುವೊಂದರ ಆಕ್ರಂದನವೂ ಕೇಳಿಸುತ್ತಿತ್ತು, ಪಾತಜ್ಜಿ. ನುಡಿದಂತೆ ಯಾಂತ್ರಿಕವಾಗಿ ನನ್ನ ಕೈ ಕೆಲಸ ಮಾಡುತ್ತಿತ್ತು. ಹೂವು....ಹರಿಶಿನ,....ಕುಂಕುಮ...ಚಂದ್ರ...ಹೂ... ಕೈ ಬೆರಳುಗಳು ಗೌರಮ್ಮನನ್ನು ಪೂಜಿಸುತ್ತಿದ್ದವು....

ಆದರೆ ಮನಸ್ಸು...ಹುಚ್ಚು ಕುದುರೆಯಂತೆ ಎತ್ತಲೋ ಸಾಗಿತ್ತು, ಕ್ರಮೇಣ ಚಪ್ಪರದಲ್ಲಿ ಆಗುತ್ತಿದ್ದ ಮಾತು, ನಗು, ಕೂಗಾಟ, ಮಂಗಳ ವಾದ್ಯ ಜನರ ಓಡಾಟದ ಸಂಭ್ರಮ ಕೇಳಿದಂತಾಯ್ತು. ನೆನಪುಗಳ ಪ್ರವಾಹದಲ್ಲಿ ಕೊಚ್ಚಿ ಹೋಗುವ ಹುಲ್ಲುಕಡ್ಡಿ ನಾನಾದೆ ಆಗ.

ನಾನು ತಂದೆ ತಾಯಿಯರಿಗೆ ಹುಟ್ಟಿದ ಕಡೆಯ ಮಗಳು....ನಾಲು ಗಂಡು ಮಕ್ಕಳಾದ ಮೇಲೆ ಹುಟ್ಟಿದವಳು...ತಂದೆಗೆ ತುಂಬ ಪ್ರೀತಿಯ ಮಗಳ. ನನ್ನ ಹೈಸ್ಕೂಲು ವಿದ್ಯಾಭ್ಯಾಸ ಮುಗಿದ ಕೂಡಲೆ ಮನೆಯಲ್ಲಿ ನನ್ನ ಮದುವೆಯ ಪ್ರಸ್ತಾಪ ಬಂತು.

"ಇನ್ನೂ ಚಿಕ್ಕ ವಯಸ್ಸು....ಓದಲಿ..." ಅಪ್ಪ ಪ್ರೋತ್ಸಾಹಿಸಿದರು.

ಪದವೀಧರಳಾದ ನನ್ನ ಮದುವೆಗೆ ಅಪ್ಪ ಒಂದೆರಡು ಕಡೆ ಮದುವೆಗೆ ಪ್ರಯತ್ನ ಪಟ್ಟಿದ್ದರೂ ಅದರ ಬಗ್ಗೆ ನಾನು ತುಂಬ ಉದಾಸೀನಳಾಗಿದ್ದೆ, ಮದುವೆ ಮಾಡಿಕೊಳ್ಳುವುದೇ ಇಲ್ಲವೆಂದು ಹೇಳುತ್ತಿದ್ದರೂ ಮದುವೆ, ಗಂಡ, ಮನೆ ಸಂಸಾರ ಎಂದೆಲ್ಲ ಹಗಲು ಕನಸು ಕಾಣುವುದನ್ನು ನಾನು ಸಂಪೂರ್ಣವಾಗಿ ನಿಲ್ಲಿಸಿರಲಿಲ್ಲ.

ಅಂದು ಆನಂದನನ್ನು ಪ್ರಥಮಭಾರಿ ಬೇಟಿಯಾದ ಸಂಜೆ ಚೆನ್ನಾಗಿ ನನ್ನ ನೆನಪಿನಲ್ಲಿದೆ. ಮನೆಯಲ್ಲಿ ಬೇಸರವೆಂದು ಒಂಟಿತನದ ಬೇಸರವನ್ನು ನೀಗಿಕೊಳ್ಳಲು ಸಮುದ್ರದ ತೀರಕ್ಕೆ ಹೋದೆ. ಮರಳಿನ

ಗುಡ್ಡದ ಮೇಲೆ ಕುಳಿತು ಅಲೆಗಳ ಉರುಳಾಟವನ್ನು ತನ್ಮಯಳಾಗಿ ನೋಡಿದೆ. ಸೂರ್ಯ ಮುಳುಗಿದ ಮೇಲೆ ಅಲೆಗಳ ಬಡಿದಾಟ ಹೆಚ್ಚಾಯಿತು, ಯಾವ ಒಂದು ಕಪ್ಪು ಮೋಡದ ತುಂಡಾಗಲಿ, ಗಾಳಿಯ ಬಡಿತವಾಗಲಿ ಶುಭ್ರವಾದ ಬಿಳಿಯ ಆಕಾಶದ ಮೌನವಾಗಲಿ ಸಮುದ್ರದ ಸೌಂದರ್ಯವನ್ನು ನಾಶಗೊಳಿಸಲಿಲ್ಲ ಸಮುದ್ರ ತೀರದಲ್ಲಿ ಗಂಡು ಹೆಣ್ಣುಗಳು ಜೊತೆಜೊತೆಯಾಗಿ ವಿಹರಿಸುತ್ತಿದ್ದರು.

ಮದುವೆ. ಹೌದು ನಾನೇಕೆ ಮದುವೆಯಾಗಬಾರದು?

ನಿಜ....ಮದುವೆಯಾದರೆ ಒಂಟಿತನದ ಬೇಸರವೂ ಕಡಿಮೆಯಾದೀತು.... ಮದುವೆ...ಹಸಿರು ಚಪ್ಪರ....ಮಂಗಳವಾದ್ಯ....ಹಸೆಮಣೆ...ಹೊಸ ಸೀರೆ ನನ್ನತ್ತ ಪ್ರೇಮ ನೋಟ ಬೀರುವ ಸುಂದರ ಯುವಕ ಸಮೀಪದಲ್ಲೇ... ನಾನು ಹಗಲುಗನಸು ಕಾಣುತ್ತಲೇ ಮನೆಯೊಳಗೆ ಬಂದೆ. ಹಜಾರದಲ್ಲಿ ಅಣ್ಣ ಸುಂದರ ತರುಣನೊಬ್ಬನ ಪಕ್ಕದಲ್ಲಿ ಕುಳಿತು ಆತ್ಮೀಯತೆಯಿಂದ ಹರಟುತ್ತಿದ್ದ.

"ಆನಂದ....ನನ್ನ...ಸ್ನೇಹಿತ... ಇಂಜಿನೀಯರ್, ನಮ್ಮೂರಿಗೆ ವರ್ಗವಾಗಿದೆಯಂತೆ....ನಾವಿಬ್ಬರೂ ಹೈಸ್ಕೂಲಿನಿಂದ ಒಟ್ಟಿಗೇ ಓದಿದವರು... ನೋಡಿದ್ಯ,"

ಆನಂದ ! ಹೆಸರಿಗೆ ತಕ್ಕ ರೂಪು...ಆರಡಿ ಎತ್ತರ. ಎಣೆಗೆಂಪು ಮೈಬಣ್ಣ...ನಗು ಮುಖ....ತುಂಬ ಸುಂದರ ಯುವಕ ಅಂದೇ ನಾನು ಅವನಿಗೆ ಸಂಪೂರ್ಣ ಶರಣಾಗತಳಾದೆ. ಆನಂದ ಪದೇ ಪದೇ ಅಣ್ಣ ನನ್ನು ಹುಡುಕಿಕೊಂಡು ಮನೆಗೆ ಬರುತ್ತಿದ್ದ. ಅವನ ನಡೆ, ನುಡಿ. ಸ್ವಭಾವ ಹೆಚ್ಚುಹೆಚ್ಚಾಗಿ ಪರಿಚಯವಾದಂತೆಲ್ಲ ನನ್ನ ನಿರ್ಧಾರ ಬಿಗಿಯಾಯಿತು.

"ಇವರು ನನ್ನವರಾದರೆ ಹೇಗೆ?" ಎಂದು ಕೊಂಡೆ,

ಯಾರೋ ಏನೋ....ನನ್ನನ್ನು ಮದುವೆಯಾಗುವ ಆಸೆ ಅವನಿಗೂ ಇರಬೇಕಲ್ಲ,?

ಆನಂದ ಪ್ರತಿ ಭಾನುವಾರ ಮನೆಗೆ ಬರುತ್ತಿದ್ದ. ಅಂದು ನಮ್ಮ ಮನೆಯಲ್ಲೇ ಎಲ್ಲರ ಜೊತೆಯಲ್ಲಿ ಅವನ ಊಟ, ಅವನು ಬರುತ್ತಿದ್ದ ಸಮಯಕ್ಕೆ ಸರಿಯಾಗಿ ನಾನು ಅಲಂಕಾರ ಮಾಡಿಕೊಂಡು ಗೇಟಿನ ಬಳಿ ನಿಲ್ಲುತ್ತಿದ್ದೆ, ಅವನು ಬರದೆ ಇದ್ದ ದಿನ ತುಂಬ ನಿರಾಶೆಯಾಗುತ್ತಿತ್ತು. ಇದೇಕೆ ನಾನು ಹಿಗಾದೆ ? ಯಾರೂ ನನಗಿಷ್ಟು ಹುಚ್ಚು ಹಿಡಿಸಿರಲಿಲ್ಲ.

ಒಂದು ಭಾನುವಾರ ಮನೆಯಲ್ಲಿ ನಾನೊಬ್ಬಳೆ ಸಂಜೆ ಸೂರ್ಯ ಮುಳುಗುವ ಹೊತ್ತಿನಲ್ಲಿ ಆನಂದ ಪ್ರತ್ಯಕ್ಷನಾದ, ನಗುತ್ತಾ ಒಳಗೆ ಬಂದ..

'ಮನೆಯಲ್ಲಿ ಯಾರು ಇಲ್ಲಿವಾ?' ಎಂದು ಕೇಳಿದ.

'ನಾನಿದ್ದೀನಲ್ಲ' ಎಂದು ನಕ್ಕಾಗ 'ನನಗೆ ಬೇಕಾದದ್ದೂ ನೀನೆ' ಎಂದು ಸಲಿಗೆಯಿಂದ ನನ್ನ ಕೈ ಹಿಡಿದು ಕೇಳಿದ.

"ನಾನೊಂದು ಪ್ರಶ್ನೆ ಕೇಳ್ತೀನಿ ಉತ್ತರ ಕೊಡ್ತಿಯಾ? ನನ್ನ ಹೃದಯ, ಮನೆ ಹಂಚಿಕೊಳ್ಳಲು ನೀನು ತಯಾರಿದ್ದಿಯಾ?"

ಆನಂದನ ಹಿಡಿತದಲ್ಲಿದ್ದ ನನ್ನ ಕೈ ಕ್ಷಣ ಕಾಲ ನಡುಗಿತು. ಕೈ ಬಿಡಿಸಿಕೊಂಡು ನಗುತ್ತಾ ರೂಮಿಗೆ ಓಡಿದೆ ಅಂದು ನನಗಂತೂ ಹಿಡಿ ಲಾರದಷ್ಟು ಸಂತೋಷ....ನನ್ನಾಸೆ ಇಷ್ಟು ಸುಲಭವಾಗಿ ಈಡೇರುವು ದೆಂದು ನಾನೆಣಿಸಿರಲಿಲ್ಲ.

ಪರಸ್ಪರ ಒಪ್ಪಿಕೊಂಡ ಮೇಲೆ ನಮ್ಮ ನಿರ್ಧಾರವನ್ನು ಹಿರಿಯರಿಗೆ ಮುಸಿಟ್ಟಿದೆವು. "ನೀನೇನು ಎಳೆಯ ಮಗುವಲ್ಲ. ಮುಂದೆ ಕಷ್ಟ ಸುಖ ಅನುಭವಿಸಬೇಕಾದವಳು ನೀನು ನಿನ್ನ ಮನಸ್ಸು ಎಲ್ಲ ರೀತಿಯಲ್ಲೂ ಅವನನ್ನು ಮೆಚ್ಚಿಕೊಂಡಿದ್ದರೆ ನನ್ನ ಅಡ್ಡಿಯಲ್ಲ. ಒಟ್ಟಿನಲ್ಲಿ ನೀನು ಸುಖವಾಗಿರುವುದು ಮುಖ್ಯ...."

ದೊಡ್ಡ ಜವಾಬ್ದಾರಿಯನ್ನು ನನ್ನ ಹೆಗಲ ಮೇಲೆ ಹಾಕಿ ಅಪ್ಪ ನಿಶ್ಚಿಂತರಾದರು. "ಆನಂದನಂತಹ ಗಂಡ ಸಿಕ್ಕ ಬೇಕಾದ್ರೆ ನೀನು ಪುಣ್ಯ ಮಾಡಿರಬೇಕು." ಅಣ್ಣ ಕಿವಿ ಹಿಂಡಿ ನನ್ನನ್ನು ಚುಡಾಯಿಸಿದ....

"ಆನಂದ ಒಳ್ಳೆಯ ಹುಡುಗ, ವಿದ್ಯಾವಂತ. ವಿನಯಶೀಲ..." ಅಮ್ಮನ ಬೆಂಬಲವೂ ಸಿಕ್ಕಿತು.

ತಂದೆಯಿಲ್ಲದ ಆನಂದನಿಗೆ ತಾಯಿಯ ಒಪ್ಪಿಗೆ ಪಡೆಯುವುದು ಕಷ್ಟವಾಗಲಿಲ್ಲ.

ಮದುವೆಗೆ ಹಿರಿಯರ ಒಪ್ಪಿಗೆ ಪಡೆಯುವುದು ನನಗೆ ಬಹಳ ಮುಖ್ಯವಾಗಿತ್ತು. ತಂದೆ ಒಪ್ಪದಿದ್ದರ? ಒಂದು ವೇಳೆ ಒಪ್ಪದಿದ್ದರೂ ಆನಂದನನ್ನು ನಾನು ಬಿಡಲಾರದವಳಾಗಿದ್ದೆ. ಆದರೆ ಆ ಸಮಸ್ಯೆ ನನಗೆ ಎದುರಾಲೇ ಇಲ್ಲ. ಮೆಚ್ಚಿದವನನ್ನೇ ಮದುವೆಯಾಗಬೇಕೆಂದಿದ್ದ ನಾನು ಹಕ್ಕಿಯಂತೆ ಆಕಾಶದಲ್ಲೇ ವಿಹರಿಸತೊಡಗಿದೆ.

ಮದುವೆಗೆ ದಿನ ನಿಶ್ಚಯವಾಯಿತು. ಮದುವೆಯ ದಿನ ಹತ್ತಿರ ಬಂದಂತೆ ಮನಸ್ಸು ಆತಂಕಗೊಂಡಿತು. ಇನ್ನೆರಡು ದಿನಗಳಿಗೆ ನನ್ನ ಮದುವೆ....

ಮನೆಯವರಿಗೆಲ್ಲ ಕೈತುಂಬ ಕೆಲಸ.. ಬಿಡುವಿಲ್ಲಷ್ಟು ಸಡಗರ....ಆದರೆ ಯಾಕೋ ಏನೋ ನನ್ನ ಮನಸ್ಸಿಗೆ ವಿಪರೀತ ಕಳವಳ...ಆತಂಕ.... ಉಳಿದವರ ಸಂಭ್ರಮ ನನಗಿಲ್ಲ .. ಕಾರಣ ?

ಆನಂದ ನಾನೇ ಮೆಚ್ಚಿಕೊಂಡ ಹುಡುಗ ಹಿರಿಯರ ಒಪ್ಪಿಗೆಯೂ ಸಿಕ್ಕಿದ ಮೇಲೆ ಕಳವಳಕ್ಕೆ ಕಾರಣ ? ಒಂದು ಬಗೆಯ ನಿರ್ಲಿಪ್ತತೆ... ನಿರುತ್ಸಾಹ....ಸಂಜೆ ಮನೆಯವರ ಕಣ್ಣು ತಪ್ಪಿಸಿ ಸಮುದ್ರ ತೀರಕ್ಕೆ ಹೋದೆ. ಅಲೆಗಳೊಡನೆ ಸ್ವಲ್ಪ ಹೊತ್ತು ಮಗುವಿನಂತೆ ಆಟವಾಡಿ

ದಾಗ ಮನಸ್ಸಿಗೆ ಸ್ವಲ್ಪ ನೆಮ್ಮದಿ ಸಿಕ್ಕಿತು. ಆನಂದನನ್ನು ಮದುವೆಯಾದರೆ ಮೊದಲಿನಂತೆ ಸ್ವತಂತ್ರಳಾಗಿರಲು ಸಾಧ್ಯವೇ ನನ್ನ ವ್ಯಕ್ತಿ ಸ್ವಾತಂತ್ರಕ್ಕೆ ಯಾವ ರೀತಿಯಲ್ಲೋ ಅಡಚಣೆಯುಂಟಾಗುವುದಿಲ್ಲವೇ? ಒಂದು ಸಲ ತಾಳಿ ಕತ್ತಿಗೆ ಬಿದ್ದರೆ ಹೆಣ್ಣಿನ ಕಥೆ ಮುಗಿಯಿತು. ಕಷ್ಟವೋ, ಸುಖವೋ, ಬಡತನವೋ ಬಂದದ್ದು ಅನುಭವಿಸಬೇಕು... ಪಾಲಿಗೆ ಬಂದದ್ದು ಕಹಿಬೇವಾದರೂ ಪಂಚಾಮೃತವೆಂದು ಬಾಯಿಗೆ ಹಾಕಿಕೊಂಡು ಚಪ್ಪರಿಸಬೇಕು. ಇದು ಸಾಧ್ಯವೇ? ದಾಂಪತ್ಯ ಜೀವನ ಹೂವಿನ ಹಾಸಿಗೆಯಾಗದೆ ಮುಳ್ಳಿನ ಹಾದಿಯಾದರೆ ?

"ಏನು ಕನಸು ಕಾಣ್ತಾ ಇದೀಯ ? ಗೌರಿಗೆ ಗೆಜ್ಜೆ ವಸ್ತ್ರ ಇಡಮ್ಮ....."

ಪಾತಜ್ಜಿಯ ಧ್ವನಿ ಕೇಳಿ ನೆನಪಿನಾಳದಿಂದ ನಾನು ಹೊರಗೆದ್ದು ಬಂದೆ. ಅಕ್ಕ ಗಿರಿಜ ತನ್ನ ಪಕ್ಕದಲ್ಲೇ ಗೋಡೆಗೊರಗಿ ನಿಂತಿದ್ದಳು. ಮದುವೆಯಾದ ನಾಲ್ಕು ವರ್ಷಗಳಲ್ಲಿ ರಸಹಿಂಡಿದ ಕಬ್ಬಿನಂತಾಗಿದ್ದಳು.

ಆನಂದನಂತೆ ಭಾವನೂ ಸ್ಫುರದ್ರೂಪಿ ಸುಂದರನಾದ ಪ್ರೀತಿಸುವ ಗಂಡ. ಮುದ್ದಾದ ಎರಡು ಮಕ್ಕಳು. ಅಕ ಎಷ್ಟು ಸುಖಿ ಎಂದುಕೊಂಡಿದ್ದ ನನ್ನ ಆ ಕನಸನ್ನು ತುಂಡರಿಸಿ ಹಾಕಿದವಳು ಅಕ್ಕನೇ.

"ಒಂದು ನೋಟಕ್ಕೆ ಕಾಣುವುದು ಬಾಹ್ಯರೂಪ ಮಾತ್ರ. ಆದರೆ ವ್ಯಕ್ತಿಯ ಸ್ವಭಾವ, ಗುಣ, ಅಂತರ್ಯ ತಿಳಿಯುವುದು ಸಂಸಾರ ಹೂಡಿದ ಮೇಲೆ ತಾನೇ ?"

ಅಕ್ಕ ಒಂದು ದಿನ ಆಡಿದ ಮಾತು ನನ್ನೆದೆಯನ್ನು ಇರಿಯಿತು. ಭಾವನಿಗೆ ಅಕ್ಕನಲ್ಲಿ ಮೊದಲಿನ ಪ್ರೀತಿಯಿಲ್ಲ. ಹೆಂಡತಿಯನ್ನು ಕಂಡರೆ ಒಂದು ತಾತ್ಸಾರ, ನಿರ್ಲಿಪ್ತತೆ.

ಗಂಡ ಹೆಂಡತಿಯರದು ಭಿನ್ನ ಅಭಿರುಚಿ. ವ್ಯಕ್ತಿತ್ವ. ಒಬ್ಬರು ಭೂಮಿಯಾದರೆ ಮತ್ತೊಬ್ಬರು ಆಕಾಶ. ದೂರದಿಂದ ನೋಡಿದರೆ ಭೂಮಿ, ಆಕಾಶ ಒಂದುಗೂಡಿದಂತೆ ಕಾಣಿಸುವುದಿಲ್ಲವೇ ? ಆದರೆ ಇಬ್ಬರ ನಡುವೆ ಅಂತರ, ಅಜಗಜಾಂತರ. ಅಕ್ಕನ ಬದುಕು ಯಾಂತ್ರಿಕವಾಗಿ ನ್ಯೂನತೆಯಿಲ್ಲದೆ ಸೊಪ್ಪಾಗಿತ್ತು. ಮದುವೆಯಾದ ಹೊಸತರಲ್ಲಿ ಇದ್ದ ಸಂಭ್ರಮ, ಸಡಗರ, ಸಂತೋಷದ ಹತ್ತರಲ್ಲಿ ಒಂದುಭಾಗ ಈಗಿಲ್ಲ. ಅಕ್ಕ ತುಂಬ ನೆಮ್ಮದಿಯಿಂದ ಸಂಸಾರ ಮಾಡಿಕೊಂಡಿದ್ದಾಳೆ ಎಂದು ಕೊಂಡಿದ್ದ ನನಗೆ ಅವಳು ತನ್ನಸಂಕಟ ತೋಡಿಕೊಂಡು ಅತ್ತಾಗಲೇ ತಿಳಿದದ್ದು.

ಚಿಕ್ಕಮ್ಮ ನನ್ನ ಸಮೀಪದಲ್ಲೇ ನಿಂತು ನಾನು ಮಾಡುತ್ತಿದ್ದ ಗೌರಿ ಪೂಜೆಯನ್ನು ನೋಡುತ್ತಿದ್ದರು. ಥಟ್ಟನೆ ಅವರ ಮಗಳ ಗೀತಳ ನೆನಪಾಯಿತು.

...ಗೀತ ತಂದೆತಾಯಿಗಳಿಗೆ ಒಬ್ಬಳೇ ಮಗಳು. ಮದುವೆ ಅದ್ಧೂರಿಯಿಂದಲೇ ಮಾಡಿ ಅವಳನ್ನು ಗಂಡನ ಮನೆಗೆ ಕಳುಹಿಸಿದ್ದರು. ಎರಡು ವರ್ಷದಲ್ಲೇ ಅವಳು ನರಕಯಾತನೆ ಅನುಭವಿಸಿದಳು. ಮೆದು ಸ್ವಭಾವದ ಗಂಡ. ಆದರೆ ಮನೆಯ ಯಜಮಾನಿ ಅತ್ತೆ. ಗೀತಳಿಗೆ ರಾಕ್ಷಸಿಯಂತಹ ಅತ್ತೆ ಸಿಕ್ಕಿದ್ದು ಅವಳ ದೌರ್ಭಾಗ್ಯ. ಗೀತಳ ಗಂಡ ತಾಯಿಗೆ ಹೆದರಿ ನಡುಗುತ್ತಿದ್ದ. ತಾಯಿಯ ಮಾತಿಗೆ ಕಿವಿಗೊಟ್ಟು ಹೆಂಡತಿಯನ್ನು ಹಿಡಿದು ಚಚ್ಚುತ್ತಿದ್ದ. ಜೀವನದಲ್ಲಿ ಬೇಸರ ಹೊಂದಿದ ಮೂರು ತಿಂಗಳ ಗರ್ಭಿಣಿ ಗೀತ ಭಾವಿಗೆ ಬಿದ್ದು ಆತ್ಮಹತ್ಯೆ ಮಾಡಿ ಕೊಂಡಳು. ಚಿಕ್ಕಮ್ಮ ದಿನವೂ ಅವಳ ಭಾವಚಿತ್ರದ ಮುಂದೆ ಕಣ್ಣೀರು ಹಾಕುವುದನ್ನು ನಾನೇ ಎಷ್ಟು ಸಲ ಕಂಡಿಲ್ಲ ?

'ಗೀತಳಿಗೆ ಮದುವೆ ಮಾಡದೆ ಇದ್ದಿದ್ದರೆ ಎಷ್ಟೋ ಚೆನ್ನಾಗಿತ್ತು. ಅವಳು ಆತ್ಮಹತ್ಯೆ ಮಾಡಿಕೊಳ್ಳುತ್ತಿರಲಿಲ್ಲ. ಗಿಣಿ ಹಾಗೆ ಸಾಕಿ ಕಟುಕನ ಕೈಲಿಟ್ಟಹಾಗಾಯ್ತು.'

ಗೆಳತಿ ಯಶೋದ, ಕೈ ಹಿಡಿದ ಪತಿಯೇ ಪರದೈವ ಎಂದು ನಂಬಿ ನಡೆದವಳು. ಗಂಡ ಕೆಲಸ ಕಳೆದುಕೊಂಡು ಪಾಡುಪಟ್ಟಾಗ ತಾನು ಕೆಲಸಕ್ಕೆ ಸೇರಿ ಸಂಸಾರರಥ ಉರುಳುವಂತೆ ಮಾಡಿದಳು. ಆದರೆ ಮತ್ತೊಂದು ಹೆಣ್ಣಿಗಾಗಿ ಅವನು ಕೈ ಹಿಡಿದ ಹೆಂಡತಿಯನ್ನೇ ಬಿಟ್ಟುಹೋದ. ಯಾರೊಬ್ಬರ ಹಂಗಿಲ್ಲದೆ ಮದುವೆಯೇ ಬೇಡವೆಂದು ಕೆಲಸ ಮಾಡುತ್ತಿದ್ದಳು. ನಾಗರಾಜರನ್ನು ಮೆಚ್ಚಿ ಮದುವೆಯಾದದ್ದು ಅವಳ ದೌರ್ಭಾಗ್ಯ. ಅವಳೀಗ ಪುರುಷ ದ್ವೇಷಿ. ಗಂಡಸರೆಲ್ಲ ವಂಚಕರು, ದ್ರೋಹಿಗಳು. ಅವರನ್ನು ನಂಬಿ ಹಾಳಾಗಬೇಡಿ.

ಎಳೆಯ ವಯಸ್ಸಿನ ತರುಣಿಯರಿಗೆ ಅವಳು ಅವಕಾಶ ಸಿಕ್ಕಿದಾಗ ಲೆಲ್ಲ ಎಚ್ಚರಿಕೆ ಕೊಡುತ್ತಿದ್ದಳು.

ಸೋದರತ್ತೆಯ ಮಗಳು ಪದ್ಮಿನಿ ದೇವರ ಕೋಣೆಯಾಚೆ ನಿಂತು ದೂರದಿಂದಲೇ ನಾನು ಮಾಡುತ್ತಿದ್ದ ಗೌರಿಪೂಜೆಯನ್ನು ಗಮನಿಸು ತ್ತಿದ್ದಳು. ಅವಳ ಚೆಲುವಾದ ಮುಖದಲ್ಲಿ ಮುತ್ತೈದೆಯ ಕುರುಹಾದ ಕುಂಕುಮವಿರಲಿಲ್ಲ. ಅವಳದೊಂದು ದುರಂತ ಕಥೆ, ಸಿಕ್ಕಿದ ಗಂಡ ....ಒಳ್ಳೆಯವನೇ. ತಲೆಯಮೇಲೆ ಹೊತ್ತು ಮೆರೆಸುವ ಅತ್ತೆ ....ಮಾವಂದಿರು. ಆದರೆ ಮದುವೆಯಾದ ನಾಲ್ಕು ವರ್ಷಗಳಲ್ಲಿ ಮೂರು ಮಕ್ಕಳ ತಾಯಿಯಾಗಿ ಗಂಡನನ್ನು ಕಳೆದುಕೊಂಡು ವಿಧವೆಯಾಗಿ ತೌರೂರಿಗೆ ಬಂದಿದ್ದಳು. ಸಂಸಾರ ಸುಖವನ್ನು ಅನುಭವಿಸುತ್ತಿದ್ದ ಆದಿಯಲ್ಲೇ ಅವಳ ಬಾಳು ಮುರಿದುಬಿತ್ತು. ಚೆಲುವೆಯಾದ ಮಗಳು ಬರಿಹಣೆಯಲ್ಲಿ ಮನೆಗೆ ಬಂದ ತಿಂಗಳಲ್ಲೇ ತಾಯಿ ಎದೆಒಡೆದು ಸತ್ತರು. ವೈಧವ್ಯದ ಸುಡುಬೆಂಕಿಯಲ್ಲಿ ದಹಿಸುತ್ತಾ ದಿನ ಕಳೆಯುವ ಪದ್ಮಿನಿ ನನಗೊಮ್ಮೆ ಅಳುತ್ತಾ ಹೇಳಿದ ಮಾತು ನೆನಪಾಯಿತು

'ನೀನು ಖಂಡಿತ ಮದುವೆಯಾಗಬೇಡ. ಚೆನ್ನಾಗಿ. ಓದಿನೌಕರಿ ಹಿಡಿ. ಕೈ ತುಂಬ ಸಂಪಾದಿಸಿ ಯಾರ ಹಂಗಿಲ್ಲದೆ ಹಾಯಾಗಿರೂ. ನಾನು ಎರಡೂ ಕೈಲಿ ಉಂಡ ಸುಖ ಸಾಕು. ಈ ಮಕ್ಕಳಿಗಾಗಿ ನಾನು ಬದುಕಬೇಕು. ಇಲ್ಲದಿದ್ದರೆ ಎಂದೋ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೆ.'

ಕೈ ಹಿಡಿದು ಗಂಡನ ಮೇಲೆ ತನ್ನ ಬದುಕು ಹಾಗೂ ಭವಿಷ್ಯವನ್ನು ರೂಪಿಸಿಕೊಂಡಿದ್ದ ಪದ್ಮಿನಿ ವಿಧವೆಯಾಗ ಬದುಕಿದ್ದರೂ ಸತ್ತವಳು. ಅವಳ ಸ್ಥಿತಿ ಕಂಡಾಗಲೆಲ್ಲಾ ಖಂಡಿತ ಮದುವೆಯಾಗಬಾರದು ಎಂದು ಕೊಳ್ಳುತ್ತಿದ್ದೆ. ಆದರೂ ನಾನೇಕೆ ಈ ಮದುವೆಗೆ ಒಪ್ಪಿಕೊಂಡೆ?

....ಛಿ ಯಾಕಿಷ್ಟು ಕಳವಳ ? ನಾನೇಕೆ ಇದ್ದಕ್ಕಿದ್ದಂತೆ ನನ್ನ ಮದುವೆಯ ದಿನ ಇಷ್ಟೊಂದು ಭಾವುಕಳಾಗಿಬಿಟ್ಟೆ! ಎಂಥಾ ಮನೋ ದೌರ್ಬಲ್ಯ ನನ್ನದು ! ಇಲ್ಲ ಆನಂದ ತುಂಬ ಒಳ್ಳೆಯವನು....ಅವನನ್ನು ನಾನು ತುಂಬ ಮೆಚ್ಚಿಕೊಂಡಿದ್ದೇನೆ, ಅವನನ್ನು ಮದುವೆಯಾದರೆ ನಾನು ಖಂಡಿತ ಸುಖವಾಗಿರುತ್ತೇನೆ,

ಮಧುರಳದೂ ನನ್ನಂತೆಯೇ ಪ್ರೇಮವಿವಾಹ ಮೆಚ್ಚಿದವನನ್ನೇ.... ಮದುವೆಯಾಗಿದ್ದಳು. ಎಂತಹ ಭಾಗ್ಯವಂತೆ ಅವಳು ಎಂದು ನಾನು ಅಸೂಯೆಪಟ್ಟಿದ್ದುಂಟು. ಆದರೆ ಕಾಲೇಜಿನಲ್ಲಿ ಕ.ಡ ಕುಡ ಹೆಣ್ಣು ಮಕ್ಕಳ ಹಿಂದೆ ಸುತ್ತುವುದೇ ಅವಳ ಗಂಡನ ಕೆಲಸವೆಂದು ನಂತರ ನನಗೆ ತಿಳಿದು ಮನಸ್ಸಿಗೆ ಕಸಿವಿಸಿಯಾಯಿತು.

'ಗಂಡಸರೆಲ್ಲ ನಾಯಿಗಳು, ಹೆಂಗಸರ ಹಿಂದೆ ಸುತ್ತುವುದೇ ಅವರ ಜಾಯಮಾನ.' ಮೂರ್ಖರಾದ ನಾವು ಅವರ ಪ್ರೀತಿಯ ಮಾತುಗಳಿಗೆ ಬಲಿಯಾಗಿ ನಮ್ಮ ಮನಸ್ಸು, ದೇಹವನ್ನು ಒಪ್ಪಿಸುತ್ತೇವೆ. ಅಲ್ಲಿಗೆ ನಮ್ಮ ಕಥೆ ಮುಗಿಯಿತು. ಆ ಕ್ಷಣದಿಂದಲೇ ನಮ್ಮನ್ನು ಕಾಲಿನಿಂದ ತುಳಿಯುತ್ತಾರೆ,'

ಮಧುರಳ ಮಾತುಗಳು ನನ್ನ ಮನಸ್ಸಿನ ಮೇಲೆ ತುಂಬ ಪರಿಣಾಮ ಬೀರಿದವು. ಕೈಹಿಡಿದ ಗಂಡನನ್ನೇ ಗೆಳತಿಯೆದುರು "ನಾಯಿ" ಎನ್ನ ಬೇಕಾದರೆ ಅವಳ ಎದೆಯ ಸಂಕಟ ಎಷ್ಟಿರಬಹುದು !

ನನ್ನ ಮದುವೆಯ ಸುದ್ದಿ ತಿಳಿದ ಕೂಡಲೆ ಮನೆಗೆ ಓಡಿ ಬಂದು ಕೈ ಕುಲುಕಿದಳು ವಿಜಯಲಕ್ಷ್ಮಿ, ತುಂಬ ಚೂಟಿಯಾದ ಪಾದರಸದಂತಹ ಹುಡುಗಿ. ಕಲ್ಲನ್ನು ಹಿಡಿದು ಮಾತನಾಡಿಸುವಷ್ಟು ವಾಚಾಳಿತನ ಸದಾ ನಗು, ಮಾತು, ವಿನೋದ, ಮೊನ್ನೆ ಕಂಡಾಗ ನನಗೆ ಆಶ್ಚರ್ಯ ವಾಗುವಷ್ಟು ಅವಳು ಬದಲಾಯಿಸಿದ್ದಳು. ಈಗ ಅವಳು ಮೊದಲ ನಂತಿಲ್ಲ. ಮಾತಿಲ್ಲ. ಕತೆಯಿಲ್ಲ. ನಗುವಿಲ್ಲ. ಮಾತಾ ಬಾರದ ಮೂಕಿ ಯ ಹಾಗೆ, ಜೊತೆಗೆ ಮುಖದ ಮೇಲೆ ಸ್ಪಷ್ಟವಾದ ದುಃಖದ ಛಾಯೆ "ಯಾಕೆ ವಿಜಯ, ನೀನು ಮೊದಲಿನ ಹಾಗಿಲ್ಲ. ತುಂಬ ಸಪ್ಪಗಿದ್ದೀ?" "ಹುಂ, ಮದುವೆಯಾಗಿ ಸಂಸಾರದ ಕೂಪಕ್ಕೆ ಬಿದ್ದ ಮೇಲೆ ಮೊದಲಿನ ಹಾಗೆ ಇರೋದಕ್ಕಾಗುತ್ತಾ ? ಮನೆ ತುಂಬ ಜನ. ಅತ್ತೆ, ಮಾವ. ಭಾವಂದಿರು, ಮೈದುನ, ನಾದಿನಿಯವರು. ಬೆಳಗಿನಿಂದ ರಾತ್ರಿಯವರೆಗೆ ಯಂತ್ರದಂತೆ ದುಡಿತ. ಮೊದಲು ಹುಡುಗಿ ನಗುವ ಗುಲಾಬಿಯಂತೆ ಆದರೀಗ .. ಗಂಡ ಅತ್ತೆ ಮಾವ ಕಾಲಿನಿಂದ ತೋರಿಸಿದ್ದನ್ನು ತಲೆಯ ಮೇಲೆ ಹೊತ್ತು ಮಾಡುವ ಸೇವಕಿ..." ಅವಳಾಡಿದ ಮಾತಿನಲ್ಲಿ ನೋವಿನ ಛಾಯೆಯಿತ್ತು.

"ಮನೆಯವರೆಲ್ಲ ನನ್ನನ್ನು ಮನೆಯ ಕೆಲಸದವಳಂತೆ ಕಾಣ್ತಾರೆ. ನಾನು ಮದುವೆಯಾದದ್ದು ಯಾವ ಸೌಭಾಗ್ಯಕ್ಕೆ?"

ವಿಜಯ ತೋಳಿನ ಮೇಲೆ ಮುಖವಿಟ್ಟು ಅಳತೊಡಗಿದಾಗ ಅವಳನ್ನು ಸಹಾನುಭೂತಿಯಿಂದ ತಬ್ಬಿಕೊಂಡು ತೊಡೆಯ ಮೇಲೆ ಮಲಗಿಕೊಂಡೆ. ಆದರೆ ಅಳಬೇಡವೆಂದು ಮಾತ್ರ ಹೇಳಲಿಲ್ಲ. ಕಣ್ಣೀರು ಹಾಕುವುದರಿಂದ ಅಲ್ಪಸ್ವಲ್ಪ ಮನಶ್ಶಾಂತಿ ಅವಳಿಗೆ ಸಿಕ್ಕು

ವುದಾದರೆ ಅದನ್ನು ನಾನೇಕೆ ತಪ್ಪಿಸಲಿ? ನಾನು ಬೆಂಕಿಯ ಕೊಳದಲ್ಲಿ ಮುಳುಗಿದೆ.

"ದಾಂಪತ್ಯ ಜೀವನದಲ್ಲಿ ದ್ರೋಹ ನಗುತ್ತಿದೆ. ನ್ಯಾಯ ಅಳುತ್ತಿದೆ ವಂಚನೆ ನೆಮ್ಮದಿಯಿಂದ ಬಾಳುತ್ತಿದೆ. ನಂಬಿಕೆ ನಾಶವಾಗುತ್ತಿದೆ.!

"ಪ್ರೇಮದ ಹುಚ್ಚು ಹತ್ತಿಕೊಂಡು ಬಾಹ್ಯರೂಪಕ್ಕೆ ಮೋಸ ಹೋಗಿ ಆನಂದನನ್ನು ಮದುವೆಯಾಗಿ ನನ್ನ ಬದುಕು ನರಕವಾದರೆ, ?

ದಾಂಪತ್ಯ ಜೀಪನದಲ್ಲಿ ಸುಖ, ಸಂತೋಷ, ಸಮಾಧಾನ! ಅವುಗಳನ್ನು ಹುಡುಕಲು ಹೋಗುವ ನಾನು ಮೂರ್ಖಳೇ?"

ಗೊಂಬೆಯಂತ ಕುಳಿತು ಗೌರಿ ಪೂಜೆ ಮಾಡುತ್ತಿದ್ದ ನನ್ನ ಮುಖ ಶಾಂತವಾಗಿದ್ದರೂ ಆ ಬಿಗಿದ ತುಟಿಗಳ ಹಿಂದೆ ಸಪ್ತಸಮುದ್ರಗಳು ಭೋರ್ಗರೆಯುತ್ತಿದ್ದವು. ಸುತ್ತ ನೆರೆದಿದ್ದ ಹೆಂಗಸರ ಕಣ್ಣಿಗೆ ಸೌಮ್ಯವಾಗಿ ರಮ್ಯವಾಗಿ, ಮೋಹಕವಾಗಿ ಕಾಣುತ್ತಿದ್ದ ನನ್ನ ಎದೆಯಾಳದಲ್ಲಿ ಬಿರುಗಾಳಿ ಎದ್ದಿತು.

ಧಾರೆಯ ಮಂಟಪಕ್ಕೆ ಕರೆದುಕೊಂಡು ಹೋಗಲು ಮಾವ ನನ್ನ ಸಮೀಪಕ್ಕೆ ಬಂದಾಗ ವಿಪರೀತ ಹೆದರಿಕೆಯಾಯಿತು. ಓಡಿ ಹೋಗಲೇ ಎನಿಸಿತು, ಛಿ, ನಾನೇಕೆ ಇಷ್ಟೊಂದು ಹೇಡಿಯಾದೆ? ನನ್ನ ಅಚಲ ನಿರ್ಧಾರ. ಧೈರ್ಯ ಎಲ್ಲಿ ತಲೆ ಮರೆಸಿಕೊಂಡು ಹೋದವು?

ಮಾವ ನನ್ನ ಬೆನ್ನಿನ ಮೇಲೆ ಕೈಯಿಟ್ಟಾಗ ಯಾಕೋ ಏನೋ ದುಃಖ ಉಮ್ಮಳಿಸಿ ಬಂತು, ಈವರೆಗೆ ಒತ್ತಾಯದಿಂದ ಹಿಡಿದಿದ್ದ ಸಂಯಮದ ಕಟ್ಟೆ ಒಡೆಯುವಂತಾಯ್ತು.

ಬಾಳನ್ನು ಧೈರ್ಯವಾಗಿ ಎದುರಿಸುವಂತಿದ್ದರೆ ಪ್ರೇಮಿಸಬೇಕು. ಅದು ಬಿಟ್ಟು ಹೀಗೆ ಹೇಡಿಯಂತೆ ಅತ್ತರೆ ಏನು ಸಾಧಿಸಿದ ಹಾಗಾಯಿತು ?

ತುಟಿ ಕಚ್ಚಿ ಪ್ರಯಾಸದಿಂದ ಅಳು ನುಂಗಿದೆ.

ಮಾವನ ಜೊತೆಯಲ್ಲಿ ಧಾರೆಯ ಮಂಟಪಕ್ಕೆ ಬಂದೆ.

ಹಸೆಮಣೆಯ ಮೇಲೆ ನಿಂತಿದ್ದ ಆನಂದನ ಮುಖ ನನಗೆ ಕಾಣಿಸುತ್ತಿರಲಿಲ್ಲ. ನಮ್ಮಿಬ್ಬರ ನಡುವೆ ತೆರೆ ಹಿಡಿಯಲಾಗಿತ್ತು.

ತೆರೆ ಸರಿಯಿತು. ಆನಂದನ ನಗು ಮುಖ ನನ್ನ ಹೃದಯ ತುಂಬಿಕೊಂಡಿತು. ಬಿರುಗಾಳಿಗೆ ಸಿಕ್ಕಿ ತೂಗಾಡುತ್ತಿದ್ದ ಹರಿಗೋಲು ಮತ್ತೆ ಶಾಂತವಾಯಿತು. ಆನಂದನ ಸುಂದರ ಮುಖ, ಆ ನಗು, ನಗುವಿನಿಂದ ಅರಳಿದ ಮುಖವನ್ನೇ ನೋಡುತ್ತಾನಿಂತ ನಾನು ಪ್ರಪಂಚ ವನ್ನೇ ಮರೆತೆ.

ಅಲೆಅಲೆಯಾಗಿ ಚಿಮ್ಮಿಬರುತ್ತಿದ್ದ ಆ ನಗು, ನನ್ನ ದೇಹದ ಸಮಸ್ತವನ್ನೂ ಹೊಂಬಿಸಿಲಿಗೆ ಹೊಂವಿದಂತಾಯ್ತು. ತೆರೆ ಸರಿದಾಗ ನನ್ನಲ್ಲಿ ಕವಿದಿದ್ದ ಕತ್ತಲೆ, ಅಜ್ಞಾನದ ತೆರೆಯನ್ನು ಸರಿಸಿದಂತಾಗಿ ಬೆಳ್ಳಿಯ ಬೆಳಕು ಮೂಡಿತು. ಕೇವಲ ಅಂತರ್ಮುಖಿಯಾಗಿ ವೈಯಕ್ತಿಕ ಅನಿಸಿಕೆಗಳ ಸುಳಿವಿನಲ್ಲಿ ದಾಂಪತ್ಯದ ಬದುಕನ್ನು ಅರ್ಥೈಸುವುದನ್ನು ಬಿಟ್ಟು ಎಚ್ಚೆತ್ತುಕೊಂಡೆ. ಹಠಾತ್ತನೆ ಮತ್ತೊಂದು ಸುಂದರ ಪ್ರಪಂಚಕ್ಕೆ ಜಾರಿದಂತಾಯ್ತು.

ಪ್ರೇಮದ ಬೆಳಕಿನಲ್ಲಿ ನೋಡಿದಾಗ ಆನಂದನ ಕಣ್ಣುಗಳು ಹೊಳೆ ಯುತ್ತಿದ್ದವು. ಅದೇ ನಗು, ಸುಂದರವಾದ ಮುಖ....ಎತ್ತರವಾದ

ನಿಲುವು ನಾನು ಮೆಚ್ಚಿಕೊಂಡರು,.... ನನ್ನವರು.

ಎಲ್ಲವನ್ನೂ ಎಲ್ಲರನ್ನೂ ಮರೆತು ನಾನು ಆನಂದನ ಪ್ರೀ[illegible] ನೋಟವನ್ನು ನೋಡುವುದರಲ್ಲೇ ತನ್ಮಯಳಾದೆ.

ಜಡತೆಯನ್ನು ಝಾಡಿಸಿ ಗೆಲುವಿನಿಂದ ಕೈಯೊಳಗಿದ್ದ ಹೂ ಮಾಲೆಯನ್ನು ಆನಂದನ ಕೊರಳಿಗೆ ಹಾಕುವಾಗ ನನ್ನ ನಗುವಿನ ಪ್ರತಿಛಾಯೆಯನ್ನು ಅವನ ಕಣ್ಣುಗಳಲ್ಲಿ ಕಂಡೆ.



# ಪ್ಲೇಗು

—ಲಲಿತಮ್ಮ ಡಾ॥ ಚಂದ್ರಶೇಖರ್

ಸಾವಿರದ ಒಂಭೈನೂರ ನಲವತ್ನಾಲ್ಕನೇ ಇಸವಿಯಲ್ಲಿ ನಮ್ಮೂರಿನಲ್ಲಿ ಪ್ಲೇಗು ಬಂತು.

ಸಿದ್ದಪ್ಪನ ಮನೆಯ ರಾಗಿ ಕಣಜದ ಮೇಲೆ ಇಲಿ ಸತ್ತು ಬಿದ್ದಿತ್ತಂತೆ!" ನಮ್ಮ ಮನೆಯಲ್ಲಿ ಕೆಲಸ ಮಾಡುತ್ತಿದ್ದ ವೆಂಕಟ ಸಮಾಚಾರ ತಂದ.

ವೆಂಕಟಾ....! ಈ ದಿನದ ಸುದ್ದಿ ಏನು ?" ನಾವೆಲ್ಲಾ ಕುತೂಹಲದಿಂದ ವೆಂಕಟನನ್ನು ಕೇಳುತ್ತಿದ್ದೆವು,

"ಸಿದ್ದಪ್ಪನ ಹೆಂಡತಿ ತಿಮ್ಮಕ್ಕನಿಗೆ ಪ್ಲೇಗು ಗಡ್ಡೆ ಕಾಣಿಸಿಕೊಂಡಿದೆ!" ವೆಂಕಟ ಸುದ್ದಿ ತಂದ, ವೆಂಕಟನೇ ನಮಗೆ ಪೇಪರು, ಸುದ್ದಿ ತಿಳಿಸುವ ಸುದ್ದಿಗಾರನೂ ಆಗಿದ್ದ.

ಮರುದಿನ ಬೆಳಿಗ್ಗೆ "ತಿಮ್ಮಕ್ಕ ಸತ್ತೇ ಹೊಪ್ಲು....ಕಡೇ ಕೇರೀಲಿ ಸಿಂಗಣ್ಣಂಗೆ..., ಬಿಕ್ಕಕಳಗೆ, ಶಿವೇಗೌಡನಿಗೆ ಪ್ಲೇಗು ಗಡ್ಡೆಯಂತೆ. ಊರೆಲ್ಲಾ "ಟಾಂ, ಟಾಂ" ಸಮಾಚಾರ ಹೊರಟಿತು.

## ಪ್ಲೇಗು

"ಊರಾಗೆ ಪ್ಲೇಗು ಬಂದೈತೆ, ಇಲಿಗ್ಳು ಸಾಯ್ತಾ ಅವೆ, ಜನಾ ಎಲ್ಲಾ ಊರು ಬಿಟ್ಟು ಊರಾಚ್ಗೆ ಗುಡಸ್ಲು ಹಾಕ್ಕೊಂಡು ಹೋಗ್ಬೇಕು ಕಾಣ್ರಪ್ಪೊ !" ಎಂದು ತಮಟೆ ತಮ್ಮಣ್ಣ ಪಟೇಲರ ಅಪ್ಪಣೆಯಂತೆ ಊರೆಲ್ಲಾ ಡಂಗುರ ಸಾರಿದ.

ಎಲ್ಲೆಲ್ಲೂ ಪ್ಲೇಗು ಮಾರಿಯದೇ ಮಾತು, 'ಗುಸ ಗುಸ' 'ವಿಸ ವಿಸ,

ಭಾವಿ ಕಟ್ಟೆಯ ಬಳಿ ನೀರು ಸೇದುವ ಹೆಂಗಸರು, ಬಿಂದಿಗೆಯನ್ನು ಹಗ್ಗದ ಸಮೇತ ನೀರು ಸೇದಲು ಭಾವಿಗೆ ಬಿಟ್ಟು ಅಲ್ಲೇ ಪ್ಲೇಗಿನ ಗಡ್ಡೆಯ ಬಗ್ಗೆ ಮಾತು, ಕತೆ.

"ಅಲ್ಲಿ ಇಲ್ಲಿ ಬಿತ್ತು, ಇಲ್ಲಿ ಇಲಿ ಬಿತ್ತು." ಎಲ್ಲೆಲ್ಲೂ ಇದೇ ಮಾತು ತಾಂಡ ವಾಡಿತು. ಹುಡುಗರಾದ ನಮ್ಮಗೆ ಎಲ್ಲೆಲ್ಲೂ ಇಲಿಗಳೇ ಬೀಳುತ್ತಿರುವಂತೆ ಅನ್ನಿಸಿತು.

"ಹಾಳಾದ ಇಲಿಗಳು ಎಲ್ಲೆಲ್ಲೋ ಬೀಳುತ್ತವೆಯಲ್ಲಾ........ನಮ್ಮ ಮನೆಯಲ್ಲಿ ಒಂದಾದರೂ ಪ್ಲೇಗ್ ಇಲಿ ಬೀಳಬಾರದೇ ? ಆಗ.... ಅಲ್ಲಿ....,ಇಲ್ಲಿ...., ಏನಂತೆ ನಮ್ಮ ಮನೆಯಲ್ಲೇ ಪ್ಲೇಗಿನ ಇಲಿ ಬಿದ್ದಿತ್ತು ನಾನೇ ಕಣ್ಣಿಂದ ನೋಡಿದೆ" ಎಂದು ಶಾಲೆಯಲ್ಲಿ ಸ್ನೇಹಿತರ ಮುಂದೆ. ಉಪಾಧ್ಯಾಯರ ಮುಂದೆ. ನಾನು ಕಣ್ಣಾರೆ ಕಂಡ ಸತ್ಯವನ್ನು ಹೇಳಬಹುದಲ್ಲವೇ ? ಎಂದು ಚಿಂತಿಸಿದೆ.

ನಮ್ಮ ಮನೆಯಲ್ಲಿ ಯಾವುದಾದರೂ ಒಂದು ಕೋಣೆಯಲ್ಲಿ 'ಮೂಲೆಯಲ್ಲಿ' 'ಇಲಿ ಕಾಣಬಹುದೇ ? ಎಂದು ಎಲ್ಲಾ ಕಡೆಗೆ ಕಣ್ಣಲ್ಲಿ ಕಣ್ಣಿಟ್ಟು ಹುಡುಕಾಡಿದೆ.

ಭತ್ತ ತುಂಬಿದ್ದ ಕೋಣೆಗೆ ಅಟ್ಟದಿಂದ ಇಳಿದು ನೋಡಿದೆ, ಅಲ್ಲಿ

'ಕಪ್ಪಗೆ' ಏನೋ ಕಂಡಿತು.

"ಇಲಿ ಏನೋ" ಎಂದು ಆಸೆಯಿಂದ ಹೋಗಿ ಕೈಯಿಂದ ಎತ್ತಿದೆ. ಅದು. ಎಂದೋ ತಿಂದು ಎಸೆದಿದ್ದಾ ಬಾಳೆ ಹಣ್ಣಿನ ಸಿಪ್ಪೆಯಾಗಿದ್ದು, ನಿರಾಶೆಯಾಯ್ತು.

ರಾಗಿ...ಅವರೆಕಾಳು, ಹುರುಳಿಕಾಳು,....ತುಂಬುವ ವಾಡೆ, ಮೂಡೆ....ಮೂಟೆಗಳ ಸಂದಿಯಲ್ಲೆಲ್ಲಾ ಹಣಿಕಿದೆ. ಎಲ್ಲೂ ಇಲಿಯ ಸುಳಿವಿಲ್ಲ "ಇಲಿಗಳಿಗೆ ನಮ್ಮ ಮನೆಗೆ ಬರಲು ಹೆದರಿಕೆಯೆ ? ಎಂದು ಕೊಂಡೆ.

ಸ್ಕೂಲಿಗೆ ಹೋಗಬೇಕಾದರೆ ಪ್ಲೇಗು ಬಂದು ಸತ್ತ ತಿಮ್ಮಕ್ಕನ ಮನೆಯ ಮುಂದೆಯೇ ಹೋಗಬೇಕು,

ತಿಮ್ಮಕ್ಕನಿಗೆ ಕಚ್ಚಿದ ಪ್ಲೇಗಿನ ಸೊಳ್ಳೆ ನನಗೂ ಕಚ್ಚಿ ಪ್ಲೇಗಿನ ಗಡ್ಡೆ ಬರಲಿ, ಅದು ಹೇಗಿರುತ್ತದೆಯೋ ! ಏನಾಗುತ್ತದೆಯೋ....! ನೋಡಿ ಒಂದು ಕಥೆ ಬರೆಯುಬೇಕು.

"ನನಗೆ ಪ್ಲೇಗು ಬಂದರೆ ಹೇಗಿರಬಹುದು ! ಮನೆಯಲ್ಲಿ ಎಲ್ಲ ರಿಗೂ ಘಾಬರಿ....! ಆತಂಕ! ಕಳವಳ! ಭಯ ದುಃಖ! ನನ್ನನ್ನು ಮಲಗಿಸಿ ಬಿಟ್ಟು...., ಸುತ್ತಲೂ ಎಲ್ಲರೂ ಸೇರಿಕೊಂಡು. "ಹೊ" ಎಂದು ಅಳುತ್ತಿರುತ್ತಾರೆ,

"ಮನೆತನಕ್ಕೆಲ್ಲಾ ನಾನೊಬ್ಬಳೆ ಮಗಳು... ನನಗೆ ಚಿಕ್ಕ ವಯಸ್ಸಿಗೆ ಹನ್ನೆರಡು ವರ್ಷಕ್ಕೆ ಮದುವೆ ಮಾಡಬೇಕೆಂದು ನನ್ನ ಅಜ್ಜಿ ನನ್ನ ತಂದೆಯನ್ನು ಪೀಡಿಸುತ್ತಿದ್ದರು.

"ಮಂಕರಿಯ ತುಂಬಾ ಚಿನ್ನದ ಒಡವೆಗಳನ್ನಿಟ್ಟು, ನಿಮ್ಮ ಮಗಳು ಮದುವೆ ಮಾಡಿಕೊಳ್ಳುತ್ತೇವೆ" ತಂದೆಗೆ ಯಾರ್‍ಯಾರೋ ಹೇಳಿ ಕಳುಹಿಸಿದ್ದರು.

"ಬರೀ...ಲೋಹವನ್ನು ಧರಿಸುವ ವಿಗ್ರಹವೇ ! ನಾನು—! ಲೋಹಗಳನ್ನಿಟ್ಟು, ಕಲ್ಲಿನ ಕೋಟೆ ಕಟ್ಟಿದ ಇವರ ಮನೆಯಲ್ಲಿ ಬಂದಿಯಾಗಿ, ಉಸಿರಾಡುವ ಶವವಾಗಿ... ಅನ್ನ ತಿನ್ನುವ ಭೂತವಾಗಿ ಬದುಕಲೇ !" ಖಂಡಿತ ಸಾಧ್ಯವಿಲ್ಲ; ನಾನು ಚಿಂತಿಸುತ್ತಿದ್ದೆ.

.....

"ಹಾಗೇನಾದರೂ ಮಂಕರಿ ಒಡವೆ ಧರಿಸುವ ಸಂದರ್ಭ ಬಂದರೆ ಪ್ಲೇಗಿನ ಸೊಳ್ಳೆಯನ್ನು ಹುಡುಕಿಕೊಂಡು ಬಂದು, ಅದರ ಕೈಲಿ ಕಚ್ಚಿಸಿ ಕೊಳ್ಳುವುದೇ ಒಳ್ಳೆಯದಲ್ಲವೇ ?" ಎಂದು ಕೊಳ್ಳುತ್ತಿದ್ದೆ.

ಆದರೇ.... ಈ ಚಿಂತೆಗಳಿಗೆಲ್ಲಾ 'ಫುಲ್ ಸ್ಟಾಪ್' ಸಿಕ್ಕುವಂತೆ ಊರಿನಲ್ಲಿ ಪ್ಲೇಗಿನಿಂದ ಏಳೆಂಟು ಸಾವುಗಳಾದ "ನಮ್ಮನ್ನೆಲ್ಲಾ ಊರಿನಿಂದ ಬೇರೆ ಕಡೆಗೆ ರವಾನೆ ಮಾಡಬೇಕೆಂದು ! ನನ್ನ ತಂದೆ ಯೋಚನೆ ಮಾಡಿದರು.

"ಬೆಂಗಳೂರಿನಲ್ಲಿರುವ ನಮ್ಮ ಚಿಕ್ಕಪ್ಪನ ಮನೆಗೆ ನನ್ನನ್ನು ಓದಲು ಕಳುಹಿಸಬೇಕೆಂದು ಏರ್ಪಾಡು ಮಾಡಿದರು".

"ಇದರಿಂದಾಗಿ ನನಗೆ ತುಂಬಾ ನಿರಾಶೆಯಾಯ್ತು". ಬೆಂಗಳೂರಿಗೆ ಓದಲು ಹೋಗಿ ಬಿಟ್ಟರೆ ಪ್ಲೇಗಿನ ಸಮಾಚಾರ...." ಇಲಿಗಳು ಎಲ್ಲೆಲ್ಲಿ ಬಿದ್ದವು..., ಪ್ಲೇಗಿನಿಂದ ಯಾರ್‍ಯಾರು ಸತ್ತರು,.... ಇವೆಲ್ಲಾ ವಿಶೇಷ ಸಮಾಚಾರಗಳು ಕಿವಿಗೆ ಬೀಳುವುದು ಹೇಗೆ ?

"ಇಂಥಹ ಸ್ವಾರಸ್ಯಕರವಾದ ಪ್ರಸಂಗ ತಪ್ಪಿಸಿಕೊಂಡು ಬೆಂಗ

ಊರಿಗೆ ಹೋಗುವುದರಲ್ಲಿ ವಿಶೇಷ ಏನಿದೆ...?

"ಇಷ್ಟಕ್ಕೂ ಒಂದು ವರ್ಷ ಓದುವುದನ್ನು ನಿಲ್ಲಿಸಿ ಮತ್ತೆ ಓದಿದ ರಾಯ್ತು !" ಎಂದು ನನ್ನ ಭಾವನೆ.

"ಎಲ್ಲರೂ ಊರನ್ನು ಬಿಟ್ಟು, ಊರಾಚೆ ಸೋಮೇಶ್ವರನ ಗುಡಿಯ ಹತ್ತಿರ ಗುಡಿಸಲುಗಳನ್ನು ಹಾಕಿಕೊಂಡು ಇರುವುದೆಂದು ಏರ್ಪಾಡಾಗಿತ್ತು".

"ಊರಾಚೆ, ಹೊಲ... ಗದ್ದೆ...., ತೋಟಗಳು, ಬೆಟ್ಟ-, ಗುಡ್ಡ-, ಪೈರು ಪಚ್ಚೆಗಳ ನಡುವೆ ಗುಡಿಸಲಿನಲ್ಲಿ ವಾಸಿಸಿ, ಪ್ರಕೃತಿ ಯ್ಯರ ಮೃದೃಶ್ಯವನ್ನು ನೋಡಿ ನಲಿದಾಡಬೇಕೆಂಬ !" ನನ್ನ ಆಶೆ ನಿರಾಶೆ ಯಾಗುವಂತೆ" ನಾಳೆ ಬೆಳಿಗ್ಗೆ ಬೆಂಗಳೂರಿಗೆ ನಾವು ಹೊರಡಬೇಕು' ಎಂದು ನಮ್ಮ ತಂದೆ ಏರ್ಪಾಡು ಮಾಡಿಯೆ ಬಿಟ್ಟರು.

ನಮ್ಮನ್ನು ಕ್ಲೋಸ್‌ಪೇಟೆವರೆಗೆ ಕರೆದುಕೊಂಡು ಹೋಗಿ ಬಿಡು ವುದಕ್ಕಾಗಿ ಕಮಾನು ಗಾಡಿ ಸಿದ್ಧಪಡಿಸತೊಡಗಿದರು, ಕ್ಲೋಸ್‌ಪೇಟೆ ಯಿಂದ ಬೆಂಗಳೂರಿಗೆ ರೈಲಿನಲ್ಲಿ ಹೋಗುವುದಿತ್ತು. ನನಗೆ ಅತ್ಯಂತ ನಿರಾಶೆಯಾಯ್ತು. ಅಂಗಳದಲ್ಲಿ ನಾನು ನೆಟ್ಟು ಬೆಳೆಯಿಸಿದ ಗುಲಾಬಿ ಗಿಡಗಳು ಹೂ ಬಿಟ್ಟಿದ್ದುವು. ಸುತ್ತಲೂ 'ಘಮ್' ಎಂದು ವಾಸನೆ ಬೀರುವ ಸೀಮೆದವನದಗಿಡ ಕುಂಡದ ತುಂಬಾ ತುಂಬಿಕೊಂಡು, ಹಸಿರು ಹಸಿರಾಗಿ ಕಂಗೊಳಿಸುತ್ತಾ ಪರಿಮಳವನ್ನು ಬೀರಿ ನನ್ನನ್ನು ಕರೆಯುತ್ತಿತ್ತು.

ಬೆಳಗುಮುಂಜಾನೆ ನಾನು ಎದ್ದಕೂಡಲೇ, ಗುಲಾಬಿಹೂಗಳನ್ನು ನೋಡಿ..., ಸ್ವಲ್ಪಹೊತ್ತು ಗುಲಾಬಿಗಿಡದ ಬಳಿ ಕುಳಿತಿದ್ದು, ಸೀಮೆ ದವನದ ಗಿಡದ ಕಂಪನ್ನು ಹೀರಿ, ಎರಡು ಗಿಡಗಳಿಗೂ ನೀರು ಹಣಿಸಿ,

ಸೀಮೆದವನದ ಗಿಡವನ್ನು ಕೈಗಳಿಂದ ಮೃದುವಾಗಿ ನೇವರಿಸಿ- ನಂತರ ಮುಖ ತೊಳೆಯಲು ಹೋಗುತ್ತಿದ್ದೆ,

ಅಂಥ ಸೀಮೇದವನದ ಗಿಡವನ್ನು ಬಿಟ್ಟು ನಾನು ಬೆಂಗಳೂರಿಗೆ ಹೇಗೆ ಹೋಗಲಿ ! "ನನಗೆ ಯಾವುದೂ ಬೇಡ...., ಸೀಮೆದವನದ ಗಿಡ ಮಾತ್ರಬೇಕು ! ಅದು ನನಗೆ ಅವಶ್ಯಕ" ಎನ್ನಿಸಿತು.

ರಾತ್ರಿ, ಎಲ್ಲಾ ನಿದ್ದೆ ಬಾರದೆ ಹೊರಳಾಡಿದೆ. "ಸೀಮೆದವನದಗಿಡಕ್ಕೆ ಏನು ಏರ್ಪಾಡು ಮಾಡಬೇಕು?" ಎಂಬುವುದೇ ನನ್ನ ಚಿಂತೆಯಾಗಿತ್ತು.

ಕೊನೆಗೆ... "ನನ್ನ ಜತೆಗೆ ಸೀಮೆದವನದ ಗಿಡವನ್ನು ಬೆಂಗಳೂರಿಗೆ ತೆಗೆದುಕೊಂಡು ಹೋಗುವುದೆಂದು ಮನಸ್ಸಿನಲ್ಲಿ ಮೂಡಿಬಂದಾಗ..... ಯಾವುದೋ ಕೋಟೆಯನ್ನು ಗೆದ್ದಷ್ಟು ನನಗೆ ಆನಂದವಾಗಿತ್ತು.

ಬೆಳಿಗ್ಗೆ ಕಮಾನಗಾಡಿಯಲ್ಲಿ ನಮ್ಮ ಹಾಸಿಗೆ, ಪೆಟ್ಟಿಗೆ ಬಟ್ಟೆಗಳು ಪುಸ್ತಕಗಳು ಎಲ್ಲಾ ಇಟ್ಟು ನಮ್ಮ ತಾಯಿ ನನ್ನ ತಮ್ಮಂದಿರು ನಾನು ಎಲ್ಲಾ ಹೊರಟೆವು.

ಬೆಂಗಳೂರಿನವರೆಗೆ ಜತಗೆ ಬಂದು ಬಿಟ್ಟುಬರಲು ಆಳುಗಳನ್ನು ನಮ್ಮ ತಂದೆ ನಮ್ಮ ಜತೆಗೆ ಕಳುಹಿಸಿದರು.

ಊರಬಾಗಿಲವರೆಗೆ ನಮ್ಮನ್ನು ಬೀಳ್ಕೊಡುವುದದ್ಕಾಗಿ....ನಮ್ಮ ತಂದೆ ಆಳು-ಕಾಳುಗಳು....ಎಲ್ಲಾ ಬಂದಿದ್ದರು. ಊರ ಬಾಗಿಲ ಹತ್ತಿರ ಮತ್ತೊಮ್ಮೆ "ಎಲ್ಲಾ ಹುಷಾರಾಗಿರಿ ,ಚೆನ್ನಾಗಿ ನೋಡಿಕೊಳ್ಳಿ....ಚೆನ್ನಾಗಿ ಓದಿಕೊಳ್ಳಿ," ಎಂದು ಹೇಳುವುದಕ್ಕಾಗಿ ನನ್ನ ತಂದೆ ಗಾಡಿಯ ಸಮೀಪಕ್ಕೆ ಬಂದು ನಿಂತಾಗ ಅವರ ಕಣ್ಣಿಗೆ ನನ್ನ ತೊಡೆಯ ಮೇಲೆ ಇರಿಸಿಕೊಂಡಿದ್ದ ಸೀಮೆ ದವನನ ಗಿಡವ ಕುಂಡ ಕಣ್ಣಿಗೆ ಬಿದ್ದು...." ಇದನ್ನೇತಕ್ಕಮ್ಮ ಬೆಂಗಳೂರಿಗೆ ರೈಲಿನಲ್ಲಿ ಹೊತ್ತುಕೊಂಡು ಹೋಗ್ತಿಯಾ-! ನೀನು ಬೆಂಗ ಳೂರಿನಿಂದ ಬರುವ ವೇಳೆಗೆ ಎಲ್ಲಾ ತೋಟಗಳಲ್ಲೂ ಬೇಕಾದಷ್ಟುಸೀಮೆ ದವನದ ಗಿಡಗಳನ್ನು ನಿನಗಾಗಿ ಹಾಕಿಸಿರುತ್ತೇನೆ. ನೀನು ನೋಡಿ ಸಂತೋಷಪಡುವಿಯಂತೆ" ಆ ದವನದ ಕುಂಡ ಕೊಡು ಇಲ್ಲಿ! ಎಂದು

"ಗಾಡಿಯನ್ನು ನಿಲ್ಲಿಸು!" ಎಂದು ಗಾಡಿ ಹೊಡೆಯುತ್ತಿದ್ದ ವರದಯ್ಯನಿಗೆ ಹೇಳಿ ಗಾಡಿ ನಿಲ್ಲಿಸಿ ನನ್ನ ತೊಡೆಯ ಮೇಲಿದ್ದ ಸೀಮೆದವನದ ಕುಂಡವನ್ನು ತೆಗೆದುಕೊಂಡು, ಗಾಡಿಯಿಂದ ಆಚೆ ನಿಂತಿದ್ದ ವೆಂಕಟನ ಕೈಗೆ ಕೊಟ್ಟು "ಇದು ಲಲಿತಮ್ಮನಿಗೆ ಪ್ರೀತಿಯಾದ ಗಿಡ, ಆ ಯಮ್ಮ ಬೆಂಗಳೂರಿನಿಂದ ಬರೋವರ್ಗ್ಗೆ ಚನ್ನಾಗಿ ನೀರು ಹಾಕಿ, ಚೆನ್ನಾಗಿ ನೋಡ್ಕೋ!" ಎಂದು ನನ್ನ ತಂದೆ ವೆಂಕಟನಿಗೆ ಹೇಳಿದರು.

ಸೀಮೆದವನದ ಗಿಡವನ್ನು ಬಿಟ್ಟು ಹೋಗುವುದು ನನ್ನ ಪ್ರಾಣ ವನ್ನೆ ಬಿಟ್ಟು ಹೋದಂತಾಗಿತ್ತು. ಊರು ದೂರವಾಯ್ತು. ನನ್ನಮನ ಸ್ಸಿಗೆ ಸಂತೋಷವಿರಲಿಲ್ಲ. ಕ್ಲೋಸಪೇಟೆ ತಲ್ಪಿದೆವು.

ಮೈಸೂರಿನಿಂದ ಬೆಂಗಳೂರಿಗೆ ಹೋಗುವ ರೈಲು ಕ್ಲೋಸಪೇಟೆ ರೈಲುನಿಲ್ದಾಣಕ್ಕೆ ಬಂತು, ನಾವೆಲ್ಲಾ ರೈಲಿಗೆ ಹತ್ತಿದೆವು. ಬೆಂಗಳೂರು ಸೇರಿ ದೆವು. ಅಲ್ಲಿ ಸ್ಕೂಲಿಗೆ ಸೇರಿಸಿದರು.

ನನಗೆ ಯಾವಾಗಲೂ "ಊರಿನಲ್ಲಿ ಪ್ಲೇಗು ಹೇಗಿದೆಯೋ! ನನ್ನ ಸೀಮೆ ದವನದ ಗಿಡ ಹೇಗಿದೆಯೋ ! ಎಂಬ ನೆನಪು ಮರುಕಳಿಸುತ್ತಿತ್ತು.

ಶಾಲೆಗೆ ಹೋಗುವಾಗ ದಾರಿಯಲ್ಲಿ ಯಾವ ಗಿಡಿಗಳನ್ನು ನೋಡಿದರೂ ನನ್ನ ಸೀಮೆದವನದ ಗಿಡದ ನೆನಪು ಬರುತ್ತಿತ್ತು.

ಶಾಲೆಯಲ್ಲಿ ಉಪಧ್ಯಾಯರು ಪಾಠಮಾಡುವಾಗ, ಎಲ್ಲಾ ಊರಿನ ನೆನಪು, ಪ್ಲೇಗಿನ ನೆನಪು ಸೀಮೆದವನದ ಗಿಡದ ನೆನಪು

ನಾವು ಬೆಂಗಳೂರಿಗೆ ಬಂದು, ಒಂದುವಾರ ಕಳೆದಿತ್ತು. ಊರಿನಿಂದ ಬೊಮ್ಮಣ್ಣ ಬಂದ "ವೆಂಕಟನಿಗೆ ಪ್ಲೇಗು ತಗುಲಿರುವುದಾಗಿಯೂ ಅವನಿಗೆ ಕೊಡಬೇಕಾದ ಪ್ಲೇಗಿನ ಇಂಜೆಕ್ಷನ್ ಕೂಡಲೇ ಕಳುಹಿಸಬೇಕೆಂದು !" ನನ್ನ ಚಿಕ್ಕಪ್ಪನಿಗೆ ನನ್ನ ತಂದೆ ಕಾಗದ ಬರೆದು ಕಳುಹಿಸಿದ್ದರು.

ನನ್ನ ಚಿಕ್ಕಪ್ಪ ತಕ್ಷಣವೇ ಅಂಗಡಿಗೆ ಹೋಗಿ, ವೆಂಕಟನಿಗೆ ಕೊಡ ಬೇಕಾದ ಇಂಜೆಕ್ಷನ್‌ಗಳನ್ನೆಲ್ಲಾ ತಂದು ಬೊಮ್ಮಣ್ಣನ ಕೈಗೆ ಕೊಟ್ಟು ಕಳುಹಿಸಿದರು.

ವೆಂಕಟನೂ ಸುಮಾರು ಹದಿನೈದು ಹದಿನಾರು ವರ್ಷದವನು. ಅವನಿಗೆ ತಾಯಿ ಇರಲಿಲ್ಲ: ತಂದೆ, ಅಣ್ಣ, ಎಲ್ಲರೂ ಬೇಸಾಯ ಮಾಡುತ್ತಿದ್ದರು.

ವೆಂಕಟ ಕಾಡಿಗೆ ಹೋದಾಗ ಫಳಫಳನೆ ಹೊಳೆಯುವ ಕಕ್ಕೆ ಜೀರ ದುಂಬಿಗಳನ್ನು ಹಿಡಿದು ಕಡ್ಡಿ ಪೆಟ್ಟಿಗೆಯಲ್ಲಿ ಹಾಕಿ ತರುತ್ತಿದ್ದ. ನೇರಳೆಹಣ್ಣು, ಕಾರೆ ಹಣ್ಣು, ಗೇರು ಹಣ್ಣು ತರುತ್ತಿದ್ದ, "ತಾಯಿ ಇಲ್ಲದ ಹುಡುಗ" ಎಂದು ಎಲ್ಲರೂ ಅವನನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದರು.

"ಅಂಥಹ ವೆಂಕಟನಿಗೆ ಪ್ಲೇಗು ತಗುಲಿದೆ! ಎಂದಾಗ ನಮಗೆಲ್ಲಾ ಆದ ಸಂಕಟ ಹೇಳಲು ಸಾಧ್ಯವಾಗಿತ್ತು.

"ಅವನು ಹೇಗಿರುವನೋ!" ಎಂದು ಅವನಿಗೆ ಅನ್ನ ಇಡುತ್ತಿದ್ದ ನನ್ನ ತಾಯಿ ತಲ್ಲಣಿಸಿದರು.

"ಎಲ್ಲರೂ ಊರಿಗೆ ಹೊರಟು ಹೋಗೋಣ!" ಎನ್ನಿಸಿತು ನಮಗೆಲ್ಲಾ

"ಎರಡು ದಿನಗಳ ನಂತರ ವೆಂಕಟ ಸತ್ತು ಹೋದ ಸಮಾಚಾರವನ್ನು ಕಾಗದ ಹೊತ್ತು ತಂದಿತು. ಅವನಿಗಾಗಿ ನನ್ನ ತಾಯಿ ಚಿಕ್ಕಪ್ಪಂದಿರು ನಾವು ಎಲ್ಲಾ ಸಾಕಷ್ಟು ಕಣ್ಣೀರು ಹರಿಸಿದೆವು.

"ಅವನನ್ನು ನಾವು ಕೊನೆಗಾಲದಲ್ಲಿ ಪುನಃ ನೋಡಲಿಲ್ಲವಲ್ಲಾ!" ಎಂದು ವ್ಯಥೆಪಟ್ಟೆವು.

"ಕೊನೆಗಾಲ...ಎನ್ನಲು ಅವನು ಪ್ಲೇಗುಬಂದು ಸಾಯುವನೆಂದು... ಊಹಿಸಿದ್ದೆವೇ?"

"ಎಲ್ಲರೂ ಊರು ಬಿಟ್ಟು ಗುಡಿಸಲುಗಳನ್ನು ಹಾಕಿಕೊಂಡು ಬಂದಾಗ, ಅನೇಕರ ಮನೆಯ ಹಿತ್ತಿಲಿನಲ್ಲಿ ಫರಂಗಿ ಹಣ್ಣುಗಳು ಬಿದ್ದಿದ್ದುವು. ವೆಂಕಟ ಫರಂಗಿ ಹಣ್ಣುಗಳನ್ನು ಕಿತ್ತುಕೊಳ್ಳಲು ಹೋಗಿ ಯಾರೂ ಇಲ್ಲದ

ಪಾಳು ಊರಿನಲ್ಲಿ ಎದೆ ಒಡೆದಂತಾಗಿ, ಹೆದರಿ, ಗುಡಿಸಲಿಗೆ ಬಂದು ಜ್ವರ ಬಿದ್ದನಂತೆ, ಹೆದರಿದ್ದಾನೆಂದು ಪೂಜಾರಯ್ಯನ ಕೈಲಿ ಪೂಜೆ ಹಾಕಿಸಿ ಯಂತ್ರ ಕಟ್ಟಿಸಿದರಂತೆ, ಜ್ವರಬಂದು ಆಮೇಲೆ ಪ್ಲೇಗಿನ ಗಡ್ಡೆ ಕಾಣಿಸಿಕೊಂಡ ಮೇಲೆ, ಕ್ಲೋಸ್‌ಪೇಟೆಯಿಂದ ಡಾಕ್ಟರನ್ನು ಕರೆಸಿ ತೋರಿಸಿದರು. ಅವರು ಹೇಳಿದ ಇಂಜೆಕ್ಷನ್ ಟ್ಯೂಬ್‌ಗಳನ್ನು ಬೆಂಗಳೂರಿನಿಂದ ತೆಗೆದುಕೊಂಡು ಹೋಗುವ ವೇಳೆಗೆ ವೆಂಕಟ ಸತ್ತೇ ಹೋಗಿದ್ದ.

ದಿನಗಳು ಉರುಳಿದುವು, ನಾವೆಲ್ಲಾ ಪರೀಕ್ಷೆ ಮುಗಿದ ನಂತರ ಬೇಸಿಗೆ ರಜೆಯಲ್ಲಿ ಊರಿಗೆ ಹೋದೆವು.

ನಾನು ಮನೆಗೆ ಹೋದ ಕೂಡಲೇ ಅಂಗಳದ ಕಡೆಗೆ ನೋಡಿದೆ. ಎಲ್ಲಾ ಗಿಡಗಳೂ ಒಣಗಿದ್ದುವು.

ನಳನಳಿಸುತ್ತಿದ್ದ ಸೀಮೆದವನದ ಗಿಡದ ಕುಂಡ ಮೂಲೆಯಲ್ಲಿ ಒಡೆದು ಬಿದ್ದಿತ್ತು, ಅದರೊಳಗಿನ ಸೀಮೆದವನದ ಗಿಡ ಒಣಗಿ ಕಡ್ಡಿಯಾಗಿ 'ಅನಾಥೆ'ಯಂತೆ ಇದ್ದದ್ದನ್ನು ಕಂಡು ನನಗೆ ಅತ್ಯಂತ ಸಂಕಟವಾಯ್ತು.

ಸೀಮೆದವನದ ಗಿಡ ಸತ್ತು, ಒಣಗಿ ಕರುಕಲಾಗಿ ನಿಂತಿತ್ತು.

ಆದರೆ ವೆಂಕಟ, ಸತ್ತು ಸ್ವರ್ಗಕ್ಕೆ ಹೋಗಿ ಬಿಟ್ಟಿದ್ದಾನೆ. ವರ್ಷಗಳೆಷ್ಟೋ ಕಳೆದಿವೆ, ನಮ್ಮ ತೋಟದಲ್ಲಿ ಬೇಕಾದಷ್ಟು ಹೂಗಿಡಗಳನ್ನು ಬೆಳೆಸಿದರೂ ನನ್ನ ಬಾಲ್ಯದ ನೆನಪು ಮರೆತಿಲ್ಲ.

ನನ್ನ ಬಾಲ್ಯದಲ್ಲಿ ಬೆಳೆಸಿದ ಸೀಮೆದವನದಗಿಡ, ಅದನ್ನು ನನ್ನ ಜತೆಗೆ ತೆಗೆದುಕೊಂಡು ಹೋದದ್ದು ಮತ್ತೆ ಬಿಟ್ಟು ಹೋಗಬೇಕಾದ ಪ್ರಸಂಗ

ಬಂದದ್ದು. ಬೆಂಗಳೂರಿನಿಂದ ಮರಳಿ ಬಂದಾಗ ಆ ಸೀಮೆದವನದಗಿಡ ಒಣಗಿ ಹೋದದ್ದನ್ನು ಕಂಡ ನೆನಪು ಇಂದಿಗೂ ಮರೆಯಾಗಿಲ್ಲ;

ಸೀಮೆದವನದಗಿಡ ಹಿಡಿದು ನಿಂತಿದ್ದ ವೆಂಕಟ...ನಾವು ಎಷ್ಟೋ ದೂರದವರೆಗೆ ಗಾಡಿಯಲ್ಲಿ ಹೋಗುವಾಗ....ನಿಂತಿದ್ದ. ತಾಯಿ ಇಲ್ಲದ ಹುಡುಗ ವೆಂಕಟ ನಮ್ಮ ಮನೆಯ ಎಲ್ಲರ ಹೃದಯದಲ್ಲಿ ಚಿರಸ್ಥಾಯಿ ಯಾಗಿ ಹಳೆಯ ನೆನಪುಗಳನ್ನು ಉಳಿಸಿ ಹೋಗಿಯೇ ಬಿಟ್ಟಿದ್ದ.

ನಾವು ಅವನನ್ನು ಇನ್ನೆಲ್ಲೂ ನೋಡುವಂತೆಯೇ ಇಲ್ಲ.

—೦—

# ಮರಳಿ ಮನೆಗೆ

—ಶ್ರೀಮತಿ ಎ. ಪಂಕಜ

ದೂರದಿಂದ, ಸೈಕಲ್ ಮೇಲೆ ಬರುತ್ತಿದ್ದ ಪೇದೆಯನ್ನು ನೋಡಿ, ಕೈಯಲ್ಲಿ ಹಿಡಿದಿದ್ದ ಕೊಡಲಿಯನ್ನು ಪಕ್ಕಕ್ಕೆ ಇಟ್ಟು "ರಾಜಗ ಕೊಂಡೋವ್ನಂಗೆ ಕಾಣ್ತವ್ನೆ. ಇತ್ತಾಗೆ ಯಾರವ್ರು ಅಂತ ಬರತವ್ನೋ ಕಾಣರಲ್ಲ" ಎಂದು ಕೈಯನ್ನು ನೆತ್ತಿಗೆ ಅಡ್ಡ ಹಿಡಿದು ಕಣ್ಣು ಪಿಳಿಕಿಸಿದ ಕೆಂಪ.

ಕೆಂಪನ ಹತ್ತಿರ ಸೈಕಲ್ಲು ನಿಂತಿತು ಆದರಿಂದ ಇಳಿದ ಅಂಚೆಯ ಪೇದೆ. "ಏಯ್ ಮುದುಕಪ್ಪ. ಕೆಂಪ ನೀನು ತಾನೆ" ಎಂದು ಕೇಳಿ ಅವನ ಕೈಗೆ ಒಂದು ಕಾಗದ ಕೊಟ್ಟು ಹೊರಟುಹೋದ. ಕೆಂಪ ಆ ಕಾಗದವನ್ನು ಭಯ ಭಕ್ತಿಯಿಂದ ನೋಡಿದ. ಬಿಳಿಯ ಕಾಗದದ ಮೇಲೆ ಮೂಡಿರುವ ನೀಲಿಯ ಅಕ್ಷರಗಳು ಬರಿಯ ಮಸಿಯಲ್ಲಿ ಬಿಡಿಸಿದ ರಂಗೋಲಿಯ ಚಿತ್ತಾರಗಳಂತೆ ಕಂಡವು. ತನಗೆ ಕಾಗದ ಬರೆಯುವವರು ಯಾರಿದ್ದಾರೆ. ಹಿಂದೆ ತನ್ನ ದೊಡ್ಡಪ್ಪ ಮಗ ಸತ್ತಾಗ ಹೀಗೆ ಟಪಾಲು ಬಂದಿತ್ತು. ಈಗ ಇಷ್ಟು ದಿನದ ಮೇಲೆ ಮತ್ತೆ ಕಾಗದ ಬಂದಿದೆ. ಇದರಲ್ಲಿ ಏನು ಕೆಟ್ಟಸುದ್ದಿ ಇದೆಯೋ ಎಂದು ನಿಂತಕಡೆ ಇಂದಲೇ ಕೈ ಜೋಡಿಸಿದ. ಸೌದೆ ಕಡಿಯಲೆಂದು ತಂದಿದ್ದ ಕೊಡಲಿಯನ್ನು ಹೆಗಲಿಗೇರಿಸಿ ರಾಜಣ್ಣನ ಮನೆಗೆಂದು ದಾಪುಗಾಲು ಹಾಕಿದ ಕೆಂಪ,

"ಬಾ ಕೆಂಪ ಕೂತ್ಕೊ" ಎಂದು ರಾಜಣ್ಣ ಕೆಂಪನಿಗೆ ಕುರ್ಚಿಯನ್ನು ತೋರಿಸಿದ.

ಅದಕ್ಕೆ ಕೆಂಪ ಒಲ್ಲೆ ಎನ್ನುವಂತೆ ತಲೆ ಆಡಿಸಿದ, "ಅಂತು ಬಿಡಿ ಬುದ್ಧಿ, ನಿಮ್ಮ ಸಮಕ್ಕೆ ನಾವು ಕೂರೋಗ ಅಗುತ್ತಾ. ! ಈ ಕಾಜಗ ಒಸಿ ಓದಿ ಹೇಳಿ ಬುದ್ದಿ" ಎಂದು ಆ ಕಾಗದವನ್ನು ರಾಜಣ್ಣನ ಮುಂದೆ ಇಟ್ಟು ದೂರಹೋಗಿ ಕೈಕಟ್ಟಿ ನಿಂತ್ತ.

ಕೆಂಪ ಕೊಟ್ಟ ಕಾಗದವನ್ನು ಓದುತ್ತಿದ್ದ ರಾಜಣ್ಣನ ಮುಖ ಕೋಪದಿಂದ ಕೆಂಪಗಾಯಿತು, "ನಾನು ಮೊದಲಿನಿಂದಲೂ ಹೇಳ್ತಾ ಇದ್ದೆ. ಮಕ್ಕಳನ್ನು ಜೀತಕ್ಕೆ ಹಾಕಬೇಡ ಎಂದು. ಕೇಳಿದ್ಯಾ ನೀನು. ಒಬ್ಬ ಮಗನನ್ನು ಕಳಕೊಂಡಾಯಿತು, ಈಗ..." ಅಷ್ಟಕ್ಕೇ ರಾಜಣ್ಣ ಸುಮ್ಮನಾದುದನ್ನು ಕಂಡು ಕೆಂಪನ ಎದೆ ಹೊಡೆದುಕೊಳ್ಳಲಾರಂಭ ವಾಯಿತು,

"ಬುದ್ಧಿ ಏನಾಯಿತೂಂತ ಸ್ವಲ್ಪ ಸರಿಯಾಗಿ ಹೇಳಿ ನನ್ನೊಡೆಯ ನಿಮ್ಮ ಕಾಲಿಗೆ ಬೀಳ್ತೀನಿ ದೇವರು. ನಮ್ಮ ನಂಜ ಸುಖವಾಗವ್ನ ಹೇಳಿ"

"ಕೆಂಪ ಈಗ ನಿನ್ನ ಮಗ ನೀನು ಕೆಲಸ ಮಾಡೋದಕ್ಕೇಂತ ಬಿಟ್ಟಿದ್ದೆಯಲ್ಲ, ಅಲ್ಲಿಲ್ಲ. ಅವನು ಒಂದು ವಾರದಿಂದ ಪತ್ತೆ ಇಲ್ಲವಂತೆ. ಅದಕ್ಕೆ ನಿಮ್ಮ ಹತ್ತಿರ ಬಂದಿದ್ರೆ ಕೂಡಲೇ ಕಳಿಸೋದು" ಎಂದು ಆ ಇಂಜನೀಯರ್ ಸಾಹೇಬರು ನಿನಗೆ ಕಾಗದ ಬರೆದಿದ್ದಾರೆ,"

"ಅದ್ಯಾಕ ಹಂಗ ಮಾಡವ್ನೆ ನಂಜ. ಅಲ್ಲೂ ಇಲ್ಲ, ಇಲ್ಲೂ ಬಂದಿಲ್ಲ ಅಂದಮೇಲೆ ಎಲ್ಲಿ ಹೋಗಿದ್ದಾನು, ಅನ್ನ ಇಕ್ಕಿದ ದಣೀಗೆ ಹೀಗೆ ಮೋಸ ಮಾಡಬಹುದಾ. ಇವನು ನನ್ನ ಕೈಗೆ ಸಿಕ್ಕಲಿ ಚರ್ಮ ಸುಲಿದು ಇಲ್ಲ ಅನ್ನಿಸಿಬಿಟ್ಟೇನು."

"ಛೆ, ನಿಮ್ಮಗಳ ಯೋಗ್ಯತೇನೆ ಇಷ್ಟು, !....! ಮಗ ಅಲ್ಲಿಂದ ಹೊರಟುಹೋಗಿ ಒಂದುವಾರ ಆಗಿದೆ. ಆ ಮಗ ಎಲ್ಲಿಹೋದ ? ಯಾಕೆಹೋದ ? ಹೊಟ್ಟೆಗೆ ತಿಂದನೆ ಬಿಟ್ಟನೆ ಏನು ಎತ್ತ ಅಂತ ಯೋಚನೆ ಮಾಡ್ದೆ, ಅವನು ಸಿಕ್ಕಲಿ ಚರ್ಮ ಸುಲಿತೀನಿ ಅಂತೀಯಲ್ಲ. ನೀನು ಮನುಷ್ಯನಾ ?...! ನಿನ್ನ ಮಗನಾಗಿ ಹುಟ್ಟಿದಕ್ಕೆ ನಿನ್ನಕೈಲಿ ಚರ್ಮ ಸುಲಿಸಿಕೊಳ್ಳೋದೊಂದೇ ಬಾಕಿ ಇದ್ದದ್ದು. ಅವನಿಗೆ ಊಟ ತಿಂಡಿ ಬಟ್ಟೆಬರೆ ವಿದ್ಯೆ ಬುದ್ಧಿ ಎಂದು ಏನೂ ಕೊಡೋದಕ್ಕೆ ಯೋಗ್ಯತೆ ಇಲ್ಲದಿದ್ದರೂ, ಜೀತಕ್ಕೆ ಇಡೋದಕ್ಕೆ. ಅವನ ಚರ್ಮ ಸುಲಿಯೋದಕ್ಕೆ ಮಾತ್ರ ನಿನಗೆ ಅಧಿಕಾರ ಅದೆಯಲ್ಲ. ತಂದೆ ಆಗಿದ್ದಕ್ಕೆ ಸಾರ್ಥಕ ಆಯ್ತು ಬಿಡು."

ರಾಜಣ್ಣನ ಮಾತುಗಳು ನಿಧಾನವಾಗಿ ಮೆದುಳಿಗೆ ಬಿಸಿ ಮುಟ್ಟಿಸಿ ದಾಗ ಕೆಂಪನ ಕಣ್ಣುಗಳು ಒದ್ದೆಯಾದವು. "ರಾಜಪ್ಪ ನೀವು ಹೇಳೋ ಮಾತು ನಿಜ. ಆದರೆ ಧಣೀರು ರಂಗಿ ಮದುವೆಗೇಂತ ಕೊಟ್ಟ ಸಾವಿರರೂಪಾಯಿ ತೀರಿಸೋ ಯೋಗ್ಯತೆ ಇಲ್ಲದೇ ತಾನೆ ನಾನು ನಂಜನ್ನ ಅಲ್ಲಿ ಬಿಟ್ಟದ್ದು. ಅದರಿಂದಾನೆ ಆ ಸಾವಿರಕ್ಕೆ ಬಡ್ಡಿ ಇಲ್ಲ. ಈಗ ಸಾಹೇಬರು ಈ ತಕ್ಷಣ ಹಣಕೊಡು, ನಿನ್ನಮಗ ಇಲ್ಲಿಲ್ಲವಲ್ಲ ಅಂದರೆ ನಾ ಏನು ಮಾಡೊಂದು. ಪಟ್ಟಣದಲ್ಲಿ ಮೈಸೂರು ಪೇಟೆಯಲ್ಲಿ ಸುಖವಾಗಿ ಉಡ್ಕೊಂಡು, ತಿಂದ್ಕೊಂಡು, ಒಂದಿಷ್ಟು ಅವರ ಮನೆ ಚಾಕರಿ ಮಾಡ್ಕೊಂಡು ಇರಾದೆ ಇವನಿಗೇನಾತ್ತೂಂತೀನಿ. ಅವನು ಅಲ್ಲಿ ಇದ್ದಿದ್ದರೆ ನನಗೆ ಬಡ್ಡಿ ಕಟ್ಟೋ ಯೋಚನೆ ಇರ್ತಿರಲಿಲ್ಲ...."

"ನೋಡು ಕೆಂಪ ನೀನು ಮತ್ತೆ ಮತ್ತೆ ಅದೇ ಹೇಳೋದಾದ್ರೆ ನಿನ್ನಿಷ್ಟಬಂದಹಾಗೆ ಮಾಡ್ಕೊ ಹೋಗು, ಆ ಇಂಜನಿಯರ್ ನಿನಗೆ ಸಾಹೇಬ. ದೊಡ್ಡಮನುಷ್ಯ, ನಿನಗೆ ಸಾವಿರ ರೂ ಸಾಲ ಕೊಟ್ಟುಬಿಟ್ಟ. ಈ ಜನ್ಮದಲ್ಲಿ ನಿನಗೆ ಅದನ್ನ ತೀರಿಸೋದಕ್ಕೆ ಸಾಧ್ಯವಿಲ್ಲ. ಅದಕ್ಕೆ ನೀನು ಆಟ ಆಡ್ಕೊಂಡು ಇರಬೇಕಾಗಿದ್ದ ಮಗೂನ್ನ ಚಾಕರಿಗೇಂತ

ಬಿಟ್ಟುಬಿಟ್ಟೆ. ಮುಂದೆ ಅವನ ಗತಿ ಏನೂಂತ ಒಂದುಸಾರಿ ಆದರೂ ಯೋಚನೆ ಮಾಡ್ದೆಯಾ? ಅವನಿಗೆ ಶಾಲೆಗೆ ಸೇರಿಸಲಿಲ್ಲ. ವಿದ್ಯೆ ಕಲಿಸಲಿಲ್ಲ. ನೀನು ಮಾಡಿದ ಸಾಲಕ್ಕೆ ಅವನು ಬಲಿ. ನಾಳೆ ಅವನ ಕಾಲಕ್ಕೆ ಈ ಸಾಲದ ಬಡ್ಡಿ ಮುಗಿದಿರೋದಿಲ್ಲ. ಅವನ ಮಕ್ಕಳಿಗೂ ಮತ್ತೆ ಅದೇ ಗತಿ ತಾನೆ. ?

"ಏನೋ ದೇವರು ನನ್ನ ಮಗ ಸುಖವಾಗಿರ್ಲಿ ಅಲ್ಲಿ ಅನ್ಕೊಂಡು....

"ಈಗ ಕೈಕಟ್ಟಿ ಸುಮ್ಮನೆ ವ್ಯಥೆ ಪಡೋದರಿಂದ ಏನು ಪ್ರಯೋಜನವಿಲ್ಲ. ಹಿಂದೆ ನಿಗ್ರೋಗಳನ್ನು ಬಿಳಿಯರು ಗುಲಾಮರಾಗಿ ಕೊಂಡುಕೊತಿದ್ದರಂತೆ, ಆದರೆ ನಮ್ಮ ದೇಶದಲ್ಲಿ ಈಗಲೂ ಆ ಗುಲಾಮರಿಗಿಂತ ನೀಚವಾದ ಜೀತಪದ್ಧತಿ ತಪ್ಪಲಿಲ್ಲ. ವಂಶಪಾರಂಪರ್ಯವಾಗಿ ಬರುವ ಶಾಪ ಇದು. ಅದನ್ನ ತಪ್ಪಿಸೋಕೆ ಪ್ರಯತ್ನ ಮಾಡದೆ ಕುರಿಗಳ ಹಾಗೆ ಬದುಕಿದರೆ ಬಂತೇನು."

"ನನ್ನ ಏನು ಮಾಡು ಅಂತೀರ ದಣಿ. ಹೇಳಿ ನನ್ನೊಡೆಯಾ ಮಾಡೇಬಿಡುವ."

"ಮೊದಲು ನನ್ನ ದಣಿ ಅಂತ ಕರೆಯೋರನ್ನ ಬಿಡು, ಆಮೇಲೆ ನಾಳೆ ಬೆಳಗ್ಗೆ ನನ್ನ ಜೊತೆಗೇ ಬಸ್ಸಿಗೆ ಬಾ. ಆ ಇಂಜಿನಿಯರ್‌ನ್ನ ಒಂದು ಕೈನೋಡ್ಕೋತೀನಿ. ಈಗ ಹೋಗಿ ಊಟ ಮಾಡು ಹೋಗು" ಎಂದ ರಾಜಣ್ಣ ತನ್ನ ಮಾತು ಮುಗಿಸಿದ್ದ,

ಕೆಂಪನಿಗೆ ಆ ದಿನ ಪೂರ್ತಿ ಹಳೆಯ ಸ್ಮೃತಿ. ರಾಜಣ್ಣ ದೇವರಂತ ಮನುಷ್ಯ. ಅವನು ಹೇಳಿದ್ದು ದಿಟ. ನನಗೆ ಬುದ್ಧಿ ಬರಲಿಲ್ಲ ಗೊಳೋ ಅಂತ ಅತ್ತ.

ಎರಡು ಗಂಡು ಒಂದು ಹೆಣ್ಣು ಹುಟ್ಟಿದ ಮೇಲೆ ಕೆಂಪನ ಹೆಂಡತಿ ಜ್ವರ ಬಂದು ಸತ್ತಳು. ಕೆಂಪ ದೊಡ್ಡ ಮಗನನ್ನ ಜಮೀನ್ದಾರರ

ಮನೆಯಲ್ಲಿ ಜೀತಕ್ಕೆ ಹಾಕಿದ್ದ. ಎರಡನೆಯ ಮಗಳು ರಂಗಿ ಚೆಲುವೆಯಲ್ಲ. ಮೊದಲೇ ಕಪ್ಪಾಗಿದ್ದ ಅವಳ ಮುಖ ಸಿಡುಬಿನ ಕಲೆ ಇಂದ ಮತ್ತಷ್ಟು ವಿಕಾರವಾಗಿತ್ತು. ಈ ರಂಗಿಗಾಗಿ ಅಲ್ಲದಿದ್ದರೂ ಅವಳಿಂದ ಸಾವಿರ ರೂಪಾಯಿ ಬಳುವಳಿ ಆಗಿ ಸಿಕ್ಕುತ್ತೆ ಎನ್ನುವ ಸಂತೋಷದಿಂದ ಮಾದ ಅವಳ ಮದುವೆ ಆದ. ಇಂಜನೀಯರಿಂದ ಸಾಲವಾಗಿ ಪಡೆದು ಕೊಟ್ಟಿದ್ದ ಸಾವಿರ ರೂಪಾಯಿ ಮಾದನಿಗೆ ಎಷ್ಟು ಕಾಲ ಇದ್ದೀತು. ಮಾದ ರಂಗಿಗೆ ಸೋಡಾ ಚೀಟಿ ಕೊಟ್ಟುಬಿಟ್ಟ. ಇವಳ ಮದುವೆಯ ಸಾಲದ ಬಡ್ಡಿಗಾಗಿ ಚಿಕ್ಕ ಮಗ ನಂಜ ಮೈಸೂರಿನ ವಂಟಿಕೊಪ್ಪಲಿನ ಭವ್ಯ ಬಂಗಲೆಯೊಂದರಲ್ಲಿ ಇಂಜನೀರ್ ಮನೆಯಲ್ಲಿ ಬಿಟ್ಟಿ ಚಾಕರಿ ಮಾಡುವ ಆಳಾಗಿದ್ದ.

ಕೆಂಪನ ದೊಡ್ಡಮಗ ಚಿಕ್ಕಕೆಂಪನಿಗೆ ತನ್ನ ತಮ್ಮನನ್ನು ತನ್ನಂತೆಯೇ ಇನ್ನೊಬ್ಬರ ಮನೆಯಲ್ಲಿ ದುಡಿಯುವ ಆಳಾಗಿ ಸೇರಿಸಿದ್ದು ಕೇಳಿ ತುಂಬಾ ವ್ಯಥೆ ಆಯ್ತು. ಆ ಯೋಚನೆಯಲ್ಲಿ ಮೈ ಮರೆತು ನಡು ರಸ್ತೆಯಲ್ಲಿ ನಡೆಯುತ್ತಿದ್ದ ಅವನ ಮೇಲೆ ಲಾರಿ ಹರಿಯಿತು. ವಿಷಯ ತಿಳಿದ ಕೆಂಪ ರಂಗಿಯೊಂದಿಗೆ ಅತ್ತು ಅತ್ತು ತರ್ಪಣ ನೀಡಿದ್ದ.

ಕೆಂಪನಿಗೆ ಮೊದಲಿನ ಸಾಮರ್ಥ್ಯವಿರಲಿಲ್ಲ. ಕೈಗೆ ಬಂದಿದ್ದ ದೊಡ್ಡ ಮಗ ಇಂದಿಲ್ಲ ನಾಳೆ ತಮ್ಮನ್ನು ನೋಡಿ ಕೊಳ್ಳುತ್ತಾನೆ ಎಂದು ಇಟ್ಟು ಕೊಂಡಿದ್ದ ಆಸೆ ನಿರಾಶೆ ಆಗಿ ಚಿಂತೆ ಆವರಿಸಿತು. ಇದರಿಂದ ಮುಪ್ಪಾದ ಅವನ ಶಕ್ತಿ ಕುಂದಿತು. ಸೌದೆ ಒಡೆಯುವುದಿರಲಿ, ಆ ಕೊಡಲಿಯನು ಎತ್ತಲೂ ಕೈಲಾದ ಎನ್ನುವಂತಾಗಿತ್ತು ಅವನ ಸ್ಥಿತಿ. ಮನೆ ಸೇರಿದ ಮಗಳು ರಂಗಿ ಮತ್ತು ತನ್ನ ಉದರ ಪೋಷಣೆಯೇ ಕಷ್ಟವಾಗಿರುವಾಗ ಇಂಜನೀಯರವರಿಂದ ಪಡೆದ ಸಾಲ ಹಿಂತಿರುಗಿಸಿವುದು ಹೇಗೆ. ಹೀಗಾಗಿ ಹತ್ತು ವರ್ಷದ ಬಾಲಕ ನಂಜನಿಗೆ ಆ ಮನೆಯ ಚಾಕರಿಯಿಂದ ಬಿಡುಗಡೆ ಇರಲಿಲ್ಲ.

ಅಪ್ಪಾ ನನ್ನ ಹಳ್ಳಿಗೆ ಕರ್ಕೊಂಡು ಹೋಗು. ನಮ್ಮನೆ ಮುದ್ದೆ ಗಂಜಿಯೇ ಸಾಕು. ಈ ಸಾಹೇಬರ ಮನೆ ಸಣ್ಣಕ್ಕಿ ಅನ್ನಾನು ಬೇಡ.

ಈ ಸುಖಾನೂ ಬೇಡ, ನಾನೂ ನಿನ್ನ ಹತ್ತಿರ ಇರ್ತೀನಿ ಅಪ್ಪ ಎಂದು ನಂಜ ತಂದೆ ಮುಖ ಕಂಡಾಗಲೆಲ್ಲ ಗೋಗರೆದಿದ್ದ.

ಯಾಕೋ?, ಎಂದು ಕೆಂಪ ಕೇಳಿದ್ದಕ್ಕೆ "ಅವರು ನನಗೆ ಚಿತ್ರ ಹಿಂಸೆ ಕೊಡ್ತಾರಪ್ಪ, ಆ ಸಾಹೇಬರೇನೋ ಒಳ್ಳೇವರೆ, ಆದರೆ ಆ ಅಮ್ಮಾವರು ಇದಾರಲ್ಲ, ಅವರು ಚಿತ್ರ ಹಿಂಸೆ ಕೊಡ್ತಾರಪ್ಪ....ಒಂದು ದಿನ ಕೈಜಾರಿ ಸೀಮೆಎಣ್ಣೆ ಬಾಟಲಿ ಕೆಳಗೆ ಬಿದ್ದು ಒಡೀತು, ಅದಕ್ಕೆ ಕಬ್ಬಿಣದ ಸೌಟನ್ನು ಕಾಸಿ ಬರೆಹಾಕಿದರು. ನೋಡು ಇನ್ನೂ ಗುರ್ತು ಹಂಗೇ ಐತೆ. ಕಾಫಿ ಕುಡಿಯೋ ಪಿಂಗಾಣಿ ಬಟ್ಟಲು ಯಾರೋ ಕೆಳಗೆ ಹಾಕಿದಕ್ಕು ನನ್ನ ದನಬಡಿದಂಗೆ ಬಡಿದು ಬೀದಿಗೆ ತಳ್ಳಿದರು; ದಿನವೆಲ್ಲಾ ಉಪಾಸಾ ಬಿದ್ದಿದರೂ ಕರೆದು ಉಣಾಕೆ ಇಡಲಿಲ್ಲ, ಇನ್ನೊಂದು ಸಲ ಆಯಮ್ಮನ ಸೀರೆ ಬಕೇಟಿಗೆ ತಗುಲಿ ಚೂರು ಹರೀತು. ಆಯ್ತು ರಂಪವೋ ರಂಪ ನನ್ನ ತಲೇನ ಗೋಡೆಗೇ ಚಚ್ಚೀಚಚ್ಚಿ ಹೊಡೆದರು. ನನಗೆ ಜ್ಞಾನತಪ್ಪಿ ಕೇಳಗೆ ಬಿದ್ದೆ. ಸಂಜೇವರೆಗೂ ಎಚ್ಚರ ಆಗಲಿಲ್ಲ, ಸಾಹೇಬರು ಗಾಬರಿ ಆಗಿ ಡಾಕ್ಟರನ್ನು ಕರೆಸಿ ಚುಚ್ಚುಮದ್ದು ಹಾಕಿಸಿದರು. ಅವರು ಮಗು ಅತ್ತರೆ, ಅಳಿಸ್ತೀನಿ ಸರಿಯಾಗಿ ನೋಡಿ ಕೊಳೋದಿಲ್ಲ ಎಂದು ನನಗೆ ಛಡಿ ಏಟು.

ಕೆಂಪನಿಗೆ ನಂಜ ತಪ್ಪುತಪ್ಪಾಗಿ ಹೇಳಿದ್ದ ಆ ಮಾತುಗಳೆಲ್ಲ. ನೆನಪಿಗೆ ಬಂತು. ಈಗಾಗಲೇ ನಂಜ ಆ ಮನೆ ಬಿಟ್ಟುಹೋಗಿ ಒಂದುವಾರ ಆಯಿತು. ಇನ್ನೂ ಬಂದಿಲ್ಲ ಆಯ್ಯೋ ನನ್ನ ಮಗ, ಪುಟ್ಟ ಎಲ್ಲಿಹೋದ್ಯೋ ಎಂದು ಕೆಂಪ ಜೋರಾಗಿ ಅತ್ತು, ಕಂಬಳಿಯಲ್ಲೇ ಕಣ್ಣೊರಿಸಿಕೊಂಡ.

ಮರುದಿನ ರಾಜಣ್ಣನ ಜೊತೆಯಲ್ಲಿ ಕೆಂಪ ಮೈಸೂರಿನ ಇಂಜನೀಯರ್ ಮನೆಗೆ ಬಂದಾಗ, ಅವರನ್ನು ನೋಡಿ ಆತನ ಮುಖ ಚಿಕ್ಕದಾಯಿತು. ಆಕೆಯಂತೂ, "ಅಯ್ಯೋ ಕೆಂಪ, ನನ್ನ ಹೊಟ್ಟೇಲಿ ಹುಟ್ಟಿದ ಮಗು ಬೇರೆ ಅಲ್ಲ ಅವನು ಬೇರೆ ಅಲ್ಲ ಅಂತ ನೋಡ್ಕೊಂಡೇ ನೋಡು. ಆದರೆ ನಿನ್ನ ಮಗ ಹೇಳ್ದೆ ಕೇಳ್ದೆ ಹೊರಟುಹೋದ" ಎಂದು ಗೊಳೋ ಎಂದು ಅತ್ತು, ಸೆರಗಿನಲ್ಲಿ ಕಣ್ಣೊರಿಸಿ ಕೊಂಡರು.

ಇದೆಲ್ಲಾ ಇವರ ಕಪಟನಾಟಕ ಎಂದು ಚೆನ್ನಾಗಿ ಅರ್ಥಮಾಡಿ ಕೊಂಡಿದ್ದ ರಾಜಣ್ಣ, "ಅದೆಲ್ಲಾ ಆಮೇಲಾಗಲಿ, ಮೊದಲು ನಮ್ಮ ಹುಡುಗನನ್ನ ಏನು ಮಾಡಿದಿರಿ ಹೇಳಿ. ಇಲ್ಲದಿದ್ದರೆ ಪೋಲಿಸ್ ಕಂಪ್ಲೈಟ್ ಕೊಡಬೇಕಾಗುತ್ತೆ. ನಿಮ್ಮ ಮೇಲೆ ಕೇಸ ಹಾಕಬೇಕಾಗುತ್ತೆ" ಎಂದು ಕೂಗಾಡಿದಾಗ ಇಂಜನೀಯರ್ ಸಾಹೇಬರು ರಾಜಣ್ಣನನ್ನು ಬೇಡಿ ಕೊಂಡರು. ತಮ್ಮದು ತಪ್ಪಾಯಿತು ಎಂದು ಹೇಳಿದರು, ತಾವೇ ಒಂದು ಸಾವಿರ ರೂಗಳ ಸಾಲಕ್ಕೆ ಬರೆದು ಅದರಲ್ಲಿ ಕೆಂಪನ ಹೆಬ್ಬೆಟ್ಟನ್ನು ಒತ್ತಿಸಿದೆ ಅವರೆದುರಿಗೇ ಹರಿದು ಚೂರು ಮಾಡಿದರು.

ಅಲ್ಲಿಗೆ ಕೆಂಪನಿಗೆ ಸಾಲದ ಹೊರೆ ಹೋಗಿತ್ತು. ಆದರೂ ಮಗ ಎಲ್ಲಿಹೋದ ಎಂದು ತಿಳಿಯದೆ ವ್ಯಥೆಗೊಂಡಿದ್ದ ಅವನ ಮನಸ್ಸಿಗೆ ಶಾಂತಿ ನೆಮ್ಮದಿ ಇರಲಿಲ್ಲ.

ಇತ್ತ ನಂಜನಿಗೆ ಆ ಮನೆಯಿಂದ ಬಿಡುಗಡೆ ಬೇಕಾಗಿತ್ತು. ಅದಕ್ಕೆ ದಾರಿಯಾವುದು ಎಂದೂ ತಿಳಿಯದ ವಯಸ್ಸು. ಒಂದುದಿನ ಬೆಳಿಗ್ಗೆ ಮನೆಯ ಮುಂದೆ ಹೋಗುತ್ತಿದ್ದ ಸರ್ಕಸ್ಸಿನ ಆನೆಗಳನ್ನು ಆಸೆಯಿಂದ ನೋಡಿದ. ಆ ಆನೆಗಳ ಹಿಂಡು ಹಿಂಡಾಗಿ ಹೋಗುತ್ತಿದ್ದ ಹುಡುಗರ ಗುಂಪಿನಲ್ಲಿ ತಾನೂ ಸೇರಿಕೊಂಡ. ಸರ್ಕಸ್ಸಿನ ಡೇರಿಯನ್ನು ತಲುಪಿದ. ಅವನ ಸಂತೋಷಕ್ಕೆ ಎಣೆಯೇ ಇರಲಿಲ್ಲ. ಹೋ ಈ ಸ್ವೇಚ್ಛೆ ಸ್ವಾತಂತ್ರ್ಯ ತನಗೆ ಸಿಕ್ಕುವಂತಾದರೆ ಎಷ್ಟು ಹಾಯಾಗಿರಬಹುದು ಎಂದು ಕೊಂಡ. ಸಾಹೇಬರ ಮನೆಯು ನೆನಪು ಬಂದು, ಪುನಃ ಅಲ್ಲಿಗೆ ಹೋದರೆ

ತನಗೆ ಏಟು ಬೀಳುವುದು ಖಂಡಿತ ಎಂದು ಹೆದರಿಕೆಯಿಂದ ಮೈನಡುಗಿತು. ನಂಜ ಮತ್ತೆ ಆ ಮನೆಗೆ ಹೋಗುವ ಯೋಚನೆಯನ್ನು ಬಿಟ್ಟುಬಿಟ್ಟ.

ಬೆಳಗಿನಿಂದ ತಮ್ಮ ಜೊತೆಯಲ್ಲೇ ಇರುವ ಹುಡುಗನ ವಿಚಾರವನ್ನು ಕೇಳಿ ತಿಳಿದ ಆನೆಯ ಮಾವಟಿಗ, ಹನಿಕರಿಸಿ ಅವನಿಗೆ ಊಟ ತಿಂಡಿ ಗಳನ್ನು ಕೊಟ್ಟು ತನ್ನಬಳಿಯೇ ಇರುವಂತೆ ಹೇಳಿದ.

ಆನೆಯ ಮೈತಿಕ್ಕುವುದು, ಅದಕ್ಕೆ ಆಹಾರ ನೀಡುವುದು, ಅದರ ಸ್ಥಳದಲ್ಲಿ ಸ್ವಚ್ಛಮಾಡುವುದು ಇವೆಲ್ಲಾ ಕೆಲಸಗಳೂ ನಂಜನಿಗೆ ಸಾಕಾ ಯಿತು. ಸರ್ಕಸ್ಸಿನ ಆಟಗಳು, ಆಬ್ಯಾಂಡ್ ಎಲ್ಲಾ ಮೊದಲೆರಡು ದಿನ ಚೆನ್ನಾಗಿತ್ತು. ಆಮೇಲೆ ಬೇಸರ ತಂದಿತ್ತು. ಆದಿನ ರಾತ್ರಿ ಆಟ ಮುಗಿದು ಮಲಗಿದಾಗ ನಡುರಾತ್ರಿ ಆಗಿದ್ದು ಬೇಗ ನಿದ್ರೆ ಬರವ ನಂಜ ಮರುದಿನ ಬೆಳಿಗ್ಗೆ ಬೇಗ ಏಳಲಿಲ್ಲ. ಅವನಿಗೆ ಹಾಗೆ ಎಚ್ಚರವಾಗದೆ ನಿದ್ದೆ ಬಂದುದರ ಪರಿಣಾಮ ಆನೆಯ ಮಾವಟಿಗನ ಕೈಯ ಬೆತ್ತದ ಹೊಡೆತ.

ನಂಜ ಅಲ್ಲಿಂದ ಕಾಲ್ತೆಗೆದ. ಆ ಸಂಜೆ ರೈಲ್ವೆ ನಿಲ್ದಾಣದಲ್ಲಿ ಕೂಲಿಯಾಗಿ ದುಡಿದು ಹೊಟ್ಟೆತುಂಬಿಸಿಕೊಳ್ಳುವುದೆಂದು ನಿರ್ಧರಿಸಿದ. ಆದರೆ ಲೈಸೆನ್ಸ್ ಇಲ್ಲದ ಇವನನ್ನು ಅಲ್ಲಿಯ ಪೋರ್ಟರುಗಳು ಪೋಲೀಸರಿಗೆ ಹಿಡಿದುಕೊಟ್ಟರು. "ಯಾಕೋ ಸೂಳೆಮಗನೆ ಬೇಕೇನೋ"! ಎಂದು ಬೂಟುಕಾಲಿನಲ್ಲಿ ಒದ್ದ ಪೋಲೀಸ್ ಅವನ ಕೈಯಲ್ಲಿದ್ದ ಎಂಟಾಣೆ ಬಿಲ್ಲೆಯನ್ನು ಕಿತ್ತುಕೊಂಡು ಆಚೆಗೆ ತಳ್ಳಿದ.

ನಂಜ ಬಳಿಯಲ್ಲಿಯೇ ಇದ್ದ ಬಸ್‌ನಿಲ್ದಾಣಕ್ಕೆ ಬಂದ. ಚಿಕ್ಕ ಹುಡುಗ ಏನು ಕೊಟ್ಟರೂ ತೆಗೆದುಕೊಳ್ಳುತ್ತಾನೆ ಎಂದು ಕೆಲವು ಪ್ರಯಾಣಿಕರು ಭಾರಿ ಟ್ರಂಕುಗಳನ್ನು ಅವನ ತಲೆಗೆ ಹೊರಿಸಿ ಒಂದೆರಡು ಮೈಲಿ ನಡೆಸುತ್ತಿದ್ದರು. ನಂತರ ಹತ್ತುಪೈಸೆ ಅವನ ಕೈನಲ್ಲಿಟ್ಟಾಗ, ನಂಜ ಆಶ್ಚರ್ಯದಿಂದ ಅದನ್ನು ಕಣ್ಣರಳಿಸಿ ನೋಡಿ 'ಇಷ್ಟೇನಾ' ? ಎಂದ ತಲೆ ಎತ್ತಿ ನೋಡಿದರೆ, "ಏನೊ, ಹಾಗೆ ನೋಡ್ತಿ! ಬೇಕಾದರೆ ಸುಮ್ಮನೆ ತೆಗೊಂಡು ಹೋಗು. ಇಲ್ಲಾಂದ್ರೆ ಪೋಲೀಸ್‌ಗೆ ಹಿಡ್ಕೊಡ್ತೀನಿ ನೋಡು ಎನ್ನುತ್ತಿದ್ದರು. ನಂಜ ಹೆದರಿ ಅಲ್ಲಿಂದ ಓಡುತ್ತಿದ್ದ.

ಈ ತರಹ ಕೂಲಿ ಕೆಲಸಮಾಡಿ ತನ್ನ ಹೊಟ್ಟೆ ತುಂಬಿಸಿಕೊಳ್ಳಲು ನಂಜನಿಗೆ ಸಾಧ್ಯವಾಗಲಿಲ್ಲ. ಗಲ್ಲಿಗಳಲ್ಲಿ, ತಮಿಳಿನಲ್ಲಿ ಹೊಲಸು ಮಾತುಗಳನ್ನಾಡುತ್ತಾ ಗೋಲಿಗಜ್ಜುಗಳನ್ನು ಆಡುತ್ತಾ, ಆರಾಮವಾಗಿ ಇದ್ದ ಹುಡುಗರ ಗುಂಪನ್ನು ಕಂಡು ಅವನಿಗೆ ಆಶ್ಚರ್ಯ. ಬೀದೀಲಿ ಬಿಸುಟಿರುವ ಎಂಜಲೆಲೆಯ ಊಟಕ್ಕೆ ನಾಯಿಗಳಂತೆ ಕಚ್ಚಾಡಿ, ಗಲ್ಲಿಯಲ್ಲಿ ಹೇಸಿಗೆಯ ಪಕ್ಕದಲ್ಲೇ ಬಿದ್ದ ಎಲೆಯಲ್ಲಿನ ಊಟ ಮಾಡಿ, ಆ ಹೊಲಸಿನಲ್ಲಿ ಹೊರಳಾಡಲು ಈ ಜನಕ್ಕೆ ಅಸಹ್ಯ ಆಗುವುದಿಲ್ಲವೆ ಎಂದು ನಂಜ ಯೋಚಿಸಿ ತನ್ನ ಮೈ ನೋಡಿಕೊಂಡಾಗ, ಅವನಿಗೆ ನಗು ಬಂತು. ತನ್ನ ಈ ಬಟ್ಟೆಗಳು ಒಗೆದು ಅರುತಿಂಗಳಾಯಿತೇನೋ ! ಇಂಜನೀಯರ್ ಮನೆಯಲ್ಲಿ ಪ್ರತಿನಿತ್ಯ ಸ್ನಾನಮಾಡಬೇಕು. ಒಗೆದ ಬಟ್ಟೆ ಹಾಕಬೇಕು, ಹಾಗೆ ಚೊಕ್ಕಟವಾಗಿದ್ದ ತನ್ನ ಸ್ಥಿತಿ ಈಗೇನಾಗಿದೆ. ಕೊಳಕು ವಾಸನೆ ಗಬ್ಬುನಾಥ ತನ್ನ ಬಟ್ಟೆ, ತನ್ನ ತಲೆ, ತನ್ನ ಮೈ, ತಾನು ಎಲ್ಲಾ ಕೊಳಕು.

ನಂಜನಿಗೆ ಈ ಗಲ್ಲಿಯ ಹುಡುಗರೇ ಸ್ನೇಹಿತರಾದರು. ಅವರ ಜೊತೆಯಲ್ಲೇ ತನಗೂ ಊಟತಿಂಡಿಗಳು. ಯಾರೂಕಾಣದಾದಾಗ ಕೆರೆಯಲ್ಲಿ ಸ್ನಾನ, ಅದೇ ಬಟ್ಟೆ ಒಗೆದು ಒಣಗಿ ಮತ್ತೆ ಮೈಮೇಲೆ ಗೆಳೆಯರ ಬಳಗದಲ್ಲಿ ಸ್ವಲ್ಪಮಟ್ಟಿಗೆ ಶುಭ್ರವಾಗಿ ಲಕ್ಷಣವಾಗಿ ಕಾಣುತ್ತಿದ್ದ ಇವನನ್ನು ಹೋದಕಡೆ ಮನೆಯ ಹೆಂಗಸರು, ಅಯ್ಯೋ ಪಾಪ, ತಬ್ಬಲಿ ಹುಡುಗ ತಂದೆ ತಾಯಿ ಯಾರೂ ಇಲ್ಲ ಎಂದು ಕಾಣುತ್ತೆ ಎಂದು ಕನಿಕರಿಸಿ ಆಗಾಗ ಊಟ, ಪುಡಿಕಾಸುಗಳನ್ನು ಕೊಡುತ್ತಿದ್ದರು. ಹಲವರ ಮನೆಯಲ್ಲಿ ಕೆಲಸಕ್ಕೂ ಇಟ್ಟುಕೊಂಡರು.

ಹೀಗೆ ನಂಜ ಮೈಸೂರಿನ ಇಂಜಿನೀಯರ್ ಮನೆಯಿಂದ ಓಡಿ ಬಂದು ಹತ್ತು ಹನ್ನೆರಡು ವರ್ಷಗಳೇ ಆದವು.

ಆ ಕಾಲದಲ್ಲಿ ಸರ್ಕಸ್ಸಿನಲ್ಲಿ ಆನೆಯ ಮಾವಟಿಗನ ಬಳಿ ಆಳಾಗಿದ್ದ ರೈಲ್ವೆ ನಿಲ್ದಾಣದಲ್ಲಿ,ಬಸ್ಸಿನಬಳಿ ಕೂಲಿಯಾಗಿದ್ದ;ಬೀದಿಯಲ್ಲಿ ಭಿಕ್ಷುಕನಾಗಿ ತಿರುಪೆ ಬೇಡಿದ,ಪತ್ರಿಕೆ ಮಾರುವ ಹುಡುಗನಾಗಿದ್ದ,ಆವರಿವರ ಮನೆಯಲ್ಲಿ

ಕೆಲಸಮಾಡಿ ಒಳ್ಳೆಯ ಹುಡುಗ ಎನಿಸಿ ಕೊಂಡಿದ್ದ, ಹೀಗೆ ತನ್ನ ಜೀವನ ವನ್ನು ಕಳೆಯುತ್ತಿದ್ದ ನಂಜನಿಗೆ ಬೀದಿಯ ಹುಡುಗರ ಸ್ನೇಹದಿಂದಾಗಿ ಅವರವರು ಸೇದಿ ಬಿಸುಟ ಬೀಡಿ, ಸಿಗರೇಟು ತುಂಡುಗಳನ್ನು ಬಾಯಿ ಗಿಟ್ಟು ದಂ ಎಳೆಯುವ ಅಭ್ಯಾಸ ಆಯ್ತು. ತನ್ನ ಕಷ್ಟಾರ್ಜಿತ ಹಣದಿಂದ ತನ್ನ ಅಪೇಕ್ಷೆಗಳನ್ನು ಬಯಕೆಗಳನ್ನು ತೀರಿಸಲು ಸಾಧ್ಯವಿಲ್ಲವೆಂದು ಆವಾಗ ಹಣಕ್ಕಾಗಿ ಕದಿಯುವ ಆಸೆ ಹೆಚ್ಚು ಹೆಚ್ಚಾಯಿತು.

ಕೆಂಪನ ಮಗನಾಗಿ ತಾನು ಇಷ್ಟು ಕೀಳುಮಟ್ಟಕ್ಕೆ ಇಳಿಯಬಾರದು. ಹಾಗೆ ಕದ್ದು ಪೋಲಿಸರಿಗೆ ಸಿಕ್ಕರೆ ನಂತರ ಅವರು ಕೊಡುವ ಚಿತ್ರಹಿಂಸೆ ಸಹಿಸುವಶಕ್ತಿಯೂ ತನಗಿಲ್ಲ ಎಂದು ಆ ಆಸೆಯನ್ನು ಅದುಮಲು ಪ್ರಯತ್ನಿಸಿದ. ಈ ಗೆಳೆಯರ ಸಹವಾಸದಲ್ಲಿ ಇರುವವರೆಗೂ ತಾನು ಕೆಟ್ಟ ಚಟ ಗಳಿಂದ ದೂರ ಇರಲು ಸಾಧ್ಯವಿಲ್ಲ ಎಂದು ನಂಜನಿಗೆ ಖಾತ್ರಿ ಆಯಿತು. ಅದಕ್ಕೆ ಉಪಾಯ ಎಂದರೆ ಇಲ್ಲಿಂದ ದೂರ ಹೊರಟು ಹೋಗುವುದು ತನ್ನ ಬಾಲ್ಯದ ನೆನಪು, ಅಪ್ಪನ ಅಕ್ಕನ ಅಣ್ಣನ ನೆನಪು ಮೇಲಿಂದ ಮೇಲೆ ಬಂದು ಒಮ್ಮೆ ಅವರನ್ನು ಕಂಡು ಬರುವುದು, ಈಗ ಅಪ್ಪ ನನ್ನನ್ನು ಮತ್ತೆ ಎಲ್ಲಾ ಚಾಕರಿಗೆ ಒತ್ತಾಯವಾಗಿ, ಇಡಲಾರ ಎಂದು ಕೊಂಡ.

ತಮ್ಮ ಹಟ್ಟಿಯ ಕಡೆಗೇ ನಡೆದು ಬರುತ್ತಿರುವ ಯುವಕನನ್ನು ಕಂಡು ಧುಂಗಿ ಅಪ್ಪನನ್ನು ಕೂಗಿ "ಯಾರೋ ಬರ್ತ್ತವ್ರೆ ನೋಡು" ಎಂದಳು.

ಕೆಂಪ ಕೋಲನ್ನು ಊರಿ ಏಳಲು ಹೋದ.

"ಅಪ್ಪಾ ಚೆಂದಾಕಿದೀಯ, ಯಾರೂಂತ ಗೊತ್ತಾಗಲಿಲ್ಲವ ? ನಾನು ನಂಜ" ಎಂದು ತಂದೆಯನ್ನು ತಬ್ಬಿಕೊಂಡ ನಂಜ.

ಬಂದಿರುವವನು ತನ್ನ ತಮ್ಮ ನಂಜನೇ ಎಂದು ತಿಳಿದಾಗ ರಂಗಿ ಬಿಕ್ಕಿ ಬಿಕ್ಕಿ ಅತ್ತಳು. "ಹೀಗೇಕೆ ಅಳ್ತಿ ಮಗಳೆ. ನನ್ನ ಮಗ ನಂಜ ಬಂದವ್ನೆ. ಅವನಿಗೆ ಏನಾದರೂ ತಿನ್ನೋಕ್ಕೆ ತತ್ತಾ"

"ಅಪ್ಪ ಈಗ ಅಣ್ಣಯ್ಯನೂ ಇಲ್ಲದಿದ್ದರೆ ಎಷ್ಟು ಚೆನ್ನಾಗಿರ್ತಿತ್ತು ಅಲ್ಲವ." ಎಂದು ರಂಗಿ ಕಣ್ಣೊರಸಿಕೊಂಡಳು.

ಹೌದು. ಚಿಕ್ಕಕೆಂಪ ಇದ್ದಿದ್ದರೆ ಇಷ್ಟೊತ್ತಿಗೆ ಮನೆಯಲ್ಲಿ ಸೊಸೆ ಮೊಮ್ಮಕ್ಕಳು ಇರೋದು ಎಂದ ಕೆಂಪ ಕಣ್ಣೊರಿಕೊಂಡ.

ನೋಡು ಮಗ, ಇನ್ನು ನಂಗೇನು ಭಯ ಇಲ್ಲ. ಯಾವಾಗಲೂ ರಂಗೀದೆ ಯೋಚನೆ ಆಗಿತು. ನೀನು ಬಂದೆ. ಇನ್ನು ಸುಖವಾಗಿ ಪ್ರಾಣ ಬಿಟ್ಟೇನು, ಎಂದ ಕೆಂಪ ತನ್ನ ಹರಕಲು ಕಂಬಳಿಯಲ್ಲೇ ಕಣ್ಣೊರಿಸಿ ಕೊಂಡ.

—o—

# ಪ್ರಾಯಶ್ಚಿತ್ತ

—ದೇವಕಿ ಮೂರ್ತಿ

ಕಥೆ ಬರೆಯಬೇಕೆಂದು ಅದೇ ತಾನೆ ಪೆನ್ನು ಹಿಡಿದು ಕುಳಿತಿದ್ದೆ. ಅಷ್ಟರಲ್ಲಿ "ನಾಣಿ" ಎಂದು ರೂಮಿನ ಬಾಗಿಲು ದಬದಬಗೆ ಬಡಿದಾಗ ನನ್ನ ಸ್ಫೂರ್ತಿ ಕೆಡಿಸಿದವನನ್ನು ಗುಂಡಿಟ್ಟು ಕೊಂದುಹಾಕಿ ಬಿಡಲೆ ಎನ್ನುವಷ್ಟು ಕೋಪ ಬಂದಿತು.

ಪೆನ್ನು ಟೇಬಲಿನ ಮೇಲೆ ಒಗೆದು ನರಸಿಂಹಾವತಾರದಲ್ಲಿಯೇ ಬಾಗಲು ತೆರೆದೆ. ಕೂಡಲೇ ನನ್ನ ಕೋಪ ಆರಿ ತಣ್ಣಗಾಯಿತು, ಎದುರಿನಲ್ಲಿ ನಿಂತಿದ್ದವನು ಶಾಮು ! ನನ್ನ ಅಚ್ಚುಮೆಚ್ಚಿನ ಗೆಳೆಯ.

ಬೆಂಗಳೂರಿನಲ್ಲಿಯೇ ಇದ್ದರೂ ಅವನನ್ನು ನೋಡಿ ಹಲವಾರು ತಿಂಗಳುಗಳಾಗಿದ್ದವು. ಏಳು ಮನೆ ಚಿಲಿಯಂತೆ ಅವನು ತಿಂಗಳಿಗೊಂದು ರೂಮು ಬದಲಾಯಿಸಿರುತ್ತಾನೆ. ಆದ್ದರಿಂದ ಸ್ಯಾದಲ್ಲಿ ಯಾವ ಬಡಾ ವಣೆಯಲ್ಲಿದ್ದಾನೆ. ಎಂಬುದೇ ನನಗೆ ತಿಳಿದಿರಲಿಲ್ಲ.

"ಏನಯ್ಯ ಇಷ್ಟೊಂದು ಅಪರೂಪ? ಈಗ ಎಲ್ಲಿದ್ದೀಯೇ?" ಎಂದೆ.

"ಈಗ ಜಯನಗರದಲ್ಲಿ ಮನೆ ಮಾಡಿದ್ದೇನೆ."

"ಮನೆ!.... ನನಗೆ ಮದುವೆ ಇನ್ವಿಟೇಷನ್ ಬರಲೇ ಇಲ್ಲ.!"

ಮದುವೆ ಇದ್ದಕ್ಕಿದ್ದಂತೆ ಆಗಿ ಹೋಯಿತು. ಅದಕ್ಕೇನು "ಮ್ಯಾರೇಜ್ ಡಿನ್ನರ್" ಈಗ ಕೊಡುತ್ತೇನೆ. ಈ ಸಂಡೇ ನಮ್ಮ ಮನೆಗೆ

ಊಟಕ್ಕೆ ಬಂದುಬಿಡು." ಎಂದು ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ ಹೇಳಿದ.

"ಈ ಸಂಡೆ ಆಗುವುದಿಲ್ಲ. ಶಾಮು" ಎಂದು ನಾನು ಅನುಮಾನಿಸಿದೆ.

"ಏನಯ್ಯ ಅಂತಹ ರಾಜಕಾರ್ಯ ನಿನಗೆ?"

"ನೋಡು ಈ ಸಂಡೇ ಒಳಗೆ ನಾನು ಸ್ಪರ್ಧೆಗೆ ಕಥೆ ಕಳುಹಿಸ ಬೇಕು..."

"ಇನ್ನೂ ಈ ಹುಚ್ಚು ಬಿಟ್ಟಿಲ್ಲವೆ? ಸರಿ. ಅದಕ್ಕೇನು ಮಹಾ? ಪೋಸ್ಟ್‌ಮಾಡಲು ಎಷ್ಟು ಹೊತ್ತು ಆಗುತ್ತೆ?"

"ಅಷ್ಟು ಸುಲಭವಲ್ಲ. ಕಥೆ ಇನ್ನೂ ಸಿದ್ಧವಾಗಿಲ್ಲ. ಕಥಾ ವಸ್ತುವಿಗಾಗಿ ಯೋಚಿಸಿ ಯೋಚಿಸಿ ತಲೆ ಕಾದುಹೋಯಿತು. ಮೊದಲು ವಸ್ತು ಸಿಕ್ಕರೆ ತಾನೆ ಅದರ ಮೇಲೆ ಗುಡಿ ಕಟ್ಟುವುದು? ಇಷ್ಟು ಹೊತ್ತು ಮೇಜಿನ ಮುಂದೆ ಕುಳಿತಿದ್ದೆ. ಏನೊಂದೂ ಹೊಳೆಯಲಿಲ್ಲ."

"ನಿನಗೊಂದು ಕಥಾವಸ್ತು ತಾನೇ ಬೇಕು? ಸರಿ, ನನ್ನ ಕಥೆಯನ್ನೇ ಹೇಳುತ್ತೇನೆ. ಅದನ್ನೇ ಬರೆದು ಕಳುಹಿಸು, ಆದರೆ ನನ್ನ ಹೆಸರು ಮಾತ್ರ ಹಾಕಬೇಡ. ತಿಳಿಯಿತೊ?" ಎಂದು ಗಟ್ಟಿಯಾಗಿ ನಕ್ಕ ಶಾಮು.

"ಮಹಾರಾಯ ಬೇಗ ಹೇಳು. ಅದೇನು. ನಿನ್ನ ಕಥೆ?"

"ಮೊದಲು ಈ ಭಾನುವಾರ ನಮ್ಮನೆಗೆ ಊಟಕ್ಕೆ ಬರುತ್ತೇನೆಂದು ಪ್ರಾಮಿಸ್ ಮಾಡು."

"ಶಾಮು, ದಯವಿಟ್ಟು ಕ್ಷಮಿಸು. ಈಗ ಸಾಧ್ಯವಿಲ್ಲ. ನಾನು ಊರಿಗೆ ಹೋಗಿ ನನ್ನ ಹೆಂಡತಿ ಮಕ್ಕಳನ್ನು ಕರೆದುಕೊಂಡು ಬರಬೇಕು. ಆಗಲಿ ನಿಧಾನವಾಗಿ ಕುಟುಂಬ ಸಮೇತವೇ ಬರುತ್ತೇನೆ. ಈ ರೇಷನ್ ಕಾಲದಲ್ಲಿ ಒಂದು ಊಟ ಗಿಟ್ಟುತ್ತೆ ಅಂದ್ರೆ ಯಾರು ಬಿಡುತ್ತಾರೆ?"

"ಸರಿ ಹಾಗಾದ್ರೆ, ನಾನಿನ್ನು ಹೊರಡಲೆ?" ಎಂದು ಶಾಮು ಮೇಲೆದ್ದ.

"ನಿನ್ನ ಕಥೆ ಹೇಳಿ ಆಮೇಲೆ ಹೋಗಯ್ಯ" ಎಂದು ಅವನನ್ನು ಬಲವಂತವಾಗಿ ಕುರ್ಚಿಯ ಮೇಲೆ ಕೂಡಿಸಿ ಸಿಗರೇಟು ಕೈಗಿಟ್ಟೆ.

ಶಾಮು ಸಿಗರೇಟು ಹತ್ತಿಸುತ್ತ ಹೇಳಿದ,"ನನ್ನ ಕಥೆಗೆ 'ಪ್ರಾಯಶ್ಚಿತ್ತ' ಎಂದು ಹೆಸರು ಇಡು".

ಶಾಮು ಮುಖ ಗಂಭೀರವಾಯಿತು. ತನ್ನ ಕಥೆ ಹೇಳ ತೊಡಗಿದ,

"ನಾನು ಹುಟ್ಟಿದ್ದು ಪ್ರಕೃತಿ ಸೌಂದರ್ಯದ ನೆಲೆವೀಡಾದ ಮಲೆನಾಡಿನ ಮಡಿಲಲ್ಲಿ. ನಮ್ಮ ತಂದೆಗೆ ಮೂಡಿಗೆರೆಯಲ್ಲಿ ಕಾಫಿ ತೋಟವಿತ್ತು. ನಮ್ಮ ತಾಯಿ ಅದೇ ಊರಿನ ಶಾನುಭೋಗರ ಮಗಳು. ಅವರ ವಂಶ ಬೆಳಗಲು ನಾನೊಬ್ಬನೇ ಮಗ.

ನನ್ನನ್ನು ಚಿಕ್ಕಂದಿನಿಂದ ಎತ್ತಿ ಆಡಿಸಿದಳು ಸುಬ್ಬಿ. ಅವಳ ಗಂಡ ಸಂಜ ನಮ್ಮ ಕಾಫಿ ತೋಟದಲ್ಲಿ ಕೆಲಸ ಮಾಡುತ್ತಿದ್ದ. ತೋಟದ ಮಧ್ಯೆ ನಮ್ಮ ಮನೆಯ ಹತ್ತಿರದಲ್ಲೇ ಸುಬ್ಬಿಯ ಗುಡಿಸಲು ಇತ್ತು. ನನ್ನ ತಾಯಿ ನನ್ನ ಮೇಲೆ ಕೋಪಗೊಂಡಾಗ ನಾನು ಸುಬ್ಬಿಯ ಗುಡಿಸಲಿಗೆ ಓಡಿ ಹೋಗಿ ಅವಿತಿಟ್ಟುಕೊಳ್ಳುತ್ತಿದುದ್ದೂ ಉಂಟು. ಮನೆಯಲ್ಲಿ ಊಟ ಮಾಡದೆ ಸುಬ್ಬಿ ಮಾಡಿದ 'ಹಿಟ್ಟು ಹುಳಿ'ಯನ್ನು ಅನೇಕ ಬಾರಿ ಬೇಡಿ ತಿನ್ನುತ್ತಿದ್ದೆ. 'ನೀವು ಬ್ರಾಹ್ಮಣರು. ನಮ್ಮ ಮನೆಯಲ್ಲಿ ತಿನ್ನಬಾರದು. ಅಮ್ಮಾವರಿಗೆ ತಿಳಿದರೆ ನಮ್ಮನ್ನು ತೋಟದಿಂದ ಓಡಿಸಿಬಿಡುತ್ತಾರೆ' ಎಂದು ಹೇಳುತ್ತಲೇ ಸುಬ್ಬಿ ಕೊಡುತ್ತಿದ್ದಳು. ಸುಬ್ಬಿ ನಮ್ಮ ಮನೆಯಲ್ಲಿ ಕೆಲಸ ಮಾಡುತ್ತಿದ್ದ ವೇಳೆಯನ್ನು ಹೊಂಚಿ ನಾನು ಅವಳ ಮನೆಗೆ ಹೋಗಿ ಕದ್ದು ಹಿಟ್ಟು ತಿಂದಿದ್ದೂ ಉಂಟು,

ಒಂದುಬಾರಿ ಸುಬ್ಬಿ ಇದ್ದಕ್ಕಿದ್ದಂತೆ ನಮ್ಮ ಮನೆಯ ಕೆಲಸಕ್ಕೆ ಬರುವುದು ಬಿಟ್ಟಾಗ ನನಗೆ ಹೇಳತೀರದ ನೋವಾಯಿತು.

"ಅಮ್ಮ. ಸುಬ್ಬಿ ನಮ್ಮನೆಗೆ ಯಾಕೆ ಬರುತ್ತಿಲ್ಲ ? ನೀನೇನಾದರೂ ಅವಳನ್ನು ಬೈದೆಯಾ?" ಎಂದು ಕೇಳಿದೆ.

"ಇಲ್ಲ ಶಾಮು, ಅವಳ ಮನೆಗೆ 'ಚಿಕ್ಕ ಪಾಪ' ಬರುತ್ತೆ, ಆ ಮೇಲೆ ಬರುತ್ತಾಳೆ" ಎಂದು ಅಮ್ಮ ಹೇಳಿದಾಗ ನಾನು ಸಂತೋಷದಿಂದ ಕುಣಿದಾಡಿದೆ.

ತೋಟದ ಮಧ್ಯದಲ್ಲಿದ್ದ ನನಗೆ ಕೆಲಸಗಾರರ ಮಕ್ಕಳ ವಿನಾ ಬೇರೊಬ್ಬರ ಸ್ನೇಹ ಮಾಡಲು ಅವಕಾಶವಿರಲಿಲ್ಲ. ಹೀಗಾಗಿ ನಾನು ಮನೆಯಲ್ಲಿಯೂ ಒಂಟಿ, ಹೊರಗೂ ಒಂಟಿ ಆಗಿದ್ದೆ. ಸುಬ್ಬಿಯ ಮನೆಯಲ್ಲಿ 'ಚಿಕ್ಕ ಪಾಪ' ಬಂದರೆ ಅದರೊಂದಿಗಾದರೂ ಆಡಬಹುದಲ್ಲ ಎಂದು ಆನಂದಗೊಂಡೆ.

ಪ್ರತಿದಿನ ಸುಬ್ಬಿಯ ಗುಡಿಸಲಿಗೆ ಹೋಗಿ 'ನಿಮ್ಮ ಮನೆಗೆ ಪಾಪ ಬಂದಿತೆ?' ಎಂದು ವಿಚಾರಿಸಿಕೊಂಡು ಬರುತ್ತಿದ್ದೆ.

ಒಂದು ದಿನ ನಾನು ಗುಡಿಸಲನ್ನು ಸಮೀಪಿಸಿದಾಗಲೇ ಪಾಪನ ಅಳು ಕೇಳಿಸಿತು. ಕುಣಿಯುತ್ತ ಒಳಗೆ ಓಡಿಹೋದೆ. ಸುಬ್ಬಿಯ ಮಡಿಲಲ್ಲಿ ಒಂದು ಸುಂದರವಾದ ಮಗು ಮಲಗಿತ್ತು.

ಅಂದಿನಿಂದ ನಾನು ಸುಬ್ಬಿಯ ಮನೆಗೆ ಹೋಗುವುದು ಹೆಚ್ಚಾಯಿತು. ಯಾವಾಗಲೂ ಅವಳ ಮಗುವಿನೊಂದಿಗೆ ಆಟವಾಡುತ್ತ ಹೊತ್ತು ಕಳೆಯುತ್ತಿದ್ದೆ.

ನಾನು ಸ್ಕೂಲಿಗೆ ಸೇರಿದ ಮೇಲೆ ಸುಬ್ಬಿಯ ಮನೆಗೆ ಹೋಗುವುದು ಕಡಮೆಯಾಯಿತು. ಓದುವುದು ಹೆಚ್ಚಿಗೆ ಇರುತ್ತಿದ್ದುದರಿಂದ ತಂದೆ

ನನ್ನನ್ನು ಎಲ್ಲಿಗೂ ಹೋಗಗೊಡುತ್ತಿರಲಿಲ್ಲ. ಅದೂ ಅಲ್ಲದೆ ನಿಂಗಿ ಆಗಲೇ ತಪ್ಪು ಹೆಜ್ಜೆಗಳನ್ನು ಇಡುತ್ತ ನಮ್ಮ ಮನೆಗೆ ತಾನೇ ಬಂದುಬಿಡುತ್ತಿದ್ದಳು.

ನಮ್ಮೂರಿನಲ್ಲಿ ಹೈಸ್ಕೂಲು ಮುಗಿಸಿದ ಮೇಲೆ ನಮ್ಮ ತಂದೆ ಕಾಲೇಜು ವಿದ್ಯಾಭ್ಯಾಸಕ್ಕೆಂದು ಬೆಂಗಳೂರಿನ ಹಾಸ್ಟೆಲಿನಲ್ಲಿ ನನ್ನನ್ನು ಇಟ್ಟರು. ಮಲೆನಾಡಿನ ಪ್ರಶಾಂತ ವಾತಾವರಣದಲ್ಲಿ ಬೆಳೆದ ನನಗೆ ಬೆಂಗ ಳೂರಿನ ಗೊಂದಲದ ಜೀವನ ಮೊದಮೊದಲು ಉಸಿರು ಕಟ್ಟಿಸುವಂತಾ ದರೂ ಕ್ರಮೇಣ ರುಚಿಸಿತು.

ಒಂದು ಸಲ ರಜಕ್ಕೆಂದು ಊರಿಗೆ ಹೋದೆ, ಬಾಗಿಲಲ್ಲಿಯೇ ನನ್ನ ತಂದೆತಾಯಿಗಳು ಮತ್ತು ತೋಟದ ಎಲ್ಲ ಕೆಲಸಗಾರರೂ ನನ್ನನ್ನು ಸ್ವಾಗತಿಸಲು ನೆರೆದಿದ್ದರು. ಆ ಗುಂಪಿನಲ್ಲಿದ್ದ ಸುಂದರಿಯಾದ ಹುಡುಗಿ ಕಂಡಾಗ ಆಶ್ಚರ್ಯದಿಂದ ಅಮ್ಮನನ್ನು ಪ್ರಶ್ನಿಸಿದೆ.

'ಅಮ್ಮ, ಇವಳು ಯಾರು ?'

'ಅವಳೇ ನಿಂಗಿ !' ಎಂದು ಅಮ್ಮನೆಂದಾಗ ಗುಲಾಬಿ ಕೆನ್ನೆಯ ಹುಡುಗಿ ಅಗಲವಾಗಿ ಕಣ್ಣರಳಿಸಿ ನನ್ನನ್ನು ನೋಡಿ ನಕ್ಕಳು.

ನಿಂಗಿ ಯಾವಾಗಲೂ ನಮ್ಮನೆಯಲ್ಲಿಯೇ ಅಮ್ಮನಿಗೆ ಹೊರಗಿನ ಕೆಲಸದಲ್ಲಿ ನೆರವಾಗಿ ಓಡಾಡಿಕೊಂಡಿದ್ದಳು. ಬೆಂಗಳೂರಿನ ವಿಷಯವಾಗಿ ಅನೇಕ ಪ್ರಶ್ನೆಗಳನ್ನು ಹಾಕುತ್ತಿದ್ದಳು ಮುಗ್ಧ ಬಾಲೆ.

'ಪಟ್ಟಣದಲ್ಲಿ ರೈಲು ಹಾವಿನಂತೆ ಉದ್ದವಾಗಿ ಇರುತ್ತದಂತೆ ಹೌದೇನಣ್ಣ ?' ಎಂದು ವಿಸ್ಮಯದಿಂದ ಕೇಳುತ್ತಿದ್ದಳು ನಿಂಗಿ. ಅವಳು. ಕೇಳಿದ ಮುಗ್ಧ ಪ್ರಶ್ನೆಗಳಿಗೆ ಬೇಸರವಿಲ್ಲದೆ ಉತ್ತರ ಕೊಡುತ್ತಿದ್ದೆ.

ನಿಂಗಿ ಬಹಳ ಚುರುಕಾಗಿದ್ದಳು. 'ಅಣ್ಣ . ನನಗೂ ಅಕ್ಷರ ಕಲಿಸಿ ಕೊಡು' ಎಂದು ಒಂದು ದಿನ ಸ್ಲೇಟು, ಬಳಪ ತಂದು ನನ್ನ ಕೈಗಿತ್ತಳು.

ಸ್ಲೇಟಿನ ಮೇಲೆ 'ನಿಂಗಿ' ಎಂದು ದುಂಡನೆಯ ಅಕ್ಷರಗಳಲ್ಲಿ ಬರೆದು ಕೊಟ್ಟೆ. ಮೂರು ನಾಲ್ಕು ದಿನಗಳಲ್ಲಿಯೇ ತನ್ನ ಹೆಸರನ್ನು ದುಂಡಾಗಿ ಬರೆದು ತೋರಿಸಿ 'ನಿನ್ನ ಹೆಸರು ಬರೆದು ಕೊಡಣ್ಣ' ಎಂದಳು. ಹಾಗೆಂದು ಹೇಳುವಾಗ ಅವಳ ಕೆನ್ನೆಗಳಲ್ಲಿ ಕೆಂದಾವರೆ ಅರಳಿತ್ತು. ಎರಡು ದಿನಗಳಲ್ಲಿಯೇ ನನ್ನ ಹೆಸರು ತನ್ನ ಹೆಸರಿನೊಂದಿಗೆ ಬರೆದು ತೋರಿಸಿದಳು.

'ಸ್ಲೇಟು ಕೊಡು ನಿಂಗಿ. ನಿನ್ನ ಅಪ್ಪ ಅಮ್ಮನ ಹೆಸರು ಕಲಿಸಿ ಕೊಡುತ್ತೇನೆ' ಎಂದು ಹೇಳಿದಾಗ 'ಏನು ಬೇಡ ಶಾಮಣ್ಣ. ನಾನು ಕಲಿತೇನಾಗಬೇಕು, ನನ್ನ ನಿನ್ನ ಇಬ್ಬರ ಹೆಸರು ಬರೆಯಲು ಬಂದರೆ ಸಾಕು ? ಎಂದು ಓಡಿ ಹೋದಳು. ಮುಗ್ಧ ಹುಡುಗಿಯ ಮಾತಿಗೆ ನನಗೆ ನಗು ಬಂದಿತು.

ಮನೆಯಲ್ಲಿ ರುಚಿ ರುಚಿಯಾದ ಅಡುಗೆ ಊಟ ಮಾಡುವುದು, ತೋಟದಲ್ಲಿ ಸುತ್ತಾಡಿ ಬರುವುದು, ಕೆಲಸಗಾರರ ಜೊತೆಯಲ್ಲಿ ಹರಟೆ ಹೊಡೆಯುವುದು—ಇದರಲ್ಲಿಯೇ ನನ್ನ ರಜೆಯ ದಿನಗಳು ಕಳೆದು ಹೋದುವು. ಭಾರವಾದ ಹೃದಯ ಹೊತ್ತು ಮತ್ತೆ ಬೆಂಗಳೂರಿಗೆ ಮರಳಿದೆ.

o o o

ಎಂ. ಎಸ್. ಸಿ. ಮುಗಿಸಿ ಬೆಂಗಳೂರಿಗೆ ಕೊನೆಯ ನಮಸ್ಕಾರ ಹಾಕಿ ಸಂತೋಷದಿಂದ ಊರಿಗೆ ಹಿಂದಿರುಗಿದೆ. ಆದರೆ ಉತ್ಸಾಹದಿಂದ ಬಂದಿದ್ದ ನನಗೆ ನಿರಾಶೆ ಮಾಲೆ ಹಾಕಿತ್ತು. ತಂದೆ ಮಲೇರಿಯ ಖಾಯಿಲೆಯಿಂದ ಪೀಡಿತರಾಗಿ ಹಾಸಿಗೆ ಹಿಡಿದು ಮಲಗಿದರು, ಅವರು ಆಗಾಗ್ಗೆ ಆ ಖಾಯಿಲೆಯಿಂದ ನರಳುತ್ತಿದ್ದುದುಂಟು. ಆದರೆ ಈ ಬಾರಿ ಹಾಸಿಗೆ ಬಿಟ್ಟು ಪುನಃ ಮೇಲೇಳುವ ಸ್ಥಿತಿಯಲ್ಲಿಯೆ ಇರಲಿಲ್ಲ.

* * *

ತಂದೆಯ ಕೊನೆಯ ದಿನಗಳ ಶುಶ್ರೂಷೆ ಮಾಡುವ ಭಾಗ್ಯ ನನಗಿತ್ತು. ಅವರ ಹಾಸಿಗೆಯ ಬಳಿಯಲ್ಲಿಯೇ ಕುಳಿತು ಉಪಚರಿಸುತ್ತಿದ್ದೆ. ತಂದೆ ಹಲವು ದಿನಗಳಲ್ಲಿಯೇ ನನ್ನ ತಾಯಿಯ ಕೈಯನ್ನು ನನ್ನ ಕೈಲಿಟ್ಟು ಕಣ್ಮುಚ್ಚಿದರು.

ಬೆಂಗಳೂರಿನಲ್ಲಿಯೇ ಯಾವುದಾದರೂ ಕೆಲಸ ಹಿಡಿಯ ಬೇಕೆಂದಿದ್ದ ನಾನು ಈಗ ಮನಸ್ಸು ಬದಲಾಯಿಸಿದೆ. ತಂದೆಯ ಕೋನೆಯ ಮಾತು ಗಳಿಗೆ ಮನ್ನಣೆಯಿತ್ತು ಕಾಫಿ ತೋಟದ ಮೇಲ್ವಿಚಾರಣೆ ವಹಿಸಿಕೊಂಡ್ರು ನನ್ನ ಹುಟ್ಟಿದೂರಿನಲ್ಲಿಯೇ ನಿಂತುಬಿಟ್ಟೆ.

ಒಂದು ದಿನ ನಮ್ಮ ತೋಟದಲ್ಲಿ ಹಾಗೇ ಸುತ್ತಾಡುತ್ತಿದ್ದೆ ಕಾಫಿಗಿಡಗಳಲ್ಲಿ ಮಲ್ಲಿಗೆ ಅರಳಿದಂತೆ ಹೂಗಳು ತುಂಬಿ ಚಿತ್ತಾಕರ್ಷಕವಾಗಿದ್ದವು. ಹೂಗಳ ಕಂಪು ಮೂಗಿನ ಸೆಲೆಯೊಡೆಸುವಂತಿತ್ತು. ಆದೇ ತಾನೆ ಸಂಜೆಯ ಕೆಂಬಣ್ಣ ವನ್ನು ಇರುಳು ಮೆಲಮೆಲ್ಲನೆ ನುಂಗತೊಡಗಿತ್ತು. ದೂರದ ಬೆಟ್ಟದ ತುದಿಯಲ್ಲಿ ಕದ್ದು ನೋಡುತ್ತಿದ್ದ ಮುಳುಗುತ್ತಿದ್ದ ರವಿ.

ಮಲೆನಾಡಿನ ಸಂಜೆಯ ಅಪ್ರತಿಮ ಸೊಬಗು ಸವಿಯುತ್ತಾ ಮೆಲ್ಲಡಿ ಯಿಡುತ್ತಿದ್ದೆ, ಎದುರಿನಲ್ಲಿ ನೀರಿನ ಬಿಂದಿಗೆಯನ್ನು ತಲೆಯ ಮೇಲೆ ಹೊತ್ತ ನಿಂಗಿ ಸರಸರನೆ ಹೆಜ್ಜೆ ಹಾಕುತ್ತಿದ್ದಳು. ಮಲೆನಾಡಿನ ಸೌಂದರ್ಯ ರಾಶಿಯೇ ಮೈತಾಳಿ ಮುಂದೆ ನಿಂತಂತಾಯಿತು. ಹರಕು ಸೀರೆಯಲ್ಲಿ ಕೂಡ ಅವಳು ಕಿನ್ನರಿಯಂತೆ ಕಾಣಿಸುತ್ತಿದ್ದಳು.

ನಿಂಗಿ ಈಚೆಗೆ ನನ್ನೊಂದಿಗೆ ಹೆಚ್ಚು ಮಾತನಾಡುತ್ತಿರಲಿಲ್ಲ. ಯೌವ ನದ ಹೊಸಲೇರಿ ನಿಂತಿದ್ದ ಅವಳನ್ನು ಸಹಜವಾದ ಲಜ್ಜೆ ಆವರಿಸಿತ್ತು. ಆದರೆ ನನ್ನನ್ನು ನೋಡಿದಾಗಲೊಮ್ಮೆ ಮುಗ್ಧ ಪ್ರೇಮದ ನೋಟ ಬೀರಿ ಮಾಯವಾಗುತ್ತಿದ್ದಳು.

"ಏನು ನಿಂಗಿ ಈ ಕಡೆ ಹೊರಟೆ?"

"ನೀರಿಗೆ ಬಂದಿದ್ದೆ ಆಣ್ಣಾವ್ರೆ"

ನಿಂಗಿಯನ್ನು ಕಣ್ಣುಗಳಿಂದಲೇ ನುಂಗುವಂತೆ ನೋಡಿದೆ. ನನ್ನ ಮುಖದಲ್ಲಿ ಉಂಟಾಗಿದ್ದ ವಿಕಾರವನ್ನು ಗ್ರಹಿಸಿ ಬೆಚ್ಚಿದಳು ನಿಂಗಿ.

"ಹೊತ್ತಾಯಿತು. ಹೊರಡ್ತೀನಿ ಅಣ್ಣಾವ್ರೆ" ಎಂದು ಮುಂದೆ ಹೆಜ್ಜೆ ಯಿಟ್ಟಳು. ನನಗರಿವಿಲ್ಲದಂತೆಯೇ ನನ್ನ ಕೈ ಅವಳ ಕೈಯನ್ನು ಹಿಡಿದಿತ್ತು.

"ನಿಂಗಿ; ನಾನು ನಿನ್ನನ್ನು ಪ್ರೀತಿಸುತ್ತೇನೆ" ಎಂದೆ,

ನಾನು ನಿಂಗಿಯನ್ನು ಚಿಕ್ಕ ಮಗುವಾದಾಗಿನಿಂದಲೂ ಪ್ರೀತಿಸುತ್ತಿದ್ದೆ ಆ ವಿಷಯ ಅವಳಿಗೆ ತಿಳಿಯದೇ ಇರಲಿಲ್ಲ. ಅವಳೂ ಅಂತೆಯೇ ನನ್ನನ್ನು ಪ್ರೀತಿಸುತ್ತಿದ್ದಳು, ಆದರೆ ಇಂದು ನನ್ನ ಪ್ರೇಮ ಕಾಮದೊಂದಿಗೆ ಕಲುಷಿ ತವಾಗಿತ್ತು, ಅದು ನಿಂಗಿಗೇ ಅರ್ಥವಾಗದೆ ಇರಲಿಲ್ಲ.

"ಅಣ್ಣಾವ್ರೆ, ಹಾಗೆಲ್ಲ ಮಾತನಾಡಬೇಡಿ. ಅಮ್ಮಾವ್ರಿಗೆ ತಿಳಿದರೆ ಏನೆಂದುಕೊಂಡಾರು?" ಎಂದವಳೇ ಕೈ ಕೊಸರಿಕೊಂಡು ಸರಸರನೆ ಹೊರಟು ಬಿಟ್ಟಳು.

ಈ ಘಟನೆಯಾದ ಮೇಲೆ ನಿಂಗಿ ಬೇಕೆಂದೆ ನನ್ನಿಂದ ದೂರವಿರುತ್ತಿ ದ್ದಳು. ಅವಳು ನನ್ನನ್ನು ದೂರ ಇರಿಸುತ್ತಿದ್ದಷ್ಟೂ ನನ್ನ ಮನಸ್ಸು ಅವಳನ್ನು ಹತ್ತಿರಮಾಡಿಕೊಳ್ಳುವಂತೆ ಉದ್ರೇಕಿಸುತ್ತಿತ್ತು.

ನಿಂಗಿ ತೋಟದಲ್ಲಿ ಕೆಲಸ ಮಾಡುವಾಗ ನೀರಿಗೆ ಬರುವಾಗ ಹೊಂಚಿ ಅವಳನ್ನು ಭೇಟಿಮಾಡತೊಡಗಿದೆ. ಮೊದಮೊದಲು ಭಯದಿಂದ ದೂರ ಸರಿಯುತ್ತಿದ್ದ ಅವಳು ಕ್ರಮೇಣ ನನ್ನಿಂದ ಆಕರ್ಷಿತಳಾದಳು. ಯೌವನದ ಕಾವಿನಲ್ಲಿ ನಾನು ಅಂಧನಾಗಿದ್ದೆ. ನಾನು ಮಾಡುತ್ತಿರುವುದು ಸರಿಯೋ ತಪ್ಪೋ ಎಂದು ಯೋಚಿಸುವಷ್ಟು ಕೂಡ ಬುದ್ಧಿ ಉಳಿದಿರಲಿಲ್ಲ.

ಒಂದು ದಿನ ನಿಂಗಿ ನನ್ನನ್ನು ಸಂಧಿಸಿ "ಅಣ್ಣಾವ್ರೆ ನನ್ನ ಗತಿ ಏನು ?" ಎಂದು ಗಟ್ಟಿಯಾಗಿ ಅತ್ತಳು,

"ಏನಾಯಿತು ನಿಂಗಿ?" ಭಯದಿಂದ ಕೇಳಿದೆ ನಾನು,

'ಅಣ್ಣಾವ್ರೆ ನನಗೆ ಮೂರು ತಿಂಗಳಾಗಿದೆ, ಇನ್ನು ಅಮ್ಮಾವರಿಗೆ, ತೋಟದ ಕೆಲಸಗಾರರಿಗೆ ತಿಳಿದರೆ ನಮ್ಮ ಗತಿ ಏನು,? ಕಣ್ಣೀರು ಸುರಿಸುತ್ತ ಅಸಹಾಯಕಳಾಗಿ ಕೇಳಿದಳು ನಿಂಗಿ.

"ಅವಳ ಚಿಂತಾಜನಕ ಚಿತ್ರ ನಾನು ನನ್ನ ಕೊನೆಯುಸಿರಿರುವವರೆಗೂ ಮರೆಯಲಾರೆ"

ಶಾಮು ಹೇಳುವುದನ್ನು ನಿಲ್ಲಿಸಿದ ಎಂತಹ ದಾರುಣ ಸನ್ನಿವೇಶ?

ಶಾಮು ಚತುರ ಮಾತುಗಾರ. ಮಾತಿನಲ್ಲಿಯೇ ಮೋಡಿ ಮಾಡಿ ಎಲ್ಲರನ್ನೂ ಸೆಳೆಯುವಂಥವನು. ಅಂಥವನ ಬಾಯಲ್ಲಿ ಇಂದು ಬಂದ ಅವನ ದುಃಖಪೂರಿತ ಬಾಳಿನ ಕಥೆ ಹೃದಯವಿದ್ರಾವಕವಾಗಿತ್ತು.

ಅವನ ಕಣ್ಣಂಚಿನಲ್ಲಿ ನೀರು ಕಂಡಕೂಡಲೇ ನನ್ನ ಕಣ್ಣು ಗಳಲ್ಲಿಯೂ ನೀರೂರಿತು,

ಮುಂದೇನಾಯಿತು ? ಎನ್ನುವ ಕುತೂಹಲ ನನ್ನನ್ನು ಕೆರಳಿಸು ತ್ತಿತ್ತು.

"ಶಾಮು"ನಿಂಗಿಯನ್ನು ಪರಿಗ್ರಹಿಸಿದೆಯಾ ?" ಎಂದು ಉದ್ವೇಗ ದಿಂದ ಪ್ರಶ್ನಿಸಿದೆ.

ಶಾಮು ನಿರಾಶೆಯ ನಿಟ್ಟುಸಿರಿಟ್ಟ,

"ನಾನು ಹಾಗೆ ಪರಿಗ್ರಹಿಸಿದ್ದಿದ್ದರೆ ಅವಳ ಜೀವನ ಕಥೆಯೇ ಬೇರೆಯಾಗುತ್ತಿತ್ತು, ನಮ್ಮ ತಾಯಿ ಹಳೆಯ ಆಚಾರ ಸಂಪ್ರದಾಯ ದವಳು, ಬ್ರಾಹ್ಮಣನಾದ ನಾನು ಕೀಳು ಜಾತಿಯ ಕನ್ಯೆಯನ್ನು ವಿವಾಹ ವಾಗುವುದಕ್ಕೆ ಖಂಡಿತ ಸಮ್ಮತಿಸರೆಂಬುದನ್ನು ನಾಸು ಚೆನ್ನಾಗಿ ಅರಿತಿದ್ದೆ. ನಿಂಗಿ ಕೀಳು ಜಾತಿಯಲ್ಲಿ ಜನಿಸಿದ್ದರೂ ರೂಪು, ಗುಣದಲ್ಲಿ ಯಾರಿಗೂ

ಕಡಮೆ ಇರಲಿಲ್ಲ. ನಾನು ಅವಳನ್ನು ಮನಸಾರೆ ಮೆಚ್ಚಿದ್ದೆ, ಅವಳೊಂದಿಗೆ ಕೂಡಿ ನನ್ನ ಮುಂದಿನ ಜೀವನ ಕಳೆಯಲು ಸಿದ್ಧನಾಗಿದ್ದೆ, ಆದರೆ............"

"ಆದರೂ ನೀನು ಆ ಹುಡುಗಿಯನ್ನು ಮದುವೆಯಾಗಲೇಬೇಕಿತ್ತು."

"ಆಗಬೇಕಿತ್ತು. ಆದರೆ ಆಗಲಿಲ್ಲ. ನಾನು ಹೇಡಿ......... ಲೋಕಾಪವಾದಕ್ಕೆ ಅಂಜಿ, ತಾಯಿಯ ಮನಸ್ಸನ್ನು ನೋಯಿಸಲು ಇಷ್ಟಪಡದೆ ನಿಂಗಿಯ ಜೀವನ ಹಾಳು ಮಾಡಿದೆ.... ನಾನು ಪಾಪಿ," ಶಾಮು ಉದ್ರೇಕಗೊಂಡು ಗಟ್ಟಿಯಾಗಿ ಕಿರುಚಿದ.

ಮೇಜಿನ ಮೇಲಿದ್ದ ಹೂಜಿಯಿಂದ ಒಂದು ಲೋಟ ನೀರು ಬಗ್ಗಿಸಿ ಅವನಿಗೆ ಕುಡಿಯಲು ಕೊಟ್ಟೆ. ಒಂದೇ ಬಾರಿಗೆ ಗಟಗಟನೆ ಕುಡಿದು ಲೋಟ ಬರಿದು ಮಾಡಿದ. ಅವನ ಹೊಟ್ಟೆ ತಣ್ಣಗಾದಾಗ ಅವನ ದುಃಖದ ಉರಿಯೂ ಸ್ವಲ್ಪ ಶಮನವಾಗಿರಬೇಕು.

"ನಾನು ಬಹಳ ಎಮೋಶನಲ್ ಕಣೊ ನಾಣು" ಎಂದು ಕರವಸ್ತ್ರದಿಂದ ಕಣ್ಣೀರು ಒರೆಸಿಕೊಂಡ.

ಅವನ ನಗುಮೊಗ ನೋಡಿ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು.

"ನಿಂಗಿಯ ಗತಿ ಏನಾಯಿತು ?"

ಪಾಪ! ಅವಳು ಯಾರಿಗೂ ತೊಂದರೆ ಕೊಡದೆ ತೋಟದ ಬಾವಿಯಲ್ಲಿ ಹಾರಿ ಪ್ರಾಣ ಬಿಟ್ಟಳು. ಆಕಸ್ಮಿಕವಾಗಿ ಕಾಲು ಜಾರಿ ಬಾವಿಯಲ್ಲಿ ಬಿದ್ದಿರಬೇಕೆಂದೇ ಜನ ತಿಳಿದರು. ಆದರೆ ಅವಳ ಕೊಲೆಗಾರ ನಾನೆಂದು ಯಾರಿಗೂ ತಿಳಿಯಲಿಲ್ಲ. ಇದಾದ ಮೇಲೆ ನನಗೆ ತೋಟದಲ್ಲಿ ಇರುವುದು ಅಸಾಧ್ಯವೆನಿಸಿತು. ನಿಂಗಿಯ ನೆನಪು ನನ್ನನ್ನು ಮುತ್ತಿ ಮುತ್ತಿ ಕಾಡುತ್ತಿತ್ತು.

ಕೆಲವು ತಿಂಗಳುಗಳಲ್ಲಿಯೇ ವೃದ್ಧ ತಾಯಿ ತೀರಿಕೊಂಡಳು. ಅವಳ ಮೃತ ಶರೀರಕ್ಕೆ ಅಂತ್ಯಕ್ರಿಯೆ ನಡೆಸಿ ನನ್ನ ತಂದೆಯ ಸ್ನೇಹಿತರೊಬ್ಬರಿಗೆ ಕಾಫಿ ತೋಟ ಮಾರಿ ಬೆಂಗಳೂರನ್ನು ಸೇರಿಕೊಂಡೆ.

ಬೆಂಗಳೂರಿನ ಫ್ಯಾಕ್ಟರಿಯೊಂದರಲ್ಲಿ ನೌಕರಿಯೂ ದೊರಕಿತು. ಮೆಜೆಸ್ಟಿಕ್‌ನಲ್ಲಿ ಒಂದು ಚಿಕ್ಕ ಕೋಣೆ ಬಾಡಿಗೆಗೆ ಹಿಡಿದೆ.

ಮನೆಯ ಮಾಲಿಕಳು ಪಾತಮ್ಮ ವಿಧವೆ. ಆಗಲೇ ಅರವತ್ತರ ಮೆಟ್ಟಲನ್ನೇರಿದಳು. ಮುದುಕಿಗೆ 27–28 ವಯಸ್ಸಿನ ಮಗಳಿದ್ದಳು. ಹುಡುಗಿ ಬಹಳ ಲಕ್ಷಣವಾಗಿದ್ದಳು. ಒಳ್ಳೆಯವಳಂತೆಯೂ ತೋರುತ್ತಿದ್ದಳು. ಬಿ.ಎ. ಪಾಸುಮಾಡಿ ಹೆಣ್ಣುಮಕ್ಕಳ ಶಾಲೆಯಲ್ಲಿ ಅಧ್ಯಾಪಕಿಯಾಗಿದ್ದಳು.

ಪಾತಮ್ಮ ತಾನು ಮಾಡಿದ ತಿಂಡಿ ತಿನಸುಗಳನ್ನು ಪ್ರೀತ್ಯಾದರದಿಂದ ತಂದು ನನಗೆ ಕೊಡುತ್ತಿದ್ದಳು. ಸ್ನಾನಕ್ಕೆ ಬಿಸಿನೀರು ಕಾಯಿಸಿ ಕೊಡುತ್ತಿದ್ದಳು, ಹಬ್ಬ ಹರಿದಿನಗಳಲ್ಲಿ ತನ್ನ ಮನೆಗೇ ಊಟಕ್ಕೆ ಕರೆಯುತ್ತಿದ್ದಳು. ಅನೇಕ ಬಾರಿ ಹುಷಾರಿಲ್ಲದೆ ಮಲಗಿದ್ದಾಗ ಗಂಜಿಯನ್ನು ಮಾಡಿ ತಂದು ಕುಡಿಸುತ್ತಿದ್ದಳು. ಅವಳ ಪ್ರೀತಿಯಲ್ಲಿ ನಾನು ತಾಯಿಯ ಸಾವನ್ನು ಮರೆಯಲೆತ್ನಿಸಿದೆ.

ಒಂದು ದಿನ ಪಾತಮ್ಮನನ್ನೂ ಪ್ರಶ್ನಿಸಿದೆ. 'ಯಾಕೆ ಪಾತಮ್ಮ ನಿಮ್ಮ ಮಗಳಿಗೆ ಇನ್ನೂ ಮದುವೆ ಮಾಡಿಲ್ಲ?' ಎಂದೂ.

ಮುದುಕಿಯ ಕಣ್ಣುಗಳಲ್ಲಿ ನೀರೂರಿತು.

'ಶಾಮು, ಅವಳನ್ನು ಯಾರು ವದುವೆಯಾಗುತ್ತಾರೆ?'

'ಯಾಕೆ ಹೀಗೆನ್ನುತ್ತೀರಿ ? ರಾಧ ರೂಪ, ವಿದ್ಯೆ, ಗುಣ, ಯಾವುದರಲ್ಲಿ ಕಡಮೆ ? ಅವಳಿಗೆ ವರ ಸಿಕ್ಕುವುದಿಲ್ಲವೆ ?,

ಅದೊಂದು ಕಥೆ ಶಾಮು. ಆದರೆ ನಿನ್ನ ಹತ್ತಿರ ಗುಟ್ಟೇನು? ನೀನು ನನ್ನ ಮಗನಂತೆ ಇದ್ದೀಯೆ. ಹೇಳಿಬಿಡುತ್ತೇನೆ

ನಾನು ಉತ್ಸುಕನಾಗಿ ಕಿವಿ ಚುರುಕು ಮಾಡಿದೆ.

"ರಾಧೆ ಕಾಲೇಜಿನಲ್ಲಿ ಓದುವಾಗ ಒಬ್ಬ ಸ್ನೇಹಿತನನ್ನು ಪ್ರೀತಿಸಿದ್ದಳು. ಅವನೂ ಇವಳನ್ನು ಬಹಳವಾಗಿ ಪ್ರೀತಿಸುತ್ತಿದ್ದ......ಅಲ್ಲ ಪ್ರೀತಿಸುತ್ತಿದ್ದಂತೆ ನಟಿಸಿದ. ನಮ್ಮ ರಾಧಾಳನ್ನು ಮದುವೆಯಾಗುತ್ತೇನೆಂದು ಆಸೆ ತೋರಿಸಿ, ಅವಳೊಡನೆ ಚೆಲ್ಲಾಟವನ್ನಾಡಿ ಅವಳ ಜೀವನವನ್ನು ಹಾಳುಮಾಡಿದ, ಸಮಾಜದಲ್ಲಿ ಅವಳ ಹೆಸರಿಗೆ ಕಳಂಕ ಮಸಿ ಬಳಿದುಬಿಟ್ಟ. ಅವಳು ಮೂರು ತಿಂಗಳ ಗರ್ಭವತಿಯಾದಾಗ ಹೇಳದೆ ಕೇಳದೆ ಊರು ಬಿಟ್ಟು ಓಡಿ ಹೋದ. ಇದುವರೆಗೂ ಅವನ ಸುದ್ದಿಯಿಲ್ಲ. ಆ ಪಿಂಡವನ್ನು ಕೊಂದು ರಾಧಳ ಮಾನವನ್ನು ಉಳಿಸಬೇಕಾಯಿತು. ಆದರೇನು ? ಅವಳು ನಾಯಿ ಮುಟ್ಟಿದ ಮಡಕೆ. ಈಗ ಯಾರು ಮದುವೆಯಾಗುತ್ತಾರೆ. ಕನ್ಯಾರ್ಥಿಯಾಗಿ ಬಂದವರು? ಅಲ್ಲಿ ಇಲ್ಲಿ ಈ ವಿಷಯ ತಿಳಿದ ಕೂಡಲೇ ಪುನಃ ಈ ಮನೆಯ ಹೊಸ್ತಿಲು ಮುಟ್ಟುವುದಿಲ್ಲ, ಎಂದ ಮುದುಕಿ ಗೊಳೋ ಎಂದು ಅತ್ತಳು.

ನನ್ನ ಕಣ್ಮುಂದೆ ನಿಂಗಿಯ ಚಿತ್ರ ಧುತ್ತೆಂದು ನಿಂತಿತು, ನನ್ನಂಥ ಪಾಪಿಯೇ ರಾಧಳ ಜೀವನವನ್ನು ಹಾಳುಮಾಡಿ ಪರಾರಿಯಾಗಿದ್ದ, ಮುಗ್ಧ ಜೀವನವನ್ನು ನಂಬಿಸಿ ತಲೆ ಕೊಯ್ದು ಹಾಕಿದ್ದ.

ನೂರಾರು ನಿಂಗಿಯರು ನನ್ನ ಮುಂದೆ ನಿಂತು ಹಂಗಿಸುತ್ತಿರುವಂತೆ ಭಾಸವಾಯಿತು.

ನಾನು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತ ಇಲ್ಲವೆ? ನನ್ನ ತಪ್ಪಿಗೆ ಶಿಕ್ಷೆಯಿಲ್ಲವೆ? ನನ್ನ ಮುಂದೆ ನೂರಾರು ಪ್ರಶ್ನೆಗಳು ಎದ್ದು ನಿಂತವು.

"ಪಾತಮ್ಮ, ಅಳಬೇಡಿ. ನಿಮ್ಮ ಮಗಳನ್ನು ನಾನು ಮದುವೆಯಾಗುತ್ತೇನೆ" ಎಂದು ನನಗರಿವಿಲ್ಲದಂತೆ ನುಡಿದಿದ್ದೆ.

ಪಾತಮ್ಮ ಬಿಟ್ಟ ಕಣ್ಣುಗಳಿಂದ ನನ್ನತ್ತ ನೋಡತೊಡಗಿದರು, ನನ್ನ ಮಾತಿನಲ್ಲಿ ಅವರಿಗೆ ಪೂರ್ಣ ನಂಬಿಕೆ ಮೂಡಿತ್ತು.

'ಶಾಮು, ನೀನು ನಿಜವಾಗಿಯೂ ಮನುಷ್ಯನಲ್ಲ...........ಎಂದರು.

"ಶಾಮು, ಹಾಗಾದರೆ ರಾಧೆಯ ಚರಿತ್ರೆಯನ್ನು ತಿಳಿದಿದ್ದರೂ ಅವಳನ್ನು ಮದುವೆಯಾಗಲು ಒಪ್ಪಿದೆಯಾ ?" ಎಂದು ವಿಸ್ಮಯ ಸಂತೋಷಗಳಿಂದ ಪ್ರಶ್ನಿಸಿದೆ ನಾನು.

"ಹೌದು ನಾಣು. ಒಂದು ಜೀವವನ್ನು ನಾನು ಹಾಳುಮಾಡಿದ್ದೆ, ಈಗ ಹಾಳಾಗಿದ್ದ ಒಂದು ಜೀವವನ್ನು ಉದ್ಧಾರ ಮಾಡಲು ವಿವಾಹ ವಾದೆ, ನನ್ನ ತಪ್ಪಿಗೆ ನಾನೇ ಶಿಕ್ಷೆ ವಿಧಿಸಿಕೊಂಡು ಪ್ರಾಯಶ್ಚಿತ್ತ ಮಾಡಿ ಕೊಂಡೆ. ಈಗ ನನ್ನ ಮನಸ್ಸಿಗೆಷ್ಟೋ ಶಾಂತಿ ದೊರಕಿದೆ" ಎಂದು ಹೇಳುತ್ತಲೇ ಶಾಮು ಕೈ ಗಡಿಯಾರ ನೋಡಿಕೊಂಡು ಮೇಲೆದ್ದ.

ಶಾಮುವಿನ ಕಥೆ ಕೇಳಿ ಮೈ ಮರೆತು ಕುಳಿತಿದ್ದ ನನಗೆ ಅವನು ಬೆನ್ನು ತಟ್ಟಿ "ಬಹಳ ಹೊತ್ತಾಯಿತು. ನಾನಿನ್ನು ಹೊರಡುತ್ತೇನೆ" ಎಂದಾಗಲೇ ಎಚ್ಚರ.

"ಶಾಮು, ನೀನು ನಿಜವಾಗಿಯೂ ಮನುಷ್ಯನಲ್ಲ.........."ಎಂದು ನಾನೆಂದಾಗ ಕಣ್ಣುಗಳಲ್ಲಿ ಹರ್ಷಾಶ್ರು.

"ಮನುಷ್ಯನಲ್ಲದೆ ಮೃಗವೇನೊ !"ಎಂದು ಗಟ್ಟಿಯಾಗಿ ನಕ್ಕು ಹೊರಟುಹೋದ ಶಾಮು.

* * *

ನನ್ನ ಕಥೆಗೆ ಅಂದರೆ ಶಾಮುವಿನ ಜೀವನ ಕಥೆಗೆ ಮೊದಲ ಬಹುಮಾನ ಬಂದಿತ್ತು, ಈ ವಿಷಯವನ್ನು ಕೂಡಲೇ ಅವನಿಗೆ ತಿಳಿಸ ಬೇಕೆಂದು ಜಯನಗರದ ಬಸ್ಸು ಹತ್ತಿದೆ.

ಅವನ ಮನೆಯ ಗೇಟನ್ನು ತೆರೆದಾಗ ಅವನ ಹೆಂಡತಿ ರಾಧ ಗಿಡಗಳಿಗೆ ನೀರು. ಹಾಕುತ್ತಿದ್ದಳು. ನಿಜವಾಗಿಯೂ ಅವನು ಹೇಳಿ ದಂತೆ ಅವಳು ಸುಂದರಿ.

"ಶಾಮು ಮನೆಯಲ್ಲಿದ್ದಾನೆಯೆ ?" ಎಂದು ನೇರವಾಗಿ ಪ್ರಶ್ನಿಸಿದೆ.

"ಇದ್ದಾರೆ, ಒಳಗೆ ಬನ್ನಿ" ಎಂದು ಹೇಳಿ ಒಳಗೆ ಹೋದಳು.

ಶಾಮು ಸಂತೋಷದಿಂದ ನನ್ನನ್ನು ಸ್ವಾಗತಿಸಿದ,

"ಶಾಮು, ನಿನ್ನ ಕಥೆಗೆ 250 ರೂ. ಬಹುಮಾನ ಬಂದಿತು."

"ಆ ! ನಿಜವಾಗಿಯೂ. ?" ವಿಸ್ಮಯದಿಂದ ಕೇಳಿದ ಶಾಮು.

"ಹೌದು ಶಾಮು. ನೋಡಿಲ್ಲಿ," ಜೇಬಿನಿಂದ ಸಂಪಾದಕರ" ಕಾಗದ ತೆಗೆದು ತೋರಿಸಿದೆ.

"ಕಂಗ್ರಾಟ್ಸ್ ಕಣೋ, ಮೊದಲು ನಿನ್ನ ಬಾಯಿಗೆ ಕಾಫಿ ಹುಯ್ಯುತ್ತೇನೆ... ಸರಳ .. ಬೇಗ ನಮಗೆ ಕಾಫಿ ತೆಗೆದುಕೊಂಡು ಬಾ." ಶಾಮು ಹೆಂಡತಿಗೆ ಆರ್ಡರ್ ಕೊಟ್ಟ.

"ಏನೋ ಶಾಮು. 'ರಾಧ' ಅನ್ನುವ ಹೆಸರು ಬದಲಾಯಿಸಿಬಿಟ್ಟೆಯಾ"? ಎಂದೆ.

"ಅವರಪ್ಪ ಇಟ್ಟ ಹೆಸರು ಸರಳ. ನಾನು ಕರೆಯುವುದೂ ಸರಳ ಎಂದೇ" ಎಂದು ಅವನೆಂದಾಗ ನಾನು ತಬ್ಬಿಬ್ಬಾದೆ.

"ಅರೆ...ಅಂದು ನೀನು ಹೇಳಿದೆಯಲ್ಲೋ. 'ರಾಧ'ಳನ್ನು ಮದುವೆಯಾದೆ ಎಂದು,"

ಶಾಮು ಬಿದ್ದು ಬಿದ್ದು ನಗಲಾರಂಭಿಸಿದ.

"ಆ ಮೇಲೆ ನಗುವೆಯಂತೆ. ಮೊದಲು ನಾನು ಕೇಳಿದ ಪ್ರಶ್ನೆಗೆ ಉತ್ತರ ಕೊಡು" ಎಂದೆ ಕೋಪದಿಂದ.

"ಅಯ್ಯೋ ಬೆಪ್ಪೆ. 'ರಾಧ' ನನ್ನ ಕಥಾನಾಯಕಿ ಅಷ್ಟೆ. ಸರಳ ನನ್ನ ಕೈ ಹಿಡಿದಾಕೆ."

"ಹಾಗದರೆ ನೀನು ಅಂದು ಹೇಳಿದ್ದೆಲ್ಲ ನಿನ್ನ ಕಥೆಯಲ್ಲವೆ?"

"ಕಥೆ ಬರೆಯಲು ಕಥಾವಸ್ತು ಸಿಗದೇ ಪರದಾಡುತ್ತಿದ್ದೆಯಲ್ಲ ಎಂದು ಒಂದು ಕಥೆ ಸೃಷ್ಟಿಸಿ ಹೇಳಿದೆ ಅಷ್ಟೆ" ಎಂದು ಮತ್ತೆ ನಗಲು ಪ್ರಾರಂಭಿಸಿದ,

ಶಾಮು ಮಾತಿನ ಮಲ್ಲ. ತಾನು ಕಂಡದ್ದ...ಕೇಳಿದ್ದು ಹೃದಯ ಗಮವಾಗಿ, ಸ್ವಾರಸ್ಯವಾಗಿ ಬಣ್ಣಿಸುವುದರಲ್ಲಿ ಎತ್ತಿದಕೈ ಎನ್ನುವುದು ನನಗೆ ತಿಳಿದಿತ್ತು. ಆದರೂ ಅಂದು ಅವನು ಹೇಳಿದ ಕಥೆಯನ್ನು ಅವನ ಆತ್ಮ ಕಥೆಯೆಂದೇ ನಂಬಿದ್ದೆ. ನಿಂಗಿಯ ದುಃಸ್ಥಿತಿಗಾಗಿ ತಾನೆ ದುಃಖಿಸಿ ಕಣ್ಣೀರಿಟ್ಟಿದ್ದ ! ಅವನ ಪ್ರತಿಯೊಂದು ಮಾತೂ ಜೀವಕಳೆ ತುಂಬಿ ನನ್ನ ಹೃದಯವನ್ನೂ ನೇರವಾಗಿ ಸ್ಪರ್ಶಿಸಿ ಅಲ್ಲೋಲ ಕಲ್ಲೋಲ ಮಾಡಿದ್ದಿತು.

"ಶಾಮು, ನೀನು ಮನಸ್ಸು ಮಾಡಿದರೆ ದೊಡ್ಡ ಸಾಹಿತಿಯಾಗುತ್ತೀಲ್ಲ" ಎಂದು ಅವನನ್ನು ಮನಸಾರೆ ಹೊಗಳಿದೆ.

"ನಾನು ಮಾತು ಬಲ್ಲವ ಅಷ್ಟೆ. ಬರೆಹಗಾರನಲ್ಲ." ಎಂದು ಶಾಮು ನಕ್ಕಾಗ ಅವನ ನಾಯಕಿ 'ಥೆರಾ' ಕಾಫಿಯ ಟ್ರೇಯೊಂದಿಗೆ ಪ್ರವೇಶಿಸಿದಳು.



# ಕಾಣಿಕೆ

—ಅನಸೂಯ ರಾವ್

ಬಲೆಯಿಂದ ಮೀನನ್ನು ಬಿಡಿಸುತ್ತಿದ್ದ ಗೋರವ ಸುತ್ತಲು ಕಣ್ಣು ಹರಿಸಿದ. ಕಣ್ಣು ಹಾಯಿಸುವಷ್ಟು ದೂರದಲ್ಲೆಲ್ಲಲ್ಲೂ ಸಣ್ಣ, ದೊಡ್ಡ ದೋಣಿಗಳು ಸಂಚರಿಸುತ್ತಿವೆ. ತಲೆಯ ಮೇಲೆ ಹತ್ತಾರು ಹದ್ದು-ಕಾಗೆಗಳು ಹಾರಾಡುತ್ತಿವೆ, ಪಕ್ಕದ ದೊಡ್ಡ ದೋಣಿಯ ಯಂತ್ರವನ್ನು ಅಪ್ಪ ರಿಪೇರಿ ಮಾಡುತ್ತಾ ಕುಳಿತಿದ್ದಾನೆ, ತಾಯಿ ಸೀಮೆ ಎಣ್ಣೆ ಸ್ಟೌವ್ ಮೇಲೆ ರೊಟ್ಟಿ ಸುಡುತ್ತಾ ಕುಳಿತಿದ್ದಾಳೆ, ಪಕ್ಕದ ಚಾಪೆಯ ಮೇಲೆ 'ಪುಟ್ಟಿ' ಬೆರಳು ಚೀಪುತ್ತಾ ಆಕಾಶ ನೋಡುತ್ತ ಮಲಗಿದ್ದಾಳೆ ಪಿಳಿ ಪಿಳಿ ಕಣ್ಣು ಅರಳಿಸಿ ಪುಟ್ಟತಂಗಿ.

ಹದ್ದೊಂದು ಪಕ್ಕನೆ ದೋಣಿಯ ಮೇಲೆರಗಿ ಸಣ್ಣ ಮೀನೊಂದನ್ನು ಕೊಕ್ಕಿನಲ್ಲಿ ಕಚ್ಚಿ ಮೇಲೆಹಾರಿತು. ಅದರ ರೆಕ್ಕೆಯ ಬಡಿತಕ್ಕೆ ಬೆಚ್ಚಿಬಿದ್ದು ಗೋರವ ಸರಿಯಾಗಿ ಕುಳಿತುಕೊಂಡ, ಇನ್ನೊಂದು ಬಾರಿ ಬಂದರೆ ಅದನ್ನು ಹಿಡಿದು ಕತ್ತು ಮುರಿದು ಸಮುದ್ರಕ್ಕೆ ಎಸೆಯುತ್ತೇನೆಂದು ನಿರ್ಧರಿಸಿದ.

ದೊಡ್ಡ ಮೀನು ಸಣ್ಣಮೀನನ್ನು ಗೊಳಕ್ಕನೆ ನುಂಗಿ ಬಿಡುತ್ತದಂತೆ! ನುಂಗಿನುಂಗಿ ದೊಡ್ಡದಾಗಿ ಬೆಳೆಯುತ್ತದಂತೆ ! ಅಂದರೆ......? ಸಣ್ಣ ಮನುಷ್ಯರನ್ನು ದೊಡ್ಡ ಮನುಷ್ಯರು ತಿಂದೇ ಬೆಳೆಯುತ್ತಾರೆಯೇ? ನನ್ನನ್ನು ಎಂದಾದರೂ ಯಾರಾದರೂ ತಿಂದು ಬಿಡುವರೆ ? ನಾನೂ

ದೊಡ್ಡವನಾಗಬೇಕಾದರೆ ಸಣ್ಣ ಮಕ್ಕಳನ್ನು ತಿನ್ನಬೇಕೆ ? ಆದರೆ ತಾನು ಇದುವರವಿಗೂ ಮನುಷ್ಯ ಮನುಷ್ಯರನ್ನು ತಿಂದುದು ಕಂಡೇಇಲ್ಲ.

ಕೈಯಿಂದ ನುಣುಚಿಕೊಂಡ ಮೀನೊಂದು ಚಂಗನೆ ನೀರಿಗೆ ಹಾರಿ ಮುಳಗೇ ಸಾಗಿತು ಮುಂದೆ. ಸಪ್ತವರ್ಣದ ಹೊಳಪು ಕಣ್ಣಿನ ಪುಟ್ಟ ಮೀನೊಂದನ್ನು ಗೊಳಕ್ಕನೆ ನುಂಗಿ ದಡದತ್ತ ರಭಸದಿಂದಸಾಗಿತು, ಗೊರವನಿಗೆ ಅಪಾರ ಸಿಟ್ಟುಬಂತು ಆರೇ....ಒಂದು ಕ್ಷಣದಲ್ಲಿ ಮಾಯ,!

ದಡದ ಮೇಲೆ ಆ ಬಾಬುವಿನ ಕೈ ಹಿಡಿದು ನಿಂತಿರುವ ಸಣ್ಣ ಹುಡುಗಿಯ ಕಣ್ಣು ಮೀನಿನ ಕಣ್ಣಿಗಿಂತಲು ಹೊಳಪಾಗಿದೆ. ತೊಟ್ಟಿರುವ ಫ್ರಾಕೂ ಅಂದವಾಗಿದೆ. ಪುಟ್ಟಿ ಅಷ್ಟುದ್ದ ಹುಡುಗಿಯಾದಾಗ ಅವಳಿಗೂ ಅಂಥದೇ ಒಂದು ಫ್ರಾಕ್ ತಂದುಕೊಡಬೇಕು. ಆದರೆ ತಗಲುವ ಹಣ ಸಂಪಾದಿಸುವುದು ಹೇಗೆ?

ಅವರಂತೆ ನಾನೂ 'ಬಾಬು' ಆಗಬೇಕು. ಸೊಗಸಾದ ಉಡುಪು ಧರಿಸಬೇಕು. ಆಗ ತನ್ನ ಕೈಯಲ್ಲೂ, ರೂಪಾಯಿ ಓಡಾಡಹತ್ತುತ್ತದೆ. ಏನು ಬೇಕಾದರೂ ಕೊಂಡುಕೊಳ್ಳಬಹುದು. ಲಂಗೋಟಿ ತೊಡ್ಡ ತನ್ನ ಅಪ್ಪನಂಥ ಬೆಸ್ತರು ದೋಣಿಯು ಬಾಡಿಗೆ ತಾವಾಗಿ ತಂದು ಬಾಬುಗಳಿಗೆ ಒಪ್ಪಿಸಿ ಕೈಕಟ್ಟಿ ನಿಲ್ಲುತ್ತಾರೆ.

ಬಾಬುಗಳನ್ನೇಲ್ಲಾ ತುಂಬಾ ಓದಿದವರಂತೆ! ನನಗೆ ಏನೂ ಬಾರದಲ್ಲ? ಓದು ಇಲ್ಲದಿದ್ದರೆ ಏನಾಯಿತು. ಬೆಲೆಬಾಳುವ ಬಟ್ಟೆ ಧರಿಸಿದರಾಯ್ತು, ಬಲರಾಮ ಬ್ಯಾರಿಯಂತೆ.

ಹೆಮ್ಮೆಯಿಂದ ಗೊರವ ಕತ್ತೆತ್ತಿ ಸುತ್ತಲೂ ದೃಷ್ಟಿಹರಿಸಿದ. ಅಪ್ಪ ಇನ್ನೂ ಯಂತ್ರದ ರಿಪೇರಿಯಲ್ಲೆ ತೊಡಗಿದ್ದಾನೆ. ಊರಿನ ಕೋಳಿ ಗಲ್ಲಿಯ' 'ಮಸ್ತಾನ್' ಬಂದಿದ್ದರೆ ಒಂದು ಗಳಿಗೆಯಲ್ಲಿ ರಿಪೇರಿ ಮಾಡಿ ಕೊಟ್ಟು ಹೋಗುತ್ತಿದ್ದ, ಆದರೆ ಅವನಿಗೆ ಹಣಕೊಟ್ಟರೆ ಅಪ್ಪನ ಬಳಿ ತಿನ್ನಲೇ ಏನೂ ಉಳಿಯುವುದಿಲ್ಲವಂತೆ?

ಚಳಿಗಾಲದಲ್ಲಿ ಮೀನುಗಳು ಸಿಗುವುದು ಬೇರೆ ಕಡಿಮೆಯಂತೆ ! ಏಕೆ ಕಡಿಮೆಯಾಗಬೇಕು? ಚಳಿಗಾಲದಲ್ಲಿ ಜನಗಳೂ ಓಡಾಡುವುದು ಕಡಿಮೆ, ಬೆಚ್ಚಗೆ ಮನೆಯೊಳಗೇ ಕುಳಿತಿರುತ್ತಾರೆ. ಗರಂಗರಂ ಬೊಂಡಾ ಪಕೋಡಾ ತಿನ್ನುತ್ತಾ. ನೀರಿನೊಳಗೂ ಮಿನುಗಳು ಮನೆಯೊಳಗೇ ಹುದುಗಿ ಕುಳಿತಿರಬಹುದು. ಮೀನಿನ ಮನೆಗೆ ಏಕೆ ನಾವು ಗಾಳ ಹಾಕಬಾರದು? ಆಗ ನೂರಾರು ಮೀನುಗಳು ಸಿಕ್ಕಿ ಬೀಳುತ್ತವೆ. ಬೇಕಾದಷ್ಟು ಹಣ ಬರುತ್ತದೆ.

ಗೊರವ ಮಾಡುತ್ತಿದ್ದ ಕೆಲಸ ಬಿಟ್ಟು ದೋಣಿಯ ಪಕ್ಕಕ್ಕೆ ಬಂದು

ನೀರಿನೊಳಗೆ ಹಣಕಿ ನೋಡಿದ. ಆಳಕ್ಕೆ ಕೈ ಇಳೀ ಬಿಟ್ಟು ತಡಕಾಡಿದ ನೀರಿನೊಳಗೆ ಬೆಳೆದಿದ್ದ ಜೊಂಡು ಕೈಗೆ ಹತ್ತಿತು.

"ಏ ಮಗಾ....ನೀರ್ಗೆ ಬಿದ್ದುಗಿದ್ದೀಯಾ...." ಅರಚಿದಳು ತಾಯಿ ನೀರಿಗೆ ಬಿದ್ದರೆ ಈಜಲು ತನಗೆ ಬಾರದೆ? ನಾನು ಇನ್ನೂ 'ಪುಟ್ಟ' ಎಂದು ಕೊಂಡಿದ್ದಾಳೆ ಅವ್ವಾ. ನಾನು ಇಷ್ಟರಲ್ಲೆ ಬೆಳೆದು ಅಪ್ಪನ ಂತಾಗುತ್ತೇನೆ.

ತನ್ನ ಮೈಯನ್ನು ತಾನೇ ಒಮ್ಮೆ ನೋಡಿಕೊಂಡ, ಅವ್ವ ಹೇಳುವ ಮಾತು ನಿಜ, ತಾನು ಅಪ್ಪನ ತದ್ರೂಪು, ಅದೇ ಉದ್ದ ನಾದ ಹೊಳೆಯುವ ಮೈ. ಆದರೆ ತಾನು ಅಪ್ಪನಿಗಿಂತ ಸ್ವಲ್ಪ ಬಿಳಿ ಬಣ್ಣದಲ್ಲಿ ಅವ್ವನನ್ನು ಹೋಲುತ್ತಿದ್ದೇನೆ. ಅವ್ವ ನಗರದ ಉಡುಪರ ಹೆಂಡತಿಯನ್ನು ಹೋಲುತ್ತಾಳೆ. ಅವ್ವನೂ ಜರತಾರಿ ಸೀರೆ ಉಟ್ಟು ಒಡವೆ ಹಾಕಿಕೊಂಡರೆ ಊರವರೆಲ್ಲಾ ನಮಸ್ಕರಿಸುತ್ತಾರೆ. ಆದರೆ ಬಡ ವರಿಗೆ ಅದೆಲ್ಲಿಸಾಧ್ಯ ? ನಾವೇಕೆ ಬಡವರು ? ಸಾಹುಕಾರರು ಯಾಕೆ ಆಗಬಾರದು ? ಆಗಲೇಬೇಕು.

ಮೊದಲು ಮೀನನ್ನು ಮಾರಲು ಒಂದು ಸೈಕಲ್ಲು ಬೇಕು. ಆ ಮೇಲೆ ಬಹಳ ಹಣ ಸಂಪಾದಿಸಿದ ಮೇಲೆ ಒಂದು ಕಾರು. ಆ ಕಾರಿನ ಹಿಂದಿನ ಡಬ್ಬಿ ಯಲ್ಲಿ ಬುಟ್ಟಿಗಟ್ಟಲೆ ಮೀನನ್ನು ಕೊಂಡು ಆಳುಗಳ ಕೈತುಂಬಿಕೊಳ್ಳಬೇಕು.

ಕೈಯಲ್ಲಿ ಬೀಡಿ....ಅಲ್ಲಾ....ಸಿಗರೇಟು ಹಿಡಿದಿರಬೇಕು ಮೊರ್‌ಚಂದಾನಿ ಮಗನಂತೆ. ಬದಿಯಲ್ಲಿ ಪುಟ್ಟನಾಯಿ ಕಾಲು ನೆಕ್ಕುತ್ತ ಓಡಿ ಬರುತ್ತಿರಬೇಕು. ಓಹ್! ಎಷ್ಟು ಸೊಗಸು!

ಅಯ್ಯೋ ಮೀನು ಕೈಯಿಂದ ನುಣುಚಿ ನೀರಿನಲ್ಲಿ ಬಿದ್ದು ಹೋಯಿತು.

ಹಾಳು ನುಣುಪು ಪ್ಳ.

"ಏ ಮಗಾ ಹಿಡ್ದ ಮೀನನ್ನೆಲ್ಲಾ ನೀರ್ಗೆ ಬಿಡ್ತಾ ಇದ್ರೆ ನಾವು ಮಣ್ಣು ಮುಕ್ಬೇಕಷ್ಟೆ?!"

ಅಪ್ಪ ಏಕೆ ಇಷ್ಟಕ್ಕೆಲ್ಲಾ ರೇಗಾಡ್ಬೇಕು? ಒಂದು ಮೀನು ಹೋದರೆ ಏನಾಯಿತು?

"ಸಿಕ್ಕಿರೋದೇ ನಾಲ್ಕು ಮೀನು!" ಮತ್ತೆ ಅಪ್ಪನ ಸಿಡಕು ದನಿ.

ಗೊರವ ನೀರಿನೊಳಗೆ ಡುಡುಂ ಎಂದು ಧುಮುಕಿದ "ಏ ಮಗಾ....!" ತಾಯಿ ಅರಚಿದಳು ದೊಡ್ಡ ದೋಣಿಯಲ್ಲಿ ಒಮ್ಮೆಗೇ ನಿಂತು.

ಐದು ನಿಮಿಷದಲ್ಲಿ ದೊಡ್ಡದೊಂದು ಮೀನನ್ನು ಕೈಲಿ ಹಿಡಿದು "ಅಪ್ಪಾ" ಎಂದು ಕೂಗಿದ. ಉಲ್ಲಸಿತನಾಗಿ ಗಪ್ಪ ಗೆಲುವಿನಿಂದ.

ಅವ್ವ ನಕ್ಕಳ.

"ನಿನ್ನಂಗಲ್ಲ—ಗೊರವ...ಧೀರಾ" ಅಪ್ಪನತ್ತ ತಿರುಗಿ ಗರ್ವದಿಂದ ನೋಡಿದಾಗ ಆತ ಯಾವುದೋ ಬೋಲ್ಟನ್ನು ತೆಗೆಯುವುದರಲ್ಲಿ ತನ್ಮಯನಾಗಿದ್ದ.

ಅವ್ವಾ ಎಷ್ಟು ಒಳ್ಳೆಯವಳು. ಅಪ್ಪಾ ಏಕೆ ಹಾಗೆ ಕುಳಿತಿದ್ದಾನೆ? ಒಂದೂ ಮಾತೂ ಆಡದೆ. ಎಣ್ಣೆ ಕೈಯನ್ನು ಕರಿಯ ಕೆನ್ನೆಗೆ ಬಳಿದು

ಕೊಳ್ಳುತ್ತಾ ? ನೀರಿನ ಮೇಲೆ ಎಣ್ಣೆ ಚೆಲ್ಲಿದರೆ ಬಿಸಿಲು ಕಾಮನ ಬಿಲ್ಲಿನ ಬಣ್ಣ ಮೂಡಿಸುವುದಂತೆ ! ಸಮುದ್ರದಲ್ಲಿ ಕಾಮನ ಬಣ್ಣ ತೇಲುತ್ತಿದೆ ! ಎಲ್ಲಿಂದ ಬಂತು ಎಣ್ಣೆ ? !

"ಬೇಗ ಬಾರ್ಲಾಮಗಾ...ಇದೊಂದು ಸ್ವಲ್ಪ ಹಿಡ್ಕೋಬೇಕು" ತಲೆ ಎತ್ತದೆ ನುಡಿದ ಅಪ್ಪ.

"ಮೀನು ಬುಟ್ಯಾಗೆ ತುಂಬ್ಕೊಂಡು ಬೇಗ ಬಾರ್ಲಾ ಗೊರವಾ ಪೇಟೆಗೆ ಹೋಗ್ಬೇಕು. ಎಸ್ರಿಗೆ ಮೆಣಸಿಪಕಾಯಿ ತರ್ಬೇಕು" ಅವ್ವ ಕೂಗಿದಳು ರೊಟ್ಟಿ ತಟ್ಟುತ್ತ.

ಅವ್ವ, ಅಪ್ಪ ಇಬ್ಬರೂ ಕೂಗುತ್ತಿದ್ದಾರೆ

ಯಾರ ಮಾತು ಕೇಳುವುದು ? ಪುಟ್ಟಿಬೇರೆ ಅಳಹತ್ತಿದ್ದಾಳೆ. ಅವಳು ಅಳುಮುಂಜಿ, ಯಾವಾಗಲೂ ಅಳುತ್ತಲೇ ಇರುತ್ತಾಳೆ,

"ಬಾರ್ಲಾಮಗಾ....ಮಗೂನ ಎತ್ಕೊಬಾ ನನ್ನ ಕೈಬಿಡ್ತಿಲ್ಲ" ಮತ್ತೆ ಅವ್ವ ಕರೆಯುತ್ತಿದ್ದಾಳೆ.

ಪುಟ್ಟಿ ಅಳಬಾರದು. ಇನ್ನೂ ಪುಟ್ಟಿ ಪುಟ್ಟ ಪಾಪ. ಅವಳು ಎಷ್ಟು ಚೆನ್ನಾಗಿ ನಗುತ್ತಾಳೆ! ನಾನು ಎತ್ತಿಕೊಂಡರೆ ಫಳ ಫಳ ಕಣ್ಣು ಅರಳಿಸುತ್ತಾಳೆ. ತನ್ನ ಪುಟ್ಟ ಬೆರಳಿಂದ ನನ್ನ ಕೆನೆ ಬಡಿಯುತ್ತಾಳೆ, ಪುಟ್ಟ ಬಾಯಿ ಅಗಲಿಸಿ ಕೇಕೆ ಹಾಕುತ್ತಾಳೆ.

ಬಲೆಯಿಂದ ಬಿಡಿಸಿದ ಮೀನೊಂದನ್ನು ಬುಟ್ಟಿಯತ್ತ ಎಸೆದು ದೊಡ್ಡ ದೋಣಿಗೆ ಹಾರಿದ ಮೀನು ಚಣ್ಣನೆ ನೆಗೆದು ನೀರಿನೊಳಗೆ ಮುಳುಗಿ ಮಾರುದ್ದ ದೂರದಲ್ಲಿ ತೇಲಿತು. ಮತ್ತೆ ಈಜಿ ಮುಂದೆ ಸಾಗಿತು.

"ಥೂ....ನಿನ್ನ..." ಅಬ್ಬರಿಸಿದಳು ಅವ್ವ. ಗೊರವ ತಂಗಿಯನ್ನಪ್ಪಿ ಕೆನ್ನೆಗೆ ಮುತ್ತನ್ನಿಟ್ಟ. ಕಿಲಕಿಲನೆ ನಗಹತ್ತಿದಳು.

ಅವನೂ ಅಷ್ಟೆ. ಅಪ್ಪ ಅವ್ವನನ್ನು ಬಿಗಿಯಾಗಿ ಅಪ್ಪಿ ಮುತ್ತನ್ನಿಟ್ಟಾಗ ಸಿಡಿಮಿಡಿಗೊಳ್ಳುತ್ತಾಳೆ. ಒಮ್ಮೆಗೇ ಸುಮ್ಮನಾಗುತ್ತಾಳೆ. ಕಿಲಕಿಲ ನಗುತ್ತಿರುತ್ತಾಳೆ. ಅಪ್ಪನನ್ನೇ ಬಾಚಿ ತಬ್ಬುತ್ತಾಳೆ. ಥೂ! ಧೊಡ್ಡವರು ತಬ್ಬುವುದನ್ನು ಮಕ್ಕಳು ನೋಡಬಾರದಂತೆ! ಅದಕ್ಕೇ ದೀಪ ಆರಿಸೇ ತಬ್ಬುತ್ತಾರೆ. ನನ್ನನ್ನು ಗೋಡೆ ಕಡೆಗೆ ತಿರುಗಿಸಿ ಮುತ್ತಿಡುತ್ತಾರೆ. ಹರಿದ ಕಂಬಳಿಯನ್ನು ಆಗ ನನ್ನ ಮುಖಕ್ಕೆ ಮುಚ್ಚುವುದುಂಟು. ಆದರೆ ಎಷ್ಟೋ ಬಾರಿ ನಾನು ಇದನ್ನು ನೋಡಿ ಬಿಟ್ಟಿದ್ದೇನೆ. ಥೂ. ಆದರೆ ಪಕ್ಕದ ಗುಡಿಸಲಿನ ಈರ. ನೀಲಿ ಆಡುವ ಆಟ! ಎಷ್ಟು ಹೊಲಸು. ನೀಲಿಯನ್ನಂತೂ ಆ ಪೋರ....ಪೋಲಿ ಹುಡುಗ (ಅವರಪ್ಪ ಹಾಗೇ ಕರೆಯುತ್ತಾರೆ) ಹಿಸುಕಿಹಾಕುತ್ತಾನೆ. ಮರಳ ಮೇಲೆ ಮಲಗಿಸಿ ನೀರಿನೊಳಗೆ ಉರುಳಿಸಿ ಮೈ ಎಲ್ಲಾ ಸವರುತ್ತಾನೆ. ಎಲ್ಲೆಲ್ಲೋ ಮುತ್ತಿಡುತ್ತಾನೆ. ಅವಳೂ ಹಾಗೇ....ಸ್ವಲ್ಪವೂ ನಾಚಿಕೆ ಇಲ್ಲ ಅಪ್ಪ ಅವ್ವನಿಗೆ ಎಂದಾದರೂ ಬೆಳಕಿನಲ್ಲಿ ಹೀಗೆಲ್ಲಾ ಮಾಡುವುದುಂಟೆ? ಅವ್ವ ಕಿಲ ಕಿಲ ನಕ್ಕಾಗ, ಕಂಡುದುಂಟು. ಮಲಗಿದ್ದಾಗ ಹೊರಳಾಟದಲ್ಲಿ ಸೀರೆ ಬಿಚ್ಚಿ ಹೋಗುವುದು ವಾಸ್ತವ. ಆಕೆ ನನ್ನ ಹಾಗೆ ಚಡ್ಡಿ ತೊಡುವುದಿಲ್ಲವಲ್ಲಾ!

"ಬಾರೋ. ಎಷ್ಟು ಸಾರಿ ಕರೀ ಬೇಕೊ? ಅವ್ವನದು ಯಾವಾಗಲೂ ಅವಾಂತರವೇ. ಜಾರಿಬಿದ್ದರೆ ಆಗ ಮತ್ತೆ ರೇಗುತ್ತಾಳೆ. ಆ ಮೇಲೆ ಕಣ್ಣೀರು ಕರೆಯುತ್ತಾಳೆ. ವಿಚಿತ್ರ ಅವ್ವಾ!

ಗೊರವ ಹತ್ತಿರ ಹೋದಾಗ ಇವನಿಗೆ ಉಣ್ಣಲು ತಾಟಿನ್ನಿತ್ತು ನಾಲ್ಕು ರೊಟ್ಟಿ-ಪಲ್ಯ ಹಾಕಿ ತಾನೂ ಪಕ್ಕದ ದೊಡ್ಡ ಡಬ್ಬಿಯಿಂದ ಇನ್ನೊಂದು ಸಣ್ಣ ಡಬ್ಬಿ ತೆಗೆದು ಅದನ್ನು ಅಲ್ಲಾಡಿಸಿ ನೋಡಿದಳು.

ಒಳಗೆ ಹಣ ಸದ್ದು ಮಾಡಿತು.

"ಮಗಾ...ನಿನ್ನೇನೂ ವಡಭಾಂಡೇಶ್ವರನಿಗೆ ಕಾಣಿಕೆ ಹಾಕಿಲ್ಲ."

"ಈ ವೊತ್ತು ಮೀನು ಮಾರಿ ಬಂದ್ಮೇಕೆ ಎರಡು ಪಾವಲಿ ಹಾಕು. ಇದ್ರಲ್ಲಿ ಮರೀಬೇಡಾ....ಇಲ್ಲೇ ಮಿರ್ಷ ಬುಡ್ಡಲ್ಲಿ ಮಡಗಿರ್ತೀನಿ"

"ಎಷ್ಟಿದೆಯಮ್ಮಾ ಅದ್ರಲ್ಲಿ ?" ರೊಟ್ಟಿ ತಿನ್ನುತ್ತಲೇ ಪ್ರಶ್ನಿಸಿದ ಗೊರವ.

"ಐತೆ 4, 5 ವರ್ಷದ್ದು ನೂರು ನೂರೈವತ್ತು. ನಾಡಿದ್ದು ಸೋಮಾರ ಹರ್ಕೆ ಕೊಟ್ಟುಬಿಡಾಣಾ ಅದೇಸೋ ಧ್ವಜ ಸ್ತಂಭ ಹೊಸ್ದಾಗಿ ಮಾಡಸ್ತಾ ಅವ್ರಂತೆ, ಊರಾಗೆಲ್ಲಾ ಹಣಾ ಎತ್ತಾ ಅವ್ರೆ"

"ಅಟೊಂದು ಹಣಾ ಯಾಕವ್ವಾ ಕೊಡ್ತಿ ದೇವ್ರಿಗೆ ಅಪ್ಪಯ್ಯಂಗೆ ಕೊಟ್ರೆ ಬೋಟಿನ ಸಾಲ ತೀರ್ರೋಕಿಲ್ವಾ ?"

"ಥೂ...ನಿನ್ನ ಏನ್ಬಂದಿದೆ ಕೇಡು ನಿಂಗೆ..."

ಹಂಗೆಲ್ಲಾ ಮಾತ್ನಾಡ್ತಾರಾ? ಬಿಡ್ತು ಅನ್ನು...ಇವತ್ತು ಇನ್ನೊಂದು ಪಾವಲಿ ಜಾಸ್ತಿ ಹಾಕು ತಪ್ಪಾಯ್ತು ಅಂತಾ" ಭೆನ್ನಿನ ಮೇಲೆ ಗುದ್ದಿದಳು

ಅವ್ವಾ ತಪ್ಪಾಯ್ತು...ತಪ್ಪಾಯ್ತು- 'ಏಜಲು ಕೈಯಲ್ಲಿ ಕೆನ್ನೆ ಒಡಿದು ಕೊಂಡ.

ವಡಭಾಂಡೇಶ್ವರ ಬಲರಾಮ ಬಾಳ ಸತ್ಯ ದೇವರು. ಅವನಿಗೆ ಅನ್ಯಾಯ ಮಾಡಿದರೆ ಬಿರುಗಾಳಿ ಎಬ್ಬಿಸುತ್ತಾನಂತೆ. ಬೆಂಕಿ ಹೊತ್ತಿಸುತ್ತಾನಂತೆ. ರೋಗ ಹರಡುತ್ತಾನಂತೆ. ಸಮುದ್ರದಲ್ಲಿ ಮೀನನ್ನೆಲ್ಲ ಕೊಂದು ಬಿಡುತ್ತಾನಂತೆ ಸಾಗರದಲ್ಲಿ ಮೀನೇ ಇಲ್ಲದೆ ಹೋದರೆ ಇನ್ನು ಬೆಸ್ತರ ಗತಿ?

ಹಿಂದೊಮ್ಮೆ ಬಿರುಗಾಳಿ ಎದ್ದಿದ್ದಾಗ ಅವ್ವ ನುಡಿದಿದ್ದ ಮಾತು ನೆನಪು ಬಂದೊಡನೆ ಗಡಗಡ ನಡುಗಿದ. ರೊಟ್ಟಿ ತಿನ್ನುವುದನ್ನು ನಿಲ್ಲಿಸಿ ಕಣ್ಣು ಮುಚ್ಚಿ ಮನದಲ್ಲೇ ದೇವರನ್ನು ನೆನೆದು ಕೈ ಮುಗಿದ.

ಆಗ ಒಂದು ರೂಪಾಯಿ ದೇವರ ಡಬ್ಬಿಗೆ ಹಾಕಿದ ಮೇಲೆ ಅಪ್ಪನ ದೋಣಿ ನೀರಿನ ಮೇಲೆ ಕಾಣಿಸಿ ಕೊಂಡಿದ್ದುದು, ಹೊಸ ಜನ್ಮ ತಾಳೀ ಅಪ್ಪ ಬಂದಿದ್ದಾನಂತೆ. "ಮೀನು ಮಾರಿ ಬತ್ತಾ ಹಂಗೇ ನಾಲ್ಕು ಸೀಸೆ ಸೀಮೆಣ್ಣೆ ತತ್ತಾ. ಇಲ್ಲೀ ಮೋಟಾರ್ ಪಕ್ದಾಗೇ ಮಡ್ಗು ಗುಡಿಸ್ಲಲ್ಲಿ ಮಡಗ್ಬೇಡ. ಪುಟ್ಟಿ ಕೈ ತಗುಲಿ ಉರುಳಿ ಬೆಂಕಿಗಿಂಕಿ ಹತ್ತಾತು" ಇನ್ನೂ ಎರಡು ರೊಟ್ಟಿ ಹಾಕಿ ತಲೆ ಸವರಿ ಬೆನ್ನಿನ ಮೇಲೆ ಮೃದುವಾಗಿ ಕೈ ಆಡಿಸಿ ಪಕ್ಕಕ್ಕೆ ಎಳೆದುಕೊಂಡು ಗಟಗಟ ನೀರನ್ನು ಕುಡಿಸಿದಾಗ ಅವ್ವ ಎಷ್ಟು ಒಳ್ಳೆಯವಳು ಎಂದು ಪ್ರೀತಿಯಿಂದ ಕತ್ತೆತ್ತಿ ನೋಡಿದ, ಮುಗುಳ್ನಕ್ಕ.

"ಅಪ್ಪಾ ಇನ್ನೂ ರಿಪೇರಿಯಲ್ಲಿ ತೊಡಗಿದ್ದಾನೆ. ಎಂದಿಗೆ ಆತನ ದೋಣಿ ಸರಿ ಹೋಗುವುದು? ಯಾವಾಗ ಆತ ಮೀನನ್ನು ಹಿಡಿಯಲು ಹೋಗುವುದು ? ನಾಲ್ಕು ದಿನದಿಂದ ರಿಪೇರಿ ಕೆಲಸ ನಡದೇ ಇದೆ ! ನೆನ್ನೆ ಬೆಳಿಗ್ಗೆಯಂತೆ ಇಂದೂ ಒಬ್ಬನೇ ಪುಟ್ಟ ದೋಣಿಯಲ್ಲಿ ಮೀನು ಹಿಡಿಯಲು ಹೋಗಿದ್ದಾಯ್ತು, ನಾನೊಬ್ಬನೆ ಎಷ್ಟು ದುಡಿಯಲು ಸಾಧ್ಯ? 'ಕಳ್ಳುಕಾಕ' ಸಮುದ್ರದಲ್ಲಿ ದೂರ ಹೋಗಲು ಬಿಟ್ಟರೆತಾನೆ ದೊಡ್ಡ ಮೀನು ಹಿಡಿಯಲು ಸಾಧ್ಯ ? ನಾಳೆ ಗೌರಿ ಅಣ್ಣ 'ಕಾಳ'ನೊಡನೆ ಹೋಗಬೇಕು. ಹಾಳು ಕಾಳನಿಗೆ ಪಾಲು ಬೇರೆಹಾಳು! ಅಪ್ಪನ ಜೊತೆಯಲ್ಲೆ ಹೋಗಿದ್ರೆ ದೊಡ್ಡ ಯಲ್ಲಿ ದೊಡ್ಡ ಬಲೆ ಬೀಸಿ ಬುಟ್ಟಿಬುಟ್ಟಿ ಮೀನು ಹಿಡಿಯ ಬಹುದಿತ್ತು ಆಗ ಮೀನು ಮಾರಲು ಅವ್ವಾ ಬರುತ್ತಿದ್ದಳು. ಖಾಸಿಂಸಾಬಿ ಅಂಗಡಿ ಯಲ್ಲಿ ಫೇಡಾ ಕೊಡಿಸುತ್ತಿದ್ದಳು. ಅವ್ವನ ಜೊತೆಯಲ್ಲಿ ಬಜಾರ್‌ಗೆ ಹೋಗುವುದೇ ಒಂದು ಮೋಜು. ಅವ್ವಾ ಬಜಾರಿಗೆ ಬಂದರೆ ಮಿನಿಟನಲ್ಲಿ ಅವ್ವನ ಗೋಡೆ ಖಾಲಿ ಆಗಿ ಹೋಗುತ್ತದೆ. ಅವ್ವ ಸೂಜಿಗಲ್ಲಂತೆ! ನೆರೆ ಹೊರೆಯವರೆಲ್ಲಾ ಅನ್ನುತ್ತಾರೆ.

"ಸೂಜಿಗಲ್ಲು ಅಂದ್ರೆ ಏನವ್ವಾ?"

"ಸೂಜಿಗಲ್ಲು ಅಂದ್ರೆ. ಹತ್ರ ಸೇಳ್ಕೊಳೋದು ಅಂತಾ"

ಮುಸಿಮುಸಿ ನಕ್ಕ ಗೊರವಾ, ಅಪ್ಪ ತಾನು, ಪುಟ್ಟಿ ಎಲ್ಲರೂ ಅದಕ್ಕೇ ಅವ್ವನ ಹತ್ತಿರ ಹಾಗೆ ಸರಿದು ಹೋಗುವುದು!

"ಎರಡು ದಿನದಿಂದ ಮಳೇನೇ ಇಲ್ಲ. ಬಿಸ್ಲು ಸಿಡ್ದು ಹೋಗ್ತಿದ" ಬೆವರನ್ನು ಒರೆಸಿಕೊಂಡ ಅವ್ವನನ್ನು ಕಂಡು ಗೊರವಾ ನಕ್ಕ.

ನನ್ನ ಹಾಗೆ ಬೇಕೆಂದಾಗ ನೀರಿನಲ್ಲಿ ಮುಳುಗುವಂತಿಲ್ಲ ಅವ್ವಾ. ಚೆನ್ನಾಗಿ ಈಜಲೇ ಬಾರದು. ಬಿಸಿಲಲ್ಲಿ ಬರೀ ಮೈಯಲ್ಲಿ ನಿಂತು ಒಣಗಿಸಿ ಕೊಳ್ಳುವ ಖುಷಿ ಅವಳಿಗೆ ಎಂದೂ ಬಾರದು.

ಅಪ್ಪನತ್ತ ದೃಷ್ಟಿ ಹರಿಸಿದ ಮಸಿ ಕೈಯನ್ನು ಮುಖದ ಮೇಲೆ ಆಡಿಸಿದ್ದ "ಕಲ್ಮಂಡ" ಪೂಜಾರಿಯ ನೆನಪು ಬಂತು. ಗಹಗಹಿಸಿದ.

"ದಡಕ್ಕೆ ಹೋದಾಗ ಗುಡಿಸ್ಲಿಂದ ಡೀಸಲ್ ಕ್ಯಾನ್ ತಂದು ಮಡ್ಗೊ ಸನ್ಮಗ್ನೆ" ಗುಡುಗಿದ ಅಪ್ಪಾ, ಅಪ್ಪನ ಮಾತು ಗುಡುಗಿನಷ್ಟೇ ಅಬ್ಬರ, ಆದರೆ ಮನಸ್ಸು ಮಳೆಯಂತೆ ತಂಪು ರಾತ್ರಿ ಒಮ್ಮೊಮ್ಮೆ ಕರುಳಲ್ಲಿ ಬೆರಳು ಆಡಿಸಿದಾಗ ಹಿತವೆನಿಸುತ್ತದೆ. ಬಜಾರಿಗೆ ಹೋದಾಗ ಕಡ್ಲೆ ಕಾಯಿ, ಬರ್ಫಿಕಾರದ ದಿನವೇ ಇಲ್ಲ ಕೊಳೆಯ ಜೇಬಿನೊಳಗೆ ಬಚ್ಚಿಟ್ಟು ಕೊಂಡಿದ್ದು ಮೀನು ಹಿಡಿಯಲು ಹೋದಾಗ ಸಾಗರ ಮಧ್ಯದಲ್ಲಿ ಚೂರ ಚೂರು ಕೊಡುತ್ತಾನೆ. ಅದು ಎಷ್ಟು ಮಜಾ!

"ಈಗ್ಲೆ ತಂದು ಮಡ್ಗಿ ಬಾಜಾರ್‌ಗೆ ಹೋಗ್ತಿನಿ" ಚಂಗನೆ ಪಕ್ಕದ ಸಣ್ಣ ದೋಣಿಗೆ ಹಾರಿ ಬಗ್ಗಿ ನೀರಿನಲ್ಲಿ ಕೈತೊಳೆದು ಹುಟ್ಟು ಹಾಕ ತೊಡಗಿದ ದಡದತ್ತ ಸಾಗಲು.

ಬಜಾರಿಗೆ ಹೋದ ಅರ್ಧ ಗಂಟೆಯಲ್ಲೆಲ್ಲಾ ಗೊರವನ ಮೀನಿನ ಸಣ್ಣ ಬುಟ್ಟಿ ಖಾಲಿಯಾಗ ಹತ್ತಿತ್ತು,

ಎಲ್ಲೆಲ್ಲೂ ಏನೋ ಗುಸುಗುಸು ಮಾತು! ಜನ ಭಯಭೀತರಾದಂತಿದೆ! ಜನ ಪ್ರವಾಹವೇ ಸಾಗರದತ್ತ ನಡೆದಿದೆ.

ಸಂಟರ ಗಾಳಿಯಂತೆ ಸಮುದ್ರದಿಂದ ಮೇಲೇರುತ್ತಿರುವ ಕಿರಿಯ ಮೋಡದ ವಿಚಿತ್ರ ಸುಳಿ !

ದೋಣಿ ಕಟ್ಟೆಗೆ ಬೆಂಕಿ !!

ಪಿಸುಮಾತು ಪೇಟೆಗೆ ಬೆಂಕಿ ಹಚ್ಚಿದೆ.

ಉಳಿದೆರಡು ಮೀನನ್ನು ಎದುರಿಗೆ ಬಾಲ ಆಡಿಸುತ್ತ ನಿಂತಿದ್ದ ಬೀದಿ ನಾಯಿಗೆಸೆದು ದೋಣಿಕಟ್ಟೆಯತ್ತ ಸಾಗುತ್ತಿದ್ದ ಜನಸ್ತೋಮವನ್ನು ಸೇರಿದ ಗೊರವ.

ಸಮುದ್ರದಡದಲ್ಲಿ ಬಂದು ನಿಂತಾಗ ಉರಿಯುತ್ತಿರುವ ದೋಣಿ ಕಟ್ಟೆ ಕಂಡು ಮಹಾಭಾರತದ ಅರಗಿನ ಅರಮನೆಯ ನೆನಪು ಬಂತು. ಮುಗಿಲೆತ್ತರ ನಾಲಿಗೆ ಚಾಚಿದೆ ಕೆಂಪು ಜ್ವಾಲೆ. ಸುತ್ತಮುತ್ತ ಕೈ ಚಾಚಿದೆ ಕರಿಯ ಹೊಗೆ. ಆಕಾಶದಲ್ಲಿ ಬಣ್ಣಬಣ್ಣದ ಬಾಣ ಬಿರುಸಿ ಗಳು ಹಾರಾಡುತ್ತಿವೆ ಪಂಜುರ್ಲಿ ಜಾತ್ರೆಯಲ್ಲಿದ್ದಂತೆ. ಒಂದು ನಿಮಿಷ ಸುಮ್ಮನೆ ನಿಂತ ಗೊರವನಿಗೆ ತನ್ನ ಅವ್ವ ಅಪ್ಪನ ನೆನಪು ಬಂದಾಗ ಓಡಿದ ತನ್ನ ದೋಣಿಯಿದ್ದ ಸ್ಥಳದತ್ತ. ನೀರು ಹೊತ್ತಿ ಉರಿಯು ತ್ತಿರುವುದನ್ನು ಅಮ್ಮನಿಗೆ ತೋರಿಸುವ ಕಾತರ. ಏದುಬ್ಬಸ ಪಡುತ್ತಾ ಓಡಿದ ಜನಗಳ ಮಧ್ಯೆ ನುಸುಳಿ ಬಿದ್ದು ಎದ್ದು.

ಗುಡಿಸಿಲಿನ ಹತ್ತಿರ ಬಂದು ನೋಡಿದ, ಒಳಗೆ ಯಾರೂ ಕಾಣಿಸಲಿಲ್ಲ ಕಡಲಿನಲ್ಲಿ ಎಲ್ಲವೂ ಅಸ್ತವ್ಯಸ್ತ ! ದೋಣಿಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಹರಡಿ ನಿಂತಿವೆ. ಕಟ್ಟೆಯಿಂದ ದೂರ ಸರಿದು ಹೋಗುತ್ತಿವೆ. ಆದರೆ ಅಲೆ ಯೊಡನೆಯೇ ತೇಲಿಬರುತ್ತಿದೆ ಬೆಂಕಿ !

"ಅವ್ವಾ" ಕಿರುಚಹತ್ತಿದ ಗೊರವಾ ಸುತ್ತಲೂ ಮುಖ ಮಾಡಿ ಪಕ್ಕದಲ್ಲಿ ಸುಳಿದ ಎಲ್ಲರನ್ನೂ ಪ್ರಶ್ನಿಸಿದ. ಯಾರಿಗೂ ಉತ್ತರಿಸುವ ವ್ಯವಧಾನ ಇದ್ದಂತಿರಲಿಲ್ಲ, ಅಪಾರ ನಷ್ಟ, ಹಾಳಾದೆವು ಎಂದು ಕನಲ ತ್ತಿದ್ದಾರೆ.!

ದಡದಲ್ಲಿ ನಿಂತು ಸಾಗರದತ್ತ ದೃಷ್ಟಿಹರಿಸಿದ. ಇದ್ದ ಸ್ಥಳದಲ್ಲಿ ಅನಾಥವಾಗಿ ನಿಂತಂತ್ತಿತ್ತು ತಮ್ಮ ದೊಡ್ಡ ದೋಣಿ. ಅದಕ್ಕೆ ಕಟ್ಟಿಹಾಕಿದ್ದ ಪುಟ್ಟ ದೋಣಿ ಕಾಣಿಸುತ್ತಿಲ್ಲ....!

ಅವ್ವಾ ದಡವ ಕಡೆಗೆ ಮುಖ ಮಾಡಿ ದೋಣಿಯ ಅಂಚಿನಲ್ಲಿ ನಿಂತಿದ್ದಾಳೆ!

ಗೊರವ ನೀರಿಗೆ ಒಮ್ಮೆಗೇ ಹಾರಿ ಅತ್ತ ಈಜುತ್ತ ಸಾಗಿದ, ಹತ್ತಿರ ಹೋಗಿ ಕತ್ತೆತ್ತಿದ. ಹೌದು, ಅವ್ವ ಅಳುತ್ತಿದ್ದಾಳೆ. ಸೊಂಟದಲ್ಲಿ ಪುಟ್ಟಿ ಕಿರುಚುತ್ತಿದ್ದಾಳೆ. ಹಿಂಮುಗಡೆ ದೋಣಿಯೊಂದು ಹೊತ್ತಿ ಉರಿಯುತ್ತಿದೆ.!

“ದೋಣಿ ತತ್ತಾ ಮಗಾ...” ಅವ್ವನ ಕೂಗು ಕೇಳಿ ಗೊರವನ ಕರುಳು ಕಿತ್ತು ಬಂತು. ತನ್ನ ಪುಟ್ಟಿ ದೋಣಿಯನ್ನರ ಸುತ್ತಮುತ್ತಲೂ ದೃಷ್ಟಿ ಹರಿಸಿದ. ಸನಿಹದಲ್ಲಿ ಒಂದು ತೇಲುವ ದೋಣಿಯೂ ಕಾಣಿಸುತ್ತಿಲ್ಲ. ಅಲ್ಲಲ್ಲಿ ನಿಂತಿರುವ ದೋಣಿಗಳಿಂದ ಸಾಮಾನುಗಳನ್ನು ಹೊರಸಾಗಿಸುವಲ್ಲಿ ತನ್ಮಯರಾಗಿದ್ದಾರೆ. ಪಕ್ಕದ ದೋಣಿಕಟ್ಟೆ ಬಾಣ ಬಿರುಸು ರಾಕೆಟ್‌ಗಳನ್ನು ಹಾರಿಸುತ್ತಿದೆ. ಲಕ್ಷ್ಮಿ ಆನೆ ಪಟಾಕಿ ಬೀಮಸೇನ್ ಡೈನಾಮೆಟ್‌ಗಿಂತ ಜೋರಾಗಿ ಕಟ್ಟೆ ಸಾಮಾನುಗಳನ್ನು ಮೇಲೆ ಸುರಿಯುತ್ತಿವೆ ಈ ಸಾರಿ ದೀಪಾವಳಿಯಲ್ಲಿ ಹಳೆಯ ಡಬ್ಬಗಳೆಷ್ಟಲ್ಲಾ ಹೀಗೇ ಪಟಾಕಿಗೆ ಮುಸುಕು ಹಾಕಿ ದೋಣಿಯು ಮೇಲೆ ಹಾರಿಸಬೇಕೆಂದು ನಿರ್ಧರಿಸಿದ.

“ಬೇಗ್ಬಾರೋ!....” ಅರುಚಿದಳು ತಾಯಿ. ಹಾರುವ ಬೆಂಕಿ, ತೇಲುವ ಉರಿ, ಸಿಡಿತದ ಹನಿಗಳಿಂದ ಸಂತಸಗೊಂಡು ಕೇಕೆ ಹಾಕುತ್ತಿದ್ದಾಳೆ ಪುಟ್ಟಿ ಸುತ್ತಲೂ ತನ್ನ ಹೊಳಪು ಕಣ್ಣು ಹರಿಸಿ.

ಗೊರವ ನೀರಿನಿಂದ ಕತ್ತೆತ್ತಿ ಸುತ್ತಲೂ ಇನ್ನೊಮ್ಮೆ ನೋಡಿದ. ಲಂಗರು ಹಾಕಿರುವ ತಾಯಿನಿಂತಿರುವ, ದೊಡ್ಡ ದೋಣಿಯನ್ನು ಮೋಟಾರು ಚಾಲನೆಗೊಳ್ಳದೆ ಕದಲಿಸುವಂತಿಲ್ಲ. ಸನಿಹದಲ್ಲಿ ಸಹಾಯಕ್ಕೆ

ಬರುವ ಯಾವ ಮನುಷ್ಯರೂ ಕಾಣಿಸುತ್ತಿಲ್ಲ. ದಡದಲ್ಲಿ ಕೋಲಾಹಲ ನಡೆದಿದೆ. ಸಾಮಾನನ್ನು ಹೊತ್ತುಸಾಗುವಲ್ಲಿ ಜನವೆಲ್ಲಾ ತನ್ಮಯರಾಗಿದ್ದಾರೆ ದೂರದಲ್ಲಿ ಅನಾಥ ಪುಟ್ಟ ದೋಣಿ ಹೋಗುತ್ತಿರುವುದು ಕಾಣಿಸಿತು. ಆದರೆ ಹುಟ್ಟಿಲ್ಲದೆ ಆ ದೋಣಿಯನ್ನು ಹಿಡಿದು ತರುವುದು ಹೇಗೆ ಸಾಧ್ಯ ?

ಡೈನಮೋವನ್ನು ರಿಪೇರಿಗೋಸ್ಕರ ಕಳಚಿದ್ದುದರಿಂದ ಅದರ ಕೆಳಗಿನ ಪಟ್ಟಿಯೊಂದು ಸರಿದು ಬಿದ್ದಿತ್ತು. ಅದನ್ನು ತಾಯಿಯ ಕೈಯಿಂದ ಇಡಿದುಕೊಂಡು ಹೊಟ್ಟೆಯಡಿಯಲ್ಲಿ ಚಡ್ಡಿಯೊಳಗೆ ಸೇರಿಸಿದ. ಹರಿದು ಹೋಗುತ್ತಿದ್ದ ದೋಣಿಯತ್ತ ಬಿರುಸಾಗಿ ಈಜತೊಡಗಿದ. ಸಾಹಸಪಟ್ಟು ದೋಣಿಯನ್ನು ಹಿಡಿದು ತಾಯಿ ಇದ್ದೆಡೆಗೆ ಬಂದ. ಗೆದ್ದ ಗೆಲುವಿನಿಂದ ಎದೆ ಉಬ್ಬಿಸಿ. ತಾಯಿ, ತಂಗಿಯನ್ನು ಮೆಲ್ಲಗೆ ತನ್ನ ದೋಣಿಯೊಳಗೆ ಇಳಿಸಿಕೊಂಡು ಭರದಿಂದ ಹುಟ್ಟು ಹಾಕತೊಡಗಿದ ದಡದತ್ತ ಸಾಗಲು. ದಡಸೇರಿದೊಡನೆಯೇ ಅವ್ವ ಅಭಿಮಾನದಿಂದ ಮಗನನ್ನು ಹಿಡಿದಪ್ಪಿ ಕೆನ್ನೆಗೆ ಮುತ್ತಿಟ್ಟಳು, "ಥೂ ಹೋಗವ್ವಾ" ಎಂದು ನೀರಿನಿಂದ ಕೆನ್ನೆಯನ್ನು ಒರೆಸಿಕೊಂಡ. ಆದರೂ ಮನಸ್ಸು ಪ್ರಪುಲ್ಲಗೊಂಡಿತ್ತು. "ಅಪ್ಪಾ ಎಲ್ಲಿ ?" ಪ್ರಶ್ನಿಸಿದ;

"ಅಪ್ಪಾ ದೋಣಿ ಕಾರ್ಖಾನೆ ಹತ್ರ ಹೋಗವ್ನೆ ಯಂತ್ರ ರಿಪೇರಿ ಮಾಡೋನ್ನ ಕರ್ಕೊಂಡು ಬರ್ತೀನಿ ಅಂತ ಹೋಗು ಮಗಾ....ನೋಡ್ಕೊಂಡು ಬಾ ಹೋಗು..." ಅಂದಾಗ ಗೊರವಾ ತಾಯಿ, ಪುಟ್ಟಿಯನ್ನು ಗುಡಿಸಿಲನೊಳಗೆ ಕೂಡಿಸಿ ಜನಗಳ ಮಧ್ಯೆ ನುಸುಳಿ ದೋಣಿ ಕಟ್ಟೆಯತ್ತ ಹೆಜ್ಜೆ ಹಾಕಹತ್ತಿದ. ತನ್ನ ಹಟ್ಟಿಯ ಬಹುಜನ ಎದೆ ಬಡಿದುಕೊಂಡು ಗೋಳಿಡುತ್ತಿದ್ದಾರೆ. ನನ್ನ ದೋಣಿ ಜೊತೇಲಿ ನಾನೂ ಉರ್ದು ಹೋಗ್ತೀನಿ ? ಎಂದು. ಹತಾಶರಾಗಿ ಮುನ್ನುಗ್ಗುತ್ತಿರುವ ಜನರನ್ನು ಇತರ ಹತಾಶ ಜನ ಹಿಡಿಯುತ್ತಿದ್ದಾರೆ.

ಬೋಟು ಸುಟ್ಟ ವಾಸನೆ ಗಮ್ಮೆಂದು ವಾತಾವರಣವನ್ನೆ ಕಲುತಗೊಳಿಸುತ್ತಿದೆ, ಬಳಲಿದ ಎಲ್ಲ ಬೆಸ್ತರ ಮುಖದಲ್ಲೂ ಪ್ರೇತ ಕಳೆ ಬೆವರಲ್ಲಿ

ಮಿಂದು ಭೀಕರವಾಗಿ ಮಿಂಚುತ್ತಿದೆ. ದೋಣಿಕಟ್ಟೆಗೆ ಬೆಂಕಿ ಬಿದ್ದಕಾರಣ ಮಾತ್ರ ಯಾರಿಗೂ ತಿಳಿಯದು. ಆದರೆ ಬೆಂಕಿ ಕಾಳ್ಗಿಚ್ಚನಂತೆ ಹಬ್ಬುತ್ತಿದೆ!

ಗೊರವ ಅಪ್ಪನನ್ನು ಅರಸುತ್ತ ಮುಂದೆಮುಂದೆ ನಡೆದ ಜನಗಳ ಮಧ್ಯೆ ನುಸುಳಿ ದೋಣಿಕಟ್ಟೆ ಹೊತ್ತಿ ಉರಿಯುತ್ತಿರುವಾಗ ಆತನಿಗೆ ಅಲ್ಲೇನು ಕೆಲಸ ? ಹಿಂತಿರುಗಿ ಬೇಗ ಬರಬಾರದಿತ್ತೆ ? ತಮ್ಮ ದೋಣಿಗೆ ಬೆಂಕಿ ಬಿದ್ದರೆ? ಸಾಲಕೊಟ್ಟಿರುವ ಬ್ಯಾಂಕಿನವರು ಸುಮ್ಮನಿರುತ್ತಾರೆಯೇ ? ಮೀನು ಹಿಡಿಯುವುದು ತಾನೆ ಹೇಗೆ ಸಾಧ್ಯ? ದಿನವೂ ಕಾಣಿಕೆ ಡಬ್ಬಿಗೆ ಕಾಣಿಕೆ ಹಾಕದಿದ್ದರೆ ದೈವ ಸಿಟ್ಟಿಗೇಳುವುದಿಲ್ಲವೆ? ಅಪ್ಪ ಯಾವಾಗಲೂ ಹೀಗೇನೆ....ಏನೋ ಹಾಳು ಕೆಲಸ! ಎಲ್ಲೆಲ್ಲೋ ಸಮಯದಲ್ಲಿ ಹಾಳಾಗಿ ಹೋಗಿಬಿಟ್ಟಿರುತ್ತಾನೆ. ಅವ್ವ ಪುಟ್ಟಿಯನ್ನು ಹೆರುವ ದಿನ ಅಪ್ಪಾ ಊರಿನಲ್ಲೇ ಇರಲಿಲ್ಲ. ಪಟ್ಟಣದ ಬಾಟ್ಲು ಹೆಂಡ ಕುಡಿಯಲು ಕರಿಯ ಕೋಣಪ ನಂಬಿಯಾರ್ ಜೊತೆಯಲ್ಲಿ ಉಡುಪಿಗೆ ಹೋಗಿದ್ದನಂತೆ, ಆಗ ನಾನೇ ಹೆರಿಗೆ ಅಜ್ಜಿ ಲಕ್ಕಿಯನ್ನು ಪಕ್ಕದ ಹಟ್ಟಿಯಿಂದ ರಾತ್ರಿ ಸರಿಹೊತ್ತಿನಲ್ಲಿ ಕರೆತರಬೇಕಾಗಿತ್ತು. ಅಬ್ಬಾ ನೆನಸಿಕೊಂಡರೆ ಇಂದೂ ಮೈ ಜುಂ ಎನ್ನುತ್ತದೆ. ನಾಯಿ ನರಿಗಳ ಕೂಗಾಟ! ದಾರಿಯಲ್ಲಿ ಒಮ್ಮೆ ಏನೋ ಗುರ್ ಎಂದಿತ್ತು. ಅದು ಹುಲಿಯೇ ಇರಬಹುದು. ಸಿಂಹ ಆಗಿರಲಿಕ್ಕೂ ಸಾಧ್ಯಅನಿಸಿತ್ತು. ಆದರೆ ಸಿಂಹ ಇಲ್ಲವೇಇಲ್ಲವೆಂದು ಅಜ್ಜ ಗಿಡ್ಡಪ್ಪ ನೇನೋ ಹೇಳಿದ್ದ. ಆದರೆ ಅವ್ವನ ಮಾತು ನಿಜ. ಪಂಜುರ್ಲಿಯನ್ನು ನೆನದಿದ್ದುದರಿಂದ ಆ ಕ್ರೂರ ಮೃಗ ಹತ್ತಿರ ಸುಳಿದಿರಲಿಲ್ಲ. ಪುಟ್ಟಿ ಹುಟ್ಟಿ 8ಗಂಟೆಗಳ ನಂತರ ಅಪ್ಪ ಊರಿಗೆ ಹಿಂತಿರುಗಿದ್ದ.

ಥೂ....ಅಪ್ಪಾ ಎಲ್ಲೂ ಕಾಣಿಸುತ್ತಲೇ ಇಲ್ಲ. ಪಟಾಕಿ ಬಾಣ ಬಿರುಸಿನ ಮೇಳ ನಡೆದಿದೆ ಆಕಾಶದಲ್ಲಿ !

ಒಂದು ಕ್ಷಣ ನೋಡುತ್ತನಿಂತ, ಗೊರವ.

"ಓಡೋ ಓಡೋ ಹಾಗೆ ನಿಲ್ಬೇಡ....ಬೆಂಕಿ ಬಿದ್ದು ನೀನೂ ಸುಟ್ಟು ಹೋದಿಯಾ" ಓಡುತ್ತಿದ್ದವನೊಬ್ಬ ಇವನನ್ನು ಪಕ್ಕಕ್ಕೆತಳ್ಳಿ ಮುಂದೆ ಓಡಿದ.

"ಅಪ್ಪನ್ನ ಹುಡುಕುತ್ತಾ ಅವ್ನಿ" ದಡದಲ್ಲಿ ನಿಂತು ದೋಣಿ ಕಟ್ಟೆ ಯತ್ತ ಕೈ ತೋರಿಸಿದ.

"ನಿಮ್ಮವ್ವನೂ ಇಲ್ಲ...ನಿಮ್ಮಪ್ಪನ ದೋಣಿನೂ ಇಲ್ಲ.. ವಡಭಾಂಡೇಶ್ವರ ಸಿಟ್ಟುಗೊಂಡವ್ನೆ ಶಾಪ ಹಾಕವ್ನೆ....ಓಡು....ಓಡು" ದೋಣಿಯೊಂದರಿಂದ ಸಾಮಾನುಗಳನ್ನು ಇಳಿಸುತ್ತಿದ್ದ ಗುಂಪಿನವನೊಬ್ಬ ಇವನನು ತಳ್ಳಿಕೊಂಡು ಸಾಮಾನಿನೊಡನೆ ಓಡಿದ ಊರಿನತ್ತ.

ಇವರ್‍ಯಾರು? ಒಬ್ಬರೂ ತನ್ನ ಹಟ್ಟಿಯ ಜನರಂತೆ ಕಾಣುವುದಿಲ್ಲವಲ್ಲ ಸಾಮಾನು ಹೊತ್ತು ಊರಿನತ್ತೇಕೆ ಓಡುತ್ತಿದ್ದಾರೆ ? ಕಾರ್ಖಾನೆಯ ಸಾಮಾನು ಇದ್ದಂತಿದೆಯಲ್ಲಾ....?

"ವಡಭಾಂಡೇಶ್ವರನಿಗೆ ಕಾಣಿಕೆ...ಕಾಣಿಕೆ" ಡಬ್ಬಗಳನ್ನು ಹಿಡಿದ ನಗರದ ಯುವಕರ ಗುಂಪೊಂದು ದಡದಲ್ಲಿ ಎಲ್ಲರನ್ನೂ ನಿಲ್ಲಿಸಿ ಕಾಣಿಕೆ ಕೇಳುತ್ತಿದೆ.

"ಕಾಣಿಕೆ ಕೊಡಿ...ದೋಣಿ ಉಳಿಸ್ಕೊಳ್ಳಿ"

"ಕೂಗುತ್ತಿದ್ದಾರೆ", ಅಲ್ಲಿ ನೋಡಿ 2ದೋಣಿ. ದೋಣಿ ಕಟ್ಟೇಲಿದ್ರೂ ಬೆಂಕಿತಗ್ಲಿಲ್ಲ. ಅದರ ಮಾಲೀಕ 50ರೂ. ಕಾಣಿಕೆ ಕೊಟ್ಟಿದ್ದಾನೆ. ಗುಂಪಿನವನೊಬ್ಬ ಮುದುಕನೊಬ್ಬನಿಗೆ ತೋರಿಸಿ ಹೇಳುತ್ತಿದ್ದ ಸುತ್ತಲಿನ ಜನ ದಿಗ್ಭ್ರಾಂತರಾಗಿ ಅತ್ತಲೇ ನೋಡುತ್ತಿದ್ದರು.

ಗೊರವ ಕತ್ತೆತ್ತಿ ನೋಡಿದ. ಹೌದು ದೇವರ ಮಹಿಮೆ ನಿಜ ಎರಡು ದೊಡ್ಡ ಬೋಟುಗಳು ದೂರದಲ್ಲಿ ನಿಶ್ಚಲವಾಗಿ ನಿಂತಿವೆ. ತನ್ನ ಜೇಬನ್ನೆಲ್ಲಾ ಗೊರವ ತಡಕಾಡಿದ. ಮೀನುಮಾರಿದ ಹಣ ಎಲ್ಲೋ ಮಾಯ ಎಲ್ಲೋ ಬಿದ್ದು ಹೋಗಿರಬಹುದು. ಇಲ್ಲವೆ ಯಾರೋ ಹಾರಿಸಿರಬೇಕು.

ಅಳು ಒಮ್ಮೆಗೇ ಉಕ್ಕಿ ಬಂತು. ಗೋಳೋ ಎಂದು ಅಳಹತ್ತಿದ,

"ಈಗ ಕಾಣ್ಕೆ ಕೊಟ್ರೆ ದೋಣಿ ಉಳಿಯುತ್ತಾ?"

ಬಿಕ್ಕಳಿಸುತ್ತಲೇ ಪ್ರಶ್ನಿಸಿದೆ ಗುಂಪಿನಲ್ಲಿ ಒಬ್ಬನನ್ನು ತಡೆದು ನಿಲ್ಲಿಸಿ

"ಉಳ್ಕೊತ್ತೆ....ಉಳ್ಕೊತ್ತೆ...."

"ನನ್ನ ಹತ್ರ ಈಗ ಕಾಸಿಲ್ಲ....ದೋಣೀಲಿ ಕಾಣ್ಕೆ ಡಬ್ಬಿ ಇದೆ" ಗೊಣಗಿದ ಗೊರವ.

"ಎಷ್ಟಿದೆ ಡಬ್ಬೀಲಿ"?

"100-150ರೂಪಾಯಿ ಇರ್ಬೇಕು"

"ಹೋಗು....ಹೋಗು ಬೇಗ ತಗೊಂಡ್ಬಾ ಹೋಗು....ಪೂಜೆ ಮಾಡಿಸ್ಲು ದೇವಸ್ಥಾನಕ್ಕೆ ಹೋಗ್ತಾ ಇದ್ದೀವಿ. ನಿಮ್ಮ ದೋಣಿ ಏನೂ ಆಗೊಲ್ಲ, ದೇವ್ರಲ್ಲಿ ಪ್ರಾರ್ಥನೆ ಸಲ್ಲಿಸ್ತೀವಿ" ದೂಡಿದ ಇವನನ್ನು ನೀರಿನತ್ತ.

"ನಮ್ಮಪ್ಪಂಗೂ ಏನೂ ಆಗೋಕಿಲ್ವಾ?"

"ಆಗಲ್ಲ"

"ನೀವು ಇಲ್ಲೇ ಇರ್ತೀರಾ?"

"ನಾನು ಕಾದಿರ್ತೀವಿ ಹೋಗು...—ನಿಂಗೋಸ್ಕರ ಆದ್ರೆ ಬೇಗ್ಬಾ"

ಅವ್ವಾ ಕಾಣಿಕೆ ಸಲ್ಲಿಸಬೇಕೆಂದಿದ್ದಳು. ಒಳ್ಳೇ ಸಮಯದಲ್ಲೆ ಇವರು ಬಂದಿದ್ದಾರೆ. ಕಾಣಿಕೆ ಇಲ್ಲೇಕೊಟ್ಟರೆ ಅವ್ವನೂ ಸಂತೋಷ ಪಡುತ್ತಾಳೆ. ದೇವರು ತೃಪ್ತನಾಗುತಾನೆ. ಭರದಿಂದ ಈಜುತ್ತ ಸಾಗಿದೆ ತನ್ನ ದೋಣಿಯತ್ತ.

ಗೊರವ ತನ್ನ ದೋಣಿಗೆ ಹೋಗಿ ಹಣದ ಡಬ್ಬಿ ತೆಗೆದುಕೊಂಡು ಒಂದೇ ಕೈಯಲ್ಲಿ ಕಷ್ಟಪಟ್ಟು ಈಜುತ್ತ ದಡದತ್ತ ಬರಹತ್ತಿದೆ.

ಕಾಣಿಕೆ ಸಲ್ಲಿಸಲೇ ನುಗ್ಗಾಡುತ್ತಿದ್ದಾರೆ ತನ್ನ ಹಟ್ಟಿಯ ಜನ !

ಸದ್ಯ!....ಯುವಕರ ಗುಂಪು ದಡದ ಮೇಲೆ ನಿಂತಿದೆ. ತನ್ನ ಬರುವನ್ನು ನಿರೀಕ್ಷಿಸುತ್ತ, ನಿಟ್ಟುಸುರು ಬಿಟ್ಟ ಗೊರವ... ...

“ಬೇಗ್ಬಾ...ಬೇಗ್ಬಾ—” ಕೂಗ ಹತ್ತಿದರು ಗುಂಪಿನ ಜನ.

ಛಡ್ಡೆಂದು ಸಿಡಿದ ಶಬ್ದ !

ಹಿಂದೆ ಗೋರವ ಕತ್ತೆತ್ತಿ ನೋಡಿದ. ತಮ್ಮ ದೋಣಿ ಹೊತ್ತಿ ಉರಿಯುತ್ತಿದೆ !

“ಅಯ್ಯೋ...! ಕಿರುಚಿದ ಅಂಗಾತ ಮಲಗಿ. ಕೈತಪ್ಪಿ ಕಾಣಿಕೆ ಡಬ್ಬಿ ಮುಂದೆ ತೇಲಿತು.

ಮಗನನ್ನು ಅರಸುತ್ತಾ ಓಡಿ ಬಂದಿದ್ದ ಅವ್ವಾ ‘ಗೋರವಾ’ ಎಂದು ಕೂಗಿದಳು ದಡದಲ್ಲಿ ನಿಂತು.

ಹಾರಿಬಂದ ಬೆಂಕಿಯ ಕೊರಡೊಂದು ಗೋರವನ ತಲೆಯ ಮೇಲೆ ಬಿತ್ತು. ಅವ್ವಾ....! ಎಂದು ನರಳಿದ. ಮುಳುಗಹತ್ತಿದ.

ಡಬ್ಬಿ ಅಲೆಯ ನೆತ್ತಿಏರಿ ಮೆಲ್ಲಗೆ ಕೆಳಗಿಳಿಯಿತು. “ಗುಡಿಸ್ಲಿಗೆ ಬೆಂಕಿ...ಮಗು ಸೀಮೆಎಣ್ಣೆ ಚೆಲ್ಕೊಂಡು ಆಡ್ತಾ ಇತ್ತಂತೆ ಆರಿಸ್ಬನ್ನಿ....” ದೂರದಲ್ಲಿ ಹಲವು ಮಂದಿ ಹುಚ್ಚರಂತೆ ಅರಚುತ್ತಿದ್ದರು.

“ಮಗನ್ನ ಉಳಿಸಿ ಮುಳುಗ ಹೋಗುತಾ ಅವ್ನೆ ಉಳಿಸಿ” ಕುಸಿದು ಕುಳಿತಳು ದುಃಖ ತಡೆಯಲಾರದೆ.

“ಅವನ್ನ ಹಿಡ್ಕೊಳ್ಳಿ ...ಓಡ್ತಾ ಇದ್ದಾನೆ...ಹಿಡ್ಕೊಳ್ಳಿ. ಎಂದು ಘೋಷಿಸಿದ ಗುಂಪು ಇವಳನ್ನು ಕೆಳಗೆತಳ್ಳಿ ತುಳಿದೇ ನಡೆಯಿತು.

ಇನ್ನೊಮ್ಮೆ ನೀರಿನ ಮೇಲೆ ಬಂದ ಗೋರವ ‘ಅವ್ವಾ’ ಎಂದು ನರಳಿದ. ಕೈಕಾಲು ಆಡಿಸಲೇ ಆಗುತ್ತಿಲ್ಲ. ತಲೆಸಿಡಿದು ಹೋಗುತ್ತಿದೆ ! ಮಬ್ಬುಮಂಜು ! ಕತ್ತಲು ! ಸೀಸದ ಗುಂಡಿನಂತೆ ಇಳಿಯಹತ್ತಿದ.

ಮೇಲೆ ಭೋರ್ಗರೆಯುತ್ತಿತ್ತು ಸಾಗರ ಬೆಂಕಿಯ ನಾಲಿಗೆ ಚಾಚಿ.

—o—

# ಅಮ್ಮಾ ನಾನೂ ಜಾದೂ ಮಾಡ್ಬಿಟ್ಟೆ

—ಸುನೀತಿ ಕೃಷ್ಣಸ್ವಾಮಿ

ಇದೊಂದು ತುತ್ತು ತಿನ್ನಪ್ಪ ನನ್ ಬಂಗಾರ :

"ಊ....ಹೂ....ನಂಗೆ ಬೇಡ ಹೋಗಜ್ಜಿ".

"ಜಾಣಮರಿ...ಎಲ್ಲಪ್ಪ....ಬಾಯಿ ಆ ಅನ್ನು. ಹಟ ಮಾಡ್ಬಾರ್ದು ಮಗು".

"ಹೂಂ....ಹೋಗಜ್ಜಿ ನೀನು ಜಾದು ಮಾಡಿ ಅನ್ನ ಬರಸ್ಲಿಲ್ಲಾ.... ನಾನು ಊಟ ಮಾಡೊಲ್ಲ".

"ಓ...ಅದಾ ರಾಜ...ನನ್‌ರಾಜ....ಎಲ್ಲಿ ? ಕಣ್ಮುಚ್ಕೋ...... ಹಾಗೇ...ತೆಗೀಬೇಡ ಹುಂ...ನೋಡು ಜಾದು ಮಾಡಿ ಊಟ ಬರಸ್ತೀನಿ ಹ್ರಾಂ....ಹ್ರೀಂ....ಹ್ರೂಂ ಬಂದೇಬಿಡ್ತು ಮೊಸರನ್ನ ; ಇಲ್ಲಿ ನೋಡು ದೊರೆ".

"ಹೈ....ಹೈ... ಅಜ್ಜಿ ಜಾದು ಮಾಡಿ ಅನ್ನ ಬರಸ್ಬಿಟ್ಳು....ನೀನು ತುಂಬಾ ಒಳ್ಳೆಯವಳು ಅಜ್ಜಿ....ಅಮ್ಮ ಸುಮ್ನೆ ಬಾಯಲ್ಲಿ ಅನ್ನ ತುರುಕ್ತಾಳೆ ಕೆಟ್ಟೋಳು ಅಮ್ಮ....ಅಲ್ವಾ ಅಜ್ಜೀ"

"ಇಲ್ಲಾ ಕಂದ....ಅಮ್ಮಾ ಒಳ್ಳೇವಳು ಮಗು....ಅವಳಿಗೆ ಜಾದು ಮಾಡೊಕ್ಕೆ ಬರಲ್ಲ ಪಾಪ : ಇದಿಷ್ಟು ತಿಂದು ಬಿಡಮ್ಮಾ" ಎಂದು ಕಲೆಸಿದ

ಅಮ್ಮಾ ನಾನೂ ಜಾದೂ ಮಾಡ್ಬಿಟ್ಟೆ                                ೬೪೭
ಮೊಸರನ್ನ ಪೂರಾ ತಿನ್ನಿಸಿದಳು ಅಜ್ಜಿ. ಒಂದು ನಿಮಿಷದಲ್ಲಿ ಆರು ವರ್ಷದ ಮುಗ್ಧ ಸುರೇಶನ ಮನಸ್ಸಿನ ಮೇಲೆ ಅಜ್ಜಿ ಜಾದು ಮಂತ್ರ ಮೋಡಿ ಮಾಡಿತ್ತು. ಕಣ್ಣು ಮುಚ್ಚಿದಾಗ ಅಜ್ಜಿ ತಟ್ಟೆಯಿಂದ ಸಗ್ರನೆ ತುತ್ತುಮಾಡಿ ಬೆನ್ನ ಕಡೆ ಕೈ ಮಾಡಿಕೊಂಡು, ಮಗು ಕಣ್ಣು ಬಿಟ್ಟಾಗ ಮಾಯಮಾಡಿ ಬರಸಿದೆ ಎಂದು ಹೇಳುವ ಅಜ್ಜಿಯನ್ನು ಆಶ್ಚರ್ಯ ಕಣ್ಣುಗಳಿಂದ ನೋಡುತ್ತಿತ್ತು ಆ ಹಸುಳೆ.

ಸುರೇಶನಿಗೆ ಜಾದು ಮಾಡದೆ ಯಾರಿಂದಲೂ ಊಟ ಮಾಡಿಸಲು ಸಾಧ್ಯವಾಗಿರಲಿಲ್ಲ. ತಾಯಿ ಸರೂ ಯಾವಾಗಲೂ ಮನೆಗೆಲಸದಲ್ಲಿ ನಿರತ ಳಾಗಿರುತ್ತಿದ್ದಳು. ಜೊತೆಗೆ ಒಂದು ವರ್ಷದ ಕೈಕೂಸು ಬೇರೆ. ಹೀಗಾಗಿ ಸರುವಿಗೆ ತುಂಟ ಮಗನನ್ನು ಹಿಡಿದು, ಅವನು ಕೇಳುವ ಪ್ರಶ್ನೆಗಳಿಗೆಲ್ಲಾ ಸಾವಧಾನವಾಗಿ ಉತ್ತರಿಸಿ ಕಾಗೆ... ಗುಬ್ಬಿಕಥೆ ಹೇಳಿ...ಊಟದ ಮಧ್ಯೆ ಎದ್ದೆದ್ದು ಓಡಿಹೋಗುವ ಮಗುವನ್ನು ಎಳೆದು ತಂದ ನಿಧಾನವಾಗಿ ಊಟ ಮಾಡಿಸುವಷ್ಟು ವ್ಯವಧಾನವೆಲ್ಲಿ ? ಹೀಗಾಗಿ ಯಾವತ್ತೂ ಈ ದಿನಚರಿ ಅಜ್ಜಿಯ ಕೈಯಿಂದಲೇ ಆಗುತ್ತಿತ್ತು.

ಈ ಜಾದು ಮಂತ್ರ ಸುರೇಶನಿಗೆ ಕೊಂಚ ಬುದ್ಧಿ ತಿಳಿದಂದಿನಿಂದ ಮನದಲ್ಲಿ ಬೇರೂರಿತ್ತು. ಮ್ಯಾಜಿಕ್ ಮಾಡ್ತೀನಿ ಅಂತ ಕೈಗೆ ಸಿಕ್ಕಿದ ಗೊದ್ದಗಳನ್ನೆಲ್ಲಾ ಲೋಟದ ಕೆಳಗೆ ಮೊದಲೇ ದಬ್ಬಿ ಮನೆಯವರನ್ನೆಲ್ಲಾ ಕರೆದು ಎಲ್ಲರ ಸಮ್ಮುಖದಲ್ಲಿ ತನ್ನ ಯಕ್ಷಿಣಿ ಪ್ರದರ್ಶನವಾಗಬೇಕು. ಎಲ್ಲರೂ ಕಣ್ಣುಗಳನ್ನು ಎರಡು ಕೈಗಳಿಂದ ಮುಚ್ಚಿಕೊಳ್ಳಬೇಕೆಂದು ಇವನ ಕಟ್ಟಾಜ್ಞೆ.

"ಎಲ್ಲರೂ ಕಣ್ಣು ತೆಗೆಯಿರಿ" ಎಂದ ಮೇಲೆ ಲೋಟದ ಕೆಳಗೆ ವಿಲಿ ವಿಲಿ ಒದ್ದಾಡುವ ಗೊದ್ದಗಳನ್ನು ಕಂಡರೆ ಅದೇನೋ ಪರಮಾನಂದ.

ಶಾಲೆಗೆ ಹೋಗಬೇಕಾದರೆ ರಂಪವೋ ರಂಪ. ಯಾರು ಎಷ್ಟು ಸಮಾಧಾನ ಮಾಡಿದರೂ ಹೋಗಲೊಲ್ಲ. ಅಜ್ಜಿ ಒಂದು ಚೂರು ಬೆಲ್ಲವೋ ಇಲ್ಲ ಕೊಬ್ಬರಿಯೋ ತರಬೇಕು. ಸುರೇಶ ಕಣ್ಣುಮುಚ್ಚಬೇಕು.... ಅಜ್ಜಿ ಅವನ ಅಂಗೈಯಲ್ಲಿ ಇಡಬೇಕು. ಮಾಯಮಾಡಿ ಬರಸಿದೆ ಎನ್ನಬೇಕು...ಅವನು ಚೀಲ ಹೆಗಲಿಗೆ ನೇತಾಡಿಸಿಕೊಂಡು ಸದ್ದಿಲ್ಲದೆ ಹೋಗಬೇಕು. ಇದು ನಿತ್ಯದ ಕಾರ್ಯಕ್ರಮವಾಗಿತ್ತು.

ಒಂದು ದಿನ ಸ್ಕೂಲಿನಿಂದ ಬರುವಾಗ ಸುರೇಶ ಒಂದು ಕೆಂಪು ಚೀಟಿಯನ್ನು ಹಿಡಿದುತಂದ. ಅದೇ ವೇಳೆಗೆ ದಾರಿಯಲ್ಲಿ ಕಾರೊಂದ ನಿಧಾನವಾಗಿ ಚಲಿಸುತ್ತಿತ್ತು. ಕಾರಿನಲ್ಲಿದ್ದ ಒಬ್ಬ ಮಹಾಶಯ ತಾರಕ ಸ್ವರದಲ್ಲಿ "ಮಹಾ ಮಹಾಯಕ್ಷಿಣಿಗಾರ:....ಜಾದೂಕಿರಾಜಾ....ಮಾಯಾ ಜಾಲಗಾರ ಲಾಲಾಜಿಯವರ ಜಾದೂ ಪ್ರದರ್ಶನ. ಪುರಭವನದಲ್ಲಿ ಏರ್ಪಡಿಸಿದೆ.. ....ಪ್ರದರ್ಶನ ಮೂರುದಿನ ಮಾತ್ರ. ಇವರು ಕಣ್ಣು ಮುಚ್ಚಿಕೊಂಡು ಜನಭರಿತ ಪ್ರದೇಶಗಳಲ್ಲಿ ಕಾರು ನಡೆಸುವರು: ನಾಳೆ ಮಧ್ಯಾಹ್ನ ಮೂರುಘಂಟೆಗೆ...ಮಹಾಜನಗಳಿಗೆ ಸುವರ್ಣ ಅವಕಾಶ... ಈ ಸದವಕಾಶವನ್ನು ಕಳೆದುಕೊಳ್ಳದಿರಿ : ಸರ್ವರೂ ನೋಡಿ ಆನಂದಿಸ ಬೇಕಾಗಿ ವಿನಂತಿ ......ಒಂದು ಕೂಗಿಕೊಳ್ಳುತ್ತಾ ಕೆಂಪು ಚೀಟಿಗಳನ್ನು ಎಸೆದು ಹೋದ.

ಸುರೇಶನ ಕಿವಿಗೆ ಜಾದು....ಜಾದುಗಾರ ಎಂದು ಬಿದ್ದುದೇ ತಡ, ತಾಯಿ ಬಳಿ ಒಂದೇ ಓಟ ಓಡಿದ.

"ಅಮ್ಮಾ :ಲಾಲಾಜಿ ಜಾದು ಮಾಡ್ತಾರಂತೆ. ಕಾರು ಕಣ್ಮುಚ್ಕೊಂಡು ಬಿಡ್ತಾರಂತೆ ಕರ್ಕೊಂಡು ಹೋಗಮ್ಮಾ.

"ಬೇಡಪ್ಪ ನೀನಿನ್ನೂ ಪುಟ್ಟ ಹುಡುಗ. ಅವರು ಕಪ್ಪು ಬಟ್ಟೆ ಹಾಕ್ಕೊಂಡಿರ್ತಾರೆ. ನಿಂಗೆ ಹೆದರಿಕೆ ಹಾಗುತ್ತೆ. ನಿನ್ನನ್ನೇ ಮಾಯಾ ಮಾಡ್ಬಿಡ್ತಾರೆ ಅಷ್ಟೆ."

"ಅಜ್ಜಿ ಹೇಳಿದ್ರಲ್ಲಾ...ದೇವರು, ಆಕಾಶದಿಂದ ಮಾಯಮಾಡಿ ಚಂದ್ರನ ದೋಣಿಯಲ್ಲಿ ಕರ್ಕೊಂಡು ಬಂದು ನನ್ನನ್ನ ಈ ಮನೇಲಿ ಬಿಟ್ಟಾಂತ. ಲಾಲಾಜಿ ಮಾಯ ಮಾಡ್ದ್ರೆ ದೇವರ ಹತ್ರಾನೇ ಹೊರಟು ಹೋಗ್ತೀನಿ."

"ಛೀ: ಇಲ್ಲದ ತಲೆ ಹರಟೆ ಮಾತಾಡ್ಬೇಡ ಕೈಕಾಲು ತೊಳ್ಕೊಂಡು ಬಾ ಊಟ ಮಾಡುವಿಯಂತೆ,"

ತಾಯಿ ಹತ್ತಿರ ತನ್ನ ಆಟ ನಡೆಯುವುದಿಲ್ಲವೆಂದು ಅಜ್ಜಿ ಹತ್ತಿರ ಓಡಿದ. ಅಷ್ಟರಲ್ಲಿ ಮೊಮ್ಮಗನಿಗೆ ಅನ್ನ ಕಲೆಸುತ್ತಿದ್ದರು. ಇವನು ಬಂದುದನ್ನು ನೋಡಿ "ಬಂದ್ಯಾಪ್ಪ ರಾಜ... ಕೈಕಾಲು ತೊಳೆದು ಕೊಂಡು ಬಾಪ್ಪಾ ನಿಂಗೆ ಊಟ ಮಾಡ್ಸಿ ನಾನು ಮಡಿ ಉಟ್ಕೋತ್ತೀನಿ."

"ನಂಗೆ ಲಾಲಾಜಿ ಜಾದೂ ತೋರ್ಸಿದ್ರೇನೆ ಊಟ ಮಾಡೋದು" ಎಂದು ಮುಖ ಊದಿಸಿದ.

"ಅದ್ಯಾರೋ ಬಾಲಾಜಿ; ಏನು ಮಾಡ್ತಾನಂತಪ್ಪಾ ಅವನು?"

"ಜಾದು ಮಾಡ್ತಾನೆ ಅಜ್ಜಿ. ನನ್ನನ್ನ ಕರೆದುಕೊಂಡು ಹೋದ್ರೇ ಊಟ ಮಾಡೊದು". ಅಜ್ಜಿಗೆ ಅರ್ಥವಾಗದೆ ಸೊಸೆಯನ್ನು ಕರೆದರು.

ಸರೂ : ಅದೇನೆ ಇವನು ಹೇಳ್ತಾ ಇರೋದು ? ಅದ್ಯಾರೆ ಬಾಲಾಜಿ ?"

"ಬಾಲಾಜಿ ಅಲ್ಲತ್ತೆ.... ಲಾಲಾಜಿ.... ಯಕ್ಷಿಣಿ ಮಾಡ್ತಾನಂತೇ. ಕಣ್ಣು ಕಟ್ಕೊಂಡು ಕಾರು ನಡೆಸ್ತಾನಂತೆ. ನಿಮ್ಮ ಮೊಮ್ಮಗ ಧೀರ ಕುಮಾರ ನೋಡ್ಬೇಕಂತೆ. ಏನಾದ್ರೊಂದು ತಲೇಲಿ ತುಂಬಿಕೊಂಡು ಬರ್ತಾನೆ. ಇವನು ಕೇಳಿದ್ದಕ್ಕೆಲ್ಲಾ ಕಳ್ಸೋ ಅಷ್ಟು ಶ್ರೀಮಂತಿಗೆ ಇದೆಯೋ? ಊಟದ ಹೊತ್ನಲ್ಲಿ ಹಟ ಮಾಡದೇ ಇದ್ರೆ ಆಗೋದೇ ಇಲ್ಲ. ಸುಮ್ನೆ ಊಟ ಮಾಡ್ತೀಯೋ ಇಲ್ವೇ ಬೆನ್ನಿಗೆ ಬೇಕೋ?" ಎಂದು ಗದರಿದಳು ಸರೂ.

"ಮಗೂ ಮೇಲೆ ಯಾಕೆ ರೇಗಿಬೀಳ್ತೀ ? ಸುಮ್ನಿರಪ್ಪ ಸುರೇಶ, ನಿಮ್ಮಪ್ಪ ರಾಘು ಬರ್ಲಿ. ನಾ ಹೇಳಿ ಕಳಸ್ತೀನಿ" ಸುರೇಶ ಸಂತಸದಿಂದ ಊಟಮಾಡಲು ಹೋದನು. ಅನ್ನ ತಿನ್ನುತ್ತಿರುವಷ್ಟು ಹೊತ್ತು ಆ ಪುಟ್ಟ ತಲೆಯಲ್ಲಿ ಏನೇನೋ ಆಲೋಚನೆಗಳು.

"ಅಜ್ಜಿ...ಲಾಲಾಜಿ ಕಪ್ಪು ಬಟ್ಟೆ ಹಾಕ್ಕೊಳ್ತಾರಂತೆ. ಹೆದರಿಕೆ ಆಗುತ್ತೇನಜ್ಜಿ ?

"ಇಲ್ಲ ಮಗು, ಹೆದರಿಕೆ ಯಾಕೆ ? ನಿಮ್ಮಮ್ಮ ಕರೀ ಸೀರೆ ಉಡಲ್ವಾ ಆಗ ನಿಂಗೆ ಹೆದರಿಕೆ ಆಗುತ್ತಾ? ಇಲ್ಲ ಅಲ್ವಾ?"

"ಮತ್ತೆ ಅಮ್ಮ ಹೇಳಿದ್ಲು...ನನ್ನನ್ನೇ ಮಾಯ ಮಾಡ್ಬಿಡ್ತಾರೆ ಅಂತ?" ತಮಾಷೆಗೆ ಹೇಳಿದ್ದು...ಹುಂ....ಇದು ಕೊನೇ ತುತ್ತು ತಿನ್ಬಿಟ್ಟು ಹೊರಗೆ ಆಡಿಕೋ ಎಂದು ತಿನ್ನಿಸಿ ಉಪಾಯವಾಗಿ ಹೊರಗೆ ಕಳುಹಿಸಿ, ಮಗುವಿಗೆ ಭಯವಾಗುವಂತೆ ಮಾತಾಡಿದ ಸೊಸೆಯನ್ನು ತರಾಟೆಗೆ ತೆಗೆದು ಕೊಂಡರು.

"ಸರೂ :...ಸುರೇಶನನ್ನು ಯಾಕೆ ಹಾಗೆ ಹೆದರಿಸಿದೆ:"

"ಸುಮ್ಮನೆ ಪ್ರಾಣ ತೆಗೆದ್ರೆ ಇನ್ನೇನು ಮಾಡೋದು ? ಇವನು ಆಡಿದ್ದಕ್ಕೆಲ್ಲಾ ತಾಳ ಹಾಕೋಕೆ ಆಗುತ್ತ್ಯೇ;?

"ಹುಚ್ಚು ಹುಡುಗಿ, ಆ ಹಸುಗೂಸಿಗೆ ನಿನ್ನ ಬಡತನ....ಸಿರಿತನ ಹೇಗೆ ಅರ್ಥವಾಗಬೇಕು ? ಪಾಪ; ಏನೋ ಯಕ್ಷಿಣಿ ನೋಡುವ ಆಸೆ. ಸಣ್ಣ ಹುಡುಗರಲ್ಲಿರುವ ಸಹಜವಾದ ಆಸೆ. ಅದರಲ್ಲೂ ಅವನಿಗೆ ಮಗುವಿನಿಂದ ಈ ಯಕ್ಷಿಣಿ ಹುಚ್ಚು, ಇವನ ಮುತ್ತಾತ ದೊಡ್ಡ ಯಕ್ಷಿಣಿಗಾರರಾಗಿದ್ದ ರಂತೆ ಬಹುಶಃ ಅದು ರಕ್ತಗತವಾಗಿ ಈ ಹುಚ್ಚು ನೆಲೆಸಿದೆಯೋ ಏನೋ? ಸರೂ...ಮಕ್ಕಳಿಗೆ ಯಾವಾಗಲೂ ಅರ್ಥವಾಗುವರೀತಿಯಲ್ಲಿ ತಿಳಿಯಹೇಳ ಬೇಕಲ್ಲದೇ, ನಮ್ಮ ವೇದಾಂತ ಪುರಾಣ ಹೇಳಿದ ಅವು ಅರ್ಥಮಾಡಿ ಕೊಳ್ಳುವುದಾದರೂ ಹೇಗೆ? ಹಿಂದೆ ಇವನು ತಾನೂ ಇಲ್ಲಿಗೆ ಹೇಗೆ ಬಂದೆ ಅಂತ ಕೇಳಿದ್ದು ಜ್ಞಾಪಪಕವಿದೆಯೋ ? ದೇವರು ಮಾಯಮಾಡಿ ಇಲ್ಲಿ ಬಿಟ್ಟು ಹೋದ ಅಂದಿದ್ದೆ.

"ಹಾಗಾದರೆ ಇದೇ ಮನೆಗೆ ಯಾಕೆ ಬಿಟ್ಟ ಅಜ್ಜಿ? ಪಕ್ಕದ ಮನೆ ಯಲ್ಲಿ ಬಿಟ್ಟಿ ಎದ್ರೆಷ್ಟು ಚೆನ್ನಾಗಿತ್ತಜ್ಜಿ, ದೊಡ್ಡ ಮನೆ; ದೊಡ್ಡ ಕಾರು... ಆಡುವುದಕ್ಕೆ ಮೂರು ಚಕ್ರದ ಸೈಕಲ್ಲು; ಜೀಪು....ಹೊಸ ಹೊಸ ಬಟ್ಟೆ ಕೈತುಂಬಾ ಚಾಕುಲೇಟು ಎಲಾ ಸಿಗ್ತಿತ್ತು, ಅಲ್ವಾ ಅಜ್ಜೀ ? ಅಂತ ಕೇಳಿದ.

"ಯಾಕೆ ಮಗೂ ನಾನು ಇದೀನಲ್ಲ? ನನ್ನನ್ನು ಬಿಟ್ಟು ಪಕ್ಕದ ಮನೆಗೆ ಹೋಗ್ತೀಯಾ? ಹೋಗು....ಹಾಗಾದ್ರೆ ನಿಂಗೆ ಮಾಯದ ಕಥೆ ಒಂಗೂ ಹೇಳೊಲ್ಲಾ...?.

"ಇಲ್ಲಜ್ಜಿ...ಹೋಗೋಲ್ಲಾ...ಖಂಡಿತಾ ನಿನ್ನನ್ನು ಬಿಟ್ಟು ಹೋಗೊಲ್ಲ. ಸೈಕಲ್ಲು...ಕಾರು ಒಂದೂ ಬೇಡಜ್ಜಿ....ಕಥೆ ಹೇಳ್ತೀ ಅಲ್ವಾ?" ಎಂದು ತಬ್ಬಿಕೊಂಡದ್ದು ನಿನಗೆ ತಿಳಿಯದೇ ಸರೂ. ಯಾವತ್ತೂ ಮಕ್ಕಳನ್ನು ಹೆದರಿಸಬಾರದು. ಅವರು ಎಳೇ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವಾಗುತ್ತದೆ. ಮಕ್ಕಳು ಏನು ನೋಡಿದರೆ ಅದನ್ನು ತಾವೂ ಮಾಡುವ ಆಸೆ. ಬೇರೆ ಹುಡುಗರ ಹತ್ತಿರ ಇರುವ ಆಟಿಕೆಗಳು ತಮಗೂ ಬೇಕೆನಿಸುತ್ತದೆ. ಅವಕ್ಕೆ ನಾವು ಸಿಟ್ಟು ಮಾಡಿಕೋಬಾರದಮ್ಮಾ....ಇವತ್ತು ಸಂಜೆ ರಾಘು ಆಫೀಸಿನಿಂದ ಬಂದ ಮೇಲೆ ಎಲ್ಲರೂ ಹೋಗಿ ಯಕ್ಷಿಣಿ ನೋಡಿಕೊಂಡು ಬನ್ನಿ.

"ರಮೇಶಂಗೂ ಮೈಲಿ ಹುಷಾರಿಲ್ಲ. ಇವರು ಬರ್ಲಿ....ಆಮೇಲೆ ಅವರು ಹೇಗೆ ಹೇಳಿದ್ರೆ ಹಾಗೆ ಮಾಡೋದು,"

ಸಂಜೆ ರಾಘು ಆಫೀಸು ಮುಗಿಸಿಕೊಂಡು ಹುಸ್ಸಪ್ಪ...ಅಂತ ಸುಸ್ತಾಗಿ ಬಂದ. ಅವನು ಕಾಫಿ ತಿಂಡಿ ಮುಗಿಸುವುದೇ ಕಾದಿದ್ದು ಸುರೇಶ ಅವನ ಹತ್ತಿರ ಓಡಿದ.

"ಅಪ್ಪ...ಅಪ್ಪ...."

"ಏನೋ ಅದು?"

"ಮತ್ತೆ....ಅಪ್ಪ....ಏನಿಲ್ಲಪ್ಪ...."

"ಏನಿಲ್ದೆ ಇದ್ರೆ ನಡಿ ಆಚೆ, ಹೇಳೋದೂ ಇಲ್ಲ....ಬಿಡೋದೂ ಇಲ್ಲ,"

"ಸುರೇಶ ಹೆದರುತ್ತಲೇ ಕೆಂಪು ಚೀಟಿಯನ್ನು ತೋರಿಸಿದ"

"ಸರಿ....ಸರಿ... ಬೇರೆ ಕೆಲಸವಿಲ್ಲ... ಜಾದೂಸು ಬೇಡ, ಏನೂಬೇಡ"

ಸುರೇಶ ಪೆಚ್ಚುಮುಖ ಮಾಡ್ಕೊಂಡು ಅಜ್ಜಿ ಹತ್ರ ಹೋದ. ಅಜ್ಜಿ ವಕಾಲತ್ತು ವಹಿಸಿ ಕಾರು ನಡೆಸುವುದನ್ನಾದರೂ ತೋರಿಸಬೇಕೆಂದು ಹೇಳಿದರು. ಮಾರನೇ ದಿನ ಭಾನುವಾರವಾದ್ದರಿಂದ ರಾಘು ಮಗನನ್ನು ಸೈಕಲ್ಲಿನ ಮೇಲೆ ಕೂಡಿಸಿಕೊಂಡು ಮಹಾತ್ಮಾ ಗಾಂಧಿ ರೋಡ್ ತಲುಪಿದ.

ಜನ ರಸ್ತೆಯ ಇಕ್ಕೆಡೆಯಲ್ಲೂ ತುಂಬಿ ಕಿಕ್ಕಿರಿದಿದ್ದರು. ಹತ್ತು ನಿಮಿಷ ಕಳೆದಿರಬಹುದು. ಹೋ...ಎಂದು ಜನ ಕೂಗುವ ಸದ್ದು ಕೇಳಿಸುತ್ತಿದ್ದಂತೆಯೇ ಬಿಳೀ ಜವರ್ಲೆ ಕಾರನ್ನು ಕಣ್ಣುಕಟ್ಟಿಕೊಂಡ ಲಾಲಾಜಿ ಯಾವ ತಡೆ ಇಲ್ಲದೆ ಸುಖವಾಗಿ ನಡೆಸಿ ಜನರ ಮೆಚ್ಚುಗೆಯನ್ನು ಪಡೆದರು. ಸುರೇಶನಿಗೆ ನೂರಾರು ಪ್ರಶ್ನೆ ಕೇಳುವ ಬಯಕೆ. ಆದರೆ ತಂದೆ ಸಿಟ್ಟಾಗಬಹುದೆಂದು ಹೆದರಿದ. ಹಾಗೂ ಕುತೂಹಲ ತಡೆಯದೆ:

"ಅಪ್ಪಾ ಲಾಲಾಜಿ ಕಣ್ಣು ಕಟ್ಟಿಕೊಂಡು ಹೇಗೆ ನಡೆಸಿದರಪ್ಪ? ನೀನೂ ಹಾಗೇ ಈಗ ಸೈಕಲ್ಲು ಬಿಡಪ್ಪ."

"ಸರಿ, ಇಬ್ರೂನೂ ಆಸ್ಪತ್ರೆ ಸೇರಬೇಕಾಗುತ್ತೆ. ಅದು ಎಲ್ಲರಿಗೂ ಆಗಲ್ಲಪ್ಪ, ಅದಕ್ಕೆ ವಿಪರೀತ ಪೂಜೆಮಾಡಿ ದೇವಿನ ಒಲಿಸಿಕೊಳ್ಳಬೇಕು ಎಂದು ಮಗನ ಪ್ರಶ್ನೆಗೆ ಉತ್ತರಿಸಲಾಗದೆ ಸುಲಭವಾಗಿ ಜಾರಿಕೊಳ್ಳಲೆತ್ನಿಸಿದ.

"ಅಷ್ಟೇ ತಾನೇ ನಾನೂ ಬಿಡಬಹುದು ಅಲ್ವಾ? ನಮ್ಮ ಪುಸ್ತಕದ ಮೇಲಿರುವ ಸರಸ್ವತಿ ಫೋಟೋಗೆ ಪೂಜೆ ಮಾಡಿಬಿಟ್ರೆ ಆಯ್ತು.

"ಸುಮ್ಮ ಮಾತಾಡ್ದೆ ಬಾಪ್ಪ. ಇಲ್ದಿದ್ರೆ ಇಳಿಸಿ ಬಿಡ್ತೀನಿ ನೋಡು". ಮನೆಗೆ ಬಂದವನೇ ಅಜ್ಜಿಗೆ ಎಷ್ಟು ವರ್ಣಿಸಿದರೂ ತೀರದು. ರಾಘು ಹೊರಗೆ ತಿರುಗಾಡಲು ಹೋಗುವುದೇ ಕಾದಿದ್ದು, ತನ್ನ ಸರ್ವಸ್ವವೂ ಆದ ವಾಹನ ಮಡಿಕೋಲು ತೆಗೆದುಕೊಂಡ. ಅಜ್ಜಿಯ ಕೈಲಿ

ಕೈಚೌಕ ಕಣ್ಣಿಗೆ ಬಿಗಿಸಕೊಂಡು. ಮನೆಯೆಲ್ಲಾ ಓಡಾಡಿ....ಮುಗ್ಗರಿಸಿ ಗೋಡೆಗಳಿಗೆ. ಡಿಕ್ಕಿಹೊಡೆದು. ಸುಮಾರಾಗಿ ತಲೆಗೆ ಪೆಟ್ಟು ಬೀಳಿಸಿ ಕೊಂಡು ತಾಯಿಯ ಕೈಲಿ ಚೆನ್ನಾಗಿ ಬೈಸಿಕೊಂಡು ಆಟ ಮುಕ್ತಾಯ ಮಾಡಿದ.

ಮಾರನೆ ದಿನ ಯಾರ ಬಾಯಲ್ಲಿ ನೋಡಿದರೂ ಲಾಲಾಜಿಯವರ ಯಕ್ಷಿಣಿ ಪ್ರದರ್ಶನದ ಮಾತೇ. ಪತ್ರಿಕೆಗಳಲ್ಲಿ ಅವರ ಪ್ರದರ್ಶನದ ಬಗ್ಗೆ ಹಾಡಿ ಹೊಗಳಿದ್ದರು. ರಾಘು ಆಫೀಸಿನವರೆಲ್ಲಾ ಭಾನುವಾರ ಸಂಜೆ ಯಕ್ಷಿಣಿ ನೋಡಿಕೊಂಡು ಬಂದಿದ್ದರು. ಎಲ್ಲರೂ ಹೊಗಳುವವರೇ ರಾಘುವಿಗೂ ಜಾದು ನೋಡಬೇಕೆನ್ನಿಸಿತು. ಬೇಗ ಕೆಲಸ ಮುಗಿ-. ಆತುರವಾಗಿ ಮನೆಗೆ ಬಂದ. ಅವಸರವಾಗಿ ತಿಂಡಿ ತಿನ್ನುತ್ತಿರುವ ಮಗನನ್ನು ನೋಡಿ ತಾಯಿ ವೆಂಕಮ್ಮ ಕೇಳಿದರು.

ಇದೇನು ರಾಘು ಇವತ್ತು ಈ ಪರಿ ಅವಸರ?

"ಲಾಲಾಜಿ ಮ್ಯಾಜಿಕ್ ಬಹಳ ಚೆನ್ನಾಗಿದೆಯಂತೆ ಅಮ್ಮ, ಅದಕ್ಕೆ ನಾನು ನೋಡಿಕೊಂಡು ಬರೋಣಾಂತ. ಬೇಗ ಹೋಗದೇ ಇದ್ರೆ ಟಿಕೆಟ್ ಸಿಗುವುದು ಬಹಳ ಕಷ್ಟ."

"ಸುರೇಶನನ್ನೂ ಕರೆದುಕೊಂಡು ಹೋಗುತ್ತೀತಾನೇ?"

"ಅವನಿಗೇನು ಅರ್ಥವಾಗುತ್ತಮ್ಮಾ ? ಸಣ್ಣ ಹುಡುಗ ಅಂತ ಅರ್ಧಟಿಕೇಟೂ ಇಲ್ಲ, ದಂಡ ಎರಡು ರೂಪಾಯಿ"

"ಪರ್ವಾಗಿಲ್ಲ ಕಣೋ, ಮಗು ಆಸೆ ಪಡುತ್ತೆ. ಕರ್ಕೊಂಡು ಹೋಗಪಾ" ಅದೇನು ಒಳ್ಳೆ ಮನಸ್ಸು ಬಂದಿತೋ "ಬೇಗ ತಯಾರಾಗು ಅಂತ ಹೇಳಮ್ಮ ಅಂದ."

ಇವರುಗಳು ಪುರಭವನ ಸೇರಿದ ಹತ್ತೇ ನಿಮಿಷಕ್ಕೆ ತೆರೆ ಸರಿಯಿತು. ಹಸನ್ಮುಖಿಯಾದ ಲಾಲಾಜಿಯವರು ದೇಶವಿದೇಶಗಳಲ್ಲಿ ಗಳಿಸಿದ ಸುವರ್ಣ ರಜತಪದಕಗಳ ಮಾಲೆ ಹಾಕಿಕೊಂಡು ತಮ್ಮ ಪ್ರದರ್ಶನ

ವನ್ನು ಸಾವಧಾನವಾಗಿ ವೀಕ್ಷಿಸಿ ಪ್ರೋತ್ಸಾಹಿಸಬೇಕೆಂದು ಕೇಳಿಕೊಂಡು ಒಳ ಸರಿದರು. ಥಳಥಳಿಸುವ ಸುವರ್ಣರಂಗಿನ ಎರಡನೇ ಪರದೆ ತೆರೆಯಿತು. ಲಾಲಾಜಿ ವೃಂದದವರೆಲ್ಲರೂ ಸಮವಸ್ತ್ರ ಧರಿಸಿ ಸಭಿಕರಿಗೆ ವಂದಿಸಿದ ಮೇಲೆ ಆಟದ ಕಾರ್ಯಕ್ರಮ ಪ್ರಾರಂಭವಾಯಿತು. ವಾದ್ಯ ವೃಂದದ ಗಾನದಲೆಯ ನಿನಾದ ಮೃದುವಾಗಿ ತೇಲಿಬರುತ್ತಿತ್ತು.. ಲಾಲಾಜಿಯವರು ಸಭಿಕರಲ್ಲಿ ಒಂದು ಕೆಲವರ ಕೈಕುಲುಕಿ ಹೆಸರು ಕೇಳಿದರು. "ಬಹಳ ಹೊತ್ತಾಯಿತು ಗಂಟೆ ಎಷ್ಟು ಎಂದು ಕೇಳಿದರು.

"ಗಡಿಯಾರವಿದ್ದರಲ್ಲವೇ ಗಂಟೆ ಹೇಳುವುದು ? ಕೈ ಕುಲುಕಿದರಲ್ಲಾ ಎಂಬ ಸಂತೋಷದಲ್ಲಿ ಉಬ್ಬಿದವರು ಹರಳೆಣ್ಣೆ ಕುಡಿದ ಮುಖ ಮಾಡಿದರು. ಕ್ಷಣ ಬಿಟ್ಟು ಜೇಬಿನಿಂದ ಒಂದು ಗೊಂಚಲು ಗಡಿಯಾರ ತೆಗೆದು ಅವರದವರನ್ನು ಕೊಂಚವೂ ತಪ್ಪು ಮಾಡದೆ ಒಪ್ಪಿಸಿದರು. ನಂತರ ಕಿವಿ ಮೂಗಿನಿಂದ ಬಣ್ಣ ಬಣ್ಣದ ಚೆಂಡುಗಳು ಬರಿಸುವುದು, ಪ್ರೇಕ್ಷಕರ ಹತ್ತಿರವಿರುವ ನೋಟಿನ ಅಂಕಿ ಹೇಳುವುದು. ಹಾರುವ ತಟ್ಟೆ ಮತ್ತು ಇನ್ನೂ ಅನೇಕ ಜಾದು ಮಾಡಿ ಕೊನೆಯ ಘಟ್ಟವಾದ ಮನುಷ್ಯನನ್ನು ತುಂಡರಿಸಿ ಮತ್ತೆ ಸೇರಿಸುವುದು ಇದಕ್ಕೆ ಬಂದರು.

ವೀಕ್ಷಿಸುತ್ತಿದವರಲ್ಲಿ ಒಬ್ಬ ಹುಡುಗನನ್ನು ಕರೆದರು. ಬಿಸಿರಕ್ತದ ಹುಡುಗ, ಸ್ನೇಹಿತರಲ್ಲಿ "ಶಹಭಾಸ್" ಎನ್ನಿಸಿಕೊಳ್ಳುವ ಚಪಲ, ವೇದಿಕೆ ಹತ್ತಿದ. ಅವನನ್ನು ಮೇಜಿನ ಮೇಲೆ ಮಲಗಿಸಿದರು. ಮಾಂಸ ಕತ್ತರಿಸುವಂತಹ ಚಾಕುವಿನಿಂದ ಒಂದೊಂದೇ ಅಂಗಗಳು ತುಂಡರಿಸಿಬಿದ್ದವು. ತಲೆ ಕಡಿಯುವಾಗ ಏಕೋ ರಘುವಿಗೆ ಹೆದರಿಕೆ ಆಯ್ತು. ಸುರೇಶ ಹೆದರಿ ಎಲ್ಲಿ ಚೀರಿ ಬಿಡುವನೋ ಎಂದು ಗಾಬರಿ. ಆದರೆ ಸುರೇಶ ಲಾಲಾಜಿಯವರ ಯಕ್ಷಿಣಿಯಲ್ಲಿ ಲೀನವಾಗಿ ಹೋಗಿದ್ದ. ಒಂದು ನಿಮಿಷ ಬಿಟ್ಟು come on ! ಎನ್ನುತ್ತಿದ್ದಂತೆ ಎಲ್ಲಾ ಅಂಗಗಳೂ ಸೇರಿಕೊಂಡು ಹುಡುಗ ಮೊದಲಿನಂತೆ ಆದ. ಪ್ರೇಕ್ಷಕರು ಕರತಾಡನ ಮಾಡಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಸುರೇಸನಿಗಂತೂ ತಲೆ ತುಂಬಾ ಯೋಚನೆ. ತಂದೆಯನ್ನು ಏನೇನೋ ಪ್ರಶ್ನೆ ಕೇಳುವ ಹಂಬಲ. ಆದರೆ

ಕೇಳಲು ದಿಗಿಲು. ಅರ್ಥದಾರಿ ಕಳೆದಿತ್ತು. ಸುರೇಶನಿಗೆ ಕುತೂಹಲ ತಡೆಯದೆ ತಂದೆಯನ್ನು ಧೈರ್ಯಮಾಡಿ ಕೇಳಿದ.

"ಅಪ್ಪಾ ಲಾಲಾಜಿ ಕೈ, ಕಾಲು, ತಲೆ ಕತ್ತರಿಸಿದವರಲ್ಲಾ : ಹೇಗಪ್ಪ ಮತ್ತೆ ಜೋಡಿಸಿದರು :"

"ಲಾಲಾಜಿ, ಮೊದಲೇ ಕೈ ತುಂಬಾ ಗೋಂದು ಹಚ್ಚಿಕೊಂಡಿರ್ತಾರೆ ಕಣೋ"

"ಹಾಗಾದ್ರೆ ಅಪ್ಪ ಬೇವಿನಮರದಿಂದ ಕಿತ್ತು ಶೀಷೆಯಲ್ಲಿ ಹಾಕಿದ್ದಾರಲ್ಲಾ, ಅದರಲ್ಲೂ ಅಂಟತ್ತಾಪ್ಪ "?

"ಓ....ಅಂಟದೆ " ಏನು ? ಆದರೆ ಒಬ್ಬರಿಗೂ ಕಾಣ್ಸಾರ್ದು ಅಷ್ಟೆ."

"ಓ....ಅಷ್ಟೇನೇ ? ನಾನೂ ಜಾದು ಮಾಡಬಹುದು ಅಲ್ವಾ ?"

"ತುಂಬಾ ದೊಡ್ಡವನಾಗ ನೇಕಪ್ಪ. ಹಾಗೆಲ್ಲಾ ಸಣ್ಣ ಹುಡುಗರು ಮಾಡೋಕ್ಕೆ ಆಗೋಲ್ಲಾ" "ಸಣ್ಣ ಹುಡುಗರು ಜಾದು ಮಾಡಿ, ಮನೆಗೊಂದು ಹಾಕಿ ಅಂಟಿಸಿದ ಅಂಟಲ್ಲಾಪ್ಪ ?"

ರಾಘುಗೆ ಮಗನ ಅವ್ಯಾಹತವಾಗಿ ಸಾಗುತ್ತಿದ್ದ ವಾಕ್ ವಾಹಿನಿ ಬೇಸರ ಬಂದಿತ್ತು, ತಾಳ್ಮೆಗೆಟ್ಟು.

"ಆಗತ್ತೆ...ಆಗತ್ತೆ...ಸುಮ್ನೆ ಬಾಯ್ಮುಚ್ಕೊಂಡು ಬರ್ತೀಯೋ" ಇಲ್ವೋ" ಎಂದು ಸುರೇಶನ ಮಾತಿಗೆ ಬ್ರೇಕು ಹಾಕಿದ. ಮನೆ ಸೇರೋ ವೇಳೆಗೆ ಅಜ್ಜಿ. ತಾಯಿ ಬಾಗಿಲು ಕಾಯುತ್ತಿದ್ದರು. ಸರು ಮಗುವನ್ನು ತೊಡೆಯ ಮೇಲೆ ಹಾಕಿಕೊಂಡು ಸಪ್ಪಗೆ ಕೂತದ್ದಳು. ದೀಪದ ಮಂದ ಪ್ರಕಾಶದಲ್ಲಿ ಮಗುವಿನ ಬಾಡಿದ ಮುಖ ಮತ್ತಷ್ಟು ಕಳಾವಿಹೀನವಾಗಿತ್ತು. ರಾಘು ಗಾಬರಿಯಿಂದ ಕೇಳಿದ.

"ಸರೂ ; ಮಗೂ ಯಾಕೆ ಇನ್ನೂ ತೊಟ್ಟಿಲಲ್ಲಿ ಮಲಗಿಲ್ಲ ?"

ಜ್ವರ ಕಾದು ಕೆಂಡವಾಗಿದೆ ಮೈ. ತೊಡೆಯ ಮೇಲಿದ್ದರಾದರೂ ಸ್ವಲ್ಪ ಮಲಗುತ್ತಾನೆಂದು ಹೀಗೇ ಮಲಗಿಸಿಕೊಂಡಿದ್ದೇನೆ. ಔಷಧಿ ತಂದು

ಹಾಕೋಣವೆಂದರೆ ಇವತ್ತು ನಮ್ಮ ಡಾಕ್ಟರ್ ಊರಿಗೆ ಹೋಗಿದ್ದಾರೆ. ಪಾಪಿಲ್ಲ. ನಿಮಗೆ ಬೆಳ್ಳಿಗ್ಗೆ ಆಫೀಸಿನ ಅವಾಂತರ. ನಾನೇ ಕೆಲಸವಲ್ಲಾ ಮುಗಿದಮೇಲೆ ಡಾಕ್ಟರ್ ಹತ್ತಿರ ಔಷಧಿ ತರುತ್ತೇನೆ. ಏಳಿ ಊಟಮಾಡಿ ಎಂದು ಮಗುವನ್ನು ಮೆಲ್ಲಗೆ ಎತ್ತಿ ಅತ್ತೆಯ ತೊಡೆಯ ಮೇಲಿಟ್ಟಳು. ಸುರೇಶನು ತುಟಿಯವರೆಗೂ ತುಂಬಿಕೊಂಡು ಬಂದ ಆಶ್ಚರ್ಯ ಸಂಗತಿ ಗಳನ್ನು ತಮ್ಮಜ್ಜಿಗೆ ಹೇಳಬೇಕೆಂದು ಒಳಗೆ ಬಂದರೆ ತಮ್ಮನ ಜ್ವರ ಎಲ್ಲರನ್ನೂ ಚಿಂತೆಗೀಡುಮಾಡಿದ್ದು, ತಮ್ಮನ ಮೇಲೆ ಕೊಂಚ ಸಿಟ್ಟೇ ಬಂದಿತ್ತು. ಮಾತಿಲ್ಲದೆ ಊಟ ಮುಗಿಸಿಬಂದ. ಅಜ್ಜಿಗೂ ಮೊಮ್ಮಗನ ಸ್ವಭಾವಗೊತ್ತು. ತಾವಾಗೇ "ಸುರೇಶು ಹೇಗಿತ್ತಪ್ಪ ಜಾದು?" ಇಷ್ಟು ಕೇಳಿದುದೇ ತಡ ಕಟ್ಟಾಕಿದ ಬಾಯಿ ಲಗಾಮಿಲ್ಲದೆ ಓಡುವ ಕುದುರೆ ಯಂತೆ ಸಡಿಲ ಬಿಡುವುದರಲಿದ್ದ. ಅಷ್ಟರಲ್ಲಿ ರಾಘು ಬಂದು "ಈಗ ಶುರುಮಾಡಬೇಡಪ್ಪ, ನಾಳೆ ಎಲ್ಲಾ ಅಜ್ಜಿಗೆ ಹುಳುವಿಯಂತೆ. ಹೊತ್ತಾ ಗಿದೆ; ಮಲಗಿಕೊ ಹೋಗು" ಎಂದು ಸುರೇಶನ ಆಸೆಗೆ ತಣ್ಣೀರೆರಚಿದ.

ಆ ರಾತ್ರಿ ಕನಸಿನಲ್ಲೆಲ್ಲಾ ಜಾದು ದೃಶ್ಯಗಳು ಬಂದು ಸುರೇಶನನ್ನು ಬೆಚ್ಚುವಂತೆ ಮಾಡುತ್ತಿದ್ದವು. ಮೇಜಿನ ಮೇಲೆ ಮಲಗಿರುವ ಹುಡುಗನ ತಲೆ ಕಡಿದಂತಾಗಿ ಚೀರಿ ಎದ್ದ. ಸರು ಆಗ ತಾನೆ ನಿದ್ದೆ ಹತ್ತಿದವಳು ಎಚ್ಚರ ಗೊಂಡು ಸುರೇಶನನ್ನು ತಟ್ಟಿ ಮಲಗಿಸಿದಳು. "ಸಣ್ಣ ಹುಡುಗರು ಮ್ಯಾಜಿಕ್‌ಗೆ ಹೋಗುವುದೇ ತಪ್ಪು" ಎನ್ನಿಸದಿರಲಿಲ್ಲ.

ಮಾರನೇ ದಿನ ಎದ್ದಾಗಿನಿಂದ ಸುರೇಶನ ತಲೆಯೊಳಗೆ ಏನೋ ಗುಂಗು. ಆ ಪುಟ್ಟ ತಲೆಯಲ್ಲಿ ದೊಡ್ಡ ವಿಚಾರವನ್ನು ಮಲುಕು ಹಾಕುತ್ತಾ ಯಾವ ನಿರ್ಧಾರಕ್ಕೂ ಬರದೆ ತಾಕಲಾಟವಾಗಿತ್ತು. ರಾಘು ಆಫೀಸಿಗೆ ಒಂಭತ್ತು ಘಂಟೆಗೆ ಹೊರಟುಹೋದ. ಸರೂ ಮನೆಗೆಲಸವನ್ನೆಲ್ಲಾ ಪೂರೈಸಿ ಮಗುವಿಗೆ ಔಷಧಿ ತರಲು ಹೊರಟಳು. ತೊಟ್ಟಿಲಲ್ಲಿ ಮಗು ನಿದ್ರಿಸುತ್ತಿತ್ತು. ಅದು ಏಳುವಷ್ಟರಲ್ಲಿ ಸ್ನಾನದ ಮಡಿ ಮುಗಿಸಿಬಿಡೋಣ ವೆಂದು ಅಜ್ಜಿ ಬಚ್ಚಲ ಮನೆ ಕಡೆ ಹೊರಟರು. "ಮಗು ಎದ್ದರೆ ತೂಗಪ್ಪಾ" ಎಂದು ಸುರೇಶನಿಗೆ ಕೂಗಿ ಹೇಳಿದರು. ತೊಟ್ಟಿಲಲ್ಲಿ ಬಗ್ಗಿ ನೋಡಿದ ಸುರೇಶ. ಮಗು ಮಿಸುಕದೆ ಮಲಗಿತ್ತು. ಅದೇನು ಹೊಳೆ

ಯಿತೋ ಸರ್ರನೆ ಚೀಲದಿಂದ ಸರಸ್ವತಿ ಚಿತ್ರವಿರುವ ಪುಸ್ತಕ ತೆಗೆದ. ದೇವರ ಗೂಡಿನಿಂದ ಧಾರಾಳವಾಗಿ ಅರಶಿನ ಕುಂಕುಮ ಅಕ್ಷತೆ ತಂದು ಪೂಜೆಮಾಡಿ ಪಂಚವಾಳ ಖಾಲಿಮಾಡಿದ. ಹಿತ್ತಲಲ್ಲಿ ಬಿಟ್ಟ ಚೆಂಡು ಹೂವನ್ನು ಚಿತ್ರಕ್ಕೆಲ್ಲಾ ಕಿತ್ತುಹಾಕಿದ. ದೇವಿ ಚಿತ್ರದ ಮುಂದೆ ಕೈ ಜೋಡಿಸಿದ. ಅಜ್ಜಿಯ ಮಂತ್ರ ಪಠನ ಮುಗಿಯುತ್ತಾ ಬಂದಿತ್ತು. ಒಂದು ಕ್ಷಣ ಯೋಚಿಸಿದ "ಹೇಗೆ ಮಾಡಲಿ ? ಯಾವುದರಲ್ಲಿ ಮಾಡಲಿ" ಅಡಿಗೆ ಮನೆಗೆ ಹೋದ. ತರಕಾರಿ ಹಚ್ಚುವ ಚಾಕು ಮೂಲೆಯಲ್ಲಿ ಬಿದ್ದಿತ್ತು. ಆನಂದವಾಯ್ತು. ಮತ್ತೆ ಓಡಿದ. ಬೀದಿ ಬಾಗಿಲು ಸದ್ದಾದ ಹಾಗೆ ಆಯ್ತು. ಇತ್ತ ಅಜ್ಜೀ ಸ್ನಾನ ಮುಗಿಸಿ ಬಚ್ಚಲ ಮನೆ ಚಿಲುಕ ತೆಗೆಯುತ್ತಿದ್ದು ಕೇಳಬಂತು, ಹಿಂದು ಮುಂದು ಆಲೋಚಿಸದೆ "ಹ್ರಾಂ...ಹ್ರೀಂ ಹ್ರೂಂ" ಎಂದು ಬಲವಾಗಿ ಮಗುವಿ ಬಲಗೈ ಮೇಲೆ ಚಾಕು ಪ್ರಯೋಗಿಸಿಬಿಟ್ಟ. ಕಿಟಾರನೆ ಕಿರುಚಿ ನಿಶ್ಚೇಷ್ಟಿತವಾಯಿತು ಮಗು. ಬೀದಿ ಬಾಗಿಲು ಬಡಿತ ಜೋರಾಯಿತು, ಅಜ್ಜಿ ಬಂದು ಬಾಗಿಲು ತೆಗೆದರು. "ಇದೇನೇ ಸರೂ ಔಷಧಿ ತರಲ್ವೇ?"

"ಇಲ್ಲಾ ಅತ್ತೆ ಚೀಟಿ ತೊಗೊಂಡು ಹೋಗೋದು ಮರೆತಿದ್ದೆ. ಅರ್ಧದಾರಿ ಬಿಸಿಲಲ್ಲಿ ಹೋಗಿ ವಾಪಸ್ಸು ಬಂದೆ. ಸುರೇಶ ಎಲ್ಲಿ? ಸದ್ದೇ ಇಲ್ಲ? ಮಗು ಎದ್ದು ಬಿಟ್ಟನೇ" ಸುರೇಶ ತಾಯಿ ಧ್ವನಿ ಕೇಳಿದ ಕೂಡಲೆ ಮಹಾ ಕಾರ್ಯ ಸಾಧಿಸಿದವನಂತೇ "ಅಮ್ಮಾ: ನಾನೂ ಜಾದೂ ಮಾಡ್ಬಿಟ್ಟೆ" ಎಂದು ಕೂಗಿಕೊಂಡೂ ಒಳಗಿಂದ ಚಾಕು ಪಾಣಿಯಾಗಿ ಹೊರಬಂದ, ಸರೂ ಗಾಬರಿಯಿಂದ,

"ಇದೇನು ಸುರೇಶ ಕೈಯಲ್ಲಿ ಚಾಕು? ಇದೇನೋ ಕೈಯೆಲ್ಲಾ ಕೆಂಪಾಗಿದೆ? ಎಂದು ಒಳಗೆ ಓಡಿದಳು. "ಅಯ್ಯೋ ಅತ್ತೇ" ಎಂದವಳೇ ಜ್ಞಾನತಪ್ಪಿ ನೆಲಕ್ಕುರುಳಿದಳು. ಅತ್ತೆ ಗಾಬರಿಯಿಂದ ರೂಮಿನೊಳಕ್ಕೆ ನುಗ್ಗಿದರು. ರಕ್ತದ ಮಡುವಿನಲ್ಲಿ ಮುಳುಗಿತ್ತು ಮುಗ್ಧ ಶಿಶು.

"ಎಂಥಾ ಕೆಲಸ ಮಾಡಿದ್ಯೋ ಸುರೇಶ. ಒಂದು ನಿಮಿಷ ಸ್ನಾನಾ ಮಾಡಿಕೊಂಡು ಬರುವಷ್ಟರಲ್ಲಿ ಎಷ್ಟು ಅವಿವೇಕ ಆಗೋಯ್ತೋ?"

ಎಂದು ಒಳಗಿನಿಂದ ನೀರು ತಂದು ಸೊಸೆಯ ಮೇಲೆ ಚಿಮುಕಿಸಿದರು: ಚೇತರಿಸಿಕೊಂಡ ಸರು ಸುರೇಶನನ್ನು ನುಂಗಿಬಿಡುವಂತೆ ನೋಡಿ "ಅಯ್ಯೋ ನನ್ ಮಗೂನ ಕೊಂದ್ಬಿಟ್ಯಲ್ಲೊ ಪಾಪೀ" ಅಂದಳು,

"ಇಲ್ಲಮ್ಮಾ ಜಾದು ಮಾಡಿದೀನಿ. ಅಜ್ಜೀ ಶೀಷೇಲಿ ಇಟ್ಟಿರೋ ಗೋಂದು ಹಾಕಿದರೆ ಅಂಟಿತ್ತಮ್ಮಾ, ಅಪ್ಪ ಹೇಳಿದ್ದಾರೆ."

"ನಿನ್ ತಮ್ಮಂಗೆ ಒಂದು ಕೈಯೇ ಇಲ್ದಾಗೆ ಮಾಡ್ಬಿಟ್ಯಲ್ಲೋ ಕೊನೆಗೂ. ಜಾದು ನಿನಗೆ ಹುಚ್ಚು ಹಿಡಸ್ಬಿಡ್ತಲ್ಲೋ. ಅಯ್ಯೋ ಭಗವಂತ" ಎಂದು ರೋದಿಸಿದರು. ತಕ್ಷಣ ವಿವೇಚನೆ ತಂದುಕೊಂಡು ಪಕ್ಕದ ಮನೆಯ ಹುಡುಗನನ್ನು ಕರೆದು ತಮ್ಮ ಡಾಕ್ಟರನ್ನು ಕರೆತರಲು ಹೇಳಿದರು ತಾಯಿ ಅಜ್ಜಿ ಇಬ್ಬರೂ ಅಳುತ್ತಿರುವುದು ನೋಡಿ ಸುರೇಶನಿಗೆ, ಏನೋ ಅನಾಹುತವಾಗಿರಬೇಕು ಅಂದುಕೊಂಡ. ಅಜ್ಜಿ ಹತ್ತಿರ ಮೆಲ್ಲಗೆ ಹೋಗಿ "ಅಜ್ಜೀ....ತಮ್ಮಂಗೆ ಕೈಬರೊಲ್ವಾ ಅಜ್ಜಿ ಪೂಜೆ ಮಾಡಿದೆ ಅಜ್ಜಿ...ನೀನು ಶೀಷೇಲಿ ಹಾಕಿಟ್ಟಿರೋ ಗೋಂದು ಹಾಕಿದರೆ ಅಂಟತ್ತೆ ಅಂದ್ರಲ್ಲಜ್ಜಿ ಅಪ್ಪ...ತಿರುಗ ರಮೇಶಂಗೆ ಲಾಲಾಜಿ ಬರೆಸಿದ ಹಾಗೆ ಕೈ ಬರೊಲ್ವಾ ಅಜ್ಜೀ" ಎಂದು ಬಿಕ್ಕಳಿಸಿದ.

"ಇಲ್ಲಪ್ಪಾ ಇನ್ನು ಎಂದೆಂದಿಗೂ ಒಂದು ಕೈ ರಮೇಶನಿಗೆ ಇರೊಲ್ಲಾಪ್ಪಾ, ನಿಂಗೆ ಯಾಕೆ ಈ ದುರ್ಬುದ್ಧಿ ಬಂತೋ? ಹುಚ್ಚಿಯಂತೆ ಸರು ಮಗುವನ್ನೇ ದಿಟ್ಟಿಸುತ್ತಿದ್ದಳು. ಸುರೇಶನ ಕೆನ್ನೆಗಳ ಮೇಲೆ ಕಣ್ಣೀರು ಹರಿಯುತ್ತಿತ್ತು.

ಕೂಡಲೇ ಮಗುವನ್ನು ಆಸ್ಪತ್ರೆಗೆ ಸೇರಿಸಲು ಯಾರೋ ಟ್ಯಾಕ್ಸಿ ತರಲು ಓಡಿ ಹೋದರು.

# ಜಾಲ

—ಸಿ. ಎನ್. ಮುಕ್ತಾ

ನಾನು ರೂಮಿನ ಒಳಗೆ ಪ್ರವೇಶಿಸುತ್ತಿದ್ದಂತೆ ಅಳುತ್ತಿದ್ದ ಸುಜಿ ಕಣ್ಣೊರೆಸಿಕೊಂಡು ಎದ್ದುನಿಂತಳು,

"ಯಾಕೆ ಸುಜಿ ಇನ್ನೂ ರೆಡಿಯಾಗಿಲ್ಲ".

"ನನಗೆ ಮದುವೆ ಇಷ್ಟವಿಲ್ಲಕ್ಕ"

"ಯಾಕಿಷ್ಟವಿಲ್ಲ ?"

"ಈಗ ನೀನು ಮದುವೆ ಮಾಡ್ಕೊಂಡು ಅನುಭವಿಸ್ತಿರೋ ಸುಖ ನೋಡ್ತಿದ್ದೀನಲ್ಲಾ.....

"ಎಲ್ಲರೂ ನನ್ನ ಹಾಗೆ ಹೀನ ಅದೃಷ್ಟದವರೇ ಇರ್ತಾರಾ? ಏಳು ಸುಜಿ ರೆಡಿಯಾಗು, ಅಪ್ಪ ಅಮ್ಮ ಈಗಾಗಲೇ ಯೋಚನೆಯಿಂದ ಹಣ್ಣಾಗಿದ್ದಾರೆ, ಅಕ್ಕ ಮದುವೇನೇ ಬೇಡ ಅಂದು ಬಿಟ್ಟಳು. ನನ್ನ ಹಣೆ ಬರಹ ಹೀಗಾಯ್ತು, ನೀನಾದ್ರೂ ಮದುವೆ ಮಾಡ್ಕೊಂಡು ಅಪ್ಪ-ಅಮ್ಮಂಗೆ ಕೊಂಚ ನೆಮ್ಮದಿಕೊಡು.

"ನೀವಿಬ್ಬರೂ ಮನೆಗಾಗಿ ಜೀವತೇಯ್ತಿರುವಾಗ, ನಾನು ಹೇಗಕ್ಕ ಮದುವೆ ಮಾಡ್ಕೊಂಡು ಇಲ್ಲಿಂದ ದೂರವಾಗ್ಲಿ ? ಮದುವೆಯಾದ ಮೇಲೆ ಮನೆಗೆ ಸಹಾಯಮಾಡಕ್ಕೆ ಯಾರು ಒಪ್ತಾರೆ ?"

"ನಾನು–ಅಕ್ಕ ಇಬ್ರೂ ಕೆಲಸದಲ್ಲಿದ್ದೇವೆ. ಅಪ್ಪಂಗೂ ಪೆನ್ಷನ್ ಬರ್‍ತಿದೆ. ನಮ್ಮ ಸಂಸಾರ ಹೇಗೋ ನಡೆಯುತ್ತೆ. ನಾವು ನೆಮ್ಮದಿಯಿಂದಿರಬೇಕು ಅಂತಿದ್ರೆ ದಯವಿಟ್ಟು ಎದ್ದು ಡ್ರೆಸ್ ಮಾಡ್ಕೋ ಸುಜಿ".

ಸುಜಿ ಮರುಮಾತನಾಡದೆ ಮುಖ ತೊಳೆದು ಬಂದಳು. ನಾನೇ ಮಾತು ಮುಂದುವರೆಸಿದೆ. "ಹುಡುಗ ತುಂಬಾ ಚೆನ್ನಾಗಿದ್ದಾನಂತೆ ಕೆ. ಇ. ಬಿ. ನಲ್ಲಿ ಇಂಜನಿಯರ್. ಈ ಸಂಬಂಧ ಕುದುರಿದ್ರೆ ನೀನು ಪುಣ್ಯ ಮಾಡಿದ್ದೆ".

"ಅಷ್ಟು ಚೆನ್ನಾಗಿರುವ ಹುಡುಗ ನನ್ನನ್ನು ಯಾಕೆ ಒಪ್ತಾನೆ?" ಸುಜಿ ವ್ಯಂಗ್ಯವಾಗಿ ಕೇಳಿದರು.

"ಯಾಕೆ ನೀನು ಏನಾಗಿದ್ದೀಯ?"

"ಅವನು ನನ್ನ ಮದುವೆ ಆದ್ರೆ, ಅವರ ಮನೆಗೆ ಕಣ್ಣುಕಪ್ಪು ಕೊಂಡುಕೊಳ್ಳುವ ತಂಟೇನೇ ಇರಲ್ಲ. ನನ್ನ ಬಣ್ಣಾನೇ ತೆಗೆದು ಹಚ್ಚಿಕೊಳ್ಳಬಹುದು", ಸುಜಿಯ ಧ್ವನಿಯಲ್ಲಿ ನೋವಿತ್ತು.

"ಬಣ್ಣಾನಾ ಅತ್ಕೊಂಡು ಕುಡಿಯಬೇಕೇನು ? ಬಣ್ಣ ಕಪ್ಪಾದ್ರೇನು ಕಣ್ಣು ಮೂಗು ನೇರವಾಗಿಲ್ಲವೇನು ?"

"ಸುಜಿ ನಕ್ಕಳು. ದೇವರು ಇವಳಿಗೊಂದಿಷ್ಟು ಒಳ್ಳೆಯ ಬಣ್ಣ ಕೊಡಬಾರದಿತ್ತೆ" ಎಂದುಕೊಂಡೆ. ಬೀಗರ ಕಡೆಯವರು ಬರಲು ಇನ್ನೂ ಒಂದು ಗಂಟೆ ಟೈಮಿತ್ತು. ನಾನು ಮುಖತೊಳೆದು ತಲೆ ಬಾಚಿಕೊಂಡೆ ಬಿಳಿಯ ಹಣೆಯಲ್ಲಿ ಕಪ್ಪು ಚುಕ್ಕೆಕಂಡಾಗ ಮನಸ್ಸು ಮುದುಡಿತು. ನನ್ನ ರೂಪಕ್ಕೆ ಮರುಳಾಗೇ ಮೋಹನ್ ವರದಕ್ಷಿಣೆಯಿಲ್ಲದೆ ನನ್ನ ಕೈ ಹಿಡಿದಿದ್ದರು....ಎರಡು ವರ್ಷ ನಮ್ಮ ಸಂಸಾರ ಸುಖವಾಗಿ ಸಾಗಿತ್ತು. ನಾನು ತಾಯಿಯಾದ ಹರ್ಷದಲ್ಲಿದ್ದಾಗ, ಮೋಹನ್ ಸ್ಕೂಟರ್ ಆಕ್ಸಿಡೆಂಟಿನಲ್ಲಿ ಕಣ್ಣು ಮುಚ್ಚಿದ್ದರು. ನನ್ನ ಮಗ 'ಕಿರಣ' ನನ್ನ ಪಾಲಿಗೆ ಬೆಳಕಾಗಿದ್ದ.

"ಸೀತಾ. ಏನು ಕನಸು ಕಾಣ್ತಿದ್ದೀಯ ?" ಅಕ್ಕ ಗೀತಾ ಕೂಗಿದಾಗ ನಾನು ಎದ್ದು ಕಣ್ಣೊರೆಸಿಕೊಂಡೆ. ಇವಳಂತೇ ಇದ್ದಿದ್ದರೆ ಚೆನ್ನಾಗಿರುತ್ತಿತ್ತು ಎಂದುಕೊಂಡೆ. ಆದರೆ ಆ ಯೋಚನೆ ಬಂದಿದ್ದು ಒಂದುಕ್ಷಣ ಮಾತ್ರ. ಪ್ರೋಹರ್ಷ ಜೊತೆ ಕಳೆದ ರಸಗಳಿಗೆಯ ಸವಿ ನೆನಪುಮಾಡಿಕೊಳ್ಳುವ ಭಾಗ್ಯವಾದರೂ ನನಗಿತ್ತು, ಆದರೆ ಗೀತಾ...?

ಸಾಯಂಕಾಲ ಐದುಗಂಟೆಗೆ ಹುಡುಗ, ಅವನ ತಾಯಿ—ತಂದೆ ಬ್ರೋಕರ್ ವಿಶ್ವನಾಥಯ್ಯನ ಜೊತೆ ಹಾಜರಾದರು. ಅಪ್ಪ ಸಂಭ್ರಮದಿಂದ ಸ್ವಾಗತಿಸಿದರು. ಹುಡುಗನನ್ನು ಕಂಡಕೂಡಲೇ ನನಗೆ ಈ ಸಂಭಂಧ ಕುದುರುವುದಿಲ್ಲವೆನ್ನಿಸಿತು. ಹುಡುಗ ತುಂಬಾ ಚೆನ್ನಾಗಿದ್ದ ಒಳ್ಳೆಯ ಬಣ್ಣ, ತಲೆಯ ತುಂಬಾ ಗುಂಗುರು ಕೂದಲು, ನೀಳವಾದ ಮೂಗು. ತೀಕ್ಷ್ಣವಾದ ಕಣ್ಣುಗಳು, ಮುಖಕ್ಕೆ ಒಪ್ಪುವ ಮೀಸೆ—ಈ ಚೆಂದುಳ್ಳಿ ಚೆಲುವ ಸುಜಿಯನ್ನು ಒಪ್ಪುತ್ತಾನೆಯೇ ಎನ್ನಿಸಿತು. ಸುಜಿ ತಿಂಡಿ ತಟ್ಟೆ ಹಿಡಿದು ಬಂದಳು, ಆಕಾಶ ನೀಲಿವರ್ಣದ ರೇಷ್ಮೆಸೀರೆ, ಒಪ್ಪುವ ಚೋಲಿ, ನೀಳ ಜಡೆ, ಶಿಲ್ಪಿಕಡೆದಂತಿದ್ದ ಮೈಕಟ್ಟು—ಎಲ್ಲವೂ ಕಣ್ಣಿಗೆ ಹಿತವಾಗಿದ್ದರೂ ಅವಳ ಬಣ್ಣ ಹಿತವಾಗಿರಲಿಲ್ಲ. ಹುಡುಗ ಒಮ್ಮೆ ಮಾತ್ರ ಅವಳತ್ತ ನೋಡಿದ,

ಅವನು ಹೊರಟಕೂಡಲೇ ಸ್ಕೂಜಿ ನನ್ನಕಡೆ ನೋಡಿ ಹೇಳಿದಳು, "ಇಂಟರ್‌ವ್ಯೂರಿಸಲ್ಟ್ ನಾನೇ ಹೇಳ್ತೀನಿ ಕೇಳು, ಖಂಡಿತಾ ಆ ಹುಡುಗ ನನ್ನ ಒಪ್ಪಲ್ಲ."

ನಮ್ಮೆಲ್ಲರಿಗೂ ಹಾಗೇ ತೋಚಿದ್ದರಿಂದ ಯಾರೂ ಮಾತನಾಡಲಿಲ್ಲ.

ಒಂದುವಾರದಲ್ಲಿ ಇಂಟರ್‌ವ್ಯೂರಿಸಲ್ಟ್ ತಿಳಿಯಿತು. ಆಶ್ಚರ್ಯ! ಹುಡುಗ ಸುಜಿಯನ್ನು ಒಪ್ಪಿದ್ದ! ಸುಜಿಯಂತೂ ಹರ್ಷದಿಂದ ಮೂಕಳಾದಳು. ಹುಡುಗನ ತಂದೆ ಭಾನುವಾರ ಮಾತು—ಕತೆಯಾಡಲು ಬರುವವರಿದ್ದರು. ನಾನು ಅಪ್ಪನಿಗೆ ಸ್ಪಷ್ಟವಾಗಿ ಹೇಳಿ "ಅಪ್ಪ ಅವರು ಒಂದೆರಡು ಸಾವಿರ ಹೆಚ್ಚಿಗೆ ಕೇಳಿದರೂ ಚಿಂತೆಯಿಲ್ಲ. ನೀವು ಒಪ್ಪಿಕೊಂಡು ಬಿಡಿ." ಅಪ್ಪ ಒಪ್ಪಿದರು.

ಭಾನುವಾರ ಹುಡುಗನ ತಂದೆ, ವಿಶ್ವನಾಥಯ್ಯ ಬಂದರು. ಆತ ಸುತ್ತಿಬಳಸಿ ಮಾತನಾಡದೆ ನೇರವಾಗಿ ಹೇಳಿದರು. "ನೋಡಿ ಸ್ವಾಮಿ ನನಗೆ ಇವನೇ ಹಿರಿಯಮಗ. ಇವನಾದ ಮೇಲೆ ಇಬ್ಬರು ಹುಡುಗಿಯರಿದ್ದಾರೆ. ನೀವು ಹತ್ತು ಸಾವಿರ ಕ್ಯಾಷ್‌ಕೊಟ್ಟು, ಯಾವುದಾದ್ರೂ ದೇವಸ್ಥಾನದಲ್ಲಿ ಸರಳವಾಗಿ ಮದುವೆಮಾಡಿಕೊಡಿ."

ನಾವು ಒಪ್ಪಿದೆವು. ಸುಜಿ ಮಾತ್ರ ಹಾರಾಡಿದಳು, ಆದರೆ ನಮ್ಮ ಹಠಕ್ಕೆ ಅವಳು ಸೋತಳು. ಲಗ್ನಪತ್ರಿಕೆಯ ಶಾಸ್ತ್ರವೂ ನಡೆಯಿತು. ಅಪ್ಪ ಐದು ಸಾವಿರರೂಪಾಯಿ ಕೊಟ್ಟರು ಅವರು ಹುಡುಗಿಗೆ ನೂರೈವತ್ತು ರೂಪಾಯಿ ಸೀರೆ ಹಾಕಿದರು. ಹುಡುಗ ತುಂಬಾ ಗಂಭೀರ ಎನ್ನಿಸಿತು. ಅಪ್ಪಿತಪ್ಪಿಯೂ ಅವನು ಸುಜಿಯ ಜೊತೆ ಒಂದಕ್ಷರ ಮಾತನಾಡಲಿಲ್ಲ. ಸುಜಿಗಂತೂ ತುಂಬಾ ನಿರಾಸೆಯಾಯಿತು.

ಪ್ರಕಾಶ್ –ಸುಜಿಯ ಭಾವೀಪತಿ ಬೆಂಗಳೂರಿನಲ್ಲಿ ಕೆಲಸದಲ್ಲಿದ್ದ. ಪ್ರತಿ ಶನಿವಾರ ಬಂದು ಸೋಮವಾರ ಹೋಗುತ್ತಾನೆಂದು ಅವನ ತಂದೆ ಹೇಳಿದ್ದರು. ಲಗ್ನಪತ್ರಿಕೆ ಆಗಿ ಒಂದುತಿಂಗಳಾದರೂ ಅವನು ನಮ್ಮ ಮನೆಯ ಕಡೆ ಸುಳಿಯಲಿಲ್ಲ. ಸುಜಿಗೆ ಒಂದು ಪತ್ರವೂ ಬರಲಿಲ್ಲ. ಈಗಿನ ಕಾಲದ ಹುಡುಗಿ, ಏನೇನು ಕನಸು ಕಂಡಿದ್ದಳೋ ಏನೋ? ಪಾಪ ಭಾವೀಪತಿಯ ವರ್ತನೆಯಿಂದ ಸುಜಿ ತುಂಬಾ ಬೇಜಾರುಮಾಡಿಕೊಂಡಳು.

ಸುಜಿಯ ಭಾವೀ ಮಾವ ಮಾತ್ರ .ಬೇಸರವಿಲ್ಲದೆ ಆಗಾಗ್ಗೆ ನಮ್ಮ ಮನೆಗೆ ಬರುತ್ತಿದ್ದರು. ಸುಜಿಯನ್ನಂತೂ ತುಂಬಾ ಪ್ರೀತಿಯಿಂದ ಮಾತನಾಡಿಸುತ್ತಿದ್ದರು. ಒಮ್ಮೆ ಹಾಗೆ ಮಾತನಾಡುತ್ತಾ ಕುಳಿತಿದ್ದಾಗ ಸುಜಿ ಹೇಳಿದಳು "ನಾನು ಪ್ರೈವೇಟ್ ಸ್ಕೂಲಿನಲ್ಲಿ ಕೆಲಸದಲ್ಲಿರೋದು. ಮದುವೆ ಆದಮೇಲೆ ಕೆಲಸ ಬಿಡಬೇಕಾಗುತ್ತೆ. ಈಗಲಿಂದ ಬೆಂಗಳೂರಲ್ಲಿ ಯಾವುದಾನ್ರೂ ನೋಡ್ತಿದ್ರೆ ಒಳ್ಳೆಯದು."

"ಯಾಕಮ್ಮ ಈಗಲೇ ಬಿಡ್ತೀಯ ? ಇನ್ನೊಂದು ವರ್ಷ ಹಾಡು. ಅಷ್ಟರಲ್ಲಿ ನಮ್ಮ ಪ್ರಕಾಶಂಗೇ ಈ ಊರಿಗೆ ವರ್ಗ ಆಗೋ ಹಾಗೆ ಮಾಡೋಣ. ಒಂದು ಸಲ ಕೆಲಸ ಬಿಟ್ರೆ ಆಮೇಲೆ ಸಿಗೋದುಕಷ್ಟ"

ನಾವೆಲ್ಲಾ ಅವರಮಾತಿಗೆ ತಲೆದೂಗಿದೆವು. ಮತ್ತೆ ಒಂದು ತಿಂಗಳಾದರೂ ಅವರು ನಮ್ಮ ಮನೆಗೆ ಬರಲಿಲ್ಲ. ಒಂದು ಸಾಯಂಕಾಲ ನಾನು ಅಪ್ಪ ಅವರ ಮನೆ ಅಡ್ರೆಸ್ ಹುಡುಕಿಕೊಂಡು ಹೊರಟೆವು. ಪಡುವಾರಹಳ್ಳಿಯ ಯಾವುದೋ ಒಂದು ಮೂಲೆಯಲ್ಲಿ ಅವರ ಮನೆಯಿತ್ತು. ಸುತ್ತಲೂ ಬೆರಣಿ ತಟ್ಟುವವರು, ಹಸುಕಟ್ಟುವವರು ಸಾಕಷ್ಟಿದ್ದರು. ನಾಡಹೆಂಚಿನಮನೆ. ನಾವು ಸೀದಾ ಒಳಗೆ ನುಗ್ಗಿದೆವು. ಪೇಪರ್ ಓದುತ್ತಾ ಕುಳಿತಿದ್ದ ಸುಜಿಯ ಭಾವೀ ಮಾವ ನಮ್ಮನ್ನು ನೋಡಿ ಕಣ್ಣರಳಿಸಿದರು. ನಾನು ಮನೆಯತ್ತ ಗಮನ ಹರಿಸಿದೆ. ಒಂದು ಹಾಲ್, ಪಕ್ಕದಲ್ಲೇ ಅಡಿಗೆಮನೆ, ಬಚ್ಚಲುಮನೆ, ರೂಮು ಎಲ್ಲವೆಯೋ ಕಾಣಲಿಲ್ಲ. ನಲವತ್ತು ಕ್ಯಾಂಡಲಾ ಬಲ್ಬ್ ಉರಿಯುತ್ತಿತ್ತು. ಅಡಿಗೆ ಮನೆಯಲ್ಲಿ ದೀಪವಿರಲಿಲ್ಲ. ಪ್ರಕಾಶನ ತಂಗಿ ಹೊರಗೆಹೋಗಿ ಮುಚ್ಚಿಕೊಂಡು ಏನೋ ತಂದಳು. ಹತ್ತುನಿಮಿಷದಲ್ಲಿ ಎರಡು ಗಾಜಿನ ಲೋಟಗಳಲ್ಲಿ ಕಾಫಿ ಬಂತು. ಸುಜಿಯ ಮಾವ ಕಾಫಿ ಬೇಡವೆಂದರು.

"ಬಾಡಿಗೆ ಎಷ್ಟು ಈ ಮನೆಗೆ ?" ಅಪ್ಪಕೇಳಿದರು.

"ಈ ಮನೆಗೇ ನೂರುರೂಪಾಯಿ ಕೊಡ್ತಿದ್ದೇನೆ. ನೋಡಿದ್ರಾ ಹೇಗಿದೆ ಈ ಮನೆ ? ನನ್ನ ಮಗುಗೆ ಹೇಳಿಬಿಟ್ಟಿದ್ದೇನೆ "ನೀನು ಬೇರೆ ಮನೆ ಮಾಡುವವರೆಗೂ ಮದುವೆ ಮಾಡಲ್ಲಾಂತ"

"ಹಾಗಾದ್ರೆ ನನ್ನ ಮಗಳ ಗತಿ ಏನು ಸ್ವಾಮಿ ?" ಅಪ್ಪ ಆತಂಕದಿಂದ ಕೇಳಿದರು.

"ಯಾಕೆ ದೇವರು ಯೋಚನೆ ಮಾಡ್ತೀರಾ ? ಲಗ್ನಪತ್ರಿಕೆ ಮಾಡ್ಕೊಂಡ ಮೇಲೆ ಹುಡುಗಿ ಕೈ ಬಿಡ್ತೀವಾ ? ಧೈರ್ಯವಾಗಿರಿ"

ದಾರಿಯಲ್ಲಿ ಅಪ್ಪ ಹೇಳಿದರು "ಸೀತಾ ನಂಗ್ಯಾಕೋ ಇವನ ಮೇಲೆ ಅನುಮಾನಕಣೆ. ಹುಡುಗ ದುಡ್ಡಿನಾಸೆಗೆ ಈ ಮದುವೆಗೆ ಒಪ್ಪಿದ್ದಾನೆ ಅನ್ನಿಸತ್ತೆ. ಏನಾದ್ರಾಗಲಿ ನಾನು ನಾಳೆ ಬೆಂಗಳೂರಿಗೆ ಹೋಗಿ ವಿಚಾರಿಸ್ಕೊಂಡು ಬರ್ತೀನಿ. ಆದರೆ ಈ ವಿಷಯ ಯಾರಿಗೂ ಹೇಳಬೇಡ."

ನಾನು ಸೋತ ಧ್ವನಿಯಲ್ಲಿ 'ಹೂಂ' ಎಂದೆ. ಮರುದಿನ ಬೆಳಗಿನ ಬಸ್ಸಿಗೇ ಅಪ್ಪ ಹೊರಟರು. ಅವರು ರಾತ್ರಿ ಬಂದಾಗ ಗಂಟೆ ಹತ್ತಾಗಿತ್ತು. ನಾನು ಯಾರೂ ಇಲ್ಲದಾಗ ಕೇಳಿದೆ "ಏನಾಯ್ತಪ್ಪ?"

"ಹುಡುಗ ಬೆಂಗಳೂರು ಕೆ. ಇ. ಬಿ ನಲ್ಲಿರೋದು ನಿಜಾಮ್ಮ. ಅಹಾ! ಅವನ ಆಫೀಸು ಹೇಗಿದೆ ಗೊತ್ತಾ ? ಅವನು ಕುಳಿತುಕೊಳ್ಳುವ ರೂಮಂತೂ ಇಂದ್ರನ ಅರಮನೆ ಇದ್ದ ಹಾಗಿದೆ"

"ಹುಡುಗ ಸಿಕ್ಕಿದ್ದಾ ?"

"ಇಲ್ಲಮ್ಮ ಇವತ್ತು ರಜಾ ಹಾಕಿದ್ದ."

ನಾನು ನೆಮ್ಮದಿಯ ಉಸಿರೆಳೆದುಕೊಂಡೆ.

ಆ ದಿನ ಶನಿವಾರ ನಾನು ಸಾಯಂಕಾಲ ಆಫೀಸ್‌ನಿಂದ ಬರುತ್ತಿದ್ದಂತೆ ಅಪ್ಪ ನನ್ನನ್ನು ಮಾರ್ಕೆಟ್‌ಗೆ ಕರೆದುಕೊಂಡು ಹೋಗಿ ಒಂದು ಮೂರೆ ತರಕಾರಿ ತಂದರು. ಅಮ್ಮ ಆಶ್ಚರ್ಯದಿಂದ ರಾಗವೆಳೆದಾಗ ಅಪ್ಪ ಹೇಳಿದರು "ಎಲ್ಲಾ ತರಕಾರಿ ಹಾಕಿ ಬಿಸಿಬೇಳೆಭಾತ್ ಮಾಡು. ಹಾಗೇ ಒಂದು ಸಿಹಿಮಾಡು. ಅಳಿಯಂದ್ರಿಗೆ ಊಟಕ್ಕೆ ಹೇಳಿದ್ದೇನೆ."

ಸುಜಿಯ ಮುಖ ಅರಳಿತು. ಹನ್ನೆರಡು ಗಂಟೆಗೆ ಸರಿಯಾಗಿ ಪ್ರಕಾಶ್, ಅವನ ತಂದೆ ವಿಶ್ವನಾಥಯ್ಯ ಬಂದರು. ಕೊಂಚ ಹೊತ್ತಿನಲ್ಲಿ ಅಪ್ಪನ ಸ್ನೇಹಿತರು ರಘುರಾಂ, ಮತ್ತೊಬ್ಬ ವ್ಯಕ್ತಿಯ ಜೊತೆ ಬಂದರು. ಸೊಗಸಾದ ಊಟವಾಯಿತು. ರಘುರಾಂ ಹಾಯಾಗಿ ರೂಮಿನಲ್ಲಿ ಮಲಗಿದರು. ನಾವೆಲ್ಲಾ ಹೊರಗಡೆ ಬಂದು ಕುಳಿತೆವು.

ಅಪ್ಪ ಅದೂ ಇದೂ ಮಾತನಾಡುತ್ತಾ ಕೇಳಿದರು "ಏನು ಸ್ವಾಮಿ ಯಾವಾಗ ಮದುವೆ ಇಟ್ಟು ಕೊಳ್ಳೋಣ?"

"ಸ್ವಲ್ಪ ನಿಧಾನಿಸಿ. ಈಗಲೇ ಮದುವೇ ಆದ್ರೂಕೂಡ ನಾನು ತಕ್ಷಣ ಸೊಸೆಯನ್ನು ಮನೆತುಂಬಿಸಿಕೊಳ್ಳಲ್ಲಿ. ಪ್ರಕಾಶಂಗೆ ಇಲ್ಲಿಗೇ ವರ್ಗ ಆಗಬೇಕು, ನಮಗೆ ಬೇರೆ ಮನೆ ಸಿಗಬೇಕು.

ಆಗ ರಘುರಾಂ ಸ್ನೇಹಿತರು ನಾರಾಯಣರಾವ್ ಕೇಳಿದರು "ನೀವು ಈಗಿನ ಕಾಲದವರು: ಎಂತಹ ಮ್ಯಾರೇಜ್ ಇಷ್ಟಪಡ್ತೀರ ಪ್ರಕಾಶ್?"

"ನನಗೇನೋ ಸರಳ ವಿವಾಹಾನೇ ಇಷ್ಟ ಸಾರ್"

"ಅವರೀಗ ಒಪ್ಪಿರೋದೂ ಸರಳವಿವಾಹಕ್ಕೆ ಸಾರ್" ನಾನು ಮಧ್ಯ ಬಾಯಿ ಹಾಕಿದೆ.

ಹಾಸ್ಯಮಾಡಬೇಡಿ ಮೇಡಂ. ಮದುವೆ ಸರಳವಾದ್ರೂ, ವರ ದಕ್ಷಿಣೆ ಹಣ ತೆಗೆದುಕೊಂಡಿದ್ದೇವಲ್ಲಾ" ಪ್ರಕಾಶ್ ನಗುತ್ತಾ ಹೇಳಿದ.

"ಎಷ್ಟು ತೊಗೊಂಡಿದ್ದೀರಾ?"

"ನೋಡಿ ಸ್ವಾಮಿ. ನನಗೆ ಇವನೇ ದೊಡ್ಡಮಗ, ಇವನಿಗೆ ಮದುವೆಗೆ ಇರುವ ತಂಗಿಯರಿದ್ದಾರೆ. ಅದಕ್ಕೋಸ್ಕರ ವರದಕ್ಷಿಣೆ ತೊಗೋಬೇಕಾಯ್ತು"

"ಎಲ್ಲಿ ಪೂರ್ತಿ ತೊಗೊಂಡಿದ್ದಿರಾ" ನಾನಿನ್ನೂ ಕೊಟ್ಟಿರೋದು ಐದೇಸಾವಿರ. ಇನ್ನೂ ಐದುಸಾವಿರ ಕೊಡಬೇಕು" ಅಪ್ಪ ನಗುತ್ತಾ ಹೇಳಿದರು.

"ಹೌದು ದೇವ್ರು. ನೀವು ಕೊಟ್ಟಿರುವ ಐದುಸಾವಿರದಲ್ಲಿ ಹುಡುಗೀಗೆ ಮಾಂಗಲ್ಯ ಮಾಡಿಸಿದ್ದೇವೆ. ಉಳಿದ ಹಣ ಕೊಟ್ಟರೆ ಬೇರೆ ಖರ್ಚು ಪೂರೈಸಿಕೊಳ್ತೇವೆ."

"ನೀವು ಮದುವೆ ದಿನಾಂಕ ಗೊತ್ತುಮಾಡಿದ ತಕ್ಷಣ ನಾವು ಹಣ ಕೊಡ್ತೇವೆ" ಗೀತಕ್ಕ ಹೇಳಿದಳು.

ಅಪ್ಪ. ಅವಳ ಮಾತು ಕಿವಿಗೆ ಬೀಳದವರಂತೆ ನುಡಿದರು "ಮೊನ್ನೆ ಬೆಂಗಳೂರಿಗೆ ಹೋಗಿದ್ದೆ. ನಿಮ್ಮ ಅಡ್ರೆಸ್ ಇತ್ತಲ್ಲಾಂತ ನಿಮ್ಮನ್ನು ನೋಡಕ್ಕೆ ನಿಮ್ಮ ಆಫೀಸಿಗೂ ಬಂದಿದ್ದೆ. ನೀವು ರಜ ಅಂತ ತಿಳಿಯಿತು". ಅಪ್ಪ ಪ್ರಕಾಶನ ಕಡೆ ತಿರುಗಿ ಹೇಳಿದರು.
ಆವನ ಮುಖ ವಿವರ್ಣವಾಯ್ತು. ಅವನು ತೊದಲಿದ "ನೀವು, ಆಫೀಸಿಗೆ"?

"ಏನಾಕ್ರಿ" ನಿಮ್ಮ ಗುಟ್ಟು ರಟಾಯ್ತಲ್ಲಾಂತ ಭಯ ಆಗ್ತಿದೆಯೇನು?

"ನಾನು...ಗುಟ್ಟು"

"ಇದೆಲ್ಲಾ ಏನಪ್ಪಾ?"

"ಇವನು ಕೆ.ಇ.ಬಿ. ನಲ್ಲಿ ಇಂಜಿನಿಯರ್ ಅಲ್ಲಮ್ಮ. ಒಬ್ಬ ಸಾಧರಣ ಪ್ಯೂನ್!"

"ವ್ಹಾಟ್?!" ಸುಜಿ ಕೂಗಿದಳು.

"ಇವನ ಆಫಿಸ್‌ಗೆ ಹೋಗಿ ವಿಚಾರಿಸಿದಾಗ ತಿಳೀತು. ಅಷ್ಟೇ ಅಲ್ಲ. ಇವನಿಗೆ ಈಗಾಗಲೆ ಮದುವೆ ಆಗಿ ಒಂದು ಮಗುವಿದೆ."

"ಸುಳ್ಳು" ಪ್ರಕಾಶ್ ಕೂಗಿದ.

ಅಪ್ಪ ಜೇಬಿನಿಂದ ಫೋಟೋ ತೆಗೆದು ತೋರಿಸಿದರು. ಪ್ರಕಾಶ್ ಒಂದು ಹುಡುಗಿಯ ಜೊತೆ ಒಂದು ಮಗುವನ್ನೆತ್ತಿಕೊಂಡು ನಿಂತಿದ್ದ. ಯಾರದು ಈ ಫೋಟೋ?"

"ನನ್ನದೇ"

"ಮದುವೆಯಾಗಿದ್ರೂ ಮದುವೆಯಾಗಿಲ್ಲ ಅಂತ ಯಾಕೆ ಸುಳ್ಳು ಹೇಳಿದೆ? ಜವಾನನ ಕೆಲಸ ಇದ್ರೂ ಇಂಜಿನಿಯರ್ ಅಂತ ಯಾಕೆ ಸುಳ್ಳು ಬೊಗಳ್ದೆ."

ಅವರಲ್ಲಿ ಯಾರೊಬ್ಬರೂ ಉತ್ತರಕೊಡಲಿಲ್ಲ.

"ಅಪ್ಪಾ ನಿಮಗೆ ಈ ಫೋಟೋ ಎಲ್ಲಿ ಸಿಕ್ತು?"

"ಬೆಂಗಳೂರಲ್ಲಿ ವಿಷಯ ತಿಳಿದಮೇಲೆ ಇವನ ಮನೆಗೆ ಹೋಗಿದ್ದೆ, ಇವನಿರಲಿಲ್ಲ. ಏನೋ ಸುಳ್ಳು ಹೇಳಿ ಈ ಫೋಟೋ ಇಸ್ಕೊಂಡ್ಬಂದೆ" ಪಾಪ ಇವನ ಹೆಂಡತೀನೇ ಕೊಟ್ಟಳು."

ವಿಶ್ವನಾಥಯ್ಯ ಅಪ್ಪನ ಕೈ ಹಿಡಿದುಕೊಂಡು ಹೇಳಿದರು. "ಖಂಡಿತಾ ಈ ವಿಷಯ ನಂಗೆ ಗೊತ್ತಿರಲಿಲ್ಲ ಸ್ವಾಮಿ. ನನ್ನ ಕ್ಷಮಿಸಿ."

ನಾನು ಉಕ್ಕಿ ಬಂದ ಕೋಪ ತಡೆದು ಹೇಳಿದೆ. ಆಗಿದ್ದು ಆಗಿ ಹೋಯ್ತು. ನಮ್ಮ ಹಣ ಮೊದಲು ತಂದ್ಕೊಡಿ ಸಾಕು. ನಿಮ್ಮ ಸಂಭಂದಕ್ಕೆ ದೊಡ್ಡ ನಮಸ್ಕಾರ."

ಈಗ ಪ್ರಕಾಶನ ತಂದೆ ಹೇಳಿದರು "ನೀವು ಐದುಸಾವಿರ ಕೊಟ್ಟಿದ್ದಕ್ಕೆ ಏನು ದಾಖಲೆಯಿದೆ? ಸುಮ್ಮನೆ ನಾನು ಹೇಳಿದ ಹಾಗೆ ಕೇಳಿ. ನಿಮ್ಮ ಹುಡುಗೀನ್ನ ಯಾರೂ ಒಪ್ಪಲ್ಲ ನಮ್ಮ ಹುಡುಗಂಗೇ ಕೊಡಿ, ಅವನ ಮೊದಲ ಹೆಂಡ್ತಿ ನಮ್ಮ ಜಾತಿ ಅಲ್ಲ. ಅವಳ್ನ ನಮ್ಮನೆಗೆ ಸೇರಿಸಲ್ಲ. ನಮ್ಮ ಹುಡುಗ ಪ್ಯೂನ್ ಆದರೂ ಮೇಲು ಸಂಪಾದನೆ ಚೆನ್ನಾಗಿದೆ.

"ನನ್ನ ಮದುವೆ ಆಗದಿದ್ರೂ ಚಿಂತೆಯಿಲ್ಲ. ಖಂಡಿತಾ ನಿಮ್ಮ ಮಗನ್ನ ಮದುವೆ ಆಗಲ್ಲ."

"ಹಾಗಾದ್ರೆ ಹಣದ ವಿಷಯ ಮರೆತುಬಿಡಿ. ನೀವು ಐದುಸಾವಿರ ಕೊಟ್ಟಿದಕ್ಕೆಯೇನು ಆದಾರ ಇದೆ? ನಿಮ್ಮಂತಹವರನ್ನು ನಾನು ತುಂಬಾ ನೋಡಿದ್ದೇನೆ. ಅದಕ್ಕೆ ಕ್ಯಾಷ್ ತೊಗೊಂಡಿದ್ದು."

ನಮ್ಮ ಮನೆಯಲ್ಲೇ ಕುಳಿತು. ನಮ್ಮ ಮೇಲೆ ಜೋರುಮಾಡುವ ಆ ವ್ಯಕ್ತಿಯ ಧೈರ್ಯಕಂಡು ನಾನು ಮೂಕಳಾದೆ.

ಅಷ್ಟರಲ್ಲಿ ರಘುರಾಂ ಆಚೆ ಬಂದು ಕೇಳಿದರು "ನಾವು ಹಣ ಕೊಟ್ಟಿದ್ದಕ್ಕೆ ದಾಖಲೆ ಬೇಕೇನಯ್ಯ. ಇಲ್ಲಿದೆ ಕೇಳು?"

ಅವರು ಸೋಫಾ ಕೆಳಗಿದ್ದ ಟೇಪ್‌ರೆಕಾರ್ಡರ್ ಹಾಕಿದಾಗ, ತಮ್ಮ ಧ್ವನಿಯನ್ನೇ ಕೇಳಿ ಆತ ಕಿವಿ ಮುಚ್ಚಿಕೊಂಡರು. ನಮ್ಮ ಸಂಭಾಷಣೆ ಪೂರ್ತಿ ರೆಕಾರ್ಡ್ ಆಗಿತ್ತು! ಪ್ರಕಾಶನ ಕೈ ಹಿಪ್ ಪಾಕೆಟ್ ಕಡೆ ಸರಿಯಿತು. ನಾರಾಯಣರಾವ್ ಅವನ ಕೈ ಹಿಡಿದು ಹೇಳಿದರು "ಅತೀ ಜಾಣತನ ತೋರಿಸಬೇಡ. ನೌ ಯು ಆರ್ ಅಂಡರ್ ಅರೆಸ್ಟ್."

"ಏನು?!"

"ನಾನು ಪೋಲಿಸ್ ಇನ್ಸ್‌ಪೆಕ್ಟರ್‌ಕಣಯ್ಯ, ಇಂತಹ ಸಂಧರ್ಭ ಬರತ್ತೆ ಅಂತ ಮೊದಲೇ ನನಗೆ ಕಂಪ್ಲೇಂಟ್ ಕೊಟ್ಟಿದ್ರು."

ಪ್ರಕಾಶ್ ಕುಸಿದುಕುಳಿತ. ಅವನ ಹಿಪ್ ಪಾಕೆಟ್‌ನಲ್ಲಿ ಕ್ಲೋರೋಫಾರಂ ಸವರಿದ್ದ ಕರ್ಚಿಫ್ ಇತ್ತು... ಜೊತೆಗೆ ಸಣ್ಣ ಚಾಕು ಇತ್ತು. ನಾರಾಯಣರಾವ್ ಸ್ಟೇಷನ್ನಿಗೆ ಫೋನ್ ಮಾಡಿದರು. ಹತ್ತು ನಿಮಿಷಗಳಲ್ಲಿ ಅಪ್ಪ-ಮಗ ಪೋಲಿಸ್‌ನವರ ಅತಿಥಿಗಳಾದರು. ಅವರು ಪೋಲಿಸ್‌ನವರ ಜೊತೆ ಹೋಗುವುದನ್ನು ಕಂಡು ನನ್ನ ಮಗ ಕಿರುಚಿದ.

"ಅಮ್ಮಾ. ಸುಜಿ ಆಂಟಿ ಗಂಡನ್ನ ಪೋಲಿಸ್ನವರು ಕರ್ಕೊಂಡು ಹೋಗ್ತಿದ್ದಾರಲ್ಲಮ್ಮಾ.?"

"ಹೋಗಲಿ ಬಿಡು ಮರಿ. ಬೇರೆ ಚಿಕ್ಕಪ್ಪ ಬರ್ತಾರೆ' ನಾನು ಕಿರಣನ ತಲೆ ಸವರುತಾ ಸುಜಿಯಕಡೆ ನೋಡಿದಾಗ, ಆವಳು ಅಳು ತಡೆದು ಒಳಗೆ ಓಡಿದಳು.

—o—

# ಮಹಾಸಂಗಮ

—ಜಗದ್ಗುರು ಮಾತೆ ಮಹಾದೇವಿ

ಕ್ರಿಯಾಶಕ್ತಿ ಅಕ್ಕನಾಗಮ್ಮ

ಬಸವಣ್ಣನ ಬಾಳನ್ನು ನನ್ನಷ್ಟು ಒಳಹೊಕ್ಕು ಅರಿತವರು ಮತ್ತಾರೂ ಇರಲಿಕ್ಕಿಲ್ಲ, ಆ ಧೀಮಂತ ಮಗುವಿನ ಪ್ರತಿಭೆಯನ್ನು. ವಿಚಾರ ಪ್ರೌಢಿಮೆಯನ್ನು ಮೊಟ್ಟಮೊದಲು ಗುರುತಿಸಿದವಳು ನಾನು. ನನ್ನ ಕಣ್ಣಾಲಿಯೆಂದು ಭಾವಿಸಿ ಜೋಪಾನ ಮಾಡಿದೆ. ಹೃದಯವನ್ನು ಎದೆಯ ಗೂಡು ತನ್ನ ಅಂತರಂಗದಲ್ಲಿರಿಸಿಕೊಂಡು ಸಂರಕ್ಷಿಸುವಂತೆ ಆ ತಮ್ಮನನ್ನು ಪೋಷಿಸಿದೆ.

ಅಂದು ಮುದ್ದು ಕುಮಾರ ಬಸವೇಶನಿಗೆ ಉಪನಯನ ಸಂಸ್ಕಾರದ ಸಿದ್ಧತೆ; ಎಲ್ಲೆಡೆಯಿಂದ ನಂಟರಿಷ್ಟರ ಆಗಮನ ಆದರೆ 'ಅಕ್ಕನಿಗೆ ಮೊದಲು ಸಂಸ್ಕಾರವಾಗಬೇಕು. ನಂತರ ನನಗೆ' ಎಂದು ಹಟ ಹಿಡಿದ. ತಂದೆ ಮಾದರಸರಾದಿಯಾಗಿ ನೆರೆದವರೆಲ್ಲ ಹೇಳಿದರು ಬುದ್ಧಿವಾದವನ್ನು, "ಮಗು ನಮ್ಮ ಸಂಪ್ರದಾಯಕ್ಕೆ ತಕ್ಕಂತೆ ನಾವಿರಬೇಕು. ಆ ಆಚರಣೆಯ ಪ್ರಕಾರ ಸ್ತ್ರೀಯರಿಗೆ ಸಂಸ್ಕಾರ ಧರ್ಮಬಾಹಿರ." ತೀಕ್ಷ್ಣವಾಗಿ ಪ್ರತಿಭಟಿಸಿದ ಬಾಲಕ: "ನಮಗೆ ಜನ್ಮವೀವ ತಾಯಿ, ಕೈ ಹಿಡಿವ ಮಡದಿ, ಒಡನೆ ಹುಟ್ಟು ಸಹೋದರಿ, ಒಡಲಲ್ಲಿ ಹುಟ್ಟುವ ಮಗಳು ಮನೆಯ ತುಂಬುವ ಸೊಸೆ-ಹೀಗೆ ಪುರುಷನ ಬಾಳಿನಲ್ಲಿ ಅವಿನಾಭಾವವಾಗಿ ನಡೆದು ಬರುವ ಸ್ತ್ರೀಯು ಧರ್ಮ ಸಂಸ್ಕಾರ ಬಾಹಿರಳೆ? ಇದನ್ನು ನಾನು ಒಪ್ಪಿಕೊಳ್ಳೆ," ಎಲ್ಲರ ಪ್ರತಿಭಟನೆ ವಾದವಿವಾದ ಲೆಕ್ಕಿಸದೆ ಬಸವಣ್ಣನು ತನ್ನ ನಿಲುವನ್ನು ಪ್ರತಿಪಾದಿಸಿದ.

"ಸ್ತ್ರೀ-ಪುರುಷರು ನಿಸರ್ಗದ ಎರಡು ಕಣ್ಣುಗಳು. ಈರ್ವರಲ್ಲೂ ಸಮಾನತೆ ತೋರದ, ಸಮಾಜವನ್ನು ಜಾತಿಯ ಗುಂಪುಗಳಾಗಿ ಒಡೆಯುವ ಸಮಾಜ-ಧರ್ಮ ವ್ಯವಸ್ಥೆ ನನಗೆ ಬೇಡ" ಎಂದು ತಂದೆ ಮಾದರಸನ ಕ್ರೋಧವನ್ನು ಲೆಕ್ಕಿಸದೆ, ತಾಯಿ ಮಾದಲಾಂಬಿಕೆಯ ಕಣ್ಣೀರ ಕಡಲನ್ನು ದಾಟಿ ಮನೆಯ ಹೊಸ್ತಿಲು ತೊರೆದ.

ನನ್ನ ಹೃದಯ ತಳಮಳಿಸಿತು. ನನಗಾಗಿ, ಸ್ತ್ರೀ ಕುಲದ ಸಮಾನತೆಯ ಡಿಂಡಿಮ ಬಾರಿಸಲಿಕ್ಕೆ, ಮನುಕುಲದ ಸಮತೆಯನ್ನು ಸಾರಕ್ಕೆ ಇಂಥ ದಿಟ್ಟ ಹೆಜ್ಜೆಯನಿಟ್ಟ ತಮ್ಮನನ್ನು ಅಗಲಲಾರೆದಾದೆ, ಯಾರೋ ದೇಹದಿಂದ ಹೃದಯವನ್ನು ದೂರ ಒಯ್ಯುವಂತೆ ಭಾಸವಾಯ್ತು. ನನ್ನನ್ನು ನಾನೇ ನಿಗ್ರಹಿಸಿಕೊಳ್ಳಲಾರದೆ, ತಾಯಿ-ತಂದೆಯರ ಮಾತನ್ನು ಮೀರಿ ತಮ್ಮನನ್ನು ಹಿಂಬಾಲಿಸಿದೆ.

ಮುಳ್ಳು-ಕಲ್ಲಿನ ಕ್ರಾಂತಿಯದಾರಿ ತುಳಿದ ಆವನಿಗೆ ನೆರಳಾಸರೆಯಾದೆ. ಸಾಂತ್ವನ ನೀಡಿದೆ. ನನಗೇನೋ ಅನ್ನಿಸುತ್ತಿತು; "ಇವನು ಕೇವಲ ನನ್ನ ತಮ್ಮನೆಂಬ ವಾತ್ಸಲ್ಯದದೃಷ್ಟಿ ಮಾತ್ರ ಸಾಲದು: ಜಗದೋದ್ಧಾರಕ ಮಣಿಹದೊಡನೆ ಮರ್ತ್ಯಕ್ಕಿಳಿದ ಮಹಂತನೆಂಬ ದೂರದೃಷ್ಟಿ ಬೇಕು" ಎಂದು. ಅಂತೂ ನನ್ನ ಆ ದೂರದೃಷ್ಟಿ ಯಶಸ್ವಿಯಾಯಿತು ಪ್ರಕಟಿತವಾದ ವ್ಯಕ್ತಿತ್ವದಲ್ಲಿ ಅಡಗಿರುವ ಧೀಮಂತ ಶಕ್ತಿಯನ್ನು ಗುರುತಿಸಿ, ಗೌರವಿಸುವುದು ಕಠಿಣ. ಪ್ರಕಟಿತವಾದ ಶಕ್ತಿಯಲ್ಲಿ ಗುರುತಿಸುವುದೇನು ಕಷ್ಟ !

ಬಸವಣ್ಣನ ಸಾಧನೆ ಅಪಾರ : ಅತ್ಯುನ್ನತ ವಿಚಾರವಾದಿಯವನು. ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯು ಸಮಾಜವನ್ನು ಮೇಲು-ಕೀಳೆಂದು ಶೋಷಣೆ ಮಾಡುತ್ತಿರುವಾಗ, "ಕೊಲುವವನೆ ಮಾದಿಗ, ಹೊಲಸು ತಿಂಬವವನೆ ಹೊಲೆಯ, ಕುಲವೇನೋ ಅವಂದಿರ ಕುಲವೇನೋ" ಎಂದ ಝುಂಕಿಸಿ ಹೇಳಿ, "ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ ಕೂಡಲ ಸಂಗನ ಶರಣವೇ ಕುಲಜನು" ಎಂದು ಸಾರಿದ. ಅಂತೆಯೇ ಲೋಹ

ಚುಂಬಕ ಶಕ್ತಿಯಾಗಿ ವಿವಿಧ ದೇಶ, ಭಾಷೆ, ಕಾಯಕದ ಅನಂತ ಅನರ್ಘ್ಯ ಶಕ್ತಿಗಳನ್ನು ತನ್ನ ಭಕ್ತಿ ಸೂತ್ರದಿಂದ ಬಂಧಿಸಿರುವವನು. ವಯಸ್ಸಿನಲ್ಲಿ ಕಿರಿಯನಾದರೇನಂತೆ ನನಗೂ ಗುರು ಅವನು. ಆದ್ದರಿಂದಲೇ ನಾನು ಹೃದಯ ತುಂಬಿ ಬಣ್ಣಿಸುವೆ :

ಎನ್ನ ಕುಲಸೂತಕವನಳಿದ ಬಸವಣ್ಣ
ಎನ್ನ ಛಲಸೂತಕವ ಕಳೆ ಬಸವಣ್ಣ
ಎನ್ನ ತನುಸೂತಕವ ಕಳೆದ ಬಸವಣ್ಣ
ಎನ್ನ ಮನ ಸೂತಕವ ಕಳೆದ ಬಸವಣ್ಣ
ಎನ್ನ ಪ್ರಾಣ ಸೂತಕವ ಕಳೆದ ಬಸವಣ್ಣ
ಎನ್ನ ಭಾವ ಸೂತಕವ ಕಳೆದ ಬಸವಣ್ಣ
ಎನ್ನರಿವು ಮರಹಿನ ಸಂದ ಬಿಡಿಸಿದ ಬಸವಣ್ಣ
ಎನ್ನ ತನ್ನಲ್ಲಿ ಇಂಬಿಟ್ಟುಕೊಂಡ ಬಸವಣ್ಣ
ನಿಜ ನಿರ್ವಯಲ ಸಮಾಧಿಯ ನಿಜವಾಸದ
ಬಾಗಿಲ ತೋರಿದ ಬಸವಣ್ಣ
ಬಸವಣ್ಣ ಪ್ರಿಯ ಚೆನ್ನಸಂಗಯ್ಯನ
ಹೃದಯು ಕಮಲದಲ್ಲಿ ಸಯವಾಗಿರಿಸಿದ ಎನ್ನ
ತಂದೆ ಸಂಗನ ಬಸವಣ್ಣನು.

ಬಸವೇಶನ ಮರ್ತ್ಯದ ಮಣಿಹ ಪೂರೈಕೆಗೆ ನನ್ನಪಾಲು, ನನ್ನ ಮಗ ಚನ್ನಬಸವನ ಪಾಲು ಸೇರಲೇಬೇಕು. ಕೂಡಲ ಸಂಗಮದ ಪತಿ ಮನೆಗೆ ನಾನು ಬಂದಾಗ, ನನ್ನ ಪತಿ ಶಿವಸ್ವಾಮಿ ಕೇವಲ ತೀರ್ಥ ಯಾತ್ರೆಗಳಲ್ಲೇ ತಿರುಗಿದಾಗ ನಾನು ತುಂಬು ಗರ್ಭಿಣಿ. ಅನಿತರಲ್ಲಿ ನನಗೂ ವೈರಾಗ್ಯ ಬಲಿಯಿತು. ಬಸವಣ್ಣನ ಹಿಂದೆ ಕಲ್ಯಾಣಕ್ಕೂ ಹೊರಟೆ, ಒಬ್ಬನೇ ಮುದ್ದು ಮಗನಿಗೆ ಆದಕ್ಕೆಂತಲೇ ಅಲ್ಲವೇ ಬಸವೇಶನ ಹೆಸರನ್ನು

ಮತ್ತು ಅಸ್ಪೃಶ್ಯ ಕುಲದಲ್ಲಿ ಜನ್ಮಿಸಿ ಮಹಂತನಾದ ಚೆನ್ನಯ್ಯನ ಹೆಸರನ್ನೂ ಸಂಗಮಿಸಿ ಇಟ್ಟಿದ್ದು. ಅಂದು ಮಗನಿಗೆ ನಾಮಕರಣ ಮಾಡುವಂದು 'ಬಸವೇಶ'ನೆಂದು ಹೆಸರಿಡಲು ನಾನು ಹಟ ತೊಟ್ಟಾಗ. ಬಸವಣ್ಣ ಒಪ್ಪದೆ, 'ಅಪ್ಪನು ನಮ್ಮ ಮಾದಾರ ಚೆನ್ನಯ್ಯ'ಕುಲದಿಂದಧಿಕ ಚೆನ್ನಯ್ಯನ ಹೆಸರಿಡಿರೆಂದು ಒತ್ತಾಯಿಸಿದ. ಇಬ್ಬರ ತೃಪ್ತಿಗೆಂದು ಚನ್ನಬಸವಣ್ಣ ಎಂದಿಟ್ಟೆವಲ್ಲವೆ? ಮಗ ಚೆನ್ನಬಸವಣ್ಣ ಅನುಭವ ಮಂಟಪದ ಉನ್ನತ ಪರಿಸರವಲ್ಲಿ ಬೆಳೆದ ಪರಿಣಾಮವಾಗಿ "ಷಟ್ಸ್ಥಲ" ಜ್ಞಾನಿ ಎನ್ನಿಸಿಕೊಂಡ. ಷಟಸ್ಥಲ ಚಕ್ರವರ್ತಿ ಸಮ್ಯಕ್ ಜ್ಞಾನಿ, ಕ್ರಾಂತಿಯೋಗಿಯಾದ ಜ್ಞಾನ ನಿಧಿ ಚನ್ನಬಸವಣ್ಣನು ಇಷ್ಟು ಘನ ತತ್ವವೇತ್ತನಾದುದು ಬಸವೇಶ ನಾದುದು ಬಸವೇಶನಿಂದಲೇ ಅಲ್ಲವೇ ? ಬಸವೇಶ ಮಾಡುತ್ತಿರುವ ಘನ ಮಹಿಮದಲ್ಲಿ ಪಾಲುಗಾರಳಾಗಿ ದುಡಿಯುವೆ. ಅವನ ಬಾಳಿನಲ್ಲಿ ಕ್ರಿಯಾ ಶಕ್ತಿಯಾಗಿ ನಿಲ್ಲುವೆ. ಈ ಕಾಯಕದಲ್ಲಿ ರಕ್ತದ ಬಿಂದುವೊಂದಿರುವತನಕ ವೀರಮಾತೆಯಾಗಿ ಧರ್ಮಕ್ಕೆ ಕಾದುವೆ ಶರಣರ ಧರ್ಮ ಕೇವಲ 'ಶರ ಣಸತಿ' ಯರಷ್ಟೇ ತಯಾರಿಸದು. ವೀರಮಾತೆಯರನ್ನೂ ತಯಾರಿ ಸುವುದೆಂಬುದನ್ನು ಜಗಕ್ಕೆತೋರುವೆ.

ಇಚ್ಛಾಶಕ್ತಿ ಗಂಗಾಂಬಿಕೆ :

ಎಂತಹ ಭಾಗ್ಯವಂತೆ ನಾನು ; ಎಂತಹ ಪುಣ್ಯಜೀವಿ : ಅಪರೂಪನಾದ ಪತಿ. ಪ್ರೀತಿಯ ತವನಿಧಿಯಾದ ಅತ್ತಿಗೆ, ಜ್ಞಾನನಿಧಿಯಾದ ನೀಲಾಂಬಿಕೆ ! ಪಂಕದಲ್ಲಿ ಜನ್ಮಿಸಿದರೂ ಪಂಕವನ್ನು ದಾಟಿದ ಕಮಲೆಯಂತೆ, ಸ್ತ್ರೀಯರಿಗೆ ಸಂಸ್ಕಾರವೀಯದ ಧರ್ಮದಲ್ಲಿ ಜನಿಸಿದರೂ ಬಸವೇಶನ ದಯ ದಿಂದ ನೂತನ ಧರ್ಮದ ಸಂಸ್ಕಾರ ಪಡೆದು ಶರಣೆಯಾಗಲಿಕ್ಕೆ ನನಗೆ ಸಾಧ್ಯವಾಯಿತು. ಎಲ್ಲೆಡೆ ಬಸವೇಶನ ಗುಣಗಾನ :

ಸಾಂದ್ರವಾಗಿ ಹರಗಣ ಭಕ್ತಿಯ ಮಾಳ್ಪನೆಂತವ್ವ
ಮಾದಲಾಂಬಿಕಾ ನಂದನನು
ಸಾಂದ್ರವಾಗಿ ಬಿಜ್ಜಳನರಮನೆಯ ನ್ಯಾಯವ

ಮಾಳ್ಪನೆಂತವ್ವಾ ಮಾದರಸರ ಮೋಹದ ಮಗನು,
ಲಿಂಗಾರ್ಚನೆ ಲಿಂಗತೃಪ್ತಿ ಅನುಗ್ಯೆವನೆಂತವ್ವ
ಗಂಗಾಪ್ರಿಯ ಕೂಡಲ ಸಂಗನ ಶರಣ.

ಬಲದೇವನ ಮಗಳಾಗಿ ಜನಿಸಿದೆ. 'ಸಂಸಾರ ನನಗೆ ಬೇಡವೇ ಬೇಡ' ಎಂದು ಹಟವಿಡಿದ ಬಸವರಾಜರಿಗೆ "ಧರ್ಮ, ದಾಸೋಹಕ್ಕಾಗಿ" ಸಂಸಾರವನ್ನು ಕಟ್ಟಿದವರಲ್ಲವೆ ? ಆ ತಾಯಿ ಅಕ್ಕನಾಗಮ್ಮ ಅದೇನು ಅದಮ್ಯ ಶಕ್ತಿ ! ಬಸವೇಶನ ಬೆನ್ನ ರಕ್ಷಕಿಯಾಗಿ, ಬಾಳಿನ ಕಣ್ಣಾಗಿ. ವಾತ್ಸಲ್ಯ ವಾರಿಧಿಯಾಗಿ ಸ್ಫೂರ್ತಿಸೆಲೆಯಾಗಿ. ಮಾತೃವಾತ್ಸಲ್ಯದ ಮಹಾ ಸುಧೆಯಾಗಿ, ಪ್ರೇಮದ ಪರಂಜ್ಯೋತಿಯಾಗಿ, 'ಅವರ' ಧ್ಯೇಯಾದರ್ಶಗಳ ಬಗ್ಗೆ ನಿರಂತರ ಮಾರ್ಗದರ್ಶನ ಮಾಡುತ್ತಾ ಮುನ್ನಡೆದಿದ್ದಾಳೆ. ಬಸವೇಶನ ಅವತಾರದ ಉದ್ದೇಶ ಧರಿತುಕರ್ತವ್ಯದ ಎಚ್ಚರಿಕೆಯನ್ನೀಯುತ್ತ ಎದೆಗೆಟ್ಟಾಗ ಧೈರ್ಯವೀಯುತ್ತ, ಬಾಳ ಸಸಿಗೆ ನೀರೆರೆಯುತ್ತಾ ಸಂಜೀವಿನಿಯಾಗಿದ್ದಾಳೆ.

ಇನ್ನು 'ಅವರು': ಅವರ ನಿಲುಮೆ, ಅಬ್ಬಾ! ನೆನಸಿಕೊಳ್ಳಲೂ ಅಶಕ್ತರು ನಾವು. ಅದೇನು ಅವರ ಔದಾರ್ಯ, ವಿನಯ, ದಾಸೋಹಂ ಭಾವ: ಅಂದು ಮದುವೆಯಾಗಲಿಕ್ಕೆಂದು ಎಲ್ಲರೂ ಒತ್ತಾಯಿಸಿದಾಗ. "ಗೃಹಸ್ಥ ಧರ್ಮಿಯಾಗಿಯೂ ಮುಕ್ತಿ ಪಡೆಯಲು ಬರುವುದೆಂಬ ಸಿದ್ಧಾಂತವನ್ನು ಜಗತ್ತಿಗಿಂದು ತೋರಲು ಅವತರಿಸಿರುವೆ ಬಸವಣ್ಣ" ಎಂದು ಜಾತವೇದ ಶ್ರೀಗಳು ಅಂದಾಗ, ನಾನಕ ಕಪ್ಪಡಿಗೆ ಅಪ್ಪನೊಡಗೂಡಿ ಹೋದಾಗ ಕೇಳಿದ್ದರು. "ಗಂಗಾ..." ಅವರ ದನಿಯಲ್ಲಿ ಮಾಧುರ್ಯ ವಿದ್ದರೂ ಸ್ಥಿರತೆಯಿತ್ತು. ಮೌನವಾಗಿ 'ಏನು' ಎಂದೆ, "ನೋಡು... ನಿನ್ನ ಸೋದರ ಮಾವನೆಂಬ ಕೇವಲ ಅಭಿಮಾನದಿಂದ ಲಗ್ನವಾಗಬೇಡ. ನನ್ನೊಡನೆ ವಿವಾಹವಾದರೆ ಅದಾವುದೋ ಲೌಕಿಕ ಸುಖ ವೈಭವ ನಿನಗೆ ಸಿಕ್ಕೀತೆಂದೂ ಭಾವಿಸಬೇಡ. ದಾಸೋಹಂ ಭಾವದಿಂದ ಶರಣರ ಸೇವೆಯನ್ನು ಮಾಡುವುದಾದರೆ, ಧರ್ಮ ಪ್ರಚಾರ ಕೈಂಕರ್ಯಕ್ಕೆ ನಿನ್ನನ್ನು ಮುಡುಪಿಡುವುದಾದರೆ ಮಾತ್ರ ವಿವಾಹವಾಗುವೆ." ಅವರ ಭವ್ಯ ವ್ಯಕ್ತಿತ್ವಕ್ಕೆ

ಮಾರುಹೋಗಿ ಒಪ್ಪಿದೆ. ಆದರಿಂದು ಅದರ ಸತ್ಫಲ ಕಾಣುತ್ತಿರುವೆ ; ಶರಣರ ಸೇವೆಯಲ್ಲಿ ಧನ್ಯಳಾಗಿರುವೆ. ಸ್ವಯಂ ಜ್ಯೋತಿಯಾಗಿ ಅವರಂತೆ ಉರಿಯುವ ಸಾಮರ್ಥ್ಯ ನನ್ನದಲ್ಲವಾದರೂ ಬಸವ ಜ್ಯೋತಿಯಪ್ರಕಾಶದಲ್ಲಿ ನಾನು ಬತ್ತಿಯಾಗುವೆ.

ಜ್ಞಾನಶಕ್ತಿ ನೀಲಾಂಬಿಕೆ:

ನನ್ನ ಜೀವವ್ವೊಂದು ಪವಾಡವೇ .. ಹುಟ್ಟಿದ್ದೆಲ್ಲಿ, ಬೆಳೆದಿದ್ದೆಲ್ಲಿ! ಕಮ್ಮೆಕುಲದ ಬ್ರಾಹ್ಮಣ ಸಿದ್ಧರಸರ ಮಗಳಾಗಿ ಜನಿಸಿದೆ: ಅರಸು ಮನೆತನದಲ್ಲಿ . ಬೆಳೆದೆ. ಕಾಯಕ ಜೀವಿ ಇವರನ್ನು ಕೂಡಿದೆ, ಅಂದು... ನೆನಸಿಕೊಂಡರೆ ಕೆನ್ನೆ ಕೆಂಪಾಗುತ್ತದೆ. ಗಂಗಾ, ನಾನು, ಕೆಳದಿಯರು ಕೂಡಿ ಕಪ್ಪಡಿಗೆ ವಿಹಾರಕ್ಕಾಗಿ ಸಾಗಿದ್ದೆವಲ್ಲವೆ? ಬೊಪ್ಪನಾದ ಮಂತ್ರಿ ಬಲದೇವರಸನು ವರಾನ್ವೇಷಣೆಯಲ್ಲಿ ತೊಡಗಿದ್ದರು. ನಮಗೆ ಆ ಚಿಂತೆ ಯಿಲ್ಲ; ಅಂದುಹೋದ ಕೂಡಲೇ ಜಾತವೇದ ಮುನಿಗಳ ದರ್ಶನ ತೆಗೆದುಕೊಂಡೆವು ಆ ಸನ್ಯಾಸಿಗಳ ಬಳಿ ನಮಗೇನು ಕೆಲಸ, ಅಲ್ಲದೆ ಆದಾರೋ ವಟುವನ್ನು ಕುರಿತು ಅವರಿಬ್ಬರೂ ರಹಸ್ಯಾಲೋಚನೆ ಮಾಡು ವುದಿತ್ತಂತೆ! ಸದ್ಯ-ನಮಗೂ ಅದೇ ಬೇಕಿತ್ತು. ಹೊರಗೆ ಜಿಂಕೆಗಳಂತೆ ಓಡಿದೆವು. ಅಲ್ಲಿ ನವಿಲುಗಳಂತೆ ನಲಿದಾಡಿದೆವು. ಕೋಗಿಲೆಗಳಂತೆ ಹಾಡಿ ದೆವು, ನದೀ ತೀರದದಲ್ಲಿ ಕುಣಿದಾಡಿದೆವು. ಸೂರ್ಯೋದಯ ವಾಗುತ್ತಿದೆ; ಕೆಂಪು ಛಾಯೇ ದಿಕ್‌ದಿಗಂತಗಳನ್ನೆಲ್ಲಾ ವ್ಯಾಪಿಸುತ್ತಿದೆ. ಆಗ ನದೀ ತ್ತೀರದ ಶಿಲಾಮಂಟಪದಲ್ಲಿ ಒಂದು ಶಿಲಾಮೂರ್ತಿ : ಅಲ್ಲಲ್ಲಿ ಶಿಲೆಯಂತೆ ಧ್ಯಾನ್ಯದಲ್ಲಿ ಕುಳ್ಳಿರ್ದ ಮೂರ್ತಿ. ಗಂಗಾಂಬೆ ಭಾವಜೀವಿ ; ದೂರದಿಂದ ಕಂಡು ತನ್ಮಯಳಾಗಿ ತಾನೂ ಧ್ಯಾನೋನ್ಮುಖಿಳಾದಳು. ನನಗೂ ತ ಡೆ ಯಾ ಲಾ ರ ದ ಷ್ಟು ಆನಂದ; ಆನಂದದಿಂದ ಹಾಡತೊಡಗಿದೆ. (ಗಂಗಾಂಬೆಯ, ಗಾನ ನನ್ನ ನರ್ತನ ಪ್ರಸಿದ್ಧವಾಗಿದ್ದವು), ಆದಾರೋ ಬಾಲಕನ ದನಿ ಕೇಳಿ ಎಚ್ಚೆತ್ತೆ. "ಬಸ ವೇಶ...ಗುರುಗಳು ಕರೆಯುತ್ತಿದ್ದಾರ" ಎಂದು ಬಾಲಕನೊಬ್ಬ ನುಡಿಯು ತ್ತಿದ್ದ. "ಏಕಂತೆ...?" ಪ್ರಶ್ನಿಸಿದ ಆ ಯುವಕ ; ಅಬ್ಬಾ ; ಮಿಂಚು ಮಿಂಚಿದಂತಾಯಿತೆನಗೆ. ಅದೇನು ಆ ಭವ್ಯ ಮೂರ್ತಿ. ವಿಶಾಲವಾ ದೆ,

ಜಗವನ್ನೇ ಇಂಬಿಕ್ಕಿಕೊಳ್ಳುವ ಹಾರ್ದಿಕತೆ, ಯೋಗ ನೇತ್ರ, ವಿಶಾಲ ಲಲಾಟ. ಹಣೆಯ ಮೇಲೆ ಸ್ವಾತಿಕ ತೇಜವಿತ್ತು ಭಸಿತ. ವಿವಿಧ ಭಾವನೆಗಳು ಸಾಗರದ ಅಲೆಗಳಂತೆ ಮೂಡಿ ಮರೆಯಾದವು "ಮಹಾಮಂತ್ರಿ ಬಲ ದೇವರಸರು,ತಮ್ಮ ಸೋದರ ಮಾವಂದಿರು ಬಂದಿರುವರಷ್ಟೇ ಅದಕ್ಕೇ ಗುರುಗಳು ಕರೆಯುತ್ತಿದ್ದಾರೆ.ಪರಿಚಯ ಮಾಡಿಕೊಡಲು,"ಆ ಬಾಲಕನೆಂದ.

"ಗಂಗಾಂಬೆಯ ಸೋದರ ಮಾವ...ಇವರ ಅನ್ವೇಷಣೆಗೇ ಈಗ ನಾವುಗಳಿಲ್ಲಿ ಬಂದಿದ್ದು. ಇಷ್ಟು ಸುಂದರ, ಸೌಮ್ಯವಂತ ಗಂಗಾಂಬೆಯ ಸೊತ್ತಾ...ಗಲಿರುವನೇ?" ಏಕೋ ಅಸೂಯೆ ಎನ್ನಿಸಿತು, ಹೊಟ್ಟೆಯೊಳಗೆ ಹಾವು ಹರಿದಂತಾಯಿತು, ಗಂಗಾಂಬೆಯನ್ನು ನೋಡಿದೆ. ಇನ್ನೂ ಹಾಡುತ್ತಲೇ ಕುಳಿತಿರುವಳಾಕೆ ಅತಿ ಮುಗ್ಧ ಜೀವಿ, ಯಾವ ಕಲ್ಮಶವನ್ನೂ ಅರಿಯದ ವ್ಯಕ್ತಿ ಗಂಗಾಂಬೆ. ಹಾಡುವುದನ್ನು ಕೇಳಿ ಒಂದು ಚಣ ನಿಂತ ಬಸವೇಶ ಸಮೀಪ ಸಾರಿದ್ದ; ನಮ್ಮನ್ನು ದಾಟಿಯೇ ಆಶ್ರಮಕ್ಕೆ ಹೋಗಬೇಕಾಗಿತ್ತು. ಮೈಮರೆತು ನಿಂತ ನಮ್ಮ ಸಮೀಪದಲ್ಲೇ ಹಾಯ್ದು ಹೋದಾಗ ಮಿಂಚಿನ ಸಂಚಾರ ನನ್ನೊಳಗೆ. ಗಂಗಾಬೆಯನ್ನು ನೋಡಿ ಮತ್ತೂ ಅಸೂಯೆಯಾಯಿತು.

ಅವರ ವಿವಾಹದ ನಿರ್ಧಾರವೆಲ್ಲ ಮುಗಿಯಿತು. ನನ್ನಲ್ಲಿ ಮೂಡಿದ ಬಯಕೆ ಅಳಿಯಲಿಲ್ಲ.: ನನಗರಿಯದಂತೆ ಅಂತರಂಗದಲ್ಲಿ ಒಂದಕ್ಕೆ ನೂರಾಗಿ ಬೇರು ಬಿಟ್ಟು ಹರಡಿತು! ವಿವಿಧ ರೂಪ ಧರಿಸಿ ಅಜಾಗೃತ ಮನದಲ್ಲಿ ಕಾಡತೊಡಗಿತು. ಆರೋಗ್ಯ ಕುಂದಿ, ತಸು ಕೃಶವಾದಾಗ ಗಂಗಾಬೆ ಚಿಂತಿಸಿದಳು. ಒತ್ತಾಯಿಸಿ ಏಕೆಂದಾಗ ಲಜ್ಜೆಯಿಂದ ಮೌನವಾಂತೆ; 'ಶಿವನಾಣೆ, ನನ್ನಾಣೆಯೆಂದಾಗ' ಹೇಳಬೇಕಾಯಿತು, ಮನವಾರೆ ನಕ್ಕಳು. "ನೀಲಾ—ಬಸವೇಶನಿಗಾಗಿ ಚಿಂತಿಸಿದೆಯಾ? ಮೊದಲೇ ಹೇಳಬಾರದೆ?"

ನಮ್ಮಿಬ್ಬರ ದೇಹವೆರಡು ಚೇತನವೊಂದು. ನನ್ನಲ್ಲಿ ಮುಚ್ಚು ಮರೆಮಾಡಿದೆ ಏಕೆ....? ನನ್ನ ಪತಿದೇವರ ಹೃದಯ ಸಂಪತ್ತಿನಲ್ಲಿ ನಿನಗೆ ಧಾರೆಯೆರೆಯಲು ಸದಾಸಿದ್ಧ....! ಹಾಂ....ಅದಾವುದರ ಸಲುವಾಗಿ

ಗಂಗಾಂಬೆಯನ್ನು ಕುರಿತು ಆಸೂಯೆ ತಾಳಿದ್ದೆನೋ ಅದನ್ನು ಅವಳೇ ತ್ಯಾಗಮಾಡಲು ಸಿದ್ಧಳಿದ್ದಾಳೆ. ನಾಚಿ ನೀರಾದೆ.

'ಆದರೆ...ನೀಲಾ...ಅವರಿಂದ ದಾಂಪತ್ಯ ಸುಖ ಸಿಗುವುದು ಕಠಿಣವಿದೆ: ಸಂಸಾರದಲ್ಲಿದ್ದ ವಿರಕ್ತರವರು—'

"ಗಂಗಾ....ಅವರ ಸಾಮೀಪ್ಯವಿದ್ದರೆ ಸಾಕು...ಅದನ್ನೊದಗಿಸಿ ಕೊಟ್ಟರೆ ನಿನ್ನುಪಕಾರ ಎಂದೂ ಮರೆಯೋಲ್ಲ..."

ಹಾಂ ಸಾಕು...ಸದ್ಯ ಸವತಿ ಮತ್ಸರ ಮಾಡದಿದ್ದರೆ ನನ್ನಪುಣ್ಯ." ನಕ್ಕು ನುಡಿದಿದ್ದಳು, ಒತ್ತಾಯ ಮಾಡಿ ಬಸವೇಶನನ್ನು ಒಪ್ಪಿಸಿದಳು. ಲಗ್ನವಾಯಿತು. ಆದರೇನು, ವಿವಾಹವಾಗಿ ಕೆಲವೇ ದಿನಗಳಾದರೂ ಸತಿ–ಪತಿಗಳಾಗಿದ್ದೆವೋ: ಇಲ್ಲವೊ. ರಸಿಕ ಶಿಖಾಮಣಿಯಾದ ನನ್ನಲ್ಲಿದ್ದ ವಿಷಯದ ಜಾಲವನ್ನು ಎಳೆ ಸಮೇತ ಕಿತ್ತು ಹಾಕಿದರು, ವಿಲಾಸ ವೈಭೋಗದ ಭ್ರಮೆ ಬಿಡಿಸಿದರು; "ನೀಲಾ ಎಲ್ಲರಂತೆ! ನಾವೂ ಬಾಳಿದರೇನು; ಒಂದು ಗಂಡು ಹೆಣ್ಣಿನ ಸಂಬಂಧವೆಂದರೆ ದೈಹಿಕ. ಕಾಮ ಸಂಬಂಧವೇ ಇರಬೇಕೆ ? ಅವನ್ನು ಬಿಟ್ಟು ಕೇವಲ ಹಾರ್ದಿಕ ನಿಷ್ಕಲ್ಮಶ ಪ್ರೇಮದಲ್ಲೇ ಬಾಳು ಬಾರದೇನು ?"

"ಹಾಗಾದರೆ ವಿವಾಹ ಏಕಾಗಬೇಕು...?" ಮುನಿಸಿನಿಂದ ನಾ ಕೇಳಿದ್ದೆ

"ಯಾರು...ಉಪವಾಸ-ವನವಾಸ ಮಾಡಿ, ಕಾಯಿಲೆ ಬಿದ್ದು ಲಗ್ನ ವಾದವರು?" ನಕ್ಕುಕೇಳಿದರು ಅವರು, "ನೋಡು....ನೀಲಾ....ಹೆಣ್ಣಿಲ್ಲದೆ ವಿರಕ್ತನಾಗಿರುವುದಕ್ಕಿಂತ ಹೆಂಡತಿ ಇದ್ದು, ಅದರಲ್ಲೂ ಪೃಥ್ವಿಗೆ ಅಗ್ಗಳ ಚೆಲುವೆ ನೀಲಲೋಚನೆಯಂತಹವಳಿದ್ದೂ ಸಂಯಮಿಯಾಗಿರುವುದು ಹೆಚ್ಚಿನವಲ್ಲವೆ ? ಇಂದ್ರಿಯ ಶಕ್ತಿ ಉಡುಗಿದ ಮೇಲೆ ಎಲ್ಲರೂ ವಿರಕ್ತರೆ! ಇಂದ್ರಿಯದ ಹಯಗಳು ಮದವೇರಿ ನುಗ್ಗುವಾಗ, ನಿನ್ನಂತಹ ಸುಂದರಿ ಇರುವಾಗಲೂ ಕರಣಗಳ ಮೇಲೆ ಕಲಿತನವಿದ್ದರೆ ಆಗ ನಾನು ಧೀರ.

ಹೆಣ್ಣು ಗಂಡಿನ ತಾಯಾಗಬೇಕು; ಗಂಡು ಹೆಣ್ಣಿನ ತಂದೆಯಾಗಬೇಕು, ಅದು ನೋಡು ಅಪ್ರತಿಮ ಸಾಧನೆ..." ಒಪ್ಪಿದೆ ನಾನು, ಅಂದಿನಿಂದ ನಾವು ಹೆಣ್ಣು-ಗಂಡೆಂಬ ಭೇದವಳಿದು ಬದುಕಿದೆವು :

ಮಡದಿ ಎನ್ನಲಾಗದು ಬಸವಂಗೆ ಎನ್ನನು

ಪುರುಷನೆನಲಾಗದು ಬಸವನ ಎನಗೆ

ಉಭಯ ಕುಳವ ಹರಿದು ಬಸವಂಗೆ ಶಿಶುವಾನಾದೆನು

ಬಸವನೆನ್ನ ಶಿಶುವಾದನು.

ಪ್ರಮಥರು ಪುರಾತರು ಸಾಕ್ಷಿಯಾಗಿ

ಸಂಗಯ್ಯನಿಕ್ಕಿದ ದಿಬ್ಯವ ಮೀರದೆ ಬಸವನೊಳಗಾನಡಗಿದೆ.

ಬಸವೇಶ, ಬಸವರಾಜ, ನಿನ್ನ ಕರುಣೆಯಿಂದ ನಾನೂ ವಿರಕ್ತಳಾದೆ; ಪರಮ ವಿರಕ್ತಳಾದೆ! ಪತಿಯನ್ನು, ಗುರುವನ್ನು, ಪುತ್ರನನ್ನು, ಸಖನನ್ನು. ನನ್ನ ಬಾಳ ಬೆಳಗನ್ನೂ ನಿನ್ನಲ್ಲೇ ಕಂಡು ಧನ್ಯಳಾದೆ.

ಮಹಾಗುರು ಬಸವಣ್ಣ :

ನನ್ನ ಬಾಳು ಅದ್ಭುತ ಘಟನೆಗಳ ಚಿತ್ರಣ. 'ಉಡು'ವಿನ ಪರಿಯಲ್ಲಿ ಹಡೆದು ಕೈಬಿಟ್ಟರೆನ್ನವರು. ಅಂಧವಿಚಾರಗಳನ್ನು ಪ್ರತಿಭಟಿಸಿದಾಗ ಮಾದಿ ರಾಜ, ಮಾದಲಾಂಬೆಯರು ತಿರಸ್ಕರಿಸಿದರು. ಆದದ್ದೆಲ್ಲ ಒಳ್ಳಿತಿಗೇ, ಪಂಜ ರದ ಪಕ್ಷಿಯಾಗಿ ಯಾವೊಂದು ಸಂಪ್ರದಾಯಕ್ಕೆ ಬಲಿಬೀಳದೆ ಗೂಡಿನ ಪಕ್ಷಿ ಯಂತೆ ವಿಚಾರ ಗಗನದಲ್ಲಿ ಸ್ವಚ್ಛಂದವಾಗಿ ವಿಹರಿಸಲು ಅನುವಾಯಿತು. ಜಾತವೇದ ಗುರುಗಳ ಕೃಪೆಯಲ್ಲಿ, ಸಾತ್ವಿಕ ವಾತಾವರಣದಲ್ಲಿ ಬೆಳೆದೆ. ವಿರಕ್ತನಾಗಿ, ಸನ್ಯಾಸಿಯಾಗಿ ಬಾಳ ಸವೆಸುವ ಬಯಕೆ ನನ್ನಲ್ಲಿತ್ತು. ಆದರೆ ಗುರುಗಳ ದಿಗ್ದರ್ಶನ ಬೇರೆಡೆಗಿತ್ತು. ಕೇವಲ ಕೆಲವರ ಸ್ವತ್ಯಾಗಬಲ್ಲ, ಕತ್ತಿಯ ಮೊನೆಯ ಮೇಲೆ ನಡೆದಂತಹ ಕಠಿಣತಮ ವೈರಾಗ್ಯ ಮಾರ್ಗ

ಕ್ಕಿಂತಲೂ, ಶ್ರೀ ಸಾಮಾನ್ಯನೂ ಆಚರಿಸಬಲ್ಲ ಉಂಡು ಉಪವಾಸಿಯಾಗಿ, ಕೊಂಡು ಬ್ರಹ್ಮಚಾರಿಯಾಗುವ ಸಂಸಾರವನ್ನೇ ಸದ್ಗತಿಯ ಸಾಧನವನ್ನಾಗಿ ಸುವ ಸರಳ ಧರ್ಮವನ್ನು ಸಂಸ್ಥಾಪಿಸುವ ಬಯಕೆ ನನ್ನಲ್ಲಿ ತುಂಬಿದರು. ಆ ಬಯಕೆಗೆ ದೊರೆತರು ನನ್ನ ಜೀವನದಲ್ಲಿ—ಇಚ್ಛಾಶಕ್ತಿ ಮತ್ತು ಜ್ಞಾನ ಶಕ್ತಿಯರು! ಅಕ್ಕ ನಾಗಲಾಂಬೆ ನನ್ನ ಕ್ರಿಯಾಶಕ್ತಿ. ಮರ್ತ್ಯದ ನನ್ನ ಮಹಿಮವನ್ನರಿತು, ಧ್ಯೇಯಾದರ್ಶಗಳನ್ನರಿತು, ಮಹಾಮನೆಯ ಸಮಸ್ತ ಜವಾಬ್ದಾರಿಯನ್ನು, ದಾಸೋಹಕಾರ್ಯವನ್ನು ಕುಂದಾಗದ ರೀತಿಯಲ್ಲಿ ನಡೆಸುತ್ತಿದ್ದಾಳೆ. ಎಲ್ಲರೂ ನನ್ನನ್ನು ಕೈಬಿಟ್ಟಾಗಲೂ, ಅಷ್ಟೇ ಸ್ಥಿರಳಾಗಿ ಕಾಯವನ್ನು ನೆರಳು ಹಿಂಬಾಲಿಸುವಂತೆ ಸೋದರನ ಬಾಳಿನಲ್ಲಿ ಸರ್ವ ಸಮರಸಳಾಗಿದ್ದಾಳೆ. ಒಡಹುಟ್ಟಿದ ಸೋದರಿ, ವಾತ್ಸಲ್ಯದಲ್ಲಿ ಮಾತೆ, ಮಾರ್ಗದರ್ಶನದಲ್ಲಿ ಗುರು, ಲಾಲಿಸಿ ಪಾಲಿಸಿ ನನ್ನನ್ನು ರೂಪಿಸಿ ಜಗಕ್ಕಿತ್ತ ದೀರಮಾತೆ. ಅನುಭವ ಮಂಟಪಕ್ಕೆ ಬಂದ ಮಹಾದೇವಿಯಕ್ಕ, ಸತ್ಯಕ್ಕ ಶರಣೆಯರನ್ನೆಲ್ಲಾ ಪ್ರೇಮಸೌಹಾರ್ದತೆಯಿಂದ ಸ್ವಾಗತಿಸಿ ಇಂಬಿಕ್ಕಿಕೊಂಡ ಜಗದಗಲದ ಹೃದಯದ ಅಮರ ಕೀರ್ತಿ ಶಕ್ತಿ ಈಕೆ; ಈ ಬಸವನ ಬಾಳಿನ ಅದಮ್ಯ ಕ್ರಿಯಾಶಕ್ತಿ.

ಬಾಳನ್ನು ಇಂತಹ ಭದ್ರ ಬುನಾದಿಯ ಮೇಲೆ ನಿಲ್ಲಿಸಲು ಸಾಧ್ಯಳಾದ ಪತ್ನಿ ಗಂಗಾಂಬಿಕೆ—ಇಚ್ಛಾಶಕ್ತಿಯಾಕೆ. ಅತ್ಯಂತ ಮುಗ್ಧ ಜೀವ, ಪತಿಯ ಪ್ರೇಮದಲ್ಲಿ ಪಾಲು ಕೊಡಲಾಗದೆ ಮಾತ್ಸರ್ಯ ತೋರುವ ಹೆಣ್ಣುಕುಲಕ್ಕೆ ಹೊರತು ಈಕೆ. ತಾನಾಗಿ ಅತ್ಯಾನಂದದಿಂದ ನೀಲಾಂಬಿಕೆಯನ್ನು ವಿವಾಹ ಮಾಡಿದಳು; ಆಕೆಯ ಈ ತ್ಯಾಗದಿಂದಲೇ ಪತಿಪ್ರೇಮವನ್ನು ನೂರ್ಮಡಿಸಿಕೊಂಡಳು. ನಿಷ್ಕಲ್ಮಶ, ನಿಸ್ವಾರ್ಥ ಹೃದಯಿ. ಅವರ ತಂದೆಯ ಆಸ್ತಿ ಅಪಾರವಾಗಿದ್ದು, ಅಳಿಯನಾದ ನನಗೆ ಬಂದಾಗ, ನಾನದನ್ನು ಸತ್ಯಶುದ್ಧ ಕಾಯಕದಿಂದ ಬಂದುದಲ್ಲವೆಂದು ತಿರಸ್ಕರಿಸಿದೆ. ಗಂಗಾಂಬೆ ಒಪ್ಪಿ "ಹಿರಿಯರಿಂದ ನಮಗೆ ಬಂದುದು ಸಮಾಜದ ಸೊತ್ತು" ಎಂದು ಎಲ್ಲವನ್ನು ದಾನಮಾಡಿ, ನಾನು ಕರಣಿಕನಾಗಿ ದುಡಿದಾಗ ತಾನೂ ಅಷ್ಟೇ ಸರಳವೃತ್ತಿಯಿಂದಿದ್ದಳು; ಹೀಗೆ ನನ್ನ ಆದರ್ಶ ಜೀವನಕ್ಕೆ ಊರುಗೋಲಾದ ಇಚ್ಛಾಶಕ್ತಿ.

ಬಾಳಿನ ಭವ್ಯದೇವಿ ನೀಲಾಂಬಿಕೆ. ಆಕೆಯೊಡನೆ ವಿವಾಹವನ್ನು ಬೇಡವೆಂದೆ: ಅರಮನೆಯ ವಾತಾವರಣದಲ್ಲಿ ಬೆಳೆದ ಸಿರಿಗುವರಿ, ವಿಲಾಸ ವೃತ್ತಿಯ ರಸಿಕಳು. ನನ್ನ ವೈರಾಗ್ಯ ಜೀವನಕ್ಕೆ ಹೊಂದಿಕೊಳ್ಳಲು ಸಾಧ್ಯವೇ ಎಂಬ ಸಂಶಯ! ಆದರೇನು? ನನ್ನ ಪ್ರೇಮವೇ ಬಾಳ ಉಸಿರಾದ ನೀಲಾ ಅಷ್ಟೇ ವೀರಾಗಿಣಿಯಾದಳು. ಪೃಥ್ವಿಗೆ ಅಗ್ಗಳ ಚೆಲುವೆ ನೀಲಲೋಚನೆ: ಆದರೇನು ಆಕೆಯ ಸೌಂದರ್ಯ ನನ್ನ ಬಾಳಿನ ಮಾದಕ ಶಕ್ತಿಯಾಗಲಿಲ್ಲ, ಮೋದಕ ಶಕ್ತಿಯಾಯಿತು; ಕಾಮವನ್ನು ಕೆರಳಿಸುವ ಸಾಧನವಾಗಲಿಲ್ಲ, ಪ್ರೇಮವನ್ನರಳಿಸುವ ಸಾಧನವಾಯಿತು. ಅಪ್ರತಿಮ ಮಾತೃವಾತ್ಸಲ್ಯವನ್ನುಂಡೆ ನೀಲಾಂಬಿಕೆಯಿಂದ; ಜೀವನದಲ್ಲಿ ಜ್ಞಾನಶಕ್ತಿಯಾದಳು ನೀಲಾ. ತಪ್ಪಿದಲ್ಲಿ ತಿದ್ದುವ, ಎಚ್ಚರಿಸುವ ಧೀರ ಪತ್ನಿ ಈಕೆ. ಸಲಹೆ—ಸಹಾಯಗಳನ್ನೀಯುವ ಜ್ಞಾನ ನಿಧಿ. ನನ್ನ ಬದುಕೊಂದು ಮಹಾನ್ ಶರಧಿ. ಇದಕ್ಕೆ ಮೂಲದ್ರವವನ್ನು ತುಂಬಿದವು ಹಲವಾರು ನದಿಗಳಾದರೂ, ಜೀವನದಿಗಳು ಈ ಮೂರು. ಅವುಗಳ ಸವರಸದಿಂದಾಗಿಯೇ ಇಲ್ಲಿ ಪರಿಪೂರ್ಣತೆ. ಧನ್ಯ ನಾನು ಕೂಡಲ ಸಂಗಮದೇವಾ!

